ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ ಸಂಖ್ಯಾ ೧೪

# ಶ್ರೀ ಸ್ಕಾಂದಮಹಾಪುರಾಣಂ

## ಮಾಹೇಶ್ವರಖಂಡ

## ೨

## ಕೌಮಾರಿಕಾಖಂಡ

### ಉತ್ತರಭಾಗ

(ಮೂಲ ಮತ್ತು ಅನುವಾದ ಸಹಿತ)

ಅನುವಾದಕ

ಆಸ್ಥಾನ ವಿದ್ವಾನ್

ನೋಟಗಾನಹಳ್ಳಿ ಸುಬ್ರಹ್ಮಣ್ಯಶಾಸ್ತ್ರೀ

ಬೆಂಗಳೂರು ಪ್ರೆಸ್

ಮೈಸೂರು ರೋಡು, ಬೆಂಗಳೂರು ಸಿಟಿ

೧೯೪೫

# ಅರಿಕೆ

ಶ್ರೀ ಸ್ಕಾಂದ ಮಹಾಪುರಾಣದ ಈ ತೃತೀಯ ಸಂಪುಟದಲ್ಲಿ ಮಾಹೇಶ್ವರ ಖಂಡದ ದ್ವಿತೀಯೋಪಖಂಡವಾದ ಕೌಮಾರಿಕಾಖಂಡದ ಉತ್ತರಾರ್ಧವು ಸಂಪೂರ್ಣವಾಗಿರುತ್ತದೆ. ಇದರಲ್ಲಿ ತಾರಕವಧಾನಂತರ, ಶ್ರೀ ಷಣ್ಮುಖಸ್ವಾಮಿಯೆಸಗಿದ ಶಿವಲಿಂಗ ಪ್ರತಿಷ್ಠಾಪನಾದಿ ಮಹತ್ಕಾರ್ಯಗಳೂ, ವಿವಿಧ ಕಥಾನುಕಥನಗಳೂ ವರ್ಣಿತವಾಗಿರುವುದಲ್ಲದೆ ಮಹೀಸಾಗರಸಂಗಮ ಮಾಹಾತ್ಮ್ಯವೂ, ಅರ್ಜುನನ ತೀರ್ಥಯಾತ್ರಾಪ್ರಸಂಗವೂ ಪೂರ್ಣವಾಗಿರುತ್ತದೆ.

ಪವಿತ್ರವಾದ ನಮ್ಮ ಭರತಖಂಡದ ಅನೇಕಾನೇಕ ಪುಣ್ಯಕ್ಷೇತ್ರಗಳ ಮಾಹಾತ್ಮ್ಯಗಳನ್ನೂ, ಜ್ಞಾನಾರ್ಜನೆಗೆ ಆವಶ್ಯಕಗಳಾದ ವಿವಿಧ ವಿಷಯಗಳನ್ನೂ ಒಳಕೊಂಡು ಕನ್ನಡಿಗರೆಲ್ಲರಿಗೂ ಪಠನ ಪಾರಾಯಣಾದಿಗಳಿಗೆ ಅತ್ಯಂತೋಪಯುಕ್ತವಾದ ಇಂತಹ ಗ್ರಂಥರತ್ನಗಳನ್ನು ಪ್ರಕಾಶಪಡಿಸುವ ಸುಯೋಗವನ್ನು ಒದಗಿಸಿಕೊಡುತ್ತಿರುವ ನಮ್ಮನ್ನಾಳುವ ಧರ್ಮಪ್ರಭುಗಳಾದ ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್, ಜಿ.ಸಿ.ಎಸ್.ಐ. ಅವರಿಗೆ ಸಮಸ್ತ ಶ್ರೇಯಸ್ಸುಗಳನ್ನೂ ಅನುಗ್ರಹಿಸಿ ಸಂರಕ್ಷಿಸಲೆಂದು ಜಗನ್ನಿಯಾಮಕನಾದ ಪರಮೇಶ್ವರನಲ್ಲಿ ಮೊರೆಯಿಡುತ್ತೇನೆ.

ಅನುವಾದ ಮಾರ್ಗದಲ್ಲಿಯೂ, ಮೂಲದಲ್ಲಿಯೂ ಇರಬಹುದಾದ ಲೋಪದೋಷಗಳನ್ನು ಪ್ರಾಜ್ಞರು ಮನ್ನಿಸಬೇಕೆಂದು ಮನವಿ.

**ಮೋಟಗಾನಹಳ್ಳಿ ಸುಬ್ರಹ್ಮಣ್ಯಶಾಸ್ತ್ರೀ**

# ವಿಷಯಾನುಕ್ರಮಣಿಕೆ

॥ ಶ್ರೀಃ ॥

ಅಥ ಮಂಗಳಾಚರಣಶ್ಲೋಕಃ

**ಯಸ್ಯಾಜ್ಞಯಾ ಜಗತ್ಸ್ರಷ್ಟಾ ವಿರಿಂಚಿಃ ಪಾಲಕೋ ಹರಿಃ ।**
**ಸಂಹರ್ತಾ ಕಾಲರುದ್ರಾಖ್ಯೋ ನಮಸ್ತಸ್ಮೈ ಪಿನಾಕಿನೇ ॥**

ತಾತ್ಪರ್ಯ

ಯಾವ ಪ್ರಭುವಿನ ಅಪ್ಪಣೆಯಿಂದ
ಬ್ರಹ್ಮನು ಜಗತ್ತನ್ನು ಸೃಜಿಸುವವನಾಗಿಯೂ
ಶ್ರೀಮನ್ನಾರಾಯಣಮೂರ್ತಿಯು ಸಂರಕ್ಷಿಸುವವನಾಗಿಯೂ
ಕಾಲರುದ್ರನೆಂದು ಹೆಸರಾದ ಸ್ವಾಮಿಯು ಸಂಹಾರಕರ್ತನಾಗಿಯೂ ಇರುವರೋ
ಆ ಪಿನಾಕಪಾಣಿಯಾದ ಪರಮಶಿವನಿಗೆ
ನಮಸ್ಕಾರವು

|| ಶ್ರೀಃ ||

|| ಶ್ರೀಶಂಕರಃ ಶಂಕರಃ ||

# ಶ್ರೀ ಸ್ಕಾಂದಮಹಾಪುರಾಣಂ

## ಮಾಹೇಶ್ವರಖಂಡೇ ದ್ವಿತೀಯಃ ಕೌಮಾರಿಕಾಖಂಡಃ

## ಉತ್ತರಾರ್ಧಃ

ಓಂ ಶ್ರೀ ಗಣೇಶಾಯ ನಮಃ । ಓಂ ನಮೋ ಬೃಹಸ್ಪತಯೇ ।
ನಮಸ್ತಸ್ಮೈ ಬ್ರಹ್ಮಣೇ । ವಿಷ್ಣವೇ ನಮಃ ॥

ಶ್ರೀಮತ್ಸುಂದರಮೀಶಾನಂ ಶ್ರೀಮತ್ಸಿದ್ಧಿವಿನಾಯಕಂ ।
ಷಣ್ಮುಖಂ ಸ್ಕಂದಮಾನಂದಂ ಬ್ರಹ್ಮಾಣಂ ವಿಷ್ಣುಮಾಶ್ರಯೇ ॥
ಯಸ್ಯಾಜ್ಞಯಾ ಜಗತ್ಸ್ರಷ್ಟಾ ವಿರಿಂಚಿಃ ಪಾಲಕೋ ಹರಿಃ ।
ಸಂಹರ್ತಾ ಕಾಲರುದ್ರಾಖ್ಯೋ ನಮಸ್ತಸ್ಮೈ ಪಿನಾಕಿನೇ ॥

## ಅಥ ತ್ರಯಸ್ತ್ರಿಂಶೋಽಧ್ಯಾಯಃ

### ಕುಮಾರಸ್ಥಾಪಿತ ಪ್ರತಿಜ್ಞೇಶ್ವರ ಶಕ್ತಿಚ್ಛಿದ್ರೇಶ್ವರ ಮಾಹಾತ್ಮ್ಯ ವರ್ಣನಂ

**ನಾರದ ಉವಾಚ:—**

**ತತಸ್ತಂ ಗಿರಿವರ್ಷ್ಮಾಣಂ ಪತಿತಂ ವಸುಧೋಪರಿ ।**
**ಆಲಿಂಗಿತಮಿವ ಪೃಥ್ವ್ಯಾ ಗುಣಿನ್ಯಾ ಗುಣಿನಂ ಯಥಾ ।**
**ದೃಷ್ಟ್ವಾ ದೇವಾ ವಿಸ್ಮಿತಾಸ್ತೇ ಜಯಂ ಜಗುಸ್ತಥಾ ಮುಹುಃ ॥ ೧ ॥**
**ಕೇಚಿತ್ಸಮೀಪಮಾಗಂತುಂ ಬಿಭ್ಯತಿ ತ್ರಿದಿವೌಕಸಃ ।**
**ಉತ್ಥಾಯ ತಾರಕೋ ದೈತ್ಯಃ ಕದಾಚಿನ್ನೋ ನಿಹಂತಿ ಚೇತ್ ॥ ೨ ॥**

---

### ಕನ್ನಡದ ಅನುವಾದ

### ಕುಮಾರಸ್ಥಾಪಿತ ಪ್ರತಿಜ್ಞೇಶ್ವರ ಶಕ್ತಿಚ್ಛಿದ್ರೇಶ್ವರ ಮಾಹಾತ್ಮ್ಯವರ್ಣನ

೧-೨. ನಾರದನು ಹೇಳುತ್ತಾನೆ:—ಬಳಿಕ ಪರ್ವತಾಕಾರನಾಗಿ ಭೂಮಿಯ ಮೇಲೆ ಬಿದ್ದು, ಗುಣಮಯಿಯಾದ ಭೂದೇವಿಯಿಂದ ಆಲಿಂಗಿತನಾದ ಗುಣವಂತನಂತಿರುವ ಆ ತಾರಕನನ್ನು ಕಂಡು ದೇವತೆಗಳೆಲ್ಲರೂ ವಿಸ್ಮಯಗೊಂಡು ಷಣ್ಮುಖಸ್ವಾಮಿಗೆ ಜಯಕಾರಗಳನ್ನು ಮಾಡಿದರು. ಕೆಲವರು ದೇವತೆಗಳು, "ಈ ರಾಕ್ಷಸನು ಯಾವಾಗ ಎದ್ದು ನಮ್ಮನ್ನು ಕೊಂದುಹಾಕುವನೊ" ಎಂದು ಹೆದರಿ ಸಮೀಪದಲ್ಲಿಯೇ ಸುಳಿಯದಿದ್ದರು.

ತಂ ತಥಾ ಪತಿತಂ ದೃಷ್ಟ್ವಾ ವಸುಧಾಮಂಡಲೇ ಗುಹಃ ॥ ೩ ॥
ಆಸೀದ್ದೀನಮನಾಃ ಪಾರ್ಥ ಶುಶೋಚ ಚ ಮಹಾಮತಿಃ ।
ಸ್ತವನಂ ಚಾಪಿ ದೇವಾನಾಂ ವಾರಯಿತ್ವಾ ವಚೋಽಬ್ರವೀತ್ ॥ ೪ ॥
ಶೋಚ್ಯಂ ಪಾತಕಿನಂ ಮಾಂ ಚ ಸಂಸ್ತುವಧ್ವಂ ಕಥಂ ಸುರಾಃ ।
ಪಂಚಾನನಮಪಿ ಯೋ ಭರ್ತಾ ಪ್ರಾಕೃತೋಽಸೌ ನ ಕೀರ್ತ್ಯತೇ ॥ ೫ ॥
ಸ ತು ರುದ್ರಾಂಶಜಃ ಪ್ರೋಕ್ತಸ್ತಸ್ಯ ದ್ರುಹ್ಯನ್ನ ರುದ್ರವತ್ ।
ಸ್ವಾಯಂಭುವೇನ ಗೀತಶ್ಚ ಶ್ಲೋಕಃ ಸಂಶ್ರೂಯತೇ ತಥಾ ॥ ೬ ॥
ವೀರಂ ಹಿ ಪುರುಷಂ ಹತ್ವಾ ಗೋಸಹಸ್ರೇಣ ಮುಚ್ಯತೇ ।
ಯಥಾಕಥಂಚಿತ್ಪುರುಷೋ ನ ಹಂತವ್ಯಸ್ತತೋ ಬುಧೈಃ ॥ ೭ ॥
ಪಾಪಶೀಲಸ್ಯ ಹನನೇ ದೋಷೋ ಯದ್ಯಪಿ ನಾಸ್ತಿ ಚ ।
ತಥಾಪಿ ರುದ್ರಭಕ್ತೋಽಯಂ ಸಂಸ್ಮರನ್ನಿತಿ ಶೋಚಿಮಿ ॥ ೮ ॥
ತದಹಂ ಶ್ರೋತುಮಿಚ್ಛಾಮಿ ಪ್ರಾಯಶ್ಚಿತ್ತಂ ಚ ಕಿಂಚನ ।
ಪ್ರಾಯಶ್ಚಿತ್ತೈರಪೈತ್ಯೇನೋ ಯತೋಽಪಿ ಮಹದಾರ್ಜಿತಂ ॥ ೯ ॥

---

೩–೪. ಅಯ್ಯಾ ಪಾರ್ಥನೆ! ಇಂತು ಭೂಮಿಯಲ್ಲಿ ಬಿದ್ದಿದ್ದ ಆ ತಾರಕಾಸುರನನ್ನು ಕಂಡು ಉದಾರಚರಿತನಾದ ಗುಹನು ದುಃಖಗೊಂಡ ಮನಸ್ಸಿನಿಂದೊಡಗೂಡಿ ಶೋಕಿಸತೊಡಗಿದನು. ಅಲ್ಲದೆ, ದೇವತೆಗಳು ಮಾಡುತ್ತಿದ್ದ ಸ್ತೋತ್ರಗಳನ್ನೆಲ್ಲ ನಿಲ್ಲಿಸಿ ಆತನು ಹೇಳತೊಡಗಿದನು :—

೫–೭. "ಎಲೈ ದೇವತೆಗಳಿರಾ! ನಿಮ್ಮ ಅನುತಾಪಕ್ಕೆ ಅರ್ಹನಾಗಿ, ಪಾಪಿಷ್ಠನಾಗಿರುವ ನನ್ನನ್ನು ಏನೆಂದು ಸ್ತೋತ್ರಮಾಡುತ್ತಿರುವಿರಿ? ಪಂಚಭೂತಗಳಿಗೂ ಒಡೆಯನಾದವನು ಸಾಧಾರಣವಾದ ಪ್ರಾಕೃತ ಜನ್ಮವುಳ್ಳವನಲ್ಲವೆಂದು ಹೇಳಲ್ಪಡುವನು. ಆತನು ರುದ್ರನ ಅಂಶದಿಂದ ಜನಿಸಿದವನೆನ್ನುವರು. ಅವನಲ್ಲಿ ದ್ರೋಹವೆಣಿಸಿದರೆ ಅದು ರುದ್ರಭಕ್ತನಿಗೆ ಉಚಿತವಾದುದಲ್ಲ. ಮನುವೂ ಕೂಡ ಈ ರೀತಿಯ ಶ್ಲೋಕವನ್ನು ಹೇಳಿರುವನೆಂಬುದನ್ನು ಕೇಳಿರುವೆನಲ್ಲವೆ? 'ವೀರನಾದ ಪುರುಷನನ್ನು ಕೊಂದ ಪಾಪವು ಒಂದು ಸಾವಿರ ಗೋದಾನಗಳಿಂದಲೂ ಅಲ್ಪಸ್ವಲ್ಪವಾಗಿ ನೀಗುವುದು. ಆದುದರಿಂದ ಬುದ್ಧಿಶಾಲಿಯಾದವನು ಯಾವ ಮನುಷ್ಯನನ್ನೂ ಕೊಲ್ಲಬಾರದು.'

೮–೯. ಪಾಪಿಷ್ಠನಾದ ಪುರುಷನನ್ನು ಕೊಲ್ಲುವುದರಲ್ಲಿ ದೋಷವಿಲ್ಲದಿದ್ದರೂ ಈತನು ರುದ್ರಭಕ್ತನೆಂಬುದನ್ನು ನೆನಸಿಕೊಂಡು ದುಃಖಪಡುತ್ತಿರುವೆನು. ಇದಕ್ಕೆ ತಕ್ಕ ಯಾವುದಾದರೂ ಪ್ರಾಯಶ್ಚಿತ್ತವನ್ನು ಕೇಳಲಿಚ್ಛಿಸುವೆನು. ಅಪಾರವಾದ ಪಾಪವೂ ಕೂಡ ಉಚಿತವಾದ ಪ್ರಾಯಶ್ಚಿತ್ತದಿಂದ ನಿವೃತ್ತಿಯಾಗುವುದಲ್ಲವೆ?"

**ಇತಿ ಸಂಶೋಚತಸ್ತಸ್ಯ ಶಿವಪುತ್ರಸ್ಯ ಧೀಮತಃ ।**
**ವಾಸುದೇವೋ ಗುರುಃ ಪುಂಸಾಂ ದೇವಮಧ್ಯೇ ವಚೋಬ್ರವೀತ್ ॥**
**ಶ್ರುತಿಃ ಸ್ಮೃತಿಶ್ಚೇತಿಹಾಸಾಃ ಪುರಾಣಂ ಚ ಶಿವಾತ್ಮಜ ।**
**ಪ್ರಮಾಣಂ ಚೇತ್ತತೋ ದುಷ್ಟವಧೇ ದೋಷೋ ನ ವಿದ್ಯತೇ ॥ ೧೧ ॥**
**ಸ್ವಪ್ರಾಣಾನ್ಯಃ ಪರಪ್ರಾಣೈಃ ಪ್ರಪುಷ್ಣಾತ್ಯಘೃಣಃ ಪುಮಾನ್ ।**
**ತದ್ವಧಸ್ತಸ್ಯ ಹಿ ಶ್ರೇಯೋ ಯದ್ದೋಷಾದಾತ್ಯಧಃ ಪುಮಾನ್ ॥ ೧೨ ॥**
**ಅನ್ನಾದೇ ಭ್ರೂಣಹಾ ಮಾಂರ್ಷ್ಟಿ ಪತ್ಯೌ ಭಾರ್ಯಾಪಚಾರಿಣೀ ।**
**ಗುರೌ ಶಿಷ್ಯಶ್ಚ ಯಾಜ್ಯಶ್ಚ ಸ್ತೇನೋ ರಾಜನಿ ಕಿಲ್ಬಿಷಂ ॥ ೧೩ ॥**
**ಪಾಪಿನಂ ಪುರುಷಂ ಯೋ ಹಿ ಸಮರ್ಥೋ ನ ನಿಹಂತಿ ಚ ।**
**ತಸ್ಯ ತಾವಂತಿ ಪಾಪಾನಿ ತದರ್ಧಂ ಸೋಽಪ್ಯವಾಶ್ನುತೇ ॥ ೧೪ ॥**
**ಪಾಪಿನೋ ಯದಿ ವಧ್ಯಂತೇ ನೈವ ಪಾಲನಸಂಸ್ಥಿತೈಃ ।**
**ತತೋಽಯಮುಕ್ಷನೋ ಲೋಕಃ ಕಂ ಯಾತಿ ಶರಣಂ ಗುಹ ॥ ೧೫ ॥**

---

೧೦. ಇಂತು ಶೋಕಗೊಳ್ಳುತ್ತಿರುವ ಬುದ್ಧಿಶಾಲಿಯಾದ ಕಾರ್ತಿಕೇಯನನ್ನು ಕಂಡು ಲೋಕಗುರುವಾದ ಶ್ರೀ ಮಹಾವಿಷ್ಣುವು ದೇವತೆಗಳ ಮಧ್ಯದಲ್ಲಿ ಇಂತು ಹೇಳತೊಡಗಿದನು.

೧೧. "ಎಲೈ ಶಿವಕುಮಾರನೇ! ಧರ್ಮಾಧರ್ಮಗಳ ವಿಷಯದಲ್ಲಿ ಶ್ರುತಿ, ಸ್ಮೃತಿ, ಇತಿಹಾಸ, ಪುರಾಣಗಳು ಪ್ರಮಾಣಗಳೇ ಆಗಿದ್ದಲ್ಲಿ ನಿಜವಾಗಿಯೂ ದುಷ್ಟರನ್ನು ನಿಗ್ರಹಿಸುವುದರಲ್ಲಿ ಲವಲೇಶವಾದರೂ ದೋಷವಿರುವುದಿಲ್ಲ.

೧೨. ಯಾವ ಮನುಷ್ಯನು ನಿರ್ಘೃಣನಾಗಿ ಇತರರ ಪ್ರಾಣಗಳಿಂದ ತನ್ನ ಪ್ರಾಣವನ್ನುಳಿಸಿಕೊಳ್ಳಲೆಳಸುವನೋ, ಅವನಿಗೆ ನಿಗ್ರಹವೆಂಬುದೇ ಶ್ರೇಯಸ್ಕರವೆನಿಸುವುದು. ಇಲ್ಲದಿದ್ದಲ್ಲಿ ಅವನು ತನ್ನ ಪಾಪಗಳಿಂದ ಅಧೋಲೋಕಗಳನ್ನು ಸೇರುವನು.

೧೩. ಭ್ರೂಣಹತ್ಯೆಯನ್ನು ಮಾಡಿದವನು ಅನ್ನದಾನದಿಂದಲೂ, ವ್ಯಭಿಚಾರಿಣಿಯಾದ ಸ್ತ್ರೀಯು ಪತ್ಯಧೀನಳಾಗಿ ನಡೆಯುವುದರಿಂದಲೂ, ಶಿಷ್ಯನೂ ಯಜ್ಞದ ಯಜಮಾನನೂ ಗುರುವಿನ ಅಧೀನರಾಗಿರುವುದರಿಂದಲೂ, ಕಳ್ಳನು ರಾಜಶಿಕ್ಷೆಗೊಳಗಾಗುವುದರಿಂದಲೂ ತನ್ನ ಪಾಪವನ್ನು ಕಳೆದುಕೊಳ್ಳುವರು.

೧೪–೧೫. ಯಾವನು ಸಮರ್ಥನಾದರೂ ಪಾಪಿಯಾದ ಪುರುಷನನ್ನು ಶಿಕ್ಷಿಸುವುದಿಲ್ಲವೋ ಅವನಿಗೆ ಆ ಪಾಪಿಯ ಕೃತ್ಯಗಳ ಫಲಗಳಲ್ಲಿ ಅರ್ಧಭಾಗದ ಭೋಗವುಂಟಾಗುವುದು. ಎಲೈ ಗುಹನೆ! ಲೋಕರಕ್ಷಣೆಯಲ್ಲಿ ತತ್ಪರರಾಗಿರುವವರಿಂದಲೇ ಪಾಪಿಗಳ ನಿಗ್ರಹವಾಗದಿದ್ದರೆ, ಸಹಿಸಲಶಕ್ಯವಾದ ದುಃಖಗಳಿಂದ ಜನರು ಯಾರನ್ನುತಾನೆ ಶರಣುಹೊಗಬೇಕು?

ಕಥಂ ಯಜ್ಞಾಶ್ಚ ವೇದಾಶ್ಚ ವರ್ತಂತೇ ವಿಶ್ವಧಾರಕಾಃ ।
ತಸ್ಮಾತ್ತ್ವಯಾ ಪುಣ್ಯಮಾಪ್ತಂ ನ ಚ ಪಾಪಂ ಕಥಂಚನ ॥ ೧೬ ॥
ಅಥ ಚೇದ್ರುದ್ರಭಕ್ತೇಷು ಬಹುಮಾನಸ್ತ್ವವ ಪ್ರಭೋ ।
ತತ್ರ ತೇ ಕೀರ್ತಯಿಷ್ಯಾಮಿ ಪ್ರಾಯಶ್ಚಿತ್ತಂ ಮಹೋತ್ತಮಂ ॥ ೧೭ ॥
ಆಜನ್ಮಸಂಭವೈಃ ಪಾಪೈಃ ಪುಮಾನ್ಯೇನ ವಿಮುಚ್ಯತೇ ।
ಆಕಲ್ಪಾಂತಂ ಚ ವಾ ಯೇನ ರುದ್ರಲೋಕೇ ಪ್ರಮೋದತೇ ॥ ೧೮ ॥
ಕೃತೇ ಪಾಪೇನುತಾಪೋ ವೈ ಯಸ್ಯ ಸ್ಕಂದ ಪ್ರಜಾಯತೇ ।
ರುದ್ರಾರಾಧನತೋಽನ್ಯಚ್ಚ ಪ್ರಾಯಶ್ಚಿತ್ತಂ ಪರಂ ನಹಿ ॥ ೧೯ ॥
ನ ಯಸ್ಯಾಲಮಪಿ ಬ್ರಹ್ಮಾ ಮಹಿಮಾನಂ ವಿವರ್ಣಿತುಂ ।
ಶ್ರುತಿಶ್ಚ ಭೀತಾ ಯಂ ವಕ್ತಿ ಕಿಂ ತಸ್ಮಾತ್ಪರಮಂ ಭವೇತ್ ॥ ॥ ೨೦ ॥
ಅಕಾಂಡೇ ಯಚ್ಚ ಬ್ರಹ್ಮಾಂಡಕ್ಷಯೋದ್ಯುಕ್ತಂ ಹಲಾಹಲಂ ।
ಕಂಠೇ ದಧಾರ ಶ್ರೀಕಂಠಃ ಕಸ್ತಸ್ಮಾತ್ಪರಮೋ ಭವೇತ್ ॥ ೨೧ ॥

---

೧೬. ಜಗತ್ತಿಗೆ ಆಧಾರಸ್ತಂಭಗಳಂತಿರುವ ಯಜ್ಞಗಳೂ ವೇದಗಳೂ ಹೇಗೆ ವೃದ್ಧಿಯನ್ನೈದುವುವು? ಈಗ ನೀನು ಆ ಯಜ್ಞಗಳಿಗೂ, ವೇದಗಳಿಗೂ, ಅವುಗಳನ್ನಾಚರಿಸುವ ಮಹರ್ಷಿಗಳಿಗೂ ಶತ್ರುವಾಗಿದ್ದ ಈ ತಾರಕನನ್ನು ಕೊಂದೆಯಾದುದರಿಂದ ನಿನಗೆ ಕೇವಲ ಪುಣ್ಯವು ಸಂಭವಿಸಿರುವುದೇ ಹೊರತು ಸ್ವಲ್ಪವಾದರೂ ಪಾಪದ ಸಂಪರ್ಕವಿರುವುದಿಲ್ಲ.

೧೭. ಆದರೂ ನಿನಗೆ ಈತನು ರುದ್ರಭಕ್ತನೆಂಬ ಅಭಿಮಾನವಿರುವುದಾದರೆ ಅದಕ್ಕೆ ಉತ್ತಮೋತ್ತಮವಾದ ಪ್ರಾಯಶ್ಚಿತ್ತವನ್ನು ನಿರೂಪಿಸುತ್ತೇನೆ.

೧೮. ಅದರಿಂದ ಮನುಷ್ಯನಿಗೆ ಹುಟ್ಟಿದ ದಿನದಿಂದ ಮಾಡಿದ ಪಾಪಗಳೆಲ್ಲವೂ ನಾಶವಾಗುವುವು. ಮತ್ತು ಪ್ರಳಯದವರೆಗೂ ಶಾಶ್ವತವಾದ ರುದ್ರಲೋಕ ವಾಸವನ್ನು ಹೊಂದುವನು.

೧೯. ಎಲೈ ಸ್ಕಂದನೆ! ಯಾವ ಮನುಷ್ಯನಿಗೆ ಪಾಪವನ್ನು ಮಾಡಿದುದರಿಂದ ಪಶ್ಚಾತ್ತಾಪವುಂಟಾಗುವುದೋ, ಅವನಿಗೆ ಶಿವಾರ್ಚನೆಗಿಂತ ಉತ್ತಮವಾದ ಪ್ರಾಯಶ್ಚಿತ್ತವಿರುವುದಿಲ್ಲ.

೨೦. ಯಾವನ ಮಾಹಾತ್ಮ್ಯೆಯನ್ನು ಬಣ್ಣಿಸಲು ಚತುರ್ಮುಖಗಳುಳ್ಳ ಬ್ರಹ್ಮನೂ ಅಶಕ್ತನಾಗಿರುವನೊ, ವೇದಗಳೂ ಭಯಗೊಂಡು ಯಾವನನ್ನು ಸ್ತುತಿಸುವುವೋ, ಅವನಿಗಿಂತ ಉತ್ತಮರು ಯಾರು?

೨೧. ಸಮುದ್ರ ಮಥನಕಾಲದಲ್ಲಿ ಅಕಸ್ಮಾತ್ತಾಗಿ ಉದ್ಭವಿಸಿ ಬ್ರಹ್ಮಾಂಡವನ್ನೇ ಸುಡಲುಜ್ಜುಗಿಸಿದ ಹಾಲಾಹಲ ವಿಷವನ್ನು ತನ್ನ ಕೊರಳಿನಲ್ಲಿ ಧರಿಸಿದ ನೀಲಕಂಠನಿಗಿಂತ ಉತ್ತಮನು ಯಾರು?

ದುಃಖತಾಂಡವದೀನೋಽಭೂದಂಡಸಂಕೀರ್ಣಮಾನಸಃ ।
ಮಾಱಮಾರಶ್ಚ ಯೋ ದೇವಃ ಕಸ್ತಸ್ಮಾತ್ಪರಮೋ ಭವೇತ್ ॥ ೨೨ ॥
ವಿಯದ್ವ್ಯಾಪೀ ಸುರಸರಿತ್ಪ್ರವಾಹೋ ವಿಪ್ರುಷಾಕೃತಿಃ ।
ಬಭೂವ ಯಸ್ಯ ಶಿರಸಿ ಕಸ್ತಸ್ಮಾತ್ಪರಮೋ ಭವೇತ್ ॥ ೨೩ ॥
ಯಜ್ಞಾದಿಕಾಶ್ಚ ಯೋ ಧರ್ಮಾ ವಿನಾ ಯಸ್ಯಾರ್ಚನಂ ವೃಥಾ ।
ದಕ್ಷೋಽತ್ರ ಸತ್ಯದೃಷ್ಟಾಂತಃ ಕಸ್ತಸ್ಮಾತ್ಪರಮೋ ಭವೇತ್ ॥ ೨೪ ॥
ಕ್ಷೋಣೀ ರಥೋ ವಿಧಿರ್ಯಂತಾ ಶರೋಽಹಂ ಮಂದರೋ ಧನುಃ ।
ರಥಾಂಗೇ ಚಾಪಿ ಚಂದ್ರಾರ್ಕೌ ಯುದ್ಧೇ ಯಸ್ಯ ಚ ತ್ರೈಪುರೇ ॥ ೨೫ ॥
ಆರಾಧನಂ ತಸ್ಯ ಕೇಚಿದ್ಯೋಗಮಾರ್ಗೇಣ ಕುರ್ವತೇ ।
ದುಃಖಸಾಧ್ಯಂ ಹಿ ತತ್ತೇಷಾಂ ನಿತ್ಯಂ ಶೂನ್ಯಮುಪಾಸತಾಂ ॥ ೨೬ ॥
ತಸ್ಮಾತ್ತಸ್ಯಾರ್ಚಯೇಲ್ಲಿಂಗಂ ಭಕ್ತಿಮುಕ್ತೀ ಯ ಇಚ್ಛತಿ ।
ಸೃಷ್ಟ್ಯಾದೌ ಲಿಂಗರೂಪೀ ಸ ವಿವಾದೋ ಮಮಬ್ರಹ್ಮಣಃ ॥ ೨೭ ॥

---

೨೨. ಪ್ರಚಂಡವಾದ ಪ್ರಳಯನೃತ್ಯದಿಂದ ಆಯಾಸಗೊಂಡವನೂ, ಬ್ರಹ್ಮಾಂಡಕ್ಕೆ ಲಯಸ್ಥಾನವಾದ ಮನಸ್ಸುಳ್ಳವನೂ, ಮನ್ಮಥವೈರಿಯೂ ಆದ ದೇವನಿಗಿಂತ ಯಾರು ಹೆಚ್ಚಿನವರಿರುವರು ?

೨೩. ಆಕಾಶವನ್ನೆಲ್ಲ ವ್ಯಾಪಿಸಿದ ಮಂದಾಕಿನಿಯ ಪ್ರವಾಹವೆಲ್ಲವೂ ಯಾರ ತಲೆಯಲ್ಲಿ ಬಿಂದುಮಾತ್ರವೆನಿಸಿತೋ ಆ ಮಹಾಮಹಿಮನಿಗಿಂತ ದೊಡ್ಡವರು ಯಾರು ?

೨೪. ಯಾವನ ಪೂಜೆಯಿಲ್ಲದ ಯಜ್ಞಯಾಗಾದಿಗಳೂ ಕೂಡ ನಿಷ್ಫಲ ಕರ್ಮಗಳೆಂಬುದರಲ್ಲಿ ದಕ್ಷಬ್ರಹ್ಮನೇ ನಿಜವಾದ ದೃಷ್ಟಾಂತವಾಗಿರುವನೊ, ಅಂತಹ ಸರ್ವಸಂಪೂಜ್ಯನಿಗಿಂತಲೂ ಅನ್ಯರುಂಟೆ?

೨೫–೨೬. ಯಾರಿಗೆ ತ್ರಿಪುರಾಸುರನ ಸಂಹಾರದ ಸಮಯದಲ್ಲಿ ಭೂಮಿಯೇ ರಥವೂ, ಬ್ರಹ್ಮನೇ ಸಾರಥಿಯೂ, ನಾನೇ ಬಾಣವೂ, ಮಂದರಪರ್ವತವೇ ಧನುಸ್ಸೂ, ಸೂರ್ಯಚಂದ್ರರೇ ರಥಚಕ್ರಗಳೂ ಆಗಿದ್ದವೊ, ಅಂತಹ ಮಹಾದೇವನ ಪೂಜೆಯನ್ನು ಕೆಲವರು ಯೋಗಮಾರ್ಗದಿಂದ ಮಾಡುವರು. ಆದರೆ ನಿತ್ಯವೂ ಮನಸ್ಸಿನ ವೃತ್ತಿಗಳನ್ನು ಶೂನ್ಯಗಳನ್ನಾಗಿ ಮಾಡಿ ಉಪಾಸನೆ ಮಾಡುವವರ ಮಾರ್ಗವು ಅತ್ಯಂತ ಕಷ್ಟಸಾಧ್ಯವಾಗಿರುವುದು.

೨೭–೨೮. ಆದುದರಿಂದ ಯಾವನು ಭಕ್ತಿ ಮುಕ್ತಿಗಳನ್ನು ಕೋರುತ್ತಾನೆಯೊ, ಅವನು ಶಿವಲಿಂಗವನ್ನು ಪೂಜಿಸಬೇಕು. ಸೃಷ್ಟಿಯ ಮೊದಲಿನಲ್ಲಿ ಶಿವನು ಲಿಂಗರೂಪಿಯಾಗಿ ನನಗೂ ಬ್ರಹ್ಮನಿಗೂ ವಿವಾದವಿಷಯನಾದನು. ಆತನ

ಅಭೂದ್ಯಸ್ಯ ಪರಿಚ್ಛೇದೇ ನಾಲಮಾವಾಂ ಬಭೂವಿವ ।
ಚರಾಚರಂ ಜಗತ್ಸರ್ವಂ ಯತೋ ಲೀನಂ ಸದಾತ್ರ ಚ ॥ ೨೮ ॥
ತಸ್ಮಾಲ್ಲಿಂಗಮಿತಿ ಪ್ರೋಕ್ತಂ ದೇವೈ ರುದ್ರಸ್ಯ ಧೀಮತಃ ।
ತೋಯೇನ ಸ್ನಾಪಯೇಲ್ಲಿಂಗಂ ಶ್ರದ್ಧಯಾ ಶುಚಿನಾ ಚ ಯಃ ।
ಬ್ರಹ್ಮಾದಿ ತೃಣಪರ್ಯಂತಂ ತೇನೇದಂ ತರ್ಪಿತಂ ಜಗತ್ ॥ ೨೯ ॥
ಪಂಚಾಮೃತೇನ ತಲ್ಲಿಂಗಂ ಸ್ನಾಪಯೇದ್ಯಶ್ಚ ಬುದ್ಧಿಮಾನ್ ।
ತರ್ಪಿತಂ ತೇನ ವಿಶ್ವಂ ಸ್ಯಾತ್ಸುಧಯಾ ಪಿತೃಭಿಃ ಸಮಂ ॥ ೩೦ ॥
ಪುಷ್ಪೈರಭ್ಯರ್ಚಯೇಲ್ಲಿಂಗಂ ಯಥಾಕಾಲೋದ್ಭವೈಶ್ಚ ಯಃ ।
ತೇನ ಸಂಪೂಜಿತಂ ವಿಶ್ವಂ ಸಕಲಂ ನಾತ್ರಸಂಶಯಃ ॥ ೩೧ ॥
ನೈವೇದ್ಯಂ ತತ್ರ ಯೋ ದದ್ಯಾಲ್ಲಿಂಗಸ್ಯಾಗ್ರೇ ವಿಚಕ್ಷಣಃ ।
ಭೋಜಿತಂ ತೇನ ವಿಶ್ವಂ ಸ್ಯಾಲ್ಲಿಂಗಸ್ಯೈವಂ ಫಲಂ ಮಹತ್ ॥ ೩೨ ॥
ಕಿಮತ್ರ ಬಹುನೋಕ್ತೇನ ಸ್ವಲ್ಪಂ ವಾ ಯದಿವಾ ಬಹು ।
ಲಿಂಗಸ್ಯ ಕ್ರಿಯತೇ ಯಚ್ಚ ತತ್ಸರ್ವಂ ವಿಶ್ವಪ್ರೀತಿದಂ ॥ ೩೩ ॥

---

ಆದ್ಯಂತಗಳನ್ನು ತಿಳಿಯಲು ನಾವಿಬ್ಬರೂ ಶಕ್ತರಾಗಲಿಲ್ಲ. ಚರಾಚರಾತ್ಮಕವಾದ ಈ ಬ್ರಹ್ಮಾಂಡವೆಲ್ಲವೂ ನಿತ್ಯವೂ ಅದರಲ್ಲಿಯೇ ಲೀನವಾಗಿರುವುದರಿಂದ ಆ ರೂಪಕ್ಕೆ ಲಿಂಗವೆಂದು ಜ್ಞಾನವುಯನಾದ ರುದ್ರನ ಭಕ್ತರಾದ ದೇವತೆಗಳು ಹೇಳುವರು. ಯಾವನು ಶ್ರದ್ಧಾಭಕ್ತಿಗಳಿಂದ ಶುಚಿಯಾದ ತೀರ್ಥೋದಕವನ್ನು ತಂದು ಲಿಂಗಕ್ಕೆ ಅಭಿಷೇಕವನ್ನು ಮಾಡುವನೊ ಅವನಿಂದ ಬ್ರಹ್ಮಾದಿ ಸ್ಥಾವರಾಂತವಾದ ಸಕಲ ಲೋಕವೂ ತೃಪ್ತಿಗೊಳಿಸಲ್ಪಡುವುದು.

೩೦. ಯಾವನು ಶಿವಲಿಂಗವನ್ನು ಪಂಚಾಮೃತದಿಂದ ಸ್ನಾನಮಾಡಿಸುವನೊ, ಬುದ್ಧಿವಂತನಾದ ಆತನ ಮೂಲಕ ಪಿತೃಗಳಿಂದೊಡಗೂಡಿದ ಲೋಕವೆಲ್ಲವೂ ಅಮೃತಪಾನವನ್ನು ಮಾಡಿದಂತೆ ತಿಳಿಯಬೇಕು.

೩೧. ಆಯಾ ಕಾಲಗಳಲ್ಲಿ ಸಿಕ್ಕುವ ಪುಷ್ಪಗಳಿಂದ ಶಿವನನ್ನು ಪೂಜಿಸಿದವನು ಸಮಸ್ತ ಬ್ರಹ್ಮಾಂಡವನ್ನೂ ಪೂಜಿಸಿದಂತಾಗುವನೆಂಬುದರಲ್ಲಿ ಸಂಶವಿಲ್ಲ.

೩೨–೩೩. ಲಿಂಗರೂಪಿಯಾದ ಶಿವನ ಸಮ್ಮುಖದಲ್ಲಿ ಯಾವ ವಿಚಕ್ಷಣನು ನೈವೇದ್ಯವನ್ನೊಪ್ಪಿಸುವನೊ, ಅವನು ಸಕಲ ಲೋಕಕ್ಕೂ ಭೋಜನವನ್ನಿತ್ತಂತೆ ತಿಳಿಯಬೇಕು. ಲಿಂಗದ ಅರ್ಚನೆಯ ಫಲವು ಇಷ್ಟು ಮಹತ್ತರವಾಗಿರುವುದು. ಈ ವಿಷಯದಲ್ಲಿ ಹೆಚ್ಚಿಗೆ ಹೇಳತಕ್ಕುದೇನು? ಸ್ವಲ್ಪವಾಗಲಿ ಹೆಚ್ಚಾಗಲಿ ಮನುಷ್ಯನ ಯೋಗ್ಯತೆಗೆ ತಕ್ಕಂತೆ ಶಿವಲಿಂಗಕ್ಕೆ ಮಾಡಿದ ಸೇವೆಯೆಲ್ಲವೂ ಪ್ರಪಂಚಕ್ಕೆ ಸಂತೋಷವನ್ನುಂಟುಮಾಡುವುದು.

ತಚ್ಚ ಲಿಂಗಂ ಸ್ಥಾಪಯೇದ್ಯಃ ಶುಚೌ ದೇಶೇ ಸುಭಕ್ತಿತಃ।
ಸ ಸರ್ವಪಾಪನಿರ್ಮುಕ್ತೋ ರುದ್ರಲೋಕೇ ಪ್ರಮೋದತೇ ॥ ೩೪ ॥
ಯನ್ನಿತ್ಯಂ ಯಜತೋ ಯಜ್ಞೈಃ ಫಲಮಾಹುರ್ಮನೀಷಿಣಃ।
ತಚ್ಚ ಸ್ಥಾಪಯತೋ ಲಿಂಗಂ ಶಿವಸ್ಯ ಶುಭಲಕ್ಷಣಂ ॥ ೩೫ ॥
ಯಥಾಗ್ನಿಃ ಸರ್ವದೇವಾನಾಂ ಮುಖಂ ಸ್ಕಂದ ಪ್ರಕೀರ್ತ್ಯತೇ।
ತಥೈವ ಸರ್ವಜಗತಾಂ ಮುಖಂ ಲಿಂಗಂ ನ ಸಂಶಯಃ ॥ ೩೬ ॥
ಪ್ರಾರಂಭಾನ್ಮುಚ್ಯತೇ ಪಾಪೈಃ ಸರ್ವಜನ್ಮಕೃತೈರಪಿ।
ಅತೀತಂ ಚ ತಥಾಗಾಮಿ ಕುಲಾನಾಂ ತಾರಯೇಚ್ಛತಂ ॥ ೩೭ ॥
ಮೃಣ್ಮಯಂ ಕಾಷ್ಠನಿಷ್ಪನ್ನಂ ಪಕ್ವೇಷ್ಟಂ ಶೈಲಮೇವ ಚ।
ಕೃತಮಾಯತನಂ ದದ್ಯಾತ್ಕ್ರಮಾಚ್ಛತಗುಣಂ ಫಲಂ ॥ ೩೮ ॥
ಕಲಶಂ ತತ್ರ ಚಾರೋಪ್ಯ ಏಕವಿಂಶತ್ಕುಲೈರ್ಯುತಃ।
ಆಕಲ್ಪಾಂತಂ ರುದ್ರಲೋಕೇ ಮೋದತೇ ರುದ್ರವತ್ಸುಖೀ ॥ ೩೯ ॥

---

೩೪–೩೫. ಯಾವನು ಭಕ್ತಿಯುಕ್ತನಾಗಿ ಶುದ್ಧವಾದ ಪ್ರದೇಶದಲ್ಲಿ ಅಂತಹ ಶಿವಲಿಂಗದ ಪ್ರತಿಷ್ಠೆಯನ್ನು ಮಾಡುವನೊ, ಅವನು ಸಕಲ ಪಾಪಗಳಿಂದಲೂ ಮುಕ್ತನಾಗಿ ಕೈಲಾಸದಲ್ಲಿ ಸುಖಪಡುವನು. ನಿತ್ಯವೂ ಪಂಚಮಹಾಯಜ್ಞಗಳನ್ನು ಮಾಡುವುದರಿಂದ ಯಾವ ಸುಕೃತ ಫಲವುಂಟೆಂದು ಶಾಸ್ತ್ರಜ್ಞರು ಹೇಳುವರೊ, ಶುಭಲಕ್ಷಣಯುಕ್ತವಾದ ಶಿವಲಿಂಗವನ್ನು ಸ್ಥಾಪಿಸುವುದರಿಂದ ಆ ಫಲವೇ ದೊರಕುವುದು.

೩೬. ಎಲೈ ಸ್ಕಂದನೆ! ಅಗ್ನಿಯು ಸಕಲ ದೇವತೆಗಳಿಗೂ ಮುಖನೆನಿಸಿರುವಂತೆ ಶಿವಲಿಂಗವೂ ಸಕಲ ಬ್ರಹ್ಮಾಂಡದೊಳಗಿನ ಲೋಕಗಳ ಮುಖವೆನಿಸಿರುವುದರಲ್ಲಿ ಸಂಶಯವಿಲ್ಲವು.

೩೭. ಲಿಂಗಸ್ಥಾಪನೆಯನ್ನು ಪ್ರಾರಂಭಿಸುವುದರಿಂದಲೇ ಸಕಲ ಜನ್ಮಗಳಲ್ಲಿಯೂ ಮಾಡಿದ ಪಾಪಗಳಿಂದ ಮುಕ್ತನಾಗುವನು. ಅಲ್ಲದೆ ಹಿಂದೆ ಕಳೆದ, ಮುಂದೆ ಬರಲಿರುವ ನೂರು ಕುಲದವರನ್ನೂ ಉದ್ಧರಿಸುವನು.

೩೮–೩೯. ಮಣ್ಣಿನಿಂದಾಗಲಿ, ಮರದಿಂದಾಗಲಿ, ಸುಟ್ಟ ಇಟ್ಟಿಗೆಗಳಿಂದಾಗಲಿ, ಕಲ್ಲಿನಿಂದಾಗಲಿ ಶಿವಲಿಂಗಕ್ಕೆ ಆಲಯವನ್ನು ಕಟ್ಟಿಸಲು, ಉತ್ತರೋತ್ತರ ಕ್ರಮವಾಗಿ ಶತಗುಣಿತವಾದ ಫಲವು ಲಭಿಸುವುದು. ಆ ಶಿವಾಲಯಕ್ಕೆ ಕಲಶ ಗೋಪುರಗಳನ್ನು ಮಾಡಿಸಿದವನು ತನ್ನ ಇಪ್ಪತ್ತೊಂದು ಕುಲದವರೊಡನೆ ಪ್ರಳಯದ ಪರ್ಯಂತವೂ ಶಿವಲೋಕದಲ್ಲಿ ಶಿವನಂತೆಯೇ ಸುಖಗಳನ್ನನುಭವಿಸುವನು.

**ಏವಂವಿಧಫಲಂ ಲಿಂಗಮತೋ ಭಯೋಽಪ್ಯಧೋ ನಹಿ ।**
**ತಸ್ಮಾದತ್ರ ಮಹಾಸೇನ ಲಿಂಗಂ ಸ್ಥಾಪಿತುಮರ್ಹಸಿ ॥ ೪೦ ॥**
**ಯದುಕ್ತಮೇತದಶ್ಲೀಲಂ ಯದಿ ಕಿಂಚನ ಚಾತ್ರಚೇತ್ ।**
**ತದ್ಬ್ರವೀತು ಮಹಾಸೇನ ಸ್ವಯಂಸಾಕ್ಷೀ ಮಹೇಶ್ವರಃ ॥ ೪೧ ॥**
**ಏವಂ ವದತಿ ಗೋವಿಂದೇ ಸಾಧುವಾದೋ ಮಹಾನಭೂತ್ ।**
**ಮಹಾದೇವೋ ಹ್ಯಥಾಲಿಂಗ್ಯ ಸ್ಕಂದಂ ವಚನಮಬ್ರವೀತ್ ॥ ೪೨ ॥**
**ಯದ್ಭವಾನ್ಮಮ ಭಕ್ತೇಷು ಪ್ರಕರೋತಿ ಕೃಪಾಂ ಪರಾಂ ।**
**ತೇನಾಪಿ ಪರಮಾ ಪ್ರೀತಿರ್ಮಮ ಜಾತಾ ತವೋಪರಿ ॥ ೪೩ ॥**
**ಕಿಂತು ಯದ್ಭಗವಾನಾಹ ವಾಸುದೇವೋ ಜಗದ್ಗುರುಃ ।**
**ತತ್ತಥಾ ನಾನ್ಯಥಾ ಕಿಂಚಿದತ್ರ ಪ್ರೋಕ್ತಂ ಹಿ ವಿಷ್ಣುನಾ ॥ ೪೪ ॥**
**ಯೋ ಹ್ಯಹಂ ಸ ಹರಿರ್ಜ್ಞೇಯೋ ಯೋ ಹರಿಃ ಸೋಽಹಮಿತ್ಯುತ ॥**
**ನಾವಯೋರಂತರಂ ಕಿಂಚಿದ್ದೀಪಯೋರಿವ ಸುವ್ರತ ।**
**ಏನಂ ದ್ವೇಷ್ಟಿ ಸ ಮಾಂ ದ್ವೇಷ್ಟಿ ಯೋಽನ್ವೇತ್ಯೇನಂ ಸಮಾನುಗಃ ॥ ೪೬ ॥**

---

೪೦. ಶಿವಲಿಂಗವು ಇಂತು ಮಹತ್ಫಲವನ್ನು ಕೊಡುವಂಥದು. ಮತ್ತು ಇದಕ್ಕೂ ಹೆಚ್ಚಿನ ಫಲವನ್ನೇ ಕೊಡುವುದೇ ಹೊರತು ಕಡಮೆಯಿಲ್ಲ. ಎಲೈ ಮಹಾಸೇನನೆ! ಆದುದರಿಂದ ನೀನು ಇಲ್ಲಿಯೇ ಒಂದು ಶಿವಲಿಂಗವನ್ನು ಸ್ಥಾಪಿಸು.

೪೧. ಅಯ್ಯಾ ಕಾರ್ತಿಕೇಯನೇ! ಈಗ ನಾನು ಹೇಳಿದುದರಲ್ಲಿ ಏನಾದರೂ ಅಸಾಧುವಾದ ವಿಷಯವಿದ್ದರೆ ಅಥವಾ ಮತ್ತೇನಾದರೂ ಹೇಳುವುದಿದ್ದರೆ ಇಲ್ಲಿ ಸಾಕ್ಷಾತ್ತಾಗಿ ನಿಂತಿರುವ ಮಹೇಶ್ವರನೇ ತಿಳಿಸಲಿ. ಆತನೇ ನನ್ನ ಮಾತು ಗಳಿಗೆ ಸಾಕ್ಷಿಯು."

೪೨. ಇಂತು ಶ್ರೀಮನ್ನಾರಾಯಣನು ಹೇಳುತ್ತಿರಲು ಬಹಳ ಹಿರಿದಾದ ಜಯಕಾರವುಂಟಾಯಿತು. ಆಗ ಮಹಾದೇವನು ಸ್ಕಂದನನ್ನು ಅಪ್ಪಿಕೊಂಡು ಹೇಳಿದನು :—

೪೩–೪೪. "ವತ್ಸ ಷಣ್ಮುಖ! ನನ್ನ ಭಕ್ತರಲ್ಲಿ ನೀನು ಅತ್ಯಂತವಾದ ಕೃಪೆಯನ್ನು ಮಾಡಿದುದರಿಂದ ನನಗೆ ನಿನ್ನಲ್ಲಿ ಅತ್ಯುತ್ಕೃಷ್ಟವಾದ ಪ್ರೀತಿಯುಂಟಾಗಿರುವುದು. ಜಗದ್ಗುರುವಾದ ಶ್ರೀಮನ್ನಾರಾಯಣನು ಹೇಳಿದ ವಿಷಯವೆಲ್ಲವೂ ಸತ್ಯವೇ ಹೊರತು ಆತನ ಮಾತುಗಳಲ್ಲಿ ಸ್ವಲ್ಪವೂ ಸುಳ್ಳಿಲ್ಲವು.

೪೫–೪೭. ನಾನೇ ಹರಿಯೆಂದು ತಿಳಿಯಬೇಕು. ಯಾವನು ಹರಿಯೋ ಅವನೇ ನಾನೆಂದು ತಿಳಿ. ಎಲೈ ಸುವ್ರತನೆ! ಎರಡು ದೀಪಗಳಿಗೆಂತು ತೇಜೋಽಧಿಷ್ಠಾನತ್ವದಿಂದ ಭೇದವಿಲ್ಲವೊ, ಅಂತೆಯೇ ನಮ್ಮಿಬ್ಬರಲ್ಲಿಯೂ ಭೇದವಿಲ್ಲವೆಂಬು

**ಇತಿ ಸ್ಕಂದ ವಿಜಾನಾತಿ ಸ ಮದ್ಭಕ್ತೋಽನ್ಯಥಾ ನ ಹಿ ॥ ೪೭ ॥**
**ಸ್ಕಂದ ಉವಾಚ :—**
**ಏವಮೇವಾಸ್ಮಿ ಜಾನಾಮಿ ತ್ವಾಂ ಚ ವಿಷ್ಣುಂ ಚ ಶಂಕರಂ ॥ ೪೮ ॥**
**ಯಚ್ಚ ಲಿಂಗಕೃತೇ ಪ್ರಾಹ ಹರಿರ್ಮಾಂ ಧರ್ಮವತ್ಸಲಃ ।**
**ಖೇ ವಾಣೀ ತಾರಕವಧೇ ಏವಮೇವ ಪುರಾಹ ಮಾಂ ॥ ೪೯ ॥**
**ಲಿಂಗಂ ಸಂಸ್ಥಾಪಯಿಷ್ಯಾಮಿ ಸರ್ವಪಾಪಾಪಹಂ ತತಃ ।**
**ಏಕಂ ಯತ್ರ ಪ್ರತಿಜ್ಞಾ ಮೇ ಗೃಹೀತಾಸ್ಯ ವಧಾಯ ಚ ॥ ೫೦ ॥**
**ದ್ವಿತೀಯಂ ಯತ್ರ ನಿಃಸತ್ವಸ್ತ್ಯಕ್ತಃ ಶಕ್ತ್ಯಾಸುರೋಽಭವತ್ ।**
**ತೃತೀಯಂ ಯತ್ರನಿಹತೋ ಹತ್ಯಾ ಪಾಪೋಪಶಾಂತಿದಂ ॥ ೫೧ ॥**
**ಇತ್ಯುಕ್ತ್ವಾ ವಿಶ್ವಕರ್ಮಾಣಮಾಹೂಯ ಪ್ರಾಹ ಪಾವಕಿಃ ।**
**ತ್ರೀಣಿ ಲಿಂಗಾನಿ ಶುದ್ಧಾನಿ ಶೀಘ್ರಂ ತ್ವಂ ಕರ್ತುಮರ್ಹಸಿ ॥ ೫೨ ॥**

---

ದನ್ನು ದೃಢವಾಗಿ ನಂಬಬೇಕು. ಯಾವನು ವಿಷ್ಣುವನ್ನು ದ್ವೇಷಿಸುವನೊ ಅವನು ನನ್ನನ್ನೇ ದ್ವೇಷಿಸುವನೆಂದು ತಿಳಿಯಬೇಕು. ಯಾವನು ಆತನ ಅನುಯಾಯಿಯೋ ಅವನೇ ನನಗೆ ಪ್ರಿಯನು. ಇದನ್ನು ತಿಳಿದವನೇ ನನ್ನ ಭಕ್ತನು; ಮತ್ತೊಬ್ಬನಲ್ಲ."

೪೮. ಸ್ಕಂದನು ಹೇಳುತ್ತಾನೆ:—"ಎಲೈ ಶಂಕರನೆ! ನಾನು ನಿನ್ನನ್ನೂ ವಿಷ್ಣುವನ್ನೂ ಅಭೇದದೃಷ್ಟಿಯಿಂದಲೇ ನೋಡುತ್ತಿರುವೆನು.

೪೯–೫೦. ಶಿವಲಿಂಗದಿಂದ ಪಾತಕಗಳು ನಾಶವಾಗುವ ವಿಷಯದಲ್ಲಿ ಧರ್ಮಸ್ಥಾಪನತತ್ಪರನಾದ ಹರಿಯು ಈಗ ಏನನ್ನು ಹೇಳಿರುವನೊ, ಅದನ್ನೇ ತಾರಕಾಸುರನ ವಧೆಗೆ ಪೂರ್ವದಲ್ಲಿ ಆಕಾಶವಾಣಿಯೂ ನನ್ನನ್ನು ಕುರಿತು ಹೇಳಿದ್ದಿತು. ಆದುದರಿಂದ ಸಕಲ ಪಾಪಗಳ ಕ್ಷಯಾರ್ಥವಾಗಿ ಶಿವಲಿಂಗವನ್ನು ಸ್ಥಾಪನೆಮಾಡುವೆನು. ನಾನು ತಾರಕಾಸುರನನ್ನು ವಧಿಸುವೆನೆಂದು ಪ್ರತಿಜ್ಞೆಯನ್ನು ಮಾಡಿದ ಸ್ಥಳದಲ್ಲಿ ಒಂದು ಲಿಂಗವನ್ನು ಸ್ಥಾಪಿಸುವೆನು.

೫೧. ಎರಡನೆಯದನ್ನು ನನ್ನ ಶಕ್ತಿಯು ತಲೆಯಿಂದ ಹೊರಡಲು ತಾರಕಾಸುರನು ಸತ್ತ್ವವಿಹೀನನಾಗಿ ಬಿದ್ದ ಸ್ಥಳದಲ್ಲಿ ಸ್ಥಾಪಿಸುವೆನು. ಹತ್ಯೆಯ ಪಾಪವನ್ನು ಹೋಗಲಾಡಿಸುವ ಮೂರನೆಯ ಲಿಂಗವನ್ನು ತಾರಕಾಸುರನು ಮಡಿದ ಸ್ಥಳದಲ್ಲಿ ಪ್ರತಿಷ್ಠಿಸುವೆನು."

೫೨. ಇಂತೆಂದು ಅಗ್ನಿಪುತ್ರನಾದ ಕಾರ್ತಿಕೇಯನು ವಿಶ್ವಕರ್ಮನನ್ನು ಕರೆದು ಶಾಸ್ತ್ರಾನುಸಾರವಾಗಿ ಪರಿಶುದ್ಧಗಳಾದ ಮೂರು ಲಿಂಗಗಳನ್ನು ಮಾಡುವಂತೆ ಅಪ್ಪಣೆ ಮಾಡಿದನು.

ವಚನಾದ್ಬಾಹುಲೇಯಸ್ಯ ನಿರ್ಮಮೋ ದೇವವರ್ಧಕಿಃ ।
ತ್ರೀಣಿ ಲಿಂಗಾನಿ ಶುದ್ಧಾನಿ ನ್ಯವೇದಯತ ತಾನಿಚ ॥ ೫೩ ॥
ತತೋ ಬ್ರಹ್ಮಾದಿಭಿಃ ಸಾರ್ಧಂ ವಿಷ್ಣುನಾ ಶಂಕರೇಣ ಚ ।
ಪೂರ್ವಂ ಸಂಸ್ಥಾಪಯಾಮಾಸ ಪಶ್ಚಿಮಾಯಾಮದೂರತಃ ।
ಪ್ರತಿಜ್ಞೇಶ್ವರಮಿತ್ಯೇವ ಲಿಂಗಂ ಪರಮಶೋಭನಂ ॥ ೫೪ ॥
ಅಷ್ಟಮ್ಯಾಂ ಬಹುಲೇ ಚಾತ್ರ ಚೈತ್ರೇ ಸ್ನಾತ್ವಾ ಉಪೋಷ್ಯಚ ॥ ೫೫ ॥
ಪೂಜಾಂ ಚ ಜಾಗರಂ ಕೃತ್ವಾ ಮುಚ್ಯೇತ್ಪುರುಷ್ಯಪಾಪತಃ ।
ಇತ್ಯಾಹ ಸ್ಕಂದಪ್ರೀತ್ಯರ್ಥಂ ಸ್ವಯಂ ತತ್ರ ಮಹೇಶ್ವರಃ ॥ ೫೬ ॥
ತತೋ ದ್ವಿತೀಯಂ ಲಿಂಗಂ ತು ವಹ್ನಿಕೋಣಾಶ್ರಿತಂ ತಥಾ ।
ಸ್ಥಾಪಯಾಮಾಸ ಸರಸೋ ಯತ್ರ ಶಕ್ತಿರ್ವಿನಿರ್ಯಯೌ ॥ ೫೭ ॥
ಕಪಾಲೇಶ್ವರಮಿತ್ಯೇವ ಲಿಂಗಂ ಪಾಪಾಪಹಂ ಶುಭಂ ।
ಶಕ್ತಿಂ ಚ ತಾಮಭಿಷ್ಟೂಯ ಸ್ಥಾಪಯಾಮಾಸ ತತ್ರ ಚ ॥ ೫೮ ॥

---

೫೩. ಷಣ್ಮುಖಸ್ವಾಮಿಯ ಈ ಮಾತುಗಳನ್ನು ಕೇಳಿ ದೇವಶಿಲ್ಪಿಯಾದ ವಿಶ್ವಕರ್ಮನು ಪರಿಶುದ್ಧಗಳಾದ ಮೂರು ಶಿವಲಿಂಗಗಳನ್ನು ಮಾಡಿ ಆತನಿಗೆ ಒಪ್ಪಿಸಿದನು.

೫೪. ಬಳಿಕ ಬ್ರಹ್ಮಾದಿ ದೇವತೆಗಳಿಂದಲೂ, ಮಹಾವಿಷ್ಣುವಿನಿಂದಲೂ, ಶಿವನಿಂದಲೂ ಕೂಡಿ ಮೊದಲು ಪ್ರತಿಜ್ಞೇಶ್ವರವೆಂಬ ಪರಮಪವಿತ್ರವಾದ ಲಿಂಗವನ್ನು ಮಹೀಸಾಗರ ಕ್ಷೇತ್ರದ ಪಶ್ಚಿಮಕ್ಕೆ ಸ್ವಲ್ಪ ದೂರದಲ್ಲಿಯೇ ಪ್ರತಿಷ್ಠಿಸಿದನು.

೫೫–೫೬. "ಚೈತ್ರಮಾಸದ ಕೃಷ್ಣ ಅಷ್ಟಮಿಯಲ್ಲಿ ಆ ಸ್ಥಳದಲ್ಲಿ ಮಿಂದು ಉಪವಾಸವನ್ನು ಮಾಡಿ ಶಿವಪೂಜೆಯನ್ನೂ ರಾತ್ರಿಯ ಜಾಗರಣೆಯನ್ನೂ ಮಾಡಲು ಕಠಿನಗಳಾದ ನಡೆನುಡಿಗಳ ಪಾಪದಿಂದ ಮನುಷ್ಯನು ಮುಕ್ತನಾಗುವನು" ಎಂದು ಮಹೇಶ್ವರನು ತಾನೇ ಹೇಳಿ ಷಣ್ಮುಖಸ್ವಾಮಿಯನ್ನು ಸಂತೋಷಗೊಳಿಸಿದನು.

೫೭. ಆಮೇಲೆ ತಾರಕಾಸುರನ ಶರೀರದಿಂದ ಶಕ್ತಿಯು ಹೊರಟ ಸ್ಥಳವಾದ, ಸರೋವರದ ಆಗ್ನೇಯ ಭಾಗದಲ್ಲಿ ಎರಡನೆಯ ಲಿಂಗವನ್ನು ಸ್ಥಾಪನೆ ಮಾಡಿದನು.

೫೮. ಅದು ಸಕಲ ಪಾಪಗಳನ್ನೂ ನಿರ್ಮೂಲಗೊಳಿಸುವುದಾಗಿ ಕಪಾಲೇಶ್ವರವೆಂಬ ಹೆಸರಿನಿಂದ ಪ್ರಸಿದ್ಧವಾಗಿರುವುದು. ಷಣ್ಮುಖನು ಆ ಶಕ್ತಿಯನ್ನೂ ಸ್ತೋತ್ರಮಾಡಿ ಆ ಪ್ರದೇಶದಲ್ಲಿಯೇ ಅದನ್ನು ಪ್ರತಿಷ್ಠಿಸಿ ನೆಲೆಗೊಳಿಸಿದನು.

ಕಪಾಲೇಶ್ವರ ಸಾನ್ನಿಧ್ಯಂ ದೇವೀಂ ಕಾಪಾಲಿಕೇಶ್ವರೀಂ ।
ತತ್ರ ಚೋತ್ತರದಿಗ್ಭಾಗೇ ಶಕ್ತಿಚ್ಛಿದ್ರಂ ಪ್ರಚಕ್ಷತೇ ॥ ೫೯ ॥
ಪಾತಾಲಗಂಗಾ ಯತ್ರಾಸ್ತಿ ಸರ್ವಪಾಪಹರಾ ಶಿವಾ ।
ತತ್ರ ಸ್ನಾತ್ವಾ ದದೌ ಸ್ಕಂದಃ ಕೃಪಯಾಭಿಪರಿಪ್ಲುತಃ ॥ ೬೦ ॥
ತದಾ ತೋಯಂ ತಾರಕಾಯ ಸಹಿತಃ ಸರ್ವದೈವತೈಃ ॥ ೬೧ ॥
ಕಾಶ್ಯಪೇಯಾಯ ವಜ್ರಾಂಗತನಯಾಯ ಮಹಾತ್ಮನೇ ।
ರುದ್ರಭಕ್ತಾಯ ಸತಿಲಮಕ್ಷಯ್ಯೋದಕಮಸ್ತ್ವಿತಿ ॥ ೬೨ ॥
ತತೋ ಮಹೇಶ್ವರಃ ಪ್ರೀತಃ ಪ್ರಾಹ ಸ್ಕಂದಸ್ಯ ಶೃಣ್ವತಃ ।
ಚತುರ್ದಶ್ಯಾಂ ಕೃಷ್ಣಪಕ್ಷೇ ಮಧೌ ಚೈವಾತ್ರ ಯೋ ನರಃ ।
ಸ್ನಾತ್ವೋಪೋಷ್ಯ ಸಮಭ್ಯರ್ಚ್ಯ ಕಪಾಲೇಶ್ವರಮೀಶ್ವರೀಂ ॥ ೬೩ ॥
ತೇಜೋವಧಸಮುದ್ಭೂತಪಾತಕೇನ ಸ ಮುಚ್ಯತೇ ॥ ೬೪ ॥
ಅಸ್ಯಾಮೇವ ತಿಥೌ ಸೋಮಃ ಶಿವಯೋಗಶ್ಚ ತೈತಿಲಂ ।
ಷಡ್ಯೋಗಃ ಶಕ್ತಿಚ್ಛಿದ್ರೇ ಯೋ ದಿನಂ ರುದ್ರಂ ಜಪನ್ನಿಶಿ ।
ಸ್ನಾತ್ವಾತ್ರ ಸಶರೀರೋ ವೈ ರುದ್ರಲೋಕಂ ವ್ರಜಿಷ್ಯತಿ ॥ ೬೫ ॥

---

೫೯–೬೧. ಇಂತು ಈಶ್ವರನಿಗೆ ಕಪಾಲೇಶ್ವರನೆಂದೂ, ದೇವಿಗೆ ಕಪಾಲೇಶ್ವರಿಯೆಂದೂ ಹೆಸರಾಯಿತು. ಆ ಸ್ಥಳದ ಉತ್ತರದಿಕ್ಕಿನಲ್ಲಿಯೇ ಶಕ್ತಿಚ್ಛಿದ್ರವೆಂಬ ತೀರ್ಥವಿರುವುದು. ಅದರಲ್ಲಿಯೇ ಸಕಲ ಕಳಂಕಹರೆಯೂ, ಶುಭೆಯೂ ಆದ ಪಾತಾಳಗಂಗೆಯು ಸನ್ನಿಹಿತೆಯಾಗಿರುವಳು. ಅಲ್ಲಿ ಸ್ನಾನಮಾಡಿ ಸ್ಕಂದನು ಸಕಲ ದೇವತೆಗಳಿಂದ ಕೂಡಿ ಕೃಪೆಯಿಂದ ತಾರಕಾಸುರನಿಗೆ ತರ್ಪಣವನ್ನು ಕೊಡಲು ಉದ್ಯುಕ್ತನಾದನು.

೬೨–೬೪. "ಕಶ್ಯಪವಂಶಜನೂ, ವಜ್ರಾಂಗನ ಮಗನೂ, ಮಹಾತ್ಮನೂ, ಈಶ್ವರ ಭಕ್ತನೂ ಆದ ತಾರಕನಿಗೆ ತಿಲಸಹಿತವಾದ ಈ ಉದಕವು ಅಕ್ಷಯ್ಯವಾಗಲಿ" ಎಂದು ಹೇಳಿ ತರ್ಪಣವಿತ್ತನು. ಆಗ ಮಹೇಶ್ವರನು ಸಂತೋಷದಿಂದ ಸ್ಕಂದನು ಕೇಳುತ್ತಿರುವಂತೆಯೇ ಹೇಳತೊಡಗಿದನು :—" ಯಾವ ಮನುಷ್ಯನು ಚೈತ್ರಮಾಸದ ಕೃಷ್ಣಪಕ್ಷದ ಚತುರ್ದಶಿಯ ದಿನ ಇಲ್ಲಿ ಸ್ನಾನಮಾಡಿ ಉಪವಾಸ ವ್ರತದೊಡನೆ ಕಪಾಲೇಶ್ವರನನ್ನೂ, ದೇವಿಯನ್ನೂ ಪೂಜಿಸುವನೊ, ಅವನು ತೇಜೋವಂತರನ್ನು ವಧಿಸಿದ ಮಹಾಪಾತಕದಿಂದ ಮುಕ್ತನಾಗುವನು.

೬೫. ಈ ತಿಥಿಯಲ್ಲಿಯೇ ಚಂದ್ರದರ್ಶನವೂ, ಶಿವಯೋಗವೂ, ತೈತಿಲ ಕರಣವೂ ಸಂಭವಿಸಿದರೆ ಆ ಸಮಯಕ್ಕೆ ಷಡ್ಯೋಗವೆಂದು ಹೆಸರು. ಅಂದಿನ ದಿನ ಶಕ್ತಿಚ್ಛಿದ್ರದಲ್ಲಿ ಹಗಲೆಲ್ಲ ರುದ್ರಾಧ್ಯಾಯವನ್ನು ಪಠಿಸುತ್ತ ರಾತ್ರಿಯಲ್ಲಿ ಸ್ನಾನ ಮಾಡಲು ಮನುಷ್ಯನು ಶರೀರಸಹಿತನಾಗಿಯೇ ರುದ್ರಲೋಕಕ್ಕೆ ತೆರಳುವನು.

**ಕಪಾಲೇಶಸ್ಯ ಸಾನ್ನಿಧ್ಯೇ ಶಕ್ತಿಚ್ಛಿದ್ರಂ ಹಿ ಕೀರ್ತ್ಯತೇ ।**
**ತಸ್ಯ ತುಲ್ಯಂ ಪರಂ ತೀರ್ಥಂ ಪೃಥಿವ್ಯಾಂ ನೈವ ವಿದ್ಯತೇ ॥ ೬೬ ॥**
**ಇತಿ ಶ್ರುತ್ವಾ ರುದ್ರವಾಕ್ಯಂ ಸ್ಕಂದಃ ಪ್ರೀತೋಽಭವದ್ಭೃಶಂ ।**
**ದೇವಾಶ್ಚ ಮುದಿತಾಃ ಸರ್ವೇ ಸಾಧುಸಾಧ್ವಿತಿ ತೇ ಜಗುಃ ॥ ೬೭ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪ್ರಥಮೇ ಮಾಹೇಶ್ವರಖಂಡೇ ಕೌಮಾರಿಕಾಖಂಡೇ "ಕುಮಾರಸ್ಥಾಪಿತ ಪ್ರತಿಜ್ಞೇಶ್ವರ ಶಕ್ತಿಚ್ಛಿದ್ರೇಶ್ವರ ಮಾಹಾತ್ಮ್ಯವರ್ಣನಂ"ನಾಮ ತ್ರಯಸ್ತ್ರಿಂಶೋಽಧ್ಯಾಯಃ**

---

೬೬. ಕಪಾಲೇಶ್ವರನ ಸನ್ನಿಧಿಯಲ್ಲಿರುವ ಪ್ರಸಿದ್ಧವಾದ ಶಕ್ತಿಚ್ಛಿದ್ರವೆಂಬ ತೀರ್ಥಕ್ಕೆ ಸಮನಾದುದು ಭೂಲೋಕದಲ್ಲಿಯೇ ದೊರೆಯಲಾರದು."

೬೭. ಇಂತು ಹೇಳಿದ ಮಹೇಶ್ವರನ ಮಾತುಗಳನ್ನು ಕೇಳಿ ಸ್ಕಂದನು ಅತ್ಯಂತ ಸಂತೋಷಗೊಂಡನು. ಸಕಲ ದೇವತೆಗಳೂ ಪರಮಸಂತೋಷದಿಂದ ಸಾಧುಕಾರಗಳನ್ನು ಮಾಡಿದರು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಎರಡನೆಯ ಕೌಮಾರಿಕಾಖಂಡದಲ್ಲಿ "ಕುಮಾರಸ್ಥಾಪಿತ ಪ್ರತಿಜ್ಞೇಶ್ವರ ಶಕ್ತಿಚ್ಛಿದ್ರೇಶ್ವರ ಮಾಹಾತ್ಮ್ಯವರ್ಣನ"ವೆಂಬ ಮೂವತ್ತಮೂರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಚತುಸ್ತ್ರಿಂಶೋಽಧ್ಯಾಯಃ

### ಕುಮಾರೇಶ ಸ್ಥಾಪನಪೂರ್ವಕ ಶಿವಮಾಹಾತ್ಮ್ಯವರ್ಣನಂ

ನಾರದ ಉವಾಚ :—

**ತತಸ್ತೃತೀಯಲಿಂಗಸ್ಯ ಚಿಕೀರ್ಷುಂ ಸ್ಥಾಪನಂ ಗುಹಂ ।**
**ಬ್ರಹ್ಮಾ ಪ್ರಾಹಾಸ್ಯ ಪ್ರೀತ್ಯರ್ಥಂ ಸ್ವಯಮನ್ಯಂ ಪ್ರಕುರ್ಮಹೇ ॥ ೧ ॥**
**ಯದ್ಯಪ್ಯೇತಚ್ಛುಭಂ ಲಿಂಗಂ ಸರ್ವದೋಷವಿವರ್ಜಿತಂ ।**
**ತಥಾಪ್ಯನ್ಯತ್ಕರಿಷ್ಯೇಽಹಂ ಸರ್ವಶ್ರೇಷ್ಠತಮಂ ಹಿ ಯತ್ ॥ ೨ ॥**
**ತತೋ ಬ್ರಹ್ಮಾ ಸರ್ವದೋಷವಿಮುಕ್ತಂ ನಿರ್ಮಮೇ ಸ್ವಯಂ ।**
**ದೃಷ್ಟಿಕಾಂತಂ ಮನಃಕಾಂತಂ ಫಲಕಾಂತಂ ಸುಲಿಂಗಕಂ ॥ ೩ ॥**
**ತತ್ರ ಸ್ಕಂದಸ್ಯ ಪ್ರೀತ್ಯರ್ಥಂ ಸರ್ವದೇವೈರ್ವಿನಿರ್ಮಿತಂ ।**
**ಸುರಃ ಸುರಮ್ಯಂ ತೀರ್ಥಾನಿ ತತ್ರತೇ ನಿದಧುಸ್ತಥಾ ॥ ೪ ॥**
**ಗಂಗಾದಿಕಾನಿ ತೀರ್ಥಾನಿ ಯಾನಿ ಪ್ರೋಚುರ್ದಿವೌಕಸಃ ।**
**ಇದಂ ಯಾವತ್ಸರಸ್ತಾವತ್ಸರ್ವೈರತ್ರ ಸಮುಷ್ಯತಾಂ ॥ ೫ ॥**

---

### ಕನ್ನಡದ ಅನುವಾದ

#### ಕುಮಾರೇಶ ಸ್ಥಾಪನಪೂರ್ವಕ ಶಿವಮಾಹಾತ್ಮ್ಯವರ್ಣನ

೧. ನಾರದನು ಹೇಳುತ್ತಾನೆ:— ಬಳಿಕ ಗುಹನು ಮೂರನೆಯ ಲಿಂಗವನ್ನು ಸ್ಥಾಪಿಸುವ ಪ್ರಯತ್ನವನ್ನು ಮಾಡುತ್ತಿರಲು, ಆತನಿಗೆ ಪ್ರಿಯವನ್ನುಂಟು ಮಾಡಲು ಬ್ರಹ್ಮನು ಹೀಗೆ ಹೇಳತೊಡಗಿದನು :—" ಎಲೈ ಗುಹನೆ ! ಈ ಮೂರನೆಯ ಲಿಂಗವನ್ನು ನಾವೇ ಪ್ರತಿಷ್ಠಿಸುತ್ತೇವೆ.

೨–೩. ನೀನು ಪ್ರತಿಷ್ಠಿಸಿದ ಲಿಂಗವು ಶುಭಪ್ರದವೂ, ಸರ್ವದೋಷ ರಹಿತವೂ ಆಗಿರುವುದಾದರೂ, ಉತ್ತಮೋತ್ತಮವಾದ ಮತ್ತೊಂದು ಲಿಂಗವನ್ನು ಸ್ಥಾಪಿಸುವೆನು." ಆ ಬಳಿಕ ಬ್ರಹ್ಮನು ಸಮುಸ್ತದೋಷವರ್ಜಿತವೂ, ನಯನ ಮನೋಹರವೂ ಉತ್ತಮಫಲಪ್ರದವೂ ಆದ ಮೂರನೆಯ ಲಿಂಗವನ್ನು ತಾನೇ ಸ್ಥಾಪನೆ ಮಾಡಿದನು.

೪–೫. ಆ ಸಮಯದಲ್ಲಿ ಷಣ್ಮುಖಸ್ವಾಮಿಯ ಪ್ರೀತ್ಯರ್ಥವಾಗಿ ಸಕಲ ದೇವತೆಗಳೂ ಅತ್ಯಂತ ರಮ್ಯವಾದ ಸರೋವರವೊಂದನ್ನು ನಿರ್ಮಿಸಿ ಅದರಲ್ಲಿ ಸಕಲ ತೀರ್ಥಗಳನ್ನೂ ನೆಲೆಗೊಳಿಸಿದರು. ಗಂಗಾದಿ ಸಕಲ ತೀರ್ಥಗಳನ್ನೂ ಅದರಲ್ಲಿ ಆವಾಹನಮಾಡಿ "ಈ ಸರೋವರವು ಇಲ್ಲಿರುವವರೆಗೂ ನೀವೆಲ್ಲರೂ ಇಲ್ಲಿ ಸನ್ನಿಹಿತರಾಗಿರಬೇಕು" ಎಂದು ಹೇಳಿದರು.

ಏವಮಸ್ತ್ವಿತಿ ತಾನ್ಯೂಚುಃ ಪ್ರೀತ್ಯರ್ಥಂ ಶರಜನ್ಮನಃ ।
ತತೋ ಬ್ರಹ್ಮಾ ಸ್ವಯಂ ತತ್ರ ರೌದ್ರೈರ್ಮಂತ್ರೈರ್ಹುತಾಶನಂ ।
ಗಾಧಿಪುತ್ರಾದಿಭಿರ್ವಿಪ್ರೈಸ್ತರ್ಪಯಾಮಾಸ ಸಂಯುತಃ ॥ ೬ ॥
ತತೋ ವೈಶಾಖಮಾಸಸ್ಯ ಚತುರ್ದಶ್ಯಾಂ ಶುಭೇ ದಿನೇ ।
ಪ್ರತಿಷ್ಠಾಂ ಚಕ್ರಿರೇ ಲಿಂಗೇ ಚಿರಂ ವಿಪ್ರಮುಖಾ ದ್ವಿಜಾಃ ॥ ೭ ॥
ಜಗುರ್ಗಂಧರ್ವಪತಯೋ ನನೃತುಶ್ಚಾಪ್ಸರೋಗಣಾಃ ।
ತತಃ ಸ್ಕಂದಃ ಪ್ರೀತಿಯುಕ್ತಃ ಸ್ನಾತ್ವಾ ಸರಸಿ ಶೋಭನೇ ॥ ೮ ॥
ಸರ್ವತೀರ್ಥೋದಕೈಃ ಸ್ನಾಪ್ಯ ತಲ್ಲಿಂಗಂ ಭಕ್ತಿಸಂಯುತಃ ।
ವಿವಿಧೈಃ ಪೂಜಯಾಮಾಸ ಪುಷ್ಪೈರ್ಮಂತ್ರೈಶ್ಚ ಪಂಚಭಿಃ ॥ ೯ ॥
ಪೂಜಾಕಾಲೇ ಸ್ವಯಂ ತತ್ರ ಲಿಂಗಮಧ್ಯೇ ಸ್ಥಿತೋ ಹರಃ ।
ಜಂಗಮಾ ಜಂಗಮೈಃ ಸಾರ್ಧಂ ಸ್ವಯಂ ಜಗ್ರಾಹ ಪೂಜನಂ ॥ ೧೦ ॥
ತತಸ್ತಂ ಪೂಜಯನ್ಪ್ರಾಹ ಸ್ಕಂದೋ ಭಕ್ತಿಪರಿಪ್ಲುತಃ ।
ಕೇನ ಕೇನೋಪಹಾರೇಣ ತ್ವಯಿದತ್ತೇನ ಕಿಂ ಫಲಂ ॥ ೧೧ ॥

---

೬-೭. ಹಾಗೆಯೇ ಆಗಲೆಂದು ಆ ತೀರ್ಥಗಳು ನುಡಿದು ಷಣ್ಮುಖನಿಗೆ ಸಂತೋಷವನ್ನುಂಟುಮಾಡಿದುವು. ಬಳಿಕ ಬ್ರಹ್ಮನು ತಾನೇ ರುದ್ರಾಧ್ಯಾಯದ ಮಂತ್ರಗಳಿಂದ ವಿಶ್ವಾಮಿತ್ರಾದಿ ಬ್ರಾಹ್ಮಣರ ಮೂಲಕ ಅಗ್ನಿಯಲ್ಲಿ ಹೋಮವನ್ನು ಮಾಡಿಸಿದನು. ಇಂತು ಬ್ರಾಹ್ಮಣರೆಲ್ಲರೂ ಒಟ್ಟುಗೂಡಿ ವೈಶಾಖಮಾಸದ ಶುಕ್ಲಪಕ್ಷದ ಚತುರ್ದಶಿಯ ದಿನ ಶುಭಲಗ್ನದಲ್ಲಿ ಶಿವಲಿಂಗದ ಪ್ರತಿಷ್ಠೆಯನ್ನು ಮಾಡಿದರು.

೮-೯. ಗಂಧರ್ವಶ್ರೇಷ್ಠರೆಲ್ಲರೂ ಗಾಯನಗಳನ್ನು ಮಾಡಿದರು. ಅಪ್ಸರಸ್ತ್ರೀಯರು ನಾಟ್ಯವನ್ನು ನಡಿಸಿದರು. ಆಗ ಷಣ್ಮುಖನು ಸಂತೋಷದಿಂದ ಶುದ್ಧವಾದ ಸರೋವರದಲ್ಲಿ ಸ್ನಾನಮಾಡಿ ಪರಮಭಕ್ತಿಯಿಂದ ಆ ಶಿವಲಿಂಗಕ್ಕೆ ಸಕಲತೀರ್ಥೋದಕಗಳಿಂದಲೂ ಅಭಿಷೇಕವನ್ನು ಮಾಡಿ ವಿಧವಿಧಗಳಾದ ಪುಷ್ಪಗಳಿಂದಲೂ ಸದ್ಯೋಜಾತಾದಿ ಪಂಚಮಹಾಮಂತ್ರಗಳಿಂದಲೂ ವಿಧ್ಯುಕ್ತರೀತಿಯಿಂದ ಪೂಜೆಮಾಡಿದನು.

೧೦-೧೧. ಆ ಪೂಜೆಯ ಕಾಲದಲ್ಲಿ ಸದಾಶಿವನು ತಾನೇ ಲಿಂಗದಲ್ಲಿ ಸನ್ನಿಹಿತನಾಗಿ ಸ್ಥಾವರ ಜಂಗಮ ಪ್ರಾಣಿಗಳೊಡನೆ ಸ್ಕಂದನ ಪೂಜೆಯನ್ನು ಸ್ವೀಕರಿಸಿದನು. ಇಂತು ಪೂಜೆಯನ್ನು ಮಾಡಿ ಭಕ್ತಿಭರಿತಮಾನಸನಾಗಿ ಸ್ಕಂದನು ಮಹೇಶ್ವರನನ್ನು ಕುರಿತು "ಎಲೈ ಮಹಾದೇವನೇ! ಯಾವಯಾವ ಸೇವೆಯನ್ನು ಮಾಡುವುದರಿಂದ ಯಾವಯಾವ ಫಲ ಲಭಿಸುತ್ತವೆ?" ಎಂದು ಪ್ರಶ್ನೆಮಾಡಿದನು.

ಶ್ರೀ ಮಹಾದೇವ ಉವಾಚ:—

ಮಮ ಯಃ ಸ್ಥಾಪಯೇಲ್ಲಿಂಗಂ ಶುಭಂ ಸದ್ಮ ಚ ಕಾರಯೇತ್ ।
ಮಲ್ಲೋಕೇ ವಸತೇಽಸೌ ಚ ಯಾವಚ್ಚಂದ್ರದಿವಾಕರೌ ॥ ೧೨ ॥
ಮಮ ಸದ್ಮ ಸುಧಾಶುಭ್ರಂ ಯಾವತ್ಸಂಖ್ಯಂ ಕರೋತಿ ಯಃ ।
ತಾವಂತ್ಯೇವ ಚ ಜನ್ಮಾನಿ ಯಶಸಾಽಸೌ ವಿರಾಜತೇ ॥ ೧೩ ॥
ಧ್ವಜಭೂತೋ ಧ್ವಜಂ ದತ್ವಾ ವಿಪಾಪಃ ಸ್ಯಾತ್ಪತಾಕಯಾ ।
ವಿಧಾಯ ಚಿತ್ರವಿನ್ಯಾಸಂ ಗಂಧರ್ವೈಃ ಸಹಮೋದತೇ ॥ ೧೪ ॥
ರಜಃಸಂಶೋಧನಂ ಕೃತ್ವಾ ನರೋ ರೋಗೈಃ ಪ್ರಮುಚ್ಯತೇ ।
ಪ್ರಾಪ್ನೋತಿ ದೇಹಂ ಹಾರ್ದಂಚ ಸುರಸದ್ಮಾನುಲೇಪನಾತ್ ॥ ೧೫ ॥
ಪುಷ್ಪಕ್ಷೀರಾದಿಭಿರ್ದತ್ತ್ವೈಸ್ತಿಲಾಂಭೋಽಕ್ಷತದರ್ಭಕೈಃ ।
ಶಂಭೋಃ ಶಿರಸಿ ದತ್ವಾರ್ಘ್ಯಂ ದಿವಿ ವರ್ಷಾಯುತಂ ವಸೇತ್ ॥ ೧೬ ॥
ಘೃತೇನ ಹತಪಾಪಃ ಸ್ಯಾನ್ಮಧುನಾ ಸುಭಗೋ ಭವೇತ್ ।
ವಿರೋಗೋ ದಧಿದುಗ್ಧಾಭ್ಯಾಂ ಲಿಂಗಂ ಸಂಸ್ನಾಪ್ಯ ಜಾಯತೇ ॥ ೧೭ ॥

---

೧೨-೧೩. ಮಹಾದೇವನು ಹೇಳುತ್ತಾನೆ:—"ಯಾರು ನನ್ನ ರೂಪವಾದ ಲಿಂಗವನ್ನು ಪ್ರತಿಷ್ಠೆ ಮಾಡುವರೊ, ಯಾರು ಶುಭವಾದ ಆಲಯವನ್ನು ಕಟ್ಟಿಸುವರೊ, ಅವರು ಸೂರ್ಯಚಂದ್ರರಿರುವವರೆಗೂ ನನ್ನ ಲೋಕದಲ್ಲಿ ವಾಸ ಮಾಡುವರು. ಶಿವಾಲಯವನ್ನು ಸುಣ್ಣಬಣ್ಣಗಳಿಂದ ಎಷ್ಟುಸಲ ಶುಭ್ರಗೊಳಿಸುವನೊ, ಮನುಷ್ಯನು ಆ ಸಂಖ್ಯೆಯ ಜನ್ಮಗಳಲ್ಲಿ ಯಶಃಕೀರ್ತಿಗಳಿಂದೊಡಗೂಡಿ ಸುಖಪಡುವನು.

೧೪. ನನ್ನ ಉತ್ಸವಾದಿಗಳಿಗೆ ಧ್ವಜವನ್ನು ಕೊಟ್ಟವನು ಜನರಲ್ಲೆಲ್ಲ ಧ್ವಜದಂತೆ ಚಿಹ್ನಪ್ರಾಯನಾಗುವನು. ಪತಾಕಾದಿಗಳನ್ನೊಪ್ಪಿಸುವುದರಿಂದ ಪಾಪರಹಿತನಾಗುವನು. ರಂಗವಲ್ಯಾದಿಗಳಿಂದ ಮಂದಿರವನ್ನು ಅಲಂಕರಿಸುವವನು ಗಂಧರ್ವಲೋಕದಲ್ಲಿ ಸಂತೋಷಗೊಳ್ಳುವನು.

೧೫. ಮಂದಿರದಲ್ಲೂ ಸುತ್ತಲೂ ಧೂಳನ್ನು ಗುಡಿಸಲು, ಮನುಷ್ಯನ ಸಕಲ ರೋಗಗಳೂ ನಿವಾರಣೆಯಾಗುವುವು. ದೇವಾಲಯದ ಅನುಲೇಪನದಿಂದ ಮನೋಹರವಾದ ದೇಹವನ್ನು ಪಡೆಯುವನು.

೧೬. ಪುಷ್ಪಗಳನ್ನೂ, ಕ್ಷೀರವನ್ನೂ ನಿವೇದಿಸಿದವರೂ, ಲಿಂಗದ ತಲೆಯ ಮೇಲೆ ತಿಲೋದಕ, ಅಕ್ಷತೆ, ದರ್ಭೆಗಳಿಂದೊಡಗೂಡಿದ ಅರ್ಘ್ಯವನ್ನು ಕೊಟ್ಟವರೂ, ಹತ್ತುಸಾವಿರ ವರ್ಷಗಳ ಸ್ವರ್ಗಲೋಕವಾಸವನ್ನು ಅನುಭವಿಸುವರು.

೧೭. ಘೃತಸ್ನಾನದಿಂದ ಪಾಪನಾಶನವೂ, ಮಧುವಿನಿಂದ ಸೌಭಾಗ್ಯವೂ, ದಧಿಕ್ಷೀರಗಳಿಂದ ನೀರುಜವಾದ ದೇಹವೂ ಉಂಟಾಗುವುವು.

ಪಾನೀಯು ದಧಿದುಗ್ಧಾದ್ಯೈಃ ಕ್ರಮಾದ್ದಶಗುಣಂ ಫಲಂ ।
ಮಾಸಂ ಸಂಸ್ನಾಪ್ಯ ವೈ ಭಕ್ತ್ಯಾ ಪಿಷ್ಟಾದ್ಯೈಶ್ಚ ವಿರೂಕ್ಷಯೇತ್ ॥ ೧೮ ॥
ಕಪಿಲಾ ಪಂಚಗವ್ಯೇನ ಸುರಸಿಂಧುಜಲೇನ ವಾ ।
ಮಾಂ ಚ ಸಂಸ್ನಾಪ್ಯ ಚಾಭ್ಯರ್ಚ್ಯ ಮಲ್ಲೋಕಮಧಿಗಚ್ಛತಿ ॥ ೧೯ ॥
ಕುಶೋದಕಾದ್ಗಂಧಜಲಂ ತಸ್ಮಾತ್ತೀರ್ಥೋದಕಂ ವರಂ ।
ತೀರ್ಥೇಭ್ಯಶ್ಚ ಜಲಂ ದರ್ಶೇ ಮಹೀಸಾಗರಸಂಭವಂ ॥ ೨೦ ॥
ಕಪಿಲಾಂ ದತ್ವಾ ಯದಾಪ್ನೋತಿ ತತ್ಫಲಂ ಕಲಶೇ ಪೃಥಕ್ ।
ಮೃತ್ತಾಮ್ರರೌಪ್ಯಸೌವರ್ಣೈಃ ಕ್ರಮಾಚ್ಛತಗುಣಂ ಫಲಂ ॥ ೨೧ ॥
ಶ್ರೀಖಂಡಾಗರು ಕಾಶ್ಮೀರ ಶಶಿನಃ ಕ್ರಮಶೋಽಧಿಕಾಃ ।
ಮಾಂ ಚ ತೈಶ್ಚ ಸಮಾಲಭ್ಯ ಸ್ಯಾಚ್ಛ್ರೀಮಾನ್ಸುಭಗಃ ಸುಖೀ ॥ ೨೨ ॥
ಪ್ರಶಸ್ತೋ ಗುಗ್ಗುಲೋ ಧೂಪಸ್ತಸ್ಮಾಚ್ಚಂದ್ರೋಽಗರುರ್ವರಃ ।
ಧೂಪಾನೇತಾನ್ನರೋ ದತ್ವಾ ಸುಖಂ ಸ್ವರ್ಗಮವಾಪ್ನುಯಾತ್ ॥ ೨೩ ॥

---

೧೮-೧೯. ನೀರು, ಮೊಸರು, ಹಾಲು ಮುಂತಾದುವುಗಳ ಸ್ನಾನದಿಂದ ಕ್ರಮಶಃ ದಶಗುಣಿತವಾದ ಫಲವೊದಗುವುದು. ಇಂತು ಒಂದು ತಿಂಗಳು ಭಕ್ತಿಯುಕ್ತನಾಗಿ ಸ್ನಾನಮಾಡಿಸಿ ಪಿಷ್ಟಾದಿ ಪದಾರ್ಥಗಳಿಂದ ಲಿಂಗವನ್ನು ಅವಲೇಪಿಸಬೇಕು. ಕರಿಯ ಆಕಳಿನ ಪಂಚಗವ್ಯದಿಂದಲಾಗಲಿ, ಗಂಗೆಯ ಪವಿತ್ರೋದಕದಿಂದಾಗಲಿ ನನಗೆ ಅಭಿಷೇಕವನ್ನು ಮಾಡಿಸಿ ಪೂಜಿಸಲು ನನ್ನ ಲೋಕವನ್ನು ಹೊಂದುವರು.

೨೦. ಕುಶೋದಕಕ್ಕಿಂತ ಗಂಧೋದಕವೂ, ಗಂಧೋದಕಕ್ಕಿಂತ ತೀರ್ಥೋದಕವೂ, ಇತರ ತೀರ್ಥಗಳ ಉದಕಗಳಿಗಿಂತ ಅಮಾವಾಸ್ಯೆಯಲ್ಲಿ ಸಂಗ್ರಹಿಸಿದ ಮಹೀಸಾಗರಸಂಗಮದ ತೀರ್ಥೋದಕವೂ ಉತ್ತಮವಾಗಿರುವುವು.

೨೧-೨೨. ಇಂತು ಅಭಿಷೇಕ ಮಾಡುವ ಒಂದೊಂದು ಕಳಶದ ಉದಕದಿಂದಲೂ, ಒಂದು ಕಪಿಲೆಯನ್ನು ಗೋದಾನಮಾಡಿದ ಪುಣ್ಯವುಂಟಾಗುವುದು. ಮಣ್ಣು, ತಾಮ್ರ, ಬೆಳ್ಳಿ, ಚಿನ್ನಗಳ ಕಳಶಗಳಲ್ಲಿ ಒಂದೊಂದಕ್ಕೂ ಶತಗುಣವಾದ ಫಲವಿರುವುದು. ಶ್ರೀಖಂಡ, ಅಗರು, ಕೇಸರಿ, ಪಚ್ಚಕರ್ಪೂರಗಳೆಂಬ ಪರಿಮಳ ದ್ರವ್ಯಗಳು ಒಂದಕ್ಕಿಂತ ಒಂದು ಅಧಿಕ ಫಲದಾಯಕಗಳಾಗಿರುವುವು. ನನ್ನ ಲಿಂಗವನ್ನು ಅವುಗಳಿಂದ ಲೇಪಿಸಲು ಮಾನವನು ಐಶ್ವರ್ಯವಂತನೂ, ಸೌಭಾಗ್ಯಯುಕ್ತನೂ, ಸುಖಿಯೂ ಆಗುವನು.

೨೩. ಗುಗ್ಗುಲದ ಧೂಪವು ಉತ್ತಮವು. ಅದಕ್ಕಿಂತ ಕೆಂಪು ಅಗರು ಧೂಪವು ಶ್ರೇಷ್ಠವು. ಮನುಷ್ಯನು ಈ ಧೂಪಗಳನ್ನು ನಿವೇದಿಸುವುದರಿಂದ ಸುಲಭವಾಗಿಯೇ ಸ್ವರ್ಗಲೋಕವನ್ನು ಹೊಂದುವನು.

ದೀಪದಃ ಕೀರ್ತಿಮಾಪ್ನೋತಿ ಚಕ್ಷುರುತ್ತಮಮೇವ ಚ ।
ನೈವೇದ್ಯಸ್ಯ ಪ್ರದಾನೇನ ನರೋ ಮೃಷ್ಟಾಶನೋ ಭವೇತ್ ॥ ೨೪ ॥
ಪುಷ್ಪೇಣ ಹೇಮಕರ್ಣಸ್ಯ ಪ್ರಬದ್ಧೇನ ದ್ವಿಸಂಗುಣಂ ।
ಫಲಮಾಪ್ನೋತಿ ಪುರುಷಃ ಸತ್ಯಸಂಧಶ್ಚ ಜಾಯತೇ ॥ ೨೫ ॥
ಅಖಂಡೈರ್ಬಿಲ್ವಪತ್ರೈಶ್ಚ ಪುಷ್ಪೈರ್ವಾ ವಿವಿಧೈರಪಿ ।
ಲಿಂಗಂ ಪ್ರಪೂರಣಂ ಕೃತ್ವಾ ಲಕ್ಷಮೇಕಂ ವಸೇದ್ದಿವಿ ॥ ೨೬ ॥
ಯಸ್ತು ಪುಷ್ಪಗೃಹಂ ಕುರ್ಯಾನ್ನರಃ ಶುದ್ಧಾಶಯೋಭವೇತ್ ।
ಪುಷ್ಪಕೇನ ವಿಮಾನೇನ ದಿವಿಸಂ ಕ್ರೀಡತೇ ಚಿರಂ ॥ ೨೭ ॥
ಭೂಷಣಾಂಬರದಾನೇನ ನರೋ ಭವತಿ ಭೋಗಭಾಕ್ ।
ಸಚ್ಚಾಮರಪ್ರದಾನೇನ ಜಾಯತೇ ಪಾರ್ಥಿವೋ ನರಃ ॥ ೨೮ ॥
ರಮ್ಯಂ ವಿತಾನಂ ಯೋ ದದ್ಯಾಚ್ಛತ್ರುಭಿರ್ನಾಭಿಭೂಯತೇ ।
ಗೀತಂ ವಾದ್ಯಂ ಪ್ರನೃತ್ಯಂ ಚ ಕೃತ್ವಾ ಶುದ್ಧೋ ವ್ರಜೇತ್ಸಮಾಂ ॥ ೨೯ ॥

---

೨೪. ದೀಪ ದರ್ಶನದಿಂದ ಕೀರ್ತಿಯನ್ನೂ ಉತ್ತಮವಾದ ಜ್ಞಾನದೃಷ್ಟಿಯನ್ನೂ ಪಡೆಯುವನು. ನೈವೇದ್ಯವನ್ನು ಸಮರ್ಪಿಸುವುದರಿಂದ ಮನುಷ್ಯನಿಗೆ ಯಾವಜ್ಜೀವವೂ ಮೃಷ್ಟಾನ್ನವು ಲಭಿಸುವುದು.

೨೫. ಹೇಮಕರ್ಣದ ಪುಷ್ಪಗಳನ್ನು ಕಟ್ಟಿ ಹಾರವನ್ನು ಹಾಕುವುದರಿಂದ ಸಾಮಾನ್ಯ ಪುಷ್ಪಗಳಸೇವೆಯ ಎರಡರಷ್ಟು ಫಲವನ್ನೂ ಹೊಂದಿ ಸತ್ಯಸಂಧನಾಗಿ ಹುಟ್ಟುವನು.

೨೬. ಅಖಂಡವಾದ (ಮೂರೆಲೆಯ) ಬಿಲ್ವಪತ್ರೆಗಳಿಂದಲೂ, ನಾನಾವಿಧಗಳಾದ ಪುಷ್ಪಗಳಿಂದಲೂ ಲಿಂಗವನ್ನರ್ಚಿಸಿ ಕಾಣದಂತೆ ಮಾಡಿದರೆ ಸ್ವರ್ಗದಲ್ಲಿ ಲಕ್ಷವರ್ಷಗಳ ವಾಸವು ಲಭಿಸುವುದು.

೨೭. ಯಾವನು ಸ್ವಾಮಿಗೆ ಹೂವಿನ ಮಂಟಪದ ಅಲಂಕಾರವನ್ನು ಮಾಡಿಸುವನೊ, ಅವನು ನಿರ್ಮಲಮನಸ್ಕನಾಗಿ ಸ್ವರ್ಗಲೋಕದಲ್ಲಿ ಬಹಳ ಕಾಲ ಪುಷ್ಪಕವಿಮಾನದಲ್ಲಿ ರಮಿಸುವನು.

೨೮. ಭೂಷಣಗಳನ್ನೂ ವಸ್ತ್ರಗಳನ್ನೂ ಒಪ್ಪಿಸಲು ಮನುಷ್ಯನು ಸಮಸ್ತ ಭೋಗಗಳನ್ನೂ ಹೊಂದುವನು. ಉತ್ತಮವಾದ ಚಾಮರವನ್ನು ಅರ್ಪಿಸಿದವನು ಮುಂದಿನ ಜನ್ಮದಲ್ಲಿ ರಾಜನಾಗಿ ಹುಟ್ಟುವನು.

೨೯. ಮನೋಹರವಾದ ಚಪ್ಪರವನ್ನು ಹಾಕಿಸುವವನು ಶತ್ರುಗಳಿಂದ ಪರಾಜಯವನ್ನು ಹೊಂದುವುದಿಲ್ಲ. ಸಂಗೀತವನ್ನೂ, ವಾದ್ಯಗಳನ್ನೂ, ನೃತ್ಯವನ್ನೂ ಸೇವೆಮಾಡಿಸಿದವನಿಗೆ ಚಿತ್ತಶುದ್ಧಿಯುಂಟಾಗಿ ಅವನು ನನ್ನನ್ನೇ ಹೊಂದುತ್ತಾನೆ.

ಶಂಖಘಂಟಾಪ್ರದಾನೇನ ವಿದ್ವಾನ್ ಭವತಿ ಶಬ್ದವಾನ್ ।
ವಿಧಾಯ.ರಥಯಾತ್ರಾಂ ಚ ಚಿರಂ ಶೋಕೈಃ ಪ್ರಮುಚ್ಯತೇ ॥ ೩೦ ॥
ನಮಸ್ಕಾರಂ ಪ್ರಣಾಮಂ ಚ ಕೃತ್ವಾ ಜಾಯೇನ್ಮಹಾಕುಲೇ ।
ವಾಚಯಂಶ್ಚಾಗ್ರತಃ ಶಾಸ್ತ್ರಂ ಮಮ ಜ್ಞಾನೀ ಪ್ರಜಾಯತೇ ॥ ೩೧ ॥
ವಿಮುಚ್ಯತೇ ಮನೋಮೋಹೈರ್ಭಕ್ತ್ಯಾ ಸ್ತುತ್ವಾ ಚ ಮಾಂ ನರಃ ।
ಗೋದಾನಫಲಮಾಪ್ನೋತಿ ನಿರ್ಮಾಲ್ಯ ಸ್ಫೋಟನಾನ್ಮಮ ॥ ೩೨ ॥
ಆರಾರ್ತಿಕಂ ಭ್ರಾಮಯಿತ್ವಾ ಆರ್ತಿಹೀನಃ ಪ್ರಜಾಯತೇ ।
ಕೃತ್ವಾ ಶೀತಲಿಕಾಂ ತಾಪೈರ್ಮುಚ್ಯತೇ ದೋಷಸಂಭವೈಃ ॥ ೩೩ ॥
ನತ್ವಾದತ್ವಾಥ ಶಕ್ತ್ಯಾ ಚ ದಾನಂ ಲಿಂಗಸ್ಯ ಸನ್ನಿಧೌ ।
ಫಲಂ ಶತಗುಣಂ ಪ್ರಾಪ್ಯ ಇಹ ಚಾಮುತ್ರಮೋದತೇ ॥ ೩೪ ॥
ಪ್ರಣಾಮಾತ್ಪಂಚದಶ ಚ ಸ್ನಾನಾದ್ವಿಂಶತಿ ಪೂಜಯಾ ।
ಶತಂ ಯಥಾ ಪ್ರೋಕ್ತವಿಧೇರಪರಾಧಾನಹಂ ಕ್ಷಮೇ ॥ ೩೫ ॥

---

೩೦. ಶಂಖವನ್ನೂ ಘಂಟೆಯನ್ನೂ ಶಿವಸೇವೆಗೆ ಅರ್ಪಿಸುವುದರಿಂದ ಮನುಷ್ಯನು ವಿದ್ವಾಂಸನೂ, ವಾಗ್ಮಿಯೂ ಆಗುವನು. ರಥೋತ್ಸವವನ್ನು ಮಾಡಿಸುವುದರಿಂದ ಬಹುಕಾಲ ತಾಪತ್ರಯರಹಿತನಾಗಿ ಜೀವಿಸುವನು.

೩೧. ನಮಸ್ಕಾರ, ಸಾಷ್ಟಾಂಗಪ್ರಣಾಮಗಳನ್ನು ಮಾಡಲು ಉತ್ತಮ ಕುಲದಲ್ಲಿ ಜನ್ಮವನ್ನೆತ್ತುವನು. ನನ್ನ ಸನ್ನಿಧಾನದಲ್ಲಿ ಶಾಸ್ತ್ರಪಠನ ಮಾಡಲು ಉತ್ತಮ ಜ್ಞಾನಿಯಾಗುವನು.

೩೨. ಭಕ್ತಿಭರಿತನಾಗಿ ನನ್ನನ್ನು ಸ್ತೋತ್ರಮಾಡಲು ಸಂಸಾರರೂಪವಾದ ಮಹಾಮೋಹದಿಂದ ಬಿಡುಗಡೆಯನ್ನು ಹೊಂದುವನು. ನನ್ನ ನಿರ್ಮಾಲ್ಯವನ್ನು ಪ್ರೀತಿಯಿಂದ ಧರಿಸಲು ಗೋವನ್ನು ದಾನಮಾಡಿದ ಫಲವು ಸಿದ್ಧಿಸುವುದು.

೩೩. ನನ್ನ ಮುಂದೆ ಆರತಿಗಳನ್ನು ಬೆಳಗುವುದರಿಂದ ದುಃಖಗಳನ್ನು ದೂರಮಾಡಿಕೊಳ್ಳುವನು. ಚಂದನಾದಿ ಶೀತಲದ್ರವ್ಯಗಳನ್ನು ಲಿಂಗಕ್ಕೆ ಲೇಪಿಸಲು ಕಾಯಿಕ, ವಾಚಕ, ಮಾನಸಿಕಗಳಾದ ದೋಷಗಳಿಂದೊದಗುವ ತಾಪಗಳಿಂದ ಮುಕ್ತನಾಗುವನು.

೩೪. ಶಿವಲಿಂಗದ ಸನ್ನಿಧಿಯಲ್ಲಿ ನಮಸ್ಕರಿಸಿ ಯಥಾಶಕ್ತಿಯಾಗಿ ದಾನಗಳನ್ನು ಮಾಡಲು ಸಾಧಾರಣ ದಾನದ ನೂರರಷ್ಟು ಫಲವನ್ನು ಹೊಂದಿ ಇಹ ಲೋಕದಲ್ಲಿಯೂ, ಪರಲೋಕದಲ್ಲಿಯೂ ಸುಖಪಡುವನು.

೩೫. ಆಗಮೋಕ್ತ ಪ್ರಕಾರದಿಂದ ಪ್ರಣಾಮವನ್ನು ಮಾಡಲು ಹದಿನೈದು ಅಪರಾಧಗಳನ್ನೂ, ಅಭಿಷೇಕದಿಂದ ಇಪ್ಪತ್ತನ್ನೂ, ಪೂಜೆಯಿಂದ ಒಂದು ನೂರನ್ನೂ ನಾನು ಕ್ಷಮಿಸುವೆನು.

ಏತತ್ಸರ್ವಂ ಯಥೋದ್ದಿಷ್ಟಂ ಕುಮಾರಾತ್ರ ಭವಿಷ್ಯತಿ ।
ಯೇ ಮಾಂ ಪ್ರಪೂಜಯಿಷ್ಯಂತಿ ಕುಮಾರೇಶ್ವರಸಂಸ್ಥಿತಂ ॥ ೩೬ ॥
ವಾರಾಣಸ್ಯಾಂ ಯಥಾವತ್ಸ ವಿಶ್ವನಾಥೋಽಸ್ಮಿ ಸಂಸ್ಥಿತಃ ॥ ೩೭ ॥
ಗುಪ್ತಕ್ಷೇತ್ರೇ ತಥಾ ಸ್ಥಾಸ್ಯೇ ಕುಮಾರೇಶ್ವರಮಧ್ಯತಃ ॥ ೩೮ ॥
ಶ್ರುತ್ವೇತಿ ವಚನಂ ರುದ್ರಾದ್ದೇವಾನಾಂ ಶೃಣ್ವತಾಂ ಗುಹಃ ।
ವಿಸ್ಮಿತಃ ಪ್ರಣಿಪತ್ಯೈನಂ ತುಷ್ಟಾವ ಗಿರಿಜಾಪತಿಂ ॥ ೩೯ ॥

ನಮಃ ಶಿವಾಯಾಸ್ತು ನಿರಾಮಯಾಯ
ನಮಃ ಶಿವಾಯಾಸ್ತು ಮನೋಮಯಾಯ ।
ನಮಃ ಶಿವಾಯಾಸ್ತು ಸುರಾರ್ಚಿತಾಯ
ತುಭ್ಯಂ ಸದಾ ಭಕ್ತಕೃಪಾಪರಾಯ ॥ ೪೦ ॥
ನಮೋ ಭವಾಯಾಸ್ತು ಭವೋದ್ಭವಾಯ
ನಮೋಽಸ್ತುತೇ ಧ್ವಸ್ತಮನೋಭವಾಯ ।
ನಮೋಽಸ್ತುತೇ ಗೂಢಮಹಾವ್ರತಾಯ
ನಮೋಽಸ್ತು ಮಾಯಾಗಹನಾಶ್ರಯಾಯ ॥ ೪೧ ॥

---

೩೬. ಎಲೈ ಕುಮಾರಸ್ವಾಮಿಯೆ! ಕುಮಾರೇಶ್ವರನೆಂಬ ಹೆಸರಿನಿಂದ ಇಲ್ಲಿ ಸನ್ನಿಹಿತನಾಗಿರುವ ನನ್ನನ್ನು ಯಾರು ಚೆನ್ನಾಗಿ ಪೂಜಿಸುವರೊ, ಅವರವರ ಇಷ್ಟಾನುಸಾರವಾಗಿ ಈ ಫಲಗಳೆಲ್ಲವೂ ಈ ಮಹಾಕ್ಷೇತ್ರವಾದ ಗುಪ್ತಕ್ಷೇತ್ರದಲ್ಲಿ ಉಂಟಾಗುವುವು.

೩೭–೩೮. ಮುಕ್ತಿಕ್ಷೇತ್ರವಾದ ಕಾಶಿಯಲ್ಲಿ ಹೇಗೆ ನಾನೇ ವಿಶ್ವನಾಥನೆಂಬ ಹೆಸರಿನಿಂದ ಯಥಾವತ್ತಾಗಿ ಪ್ರಸಿದ್ಧನಾಗಿರುವೆನೊ, ಅಂತೆಯೇ ಈ ಗುಪ್ತ ಕ್ಷೇತ್ರದಲ್ಲಿಯೂ ಕುಮಾರೇಶ್ವರ ಲಿಂಗಮಧ್ಯಸ್ಥನಾಗಿ ನೆಲಸಿರುತ್ತೇನೆ.''

೩೯. ದೇವತೆಗಳೆಲ್ಲರೂ ಕೇಳುತ್ತಿರಲು ಇಂತು ನುಡಿದ ಮಹಾದೇವನ ಮಾತುಗಳನ್ನು ಕೇಳಿ ಷಣ್ಮುಖನು ವಿಸ್ಮಯಗೊಂಡು ನಮಸ್ಕರಿಸಿ ಮಹೇಶ್ವರ ನನ್ನು ಈ ರೀತಿ ಸ್ತೋತ್ರಮಾಡಿದನು.

೪೦. ''ಮನೋಮಯನೂ, ದೇವತೆಗಳಿಂದ ಪೂಜೆಯನ್ನು ಕೈಕೊಂಡ ವನೂ, ಯಾವಾಗಲೂ ಭಕ್ತರಲ್ಲಿ ಕೃಪೆಯುಳ್ಳವನೂ ಆದ ಎಲೈ ಶಿವನೇ! ನಿನಗೆ ನಮಸ್ಕಾರವು!!

೪೧. ಭವನೂ, ಭವೋದ್ಭವನೂ, ಮದನಸಂಹಾರಕನೂ, ರಹಸ್ಯವಾದ ಮಹಾವ್ರತವುಳ್ಳವನೂ, ಅತ್ಯಂತ ಗಹನವಾದ ಮಾಯೆಗೆ ಆಸರೆಯಾಗಿರುವ ವನೂ ಆದ ನಿನಗೆ ನಮಸ್ಕಾರವು!

ನಮೋಽಸ್ತು ಶರ್ವಾಯ ನಮಃ ಶಿವಾಯ
ನಮೋಽಸ್ತು ಸಿದ್ಧಾಯ ಪುರಾತನಾಯ ।
ನಮೋಽಸ್ತು ಕಾಲಾಯ ನಮಃ ಕಲಾಯ
ನಮೋಽಸ್ತು ತೇ ಕಾಲಕಲಾತಿಗಾಯ ॥ ೪೨ ॥
ನಮೋ ನಿಸರ್ಗಾತ್ಮಕಭೂತಿಕಾಯ
ನಮೋಽಸ್ತ್ವಮೇಯೋಕ್ಷ ಮಹರ್ಧಿಕಾಯ ।
ನಮಃ ಶರಣ್ಯಾಯ ನಮೋಽಗುಣಾಯ
ನಮೋಽಸ್ತುತೇ ಭೀಮಗುಣಾನುಗಾಯ ॥ ೪೩ ॥
ನಮೋಽಸ್ತು ನಾನಾಭುವನಾದಿಕರ್ತ್ರೇ
ನಮೋಽಸ್ತು ಭಕ್ತಾಭಿಮತಪ್ರದಾತ್ರೇ ।
ನಮೋಽಸ್ತು ಕರ್ಮಪ್ರಸವಾಯ ಧಾತ್ರೇ
ನಮಃ ಸದಾ ತೇ ಭಗವನ್ಸುಕರ್ತ್ರೇ ॥ ೪೪ ॥
ಅನಂತರೂಪಾಯ ಸದೈವ ತುಭ್ಯ
ಮಸಹ್ಯಕೋಪಾಯ ಸದೈವ ತುಭ್ಯಂ ।
ಅಮೇಯಮಾನಾಯ ನಮೋಽಸ್ತು ತುಭ್ಯಂ
ವೃಷೇಂದ್ರಯಾನಾಯ ನಮೋಽಸ್ತು ತುಭ್ಯಂ ॥ ೪೫ ॥
ನಮಃ ಪ್ರಸಿದ್ಧಾಯ ಮಹೌಷಧಾಯ
ನಮೋಽಸ್ತುತೇ ವ್ಯಾಧಿಗಣಾಪಹಾಯ ।
ಚರಾಚರಾಯಾಥ ವಿಚಾರದಾಯ
ಕುಮಾರನಾಥಾಯ ನಮಃ ಶಿವಾಯ ॥ ೪೬ ॥

---

೪೨. ಶರ್ವನೂ, ಶಿವನೂ, ಸಿದ್ಧನೂ, ಪುರಾತನನೂ, ಕಾಲನೂ, ಕಲನೂ, ಕಾಲ ಕಲೆಗಳನ್ನು ಮೀರಿದವನೂ ಆದ ಓ ಸ್ವಾಮಿಯೆ! ನಿನಗೆ ನಮೋನಮಃ!!

೪೩–೪೬. ಸಹಜವಾದ ನಿಜೈಶ್ವರ್ಯವುಳ್ಳವನೂ, ಊಹೆಗೆ ನಿಲುಕದ ಮಾಹಾತ್ಮ್ಯವುಳ್ಳ ವೃಷಭವೇ ವಾಹನವುಳ್ಳವನೂ, ಮಹಾ ಬುದ್ಧಿಭರಿತನೂ, ಶರಣ್ಯನೂ, ಗುಣರಹಿತನೂ ಆದ ನಿನಗೆ ನಮಸ್ಕಾರವು. ವಿವಿಧ ಪ್ರಪಂಚಗಳ ನಿರ್ಮಾಣಕರ್ತನಾಗಿ, ಸಮಸ್ತ ಭಕ್ತಜನರ ಅಭೀಷ್ಟವನ್ನು ಸಲ್ಲಿಸುವವನಾಗಿ, ಕರ್ಮವನ್ನು ಸೃಷ್ಟಿಸುವ ಧಾತೃವಾಗಿ, ಸುಕರ್ತೃವೆನಿಸಿರುವ ಎಲೈ ಭಗವಂತ! ನಿನಗೆ ನಮೋ ನಮಃ!! ನಿರಂತರವೂ ಅನಂತರೂಪನಾಗಿ, ಸಹಿಸಲಸದಳವಾದ ಕೋಪವುಳ್ಳವನಾಗಿ, ಅಳೆಯಲಸದಳವಾದ ಮಾಯವುಳ್ಳವನಾಗಿ, ವೃಷಭಧ್ವಜ ನಾಗಿರುವ ನಿನಗೆ ನಮಸ್ಕಾರವು. ಭವರೋಗಕ್ಕೆ ಪ್ರಸಿದ್ಧವಾದ ಔಷಧ ಸ್ವರೂಪನೂ, ವ್ಯಾಧಿಸಮೂಹವನ್ನು ನಿವಾರಿಸುವವನೂ, ಚರಾಚರ ಪ್ರಪಂಚ

ಮಮೇಶ ಭೂತೇಶ ಮಹೇಶ್ವರೋಽಸಿ
ಕಾಮೇಶ ವಾಗೀಶ ಬಲೇಶ ಧೀಶ ।
ಕ್ರೋಧೇಶ ಮೋಹೇಶ ಪರಾಪರೇಶ
ನಮೋಽಸ್ತು ಮೋಕ್ಷೇಶ ಗುಹಾಶಯೇಶ ॥ ೪೭ ॥

ಇತಿ ಸಂಸ್ತೂಯ ವರದಂ ಶೂಲಪಾಣಿಮುಮಾಪತಿಂ ।
ಪ್ರಣಿಪತ್ಯ ಉಮಾಪುತ್ರೋ ನಮೋನಮ ಉವಾಚಹ ॥ ೪೮ ॥
ಏವಂ ಭಕ್ತಿಪರಾಕ್ರಾಂತಮಾತ್ಮಯೋಗ್ಯಂ ಸ್ತವಂ ಶಿವಃ ।
ಅಭಿನನ್ದ್ಯ ಚಿರಂ ಕಾಲಮಿದಂ ವಚನಮಬ್ರವೀತ್ ॥ ೪೯ ॥
ತ್ವಯಾ ದುಃಖಂ ನ ಸಂಚಿಂತ್ಯಂ ಮಮಭಕ್ತವಧಾತ್ಮಕಂ ।
ಕರ್ಮಣಾನೇನ ಶ್ಲಾಘ್ಯೋಽಸಿ ಮುನೀನಾಮಪಿ ಪುತ್ರಕ ॥ ೫೦ ॥
ಯೇ ಚ ಸಾಯಂ ತಥಾ ಪ್ರಾತಸ್ತ್ವತ್ಕೃತೇನ ಸ್ತವೇನ ಮಾಂ ।
ಸ್ತೋಷ್ಯಂತಿ ಪರಯಾ ಭಕ್ತ್ಯಾ ಶ್ರುಣು ತೇಷಾಂ ಚ ಯತ್ಫಲಂ ॥ ೫೧ ॥

---

ಸ್ವರೂಪನೂ, ವಿಚಾರ(ವಿವೇಕ) ಜ್ಞಾನವನ್ನು ದಯೆಗೈಯುವವನೂ, ಕುಮಾರ ನಾಥನೂ ಆದ ನಿನಗೆ ನಮಸ್ಕಾರವು.

೪೭. ನನ್ನ ಸ್ವಾಮಿಯೇ! ಸಮಸ್ತ ಭೂತಾಧಿಪತಿಯೇ, ನೀನೇ ಮಹೇಶ್ವರ ನಾಗಿರುವೆ! ಕಾಮೇಶನೂ, ವಾಗೀಶ್ವರನೂ, ಬಲೇಶನೂ, ಬುದ್ಧಿಗೊಡೆಯನೂ, ಕ್ರೋಧ ಮೋಹಗಳಿಗೆ ಸ್ವಾಮಿಯಾಗಿ ಪರಾಪರೇಶನೂ, ಮೋಕ್ಷಕ್ಕೆ ಒಡೆಯನೂ, ಸರ್ವಭೂತಾಂತರ್ಯಾಮಿಯಾಗಿ ಗುಹಾಶಯೇಶನೆನಿಸಿದವನೂ ನೀನೆ! ನಿನಗೆ ನಮೋ ನಮಃ!!"

೪೮. ಇಂತು ವರಪ್ರದನೂ, ತ್ರಿಶೂಲಪಾಣಿಯೂ ಆದ ಪಾರ್ವತೀ ರಮಣನನ್ನು ಸ್ತುತಿಸಿ ಕುಮಾರಸ್ವಾಮಿಯು ದಂಡಪ್ರಣಾಮವನ್ನು ಮಾಡಿ ನಮಸ್ಕಾರಗಳನ್ನು ಹೇಳಿದನು.

೪೯. ಇಂತು ಭಕ್ತಿಯುಕ್ತವಾದುದೂ, ತನಗೆ ಯೋಗ್ಯವಾದುದೂ ಎನಿಸಿದ ಈ ಸ್ತೋತ್ರವನ್ನು ಬಹಳಕಾಲ ಶ್ಲಾಘಿಸಿ ಸದಾಶಿವನು ಮತ್ತೆ ಹೇಳತೊಡಗಿದನು.

೫೦. "ಎಲೈ ಪುತ್ರನೆ! ನನ್ನ ಭಕ್ತನನ್ನು ವಧೆಮಾಡಿದೆನೆಂಬ ಚಿಂತೆಯು ನಿನಗೆ ಸ್ವಲ್ಪವಾದರೂ ಇಲ್ಲದಿರಲಿ. ಈ ದುಷ್ಟನಿಗ್ರಹ ಕಾರ್ಯದಿಂದ ಸಕಲ ಮಹರ್ಷಿಗಳಿಗೂ ನೀನು ಸ್ತೋತ್ರಾರ್ಹನಾಗಿರುವೆ.

೫೧. ಯಾರು ಅತ್ಯಂತ ಭಕ್ತಿಸಮನ್ವಿತರಾಗಿ ಪ್ರತಿ ನಿತ್ಯವೂ ಪ್ರಾತಃಕಾಲ, ಸಾಯಂಸಮಯಗಳಲ್ಲಿ ನೀನು ಮಾಡಿರುವ ಈ ಸ್ತೋತ್ರದಿಂದ ನನ್ನನ್ನು ಹೊಗಳುವರೊ, ಅವರಿಗುಂಟಾಗುವ ಫಲವನ್ನು ಕೇಳು.

ನ ವ್ಯಾಧಿರ್ನ ಚ ದಾರಿದ್ರ್ಯಂ ನ ಚೈವೇಷ್ಟವಿಯೋಜನಂ ।
ಭುಕ್ತ್ವಾ ಭೋಗಾನ್ಸುದುರ್ಲಭಾಂಶ್ಚ ಮಮ ಯಾಸ್ಯಂತಿ ಸದ್ಮತೇ ॥ ೫೨ ॥
ತಥಾನ್ಯಾನಪಿ ದಾಸ್ಯಾಮಿ ವರಾನ್ಪರಮದುರ್ಲಭಾನ್ ।
ಭಕ್ತ್ಯಾ ತವಾತಿತುಷ್ಟೋಽಹಂ ಪ್ರೀತ್ಯರ್ಥಂ ತವ ಪುತ್ರಕ ॥ ೫೩ ॥
ಮಹೀಸಾಗರಕೂಲೇತು ಯೇ ಮಾಂ ಸ್ತೋಷ್ಯಂತಿ ಪೂಜಯಾ ।
ತೇಷಾಂ ತದಕ್ಷಯಂ ಸರ್ವಂ ವೈಶಾಖ್ಯಾಂ ದಾನಪೂಜನಂ ॥ ೫೪ ॥
ಸರಸ್ಯತ್ರ ಚ ಯೇ ಸ್ನಾನಂ ಪ್ರಕರಿಷ್ಯಂತಿ ಮಾನವಾಃ ।
ಸರ್ವತೀರ್ಥಫಲಾವಾಪ್ತಿರ್ವೈಶಾಖ್ಯಾಂ ಪ್ರಭವಿಷ್ಯತಿ ॥ ೫೫ ॥
ಕುಮಾರೇಶಂ ತು ಮಾಂ ಭಕ್ತ್ಯಾ ಮಹೀಸಾಗರಸಂಗಮೇ ।
ಸ್ನಾತ್ವಾ ಸಂಪೂಜಯೇನ್ನಿತ್ಯಂ ತಸ್ಯ ಜಾತಿಸ್ಮೃತಿರ್ಭವೇತ್ ॥ ೫೬ ॥
ಜಾತಿಸ್ಮೃತಿರಿಯಂ ಪುತ್ರ ಯಸ್ಯಾಂ ಜಾತೌ ಪ್ರಜಾಯತೇ ।
ಸ್ಮರತೇಽಸ್ಯಾಃ ಪ್ರಕರ್ತವ್ಯಂ ಶ್ರೇಯೋರೂಪಂ ಸುದುರ್ಲಭಂ ॥ ೫೭ ॥

---

೫೨. ಅವರಿಗೆ ವ್ಯಾಧಿಗಳಾಗಲಿ, ದಾರಿದ್ರ್ಯದುಃಖವಾಗಲಿ, ಅಷ್ಟೇಷ್ಟರ ವಿಯೋಗವಾಗಲಿ ಸಂಭವಿಸುವುದಿಲ್ಲ. ಇಹಲೋಕದಲ್ಲಿ ದುರ್ಲಭಗಳಾದ ಭೋಗಗಳೆಲ್ಲವನ್ನೂ ಪಡೆದು ಕೊನೆಗೆ ನನ್ನ ಲೋಕವನ್ನು ಅವರು ಸೇರುವರು.

೫೩. ಎಲೈ ಕುಮಾರಸ್ವಾಮಿಯೆ! ನಿನ್ನಲ್ಲಿ ನಾನು ಅತ್ಯಂತ ಸಂತೋಷಗೊಂಡಿರುವುದರಿಂದ ನಿನ್ನ ಪ್ರೀತ್ಯರ್ಥವಾಗಿ ಪರಮ ದುರ್ಲಭಗಳಾದ ಇತರ ವರಗಳನ್ನೂ ಕೊಡುವೆನು; ಕೇಳು.

೫೪. ಈ ಮಹೀಸಾಗರ ಕ್ಷೇತ್ರದಲ್ಲಿ ವೈಶಾಖ ಮಾಸದ ಪೌರ್ಣಮಿಯ ದಿನ ಯಾರು ನನ್ನನ್ನು ಪೂಜಿಸಿ ಸ್ತೋತ್ರಮಾಡುವರೊ ಅವರ ಕರ್ಮವು ಅಕ್ಷಯ ಫಲದಾಯಕವಾಗುವುದು.

೫೫. ಆ ದಿನದಲ್ಲಿ ಯಾವ ಮಾನವರು ಈ ಸರೋವರದಲ್ಲಿ ಸ್ನಾನವನ್ನು ಮಾಡುವರೊ, ಅವರಿಗೆ ಭೂಮಂಡಲದ ಸಕಲ ತೀರ್ಥಗಳಲ್ಲಿ ಸ್ನಾನಮಾಡಿದ ಪುಣ್ಯವು ಸಂಭವಿಸುವುದು.

೫೬. ಮಹೀಸಾಗರಸಂಗಮ ಕ್ಷೇತ್ರದಲ್ಲಿ ನೆಲಸಿರುವ ಕುಮಾರೇಶ್ವರನಾದ ನನ್ನನ್ನು ಭಕ್ತಿಯಿಂದ ಅಭಿಷೇಕಪೂರ್ವಕವಾಗಿ ಪೂಜಿಸಲು ಮನುಷ್ಯನಿಗೆ ಪೂರ್ವಜನ್ಮದ ಸ್ಮರಣೆಯುಂಟಾಗುವುದು.

೫೭. ಎಲೈ ಮಗನೆ! ಯಾವ ಜಾತಿಯಲ್ಲಿ ಈ ಸ್ಮೃತಿಯುಂಟಾಗುವುದೊ, ಆಗ ಭಕ್ತನು ತನ್ನ ಉತ್ತರ ಶ್ರೇಯಸ್ಸಿಗೆ ಸಾಧನಭೂತವೂ, ಬಹಳ ದುರ್ಲಭವೂ ಆದ ಕರ್ತವ್ಯಕರ್ಮವನ್ನು ಸ್ಮರಿಸಿಕೊಳ್ಳುವನು.

ಯಸ್ಮಿನ್ಕಾಲೇ ಹ್ಯನಾವೃಷ್ಟಿರ್ಜಾಯತೇ ಕೃತ್ತಿಕಾಸುತ ।
ಸ್ನಾಪಯೇದ್ವಿಧಿವನ್ಮಾಂ ಚ ಕಲಶೈರ್ವಿವಿಧೈಃ ಶುಭೈಃ ॥ ೫೮ ॥
ಏಕರಾತ್ರಂ ತ್ರಿರಾತ್ರಂ ವಾ ಪಂಚರಾತ್ರಂ ಚ ಸಪ್ತ ಚ ।
ಸ್ನಾಪಯೇದ್ಗಂಧತೋಯೇನ ಕುಂಕುಮೇನ ವಿಲೇಪಯೇತ್ ॥ ೫೯ ॥
ಕರವೀರೈ ರಕ್ತಪುಷ್ಪೈರ್ಜಪಾಪುಷ್ಪೈಸ್ತಥೈವ ಚ ।
ಅರ್ಚಯೇತ್ಪುಷ್ಪಮಾಲಾಭಿಃ ಪರಿಧಾಪ್ಯಾರುಣವಾಸಸೀ ॥ ೬೦ ॥
ಭೋಜಯೇದ್ಬ್ರಾಹ್ಮಣಾಶ್ಚೈವ ತಾಪಸಾನ್ಶಂಸಿತವ್ರತಾನ್ ।
ಲಕ್ಷಹೋಮಂ ಪ್ರಕುರ್ವೀತ ಶಿವಹೋಮಂ ಗ್ರಹಾದಿಕಂ ॥ ೬೧ ॥
ಭೂಮಿದಾನಂ ತತಃ ಕುರ್ಯಾತ್ತತೋ ದದ್ಯಾದ್ಗವಾಹ್ನಿಕಂ ।
ಆಘೋಷಯೇಚ್ಛಿವಾಂ ಶಾಂತಿಂ ರುದ್ರಜಾಪ್ಯಂ ಹಿ ಕಾರಯೇತ್ ॥೬೨॥
ಅನೇನೈವ ವಿಧಾನೇನ ಕೃತೇನ ತು ದ್ವಿಜೋತ್ತಮೈಃ ।
ಅಗರ್ಭಿತಾಸ್ತದಾ ಮೇಘಾ ವರ್ಷಂತೇ ನಾತ್ರ ಸಂಶಯಃ ॥ ೬೩ ॥
ವಿವಿಧೈಃ ಪೂರ್ಯತೇ ಧಾನ್ಯೈಃ ಶಾದ್ವಲೈಶ್ಚ ವಸುಂಧರಾ ।
ಆರೋಗ್ಯಂ ಹಿ ಭವೇಚ್ಚೈವ ಜನೇ ಗೋಪಕುಲೇ ತಥಾ ॥ ೬೪ ॥

---

೫೮. ಎಲೈ ಕಾರ್ತಿಕೇಯನೆ! ಈ ಪ್ರದೇಶದಲ್ಲಿ ಯಾವಾಗ ಅನಾವೃಷ್ಟಿಯ ಭಯವುಂಟಾಗುವುದೊ, ಆ ಕಾಲದಲ್ಲಿ ಈ ಲಿಂಗವನ್ನು ವಿವಿಧಶುಭ ಕಳಶೋದಕಗಳಿಂದ ವಿಧ್ಯುಕ್ತ ರೀತಿಯಾಗಿ ಅಭಿಷಿಕ್ತವನ್ನಾಗಿ ಮಾಡಬೇಕು.

೫೯. ಇಂತು ಒಂದು ರಾತ್ರಿಯಾಗಲಿ, ಮೂರಾಗಲಿ, ಐದಾಗಲಿ, ಏಳಾಗಲಿ ಗಂಧೋದಕದಿಂದ ಅಭಿಷೇಕವನ್ನು ಮಾಡಿ ಕುಂಕುಮದಿಂದ ಅವಲೇಪಿಸಬೇಕು.

೬೦. ಕರವೀರ, ರಕ್ತ ಪುಷ್ಪ, ಜಪಾಕುಸುಮಗಳೆಂಬ ಹೂವುಗಳಿಂದ ಹಾರಗಳನ್ನು ಮಾಡಿ ಪೂಜಿಸಿ, ಲಿಂಗಕ್ಕೆ ಕೆಂಪು ವಸ್ತ್ರಗಳನ್ನು ಹೊದಿಸಬೇಕು.

೬೧. ತಪಸ್ಸಂಪನ್ನರೂ, ವ್ರತೋಪವಾಸನಿರತರೂ ಆದ ಬ್ರಾಹ್ಮಣರಿಗೆ ಭೋಜನಮಾಡಿಸಬೇಕು. ಮತ್ತು ಲಕ್ಷಹೋಮವನ್ನೂ ಶಿವ (ರುದ್ರ) ಹೋಮವನ್ನೂ, ನವಗ್ರಹ ಹೋಮಗಳನ್ನೂ ಮಾಡಬೇಕು.

೬೨. ಬಳಿಕ ಭೂದಾನವನ್ನು ಮಾಡಿ ಗವಾಹ್ನಿಕವನ್ನು ಕೊಟ್ಟು ಶಾಂತಿ ಪಾಠಗಳನ್ನು ಘೋಷಮಾಡಿಸಿ, ರುದ್ರಜಪವನ್ನು ಮಾಡಿಸಬೇಕು.

೬೩. ಈ ವಿಧದಿಂದ ಬ್ರಾಹ್ಮಣ ಮುಖವಾಗಿ ಪೂಜೆಯನ್ನು ಮಾಡಿಸಲು ಜಲಗರ್ಭವಿಲ್ಲದ ಮೇಘಗಳೂ ಮಳೆಗರೆಯುವುದರಲ್ಲಿ ಸಂಶಯವಿಲ್ಲ.

೬೪. ಭೂಮಿಯು ವಿವಿಧಧಾನ್ಯಗಳಿಂದಲೂ, ಹಸುರುಗಳಿಂದಲೂ ತುಂಬಿರುವುದು. ನಾಗರಿಕರಲ್ಲಿಯೂ, ಗೋ ಗೋಪಾಲಕರಲ್ಲಿಯೂ ದೇಹಾರೋಗ್ಯವುಂಟಾಗುವುದು.

**ಧರ್ಮಯುಕ್ತೋ ಭವೇದ್ರಾಜಾ ಪರಚಕ್ರೈರ್ನಪೀಡ್ಯತೇ ।**
**ಘೃತೇನ ಸ್ನಾಪಯೇನ್ಮಾಂ ಚ ಅರ್ಕಕ್ರಾಂತೌ ನರೋತ್ತಮಃ ॥ ೬೫ ॥**
**ಕನ್ಯಾದಾನಫಲಂ ತಸ್ಯ ನಾತ್ರಕಾರ್ಯಾ ವಿಚಾರಣಾ ।**
**ಕ್ಷೀರೇಣ ಸ್ನಾಪಯೇದ್ದೇವಂ ತಥಾ ಪಂಚಾಮೃತೇನ ಚ ॥ ೬೬ ॥**
**ಅಗ್ನಿಷ್ಟೋಮಸ್ಯ ಯಜ್ಞಸ್ಯ ಫಲಂ ತಸ್ಯೋಪಜಾಯತೇ ।**
**ಕುಮಾರೇಶ್ವರತೀರ್ಥೇ ಯಃ ಪ್ರಾಣತ್ಯಾಗಂ ಕರೋತಿ ಹಿ ।**
**ರುದ್ರಲೋಕೇ ವಸೇತ್ತಾವದ್ಯಾವದಾಭೂತಸಂಪ್ಲವಂ ॥ ೬೭ ॥**
**ಅಯನೇ ವಿಷುವೇ ಚೈವ ಗ್ರಹಣೇ ಚಂದ್ರಸೂರ್ಯಯೋಃ ।**
**ಪೌರ್ಣಮಾಸ್ಯಾಮಮಾವಾಸ್ಯಾಂ ಸಂಕ್ರಾಂತೌ ವೈಧೃತೇ ತಥಾ ॥ ೬೮ ॥**
**ಕುಮಾರೇಶಂ ನರಃ ಸ್ನಾತ್ವಾ ಮಹೀಸಾಗರಸಂಗಮೇ ।**
**ಭಕ್ತ್ಯಾ ಯೋಽಭ್ಯರ್ಚಯೇನ್ಮಾಂ ಚ ತಸ್ಯ ಪುಣ್ಯಫಲಂ ಶೃಣು ॥ ೬೯ ॥**
**ಯನ್ಮಹೀತಲತೀರ್ಥೇಷು ಸ್ನಾನೇ ಸ್ಯಾತ್ತು ಮಹತ್ಫಲಂ ।**
**ಯಚ್ಚಾರ್ಚಿತೇಷು ಲಿಂಗೇಷು ಸರ್ವೇಷು ಸ್ಯಾತ್ಫಲಂ ಚ ತತ್ ॥ ೭೦ ॥**

---

೬೫–೬೭. ರಾಜನು ಧರ್ಮದಿಂದ ಪ್ರಜಾಪಾಲನೆಯನ್ನು ಮಾಡುತ್ತ ಶತ್ರುರಾಜರ ಪೀಡೆಗೆ ತುತ್ತಾಗುವುದಿಲ್ಲ. ಸೂರ್ಯೋಪರಾಗದಲ್ಲಿ ಯಾವನು ಈ ಲಿಂಗವನ್ನು ಘೃತದಿಂದ ಸ್ನಾನಮಾಡಿಸುವನೊ, ಅವನಿಗೆ ಕನ್ಯಾದಾನವನ್ನು ಮಾಡಿದ ಫಲವು ದೊರಕುವುದು. ಈ ವಿಷಯದಲ್ಲಿ ವಿಚಾರ ಮಾಡಬೇಕಾದುದಿಲ್ಲ. ಯಾವನು ದೇವದೇವನಾದ ನನ್ನನ್ನು ಕ್ಷೀರದಿಂದಾಗಲಿ ಪಂಚಾಮೃತದಿಂದಾಗಲಿ ಸ್ನಾನಮಾಡಿಸುವನೋ, ಅವನಿಗೆ ಅಗ್ನಿಷ್ಟೋಮ ಯಜ್ಞವನ್ನು ಮಾಡಿದ ಫಲವು ಲಭಿಸುವುದು. ಯಾವನು ಪೂರ್ವಪುಣ್ಯದಿಂದ ಕುಮಾರೇಶ್ವರ ತೀರ್ಥದಲ್ಲಿ ದೇಹವನ್ನು ತ್ಯಜಿಸುವನೊ, ಅವನು ಪಂಚಭೂತಗಳ ಪ್ರಳಯವಾಗುವವರೆಗೂ ರುದ್ರಲೋಕದಲ್ಲಿ ವಾಸಮಾಡುವನು.

೬೮–೭೦. ಉತ್ತರಾಯಣ ದಕ್ಷಿಣಾಯನಗಳಲ್ಲಿಯೂ, ವಿಷುವತ್ಪುಣ್ಯಕಾಲಗಳಲ್ಲಿಯೂ, ಸೂರ್ಯಚಂದ್ರರ ಗ್ರಹಣಗಳಲ್ಲಿಯೂ, ಪೌರ್ಣಮಿಗಳಲ್ಲಿಯೂ, ಅಮಾವಾಸ್ಯೆಗಳಲ್ಲಿಯೂ, ಸಂಕ್ರಮಣಕಾಲಗಳಲ್ಲಿಯೂ, ವೈಧೃತಿ ಯೋಗದ ದಿನಗಳಲ್ಲಿಯೂ, ಯಾವ ಮನುಷ್ಯನು ಮಹೀಸಾಗರಸಂಗಮದಲ್ಲಿ ಸ್ನಾನಮಾಡಿ ಕುಮಾರೇಶ್ವರನನ್ನು ಭಕ್ತಿಯಿಂದ ಅರ್ಚಿಸುವನೊ, ಅವನಿಗೆ ದೊರಕುವ ಪುಣ್ಯದ ಫಲವನ್ನು ಕೇಳು. ಭೂಲೋಕದಲ್ಲಿರುವ ಎಲ್ಲ ತೀರ್ಥಗಳಲ್ಲಿಯೂ ಸ್ನಾನಮಾಡುವುದರಿಂದ ಯಾವ ಮಹತ್ಫಲವು ಲಭಿಸುವುದೊ, ಸಮಸ್ತ ಶೈವಕ್ಷೇತ್ರಗಳನ್ನು ಸುತ್ತಿ ಶಿವಲಿಂಗಗಳನ್ನು ಪೂಜಿಸುವುದರಿಂದ ಯಾವ ಫಲವುಂಟೊ, ಈ ಪೂಜೆಯಿಂದ ಅಂತಹ ಉತ್ತಮ ಫಲವು ಸಿದ್ಧಿಸುವುದು.

ಆರೋಗ್ಯಂ ಪುತ್ರಲಾಭಂ ಚ ಧನಲಾಭಂ ಸುಖಂ ಸುತಂ ।
ನಿಶ್ಚಿತಂ ಲಭತೇ ಮರ್ತ್ಯಃ ಕುಮಾರೇಶ್ವರಸೇವಯಾ ॥ ೨೧ ॥
ಬ್ರಹ್ಮಚಾರೀ ಶುಚಿರ್ಭೂತ್ವಾ ಯಸ್ತಿಷ್ಠೇದತ್ರ ತಾಪಸಃ ॥ ೨೨ ॥
ಪರಂ ಪಾಶುಪತಂ ಯೋಗಂ ಪ್ರಾಪ್ಯ ಯಾತಿ ಲಯಂ ಮಯಿ ।
ಪಾಪಾತ್ಮನಾಂ ಚ ಮರ್ತ್ಯಾನಾಂ ಸದ್ಯೋಽಸ್ಮಿ ಫಲದರ್ಶಕಃ ।
ದಿವ್ಯೇನಾಷ್ಟವಿಧೇನಾತ್ರ ಕೋಶಃ ಸಾಧಾರಣೋಽತ್ರ ಚ ॥ ೨೩ ॥
ಅಘೋರಾದ್ಯೈಃ ಪಂಚಮಂತ್ರೈಃ ಸ್ನಾಪ್ಯ ಲಿಂಗಂ ಮಹೋಜ್ಜ್ವಲಂ ॥ ೨೪ ॥
ಅಘೋರೇಣೈವ ತತ್ತೋಯಂ ದದ್ಯಾದ್ದಿವ್ಯಸ್ಯ ಕಾರಣೇ ।
ಪಿಬೇದೇತದುದೀರ್ಯಾಸೌ ಪ್ರಸೃತಿತ್ರಯಮೇವ ಚ ॥ ೨೫ ॥
ಯದಿ ಧರ್ಮಸ್ತಥಾ ಸತ್ಯಮೀಶ್ವರೋಽತ್ರ ಜಗತ್ತ್ರಯೇ ।
ಕೋಶಪಾನಾತ್ಫಲಂ ಸದ್ಯೋ ದ್ರಕ್ಷ್ಯಾಮ್ಯಸ್ಮಿನ್ ಶುಭಾಶುಭಂ ॥ ೨೬ ॥
ಯಾಸ್ಯೇ ಚೇತಿ ಕುಲಂ ಹನ್ಯಾದ್ಗಮನೇ ಚ ಕುಟುಂಬಕಂ ।
ದರ್ಶನೇ ಚ ಶುಭಂ ಪಾನೇ ಹನ್ಯಾದ್ದೇಹಂ ಚ ಮಿಥ್ಯಯಾ ॥ ೨೭ ॥

---

೨೧. ಕುಮಾರೇಶ್ವರನನ್ನು ಸೇವಿಸುವುದರಿಂದ ದೇಹಾರೋಗ್ಯವನ್ನೂ, ಪುತ್ರಸಂತಾನವನ್ನೂ, ಧನಧಾನ್ಯ ಸಮೃದ್ಧಿಯನ್ನೂ, ಸುಖಸಂಪತ್ತುಗಳನ್ನೂ ಮನುಷ್ಯನು ಖಂಡಿತವಾಗಿಯೂ ಹೊಂದುವನು.

೨೨–೨೩. ಬ್ರಹ್ಮಚಾರಿಯು ಶುಚಿಯಾಗಿ, ತಪಸ್ಸಂಪನ್ನನಾಗಿ ಇಲ್ಲಿ ವಾಸ ಮಾಡಲು ಉತ್ತಮವಾದ ಶಿವಯೋಗವನ್ನು ಪಡೆದು ಕೊನೆಗೆ ನನ್ನಲ್ಲಿ ಐಕ್ಯವನ್ನು ಪಡೆಯುವನು. ಪಾಪಾತ್ಮರಾದ ಜನರಿಗೂ ಕೂಡ ಇಲ್ಲಿ ಕ್ಷಿಪ್ರವಾಗಿಯೇ ಫಲಗಳನ್ನು ಕೊಡುವೆನು. ದಿವ್ಯವಾದ ಅಷ್ಟಾವರಣರೂಪವಾದ ಕೋಶವು ಇಲ್ಲಿ ಸಾಧಾರಣವಾಗಿರುವುದು.

೨೪. 'ಅಘೋರೇಭ್ಯೋ' ಮುಂತಾದ ಐದು ಮಂತ್ರಗಳಿಂದ ಮಹಾತೇಜಸ್ಸಿನಿಂದ ಕೂಡಿದ ಲಿಂಗವನ್ನು ಸ್ನಾನಮಾಡಿಸಿ, ಸ್ವರ್ಗಪ್ರಾಪ್ತಿಗಾಗಿ ಆ ನೀರಿನಿಂದಲೇ ತರ್ಪಣವನ್ನು ಕೊಡಬೇಕು.

೨೫–೨೬. ಅಲ್ಲದೆ ಮುಂದೆ ಹೇಳುವ ಈ ಮಾತುಗಳನ್ನು ಹೇಳುತ್ತ ಈ ತೀರ್ಥೋದಕದ ಮೂರು ಬೊಗಸೆಗಳನ್ನು ಕುಡಿಯಬೇಕು. "ಮೂರು ಲೋಕಗಳಲ್ಲಿಯೂ ಧರ್ಮವೂ, ಸತ್ಯವೂ, ಈಶ್ವರನೂ ಇರುವರಾದರೆ, ಈ ಕೋಶಪಾನದಿಂದ ಈಗಲೇ ನನ್ನ ಶುಭಾಶುಭಫಲಗಳನ್ನು ನಾನು ನೋಡಬೇಕು."

೨೭. ಕುಮಾರೇಶ್ವರನನ್ನು ನೋಡಬೇಕೆಂದು ಹೊರಡಬಯಸುವವನು ಕುಲಾಭಿಮಾನವನ್ನು ತ್ಯಜಿಸುವನು. ಹೊರಟವನು ಕುಟುಂಬದಲ್ಲಿ ಅಭಿಮಾನ

**ತ್ರಿಭಿರ್ದಿನೈಃ ತ್ರಿಭಿಃ ಪಕ್ಷೈಸ್ತ್ರಿಭಿರ್ಮಾಸೈಸ್ತ್ರಿಭಿಃ ಸಮೈಃ ।**
**ಅತ್ಯುಗ್ರಪುಣ್ಯಪಾಪಾನಾಂ ಮಾನೇನ ಫಲಮಶ್ನುತೇ ॥ ೭೮ ॥**
**ಏತೇ ವರಾ ಮಯಾ ಲಿಂಗೇ ದತ್ತಾಸ್ತತ್ರ ಸ್ಥಾಪಿತೇ ತ್ವಯಾ ।**
**ತವಪ್ರೀತ್ಯಭಿವೃದ್ಧ್ಯರ್ಥಂ ಬ್ರೂಹಿ ಭೂಯೋಽಪ್ಯುಮಾತ್ಮಜ ॥ ೭೯ ॥**
**ಸ್ಕಂದ ಉವಾಚ :—**
**ಕೃತಕೃತ್ಯೋ ವರೈರ್ದತ್ತೈಸ್ತ್ವಯಾ ಚೈತೈರ್ಮಹೇಶ್ವರ ।**
**ನಮೋ ನಮೋ ನಮಸ್ತೇಽಸ್ತು ನಾತ್ರ ತ್ಯಾಜ್ಯಂ ತ್ವಯಾ ವಿಭೋ ॥ ೮೦ ॥**
**ಏವಂ ಪ್ರಣಮ್ಯ ದೇವಂ ಸ ಮಾತರಂ ಪ್ರಣತೋಽಬ್ರವೀತ್ ।**
**ತ್ವಯಾಪಿ ಮಾತರ್ನೈವಾತ್ರ ತ್ಯಾಜ್ಯಂ ಮಮ ಪ್ರಿಯೇಪ್ಸಯಾ ॥ ೮೧ ॥**
**ತ್ವಾಮಪ್ಯತ್ರ ಸ್ಥಾಪಯಿಷ್ಯೇ ವರದಾಭವ ಪಾರ್ವತಿ ॥ ೮೨ ॥**
**ಶ್ರೀ ದೇವ್ಯುವಾಚ :—**
**ಯತ್ರ ಶರ್ವಃ ಸ್ವಭಾವೇನ ತತ್ರ ತಿಷ್ಠಾಮ್ಯಹಂ ಸುತ ॥ ೮೩ ॥**

---

ವನ್ನು ಬಿಡುವನು. ದರ್ಶನಮಾತ್ರದಿಂದ ಶುಭಾಶುಭಗಳೆಂಬ ದ್ವಂದ್ವಗಳನ್ನು ತ್ಯಜಿಸುವವನಲ್ಲದೆ ಕೋಶಪಾನದಿಂದ ದೇಹಾದಿಗಳು ಮಿಥ್ಯೆಯೆಂದು ತಿಳಿದು ಅದರಲ್ಲಿಯೂ ಅಭಿಮಾನವನ್ನು ನೀಗುವನು.

೭೮. ಮೂರು ದಿನಗಳಾಗಲಿ, ಮೂರು ಪಕ್ಷಗಳಾಗಲಿ, ಮೂರು ತಿಂಗಳಾಗಲಿ, ಮೂರು ವರ್ಷಗಳಾಗಲಿ ಕಾಲದ ನಿಯಮವುಂಟು. ಅಷ್ಟರಲ್ಲಿಯೇ ವಿಶೇಷ ಪುಣ್ಯಪಾಪಗಳ ಫಲವನ್ನು ಮನುಷ್ಯನು ಅನುಭವಿಸುತ್ತಾನೆ.

೭೯. ಎಲೈ ಪಾರ್ವತೀಪುತ್ರನೆ! ನಿನ್ನ ಪ್ರೀತಿಗೋಸ್ಕರವಾಗಿ ನೀನು ಸ್ಥಾಪಿಸಿರುವ ಈ ಲಿಂಗದ ವಿಷಯದಲ್ಲಿ ಈ ವರಗಳೆಲ್ಲವನ್ನೂ ಕೊಟ್ಟಿರುವೆನು. ಮತ್ತೇನನ್ನು ಬೇಡಲಿಚ್ಛಿಸುವೆ?''

೮೦. ಸ್ಕಂದನು ಹೇಳುತ್ತಾನೆ:—''ಮಹೇಶ್ವರಾ! ನೀನು ದಯಪಾಲಿಸಿರುವ ಈ ವರಗಳಿಂದ ನಾನು ಕೃತಕೃತ್ಯನಾದೆ. ನಿನಗೆ ಮತ್ತೆ ಮತ್ತೆ ನಮಸ್ಕರಿಸುವೆನು. ನೀನು ಈ ಕ್ಷೇತ್ರವನ್ನು ಎಂದಿಗೂ ತ್ಯಜಿಸಬಾರದು.''

೮೧—೮೨. ಇಂತು ಆ ದೇವದೇವನಿಗೆ ನಮಸ್ಕರಿಸಿ ಸ್ಕಂದನು ಜಗದಂಬೆಯನ್ನು ಕುರಿತು ಹೇಳಿದನು:—''ತಾಯೆ! ನನಗೆ ಪ್ರಿಯವನ್ನುಂಟುಮಾಡುವವಳಾಗಿ ನೀನೂ ಸಹ ಇಲ್ಲಿಯೇ ನೆಲಸಬೇಕು. ನಿನ್ನ ಮೂರ್ತಿಯನ್ನೂ ಇಲ್ಲಿಯೇ ಸ್ಥಾಪಿಸುವೆನು. ಭಕ್ತರ ವರಪ್ರದಳಾಗಿ ನಿಲ್ಲು.''

೮೩. ಶ್ರೀದೇವಿಯು ಹೇಳುತ್ತಾಳೆ:—''ಮಗನೆ! ಎಲ್ಲಿ ಮಹೇಶ್ವರನು ಸಾಕ್ಷಾತ್ತಾಗಿ ಸನ್ನಿಹಿತನಾಗಿರುವನೊ, ಅಲ್ಲಿ ನಾನು ಇದ್ದೇ ಇರುತ್ತೇನೆ.

ತವ ಭಕ್ತ್ಯಾ ವಿಶೇಷೇಣ ಸ್ಥಾಸ್ಯೇ ಸ್ತ್ರೀಣಾಂ ವರಪ್ರದಾ ।
ಯುದ್ಧೇಷು ತವ ಕರ್ಮಾಣಿ ರುದ್ರಭಕ್ತೇಷು ತೇ ಕೃಪಾಂ ॥ ೮೪ ॥
ಪಶ್ಯಂತೀ ಪುತ್ರಿಣಾಂ ಮುಖ್ಯಾ ಪ್ರೀಣಿತಾ ಚ ಭೃಶಂ ತ್ವಯಾ ।
ಗರ್ಭಕ್ಲೇಶಃ ಸ್ತ್ರಿಯೋ ಮನ್ಯೇ ಸಾಫಲ್ಯಂ ಭಜತೇ ತದಾ ॥ ೮೫ ॥
ಸುತೋ ಯದಾ ರುದ್ರಭಕ್ತಃ ಸಾನಂದಂ ಸದ್ಭಿರೀರ್ಯತೇ ।
ಭವ ತಸ್ಮಾತ್ಪ್ರಿಯಾರ್ಥಾಯ ತಿಷ್ಠಾಮ್ಯತ್ರ ಷಡಾನನ ।
ಸ್ತ್ರೀಭಿರಾರಾಧಿತಾ ದಾಸ್ಯೇ ಸೌಭಾಗ್ಯಂ ಸುಪತಿಂ ಸುತಾನ್ ॥ ೮೬ ॥
ಚೈತ್ರೇ ಚಾಪಿ ತೃತೀಯಾಯಾಂ ಸ್ನಾತ್ವಾ ಶೀತೇನ ವಾರಿಣಾ ।
ಅರ್ಚಯಿಷ್ಯಂತಿ ಮಾಂ ಯಾಶ್ಚ ಪುಷ್ಪೈರ್ಧೂಪೈರ್ವಿಲೇಪನೈಃ ॥ ೮೭ ॥
ದಾಸ್ಯಾಮಿ ಚಾಷ್ಟಸೌಭಾಗ್ಯಂ ಯಾನಾರೀ ಭಕ್ತಿತತ್ಪರಾ ।
ಪಿತರಾ ಶ್ವಶುರಾ ಪುತ್ರಾನ್ಪತಿಂ ಸೌಭಾಗ್ಯಸಂಪದಃ ॥ ೮೮ ॥
ಕುಂಕುಮಂ ಪುಷ್ಪಶ್ರೀಖಂಡಂ ತಾಂಬೂಲಾಂಜನಮಿಷವಃ ॥ ೮೯ ॥

---

೮೪–೮೫. ವಿಶೇಷವಾದ ನಿನ್ನ ಭಕ್ತಿಯಿಂದ ಇಲ್ಲಿಯೇ ನಿಂತು ಸ್ತ್ರೀಯರಿಗೆ ವರಪ್ರದಳಾಗಿರುವೆನು. ತಾರಕಾಸುರ ಯುದ್ಧದಲ್ಲಿ ನಿನ್ನ ಪರಾಕ್ರಮಕಾರ್ಯಗಳನ್ನೂ, ಶಿವಭಕ್ತರಲ್ಲಿ ನಿನಗಿರುವ ಕೃಪೆಯನ್ನೂ ಕಂಡು ನಾನೇ ಪುತ್ರವಂತೆಯರಾದ ಸ್ತ್ರೀಯರಲ್ಲಿ ಮುಖ್ಯಳೆಂದು ಬಹಳ ಸಂತೋಷಗೊಂಡಿರುವೆನು. ಸತ್ಪುರುಷರು ತನ್ನ ಮಗನು ರುದ್ರಭಕ್ತನಾದನೆಂದು ಯಾವಾಗ ಆನಂದದಿಂದ ಹೇಳುವರೊ, ಆಗಲೇ ಆ ತಾಯಿಯ ಗರ್ಭಧಾರಣ ಕ್ಲೇಶವು ಸಫಲವಾಗುವುದು.

೮೬. ಎಲೈ ಷಣ್ಮುಖನೆ! ನಿನಗೆ ಪ್ರಿಯವನ್ನುಂಟುಮಾಡಲು ಇಲ್ಲಿಯೇ ನೆಲಸಿರುವೆನು. ಸ್ತ್ರೀಯರಿಂದ ಪೂಜಿಸಲ್ಪಟ್ಟವಳಾಗಿ ಸೌಮಂಗಲ್ಯವನ್ನೂ ಒಳ್ಳೆಯ ಪತಿಯನ್ನೂ, ಸುಪುತ್ರರನ್ನೂ ಕೊಡುವೆನು.

೮೭–೮೮. ಚೈತ್ರಮಾಸದ ತೃತೀಯೆಯಲ್ಲಿ ಶೀತಲೋದಕದಲ್ಲಿ ಸ್ನಾನಮಾಡಿ ನನ್ನನ್ನು ಪುಷ್ಪಗಳಿಂದಲೂ, ಧೂಪದಿಂದಲೂ, ಚಂದನಾದಿ ಲೇಪನಗಳಿಂದಲೂ, ಯಾವ ಸ್ತ್ರೀಯರು ಪೂಜೆಯನ್ನು ಮಾಡುವರೊ, ಯಾವ ಸ್ತ್ರೀಯರು ಪತಿವ್ರತೆಯರಾಗಿರುವರೊ ಅವರಿಗೆ, ತಂದೆ ತಾಯಿಯರು, ಅತ್ತೆ ಮಾವಂದಿರು, ಮಕ್ಕಳು, ಪತಿಯು, ಸೌಮಂಗಲ್ಯವು ಮತ್ತು ಐಶ್ವರ್ಯಗಳೆಂಬ ಅಷ್ಟಭೋಗಗಳನ್ನು ಕೊಡುವೆನು.

೮೯–೯೦. ತುಲಾಭಾರದ ದ್ರವ್ಯವನ್ನು ನಿವೇದಿಸುವ ಕ್ರಮವನ್ನು ಹೇಳುವೆನು. ಕುಂಕುಮ, ಶ್ರೀಖಂಡ, ಪುಷ್ಪಗಳು, ತಾಂಬೂಲ, ಅಂಜನದ್ರವ್ಯಗಳು,

ಸಪ್ತಮಂ ಲವಣಂ ಪ್ರೋಕ್ತಮಷ್ಟಮಂ ಚ ಸುಜೀರಕಂ ।
ತೋಲಯೇತ್ತುಲಯಾ ವಾಪಿ ಸಾಂಘ್ರಿಶ್ಚ ತುಲಿತಾ ಭವೇತ್ ॥ ೯೦ ॥
ಸುವರ್ಣೇನಾಥ ಸೌಗಂಧ್ಯದ್ರವ್ಯೈಃ ಶುಭಫಲೈರಪಿ ।
ಭುಙ್ಕ್ತೇವಾ ಲವಣಂ ಪಶ್ಚಾನ್ನಸಾ ವೈ ವಿಧವಾ ಭವೇತ್ ॥ ೯೧ ॥
ಮಾಘೇ ವಾ ಕಾರ್ತಿಕೇ ವಾಪಿ ಚೈತ್ರೇ ಸ್ನಾತ್ವಾರ್ಚಯೇತ ಮಾಂ ।
ದೌರ್ಭಾಗ್ಯದುಃಖದಾರಿದ್ರ್ಯೈರ್ನ ಸಾ ಸಂಯೋಗಮಾಪ್ನುಯಾತ್ ॥ ೯೨ ॥
ಶ್ರುತ್ವೇತಿ ಗಿರಿಜಾ ವಾಚಂ ಸಾನಂದಃ ಪಾರ್ವತೀಸುತಃ ।
ಸ್ಥಾಪಯಿತ್ವಾ ಗಿರಿಸುತಾಂ ಕಪರ್ದಿನಮಥಾಬ್ರವೀತ್ ॥ ೯೩ ॥
ಪುಷ್ಪೈರ್ಧೂಪೈರ್ಮೋದಕೈಶ್ಚ ಪೂರ್ವಮಭ್ಯರ್ಚ್ಯ ತ್ವಾಂ ಪ್ರಭೋ ।
ಪೂಜಯಂತಿ ಕುಮಾರೇಶಂ ತೇಷಾಂ ವಿಘ್ನಹರೋ ಭವ ॥ ೯೪ ॥

ಕಪರ್ದ್ಯುವಾಚ :—

ಭ್ರಾತಸ್ತ್ವಯಾ ಸ್ಥಾಪಿತೇಽಸ್ಮಿನ್ಲಿಂಗೇ ಭಕ್ತ್ಯಾರ್ಚಯೇ ನರಾಃ ।
ನ ತೇಷಾಂ ಮಮ ವಿಘ್ನಾನಿ ಮಮ ವಾಗನುಗಾಮಿನೀ ॥ ೯೫ ॥

---

ಇಕ್ಷು, ಏಳನೆಯದಾಗಿ ಲವಣ, ಎಂಟನೆಯ ಜೀರಕ ಇವು ಉತ್ತಮದ್ರವ್ಯಗಳು. ಇವುಗಳ ತುಲನದಿಂದ ಸ್ತ್ರೀಯು ನನ್ನ ಸಮಾನಳಾಗುವಳು.

೯೧. ಸುವರ್ಣದಿಂದಾಗಲಿ, ಸುಗಂಧ ದ್ರವ್ಯಗಳಿಂದಾಗಲಿ, ಉತ್ತಮ ಫಲಗಳಿಂದಾಗಲಿ ತುಲಾಭಾರವನ್ನು ನಡೆಸಿ ಬಳಿಕ ಲವಣಾನ್ನದ ಭೋಜನವನ್ನು ಮಾಡಲು ಆ ಸ್ತ್ರೀಯು ಎಂದೆಂದಿಗೂ ವಿಧವೆಯಾಗುವುದಿಲ್ಲ.

೯೨–೯೪. ಯಾವ ಭಕ್ತಳು ಮಾಘಮಾಸದಲ್ಲಾಗಲಿ, ಕಾರ್ತೀಕದಲ್ಲಾಗಲಿ, ಚೈತ್ರದಲ್ಲಾಗಲಿ, ಪ್ರಾತಃಸ್ನಾನವನ್ನು ಮಾಡಿ ನನ್ನನ್ನು ಪೂಜಿಸುವಳೊ ಅವಳಿಗೆ ದಾರಿದ್ರ್ಯ, ದುಃಖ, ವೈಧವ್ಯ ಮುಂತಾದ ವಿಪತ್ತುಗಳು ಸಂಭವಿಸುವುದಿಲ್ಲ.'' ಗಿರಿಜೆಯ ಈ ಮಾತುಗಳನ್ನು ಕೇಳಿ ಕಾರ್ತಿಕೇಯನು ಸಂತೋಷದಿಂದ ಆಕೆಯ ಮೂರ್ತಿಯನ್ನು ಸ್ಥಾಪಿಸಿ ಗಣಪತಿಯನ್ನು ಕುರಿತು ಹೇಳತೊಡಗಿದನು. ''ಎಲೈ ಸ್ವಾಮಿಯೆ! ನಿನ್ನನ್ನು ಮೊದಲು ಪುಷ್ಪಗಳಿಂದಲೂ, ಧೂಪಗಳಿಂದಲೂ ಅರ್ಚಿಸಿ ಮೋದಕಗಳ ನಿವೇದನವನ್ನು ಮಾಡುವರೊ, ಮತ್ತು ಆಮೇಲೆ ಕುಮಾರೇಶ್ವರನನ್ನು ಪೂಜಿಸುವರೊ ಅವರ ವಿಘ್ನಗಳೆಲ್ಲವನ್ನೂ ನಾಶ ಮಾಡುವವನಾಗು.''

೯೫. ವಿಘ್ನೇಶ್ವರನು ಹೇಳಿದನು :—'' ಎಲೈ ತಮ್ಮನೆ! ನೀನು ಸ್ಥಾಪಿಸಿರುವ ಈ ಲಿಂಗವನ್ನು ಯಾವ ಮನುಷ್ಯರು ಭಕ್ತಿಯಿಂದ ಪೂಜಿಸುವರೊ, ಅವರಿಗೆ ನಾನು ಎಂದಿಗೂ ವಿಘ್ನಗಳನ್ನು ಮಾಡುವುದಿಲ್ಲ; ನನ್ನ ಆಶೀರ್ವಾದವು ಅವರನ್ನು ಯಾವಾಗಲೂ ಅನುಸರಿಸುತ್ತಿರುವುದು.

ಏವಮುಕ್ತೋ ವಿಘ್ನರಾಜ್ಞಾ ಪ್ರತಿತೇऽಸ್ಥಾಪಯಚ್ಚ ತಂ ।
ತಸ್ಮಾದಸೌ ಸದಾಭ್ಯರ್ಚ್ಯಶ್ಚತುರ್ಥ್ಯಾಂ ಚ ವಿಶೇಷತಃ ॥ ೯೬ ॥
ಏವಂ ಸ್ಥಾಪ್ಯ ಕುಮಾರೇಶಂ ಲಬ್ಧ್ವಾ ಚೈತಾನ್ವರಾನ್ಶಿವಾತ್ ।
ಮನಸಾ ಕೃತಕೃತ್ಯಂ ಚಾತ್ಮಾನಂ ಮೇನೇ ಷಡಾನನಃ ॥ ೯೭ ॥
ತಸ್ಥಾವಂಶೇನ ತತ್ರೈವ ಕುಮಾರೇಶ್ವರಸನ್ನಿಧೌ ।
ಅತ್ರ ಸ್ಥಿತಂ ಕುಮಾರಂ ಯೇ ಪಶ್ಯಂತಿ ಸ್ವಾಮಿಯಾತ್ರಿಣಃ ॥ ೯೮ ॥
ಸಫಲಾ ಸ್ವಾಮಿಯಾತ್ರಾ ಚ ತೇಷಾಂ ಭವತಿ ಭಾರತ ।
ಕಾರ್ತಿಕ್ಯಾಂಚ ವಿಶೇಷೇಣ ಕಾರ್ತಿಕೇಯಂ ಸಮರ್ಚಯೇತ್ ।
ಯತ್ಫಲಂ ಸ್ವಾಮಿಯಾತ್ರಾಯಾಂ ತತ್ಫಲಂ ಸಮವಾಪ್ನುಯಾತ್ ॥೯೯॥
ಏವಂ ವಿಧಮಿದಂ ಪಾರ್ಥ ಮಹೀಸಾಗರಸಂಗಮಂ ॥ ೧೦೦ ॥
ನಿಮಿತ್ತೀಕೃತ್ಯ ಚಾತ್ಮಾನಂ ಸಾಧ್ವರ್ಥೇ ಲಿಂಗಮರ್ಚಿತಂ ।
ರೋಗಾಭಿಭೂತೋ ರೋಗೈರ್ವಾನಾಮ್ನಾಮಷ್ಟೋತ್ತರಂ ಶತಂ ।
ಜಪ್ತ್ವಾ ಶುಚಿರ್ಬ್ರಹ್ಮಚಾರೀ ಮಾಸಂ ಮುಚ್ಯೇತ ಪಾತಕಾತ್ ॥ ೧೦೧ ॥

---

೯೬. ಇಂತು ಹೇಳಲ್ಪಟ್ಟವನಾಗಿ ಸ್ಕಂದನು ಅಲ್ಲಿ ವಿಘ್ನನಾಯಕನನ್ನು ಪ್ರತಿಷ್ಠಿಸಿದನು. ಆದುದರಿಂದ ಅಲ್ಲಿ ವಿಘ್ನೇಶ್ವರನನ್ನು ನಿತ್ಯದಲ್ಲಿಯೂ, ಚತುರ್ಥಿಯ ದಿನಗಳಲ್ಲಿ ವಿಶೇಷ ಪೂಜೆಗಳಿಂದಲೂ ಅರ್ಚಿಸಬೇಕು.

೯೭. ಈ ವಿಧವಾಗಿ ಕುಮಾರೇಶ್ವರ ಲಿಂಗವನ್ನು ಸ್ಥಾಪಿಸಿ, ಶಿವನಿಂದ ದುರ್ಲಭಗಳಾದ ವರಗಳನ್ನು ಪಡೆದು ಷಣ್ಮುಖಸ್ವಾಮಿಯು ತಾನು ಕೃತ ಕೃತ್ಯನಾದೆನೆಂದು ಮನಸ್ಸಿನಲ್ಲಿಯೇ ಸಂತೋಷಗೊಂಡನು.

೯೮-೯೯. ಅಲ್ಲದೆ ಅಲ್ಲಿಯೇ ಅಂಶರೂಪದಿಂದ ಕುಮಾರೇಶ್ವರನ ಸನ್ನಿಧಿಯಲ್ಲಿ ನಿಂತನು. ಎಲೈ ಪಾರ್ಥನೆ! ತೀರ್ಥಯಾತ್ರೆಯನ್ನು ಮಾಡುವವರು ಇಲ್ಲಿ ನೆಲಸಿರುವ ಕುಮಾರೇಶ್ವರನನ್ನು ನೋಡಿ ಸೇವಿಸಿದರೆ ಅವರ ಯಾತ್ರೆಯು ಫಲದಾಯಕವಾಗುವುದು. ಅಲ್ಲಿರುವ ಕಾರ್ತಿಕೇಯನನ್ನು ಕಾರ್ತೀಕ ಮಾಸದ ಪೌರ್ಣಿಮೆಯಲ್ಲಿ ವಿಶೇಷ ವಿಧಾನಗಳಿಂದ ಪೂಜಿಸಲು, ಸ್ವಾಮಿಯಾತ್ರೆಯ ಸಂಪೂರ್ಣ ಫಲವನ್ನು ಮನುಷ್ಯನು ಹೊಂದುವನು.

೧೦೦-೧೦೧. ಎಲೈ ಅರ್ಜುನನೆ! ಈ ಮಹೀಸಾಗರ ಕ್ಷೇತ್ರವು ಇಂತಹ ಉತ್ತಮ ಫಲದಾಯಕವಾಗಿರುವುದು. ಆದುದರಿಂದಲೇ ನಾನು ನನ್ನನ್ನೇ ನಿಮಿತ್ತವನ್ನಾಗಿ ಮಾಡಿಕೊಂಡು ಸಾಧುಸತ್ಪುರುಷರ ಹಿತಕ್ಕಾಗಿ ಈ ಕುಮಾರೇಶ್ವರ ಲಿಂಗವನ್ನು ಪೂಜಿಸುವೆನು. ಕುಮಾರೇಶ್ವರನ ಅಷ್ಟೋತ್ತರ ಶತನಾಮಗಳನ್ನು ಒಂದು ತಿಂಗಳ ಕಾಲ ನಿಯಮದಿಂದ ಜಪಿಸಲು ರೋಗಿಯು ತನ್ನ ರೋಗ

**ಏತದಾರಾಧ್ಯ ಸಂಜಾತಾ ಅಜರಾಮಾದಯಃ ಪುರಾ ॥ ೧೧೨ ॥**
**ಶತಸಂಖ್ಯಾಬಲಂ ರಾಜ್ಯಂ ರುದ್ರಲೋಕಂ ಚ ಭೇಜಿರೇ ।**
**ಜಾಮದಗ್ನ್ಯಸ್ತ್ವಿದಂ ಲಿಂಗಮಾರಾಧ್ಯ ಚ ಸಮಾಯುತಂ ।**
**ಲೇಭೇ ಕುಠಾರಮುಜ್ಜ್ವಹ್ರೇ ಯೇನಾರ್ಜುನಭುಜಾನ್ಯಧಿ ॥ ೧೧೩ ॥**
**ಅಗ್ರತೋ ದೇವದೇವಸ್ಯ ಜ್ಞಾತ್ವಾ ತೀರ್ಥೇ ಮಹಾಗುಣಾನ್ ।**
**ರಾಮೇಶ್ವರಮಿತಿ ಖ್ಯಾತಂ ಸ್ಥಾಪಿತಂ ಲಿಂಗಮುತ್ತಮಂ ॥ ೧೧೪ ॥**
**ತಚ್ಚ ಯೋಽಭ್ಯರ್ಚಯೋದ್ಭಕ್ತ್ಯಾ ರುದ್ರಲೋಕಂ ಸ ಗಚ್ಛತಿ ।**
**ಪ್ರೀತಃ ಸ್ಯಾತ್ತಸ್ಯ ರಾಮಶ್ಚ ಕುಮಾರೇಶಶ್ಚ ಫಾಲ್ಗುನ ॥ ೧೧೫ ॥**
**ಇತಿ ಸಂಕ್ಷೇಪತಃ ಪ್ರೋಕ್ತಂ ಕುಮಾರೇಶಸ್ಯ ವರ್ಣನಂ ॥ ೧೧೬ ॥**
**ಕುಮಾರೇಶಸ್ಯ ಮಹಾತ್ಮ್ಯಂ ಕೀರ್ತಯೇದ್ಯಸ್ತದಗ್ರತಃ ।**
**ಯೇ ಚ ಶೃಣ್ವಂತ್ಯನುದಿನಂ ರುದ್ರಲೋಕೇ ವಸಂತಿ ತೇ ॥ ೧೧೭ ॥**
**ಅಸ್ಯ ಲಿಂಗಸ್ಯ ಮಾಹಾತ್ಮ್ಯಂ ಶ್ರಾದ್ಧಕಾಲೇ ತು ಯಃ ಪಠೇತ್ ।**
**ಪಿತೃಣಾಮಕ್ಷಯಂ ಶ್ರಾದ್ಧಂ ಜಾಯತೇ ನಾತ್ರ ಸಂಶಯಃ ॥ ೧೧೮ ॥**

---

ಗಳಿಂದ ಬಿಡುಗಡೆಯನ್ನು ಹೊಂದುವನು. ಮತ್ತು ಬ್ರಹ್ಮಚಾರಿಯಾದವನು ಸಕಲ ಪಾಪಗಳನ್ನೂ ಕಳೆದುಕೊಳ್ಳುವನು.

೧೧೨–೧೧೩. ಈ ಲಿಂಗವನ್ನು ಪೂಜಿಸಿಯೇ ಪೂರ್ವದಲ್ಲಿ ಅಜರಾಮಾದಿಗಳು ಶತಸಂಖ್ಯಾ ಸೈನ್ಯಗಳುಳ್ಳ ರಾಜ್ಯಗಳನ್ನೂ ಸಂಪಾದಿಸಿ ರುದ್ರಲೋಕವನ್ನು ಸೇರುವವರಾದರು. ಪರಶುರಾಮನೂ ಕೂಡ ಈ ಮಹಾಲಿಂಗದ ಪೂಜೆಯಿಂದಲೇ ಹತ್ತುಸಾವಿರವರ್ಷಗಳಮೇಲೆ ಕಾರ್ತವೀರ್ಯಾರ್ಜುನನನ್ನು ನಿಗ್ರಹಿಸಲು ಸಾಧನವಾದ ಕುಠಾರವನ್ನು ಪಡೆದನು.

೧೧೪. ಮಹಾದೇವನ ಎದುರಿನಲ್ಲಿರುವ ತೀರ್ಥದ ಉತ್ತಮ ಗುಣಗಳನ್ನು ತಿಳಿದು ಆತನು ರಾಮೇಶ್ವರನೆಂಬ ಹೆಸರಿನಿಂದ ವಿಖ್ಯಾತವಾದ ಪರಮಪವಿತ್ರ ಲಿಂಗವನ್ನು ಸ್ಥಾಪಿಸಿದನು.

೧೧೫. ಎಲೈ ಫಾಲ್ಗುನನೆ! ಆ ಲಿಂಗವನ್ನು ಯಾವನು ಭಕ್ತಿಯಿಂದ ಪೂಜಿಸುವನೊ ಅವನು ರುದ್ರಲೋಕವನ್ನು ಸೇರುವನು. ಮತ್ತು ಪರಶುರಾಮ ಕುಮಾರೇಶ್ವರರ ಅನುಗ್ರಹಕ್ಕೆ ಪಾತ್ರನಾಗುವನು.

೧೧೬–೧೧೮. ಇಂತು ಕುಮಾರೇಶ್ವರನ ವೈಭವವನ್ನು ಸಂಕ್ಷೇಪವಾಗಿ ನಿನಗೆ ತಿಳಿಸಿರುವೆನು. ಈ ಮಾಹಾತ್ಮ್ಯವನ್ನು ಪ್ರತಿ ನಿತ್ಯವೂ ಯಾರು ದೇವರ ಸನ್ನಿಧಿಯಲ್ಲಿ ಪಠಿಸುವರೊ, ಯಾರು ಪ್ರತಿದಿನವೂ ಕೇಳುವರೊ, ಅವರು ರುದ್ರಲೋಕದಲ್ಲಿ ವಾಸಮಾಡುವರು. ಈ ಲಿಂಗದ ಮಹಾತ್ಮ್ಯವನ್ನು ಶ್ರಾದ್ಧ

ಅಸ್ಯಲಿಂಗಸ್ಯ ಮಹಾತ್ಮ್ಯಂ ಗರ್ಭಿಣೀಂ ಶ್ರಾವಯೇದ್ಯದಿ ।
ಗುಣವಾನ್ಜಾಯತೇ ಪುತ್ರಃ ಕನ್ಯಾ ಚಾಪಿ ಪತಿವ್ರತಾ ॥ ೧೯೦ ॥
ಏತತ್ಪುಣ್ಯಂ ಪಾಪಹರಂ ಧರ್ಮ್ಯಂ ಚಾಹ್ಲಾದಕಾರಕಂ ।
ಪಠತಾಂ ಶೃಣ್ವತಾಂ ಚಾಪಿ ಸರ್ವಾಭೀಷ್ಟಫಲಪ್ರದಂ ॥ ೧೧೦ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪ್ರಥಮೇ ಮಾಹೇಶ್ವರಖಂಡೇ ಕೌಮಾರಿಕಾಖಂಡೇ
"ಕುಮಾರೇಶ ಸ್ಥಾಪನಪೂರ್ವಕ ಶಿವಮಾಹಾತ್ಮ್ಯವರ್ಣನಂ" ನಾಮ
ಚತುಸ್ತ್ರಿಂಶೋಧ್ಯಾಯಃ

---

ಕಾಲಗಳಲ್ಲಿ ಪಠನಮಾಡುವುದರಿಂದ ಪಿತೃದೇವತೆಗಳಿಗೆ ಅಕ್ಷಯತೃಪ್ತಿಯುಂಟಾಗುವುದರಲ್ಲಿ ಸಂದೇಹವಿಲ್ಲ.

೧೦೯. ಕುಮಾರೇಶ್ವರಲಿಂಗದ ವೈಭವವನ್ನು ಗರ್ಭಿಣಿಗೆ ಶ್ರವಣಮಾಡಿಸುವುದರಿಂದ ಆಕೆಗೆ ಗುಣವಂತನಾದ ಪುತ್ರನಾಗಲಿ ಪತಿಭಕ್ತಿಪಾರಾಯಣೆಯಾದ ಕನ್ಯಾರತ್ನವಾಗಲಿ ಜನಿಸುವರು.

೧೧೦. ಈ ಚರಿತ್ರೆಯು ಪುಣ್ಯಪ್ರದವೂ, ಪಾಪಹಾರಕವೂ, ಧರ್ಮವರ್ಧಕವೂ, ಸಂತೋಷಕಾರಕವೂ, ಆಗಿ ಪಾಠಕರಿಗೂ ಶ್ರೋತೃಗಳಿಗೂ ಸಕಲ ಇಷ್ಟಾರ್ಥಗಳನ್ನು ನೆರವೇರಿಸುವುದು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಎರಡನೆಯ ಕೌಮಾರಿಕಾಖಂಡದಲ್ಲಿ
"ಕುಮಾರೇಶ ಸ್ಥಾಪನಪೂರ್ವಕ ಶಿವಮಾಹಾತ್ಮ್ಯವರ್ಣನ"ವೆಂಬ
ಮೂವತ್ತನಾಲ್ಕನೆಯ ಅಧ್ಯಾಯವು ಮುಗಿದುದು

॥ ಶ್ರೀ ॥

# ಅಥ ಪಂಚತ್ರಿಂಶೋಽಧ್ಯಾಯಃ

## ಸ್ತಂಭೇಶ್ವರ ಮಾಹಾತ್ಮ್ಯವರ್ಣನಂ

ನಾರದ ಉವಾಚ:—

**ಕುಮಾರೇಣ ಸ್ಥಾಪಿತೋಽತ್ರ ಕುಮಾರೇಶಃ ತತಃ ಸುರಾಃ ।**
**ಪ್ರಣಮ್ಯ ಗುಹಮೂಚುಶ್ಚ ಪ್ರಬದ್ಧಕರಸಂಪುಟಾಃ ॥ ೧ ॥**
**ಕಿಂಚಿದ್ವಿಜ್ಞಾಪಯಿಷ್ಯಾಮೋ ವಯಂ ತ್ವಾಂ ಶ್ರುಣು ತತ್ತ್ವತಃ ।**
**ಪೂರ್ವಪ್ರಸಿದ್ಧ ಆಚಾರಃ ಪ್ರೋಚ್ಯತೇ ಜಯಿನಾಮಯಂ ॥ ೨ ॥**
**ಜಯಂತಿ ಯೇ ರಣೇ ಶತ್ರೂಂಸ್ತೈಃ ಕಾರ್ಯಾಃ ಸ್ತಂಭಚಿಹ್ನಕಾಃ ।**
**ತಸ್ಮಾತ್ತ್ವನ ಜಯೋದ್ಯೋತನಿಮಿತ್ತಂ ಸ್ತಂಭಮುತ್ತಮಂ ।**
**ನಿಕ್ಷಿಪಾಮ ವಯಂ ಯಾವತ್ತ್ವಮನುಜ್ಞಾತುಮರ್ಹಸಿ ॥ ೩ ॥**
**ವಿಶ್ವಕರ್ಮಕೃತಂ ಯಚ್ಚ ತೃತೀಯಂ ಲಿಂಗಮುತ್ತಮಂ ।**
**ತಸ್ಯ ಸ್ತಂಭಾಗ್ರತಸ್ತಂ ಚ ಸಂಸ್ಥಾಪಯ ಶಿವಾತ್ಮಜ ॥ ೪ ॥**
**ಏವಮುಕ್ತೋ ಸುರೈಃ ಸ್ಕಂದಸ್ತಥೇತ್ಯಾಹ ಮಹಾಮನಾಃ ॥ ೫ ॥**

---

## ಕನ್ನಡದ ಅನುವಾದ

### ಸ್ತಂಭೇಶ್ವರ ಮಾಹಾತ್ಮ್ಯ ವರ್ಣನ

೧. ನಾರದರು ಹೇಳುತ್ತಾರೆ:—ಇಂತು ಕುಮಾರಸ್ವಾಮಿಯಿಂದ ಕುಮಾರೇಶ್ವರ ಲಿಂಗವು ಸ್ಥಾಪಿಸಲ್ಪಟ್ಟಿತು. ಬಳಿಕ ದೇವತೆಗಳೆಲ್ಲರೂ ಒಟ್ಟುಗೂಡಿ ಕೈಗಳನ್ನು ಮುಗಿದು ಗುಹನನ್ನು ಕುರಿತು ಹೇಳತೊಡಗಿದರು.

೨. "ಎಲೈ ಸ್ಕಂದನೆ! ನಾವು ಈ ವಿಷಯವನ್ನು ನಿನ್ನಲ್ಲಿ ಸ್ವಲ್ಪ ವಿಜ್ಞಾಪಿಸಿಕೊಳ್ಳಬಯಸುವೆವು. ಸಾವಧಾನವಾಗಿ ಲಾಲಿಸು. ಯುದ್ಧಗಳಲ್ಲಿ ಜಯವನ್ನು ಹೊಂದಿದವರಿಗೆ ಇದು ಪೂರ್ವಕಾಲದಿಂದ ಆಚಾರವಾಗಿ ಪ್ರಸಿದ್ಧವಾಗಿರುವುದು.

೩. ಯಾರು ರಣರಂಗದಲ್ಲಿ ಶತ್ರುಗಳನ್ನು ಜಯಿಸುವರೊ ಅವರು ವಿಜಯ ಸ್ತಂಭವನ್ನು ಸ್ಥಾಪಿಸುವ ಸಂಪ್ರದಾಯವಿರುವುದು. ಆದುದರಿಂದ ನೀನೆಸಗಿದ ರಾಕ್ಷಸ ವಿಜಯದ ಸೂಚಕವಾಗಿ ಉತ್ತಮವಾದ ಸ್ತಂಭವನ್ನು ನಿಲ್ಲಿಸುವೆವು. ನೀನು ಅನುಜ್ಞೆಯನ್ನು ಕೊಡಬೇಕು.

೪. ವಿಶ್ವಕರ್ಮನಿಂದ ಮಾಡಲ್ಪಟ್ಟ ಮೂರನೆಯ ಲಿಂಗವನ್ನು ನೀನೇ ಆ ವಿಜಯಸ್ತಂಭದ ಅಗ್ರದಲ್ಲಿ ಸ್ಥಾಪನೆಯನ್ನು ಮಾಡು."

೫. ಇಂತೆಂದ ದೇವತೆಗಳಿಗೆ ಮಹಾತ್ಮನಾದ ಸ್ಕಂದನು ಅಂತೆಯೇ ಆಗಲೆಂದು ಅಪ್ಪಣೆಯನ್ನು ಕೊಟ್ಟನು.

ತತೋ ಹೃಷ್ಟಾಃ ಸುರಗಣಾಃ ಶಕ್ರಾದ್ಯಾಃ ಸ್ತಂಭಮುತ್ತಮಂ ।
ಜಾಂಬೂನದಮಯಂ ಶುಭ್ರಂ ರಣಭೂಮೌ ವಿನಿಕ್ಷಿಪುಃ ॥ ೬ ॥
ಪರಿತಃ ಸ್ಥಂಡಿಲಂ ದಿಕ್ಷು ಸರ್ವರತ್ನಮಯಂ ತು ತೇ ।
ತತ್ರ ಹೃಷ್ಟಾಶ್ಚಾಪ್ಸರಸೋ ನನೃತುರ್ದಶಧಾ ಶುಭಾಃ ॥ ೭ ॥
ಮಾತರೋ ಮಂಗಳಾನ್ಯಸ್ಯ ಜಗುಃ ಸ್ಕಂದಸ್ಯ ನಂದಿತಾಃ ।
ಇಂದ್ರಾದ್ಯಾ ನನೃತುಸ್ತತ್ರ ಸ್ವಯಂ ವಿಷ್ಣುಶ್ಚ ವಾದಕಃ ।
ಪೇತುಃ ಖಾತ್ಪುಷ್ಪವರ್ಷಾಣಿ ದೇವವಾದ್ಯಾನಿ ಸಸ್ವನುಃ ॥ ೮ ॥
ಏವಂ ಸ್ತಂಭಂ ಸಮಾರೋಪ್ಯ ಜಯಾಖ್ಯಂ ವಿಶ್ವನಂದಕಃ ॥ ೯ ॥
ಸ್ತಂಭೇಶ್ವರಸ್ತತೋ ದೇವಃ ಸ್ಥಾಪಿತಸ್ತ್ರ್ಯಕ್ಷಸೂನುನಾ ।
ವಿರಿಂಚಿಪ್ರಮುಖೈರ್ದೇವೈಃ ಜಾತಾನಂದೈಃ ಸಮಂ ತದಾ ॥ ೧೦ ॥
ಹರಿಹರಾದಿತ್ಯಯುಕ್ತೈಸ್ತೈಃ ಸೇಂದ್ರೈರ್ಮುನಿಗಣೈರಪಿ ।
ತಸ್ಯೈವ ಪಶ್ಚಿಮೇ ಭಾಗೇ ಶಕ್ತ್ಯಗ್ರೇಣ ಮಹಾತ್ಮನಾ ॥ ೧೧ ॥
ಗುಹೇನ ನಿರ್ಮಿತಃ ಕೂಪೋ ಗಂಗಾ ತತ್ರ ತಲೋದ್ಭವಾ ।
ಮಾಘಸ್ಯ ಚ ಚತುರ್ದಶ್ಯಾಂ ಕೃಷ್ಣಾಯಾಂ ಪಿತೃತರ್ಪಣಂ ॥ ೧೨ ॥

---

೬–೭. ಬಳಿಕ ಇಂದ್ರಾದಿ ದೇವತೆಗಳು ಸಂತೋಷದಿಂದ ಪವಿತ್ರವೂ, ಚಿನ್ನದಿಂದ ಮಾಡಿದುದೂ ಆದ ಜಯಸ್ತಂಭವನ್ನು ಯುದ್ಧಭೂಮಿಯಲ್ಲಿ ಸ್ಥಾಪಿಸಿದರು. ಅದರ ಸುತ್ತಲೂ ನವರತ್ನಮಯವಾದ ಯಜ್ಞಭೂಮಿಯನ್ನು ನಿರ್ಮಿಸಿದರು. ಆಗ ಅಪ್ಸರಸ್ತ್ರೀಯರೆಲ್ಲರೂ ಸಂತೋಷದಿಂದ ಉತ್ತಮ ವೇಷಧಾರಿಗಳಾಗಿ ಹತ್ತು ವಿಧಗಳಾದ ನಾಟ್ಯಗಳನ್ನು ಪ್ರದರ್ಶಿಸಿದರು.

೮. ಮಾತೃಕೆಯರು ಆನಂದದಿಂದ ಷಣ್ಮುಖನಿಗೆ ಮಂಗಳಗೀತೆಗಳನ್ನು ಹಾಡಿದರು. ಇಂದ್ರಾದಿ ದೇವತೆಗಳು ಕುಣಿದಾಡುತ್ತಿರಲು ವಿಷ್ಣುವು ತಾನೇ ವಾದ್ಯಗಳನ್ನು ಬಾಜಿಸುತ್ತಿದ್ದನು. ಆಕಾಶದಿಂದ ಪೂಮಳೆಯು ಸುರಿಯಿತು. ದೇವತೆಗಳ ಮಂಗಳವಾದ್ಯಗಳು ಭೋರ್ಗರೆದುವು.

೯–೧೨. ಇಂತು ಜಗದಾನಂದದಾಯಕನಾದ ಶಿವಕುಮಾರನು ಜಯಸ್ತಂಭವನ್ನು ಸ್ಥಾಪಿಸಿ, ಆನಂದದಿಂದಿದ್ದ ಬ್ರಹ್ಮಾದಿದೇವತೆಗಳಿಂದಲೂ, ಶಿವ, ವಿಷ್ಣು, ಸೂರ್ಯಸಹಿತರಾದ ಇಂದ್ರನೊಡಗೂಡಿದ ಮಹರ್ಷಿಗಣದಿಂದಲೂ ಸಹಿತನಾಗಿ ಆ ಸ್ತಂಭದ ಅಗ್ರಭಾಗದಲ್ಲಿ ಪರಮಪವಿತ್ರವಾದ ಸ್ತಂಭೇಶ್ವರ ಲಿಂಗವನ್ನು ಸ್ಥಾಪಿಸಿದನು. ಅಲ್ಲದೆ ಮಹಾತ್ಮನಾದ ಆ ಗುಹನು ಆ ಲಿಂಗದ ಪಶ್ಚಿಮ ಭಾಗದಲ್ಲಿ ತನ್ನ ಶಕ್ತ್ಯಸ್ತ್ರದ ಕೊನೆಯಿಂದ ಆಳವಾದ ಭಾವಿಯನ್ನು ತೋಡಿ ಅಡಿಯಿಂದ ಪಾತಾಳಗಂಗೆಯನ್ನು ತರಿಸಿದನು. ಎಲೈ ಪಾಂಡುಕುಮಾರನೆ! "ಯಾವನು ಮಾಘಮಾಸದ ಕೃಷ್ಣ ಚತುರ್ದಶಿಯಲ್ಲಿ ಈ ಬಾವಿಯಲ್ಲಿ ಸ್ನಾನ

ಕೂಪೇ ಸ್ನಾನಂ ನರಃ ಕೃತ್ವಾ ಭಕ್ತ್ಯಾ ಯುಃ ಪಾಂಡುನಂದನ ।
ಗಯಾಶ್ರಾದ್ಧೇನ ಯತ್ಪುಣ್ಯಂ ತತ್ಫಲಂ ಲಭತೇ ಸ್ಫುಟಂ ॥ ೧೩ ॥
ಸ್ತಂಭೇಶ್ವರಂ ತತೋ ದೇವಂ ಗಂಧಪುಷ್ಪೈಃ ಪ್ರಪೂಜಯೇತ್ ।
ವಾಜಪೇಯ ಫಲಂ ಪ್ರಾಪ್ಯ ಮೋದತೇ ರುದ್ರಸದ್ಮನಿ ॥ ೧೪ ॥
ಪೌರ್ಣಮಾಸ್ಯಾಮಮಾವಾಸ್ಯಾಂ ಮಹೀಸಾಗರಸಂಗಮೇ ।
ಶ್ರಾದ್ಧಂ ಕೃತ್ವಾ ಚ ಯೋಽಭ್ಯರ್ಚೇತ್ಸ್ತಂಭೇಶ್ವರಮಕಲ್ಮಷಃ ॥ ೧೫ ॥
ಪಿತರಸ್ತಸ್ಯ ತೃಪ್ಯಂತಿ ತೃಪ್ತಾ ಯಚ್ಛಂತಿ ಚಾಶಿಷಃ ।
ಸ ಭಿತ್ತ್ವಾ ಸರ್ವಪಾಪಾನಿ ರುದ್ರಲೋಕೇ ಮಹೀಯತೇ ॥ ೧೬ ॥
ಇತ್ಯಾಹ ಭಗವಾನ್ರುದ್ರಃ ಸ್ಕಂದಸ್ಯ ಪ್ರೀತಯೇ ಪುರಾ ।
ಏವಮೇವ ಚತುರ್ಥಂಚ ಸ್ಥಾಪಿತಂ ಲಿಂಗಮುತ್ತಮಂ ॥ ೧೭ ॥
ಪ್ರಣೇಮುರ್ದೇವತಾಸ್ಸರ್ವೇ ಸಾಧುಸಾಧ್ವಿತಿ ತೇ ಜಗುಃ ॥ ೧೮ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪ್ರಥಮೇ ಮಾಹೇಶ್ವರಖಂಡೇ ಕೌಮಾರಿಕಾಖಂಡೇ
"ಸ್ತಂಭೇಶ್ವರ ಮಾಹಾತ್ಮ್ಯವರ್ಣನಂ" ನಾಮ ಪಂಚತ್ರಿಂಶೋಧ್ಯಾಯಃ

---

ಮಾಡಿ, ಭಕ್ತಿಯುಕ್ತನಾಗಿ ಪಿತೃತರ್ಪಣಗಳನ್ನು ಮಾಡುವನೊ, ಅವನಿಗೆ ಗಯಾ ಶ್ರಾದ್ಧವನ್ನು ಮಾಡಿದ ಉತ್ತಮ ಪುಣ್ಯವು ನಿಸ್ಸಂದೇಹವಾಗಿ ಲಭಿಸುವುದು.

೧೪. ಬಳಿಕ ಸ್ತಂಭೇಶ್ವರನನ್ನು ಗಂಧಪುಷ್ಪಾದಿ ದ್ರವ್ಯಗಳಿಂದ ಪೂಜಿಸಲು ವಾಜಪೇಯವನ್ನು ಮಾಡಿದ ಫಲವನ್ನು ಹೊಂದಿ ರುದ್ರಲೋಕದಲ್ಲಿ ಆನಂದದಿಂದ ವಾಸಿಸುವನು.

೧೫–೧೬. ಈ ಮಹೀಸಾಗರಸಂಗಮ ಕ್ಷೇತ್ರದಲ್ಲಿ ಪೌರ್ಣಿಮಾ, ಅಮಾವಾಸ್ಯೆಗಳಲ್ಲಿ ಶಾದ್ಧಗಳನ್ನುಮಾಡಿ ನಿಷ್ಕಲ್ಮಷವಾದ ಮನಸ್ಸಿನಿಂದ ಸ್ತಂಭೇಶ್ವರನನ್ನು ಅರ್ಚಿಸುವ ಭಕ್ತನ ಪಿತೃದೇವತೆಗಳು ತೃಪ್ತಿಗೊಂಡು ಅವನನ್ನು ಆಶೀರ್ವದಿಸುವರು. ಇಷ್ಟೆಯಲ್ಲದೆ ಅವನು ಸಕಲ ಪಾಪಗಳನ್ನೂ ನಾಶಪಡಿಸಿ ಕೊಂಡು ರುದ್ರಲೋಕದಲ್ಲಿ ಉತ್ತಮ ಸ್ಥಾನವನ್ನು ಪಡೆಯುತ್ತಾನೆ."

೧೭–೧೮. ಇಂತೆಂದು ಭಗವಂತನಾದ ಮಹೇಶ್ವರನು ಷಣ್ಮುಖನಿಗೆ ಪ್ರೀತಿ ಯನ್ನುಂಟುಮಾಡುವನಾಗಿ ಅಪ್ಪಣೆಕೊಡಿಸಿದನು. ಈ ಪ್ರಕಾರ ನಾಲ್ಕನೆಯ ದೊಂದು ಉತ್ತಮವಾದ ಶಿವಲಿಂಗವು ಸ್ಥಾಪಿಸಲ್ಪಟ್ಟಿತು. ಅದಕ್ಕೆ ಸಕಲ ದೇವತೆ ಗಳೂ ಸಾಷ್ಟಾಂಗ ನಮಸ್ಕಾರಗಳನ್ನು ಮಾಡಿ ಸಾಧುಕಾರಗಳನ್ನು ಮಾಡಿದರು.

ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಎರಡನೆಯ ಕೌಮಾರಿಕಾಖಂಡದಲ್ಲಿ
"ಸ್ತಂಭೇಶ್ವರ ಮಾಹಾತ್ಮ್ಯವರ್ಣನ"ವೆಂಬ ಮೂವತ್ತೈದನೆಯ ಅಧ್ಯಾಯವು
ಮುಗಿದುದು

*

॥ ಶ್ರೀಃ ॥

# ಅಥ ಷಟ್ತ್ರಿಂಶೋಽಧ್ಯಾಯಃ

## ಪಂಚಲಿಂಗೋಪಾಖ್ಯಾನ ಸಮಾಪ್ತಿವರ್ಣನಂ

ನಾರದ ಉವಾಚ :—

ಏವಂ ದೃಷ್ಟ್ವಾ ಕ್ಷಿತೌ ತಾನಿ ಲಿಂಗಾನಿ ಹರಸೂನುನಾ ।
ಹರಿಬ್ರಹ್ಮೇಂದ್ರಪ್ರಮುಖಾ ದೇವಾಃ ಪ್ರೋಚುಃ ಪರಸ್ಪರಂ ॥ ೧ ॥
ಅಹೋ ಧನ್ಯಃ ಕುಮಾರೋಽಯಂ ಮಹೀಸಾಗರಸಂಗಮೇ ।
ಯೇನ ಚತ್ವಾರಿ ಲಿಂಗಾನಿ ಸ್ಥಾಪಿತಾನಿ ಸುದುರ್ಲಭೇ ॥ ೨ ॥
ವಯಮಪ್ಯತ್ರ ಶುದ್ಧ್ಯರ್ಥಂ ತೋಷಾರ್ಥಂ ಸ್ಕಂದರುದ್ರಯೋಃ ।
ಸಾಧ್ವರ್ಥೇ ಚಾತ್ಮಲಾಭಾಯ ಕುರ್ಮೋ ಲಿಂಗಪರಂಪರಾಂ ॥ ೩ ॥
ಅಥವಾ ಕೋಟಿಶೋ ದೇವಾ ಮುನಯೋ ನೈವ ಸಂಖ್ಯಯಾ ।
ಸರ್ವೇ ಚೇತ್ಸ್ಥಾಪಯಿಷ್ಯಂತಿ ಲಿಂಗಾನ್ಯತ್ರ ಮಹೀತಟೇ ।
ಪೂಜಾ ತೇಷಾಂ ಕಥಂ ಭಾವಿ ಬಹುತ್ವಾಚ್ಚಾತ್ರ ಪಶ್ಯತೇ ॥ ೪ ॥
ಯಸ್ಯ ರಾಷ್ಟ್ರೇ ರುದ್ರಲಿಂಗಂ ಪೂಜ್ಯತೇ ನೈವ ಶಕ್ತಿತಃ ॥ ೫ ॥

---

### ಕನ್ನಡದ ಅನುವಾದ

#### ಪಂಚಲಿಂಗೋಪಾಖ್ಯಾನ ಸಮಾಪ್ತಿವರ್ಣನ

೧. ನಾರದನು ಹೇಳುತ್ತಾನೆ:—ಈ ವಿಧವಾಗಿ ಭೂಮಿಯಲ್ಲಿ ಷಣ್ಮುಖ ಸ್ವಾಮಿಯು ಸ್ಥಾಪಿಸಿದ ಲಿಂಗಗಳನ್ನು ಕಂಡು ವಿಷ್ಣು, ಬ್ರಹ್ಮ, ಮಹೇಂದ್ರರೇ ಮೊದಲಾದ ದೇವತೆಗಳು ತಮ್ಮ ತಮ್ಮಲ್ಲಿಯೇ ಹೀಗೆ ಹೇಳಿಕೊಳ್ಳತೊಡಗಿದರು.

೨–೩. "ಆಶ್ಚರ್ಯ! ಈ ಕುಮಾರಸ್ವಾಮಿಯು ಪರಮ ಧನ್ಯನು. ಅತ್ಯಂತ ದುರ್ಲಭವಾದ ಈ ಮಹೀಸಾಗರಸಂಗಮದಲ್ಲಿ ನಾಲ್ಕು ಲಿಂಗಗಳನ್ನು ಪ್ರತಿಷ್ಠಿಸಿರುವನು. ನಾವೂ ಸಹ ನಮ್ಮ ಚಿತ್ತಶುದ್ಧಿಗಾಗಿಯೂ, ಷಣ್ಮುಖ ರುದ್ರರ ಪ್ರೀತಿಗಾಗಿಯೂ, ಸಾಧುಗಳ ಸಂತೋಷಕ್ಕಾಗಿಯೂ, ನಮ್ಮ ಮೋಕ್ಷೋಪಾಯವಾಗಿಯೂ ಲಿಂಗಪರಂಪರೆಯನ್ನೇ ಪ್ರತಿಷ್ಠಿಸೋಣ.

೪. ಆದರೆ ದೇವತೆಗಳೂ ಮುನಿಗಳೂ ಕೋಟಿಕೋಟಿಯಾಗಿ ಅಸಂಖ್ಯೇಯರಾಗಿರುವರು. ಈ ಮಹೀಸಾಗರದ ತಟದಲ್ಲಿ ಎಲ್ಲರೂ ಲಿಂಗಗಳನ್ನು ಸ್ಥಾಪಿಸಿದರೆ ಅವುಗಳಿಗೆಲ್ಲ ಮುಂದೆ ಸಾಂಗಪೂಜೆಗಳು ಹೇಗೆ ನಡೆಯಲು ಸಾಧ್ಯವಾಗುವುದು ? ಈ ವಿಷಯದಲ್ಲಿ ಪೂರ್ವಜರ ಗಾಥೆಯು ಇಂತಿರುವುದು.

೫–೬. 'ಯಾವನ ರಾಜ್ಯದಲ್ಲಿ ಸ್ಥಾಪಿತವಾದ ಲಿಂಗವು ಪ್ರಯತ್ನಪೂರ್ವಕವಾಗಿ ಪೂಜಿಸಲ್ಪಡುವುದಿಲ್ಲವೊ, ಆ ರಾಜ್ಯವು ದುರ್ಭಿಕ್ಷ, ವ್ಯಾಧಿ, ಚೋರಾದಿ

ತಸ್ಯ ಸೀದತಿ ತದ್ರಾಷ್ಟ್ರಂ ದುರ್ಭಿಕ್ಷವ್ಯಾಧಿತಸ್ಕರೈಃ ।
ಸಂಭೂಯ ಸ್ಥಾಪಯಿಷ್ಯಾಮೋ ಲಿಂಗಮೇಕಂ ತತಃ ಶುಭಂ ॥ ೬ ॥
ಇತಿ ಕೃತ್ವಾ ಮತಿಂ ಸರ್ವೇ ಪ್ರಾಪ್ಯಾನುಜ್ಞಾಂ ಮಹೇಶ್ವರಾತ್ ।
ಪ್ರಹರ್ಷಿತಾ ಗುಹಶ್ಚೈವ ಹರಿಬ್ರಹ್ಮಮುಖಾಃ ಸುರಾಃ ॥ ೭ ॥
ಭೂಮಿಭಾಗಂ ಶುಭಂ ವೀಕ್ಷ್ಯ ವಿಜನೇ ಲಿಂಗಮುತ್ತಮಂ ।
ಸ್ಥಾಪಯಾಮಾಸುರಥ ತೇ ಸ್ವಯಂ ಬ್ರಹ್ಮವಿನಿರ್ಮಿತಂ ॥ ೮ ॥
ಸಿದ್ಧಾರ್ಥೈಃ ಸ್ಥಾಪಿತಂ ಯಸ್ಮಾದ್ದೇವೈರ್ಬ್ರಹ್ಮಾದಿಭಿಃ ಸ್ವಯಂ ।
ಸಿದ್ಧೇಶ್ವರಮಿತಿ ಪ್ರಾಹ ನಾಮ ಲಿಂಗಸ್ಯ ವೈ ಗುಹಃ ॥ ೯ ॥
ಸರ್ವೈರ್ದೇವೈಸ್ತತ್ರ ಲಿಂಗೇ ಖಾನಿತಂ ಸರ ಉತ್ತಮಂ ।
ಸರ್ವತೀರ್ಥೋದಕೈಃ ಶುಭ್ರೈಃ ಪೂರಿತಂ ಚ ಮಹಾತ್ಮಭಿಃ ॥ ೧೦ ॥
ಏತಸ್ಮಿನ್ನಂತರೇ ಪಾರ್ಥ ಪಾತಾಲಾಚ್ಛೇಷನಂದನಃ ।
ಕುಮುದೋನಾಮ ಆಗತ್ಯ ಪ್ರಾಹ ಶೇಷಾಹಿಪನ್ನಗಾನ್ ॥ ೧೧ ॥
ಅಸ್ಮಿನ್ತಾರಕಯುದ್ಧೇ ತು ಪ್ರಲಂಬೋ ನಾಮ ದಾನವಃ ।
ಪಲಾಯಿತ್ವಾ ಸ್ಕಂದಭೀತ್ಯಾ ಪಾಪಃ ಪಾತಾಲಮಾವಿಶತ್ ॥ ೧೨ ॥

---

ಪೀಡೆಗಳಿಂದ ಕಷ್ಟಗಳಿಗೊಳಗಾಗುವುದು. ಆದುದರಿಂದ ನಾವೆಲ್ಲರೂ ಒಟ್ಟಾಗಿ ಒಂದೇ ಒಂದು ಲಿಂಗವನ್ನು ಪ್ರತಿಷ್ಠಿಸೋಣ.' "

೭–೮. ಇಂತು ಎಲ್ಲರೂ ನಿಶ್ಚಯಿಸಿ ಮಹೇಶ್ವರನಿಂದ ಅನುಜ್ಞೆಯನ್ನು ಪಡೆದು ವಿಷ್ಣುಬ್ರಹ್ಮಾದಿದೇವತೆಗಳು ಗುಹನೊಡನೆ ಸಂತೋಷದಿಂದ ಕೂಡಿದವರಾಗಿ ಉತ್ತಮವೂ, ಏಕಾಂತವೂ ಆದ ಒಂದು ಪ್ರದೇಶವನ್ನು ಶೋಧಿಸಿ ಬ್ರಹ್ಮನಿಂದಲೇ ನಿರ್ಮಿತವಾದ ಉತ್ತಮಲಿಂಗವನ್ನು ಅಲ್ಲಿ ಪ್ರತಿಷ್ಠೆಮಾಡಿದರು.

೯–೧೦. ಆಗ ಗುಹನು, "ಕಾರ್ಯಸಿದ್ಧಿಯನ್ನು ಹೊಂದಿದ ಬ್ರಹ್ಮಾದಿದೇವತೆಗಳಿಂದ ಪ್ರತಿಷ್ಠಿತವಾದ ಈ ಲಿಂಗಕ್ಕೆ ಸಿದ್ಧೇಶ್ವರನೆಂಬ ಹೆಸರಾಗಲಿ" ಎಂದು ಅಪ್ಪಣೆ ಮಾಡಿದನು. ಆಗ ಸಕಲ ದೇವತೆಗಳೂ ಆ ಲಿಂಗದ ಸಮೀಪದಲ್ಲಿಯೇ ಉತ್ತಮವಾದ ಸರೋವರವನ್ನು ನಿರ್ಮಿಸಿದರು. ಮಹಾತ್ಮರೆಲ್ಲರೂ ಅದನ್ನು ಶುಭ್ರವಾದ ತೀರ್ಥೋದಕದಿಂದ ತುಂಬಿಸಿದರು.

೧೧. ಎಲೈ ಪಾರ್ಥನೆ! ಇಷ್ಟರಲ್ಲಿಯೇ ಆದಿಶೇಷನ ಮಗನಾದ ಕುಮುದನೆಂಬುವನು ಅಲ್ಲಿಗೈತಂದು ಈ ಮಹೋತ್ಸವಕ್ಕಾಗಿ ನೆರೆದಿರುವ ನಾಗರನ್ನು ಕುರಿತು ಪಾತಾಳದ ಸ್ಥಿತಿಯನ್ನು ಹೇಳತೊಡಗಿದನು.

೧೨. "ಎಲೈ ನಾಗರಿರಾ! ಈ ತಾರಕಾಸುರಯುದ್ಧದಲ್ಲಿ ಷಣ್ಮುಖನಿಗೆ ಭಯಗೊಂಡು ಓಡಿಹೋದ ಪ್ರಲಂಬನೆಂಬ ರಾಕ್ಷಸನು ಪಾತಾಲವನ್ನು ಹೊಕ್ಕಿರುವನು.

ಸ ವೋ ವಸೂನಿ ಪುತ್ರಾಂಶ್ಚ ಭಾರ್ಯಾಃ ಕನ್ಯಾ ಗೃಹಾಣಿ ಚ ।
ವಿಧ್ವಂಸಯತಿ ನಾಗೇಂದ್ರಾಃ ಶೀಘ್ರಂ ಧಾವತ ಧಾವತ ॥ ೧೩ ॥
ಶೇಷಾತ್ಮಜಸ್ಯ ತದ್ವಾಕ್ಯಂ ಕುಮುದಸ್ಯ ನಿಶಮ್ಯ ತೇ ।
ಔತ್ಸುಕ್ಯಮಾಪುರ್ನಾಗೇಂದ್ರಾ ಯಾಮ ಯಾಮೇತಿ ವಾದಿನಃ ॥ ೧೪ ॥
ತಾನ್ನಿವಾರ್ಯ ತತಃ ಸ್ಕಂದಃ ಕ್ರುದ್ಧಃ ಶಕ್ತಿಮಥಾದದೇ ।
ಪಾತಾಲಾಯ ಮುಮೋಚಾಥ ಪ್ರೋಚ್ಯ ದೈತ್ಯೋ ನಿಹನ್ಯತಾಂ ॥ ೧೫ ॥
ತತಃ ಸ್ಕಂದಭುಜೋತ್ಸೃಷ್ಟಾ ಭುವಂ ನಿರ್ಭಿದ್ಯ ವೇಗತಃ ।
ಪ್ರವಿಷ್ಟಾ ಸಹಸಾ ಶಕ್ತಿರ್ಯಥಾ ದೈವಂ ನರಂ ಪ್ರತಿ ॥ ೧೬ ॥
ಸಾ ತಂ ಹತ್ವಾ ಪ್ರಲಂಬಂ ಚ ಕೋಟಿಭಿರ್ದಶಭಿರ್ವೃತಂ ।
ನಂದಯಿತ್ವಾ ಗತಾ ನಾಗಾನ್ಜಲಕಲ್ಲೋಲಪೂರ್ವಿಕಾ ॥ ೧೭ ॥
ಯಾಂತ್ಯಾ ಶಕ್ತ್ಯಾ ತಯಾ ಪಾರ್ಥ ಯತ್ಕೃತಂ ವಿವರಂ ಭುವಿ ।
ಪಾತಾಲಗಂಗಾತೋಯೇನ ಪೂರಿತಂ ಪಾಪಹಾರಿಣಾ ॥ ೧೮ ॥

---

೧೩. ಅವನು ನಿಮ್ಮ ಐಶ್ವರ್ಯಗಳನ್ನೂ, ಮಕ್ಕಳನ್ನೂ, ಹೆಂಡಿರನ್ನೂ, ಹೆಣ್ಣುಮಕ್ಕಳನ್ನೂ, ಗೃಹಗಳನ್ನೂ ನಾಶಗೊಳಿಸುತ್ತಿರುವನು. ಆದುದರಿಂದ ನೀವೆಲ್ಲರೂ ಬೇಗ ಬನ್ನಿರಿ.

೧೪. ಶೇಷಾತ್ಮಜನಾದ ಕುಮುದನ ಈ ಮಾತುಗಳನ್ನು ಕೇಳಿ ನಾಗಾಧಿಪರೆಲ್ಲರೂ ಬಹಳ ಸಂಭ್ರಮದಿಂದ ಎದ್ದು "ಹೊರಡೋಣ" ಎಂದು ಕೂಗಾಡುತ್ತಲಿದ್ದರು.

೧೫. ಆಗ ಸ್ಕಂದನು ಕೋಪಗೊಂಡು ಅವರೆಲ್ಲರನ್ನೂ ತಡೆದು ತನ್ನ ಶಕ್ತ್ಯಾಯುಧವನ್ನು ತೆಗೆದು, "ಆ ರಾಕ್ಷಸನನ್ನು ನಿಗ್ರಹಿಸಿ ಬಾ"ರೆಂದು ಆಜ್ಞಾಪಿಸಿ ಪಾತಾಳಕ್ಕೆ ಬೀಸಿದನು.

೧೬. ಆ ಶಕ್ತಿಯಾದರೊ, ಸ್ಕಂದನ ಭುಜಗಳ ಬಲದಿಂದ ಕೂಡಿದುದಾಗಿ ವೇಗದಿಂದ ಭೂಮಿಯನ್ನು ಭೇದಿಸಿಕೊಂಡು, ಅದೃಷ್ಟವು ಮನುಷ್ಯನನ್ನೇ ಗುರಿಯಿಡುವಂತೆ ಆ ರಾಕ್ಷಸನನ್ನೇ ಗುರಿಯಾಗಿಟ್ಟುಕೊಂಡು ಬಂದಿತು.

೧೭. ಆಗಲದು ಹತ್ತುಕೋಟಿ ರಾಕ್ಷಸ ಪರಿವಾರದೊಡನಿದ್ದ ಪ್ರಲಂಬನನ್ನು ಕೊಂದು ನಾಗರಿಗೆ ಪರಮಾನಂದವನ್ನುಂಟುಮಾಡಿ ಪಾತಾಳೋದಕವನ್ನು ಅಲ್ಲಕಲ್ಲೋಲಮಾಡುತ್ತ ಹಿಂದಿರುಗಿತು.

೧೮. ಎಲೈ ಪಾರ್ಥನೆ! ಪಾತಾಳಕ್ಕೆ ಹೋದ ಆ ಶಕ್ತ್ಯಾಯುಧದಿಂದ ಮಾಡಲ್ಪಟ್ಟ ಬಿಲವು ಪಾತಾಳಗಂಗೆಯಿಂದ ತುಂಬಿದುದಾಗಿ ಪಾಪನಾಶಕವೆನಿಸಿತು.

**ತಸ್ಯ ನಾಮ ದದೌ ಸ್ಕಂದಃ ಸಿದ್ಧಕೂಪ ಇತಿ ಸ್ಮೃತಃ ।**
**ಕೃಷ್ಣಾಷ್ಟಮ್ಯಾಂ ಚತುರ್ದಶ್ಯಾಮುಪವಾಸೀ ನರಃ ಸ್ವಯಂ ॥ ೧೯ ॥**
**ಸ್ನಾತ್ವಾ ಕೂಪೇಽರ್ಚಯೇದೀಶಂ ಸಿದ್ಧೇಶ್ವರಮನನ್ಯಧೀಃ ।**
**ಪ್ರಭೂತಭವಸಂಭೂತಪಾಪಂ ತಸ್ಯ ವಿಲೀಯತೇ ॥ ೨೦ ॥**
**ಸಿದ್ಧಕುಂಡೇ ಚ ಯಃ ಸ್ನಾತ್ವಾ ಶ್ರಾದ್ಧಂ ಕುರ್ಯಾದ್ವಿಚಕ್ಷಣಃ ।**
**ಸರ್ವಕಲ್ಮಷನಿರ್ಮುಕ್ತೋ ಭಕ್ತಿಯೋಗ್ಯೋ ಭವೇ ಭವೇ ॥ ೨೧ ॥**
**ವಟಶ್ಚಾಪ್ಯಕ್ಷಯಸ್ತಸ್ಯ ತುಷ್ಟೋ ರುದ್ರೋ ವರಂ ದದೌ ।**
**ಪ್ರಯಾಗವಟತುಲ್ಯೋಽಯಮೇತತ್ಸತ್ಯಂ ನ ಸಂಶಯಃ ॥ ೨೨ ॥**
**ಅತ್ರಾಗತ್ಯ ಮಹಾಭಾಗಃ ಶ್ರಾದ್ಧಂ ಕುರ್ಯಾತ್ಸುಭಕ್ತಿತಃ ।**
**ಪಿತೄಣಾಮಕ್ಷಯಂ ತಚ್ಚ ಸರ್ವೇಷಾಂ ಪಿಂಡಪಾತನಂ ॥ ೨೩ ॥**
**ತತೋ ಬ್ರಹ್ಮಾದಯೋ ದೇವಾಃ ಸ್ಕಂದೇನ ಸಹಿತಾಸ್ತದಾ ।**
**ಸಿದ್ಧಾಂಬಿಕಾಂ ಮಹಾಶಕ್ತಿಂ ಪ್ರಾರ್ಥಯಾಮಾಸುರೀಶ್ವರೀಂ ॥ ೨೪ ॥**
**ತ್ವಯಾ ವಿಷ್ಣೋ ಹಿ ಭಗವಾನ್ಮತ್ಸ್ಯರೂಪೀ ಜನಾರ್ದನಃ ।**
**ಜಗದುದ್ಧಾರಣಾರ್ಥಾಯ ಚಕ್ರೇ ಕರ್ಮಾಣ್ಯನೇಕಶಃ ॥ ೨೫ ॥**

---

೧೯–೨೧. ಇದಕ್ಕೆ ಷಣ್ಮುಖನು ಸಿದ್ಧಕೂಪವೆಂಬ ಹೆಸರನ್ನಿಟ್ಟನು. ಪ್ರತಿ ಮಾಸದ ಕೃಷ್ಣಪಕ್ಷದ ಅಷ್ಟಮೀ ಮತ್ತು ಚತುರ್ದಶೀ ದಿನಗಳಲ್ಲಿ ಉಪವಾಸವನ್ನು ಮಾಡಿ ಮನುಷ್ಯನು ಈ ಸಿದ್ಧಕೂಪದಲ್ಲಿ ಮಿಂದು ತದೇಕಭಕ್ತಿಯಿಂದ ಸಿದ್ಧೇಶ್ವರನನ್ನು ಪೂಜಿಸದರೆ, ಅವನು ಜನ್ಮಜನ್ಮಾಂತರದಲ್ಲಿ ಮಾಡಿದ ಪಾಪಗಳೆಲ್ಲವೂ ನಾಶವಾಗುವುವು. ಯಾವ ಭಕ್ತನು ಈ ಸಿದ್ಧಕೂಪದಲ್ಲಿ ಸ್ನಾನಮಾಡಿ ಪಿತೃಶ್ರಾದ್ಧವನ್ನು ಮಾಡುವನೋ, ಆ ಬುದ್ಧಿವಂತನು ಸಕಲ ಪಾಪಗಳನ್ನೂ ಕಳೆದು ಜನ್ಮಜನ್ಮಾಂತರಗಳಲ್ಲಿಯೂ ಶಿವಭಕ್ತಿಗೆ ಯೋಗ್ಯನಾಗಿರುತ್ತಾನೆ.

೨೨–೨೩. ಅದರ ಸಮೀಪದಲ್ಲಿರುವ ಅಕ್ಷಯ ವಟವೃಕ್ಷಕ್ಕೆ ಸಂತುಷ್ಟನಾದ ರುದ್ರನು ಆ ಸಮಯದಲ್ಲಿಯೇ ಒಂದು ವರವನ್ನು ದಯಪಾಲಿಸಿದನು:— "ಈ ವೃಕ್ಷವು ಪ್ರಯಾಗದಲ್ಲಿರುವ ಅಕ್ಷಯ ವಟವೃಕ್ಷಕ್ಕೆ ಸಮಾನವಾಗಿರುವುದರಲ್ಲಿ ಸಂದೇಹವಿಲ್ಲ. ಇಲ್ಲಿಗೆ ಬಂದು ಭಕ್ತಿಯುಕ್ತನಾಗಿ ಶ್ರಾದ್ಧಕರ್ಮವನ್ನು ಯಾವ ಮಹಾತ್ಮನು ಮಾಡುವನೋ, ಅವನು ಸಮಸ್ತ ಪಿತೃಗಳಿಗೂ ಕೊಡುವ ಪಿಂಡಗಳು ಅಕ್ಷಯಗಳಾಗಿ ಅವರನ್ನು ತೃಪ್ತಿಪಡಿಸುವುವು."

೨೪. ಬಳಿಕ ಸ್ಕಂದನೊಡಗೂಡಿದ ಬ್ರಹ್ಮಾದಿ ದೇವತೆಗಳು ಸರ್ವೇಶ್ವರಿಯಾದ ಮಹಾಶಕ್ತಿಯೆಂಬ ಸಿದ್ಧಾಂಬಿಕೆಯನ್ನು ಪ್ರಾರ್ಥಿಸಿದರು.

೨೫. "ಎಲೌ ಮಾತೆಯೆ! ನಿನ್ನ ಆಶೀಷಬಲದಿಂದಲೇ ಮತ್ಸ್ಯರೂಪಿಯಾದ ನಾರಾಯಣನು ಜಗತ್ತನ್ನು ಉದ್ಧರಿಸಲು ಅನೇಕ ಅದ್ಭುತಕಾರ್ಯಗಳನ್ನು ಮಾಡಲು ಶಕ್ತನಾದನು.

**ಇತಿ ತಾಂ ಪ್ರಾರ್ಥಯಾಮಾಸುರತ್ರ ತ್ಯಾಜ್ಯಂ ನ ತೇ ಶುಭೇ ।**
**ಅತ್ರ ಸ್ಥಿತಾಃ ಸರ್ವ ಇಮೇ ಕ್ಷೇತ್ರಪಾಲಾ ಮಹಾಬಲಾಃ ॥ ೨೬ ॥**
**ಅಷ್ಟಮ್ಯಾಂ ವಾ ಚತುರ್ದಶ್ಯಾಂ ಬಕಪುಷ್ಪೈಶ್ಚ ತ್ವಾಂ ಶುಭೇ ।**
**ಯೇ ಪೂಜಯಂತಿ ತೇ ಪಾಲ್ಯಾಃ ಸರ್ವಾಪತ್ಸು ಚ ಯಾ ಸದಾ ॥ ೨೭ ॥**
**ಏವಮುಕ್ತಾ ಸಿದ್ಧಮಾತಾ ತಥೇತಿ ಪ್ರತ್ಯಪದ್ಯತ ।**
**ಸ್ಥಾಪಯಾಮಾಸುರಥ ತಾಂ ಲಿಂಗಾದುತ್ತರ ಭಾಗತಃ ॥ ೨೮ ॥**
**ತತಃ ಕ್ಷೇತ್ರಪತೀನ್ದೇವಾಶ್ಚತುಷ್ಷಷ್ಟಿಂ ಮಹೇಶ್ವರಂ ।**
**ಸಿದ್ಧೇಯಂ ನಾಮ ಕ್ಷೇತ್ರಸ್ಯ ರಕ್ಷಾರ್ಥಂ ನಿದಧುಃ ಸ್ವಯಂ ॥ ೨೯ ॥**
**ತಂ ಚ ಯೇ ಪೂಜಯಿಷ್ಯಂತಿ ಕಾರ್ಯಾರಂಭೇಷು ಸರ್ವದಾ ।**
**ವರ್ಷೇ ವರ್ಷೇ ರಾಜಮಾಷಬಲಿನಾ ಚ ವಿಶೇಷತಃ ।**
**ತಾನಸೌ ಪಾಲಯೇತ್ತುಷ್ಟಃ ಪಿತಾ ಲೋಕಾನಿವ ಸ್ವಕಾನ್ ॥ ೩೦ ॥**
**ತತಃ ಸಿದ್ಧಿಕೃತೋ ದೇವಾಸ್ತತ್ರ ಸಿದ್ಧಿವಿನಾಯಕಂ ।**
**ಕಪರ್ದಿತನಯಂ ಪ್ರಾರ್ಥ್ಯ ಸ್ಥಾಪಯಾಂಚಕ್ರಿರೇ ಮುದಾ ॥ ೩೧ ॥**

---

೨೬. ನೀನು ಈ ಕ್ಷೇತ್ರವನ್ನು ಬಿಟ್ಟು ಹೊರಡಕೂಡದು. ಇಲ್ಲಿಯೇ ಮಹಾಬಲಶಾಲಿಗಳಾದ ಸಕಲ ಕ್ಷೇತ್ರಪಾಲಕರೂ ನೆಲಸಿರುವರು.

೨೭. ಎಲೌ ಮಂಗಳಾಂಗಿಯೆ! ಅಷ್ಟಮಿಯಲ್ಲಾಗಲಿ ಚತುರ್ದಶಿಯ ದಿನದಲ್ಲಾಗಲಿ ನೈವೇದ್ಯದಿಂದಲೂ, ಪುಷ್ಪಗಳಿಂದಲೂ ಯಾರು ನಿನ್ನನ್ನು ಪೂಜಿಸುವರೊ, ಅವರನ್ನು ನೀನು ಸರ್ವಕಾಲಗಳಲ್ಲಿಯೂ ಸಕಲವಿಧಗಳಾದ ಆಪತ್ತುಗಳಿಂದ ಸಂರಕ್ಷಿಸಬೇಕು."

೨೮. ಈ ಮಾತುಗಳನ್ನು ಕೇಳಿ ಸಿದ್ಧಾಂಬಿಕೆಯು ದೇವತೆಗಳಿಗೆ ಸುಪ್ರಸನ್ನಳಾಗಿ ಅಂತೇ ಆಗಲೆಂದು ಉತ್ತರವಿತ್ತಳು. ಆಗಲಾ ದೇವತೆಗಳು ಲಿಂಗದ ಉತ್ತರಭಾಗದಲ್ಲಿ ಆಕೆಯನ್ನು ಪ್ರತಿಷ್ಠೆಮಾಡಿದರು.

೨೯. ಅರುವತ್ತು ನಾಲ್ಕು ಕ್ಷೇತ್ರ ಪಾಲಕರನ್ನೂ ಅವರಿಗೆ ಒಡೆಯನಾದ ಮಹೇಶ್ವರ ರೂಪಿಯಾದ ಸಿದ್ಧೇಯನೆಂಬ ಕ್ಷೇತ್ರಪತಿಯನ್ನೂ ಆ ಕ್ಷೇತ್ರದ ರಕ್ಷಣಾರ್ಥವಾಗಿ ಸ್ಥಾಪಿಸಿದರು.

೩೦. ಈ ಕ್ಷೇತ್ರಪಾಲಕನನ್ನು ನಿತ್ಯದಲ್ಲಿಯೂ ಕಾರ್ಯಾರಂಭದಲ್ಲಿ ಯಾರು ಪೂಜಿಸುವರೊ, ವರ್ಷವರ್ಷಕ್ಕೂ ವಿಶೇಷರೀತಿಯು ರಾಜಮಾಷವೆಂಬ ಉದ್ದಿನ ನೇವೇದ್ಯವನ್ನು ಮಾಡುವರೊ, ಅವರನ್ನೆಲ್ಲ ಆ ದೇವನು ಸಂತುಷ್ಟನಾಗಿ ತಂದೆಯು ಆಶ್ರಿತರನ್ನೆಂತೋ ಅಂತು ಸಲಹುತ್ತಾನೆ.

೩೧-೩೨. ಬಳಿಕ ಕಾರ್ಯಸಿದ್ಧಿಯನ್ನು ಹೊಂದಿದ ದೇವತೆಗಳು ಕಪರ್ದಿ ತನಯನಾದ ಸಿದ್ಧಿವಿನಾಯಕನನ್ನೂ ಪ್ರಾರ್ಥಿಸಿ ಸಂತೋಷದಿಂದ ಶಿವಪುತ್ರ

ತಂ ಚ ಯೋ ಪೂಜಯಂತ್ಯತ್ರ ಕಾರ್ಯಾರಂಭೇಷು ಸರ್ವದಾ ।
ತೇಷಾಂ ಸಿದ್ಧಿಂ ದದಾತ್ಯೇಷ ಪ್ರಬಲೋ ವಿಘ್ನರಾಡ್ಭವಃ ॥ ೩೨ ॥
ಯದ್ಯತ್ರ ಪೂಜಯೇದ್ಯಸ್ತು ಸತತಂ ಸಿದ್ಧಸಪ್ತಕಂ ॥ ೩೩ ॥
ಪಠೇದ್ವಾ ಸ್ಮರತೇ ವಾಽಪಿ ಸರ್ವದೋಷೈರ್ವಿಮುಚ್ಯತೇ ॥ ೩೪ ॥
ಸಿದ್ಧೇಶ್ವರಃ ಸಿದ್ಧವಟಶ್ಚ ಸಾಕ್ಷಾತ್ಸಿದ್ಧಾಂಬಿಕಾ ಸಿದ್ಧವಿನಾಯಕಶ್ಚ ।
ಸಿದ್ಧೇಯಕ್ಷೇತ್ರಾಧಿಪತಿಶ್ಚ ಸಿದ್ಧಸರಸ್ತಥಾ ಸಿದ್ಧಕೂಪಶ್ಚ ಸಪ್ತ ॥ ೩೫ ॥
ಅತ್ರ ತುಷ್ಟಃ ದದೌ ರುದ್ರಃ ಸುರಾಣಾಂ ದುರ್ಲಭಾನ್ವರಾನ್ ।
ವೈಶಾಖಮಾಸಸ್ಯಾಷ್ಟಮ್ಯಾಂ ಕೃಷ್ಣಾಯಾಂ ಸಿದ್ಧಕೂಪಕೇ ।
ಸ್ನಾತ್ವಾ ಪಿಂಡಾನ್ವಟೇ ಕೃತ್ವಾ ಪೂಜಯನ್ಮಾಂ ಚ ಸಿದ್ಧಿಭಾಕ್ ॥ ೩೬ ॥
ಸದಾ ಯೋಽಭ್ಯರ್ಚಯೇನ್ಮಾಂಚ ಬ್ರಹ್ಮಚಾರೀ ಜಿತೇಂದ್ರಿಯಃ ।
ಅಷ್ಟಾವಭೀಷ್ಟಕರಾ ನಿತ್ಯಂ ಭವೇಯುಸ್ತಸ್ಯ ಸಿದ್ಧಯಃ ॥ ೩೭ ॥

---

ನಾದ ಆತನ ಮೂರ್ತಿಯನ್ನೂ ಅಲ್ಲಿಯೇ ಸ್ಥಾಪಿಸಿದರು. ಅಯ್ಯಾ ಪಾಂಡು ಕುಮಾರನೇ! ಪವಿತ್ರವಾದ ಈ ಕ್ಷೇತ್ರದಲ್ಲಿ ಈ ರೀತಿ ದೇವತೆಗಳಿಂದ ಸ್ಥಾಪಿತ ನಾದ ಆ ಸಿದ್ಧಿವಿನಾಯಕನನ್ನು ಯಾವಾಗಲೂ ಕಾರ್ಯಾರಂಭದಲ್ಲಿ ಯಾರು ಪೂಜಿಸುವರೊ, ಅವರಿಗೆ ಪ್ರಬಲನಾದ ಆ ವಿಘ್ನೇಶ್ವರನು ಕಾರ್ಯಸಿದ್ಧಿಯ ನ್ನುಂಟುಮಾಡುವನು.

೩೩–೩೪. ಇಂತು ಈ ಕ್ಷೇತ್ರದಲ್ಲಿ ಸಮಸ್ತ ದೇವತೆಗಳಿಂದಲೂ ಪ್ರತಿಷ್ಠಿತ ವಾಗಿರುವ ಸಿದ್ಧಸಪ್ತಕವನ್ನು ಯಾವನು ನಿತ್ಯವೂ ಪೂಜಿಸುವನೊ, ದರ್ಶನ ಮಾಡುವನೊ, ಅಥವಾ ಮನಸ್ಸಿನಲ್ಲಿಯೇ ಸ್ಮರಿಸುವನೊ ಅವನು ಸಕಲ ಪಾಪ ಗಳಿಂದಲೂ ವಿಮುಕ್ತನಾಗುವನು.

೩೫. ಆ ಸಪ್ತವಿಶೇಷಗಳಾವುವೆಂದರೆ ಸಿದ್ಧೇಶ್ವರ, ಸಿದ್ಧವಟ, ಸಿದ್ಧಾಂಬಿಕೆ, ಸಿದ್ಧಿವಿನಾಯಕ, ಸಿದ್ಧೇಯನೆಂಬ ಕ್ಷೇತ್ರಪಾಲಕ, ಸಿದ್ಧಸರೋವರ ಮತ್ತು ಸಿದ್ಧಕೂಪ.

೩೬. ದೇವತೆಗಳೆಸಗಿದ ಈ ಕಾರ್ಯಕಲಾಪಗಳಿಂದ ಸಂತೋಷಗೊಂಡ ಮಹೇಶ್ವರನು ಅವರಿಗೆ ಅತ್ಯಂತ ದುರ್ಲಭಗಳಾದ ವರಗಳನ್ನು ಈ ರೀತಿ ಅನುಗ್ರಹಿಸಿಕೊಟ್ಟನು. "ವೈಶಾಖಮಾಸದ ಕೃಷ್ಣಾಷ್ಟಮಿಯ ದಿನ ಸಿದ್ಧಕೂಪ ದಲ್ಲಿ ಸ್ನಾನವನ್ನುಮಾಡಿ ಅಕ್ಷಯವಟದ ಛಾಯೆಯಲ್ಲಿ ಪಿಂಡಗಳನ್ನಿತ್ತು ನನ್ನನ್ನು ಪೂಜಿಸುವ ಮಾನವನಿಗೆ ಇಷ್ಟಾರ್ಥಸಿದ್ಧಿಯಾಗುವುದು.

೩೭. ಯಾವನು ಬ್ರಹ್ಮಚಾರಿಯೂ, ಜಿತೇಂದ್ರಿಯನೂ ಆಗಿ, ನಿತ್ಯವೂ ನನ್ನನ್ನು ವಿಧ್ಯುಕ್ತರೀತಿಯಿಂದ ಪೂಜಿಸುವನೊ, ಅವನಿಗೆ ಅಣಿಯಾದ್ಯಷ್ಟ ಸಿದ್ಧಿಗಳೂ ಶಾಶ್ವತವಾಗಿ ಈಪ್ಸಿತಗಳನ್ನು ಕೈಗೂಡಿಸುವುವು.

ಮಂತ್ರಜಾಪ್ಯಂ ಬಲಿಂ ಹೋಮಮತ್ರ ಯಃ ಕುರುತೇ ನರಃ ।
ಏಕಚಿತ್ತಃ ಶುಚಿರ್ಭೂತ್ವಾ ಸೋಽಭೀಷ್ಟಾಂ ಸಿದ್ಧಿಮಾಪ್ನುಯಾತ್ ॥
ಸಮಾಹಿತಮನಾಶ್ಚಾಥ ಸಿದ್ಧೇಶಂ ಯಸ್ತು ಪಶ್ಯತಿ ।
ತಸ್ಯ ಸಿದ್ಧಿರ್ಭವತ್ಯೇವ ವಿಘ್ನೈರ್ನಪ್ರತಿಹನ್ಯತೇ ॥ ೩೯ ॥
ಸಿದ್ಧಾಂಬಿಕಾ ಮಹಾದೇವೀ ಹ್ಯತ್ರ ಸನ್ನಿಹಿತಾಸ್ತಿ ಯಾ ।
ಸಿದ್ಧಿದಾ ಸಾಧಕೇಂದ್ರಾಣಾಂ ಮಹಾವಿದ್ಯಾಂ ಜಪಂತಿ ಯೇ ॥ ೪೦ ॥
ಧೀರೇಭ್ಯೋ ಬ್ರಹ್ಮಚಾರಿಭ್ಯಃ ಸತ್ಯಚಿತ್ತೇಭ್ಯ ಏವ ಚ ।
ಮಂತ್ರಜಾಪ್ಯಾದ್ದದಾತ್ಯೇಷಾ ಸರ್ವಸಿದ್ಧೀರ್ಯಥೇಪ್ಸಿತಾಃ ॥ ೪೧ ॥
ಪಾತಾಲಸ್ಯ ಬಿಲಂ ಚೈತದ್ಗುಹಶಕ್ತ್ಯಾ ಕೃತಂ ಮಹತ್ ॥ ೪೨ ॥
ಸಿದ್ಧಾಂಬಿಕಾಪ್ರಸಾದೇನ ವಿಘ್ನಕ್ಷೇತ್ರಪಯೋರ್ಮಮ ।
ಪ್ರತ್ಯಕ್ಷಂ ಭವಿತಾ ಯತ್ರ ನಾನಾಶ್ಚರ್ಯಾಣಿ ಭೂರಿಶಃ ॥ ೪೩ ॥
ಅತ್ರ ಸಿದ್ಧಿಂ ಪ್ರಯಾಸ್ಯಂತಿ ಕೋಟಿಶಃ ಪುರುಷಾಃ ಸುರಾಃ ।
ವಿದ್ಯಾಧರತ್ವಂ ದೇವತ್ವಂ ಗಂಧರ್ವತ್ವಂ ಚ ನಾಗತಾ ।
ಯಕ್ಷತ್ವಂ ಚಾಮರತ್ವಂ ಚ ಪ್ರಾಪ್ಸ್ಯಂತ್ಯತ್ರ ಚ ಸಾಧಕಾಃ ॥ ೪೪ ॥

---

೩೮. ಈ ಕ್ಷೇತ್ರದಲ್ಲಿ ಮಾತ್ರ ಮಂತ್ರಪುರಶ್ಚರಣೆಯನ್ನೂ, ಬಲಿಹರಣವನ್ನೂ, ಹೋಮವನ್ನೂ ಮಾಡುವ ಮನುಷ್ಯನು ತದೇಕನಿಷ್ಠೆಯಿಂದ ಶುಚಿರ್ಭೂತನಾಗಿ ಮಾಡಲು ಸರ್ವಾಭೀಷ್ಟಗಳನ್ನೂ ಹೊಂದುತ್ತಾನೆ.

೩೯. ನಿಷ್ಕಲ್ಮಷವಾಗಿ ಸಮಾಧಿಯನ್ನೈದಿದ ಮನಸ್ಸುಳ್ಳವನು ಈ ಸಿದ್ಧೇಶ್ವರನನ್ನು ಸಂದರ್ಶಿಸಲು ಅವನಿಗೆ ಕಾರ್ಯಸಿದ್ಧಿಯಾಗುವುದಲ್ಲದೆ ವಿಘ್ನಗಳಿಂದ ಪ್ರತಿಹತಿಯುಂಟಾಗುವುದಿಲ್ಲ.

೪೦–೪೧. ಇಲ್ಲಿ ಸಿದ್ಧಾಂಬಿಕೆಯೆಂಬ ಹೆಸರಿನಿಂದ ಪ್ರತಿಷ್ಠಿತಳಾಗಿರುವ ಮಹಾದೇವಿಯು, ಮಹಾವಿದ್ಯೆಯ ಜಪಪುರಶ್ಚರಣವನ್ನು ಮಾಡುವ ಸಾಧಕರಿಗೆ ಸಿದ್ಧಿಪ್ರದಳಾಗಿ ಪ್ರಸಿದ್ಧಳಾಗುವಳು. ಧೀರರೂ, ಬ್ರಹ್ಮಚಾರಿಗಳೂ, ಸತ್ಯೈಕತತ್ಪರರೂ ಆದ ಜನರು ಈಕೆಯ ಮಂತ್ರವನ್ನು ಜಪಿಸುವುದರಿಂದ ಅಭಿಲಷಿತಗಳಾದ ಸಕಲ ಸಿದ್ಧಿಗಳನ್ನೂ ಪಡೆಯುವರು.

೪೨–೪೩. ಗುಹನ ಶಕ್ತ್ಯಾಯುಧದಿಂದ ಪಾತಾಲದವರೆಗೂ ಮಹತ್ತರವಾದ ಬಿಲವು ಮಾಡಲ್ಪಟ್ಟಿರುವುದಲ್ಲವೆ! ಇಲ್ಲಿ ಸಿದ್ಧಾಂಬಿಕೆಯ ಪ್ರಸಾದದಿಂದ ವಿಘ್ನೇಶ್ವರನೂ, ಕ್ಷೇತ್ರಪಾಲಕನೂ ಮತ್ತು ನಾನೂ, ಇಂತು ಮೂವರ ಸಾನ್ನಿಧ್ಯವೂ ಇರುವುದರಿಂದ ಪದೇ ಪದೇ ಮಹಾವೈಭವಗಳು ಕಾಣುತ್ತಿರುತ್ತವೆ.

೪೪. ಇಲ್ಲಿ ಮನುಷ್ಯರೂ, ದೇವತೆಗಳೂ ಕೋಟಿಗಟ್ಟಲೆಯಾಗಿ ಸಿದ್ಧಿಯನ್ನು ಹೊಂದುವರು. ಇಲ್ಲಿ ತಪಸ್ಸನ್ನು ಸಾಧಿಸುವ ಜನರು ವಿದ್ಯಾಧರತ್ವ,

ಅತ್ರ ವೈ ವಿಜಯೋ ನಾಮ ಸ್ಥಂಡಿಲಸ್ಯ ಪ್ರಭಾವತಃ ।
ಸಿದ್ಧಾಂಬಿಕಾಂ ಸಮಾರಾಧ್ಯ ಸಿದ್ಧಿಮಾಪ್ಸ್ಯತಿ ದುರ್ಲಭಾಂ ॥ ೪೫ ॥
ಯೋ ಮಾಂ ದ್ರಕ್ಷ್ಯತಿ ಚಾತ್ರಸ್ಥಂ ಯಶ್ಚ ಮಾಂ ಪೂಜಯಿಷ್ಯತಿ ।
ಪ್ರಾದಪ್ರಚಾರತೋ ವಾಪಿ ಪುಣ್ಯಾವಾಪ್ತಿರ್ಭವಿಷ್ಯತಿ ॥ ೪೬ ॥

ನಾರದ ಉವಾಚ :–

ತ್ರ್ಯಂಬಕೇಣ ವರೇಷ್ವೇವಂ ದತ್ತೇಷ್ವಪಿ ಸುರೋತ್ತಮಾಃ ।
ಪ್ರಹೃಷ್ಟಾಃ ಸಮಪದ್ಯಂತ ಗಾಥಾಂ ಚೇಮಾಂ ಜಗುಸ್ತದಾ ॥ ೪೭ ॥
ತೇನ ಯಜ್ಞೈರ್ಜಪೈಃ ಸ್ತೋತ್ರೈಸ್ತಪೋಭಿಸ್ತೋಷಿತಾ ವಯಂ ।
ಸರ್ವೇ ದೇವಾಃ ಸಿದ್ಧಲಿಂಗಂ ಯೋ ನರಃ ಪೂಜಯಿಷ್ಯತಿ ॥ ೪೮ ॥
ಸರ್ವಕಾಮಫಲಾವಾಪ್ತಿರಿತ್ಯೇವಂ ಶಂಕರೋಽಬ್ರವೀತ್ ॥ ೪೯ ॥
ಇತ್ಯುಕ್ತ್ವಾ ತೇ ಜಯಂ ಪ್ರಾಪ್ತಾಃ ಸ್ಕಂದೇನ ಸಹಿತಾಃ ಸುರಾಃ ।
ಕಾರಯಿತ್ವಾ ರಮ್ಯಪ್ರಾಸಾದಾನ್ರಮ್ಯೈಸ್ತಾರಕಸಂಭವೈಃ ।
ಚತುರ್ವರ್ಗಫಲಾವಾಪ್ತಿಂ ದತ್ವಾ ಕ್ಷೇತ್ರಸ್ಯ ಸಂಯಯುಃ ॥ ೫೦ ॥

---

ದೇವತ್ವ, ಗಂಧರ್ವತ್ವ, ನಾಗತ್ವ, ಯಕ್ಷತ್ವ, ಅಮರತ್ವ ಮುಂತಾದ ಮಹಾ ಫಲಗಳನ್ನು ಹೊಂದುವರು.

೪೫. ಇಲ್ಲಿಯೇ ಇರುವ ಯಜ್ಞಭೂಮಿಯ ಪ್ರಭಾವದಿಂದ ವಿಜಯನೆಂಬವನು ಸಿದ್ಧಾಂಬಿಕೆಯನ್ನು ಪೂಜಿಸಿ ಅತ್ಯಂತ ದುರ್ಲಭವಾದ ಮಹಾವಿದ್ಯೆಯನ್ನು ಸಾಧಿಸುವನು.

೪೬. ಇಲ್ಲಿ ನೆಲಸಿರುವ ನನ್ನನ್ನು ಯಾರು ನೋಡುವರೊ, ಯಾರು ಪೂಜಿಸುವರೊ, ಅಥವಾ ನನ್ನ ಮಹಾತ್ಮ್ಯೆಯನ್ನು ಪ್ರಚಾರಮಾಡುವರೊ, ಅವರಿಗೆ ಶಾಶ್ವತವಾದ ಪುಣ್ಯಲೋಕವು ಲಭಿಸುವುದು.''

೪೭. ನಾರದನು ಹೇಳುತ್ತಾನೆ:— ಇಂತು ಮಹೇಶ್ವರನು ಅನೇಕ ವರಗಳನ್ನು ಕೊಡಲು ದೇವತೆಗಳು ಸಂಹೃಷ್ಟಮಾನಸರಾಗಿ ಇಂತೆಂದರು.

೪೮. ''ಯಾವ ಮನುಷ್ಯನು ಸಿದ್ಧೇಶ್ವರಲಿಂಗವನ್ನು ಪೂಜಿಸುವನೊ, ಅವನ ಪೂಜೆಯಿಂದ ದೇವತೆಗಳಾದ ನಾವೆಲ್ಲರೂ ಸಂತೋಷಗೊಂಡು ಸಕಲ ಯಜ್ಞಗಳನ್ನೂ, ಜಪಗಳನ್ನೂ, ಸ್ತೋತ್ರಗಳನ್ನೂ, ತಪಸ್ಸುಗಳನ್ನೂ ಮಾಡಿದವನೆಂದೆಣಿಸುತ್ತೇವೆ.''

೪೯–೫೦. ಆ ಬಳಿಕ ಶಂಕರನು ಸಕಲ ಕಾಮಿತಾರ್ಥಗಳ ಸಂಸಿದ್ಧಿಯೆಂಬ ವರವನ್ನು ಕೊಟ್ಟನು. ಇಂತು ತಾರಕಾಸುರನ ಸಂಗ್ರಾಮದಲ್ಲಿ ಜಯವನ್ನು ಹೊಂದಿ ಷಣ್ಮುಖನೊಡಗೂಡಿ ತಾರಕಾಸುರನ ಪಟ್ಟಣದಲ್ಲಿದ್ದ ಮನೋಹರ ದ್ರವ್ಯಗಳಿಂದ ಪ್ರತಿಷ್ಠಿತರಾದ ದೇವತೆಗಳಿಗೆಲ್ಲ ರಮ್ಯಗಳಾದ ದೇವಾಲಯಗಳನ್ನು

**ಕೇಚಿತ್ಸ್ಕಂದಂ ಪ್ರಶಂಸಂತಸ್ತೀರ್ಥಮನ್ಯೇ ಹರಿಂ ಪರೇ ।**
**ಕೇಚಿಲ್ಲಿಂಗಾನಿ ಪಂಚಾಪಿ ಯುದ್ಧಂ ಕೇಚಿದ್ದಿವಂ ಯಯುಃ ॥ ೫೧ ॥**
**ತತೋಽಂತರಿಕ್ಷೇ ಚಾಲಿಂಗ್ಯ ಮಹಾಸೇನಂ ಹರೋಽಬ್ರವೀತ್ ॥ ೫೨ ॥**
**ಸಪ್ತಮೇ ಮಾರುತಸ್ಕಂದೇ ವಸ ನಿತ್ಯಂ ಪ್ರಿಯಾತ್ಮಜ ।**
**ಕಾರ್ಯೇಷ್ವಹಂ ತ್ವಯಾ ಪುತ್ರ ಸಂಪ್ರಷ್ಟವ್ಯಃ ಸದೈವಹಿ ॥ ೫೩ ॥**
**ದರ್ಶನಾನ್ಮಮ ಭಕ್ತ್ಯಾ ಚ ಶ್ರೇಯಃ ಪರಮವಾಪ್ಸ್ಯಸಿ ।**
**ಸ್ತಂಭತೀರ್ಥೇ ಚ ವತ್ಸ್ಯೇಽಹಂ ನ ವಿಮೋಕ್ಷ್ಯಾಮಿ ಕರ್ಹಿಚಿತ್ ॥ ೫೪ ॥**
**ಇತ್ಯುಕ್ತ್ವಾ ವಿಸಸರ್ಜೈನಂ ಪರಿಷ್ವಜ್ಯ ಮಹೇಶ್ವರಃ ।**
**ಬ್ರಹ್ಮವಿಷ್ಣುಮುಖಾಂಶ್ಚೈವ ಭಕ್ತ್ಯಾ ತೈರಭಿನಂದಿತಃ ॥ ೫೫ ॥**
**ವಿಸರ್ಜಿತಾಃ ಸುರಾ ಜಗ್ಮುಃ ಸ್ವಾನಿ ಸ್ವಾನ್ಯಾಲಯಾನಿಚ ।**
**ಶರ್ವೋ ಜಗಾಮ ಕೈಲಾಸಂ ಸ್ಕಂದಂ ವೈ ಸಪ್ತಮಂ ಗುಹಃ ॥ ೫೬ ॥**
**ಇತ್ಯೇತತ್ಕಥಿತಂ ಪಾರ್ಥ ಲಿಂಗಪಂಚಕಸಂಭವಂ ।**
**ಯಃ ಪಠೇತ್ಸ್ಕಂದ ಸಂಬದ್ಧಾಂ ಕಥಾಂ ಮರ್ತ್ಯೋ ಮಹಾಮತಿಃ ॥೫೭॥**

---

ನಿರ್ಮಿಸಿ ಆ ಮಹಾಕ್ಷೇತ್ರಕ್ಕೆ ಧರ್ಮಾದಿ ಚತುರ್ವಿಧ ಪುರುಷಾರ್ಥಗಳನ್ನುಂಟು ಮಾಡುವಂತೆ ಅನುಗ್ರಹಿಸಿ ತಂತಮ್ಮ ಲೋಕಗಳಿಗೆ ಹೊರಟರು.

೫೧. ಕೆಲವರು ಷಣ್ಮುಖನನ್ನೂ, ಕೆಲವರು ತೀರ್ಥಕ್ಷೇತ್ರವನ್ನೂ, ಕೆಲವರು ಶ್ರೀ ಮಹಾವಿಷ್ಣುವನ್ನೂ, ಹಲವರು ಪಂಚಲಿಂಗಗಳನ್ನೂ, ಕೆಲವರು ತಾರಕಾಸುರನ ಕಾಳಗವನ್ನೂ ಬಣ್ಣಿಸುತ್ತ ಸ್ವರ್ಗವನ್ನು ಸೇರಿದರು.

೫೨–೫೩. ಆಗ ಅಂತರಿಕ್ಷಮಾರ್ಗದಲ್ಲಿ ಮಹೇಶ್ವರನು ಸ್ಕಂದನನ್ನು ಆಲಿಂಗಿಸಿ ಹೇಳತೊಡಗಿದನು. "ಪ್ರಿಯ ಪುತ್ರ! ನೀನು ಶಾಶ್ವತವಾದ ಏಳನೆಯ ಮಾರುತ ಸ್ಕಂಧದಲ್ಲಿ ವಾಸಮಾಡು. ಯಾವಾಗಲೂ ನಿನ್ನ ಕಾರ್ಯಗಳಲ್ಲಿ ನನ್ನ ಬುದ್ಧಿವಾದವನ್ನು ನೀನು ಕೇಳುತ್ತಿರಬೇಕು.

೫೪. ನನ್ನ ದರ್ಶನದಿಂದಲೂ, ಭಕ್ತಿಯಿಂದಲೂ ಬಹು ಉತ್ತಮವಾದ ಶ್ರೇಯಸ್ಸನ್ನು ಪಡೆಯುವೆ. ನಾನೂ ಸಹ ಈ ಸ್ತಂಭತೀರ್ಥದಲ್ಲಿ ವಾಸಮಾಡುವವನಾಗಿ ಎಂದಿಗೂ ಇದನ್ನು ಬಿಟ್ಟು ಹೊರಡುವುದಿಲ್ಲ."

೫೫. ಇಂತೆಂದು ಮಹಾದೇವನು ಆತನನ್ನು ಅಪ್ಪಿಕೊಂಡು ಬ್ರಹ್ಮಾದಿ ದೇವತೆಗಳಿಂದ ನಮಸ್ಕೃತನಾಗಿ ಸ್ಕಂದನನ್ನೂ, ಬ್ರಹ್ಮ, ನಾರಾಯಣಾದಿ ಸಕಲ ದೇವತೆಗಳನ್ನೂ ಬೀಳ್ಕೊಟ್ಟನು.

೫೬–೫೭. ಇಂತು ಬೀಳ್ಕೊಂಡ ದೇವತೆಗಳು ತಮ್ಮ ತಮ್ಮ ನಿಲಯಗಳಿಗೆ ಹಿಂದಿರುಗಿದರು. ಮಹೇಶ್ವರನು ಕೈಲಾಸವನ್ನು ಸೇರಿದನು. ಷಣ್ಮುಖಸ್ವಾಮಿಯೂ ಸಹ ಏಳನೆಯ ಮಾರುತ ಸ್ಕಂಧದಲ್ಲಿ ಸ್ಥಾನವನ್ನು ಪಡೆದನು.

ಶೃಣುಯಾಚ್ಛ್ರಾವಯೇದ್ವಾಪಿ ಸ ಭವೇತ್ಕೀರ್ತಿಮಾನ್ನರಃ ।
ಬಹ್ವಾಯುಃ ಸುಭಗಃ ಶ್ರೀಮಾನ್ಕಾಂತಿಮಾನ್ಶುಭದರ್ಶನಃ ॥ ೫೮ ॥
ಭೂತೇಭ್ಯೋ ನಿರ್ಭಯಶ್ಚಾಪಿ ಸರ್ವದುಃಖವಿವರ್ಜಿತಃ ।
ಶುಚಿರ್ಭೂತ್ವಾ ಪುಮಾನ್ಯಶ್ಚ ಕುಮಾರೇಶ್ವರಸನ್ನಿಧೌ ॥ ೫೯ ॥
ಶೃಣುಯಾತ್ಸ್ಕಂದಚರಿತಂ ಮಹಾಧನಪತಿರ್ಭವೇತ್ ।
ಬಾಲಾನಾಂ ವ್ಯಾಧಿದುಷ್ಟಾನಾಂ ರಾಜದ್ವಾರೋಪಸೇವಿನಾಂ ॥ ೬೦ ॥
ಇದಂ ತತ್ಪರಮಂ ಧನ್ಯಂ ಸರ್ವದೋಷಹರಂ ಸದಾ ।
ತನುಕ್ಷಯೇ ಚ ಸಾಯುಜ್ಯಂ ಷಣ್ಮುಖಸ್ಯ ವ್ರಜೇನ್ನರಃ ॥ ೬೧ ॥
ವರಮೇನಂ ದದುರ್ದೇವಾಃ ಸ್ಕಂದಸ್ಯಾಥ ಗತಾ ದಿವಂ ॥ ೬೨ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪ್ರಥಮೇ ಮಾಹೇಶ್ವರಖಂಡೇ ಕೌಮಾರಿಕಾಖಂಡೇ
"ಪಂಚಲಿಂಗೋಪಾಖ್ಯಾನ ಸಮಾಪ್ತಿವರ್ಣನಂ"ನಾಮ
ಷಟ್ತ್ರಿಂಶೋಽಧ್ಯಾಯಃ

---

ಎಲೈ ಅರ್ಜುನನೆ! ನಿನಗೆ ಪಂಚಲಿಂಗಗಳ ಉತ್ಪತ್ತಿಯ ಚರಿತ್ರೆಯನ್ನು ಹೇಳಿರುವೆನು. ಷಣ್ಮುಖನ ಪರಾಕ್ರಮದಿಂದ ಸಂಬದ್ಧವಾದ ಈ ಚರಿತ್ರೆಯನ್ನು ಯಾವ ಮಹಾಮತಿಯಾದ ಮನುಷ್ಯನು ಪಠಿಸುವನೊ, ಕೇಳುವನೊ, ಪುರಾಣರೂಪವಾಗಿ ಇತರರಿಗೆ ತಿಳಿಯಹೇಳುವನೊ, ಆತನು ಕೀರ್ತಿವಂತನಾಗಿ ಬಾಳುತ್ತಾನೆ.

೫೮. ಆತನು ದೀರ್ಘಾಯುವೂ, ಸೌಭಾಗ್ಯಸಂಪನ್ನನೂ, ಐಶ್ವರ್ಯವಂತನೂ, ಕಾಂತಿಯುಕ್ತನೂ, ಸುಂದರ ರೂಪನೂ, ಸಕಲ ಭೂತಗಳ ದೆಸೆಯಿಂದ ಭಯರಹಿತನೂ, ಸಮಸ್ತ ದುಃಖಗಳಿಗೆ ದೂರನೂ ಆಗುತ್ತಾನೆ.

೫೯. ಯಾವ ಮಾನವನು ಶುಚಿರ್ಭೂತನಾಗಿ ಕುಮಾರೇಶ್ವರನ ಸನ್ನಿಧಿಯಲ್ಲಿ ಈ ಸ್ಕಂದಮಾಹಾತ್ಮ್ಯೆಯನ್ನು ಕೇಳುವನೊ, ಅವನು ಅಷ್ಟೈಶ್ವರ್ಯಗಳಿಗೂ ಅಪಾರ ಧನಕ್ಕೂ ಸ್ವಾಮಿಯಾಗುವನು.

೬೦–೬೨. ಬಾಲಕರಿಗೂ, ವ್ಯಾಧಿಗಳಿಂದ ಪೀಡಿತರಾದವರಿಗೂ, ರಾಜದ್ವಾರಗಳನ್ನು ಕಾಯುವವರಿಗೂ ಈ ಚರಿತ್ರೆಯು ಧನ್ಯವೂ ಸಕಲ ಪಾಪಹರವೂ ಆಗಿರುವುದು. ಅಲ್ಲದೆ ಅಂತಹ ಮನುಷ್ಯನು ಷಣ್ಮುಖಸ್ವಾಮಿಯ ಸಾಯುಜ್ಯ ಮೋಕ್ಷವನ್ನು ಪಡೆಯುವನು. ಇಂತೆಂದು ಸ್ಕಂದನಿಗೆ ಸಕಲ ದೇವತೆಗಳು ವರವನ್ನು ಕೊಟ್ಟು ಸ್ವರ್ಗಲೋಕವನ್ನು ಕುರಿತು ತೆರಳಿದರು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಎರಡನೆಯ ಕೌಮಾರಿಕಾಖಂಡದಲ್ಲಿ
"ಪಂಚಲಿಂಗೋಪಾಖ್ಯಾನ ಸಮಾಪ್ತಿವರ್ಣನ"ವೆಂಬ
ಮೂವತ್ತಾರನೆಯ ಅಧ್ಯಾಯವು ಮುಗಿದುದು

॥ ಶ್ರೀ ॥

# ಅಥ ಸಪ್ತತ್ರಿಂಶೋಽಧ್ಯಾಯಃ

## ಕೌಮಾರಿಕಾಖ್ಯಾನಂ — ಭೂಸಂಸ್ಥಿತಿ ವರ್ಣನಂ

**ಶ್ರೀನಾರದ ಉವಾಚ:—**

**ಬರ್ಬರೀತೀರ್ಥಮಾಹಾತ್ಮ್ಯಮಥೋ ವಕ್ಷ್ಯಾಮಿ ತೇಽರ್ಜುನ ।**
**ಯಥಾ ಬರ್ಬರಿಕಾ ಜಾತಾ ಶತಶೃಂಗನೃಪಾತ್ಮಜಾ ॥ ೧ ॥**
**ಕುಮಾರಿಕೇತಿ ವಿಖ್ಯಾತಾ ತಸ್ಯಾ ನಾಮ್ನಾ ಪ್ರಕಥ್ಯತೇ ।**
**ಇದಂ ಕೌಮಾರಿಕಾಖಂಡಂ ಚತುರ್ವರ್ಗಫಲಪ್ರದಂ ॥ ೨ ॥**
**ಯಯಾ ಕೃತಾ ಪೃಥಿವ್ಯಾಂ ಚ ನಾನಾಗ್ರಾಮಾದಿಕಲ್ಪನಾ ।**
**ಇದಂ ಭರತಖಂಡಂ ಚ ಯಯಾ ಸಮ್ಯಕ್ಪ್ರಕಲ್ಪಿತಂ ॥ ೩ ॥**

**ಧನಂಜಯ ಉವಾಚ:—**

**ಮಹದೇತನ್ಮಹಾಶ್ಚರ್ಯಂ ಶ್ರೋತವ್ಯಂ ಪರಮಂ ಮುನೇ ।**
**ಕುಮಾರೀಚರಿತಂ ಸರ್ವಂ ಬ್ರೂಹಿ ಮಹ್ಯಂ ಸವಿಸ್ತರಂ ॥ ೪ ॥**

---

## ಕನ್ನಡದ ಅನುವಾದ

### ಕುಮಾರಿಕಾಖ್ಯಾನ — ಭೂಸಂಸ್ಥಿತಿವರ್ಣನ

೧-೨. ನಾರದನು ಹೇಳುತ್ತಾನೆ:— ಎಲೈ ಅರ್ಜುನನೆ! ನಿನಗೆ ಬರ್ಬರೀ ತೀರ್ಥದ ಮಾಹಾತ್ಮ್ಯೆಯನ್ನು ಹೇಳುತ್ತೇನೆ ಕೇಳು; ಶತಶೃಂಗನೆಂಬ ಪರ್ವತ ರಾಜನ ಮಗಳು ಬರ್ಬರಿಕೆಯಾಗಿ ಹುಟ್ಟಿ ಕುಮಾರಿಕೆಯೆಂಬುದಾಗಿ ಪ್ರಸಿದ್ಧಳಾದಳು. ಆಕೆಯ ಹೆಸರಿನಿಂದಲೇ ಈ ಖಂಡಕ್ಕೆ ಕೌಮಾರಿಕಾಖಂಡವೆಂದು ಹೆಸರಾಗಿರುವುದು. ಇದು ಜನರಿಗೆ ಚತುರ್ವರ್ಗಗಳನ್ನೂ ಪ್ರಾಪ್ಯಗಳನ್ನಾಗಿ ಮಾಡುವುದು.

೩. ಆಕೆಯಿಂದಲೇ ಭೂಲೋಕದಲ್ಲಿ ಅನೇಕ ವಿಧಗಳಾದ ಗ್ರಾಮ, ನಗರಾದಿ ವಿಭೇದಗಳು ಮಾಡಲಾಗಿವೆ. ಈ ಭರತಖಂಡವೂ ಆಕೆಯಿಂದಲೇ ಚೆನ್ನಾಗಿ ಸ್ಥಾಪನೆಯಾಯಿತು.

೪. ಅರ್ಜುನನು ಕೇಳುತ್ತಾನೆ:— "ಮುನಿವರ್ಯ! ಈ ಚರಿತ್ರೆಯು ಮಾಹಾತ್ಮ್ಯೆಯುಳ್ಳುದೂ, ಅತ್ಯಂತ ಆಶ್ಚರ್ಯಭರಿತವಾದುದೂ ಆಗಿರುವುದು. ಇದನ್ನು ಕೇಳಲೇಬೇಕೆಂದೆನಿಸುತ್ತಿರುವುದು. ಆದುದರಿಂದ ಈ ಕುಮಾರಿಕಾಖ್ಯಾನವನ್ನು ಆಮೂಲಾಗ್ರವಾಗಿಯೂ, ವಿಸ್ತಾರವಾಗಿಯೂ ನನಗೆ ನಿರೂಪಿಸು.

ಕಥಂ ವಿಶ್ವಮಿದಂ ಜಾತಂ ಕರ್ಮಜಾತಿಪ್ರಕಲ್ಪಿತಂ ।
ಕಥಂ ವಾ ಭಾರತಂ ಖಂಡಂ ಶುಶ್ರೂಷೇಯಂ ಸದಾ ಮಮ ॥ ೫ ॥

ನಾರದ ಉವಾಚ:—

ಅವ್ಯಕ್ತೇಽಸ್ಮಿನ್ನಿರಾಲೋಕೇ ಪ್ರಧಾನಪುರುಷಾವುಭೌ ।
ಅಜೌ ಸಮಾಗತಾವೇಕೌ ಕೇವಲಂ ಶ್ರುಣುಮೋ ವಯಂ ॥ ೬ ॥
ತತಃ ಸ್ವಭಾವಕಾಲಾಭ್ಯಾಂ ಸ್ವರೂಪಾಭ್ಯಾಂ ಸಮೀರಿತಂ ।
ಈಕ್ಷಣೇನೈವ ಪ್ರಕೃತೇರ್ಮಹತ್ತತ್ತ್ವಮಜಾಯತ ॥ ೭ ॥
ಮಹತ್ತತ್ತ್ವಾದ್ವಿಕುರ್ವಾಣಾದಹಂತತ್ತ್ವಂ ವ್ಯಜಾಯತ ।
ತ್ರಿಧಾ ತನ್ಮುನಿಭಿಃ ಪ್ರೋಕ್ತಂ ಸತ್ತ್ವರಾಜಸತಾಮಸಂ ॥ ೮ ॥
ತಾಮಸತ್ವಾಚ್ಚ ಜಾತಾನಿ ತನ್ಮಾತ್ರಾಣಿ ವಿದುರ್ಬುಧಾಃ ।
ತನ್ಮಾತ್ರೇಭ್ಯಶ್ಚ ಭೂತಾನಿ ವಿಶೇಷಾಃ ಪಂಚ ತದ್ಭವಾಃ ॥ ೯ ॥
ಸಾತ್ತ್ವಿಕಾಚ್ಚಾಪ್ಯಹಂಕಾರಾದ್ಬುದ್ಧಿ ಕರ್ಮೇಂದ್ರಿಯಾಣಿಚ ।
ಏಕಾದಶಂ ಮನಶ್ಚೈವ ರಾಜಸಂ ಚ ದ್ವಯೋರ್ವಿದುಃ ॥ ೧೦ ॥

---

೫. ಈ ಬ್ರಹ್ಮಾಂಡವು ಸೃಷ್ಟವಾದುದೆಂದು? ಕರ್ಮ, ಜಾತಿಗಳೆಂತು ಕಲ್ಪಿತಗಳಾದುವು? ಈ ಪ್ರದೇಶವು ಹೇಗೆ ಭರತಖಂಡವೆಂದು ಹೆಸರಾಯಿತು? ಇವುಗಳನ್ನೆಲ್ಲ ಕೇಳಬೇಕೆಂದು ನನಗೆ ಬಹಳ ಕುತೂಹಲವಾಗಿರುವುದು.''

೬. ನಾರದನು ಹೇಳುತ್ತಾನೆ:— ಎಲೈ ಅರ್ಜುನನೆ! ಸೃಷ್ಟ್ಯಾದಿಯಲ್ಲಿ ಸಾಕ್ಷಿರಹಿತವಾದ ಅವ್ಯಕ್ತ ತತ್ತ್ವವೆಂಬುದೊಂದೇ ಇದ್ದಿತು. ಅದರಿಂದ ಶಾಶ್ವತಗಳಾದ ಪ್ರಧಾನ ಪುರುಷರೆಂಬ ಎರಡು ತತ್ತ್ವಗಳುಂಟಾದುವೆಂದು ನಾವು ಕೇಳಿರುವೆವು.

೭. ಬಳಿಕ ಅವುಗಳ ಸ್ವರೂಪಗಳಾದ ಕಾಲ ಮತ್ತು ಸ್ವಭಾವಗಳ ಪ್ರಭಾವಗಳಿಂದ ಪುರುಷನ ಈಕ್ಷಣಮಾತ್ರದಿಂದಲೇ ಪ್ರಕೃತಿಯು ಮಹತ್ತತ್ತ್ವವಾಗಿ ವಿಕಾರವನ್ನು ಹೊಂದಿತು.

೮. ಮತ್ತೆ ಈ ಮಹತತ್ತ್ವದ ವಿಕಾರದಿಂದ ಅಹಂಕಾರವುಂಟಾಯಿತು. ಈ ಅಹಂಕಾರವು ಸಾತ್ತ್ವಿಕ, ರಾಜಸ, ತಾಮಸಗಳೆಂದು ಮೂರು ವಿಧವಾಗಿರುವುದೆಂದು ಮಹರ್ಷಿಗಳು ನಿರೂಪಿಸಿರುವರು.

೯. ತಾಮಸಾಹಂಕಾರದಿಂದ ಪಂಚತನ್ಮಾತ್ರಗಳೂ, ಅವುಗಳಿಂದ ಪಂಚಭೂತಗಳೂ ಉಂಟಾದುವೆಂದು ಪ್ರಾಜ್ಞರು ತಿಳಿದು ಹೇಳಿರುವರು.

೧೦. ಸಾತ್ತ್ವಿಕಾಹಂಕಾರದಿಂದ ಪಂಚಜ್ಞಾನೇಂದ್ರಿಯಗಳೂ, ಪಂಚಕರ್ಮೇಂದ್ರಿಯಗಳೂ ಮನಸ್ಸೂ ಉಂಟಾದುವು. ರಾಜಸಾಹಂಕಾರದಿಂದ ಬುದ್ಧಿ ಮತ್ತು ಚಿತ್ತಗಳೆರಡೂ ಉಂಟಾದುವು.

ಚತುರ್ವಿಂಶತಿ ತತ್ತ್ವಾನಿ ಜಾತಾನೀತಿ ಪುರಾ ವಿದುಃ ।
ಸದಾಶಿವೇನ ವೈ ಪುಂಸಾ ತಾನಿ ದೃಷ್ಟಾನಿ ಭಾರತ ॥ ೧೧ ॥
ಬುದ್ಬುದಾಕಾರತಾಂ ಜಗ್ಮುರಂಡಂ ಜಾತಂ ತತಃ ಶುಭಂ ।
ಶತಕೋಟಿಪ್ರಮಾಣಂ ಚ ಬ್ರಹ್ಮಾಂಡಮಿದಮುಚ್ಯತೇ ॥ ೧೨ ॥
ಆತ್ಮಾಸ್ಯ ಕಥಿತೋ ಬ್ರಹ್ಮಾ ವ್ಯಭಜತ್ಸತ್ರಿಧಾ ತ್ವಿದಂ ।
ಊರ್ಧ್ವಂ ತತ್ರ ಸ್ಥಿತಾ ದೇವಾ ಮಧ್ಯೇ ಚೈವ ಚ ಮಾನವಾಃ ॥ ೧೩ ॥
ನಾಗಾ ದೈತ್ಯಾಶ್ಚ ಪಾತಾಲೇ ತ್ರಿಧೈತತ್ಪರಿಕಲ್ಪಿತಂ ।
ಏಕೈಕಂ ಸಪ್ತಧಾ ಭೂಯಸ್ತತಸ್ತೇನ ಪ್ರಕಲ್ಪಿತಂ ॥ ೧೪ ॥
ಪಾತಾಲಾನಿ ಚ ದ್ವೀಪಾನಿ ಸ್ವರ್ಲೋಕಾಃ ಸಪ್ತಸಪ್ತ ಚ ।
ಸಪ್ತದ್ವೀಪಾನಿ ವಕ್ಷ್ಯಾಮಿ ಶ್ರುಣು ತೇಷಾಂ ಪ್ರಕಲ್ಪನಾಂ ॥ ೧೫ ॥
ಲಕ್ಷಯೋಜನವಿಸ್ತಾರಂ ಜಂಬೂದ್ವೀಪಂ ಪ್ರಕೀರ್ತ್ಯತೇ ।
ಸೂರ್ಯಬಿಂಬಸಮಾಕಾರಂ ತಾವತ್ಕ್ಷೀರಾರ್ಣವಾವೃತಂ ॥ ೧೬ ॥

---

೧೧-೧೨. ಇಂತು ಮೊದಲು ಇಪ್ಪತ್ತುನಾಲ್ಕು ತತ್ತ್ವಗಳುಂಟಾದುವೆಂದು ಹೇಳುತ್ತಾರೆ. ಎಲೈ ಅರ್ಜುನನೆ! ಪುರುಷನಾದ ಸದಾಶಿವನು ಅವುಗಳನ್ನು ವೀಕ್ಷಿಸಿದನು. ಅದರಿಂದ ಅವುಗಳು ಬುದ್ಬುದದ ರೂಪವನ್ನು ಹೊಂದಿದುವು. ಅದರಿಂದ ಉತ್ತಮವಾದ ಅಂಡವುತ್ಪನ್ನವಾಯಿತು. ಈ ಬ್ರಹ್ಮಾಂಡವು ನೂರು ಕೋಟಿ ಯೋಜನದ ಪ್ರಮಾಣವುಳ್ಳುದೆಂದು ಹೇಳಲಾಗಿರುವುದು.

೧೩. ಇದಕ್ಕೆ ಬ್ರಹ್ಮನೇ ಆತ್ಮಸ್ವರೂಪನೆಂದು ನಿರೂಪಿತವಾಗಿರುವುದು. ಆತನು ಈ ಬ್ರಹ್ಮಾಂಡವನ್ನು ಮೂರು ಭಾಗಗಳಾಗಿ ವಿಂಗಡಿಸಿದನು. ಊರ್ಧ್ವ ಭಾಗದಲ್ಲಿ ದೇವತೆಗಳು ನೆಲಸಿರುವರು. ಮಧ್ಯಭಾಗವು ಮನುಷ್ಯರಿಗೆ ನಿವಾಸ ಸ್ಥಾನವಾಗಿರುವುದು.

೧೪. ಪಾತಾಳಗಳಲ್ಲಿ ನಾಗರೂ, ರಾಕ್ಷಸರೂ ವಾಸಿಸುತ್ತಿರುವರು. ಇಂತು ಬ್ರಹ್ಮಾಂಡವು ಮೂರು ಭಾಗವಾಗಿರುವುದು. ಇವುಗಳಲ್ಲಿಯೂ ಪ್ರತಿಯೊಂದೂ ಏಳು ವಿಭಾಗಗಳಾಗಿರುವುದು.

೧೫. ಅಧೋಲೋಕಗಳಿಗೆ ಸಪ್ತಪಾತಾಳಗಳೆಂದೂ, ಭೂಲೋಕದ ಭಾಗ ಗಳಿಗೆ ಸಪ್ತದ್ವೀಪಗಳೆಂದೂ ಊರ್ಧ್ವಲೋಕಗಳಿಗೆ ಸಪ್ತಸ್ವರ್ಗಗಳೆಂದೂ ಹೆಸರು. ಅವುಗಳಲ್ಲಿ ಭೂಮಿಯ ಸಪ್ತದ್ವೀಪಗಳನ್ನು ನಿರೂಪಿಸುವೆನು. ಅವುಗಳ ರಚನಾ ಕ್ರಮವನ್ನು ಕೇಳು.

೧೬. ಜಂಬೂದ್ವೀಪವೆಂಬುದು ಒಂದುಲಕ್ಷ ಯೋಜನದ ವಿಸ್ತಾರವುಳ್ಳು ದಾಗಿರುವುದು. ಇದು ಸೂರ್ಯಮಂಡಲದಂತೆ ವರ್ತುಲಾಕಾರದಿಂದೊಡ ಗೂಡಿ ಅವೇ ಅಳತೆಯುಳ್ಳ ಕ್ಷೀರಸಮುದ್ರದಿಂದ ಸುತ್ತುವರೆಯಲ್ಪಟ್ಟಿರುವುದು.

ಶಾಕದ್ವೀಪಂ ದ್ವಿಗುಣತೋ ಜಂಬೂದ್ವೀಪಾತ್ತತಃ ಪರಂ ।
ತಾವತಾ ಕ್ಷೀರತೋಯೇನ ಸಮುದ್ರೇಣ ಪರೀವೃತಂ ॥ ೧೭ ॥
ಸುರಾತೋಯೇನ ದೈತ್ಯಾನಾಂ ಮೋಹಕಾರ್ಯರ್ಣವೇನ ಹಿ ।
ಪುಷ್ಕರಂ ತು ತತೋ ದ್ವೀಪಂ ದ್ವಿಗುಣಂ ತಾವತಾ ವೃತಂ ॥ ೧೮ ॥
ಕುಶದ್ವೀಪಂ ದ್ವಿಗುಣತಸ್ತತಸ್ತತ್ಪರತಃ ಸ್ಮೃತಂ ।
ದಧಿತೋಯೇನ ಪರಿತಸ್ತಾವದರ್ಣವ ಸಂವೃತಂ ॥ ೧೯ ॥
ತತಃ ಪರಂ ಕ್ರೌಂಚಸಂಜ್ಞಂ ದ್ವಿಗುಣಂ ಹಿ ಘೃತಾಬ್ಧಿನಾ ।
ತತಃ ಶಾಲ್ಮಲೀದ್ವೀಪಂ ಚ ದ್ವಿಗುಣಂ ತಾವತೈವ ಚ ।
ಇಕ್ಷುಸಾರಸ್ವರೂಪೇಣ ಸಮುದ್ರೇಣ ಪರೀವೃತಂ ॥ ೨೦ ॥
ಗೋಮೇದಂ ತಸ್ಯ ಪರಿತೋ ದ್ವಿಗುಣಂ ತಾವತಾ ವೃತಂ ।
ಸ್ವಾದುತೋಯೇನ ರಮ್ಯೇಣ ಸಮುದ್ರೇಣ ಸಮಂತತಃ ॥ ೨೧ ॥
ಏವಂ ಕೋಟಿದ್ವಯಂ ಪಾರ್ಥ ಲಕ್ಷಪಂಚಾಶತತ್ರಯಂ ।
ಪಂಚಾಶಚ್ಚ ಸಹಸ್ರಾಣಿ ಸಪ್ತದ್ವೀಪಾಃ ಸಸಾಗರಾಃ ॥ ೨೨ ॥

---

೧೭. ಇದರ ಆಚೆಗೆ ಶಾಕದ್ವೀಪವೆಂಬುದು ಜಂಬೂದ್ವೀಪದ ಎರಡರಷ್ಟು ವಿಸ್ತಾರವುಳ್ಳುದಾಗಿ ತನ್ನ ಪರಿಮಾಣದ ಕ್ಷೀರೋದಕದಿಂದ ಪರಿವೃತವಾಗಿರುವುದು.

೧೮. ಇದರ ಆಚೆಗೆ ಶಾಕದ್ವೀಪದ ಎರಡರಷ್ಟು ಅಳತೆಯುಳ್ಳ ಪುಷ್ಕರ ದ್ವೀಪವು ತನ್ನ ಅಳತೆಯುಳ್ಳ ಸುರಾಸಮುದ್ರದಿಂದಾವೃತವಾಗಿ ಸುರಾಪಾನದಿಂದ ರಾಕ್ಷಸರಿಗೆ ಮೋಹವನ್ನುಂಟುಮಾಡುತ್ತಿರುವುದು.

೧೯. ಇದಕ್ಕೂ ಆಚೆಗೆ ಕುಶದ್ವೀಪವೆಂಬ ಪ್ರದೇಶವಿರುವುದು. ಇದು ಪುಷ್ಕರದ್ವೀಪದ ದ್ವಿಗುಣ ಪರಿಮಾಣವುಳ್ಳುದಾಗಿ ತನ್ನ ಸಮಾನವಾದ ಪರಿಮಾಣವುಳ್ಳ ದಧಿಸಮುದ್ರದಿಂದ ಆವೃತವಾಗಿರುವುದು.

೨೦. ಇದರಿಂದಾಚೆಗೆ ದ್ವಿಗುಣಪರಿಮಿತಿಯುಳ್ಳ ಕ್ರೌಂಚದ್ವೀಪವು ಘೃತ ಸಮುದ್ರದಿಂದ ಸುತ್ತುವರೆಯಲ್ಪಟ್ಟಿರುವುದು. ಇದಕ್ಕೆ ಎರಡರಷ್ಟು ಅಳತೆಯುಳ್ಳ ಶಾಲ್ಮಲೀದ್ವೀಪವು ತನ್ನ ಪರಿಮಾಣದ ಇಕ್ಷುರಸೋದಕದಿಂದ ಬಳಸಲ್ಪಟ್ಟು ಕ್ರೌಂಚದ್ವೀಪದಾಚೆಗಿರುವುದು.

೨೧. ಇದರ ಸುತ್ತಲೂ ಎರಡರಷ್ಟು ಪ್ರಮಾಣದ ಗೋಮೇದದ್ವೀಪವು ಅಷ್ಟೇ ವಿಶಾಲವಾದ ಸ್ವಾದೂದಕದ ರಮ್ಯವಾದ ಸಮುದ್ರದಿಂದ ಬಳಸಲ್ಪಟ್ಟಿರುವುದು.

೨೨. ಎಲೈ ಪಾರ್ಥನೆ! ಇಂತು ಒಟ್ಟು ಸಪ್ತದ್ವೀಪಗಳ ಮತ್ತು ಸಪ್ತ

ದಶೋತ್ತರಾಣಿ ಪಂಚೈವ ಅಂಗುಲಾನಾಂ ಶತಾನಿ ಚ ।
ಅಪಾಂ ವೃದ್ಧಿಕ್ಷಯೋ ದೃಷ್ಟಃ ಪಕ್ಷಯೋಃ ಶುಕ್ಲಕೃಷ್ಣಯೋಃ ॥ ೨೩ ॥
ತತೋ ಹೇಮಮಯೀ ಭೂಮಿರ್ದಶಕೋಟ್ಯಃ ಕುರೂದ್ವಹ ।
ದೇವಾನಾಂ ಕ್ರೀಡನಸ್ಥಾನಂ ಲೋಕಾಲೋಕಸ್ತತಃ ಪರಂ ॥ ೨೪ ॥
ಪರ್ವತೋ ವಲಯಾಕಾರೋ ಯೋಜನಾಯುತವಿಸ್ತೃತಃ ।
ಅಸ್ಯ ಬಾಹ್ಯೇ ತಮೋ ಘೋರಂ ದುಷ್ಪ್ರೇಕ್ಷ್ಯಂ ಜೀವವರ್ಜಿತಂ ॥ ೨೫ ॥
ಪಂಚತ್ರಿಂಶತ್ಸ್ಮೃತಾಃ ಕೋಟ್ಯೋ ಲಕ್ಷಾಣ್ಯೇಕೋನವಿಂಶತಿಃ ।
ಚತ್ವಾರಿಂಶತ್ಸಹಸ್ರಾಣಿ ಯೋಜನಾನಾಂ ಚ ಫಾಲ್ಗುನ ॥ ೨೬ ॥
ಸಪ್ತಸಾಗರಮಾನಸ್ತು ಗರ್ಭೋದಸ್ತದನಂತರಂ ॥ ೨೭ ॥
ಕೋಟಿಯೋಜನವಿಸ್ತಾರಃ ಕಟಾಹಃ ಸಂವ್ಯವಸ್ಥಿತಃ ।
ಬ್ರಹ್ಮಣೋಽಂಡಂ ಕಟಾಹೇನ ಸಂಯುಕ್ತಂ ಮೇರುಮಧ್ಯತಃ ॥ ೨೮ ॥
ಪಂಚಾಶತ್ಕೋಟಿಯೋ ಜ್ಞೇಯಾ ದಶದಿಕ್ಷು ಸಮಂತತಃ ।
ಜಂಬೂದ್ವೀಪಸ್ಯ ಮಧ್ಯೇ ತು ಮೇರುನಾಮಾಸ್ತಿ ಪರ್ವತಃ ॥ ೨೯ ॥

---

ಸಾಗರಗಳ ಪರಿಮಾಣವು ಎರಡುಕೋಟಿ ಐವತ್ತುಮೂರು ಲಕ್ಷ ಐವತ್ತುಸಾವಿರ ಯೋಜನಗಳಾಗಿರುವುದು.

೨೩. ಶುಕ್ಲ ಕೃಷ್ಣ ಪಕ್ಷಗಳಲ್ಲಿ ಈ ಸಮುದ್ರಗಳ ಏರಿಳಿತಗಳು ಸಾವಿರದ ಐನೂರು ಅಂಗುಲಗಳ ಪ್ರಮಾಣವುಳ್ಳದಾಗಿರುವುದು.

೨೪. ಇದರ ಆಚೆಗೆ ಹತ್ತುಕೋಟಿ ಯೋಜನಗಳ ವಿಸ್ತಾರವುಳ್ಳ ಹೇಮ ಮಯವಾದ ಭೂಮಿಯಿರುವುದು. ಅಲ್ಲಿ ದೇವತೆಗಳು ಕ್ರೀಡೋದ್ಯಾನವನ್ನು ಮಾಡಿಕೊಂಡಿರುವರು. ಅದರ ಆಚೆಗೆ ಲೋಕಾಲೋಕ ಪರ್ವತವಿರುವುದು.

೨೫. ಈ ಪರ್ವತವು ವಲಯದಂತೆ (ಬಳೆಯ) ಆಕಾರವುಳ್ಳದ್ದಾಗಿ ಹತ್ತು ಸಾವಿರ ಯೋಜನದಗಲವಾಗಿರುವುದು. ಅದರ ಹೊರಗೆ ಸಹಿಸಲಸಾಧ್ಯವಾದುದೂ ಚರಾಚರರಹಿತವಾದುದೂ ಆದ ಮಹಾಘೋರವಾದ ಅಂಧಂತಮಸ್ಸಿರುವುದು.

೨೬–೨೭. ಈ ಸಪ್ತಸಾಗರಗಳ ಮಾನವು ಮೂವತ್ತೈದು ಕೋಟಿ, ಹತ್ತೊಂಬತ್ತು ಲಕ್ಷ ನಲವತ್ತುಸಾವಿರ ಯೋಜನಗಳು. ಇದರ ಆಚೆಗೆ ಬ್ರಹ್ಮಾಂಡದ ಗರ್ಭೋದಕವಿರುವುದು.

೨೮–೨೯. ಬ್ರಹ್ಮಾಂಡದ ಕಟಾಹವು (ಚಿಪ್ಪು) ಒಂದು ಕೋಟಿ ಯೋಜನ ಗಳ ವಿಸ್ತಾರವುಳ್ಳದ್ದು. ಕಟಾಹದಿಂದೊಡಗೂಡಿದ ಬ್ರಹ್ಮಾಂಡವು ಮಧ್ಯ ದಲ್ಲಿರುವ ಮೇರುಪರ್ವತದಿಂದ ಹತ್ತು ದಿಕ್ಕುಗಳಲ್ಲಿಯೂ ಐವತ್ತು ಕೋಟಿ ಯೋಜನಗಳವರೆಗೆ ವಿಸ್ತರಿಸಿರುವುದು. ಈ ಮೇರು ಪರ್ವತವು ಜಂಬೂದ್ವೀಪದ ಮಧ್ಯದಲ್ಲಿ ಪ್ರತಿಷ್ಠಿತವಾಗಿರುವುದು.

**ಸ ಲಕ್ಷಯೋಜನೋ ಜ್ಞೇಯೋ ಹ್ಯಧಶ್ಚೋರ್ಧ್ವಂ ಪ್ರಮಾಣತಃ ।**
**ಷೋಡಶೈವ ಸಹಸ್ರಾಣಿ ಯೋಜನಾನಾಮಧಃ ಸ್ಥಿತಃ ॥ ೩೦ ॥**
**ಉಚ್ಛ್ರಯಶ್ಚತುರಾಶೀತಿರ್ದ್ವಾತ್ರಿಂಶನ್ಮೂರ್ಧ್ನಿ ವಿಸ್ತೃತಃ ।**
**ತ್ರಿಭಿಃ ಶೃಂಗೈಃ ಸಮಾಯುಕ್ತಃ ಶರಾವಾಕೃತಿಮಸ್ತಕಃ ॥ ೩೧ ॥**
**ಮಧ್ಯಶೃಂಗೇ ಬ್ರಹ್ಮವಾಸ ಐಶಾನ್ಯಾಂ ತ್ರ್ಯಂಬಕಸ್ಯ ಚ ।**
**ನೈಋತ್ಯೇ ವಾಸುದೇವಸ್ಯ ಹೇಮಶೃಂಗಂ ಚ ಬ್ರಹ್ಮಣಃ ॥ ೩೨ ॥**
**ರತ್ನಜಂ ಶಂಕರಸ್ಯಾಪಿ ರಾಜತಂ ಕೇಶವಸ್ಯ ಚ ।**
**ಮೇರುದಿಕ್ಷು ಚತಸೃಷು ವಿಷ್ಕಂಭಾ ಗಿರಯಃ ಸ್ಮೃತಾಃ ॥ ೩೩ ॥**
**ಪೂರ್ವೇಣ ಮಂದರೋ ನಾಮ ದಕ್ಷಿಣೇ ಗಂಧಮಾದನಃ ।**
**ವಿಪುಲಃ ಪಶ್ಚಿಮೋ ಜ್ಞೇಯಃ ಸುಪಾರ್ಶ್ವಸ್ತು ತಥೋತ್ತರೇ ॥ ೩೪ ॥**
**ಕದಂಬೋ ಮಂದರೇ ಜ್ಞೇಯೋ ಜಂಬುರ್ವೈ ಗಂಧಮಾದನೇ ।**
**ಅಶ್ವತ್ಥೋ ವಿಪುಲೇ ಚೈವ ಸುಪಾರ್ಶ್ವೇ ಚ ವಟೋ ಮತಃ ॥ ೩೫ ॥**

---

೩೦. ಅದು ಬುಡದಿಂದ ತುದಿಯವರೆಗೆ ಒಂದು ಲಕ್ಷ ಯೋಜನದ ಪ್ರಮಾಣವುಳ್ಳದಾಗಿರುವುದು. ಭೂಮಿಯ ಒಳಗೂ ಇದು ಹದಿನಾರು ಸಾವಿರ ಯೋಜನಗಳಷ್ಟು ವ್ಯಾಪಿಸಿರುವುದು.

೩೧. ಮೇಲುಗಡೆ ಎಂಬತ್ತುನಾಲ್ಕು ಸಾವಿರ ಯೋಜನಗಳ ಎತ್ತರವು ಕಾಣುತ್ತಿರುವುದು. ಶಿಖರಪ್ರದೇಶವು ಮುವ್ವತ್ತೆರಡು ಯೋಜನ ವಿಸ್ತಾರವಾಗಿರುವುದು; ಮೂರು ಶೃಂಗಗಳಿಂದೊಡಗೂಡಿ ಅಗಲವಾದ ಶರಾವದ (ತಟ್ಟೆಯ) ಆಕಾರವುಳ್ಳದಾಗಿರುವುದು.

೩೨. ಮಧ್ಯಶೃಂಗದಲ್ಲಿ ಬ್ರಹ್ಮನು ವಾಸಮಾಡುತ್ತಿರುವನು. ಈಶಾನ್ಯ ಶೃಂಗವು ಮಹಾದೇವನ ವಾಸವು. ನೈಋತ್ಯಶೃಂಗದಲ್ಲಿ ನಾರಾಯಣನಿರುವನು. ಬ್ರಹ್ಮನ ವಾಸಸ್ಥಾನವು ಹೇಮಮಯವಾಗಿರುವುದು.

೩೩. ಮಹೇಶ್ವರನ ನಿವಾಸವು ರತ್ನಮಯವು. ಮಹಾವಿಷ್ಣುವು ಬೆಳ್ಳಿಯ ನಿವಾಸದಲ್ಲಿರುವನು. ಮೇರುವಿನ ಸುತ್ತಲೂ ನಾಲ್ಕು ದಿಕ್ಕುಗಳಲ್ಲಿಯೂ ಆಧಾರ ಗಿರಿಗಳಿರುವುವೆಂದು ಕೇಳಿರುವೆವು.

೩೪. ಪೂರ್ವದಲ್ಲಿ ಮಂದರ ಪರ್ವತ; ದಕ್ಷಿಣದಲ್ಲಿ ಗಂಧಮಾದನ ಗಿರಿ; ಪಶ್ಚಿಮದಲ್ಲಿ ವಿಪುಲವೆಂಬ ಶೈಲ; ಅಂತೆಯೇ ಉತ್ತರ ದಿಕ್ಕಿನಲ್ಲಿ ಸುಪಾರ್ಶ್ವ ಪರ್ವತವೂ ಇರುವುವು.

೩೫. ಮಂದರದಲ್ಲಿ ಕದಂಬ ವೃಕ್ಷವೂ, ಗಂಧಮಾದನ ಪರ್ವತದಲ್ಲಿ ಜಂಬೂವೃಕ್ಷವೂ, ವಿಪುಲ ಪರ್ವತದಲ್ಲಿ ಅಶ್ವತ್ಥವೃಕ್ಷವೂ, ಸುಪಾರ್ಶ್ವದಲ್ಲಿ ವಟವೃಕ್ಷವೂ ನೆಲಸಿರುವುವು.

ಏಕಾದಶಶತಾಯಾಮಾಶ್ಚತ್ವಾರೋ ಗಿರಿಕೇತವಃ ।
ಏತೇಷಾಂ ಸಂತಿ ಚತ್ವಾರಿ ವನಾನಿ ಜಯಮೂರ್ಧಸು ॥ ೩೬ ॥
ಪೂರ್ವಂ ಚೈತ್ರರಥಂ ನಾಮ ದಕ್ಷಿಣೇ ಗಂಧಮಾದನಂ ।
ವೈಭ್ರಾಜಂ ಪಶ್ಚಿಮೇ ಜ್ಞೇಯಮುದಕ್ಚಿತ್ರರಥಂ ವನಂ ॥ ೩೭ ॥
ಸರಾಂಸಿ ಚಾಪಿ ಚತ್ವಾರಿ ಚತುರ್ದಿಕ್ಷು ನಿಬೋಧ ಮೇ ।
ಪ್ರಾಚ್ಯೇಽರುಣೋದ ಸಂಜ್ಞಂ ತು ಮಾನಸಂ ದಕ್ಷಿಣೇ ಸರಃ ।
ಪ್ರತ್ಯಕ್ಛೀತೋದಕಂ ನಾಮ ಉತ್ತರೇ ಚ ಮಹಾಹ್ರದಃ ॥ ೩೮ ॥
ವಿಷ್ಕಂಭಗಿರಯೋ ಹ್ಯೇತ ಉಚ್ಛ್ರಿತಾಃ ಪಂಚವಿಂಶತಿಃ ॥ ೩೯ ॥
ಯೋಜನಾನಾಂ ಸಹಸ್ರಾಣಿ ಸಹಸ್ರಂ ಪಿಂಡಿತಃ ಸ್ಮೃತಂ ।
ಅನ್ಯೇ ಚ ಸಂತಿ ಬಹುಶಸ್ತತ್ರ ವೈ ಕೇಸರಾಚಲಾಃ ॥ ೪೦ ॥
ಮೇರೋರ್ದಕ್ಷಿಣತಶ್ಚೈವ ತ್ರಯೋ ಮರ್ಯಾದಪರ್ವತಾಃ ।
ನಿಷಧೋ ಹೇಮಕೂಟಶ್ಚ ಹಿಮವಾನಿತಿ ತೇ ತ್ರಯಃ ॥ ೪೧ ॥
ಲಕ್ಷಯೋಜನದೀರ್ಘಾಶ್ಚ ವಿಸ್ತೀರ್ಣಾ ದ್ವಿಸಹಸ್ರಕಂ ।
ತ್ರಯಶ್ಚೋತ್ತರತೋ ಮೇರೋರ್ನೀಲಃ ಶ್ವೇತೋಽಥ ಶೃಂಗವಾನ್ ॥

---

೩೬. ಈ ಪರ್ವತಗಳ ಶಿಖರ ಪ್ರದೇಶಗಳು ಸಾವಿರದ ಒಂದುನೂರು ಯೋಜನಗಳ ಅಳತೆಯುಳ್ಳದಾಗಿರುವುದು. ಇವುಗಳಲ್ಲಿ ಉತ್ತಮಗಳಾದ ಉದ್ಯಾನವನಗಳು ನಾಲ್ಕು ಇರುವುವು.

೩೭. ಪೂರ್ವದಲ್ಲಿ ಚೈತ್ರರಥವೂ, ದಕ್ಷಿಣದಲ್ಲಿ ಗಂಧಮಾದನವೂ, ಪಶ್ಚಿಮದಲ್ಲಿ ವೈಭ್ರಾಜವೂ, ಉತ್ತರದಲ್ಲಿ ಚಿತ್ರರಥವೂ ವನಗಳಾಗಿರುವುವು.

೩೮. ನಾಲ್ಕು ದಿಕ್ಕುಗಳಲ್ಲಿರುವ ಸರೋವರಗಳನ್ನೂ ತಿಳಿಸುವೆನು ಕೇಳು. ಪೂರ್ವದಲ್ಲಿ ಅರುಣೋದಕವೆಂಬುದೂ, ದಕ್ಷಿಣದಲ್ಲಿ ಮಾನಸವೆಂಬ ಸರೋವರವೂ, ಪಶ್ಚಿಮದಲ್ಲಿ ಶೀತೋದಕವೆಂಬುದೂ, ಉತ್ತರದಲ್ಲಿ ಮಹಾಹ್ರದವೆಂಬ ಸರೋವರವೂ ಇರುವುವು.

೩೯–೪೧. ಇಂತು ಈ ಆಧಾರ ಗಿರಿಗಳು ಒಂದೊಂದೂ ಇಪ್ಪತ್ತೈದು ಸಾವಿರ ಯೋಜನಗಳ ಎತ್ತರವುಳ್ಳವುಗಳಾಗಿ ಒಂದು ಸಾವಿರ ಯೋಜನದಗಲವಿರುವುವೆಂದು ಕೇಳಿರುವೆವು. ಜಂಬೂದ್ವೀಪದ ಮಧ್ಯದಲ್ಲಿರುವ ಮೇರುಪರ್ವತದಿಂದ ಈ ಪರ್ವತಗಳಿಗೆ ಪ್ರಸರಿಸುತ್ತಿರುವ ಕೇಸರರೂಪಗಳಾದ ಅನೇಕ ಪರ್ವತಗಳುಂಟು. ಮೇರುವಿನ ದಕ್ಷಿಣದಿಕ್ಕಿನಲ್ಲಿ ನಿಷಧ, ಹೇಮಕೂಟ ಮತ್ತು ಹಿಮವಂತಗಳೆಂಬ ಮೂರು ಸೀಮಾಪರ್ವತಗಳಿರುತ್ತವೆ.

೪೨–೪೩. ಇವುಗಳು ಒಂದು ಲಕ್ಷ ಯೋಜನ ಉದ್ದವುಳ್ಳವುಗಳೂ, ಎರಡು ಸಾವಿರ ಯೋಜದಗಲವುಳ್ಳವುಗಳೂ ಆಗಿರುವುವು. ಮೇರು ಪರ್ವತದ ಉತ್ತರದ

ಮಾಲ್ಯವಾನ್ಪೂರ್ವತೋ ಮೇರೋರ್ಗಂಧಾಖ್ಯಃ ಪಶ್ಚಿಮೇ ತಥಾ ।
ಇತ್ಯೇತೇ ಗಿರಯಃ ಪ್ರೋಕ್ತಾ ಜಂಬೂದ್ವೀಪೇ ಸಮಂತತಃ ॥ ೪೩ ॥
ಗಂಧಮಾದನ ಸಂಸ್ಥಾಯಾ ಮಹಾಗಜಪ್ರಮಾಣತಃ ।
ಫಲಾನಿ ಜಂಬ್ವಾಸ್ತನ್ನಾಮ್ನಾ ಜಂಬೂದ್ವೀಪಮಿತಿ ಸ್ಮೃತಂ ॥ ೪೪ ॥
ಆಸೀತ್ಸ್ವಾಯಂಭುವೋ ನಾಮ ಮನುರಾದ್ಯಃ ಪ್ರಜಾಪತಿಃ ।
ಆಸೀತ್‌ಸ್ತ್ರೀ ಶತರೂಪಾ ತಾಮುದುವೋಢ ಪ್ರಜಾಪತಿಃ ।
ಪ್ರಿಯವ್ರತೋತ್ತಾನಪಾದೌ ತಸ್ಯಾಸ್ತಾಂ ತನಯಾವುಭೌ ॥ ೪೫ ॥
ಧ್ರುವಶ್ಚೋತ್ತಾನಪಾದಸ್ಯ ಪುತ್ರಃ ಪರಮಧಾರ್ಮಿಕಃ ।
ಭಕ್ತ್ಯಾ ಸ ವಿಷ್ಣುಮಾರಾಧ್ಯ ಸ್ಥಾನಂ ಚೈವಾಕ್ಷಯಂ ಗತಃ ॥ ೪೬ ॥
ಪ್ರಿಯವ್ರತಸ್ಯ ರಾಜರ್ಷೇರುತ್ಪನ್ನಾ ದಶಸೂನವಃ ।
ತ್ರಯಃ ಪ್ರವ್ರಜಿತಾಸ್ತತ್ರ ಪರಂ ಬ್ರಹ್ಮ ಸಮಾಶ್ರಿತಾಃ ॥ ೪೭ ॥
ಸಪ್ತಸಪ್ತಸು ದ್ವಿಪೇಷು ತೇನ ಪುತ್ರಾಃ ಪ್ರತಿಷ್ಠಿತಾಃ ।
ಜಂಬೂದ್ವೀಪಾಧಿಪೋ ಜ್ಯೇಷ್ಠ ಆಗ್ನೀಧ್ರ ಇತಿ ವಿಶ್ರುತಃ ॥ ೪೮ ॥

---

ಮರ್ಯಾದಾಪರ್ವತಗಳು ನೀಲ, ಶ್ವೇತ ಮತ್ತು ಶೃಂಗವಂತಗಳೆಂದು ಹೇಳಲ್ಪಟ್ಟಿರುವುವು. ಪೂರ್ವದಿಕ್ಕಿನಲ್ಲಿ ಮಾಲ್ಯವಂತಗಿರಿಯೂ, ಪಶ್ಚಿಮದಲ್ಲಿ ಗಂಧಪರ್ವತವೂ ಮೇರೆಗಳಾಗಿರುವುವು. ಇಂತೀ ಗಿರಿಗಳೆಲ್ಲವೂ ಜಂಬೂದ್ವೀಪವನ್ನು ಸುತ್ತುವರೆದಿರುವ ಪರ್ವತಗಳೆಂದು ಹೇಳಲ್ಪಟ್ಟಿರುವುವು.

೪೪. ಗಂಧಮಾದನ ಪರ್ವತದಲ್ಲಿ ಮೇಲೆ ಹೇಳಿದಂತೆ ನೆಲಸಿರುವ ಜಂಬೂವೃಕ್ಷವು ದೊಡ್ಡ ಆನೆಯ ಆಕಾರವುಳ್ಳ ಫಲಗಳಿಂದ ತುಂಬಿದುದಾಗಿರುವುದು. ಆ ವೃಕ್ಷದ ಅಂಕಿತದಿಂದ ಈ ಪ್ರದೇಶಕ್ಕೆ ಜಂಬೂದ್ವೀಪವೆಂದು ಹೆಸರಾಯಿತು.

೪೫. ಪೂರ್ವದಲ್ಲಿ ಸ್ವಾಯಂಭುವ ಮನುವೆಂಬ ಮೊದಲನೆಯ ಪ್ರಜಾಪತಿಯಿದ್ದನು. ಆತನು ಶತರೂಪೆಯೆಂಬ ಸ್ತ್ರೀರತ್ನವನ್ನು ವಿವಾಹಮಾಡಿಕೊಂಡನು. ಆ ದಂಪತಿಗಳಿಗೆ ಪ್ರಿಯವ್ರತ ಮತ್ತು ಉತ್ತಾನಪಾದರೆಂಬ ಇಬ್ಬರು ಪುತ್ರರಾದರು.

೪೬. ಉತ್ತಾನಪಾದನ ಪುತ್ರನಾದ ಧ್ರುವನು ಪರಮಧರ್ಮಾತ್ಮನಾಗಿ ನಾರಾಯಣನನ್ನು ಆರಾಧಿಸಿ ಶಾಶ್ವತವಾದ ಸ್ಥಾನವನ್ನು ಸಂಪಾದಿಸಿದನು.

೪೭. ಪ್ರಿಯವ್ರತರಾಜನಿಗೆ ಹತ್ತುಜನ ಪುತ್ರರಾದರು. ಅವರಲ್ಲಿ ಮೂವರು ಪರಿವ್ರಾಜಕರಾಗಿ ಪರಬ್ರಹ್ಮೋಪಾಸಕರಾದರು.

೪೮. ಮಿಕ್ಕ ಏಳುಮಂದಿಯೂ ಭೂಮಂಡಲದ ಸಪ್ತದ್ವೀಪಗಳಲ್ಲಿ ಅಧಿಪತಿಗಳಾಗಿ ನೇಮಿಸಲ್ಪಟ್ಟರು. ಅವರಲ್ಲಿ ಜ್ಯೇಷ್ಠನಾದ ಆಗ್ನೀಧ್ರನೆಂಬ ಮಹಾತ್ಮನು ಜಂಬೂದ್ವೀಪಕ್ಕೆ ಅಧಿಪತಿಯಾದನು.

**ತಸ್ಯಾಸನ್ನವಸುತಾಃ ಪಾರ್ಥ ನವವರ್ಷೇಶ್ವರಾಃ ಸ್ಮೃತಾಃ ।**
**ತೇಷಾಂ ನಾಮ್ನಾ ಚ ತೇ ವರ್ಷಾಸ್ತಿಷ್ಠಂತ್ಯದ್ಯಾಪಿ ಚಾಂಕಿತಾಃ ॥ ೪೯ ॥**
**ಯೋಜನಾನಾಂ ಸಹಸ್ರಾಣಿ ನವ ಪ್ರತ್ಯೇಕಶಃ ಸ್ಮೃತಾಃ ।**
**ಮೇರೋಶ್ಚತುರ್ದಶಂ ಖಂಡಂ ಗಂಧಮಾಲ್ಯವತೋರ್ದ್ವಯೋಃ ।**
**ಅಂತರೇ ಹೇಮಭೂಮಿಷ್ಠಮಿಳಾವೃತಮಿಹೋಚ್ಯತೇ ॥ ೫೦ ॥**
**ಮಾಲ್ಯವತ್ಸಾಗರಾಂತಸ್ಯ ಭದ್ರಾಶ್ವಮಿತಿ ಪ್ರೋಚ್ಯತೇ ॥ ೫೧ ॥**
**ಗಂಧವತ್ಸಾಗರಾಂತಸ್ಯ ಕೇತುಮಾಲಮಿತಿ ಸ್ಮೃತಂ ॥ ೫೨ ॥**
**ಶೃಂಗವಜ್ಜಲಧೇರಂತಃ ಕುರುಖಂಡಮಿತಿ ಸ್ಮೃತಂ ।**
**ಶೃಂಗವಚ್ಛ್ವೇತಮಧ್ಯೇ ಚ ಖಂಡಂ ಪ್ರೋಕ್ತಂ ಹಿರಣ್ಮಯಂ ॥ ೫೩ ॥**
**ಸುನೀಲಶ್ವೇತಯೋರ್ಮಧ್ಯೇ ಖಂಡಮಾಹುಶ್ಚ ರಮ್ಯಕಂ ।**
**ನಿಷಧೋ ಹೇಮಕೂಟಶ್ಚ ಹರಿಖಂಡಂ ತದಂತರಾ ॥ ೫೪ ॥**
**ಹಿಮವದ್ಧಿಮಕೂಟಾಂತಃ ಖಂಡಂ ಕಿಂಪುರುಷಂ ಸ್ಮೃತಂ ।**
**ಹಿಮಾದ್ರಿಜಲಧೇರಂತರ್ನಾಭಿ ಖಂಡಮಿತಿ ಸ್ಮೃತಂ ॥ ೫೫ ॥**

---

೪೯. ಆತನಿಗೆ ಒಂಭತ್ತುಜನ ಮಕ್ಕಳಾಗಿ ಅವರೆಲ್ಲರೂ ಜಂಬೂದ್ವೀಪದ ನವವರ್ಷಗಳಿಗೆ ಒಡೆಯರಾದರೆಂದು ಕೇಳಿರುವೆವು. ಇಂದಿಗೂ ಕೂಡ ಆಯಾ ವರ್ಷಗಳು ಆಯಾ ಅಧಿಪತಿಗಳ ಹೆಸರುಗಳಿಂದಲೇ ಕರೆಯಲ್ಪಡುತ್ತಿರುವುವು.

೫೦. ಇವುಗಳಲ್ಲಿ ಒಂದೊಂದು ವರ್ಷವೂ ಒಂಬತ್ತುಸಾವಿರ ಯೋಜನಗಳ ಪರಿಮಾಣವುಳ್ಳದ್ದಾಗಿರುವುದು. ಮೇರುವಿನ ದೆಸೆಯಿಂದ ಹದಿನಾಲ್ಕನೆಯ ಖಂಡವಾಗಿ ಗಂಧವಂತ ಮತ್ತು ಮಾಲ್ಯವಂತ ಪರ್ವತಗಳ ಮಧ್ಯದಲ್ಲಿ ಹೇಮಮಯವಾದ ಭೂಮಿಯಿಂದೊಡಗೂಡಿ ಇಳಾವೃತವೆಂಬ ಖಂಡವಿರುವುದು.

೫೧–೫೨. ಮಾಲ್ಯವಂತ ಮತ್ತು ಸಮುದ್ರಗಳನಡುವೆ ಭದ್ರಾಶ್ವವೆಂಬ ಖಂಡವಿರುವುದು. ಗಂಧವಂತ ಪರ್ವತ ಮತ್ತು ಸಮುದ್ರಗಳ ಮಧ್ಯಪ್ರದೇಶವು ಕೇತುಮಾಲ ಖಂಡವೆನಿಸಿರುವುದು.

೫೩. ಶೃಂಗವಂತಗಿರಿ ಮತ್ತು ಸಮುದ್ರಗಳ ನಡುವೆ ಕುರುಖಂಡವಿರುವುದು. ಶೃಂಗವಂತ ಮತ್ತು ಶ್ವೇತಪರ್ವತಗಳ ಮಧ್ಯೆ ಹಿರಣ್ಮಯ ಖಂಡವಿರುವುದು.

೫೪. ಸುನೀಲ ಮತ್ತು ಶ್ವೇತ ಪರ್ವತಗಳ ಅಂತರವು ರಮ್ಯಕಖಂಡವು. ನಿಷಧ ಮತ್ತು ಹೇಮಕೂಟ ಗಿರಿಗಳ ಮಧ್ಯಪ್ರದೇಶವು ಹರಿಖಂಡವೆನಿಸುವುದು.

೫೫. ಹಿಮವಂತ ಮತ್ತು ಹಿಮಕೂಟಗಳ ಮಧ್ಯೆ ಕಿಂಪುರುಷಖಂಡವೂ, ಹಿಮವಂತಗಿರಿ ಸಮುದ್ರಗಳಮಧ್ಯೆ ನಾಭಿಖಂಡವೂ ಇರುವುವು.

ನಾಭಿಖಂಡಂ ಚ ಕುರವೋ ದ್ವೇ ವರ್ಷೇ ಧನುಷಾಕೃತೀ ।
ಹಿಮವಾಂಶ್ಚ ಗಿರಿಶೃಂಗೀ ಜ್ಯಾಸ್ಥಾನೇ ಪರಿಕೀರ್ತಿತೌ ॥ ೫೬ ॥
ನಾಭೇಃ ಪುತ್ರಶ್ಚ ಋಷಭ ಋಷಭಾದ್ಭರತೋಽಭವತ್ ।
ತಸ್ಯ ನಾಮ್ನಾ ತ್ವಿದಂ ವರ್ಷಂ ಭಾರತಂ ಚೇತಿ ಕೀರ್ತ್ಯತೇ ॥ ೫೭ ॥
ಅತ್ರ ಧರ್ಮಾರ್ಥಕಾಮಾನಾಂ ಮೋಕ್ಷಸ್ಯ ಚ ಉಪಾರ್ಜನಂ ।
ಅನ್ಯತ್ರ ಭೋಗಭೂಮಿಶ್ಚ ಸರ್ವತ್ರ ಕುರುನಂದನ ॥ ೫೮ ॥
ಶಾಕದ್ವೀಪೇ ಚ ಶಾಕೋಽಸ್ತಿ ಯೋಜನಾನಾಂ ಸಹಸ್ರಕಃ ।
ತಸ್ಯ ನಾಮ್ನಾ ಚ ತದ್ವರ್ಷಂ ಶಾಕದ್ವೀಪಮಿತಿ ಸ್ಮೃತಂ ॥ ೫೯ ॥
ತಸ್ಯ ಚ ಪ್ರಿಯವ್ರತ ಏವಾಧಿಪತಿರ್ನಾಮ್ನಾ ಮೇಧಾತಿಥಿರಿತಿ ॥ ೬೦ ॥
ತಸ್ಯ ಪುರೋಜವ ಮನೋಜವ ವೇಪಮಾನ ಧೂಮ್ರಾನೀಕ ಚಿತ್ರರೇಫ ।
ಬಹುರೂಪವಿಶ್ವಚಾರಸಂಜ್ಞಾನಿ ಪುತ್ರನಾಮಾನಿ ಸಪ್ತವರ್ಷಾಣಿ ॥ ೬೧ ॥
ಶಾಕದ್ವೀಪೇ ಚ ವರ್ಷ ಋತವ್ರತಸತ್ಯವ್ರತಾನುವ್ರತನಾಮಾನೋ
ವಾಯ್ವಾತ್ಮಕಂ ಭಗವಂತಂ ಜಪಂತಿ ॥ ೬೨ ॥

---

೫೬. ನಾಭಿಖಂಡ ಮತ್ತು ಕುರು ಖಂಡಗಳೆರಡೂ ಧನುಸ್ಸಿನ ಆಕಾರ ಗಳಾಗಿರುವುವು. ಹಿಮವಂತ, ಗಿರಿಶೃಂಗ ಪರ್ವತಗಳು ಅವುಗಳಿಗೆ ಹೆದೆಗಳಂತೆ ಕಾಣುತ್ತಿರುವುವು.

೫೭. ನಾಭಿರಾಜನಿಗೆ ಋಷಭನೆಂಬವನು ಪುತ್ರನು. ಋಷಭರಾಜನ ಮಗನೇ ಭರತನೆಂಬುವನು. ಆತನ ಹೆಸರಿನಿಂದಲೇ ಈ ಪ್ರದೇಶವು ಭರತ ವರ್ಷವೆಂದು ಪ್ರಸಿದ್ಧವಾಗಿರುವುದು.

೫೮. ಇಲ್ಲಿ ಮಾತ್ರ ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ಚತುರ್ವಿಧ ಪುರುಷಾರ್ಥಗಳನ್ನೂ ಸಾಧಿಸಬಹುದು. ಇತರ ಎಲ್ಲ ಪ್ರದೇಶಗಳೂ ಕೇವಲ ಭೋಗಭೂಮಿಗಳೇ ಹೊರತು ಕರ್ಮಭೂಮಿಗಳಲ್ಲ.

೫೯-೬೦. ಶಾಕದ್ವೀಪದಲ್ಲಿ ಒಂದುಸಾವಿರ ಯೋಜನದ ಉನ್ನತವಾದ ಶಾಕವೃಕ್ಷವಿರುವುದು. ಅದರಿಂದಲೇ ಆ ದ್ವೀಪಕ್ಕೆ ಆ ಹೆಸರುಂಟಾಯಿತು. ಅದಕ್ಕೆ ಪ್ರಿಯವ್ರತನ ಮಗನಾದ ಮೇಧಾತಿಥಿಯೆಂಬುವನು ಅಧಿಪತಿಯು.

೬೧. ಆತನಿಗೆ ಪುರೋಜವ, ಮನೋಜವ, ವೇಪಮಾನ, ಧೂಮ್ರಾನೀಕ, ಚಿತ್ರರೇಫ, ಬಹುರೂಪ, ವಿಶ್ವಚಾರರೆಂಬುವರು ಪುತ್ರರು. ಇವರೇ ಶಾಕ ದ್ವೀಪದ ಸಪ್ತವರ್ಷಗಳಿಗೆ ನಾಯಕರು.

೬೨. ಶಾಕದ್ವೀಪದಲ್ಲಿ ಜನರು ಋತವ್ರತ, ಸತ್ಯವ್ರತ ಮತ್ತು ಅನುವ್ರತ ರೆಂಬ ಮೂರು ವರ್ಣದವರಾಗಿ ವಾಯುರೂಪನಾದ ಸ್ವಾಮಿಯನ್ನು ಸ್ತುತಿ ಸುವರು.

ಅಂತಃ ಪ್ರವಿಶ್ಯ ಭೂತಾನಿ ಯೋ ವಿಭಜ್ಯಾತ್ಮಕೇತುಭಿಃ ।
ಅಂತರ್ಯಾಮೀಶ್ವರಃ ಸಾಕ್ಷಾತ್ಪಾತು ನೋ ಯದ್ವಶೇ ಜಗತ್ ॥ ೬೩ ॥
ಕುಶದ್ವೀಪೇ ಕುಶಸ್ತಂಭೋ ಯೋಜನಾನಾಂ ಸಹಸ್ರಕಃ ।
ತಚ್ಚಿಹ್ನಚಿಹ್ನಿತಂ ತಸ್ಮಾತ್ಕುಶದ್ವೀಪಂ ತತಃ ಸ್ಮೃತಂ ॥ ೬೪ ॥
ತದ್ದ್ವೀಪಪತಿಶ್ಚ ಪ್ರೈಯವ್ರತೋ ಹಿರಣ್ಯರೋಮಾ ತತ್ಪುತ್ರವಸು ವಸುದಾನದೃಢಕವಿನಾಭಿಗುಪ್ತ ಸತ್ಯವ್ರತ ವಾಮದೇವನಾಮಾಂಕಿತಾನಿ ಸಪ್ತವರ್ಷಾಣಿ ವರ್ಣಾಶ್ಚ ಕುಲಿಶಕೋವಿದಾಭಿಯುಕ್ತಕುಲಕಸಂಜ್ಞಾ ಜಾತವೇದಸಂ ಭಗವಂತಂ ಸ್ತುವಂತಿ ॥ ೬೫ ॥
ಪರಸ್ಯ ಬ್ರಹ್ಮಣಃ ಸಾಕ್ಷಾಜ್ಜಾತವೇದಾಸಿ ಹವ್ಯವಾಟ್ ।
ದೇವಾನಾಂ ಪುರುಷಾಂಗಾನಾಂ ಯಜ್ಞೇನ ಪುರುಷಂ ಯಜಃ ॥ ೬೬ ॥
ಕ್ರೌಂಚದ್ವೀಪೇ ಕ್ರೌಂಚನಾಮಾ ಪರ್ವತೋ ಯೋಜನಾಯುತಃ ।
ಯೋಽಸೌ ಗುಹೇನ ನಿರ್ಭಿನ್ನಸ್ತಚ್ಚಿಹ್ನಂ ಕ್ರೌಂಚದ್ವೀಪಕಂ ॥ ೬೭ ॥

---

೬೩. "ಯಾವನು ತನ್ನ ಕಲಾವಿಶೇಷಗಳಿಂದ ಸಕಲ ಭೂತಗಳಲ್ಲಿಯೂ ಅಂತಃಪ್ರವಿಷ್ಟನಾಗಿ ವಿಭಜನೆಮಾಡಿರುವನೊ, ಯಾವನ ವಶದಲ್ಲಿ ಸಕಲ ಜಗತ್ತೂ ವರ್ತಿಸುತ್ತಿರುವುದೊ, ಅಂತಹ ಅಂತರ್ಯಾಮಿಯಾದ ಸಾಕ್ಷಾದೀಶ್ವರನು ನಮ್ಮನ್ನು ರಕ್ಷಿಸಲಿ" ಎಂಬುದೇ ಅವರ ಜಪವು.

೬೪. ಕುಶದ್ವೀಪದಲ್ಲಿ ಸಾವಿರಯೋಜನ ಪ್ರಮಾಣದ ಕುಶಸ್ತಂಭವಿರುವುದು. ಆ ಚಿಹ್ನದಿಂದಲೇ ಆ ದೇಶಕ್ಕೆ ಕುಶದ್ವೀಪವೆಂಬ ಹೆಸರಿರುವುದು.

೬೫. ಆ ದ್ವೀಪಕ್ಕೆ ಅಧಿಪತಿಯಾದವನು ಪ್ರಿಯವ್ರತನ ಮಗನಾದ ಹಿರಣ್ಯರೋಮನೆಂಬುವನು. ಆ ದ್ವೀಪದ ಸಪ್ತವರ್ಷಗಳಿಗೆ ಆತನ ಮಕ್ಕಳಾದ ವಸು, ವಸುದಾನ, ದೃಢ, ಕವಿ, ನಾಭಿಗುಪ್ತ, ಸತ್ಯವ್ರತ, ವಾಮದೇವ ರೆಂಬುವರು ನಾಯಕರು. ಕುಲಿಶ, ಕೋವಿದ, ಅಭಿಯುಕ್ತ, ಕುಲಕ ಎಂಬ ಚಾತುರ್ವರ್ಣ್ಯದವರು ಅಲ್ಲಿ ಅಗ್ನ್ಯಾತ್ಮಕನಾದ ಭಗವಂತನನ್ನು ಸ್ತುತಿಸುವರು.

೬೬. "ಹೇ ಜಾತವೇದ! ನೀನು ಪರಬ್ರಹ್ಮನಿಗೆ ಹವ್ಯವನ್ನು ತೆಗೆದುಕೊಂಡುಹೋಗುವೆ. ಮನುಷ್ಯ ರೂಪರಾದ ದೇವತೆಗಳ ಯಜ್ಞದಿಂದ ಪರಮೇಶ್ವರನನ್ನು ಪೂಜಿಸುವೆ (ರಕ್ಷಿಸು)" ಎಂಬುದು ಅವರ ಜಪವು.

೬೭. ಕ್ರೌಂಚ ದ್ವೀಪದಲ್ಲಿ ಹತ್ತುಸಾವಿರ ಯೋಜನಗಳ ಎತ್ತರವುಳ್ಳ ಕ್ರೌಂಚಪರ್ವತವಿರುವುದು. ಈ ಪರ್ವತವೇ ಷಣ್ಮುಖನಿಂದ ಭಿನ್ನಮಾಡಲ್ಪಟ್ಟು ದ್ವೀಪಕ್ಕೆ ತನ್ನ ಹೆಸರನ್ನು ಕೊಟ್ಟಿರುವುದು.

ತತ್ರ ಚ ಪ್ರಿಯವ್ರತೋ ಧೃತಪೃಷ್ಟಿನಾಮಾ ತತ್ಪುತ್ರಾಃ ಆಮ
ಮಧುರುಹ ಮೇಘಪೃಷ್ಠಸ್ವಧಾಮ ಋತಾಶ್ವಲೋಹಿತಾರ್ಣವ
ವನಸ್ಪತಿ ಇತಿ ಸಪ್ತ ಪುತ್ರನಾಮಾಂಕಿತಾನಿ ಸಪ್ತವರ್ಷಾಣಿ ॥ ೬೮ ॥
ವರ್ಣಾಶ್ಚ ಗುರುಋಷಭದ್ರವಿಣದೇವಕಸಂಜ್ಞಾಃ ॥ ೬೯ ॥
ಆಪೋಮಯಂ ಭಗವಂತಂ ಸ್ತುವಂತಿ ॥ ೭೦ ॥
ಆಪಃ ಪುರುಷವೀರ್ಯಾಶ್ಚ ಪುನಂತೀರ್ಭೂರ್ಭುವಃ ಸ್ವಶ್ಚ ॥
ತೈಃ ಪುನರಮೀವಘ್ನೀಂ ಸಂಸ್ಪೃಶೇತಾತ್ಮನಾಭುವಃ ॥ ೭೧ ॥
ಶಾಲ್ಮಲೇರ್ನಾಮ ವೃಕ್ಷಸ್ಯ ತತ್ರ ವಾಸಃ ಸಹಸ್ರಂ ।
ಯೋಜನಾನಾಂ ತಚ್ಚಿಹ್ನಂ ಶಾಲ್ಮಲೀದ್ವೀಪಮುಚ್ಯತೇ ॥ ೭೨ ॥
ತಸ್ಯಾಧಿಪತಿಃ ಪ್ರಿಯವ್ರತೋ ಯಜ್ಞಬಾಹುಸ್ತತ್ಪುತ್ರ
ಸುರೋಚನ ಸೌಮನಸ್ಯ ರಮಣಕ ದೇವಬರ್ಹಿ ಪಾರಿಭದ್ರಾ
ಪ್ಯಾಯನಾಭಿಜ್ಞಾನ ನಾಮಾನಿ ಸಪ್ತವರ್ಷಾಣಿ ॥ ೭೩ ॥

---

೬೮. ಅಲ್ಲಿ ಪ್ರಿಯವ್ರತ ಪುತ್ರನಾದ ಧೃತಪುಷ್ಟಿಯೆಂಬುವನು ದ್ವೀಪಾಧಿಪತಿಯು. ಆತನ ಮಕ್ಕಳಾದ ಆಮ, ಮಧುರುಹ, ಮೇಘಪೃಷ್ಠ, ಸ್ವಧಾಮ, ಋತಾಶ್ವ, ಲೋಹಿತಾರ್ಣವ, ವನಸ್ಪತಿ ಎಂಬ ಏಳು ಜನರೂ ಸಪ್ತವರ್ಷಗಳಿಗೆ ನಾಮಕರಾಗಿರುವರು.

೬೯–೭೦. ಅವರಲ್ಲಿ ಗುರು, ಋಷಭ, ದ್ರವಿಣ, ದೇವಕರೆಂಬ ಚತುರ್ವರ್ಣಗಳುಂಟು. ಆ ಪ್ರದೇಶದ ನಿವಾಸಿಗಳು ಆಪೋಮಯನಾದ ದೇವನನ್ನು ಸ್ತುತಿಸುವರು.

೭೧. "ಆಪಗಳು (ಜಲಗಳು) ಪರಮಾತ್ಮನ ವೀರ್ಯಸಹಿತಗಳು; ಭೂಲೋಕ, ಭುವರ್ಲೋಕ, ಸುವರ್ಲೋಕಗಳನ್ನು ಪಾವನಗೊಳಿಸುವುವು. ಅವುಗಳಿಂದ ಪಾಪಗಳನ್ನು ಕಳೆದುಕೊಂಡು ಭೂಮಿಯಲ್ಲಿ ಆತ್ಮನನ್ನು ಕಾಣಬೇಕು" ಎಂಬುದು ಅವರ ಜಪವು.

೭೨. ಈ ದ್ವೀಪದಾಚೆ ಶಾಲ್ಮಲೀ ದ್ವೀಪವಿರುವುದು. ಒಂದು ಸಾವಿರ ಯೋಜನ ಎತ್ತರವುಳ್ಳ ಶಾಲ್ಮಲೀ (ಬೂರುಗ) ವೃಕ್ಷವು ಅಲ್ಲಿದ್ದುಕೊಂಡು ಆ ದ್ವೀಪಕ್ಕೆ ತನ್ನ ಹೆಸರನ್ನು ಕೊಟ್ಟಿರುವುದು.

೭೩. ಇದಕ್ಕೆ ಪ್ರಿಯವ್ರತಪುತ್ರನಾದ ಯಜ್ಞಬಾಹುವು ಅಧಿಪತಿಯಾಗಿ ಸಪ್ತವರ್ಷಗಳಿಗೂ ತನ್ನ ಮಕ್ಕಳಾದ ಸುರೋಚನ, ಸೌಮನಸ್ಯ, ರಮಣಕ, ದೇವಬರ್ಹಿ, ಪಾರಿಭದ್ರ, ಆಪ್ಯಾಯನ, ಅಭಿಜ್ಞಾನರೆಂಬುವರನ್ನು ನಾಯಕರನ್ನಾಗಿ ಮಾಡಿರುವನು.

ವರ್ಣಾಶ್ಚ ಶ್ರುತಧರ ವೀರ್ಯವಸುಂಧರ ಇಷಂಧರಸಂಜ್ಞಾ
ಭಗವಂತಂ ಸೋಮಂ ಯಜಂತಿ ॥ ೭೪ ॥
ಸ್ವಯೋನೀಃ ಪಿತೃದೇವೇಭ್ಯೋ ವಿಭಜನ್ಶುಕ್ಲಕೃಷ್ಣಯೋಃ ।
ಅಧಃ ಪ್ರಜಾನಾಂ ಸರ್ವಾಸಾಂ ರಾಜಾ ನಃ ಸೋಮೋಽಸ್ತು ॥ ೭೫ ॥
ಗೋಮೇದನಾಮಾ ಪ್ಲಕ್ಷೋಽಸ್ತಿ ಸುರಮ್ಯೋ ಯಸ್ಯ ಛಾಯಯಾ ।
ಮೇದೋವೃದ್ಧಿಂ ಗತಂ ಲೌಲ್ಯಾದ್ಗೋಮೇದಂ ದ್ವೀಪಮುಚ್ಯತೇ ॥೭೬॥
ತತ್ರ ಪ್ರೈಯವ್ರತ ಇಧ್ಮಜಿಹ್ವಃ ಪತಿಸ್ತತ್ಪುತ್ರ ಶಿವಸುರಮ್ಯ ಸುಭದ್ರ
ಶಾಂತ್ಯ ಶಪ್ತಾಮೃತಾಭಯ ನಾಮಾಂಕಿತಾನಿ ಸಪ್ತವರ್ಷಾಣಿ ॥ ೭೭ ॥
ವರ್ಣಾಶ್ಚ ಹಂಸ ಪತಂಗೋರ್ಧ್ವಾಂಚನ ಸತ್ಯಾಂಗ ಸಂಜ್ಞಾಶ್ಚತ್ವಾರೋ
ಭಗವಂತಂ ಸೂರ್ಯಂ ಯಜಂತೇ ॥ ೭೮ ॥
ಪ್ರಶ್ನಸ್ಯ ವಿಷ್ಣುರೂಪಂ ಯತ್ತತೋರ್ಥಸ್ಯ ।
ಬ್ರಹ್ಮಣೋಽಮೃತಸ್ಯ ಚ ।
ಮೃತ್ಯೋಶ್ಚ ಸೂರ್ಯಮಾತ್ಮಾನಂ ಧೀಮಹಿ ॥ ೭೯ ॥

---

೭೪. ಈ ದ್ವೀಪದಲ್ಲಿ ಜನರು ಶೃತಧರ, ವೀರ್ಯ, ವಸುಂಧರ, ಇಷಂಧರ ರೆಂಬ ನಾಲ್ಕು ವರ್ಣಗಳುಳ್ಳವರಾಗಿ ಚಂದ್ರರೂಪಿಯಾದ ಭಗವಂತನನ್ನು ಸ್ತೋತ್ರಮಾಡುವರು.

೭೫–೭೬. "ಯಾವನು ಆತ್ಮಯೋನಿಯಾಗಿ ಪಿತೃಗಳಿಗೂ, ದೇವತೆಗಳಿಗೂ ಶುಕ್ಲಪಕ್ಷ, ಕೃಷ್ಣಪಕ್ಷಗಳನ್ನು ವಿಭಾಗಮಾಡಿಕೊಟ್ಟಿರುವನೋ ಆ ಸೋಮನು ಅಧೋಲೋಕಗಳಲ್ಲಿರುವ ಪ್ರಜೆಗಳಾದ ನಮ್ಮೆಲ್ಲರಿಗೂ ರಾಜನಾಗಲಿ" ಎಂದು ಜಪಿಸುವರು. ಪ್ಲಕ್ಷದ್ವೀಪದಲ್ಲಿ ಗೋಮೇದವೆಂಬ ಮನೋಹರವಾದ ಪ್ಲಕ್ಷ (ಅತ್ತಿಯ) ವೃಕ್ಷವಿರುವುದು. ಅದರ ಛಾಯೆಯಲ್ಲಿ ವಾಸಿಸುವುದರಿಂದ ಜನರಿಗೆ ಸುಲಭವಾಗಿ ಬುದ್ಧಿಶಕ್ತಿಯು ಹೆಚ್ಚುವುದು. ಅದರಿಂದಲೇ ಆ ದ್ವೀಪಕ್ಕೆ ಗೋಮೇದವೆಂದು ಹೆಸರು.

೭೭. ಅಲ್ಲಿ ಪ್ರಿಯವ್ರತನ ತನಯನಾದ ಇಧ್ಮಜಿಹ್ವನೆಂಬುವನು ಅಧಿಪತಿ ಯಾಗಿ ಸಪ್ತಖಂಡಗಳನ್ನೂ ತನ್ನ ಮಕ್ಕಳಾದ ಶಿವ, ಸುರಮ್ಯ, ಸುಭದ್ರ, ಶಾಂತಿ, ಅಶಪ್ತ, ಅಮೃತ, ಅಭಯರೆಂಬುವರಲ್ಲಿ ವಿಭಾಗಮಾಡಿರುವನು.

೭೮. ಇಲ್ಲಿ ಹಂಸ, ಪತಂಗ, ಊರ್ಧ್ವಾಂಚನ, ಸತ್ಯಾಂಗರೆಂಬ ನಾಲ್ಕು ವರ್ಣಗಳ ಜನರೂ ಸೂರ್ಯರೂಪಿಯಾದ ಭಗವಂತನನ್ನು ಪೂಜಿಸುವರು.

೭೯. "ಪ್ರಶ್ನಾವಸರದಲ್ಲಿ ಯಾವ ವಿಷ್ಣುರೂಪವು ಗೋಚರವಾಗುವುದೊ, ಅದಕ್ಕೂ, ಮರಣವರ್ಜಿತನಾದ ಬ್ರಹ್ಮನಿಗೂ, ಮೃತ್ಯುದೇವತೆಗೂ ಆತ್ಮ ನಾಗಿರುವ ಸೂರ್ಯನನ್ನು ಧ್ಯಾನಿಸುತ್ತೇವೆ" ಎಂಬುದು ಅವರ ಜಪವು.

ಸ್ವರ್ಣಪತ್ರಾಣಿ ನಿಯುತಂ ಯೋಜನಾನಾಂ ಸಹಸ್ರಕಂ ।
ಪುಷ್ಕರಂ ಜ್ವಲದಾಭಾತಿ ತಚ್ಚಿಹ್ನಂ ದ್ವೀಪ ಪುಷ್ಕರಂ ॥ ೮೦ ॥
ತಸ್ಯಾಧಿಪತಿಃ ಪ್ರಿಯವ್ರತೋ ವೀತಹೋತ್ರನಾಮಾ
ತತ್ಪುತ್ರಾ ರಮಣಕ ಘಾತಕೌ ॥ ೮೧ ॥
ತನ್ನಾಮ ಚಿಹ್ನಿತಂ ಖಂಡದ್ವಯಂ ॥ ೮೨ ॥
ತಯೋರಂತರಾಲೇ ಮಾನಸಾಚಲೋ ನಾಮ ವಲಯಾಕಾರಃ
ಪರ್ವತೋ ಯಸ್ಮಿನ್ಭ್ರಮತಿ ಭಗವಾನ್ಭಾಸ್ಕರ ಇತಿ ॥ ೮೩ ॥
ತತ್ರ ವರ್ಣಾಶ್ಚ ನ ಸಂತಿ ಕೇವಲಂ ಸಮಾನಾಸ್ತೇ ಬ್ರಹ್ಮ ಧ್ಯಾಯಂತಿ ॥೮೪॥
ಯದ್ಯತ್ಕರ್ಮಮಯಾ ಲಿಂಗಂ ಬ್ರಹ್ಮಲಿಂಗಂ ಜನೋಽರ್ಚಯನ್ ।
ಭೇದೇನೈಕಾಂತಮದ್ವೈತಂ ತಸ್ಮೈ ಭಗವತೇ ನಮಃ ॥ ೮೫ ॥
ನೈಷ ಕ್ರೋಧೋ ನ ಮಾತ್ಸರ್ಯಂ ಪುಣ್ಯಪಾಪಾರ್ಜನೇ ನ ಚ ।
ಅಯುತಂ ದ್ವಿಗುಣಂ ಚಾಪಿ ಕ್ರಮಾದಾಯುಃ ಪ್ರಕೀರ್ತಿತಂ ॥ ೮೬ ॥

---

೮೦. ಈ ದ್ವೀಪದಾಚೆ ಇಪ್ಪತ್ತು ಸಾವಿರ ಸ್ವರ್ಣಪತ್ರ ಕಮಲಗಳುಳ್ಳ ಸಾವಿರ ಯೋಜನ ವಿಸ್ತಾರವಾದ ಪುಷ್ಕರವೆಂಬ ಸರೋವರವು ದೀಪ್ತಮಾನ ವಾಗಿರುವುದು. ಆ ಚಿಹ್ನೆಯಿಂದಲೇ ಆ ದೇಶಕ್ಕೆ ಪುಷ್ಕರ ದ್ವೀಪವೆಂದು ಹೆಸರಾಗಿರುವುದು.

೮೧. ಅದಕ್ಕೆ ಅಧಿಪತಿಯಾದವನು ಪ್ರಿಯವ್ರತನ ಪುತ್ರನಾದ ವೀತ ಹೋತ್ರನೆಂಬುವನು. ಆತನಿಗೆ ರಮಣಕ, ಘಾತಕರೆಂಬ ಇಬ್ಬರು ಪುತ್ರರು.

೮೨. ಅವರ ಹೆಸರುಗಳಿಂದ ಎರಡು ಖಂಡಗಳಿರುವುವು.

೮೩. ಈ ಎರಡರ ಮಧ್ಯದಲ್ಲಿ ಮಾನಸಾಚಲವೆಂಬ ಉಂಗುರದಂತಿರುವ ಪರ್ವತವಿರುವುದು. ಇದರ ವಲಯದಲ್ಲಿಯೇ ಭಗವಂತನಾದ ಸೂರ್ಯದೇವನು ಸುತ್ತಾಡುತ್ತಿರುವನು.

೮೪. ಅವುಗಳಲ್ಲಿ ವರ್ಣವ್ಯತ್ಯಾಸಗಳಿಲ್ಲ. ಜನರೆಲ್ಲರೂ ಕೇವಲ ಸಮಾನ ರಾಗಿ ಬ್ರಹ್ಮವಸ್ತುವನ್ನೇ ಧ್ಯಾನಿಸುತ್ತಿರುವರು.

೮೫. "ಯಾವ ಯಾವ ಲಿಂಗವು ಕರ್ಮಮಯವಾಗಿರುವುದೊ, ಅವು ಗಳೆಲ್ಲವೂ ವಸ್ತುತಃ ಬ್ರಹ್ಮವಸ್ತುವಿನ ಪ್ರತಿಪಾದಕ ಲಿಂಗ (ಚಿಹ್ನ–ಗುರುತು)ಗಳಾ ಗಿರುವುವು. ಇಂತು ಅದ್ವಿತೀಯವೂ, ಶಶ್ವದೇಕ ಪ್ರಕಾರವೂ ಆದ ಯಾವ ಬ್ರಹ್ಮ ನನ್ನು ಜನರು ಭೇದಬುದ್ಧಿಯಿಂದ ಅರ್ಚನೆ ಮಾಡುವರೊ, ಅಂತಹ ಭಗವಂತ ನಿಗೆ ನಮಸ್ಕಾರವು" ಎಂಬುದೇ ಅವರ ಜಪವು.

೮೬. ಈ ದ್ವೀಪದ ನಿವಾಸಿಗಳಲ್ಲಿ ಕ್ರೋಧವಾಗಲಿ, ಮಾತ್ಸರ್ಯವಾಗಲಿ, ಪುಣ್ಯಪಾಪಗಳ ಸಂಪಾದನೆಯಾಗಲಿ ಸಂಭವಿಸುವುದಿಲ್ಲ. ರಮಣಕ ವರ್ಷದ

**ಜಪಂತಃ ಕಾಮಿನೀಯುಕ್ತಾ ವಿಹರಂತ್ಯಮರಾ ಇವ ।**
**ಅಥ ತೇ ಸಂಪ್ರವಕ್ಷ್ಯಾಮಿ ಊರ್ಧ್ವಲೋಕಸ್ಯ ಸಂಸ್ಥಿತಿಂ ॥ ೮೭ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪ್ರಥಮೇ ಮಾಹೇಶ್ವರಖಂಡೇ ಕೌಮಾರಿಕಾಖಂಡೇ "ಕುಮಾರಿಕಾಖ್ಯಾನೇ – ಭೂಸಂಸ್ಥಿತಿವರ್ಣನಂ"ನಾಮ ಸಪ್ತತ್ರಿಂಶೋಽಧ್ಯಾಯಃ**

---

ನಿವಾಸಿಗಳಿಗೆ ಹತ್ತುಸಾವಿರ ವರ್ಷಗಳ ಆಯುಃಪ್ರಮಾಣವೂ, ಘಾತಕವರ್ಷದವರಿಗೆ ಇಪ್ಪತ್ತುಸಾವಿರ ವರ್ಷಗಳ ಆಯುಷ್ಯವೂ ಇರುವುವೆಂದು ಹೇಳಲ್ಪಟ್ಟಿರುವುದು.

೮೭. ಇವರೆಲ್ಲರೂ ತಮ್ಮ ಪತ್ನಿಯರೊಡನೆ ಬ್ರಹ್ಮನನ್ನು ಜಪಿಸುತ್ತ ದೇವತೆಗಳಂತೆ ವಿಹರಿಸುತ್ತಿರುವರು. ಇನ್ನು ಊರ್ಧ್ವ ಲೋಕಗಳ ವಿಸ್ತಾರ ಕ್ರಮವನ್ನು ತಿಳಿಸುವೆನು. ಕೇಳುವವನಾಗು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಎರಡನೆಯ ಕೌಮಾರಿಕಾ ಖಂಡದಲ್ಲಿ "ಕುಮಾರಿಕಾಖ್ಯಾನ – ಭೂಸಂಸ್ಥಿತಿವರ್ಣನ"ವೆಂಬ ಮೂವತ್ತೇಳನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಅಷ್ಟತ್ರಿಂಶೋಽಧ್ಯಾಯಃ

### ಕುಮಾರಿಕಾಖ್ಯಾನೇ — ಲೋಕವ್ಯವಸ್ಥಿತಿವರ್ಣನಂ

ನಾರದ ಉವಾಚ :—

**ಭೂಮೇರ್ಯೋಜನಲಕ್ಷೇ ಚ ಕೌರವ್ಯ ರವಿಮಂಡಲಂ ।**
**ಯೋಜನಾನಾಂ ಸಹಸ್ರಾಣಿ ಭಾಸ್ಕರಸ್ಯ ರಥೋ ನವ ॥ ೧ ॥**
**ಈಷಾದಂಡಸ್ತಥೈವಾಸ್ಯ ದ್ವಿಗುಣಃ ಪರಿಕೀರ್ತಿತಃ ।**
**ಸಾರ್ಧಕೋಟಿಸ್ತಥಾ ಸಪ್ತ ನಿಯುತಾನಿ ವಿವಸ್ವತಃ ॥ ೨ ॥**
**ಯೋಜನಾನಾಂ ತು ತಸ್ಯಾಕ್ಷಸ್ತತ್ರ ಚಕ್ರಂ ಪ್ರತಿಷ್ಠಿತಂ ।**
**ತ್ರಿನಾಭಿ ತಚ್ಚ ಪಂಚಾರಂ ಷಣ್ನೇಮಿ ಪರಿಕೀರ್ತಿತಂ ॥ ೩ ॥**
**ಚತ್ವಾರಿಂಶತ್ಸಹಸ್ರಾಣಿ ದ್ವಿತೀಯೋಽಕ್ಷೋಽಪಿ ವಿಸ್ತೃತಃ ।**
**ಪಂಚ ಚಾನ್ಯಾನಿ ಸಾರ್ಧಾನಿ ಸ್ಯಂದನಸ್ಯ ತು ಪಾಂಡವ ॥ ೪ ॥**
**ಅಕ್ಷಪ್ರಮಾಣಮುಭಯೋಃ ಪ್ರಮಾಣಂ ತದ್ಯುಗಾರ್ಧಯೋಃ ।**
**ಹ್ರಸ್ವೋಽಕ್ಷಸ್ತದ್ಯುಗಾರ್ಧಂ ಚ ಧ್ರುವಾಧಾರಂ ರಥಸ್ಯ ವೈ ॥ ೫ ॥**

---

### ಕನ್ನಡದ ಅನುವಾದ

#### ಕುಮಾರಿಕಾಖ್ಯಾನ — ಲೋಕವ್ಯವಸ್ಥಿತಿವರ್ಣನ

೧. ನಾರದನು ಹೇಳುತ್ತಾನೆ:— ಎಲೈ ಪಾರ್ಥನೆ! ಭೂಲೋಕಕ್ಕೆ ಲಕ್ಷ ಯೋಜನ ದೂರದಲ್ಲಿ ಸೂರ್ಯಮಂಡಲವಿರುವುದು. ಆತನ ರಥವು ಒಂಭತ್ತು ಸಾವಿರ ಯೋಜನಗಳ ವಿಸ್ತಾರವುಳ್ಳುದಾಗಿರುವುದು.

೨. ಆ ರಥದ ದಂಡವು (ಮೂಕಿಮರವು) ಹದಿನೆಂಟು ಸಾವಿರ ಯೋಜನ ಉದ್ದವಿರುವುದು. ಸೂರ್ಯನ ಸಂಚಾರ ಮಂಡಲದ ಅಕ್ಷವು ಒಂದೂವರೆ ಕೋಟಿ ಏಳು ಲಕ್ಷ ಯೋಜನವಿರುವುದು.

೩. ಅದರ ಕೊನೆಯಲ್ಲಿ ಸೂರ್ಯರಥದ ಚಕ್ರವಿರುವುದು. ಅದು ಮೂರು ನಾಭಿಗಳಿಂದಲೂ, ಐದು ಅರಗಳಿಂದಲೂ, ಆರು ನೇಮಿಗಳಿಂದಲೂ ಕೂಡಿದು ದೆಂದು ಹೇಳಲ್ಪಟ್ಟಿರುವುದು.

೪. ಎರಡನೆಯ ಅಕ್ಷವು ನಲವತ್ತು ಸಾವಿರ ಯೋಜನ ವಿಸ್ತಾರವಾದುದು. ಎಲೈ ಪಾಂಡವನೆ! ಈ ರಥಕ್ಕೆ ಇವುಗಳ ಜೊತೆಗೆ ಇತರ ಐದೂ ಇರುವುವು.

೫. ಈ ಎರಡು ಅಕ್ಷಗಳ ಪ್ರಮಾಣವೂ ಆಯಾ ಯುಗಾರ್ಧಗಳ ಪ್ರಮಾಣ ವಾಗಿರುವುದು. ರಥದ ಕಿರಿಯ ಅಕ್ಷವೂ ಅದರ ಯುಗಾರ್ಧವೂ ಧ್ರುವಮಂಡಲ ದಲ್ಲಿ ಆಧಾರವನ್ನು ಹೊಂದಿರುವುದು.

**ದ್ವಿತೀಯೋಽಕ್ಷಸ್ತಥಾ ಸವ್ಯೇ ಚಕ್ರಂ ತನ್ಮಾನಸೇ ಸ್ಥಿತಂ ।**
**ಹಯಾಶ್ಚ ಸಪ್ತ ಛಂದಾಂಸಿ ತೇಷಾಂ ನಾಮಾನಿ ಮೇ ಶೃಣು ॥ ೬ ॥**
**ಗಾಯತ್ರೀ ಚ ಬೃಹತ್ಯುಷ್ಣಿರ್ಜಗತೀ ತ್ರಿಷ್ಟುಬೇವ ಚ ।**
**ಅನುಷ್ಟುಪ್ಪಙ್ಕ್ತಿರಿತ್ಯುಕ್ತಾಶ್ಛಂದಾಂಸಿ ಹರಯೋ ರವೇಃ ॥ ೭ ॥**
**ನೈವಾಸ್ತಮನಮರ್ಕಸ್ಯ ನೋದಯಃ ಸರ್ವದಾ ಸತಃ ।**
**ಉದಯಾಸ್ತಮನಾಖ್ಯಂ ಹಿ ದರ್ಶನಾದರ್ಶನಂ ರವೇಃ ॥ ೮ ॥**
**ಶಕ್ರಾದೀನಾಂ ಪುರೇ ತಿಷ್ಠನ್ಸ್ಪೃಶತ್ಯೇಷ ಪುರತ್ರಯಂ ।**
**ವಿಕರ್ಣೌ ದ್ವೌ ವಿಕರ್ಣಸ್ಥಸ್ತ್ರಿಕೋಣಾರ್ಧಪುರೇ ತಥಾ ॥ ೯ ॥**
**ಅಯನಸ್ಯೋತ್ತರಾದೌ ಮಕರಂ ಯಾತಿ ಭಾಸ್ಕರಃ ।**
**ತತಃ ಕುಂಭಂ ಚ ಮೀನಂ ಚ ರಾಶೇ ರಾಶ್ಯಂತರಂ ತಥಾ ॥ ೧೦ ॥**
**ತ್ರಿಷ್ವೇತೇಷ್ವಥ ಭುಕ್ತೇಷು ತತೋ ವೈಷುವತೀಂ ಗತಿಂ ।**
**ಪ್ರಯಾತಿ ಸವಿತಾ ಕುರ್ವನ್ನಹೋರಾತ್ರಂ ಚ ತತ್ಸಮಂ ॥ ೧೧ ॥**
**ತತೋ ರಾತ್ರಿಃ ಕ್ಷಯಂ ಯಾತಿ ವರ್ಧತೇ ತು ದಿನಂ ದಿನಂ ।**
**ತತಶ್ಚ ಮಿಥುನಸ್ಯಾಂತೇ ಪರಾಂ ಕಾಷ್ಠಾಮುಪಾಗತಃ ॥ ೧೨ ॥**

---

೬. ಎಡಗಡೆಯ ಎರಡನೆಯ ಅಕ್ಷವು ಮಾನಸಾಚಲದಲ್ಲಿರುವುದು. ಆ ರಥಕ್ಕೆ ಛಂದೋಮಯಗಳಾದ ಏಳು ಕುದುರೆಗಳನ್ನು ಕಟ್ಟಿರುವರು. ಅವುಗಳ ಹೆಸರುಗಳನ್ನು ಹೇಳುವೆನು ಕೇಳು.

೭. ಗಾಯತ್ರೀ, ಬೃಹತೀ, ಉಷ್ಣಿಕ್, ಜಗತೀ, ತ್ರಿಷ್ಟುಪ್, ಅನುಷ್ಟುಪ್, ಪಙ್ಕ್ತಿ ಎಂಬ ಏಳು ಛಂದಸ್ಸುಗಳೇ ಸೂರ್ಯರಥದ ಹಯಗಳೆನ್ನಿಸುವುವು.

೮–೯. ಸದಾ ಬೆಳಗುತ್ತಿರುವ ಸೂರ್ಯನಿಗೆ ಉದಯಾಸ್ತಗಳೆಂಬುದೇ ಇಲ್ಲವು. ಸೂರ್ಯನ ದರ್ಶನವೇ ಉದಯವೆಂದೂ, ಅದರ್ಶನವೇ ಅಸ್ತಮಾನವೆಂದೂ ವ್ಯವಹರಿಸುವರು. ಆ ಸೂರ್ಯನೇ ಇಂದ್ರಾದಿ ದೇವತೆಗಳ ಪುರಗಳಲ್ಲಿ ನಿಂತು ತ್ರಿಪುರಗಳನ್ನು ಸ್ಪರ್ಶಿಸುವನು. ಆದುದರಿಂದ ಅವನು ತ್ರಿಪುರಗಳ ತ್ರಿಕೋಣದ ಅರ್ಧಪುರದಲ್ಲಿ ವಿಸ್ತರಿಸಿರುವನು.

೧೦–೧೨. ಉತ್ತರಾಯಣದ ಆದಿಯಲ್ಲಿ ಸೂರ್ಯನು ಮಕರ ಲಗ್ನವನ್ನು ಪ್ರವೇಶಿಸುತ್ತಾನೆ. ಬಳಿಕ ಕುಂಭ, ಮೀನ ರಾಶಿಗಳಲ್ಲಿ ಒಂದರಿಂದೊಂದಕ್ಕೆ ಸಂಚರಿಸುವನು. ಇಂತು ಮೂರು ಲಗ್ನಗಳ ಸಂಚಾರವು ಮುಗಿದಮೇಲೆ ವಿಷುವತ್ಕಾಲವುಂಟಾಗುವುದು. ಆಗ ಸೂರ್ಯನು ಹಗಲು ರಾತ್ರಿಗಳನ್ನು ಸಮಾನಾಂತರಗಳನ್ನಾಗಿ ಮಾಡಿ ಚಲಿಸುವನು. ಅಂದಿನಿಂದ ರಾತ್ರಿಕಾಲವು ಕ್ಷಯವನ್ನೂ ಅಹಃಪ್ರಮಾಣವು ವೃದ್ಧಿಯನ್ನೂ ಹೊಂದುವುವು. ಇಂತು ಮಿಥುನ ಲಗ್ನದ ಕೊನೆಯಲ್ಲಿ ಅತ್ಯಂತ ಹ್ರಸ್ವವಾದ ರಾತ್ರಿಯು ಸಂಭವಿಸುವುದು.

ರಾಶಿಂ ಕರ್ಕಟಿಕಂ ಪ್ರಾಪ್ಯ ಕುರುತೇ ದಕ್ಷಿಣಾಯನಂ ।
ಕುಲಾಲಚಕ್ರಪರ್ಯಂತೋ ಯಥಾ ಶೀಘ್ರಂ ನಿವರ್ತತೇ ॥ ೧೩ ॥
ದಕ್ಷಿಣಾಯಕ್ರಮೇ ಸೂರ್ಯಸ್ತಥಾ ಶೀಘ್ರಂ ನಿವರ್ತತೇ ।
ಅತಿ ವೇಗಿತಯಾ ಕಾಲಂ ವಾಯುವಾರ್ಗಬಲಾಚ್ಚರನ್ ॥ ೧೪ ॥
ತಸ್ಮಾತ್ಪ್ರಕೃಷ್ಟಾಂ ಭೂಮಿಂ ಸ ಕಾಲೇನಾಲ್ಪೇನ ಗಚ್ಛತಿ ।
ಕುಲಾಲಚಕ್ರಮಧ್ಯಸ್ಥೋ ಯಥಾ ಮಂದಂ ಪ್ರಸರ್ಪತಿ ॥ ೧೫ ॥
ತಥೋದಗಯನೇ ಸೂರ್ಯಃ ಸರ್ಪತೇ ಮಂದವಿಕ್ರಮಃ ।
ತಸ್ಮಾದ್ದೀರ್ಘೇಣ ಕಾಲೇನ ಭೂಮಿಮಲ್ಪಂ ನಿಗಚ್ಛತಿ ॥ ೧೬ ॥
ಸಂಧ್ಯಾಕಾಲೇ ಚ ಮಂದೇಹಾಃ ಸೂರ್ಯಮಿಚ್ಛಂತಿ ಖಾದಿತುಂ ।
ಪ್ರಜಾಪತಿಕೃತಃ ಶಾಪಸ್ತೇಷಾಂ ಫಾಲ್ಗುನ ರಕ್ಷಸಾಂ ॥ ೧೭ ॥
ಅಕ್ಷಯತ್ವಂ ಶರೀರಾಣಾಂ ಮರಣಂ ಚ ದಿನೇ ದಿನೇ ।
ತತಃ ಸೂರ್ಯಸ್ಯ ತೈರ್ಯುದ್ಧಂ ಭವತ್ಯತ್ಯಂತದಾರುಣಂ ॥ ೧೮ ॥
ತತೋ ಗಾಯತ್ರಿಪೂತಂ ಯದ್ದ್ವಿಜಾಸ್ತೋಯಂ ಕ್ಷಿಪಂತಿ ಚ ।
ತೇನ ದಹ್ಯಂತಿ ತೇ ಪಾಪಾಃ ಸಂಧ್ಯೋಪಾಸನತಃ ಸದಾ ॥ ೧೯ ॥

---

೧೩–೧೬. ಸೂರ್ಯನು ಕರ್ಕಾಟಕ ರಾಶಿಯನ್ನು ಪ್ರವೇಶಿಸಿ ದಕ್ಷಿಣಾಯನವನ್ನುಂಟುಮಾಡುವನು. ಕುಂಬಾರನ ಚಕ್ರದ ನೇಮಿಯು ನಾಭಿಭಾಗಕ್ಕಿಂತ ಹೇಗೆ ವೇಗವಾಗಿ ಚಲಿಸುವುದೊ, ಅಂತೆಯೇ ಸೂರ್ಯನು ದಕ್ಷಿಣಾಯನದಲ್ಲಿ ಶೀಘ್ರವಾಗಿ ನಿವರ್ತಿಸುವನು. ಅತ್ಯಂತ ವೇಗದಿಂದ ವಾಯುಮಾರ್ಗಬಲದಿಂದ ಕಾಲವನ್ನು ಕಳೆಯುತ್ತ ಸ್ವಲ್ಪ ಕಾಲದಲ್ಲಿಯೇ ವಿಶಾಲವಾದ ಭೂಮಂಡಲವನ್ನೆಲ್ಲ ಅತಿಕ್ರಮಿಸುವನು. ಕುಂಬಾರನ ಚಕ್ರದ ಮಧ್ಯಭಾಗವು ಹೇಗೆ ನಿಧಾನವಾಗಿ ಸುತ್ತುವುದೊ, ಹಾಗೆಯೇ ಉತ್ತರಾಯಣದಲ್ಲಿ ಸೂರ್ಯನು ಮೆಲ್ಲಗೆ ಸಂಚರಿಸುವನು. ಆದುದರಿಂದ ಬಹಳ ಕಾಲದಲ್ಲಿ ಸ್ವಲ್ಪವಾದ ಭೂಮಂಡಲವನ್ನು ದಾಟುವನು.

೧೭. ಸಂಧ್ಯಾಕಾಲಗಳಲ್ಲಿ ಮಂದೇಹರೆಂಬ ರಾಕ್ಷಸರು ಸೂರ್ಯನನ್ನು ಭಕ್ಷಿಸಲು ಇಚ್ಛಿಸುವರು. ಎಲೈ ಅರ್ಜುನನೆ! ಬ್ರಹ್ಮದೇವನಿಂದ ಆ ರಾಕ್ಷಸರಿಗೆ ಶಾಪವೆಂಬುದುಂಟಾಗಿರುವುದು.

೧೮–೧೯. ಅವರ ಶರೀರಗಳು ಪ್ರತಿದಿವಸವೂ ಮರಣವನ್ನು ಹೊಂದಿ ಮತ್ತೆ ಅಕ್ಷಯವನ್ನು ಪಡೆಯುವುವು. ಆಗ ಸೂರ್ಯನಿಗೂ ಅವರಿಗೂ ಅತ್ಯಂತ ಭಯಂಕರವಾದ ಯುದ್ಧವು ಸಂಭವಿಸುವುದು. ಆಗ ಬ್ರಾಹ್ಮಣೋತ್ತಮರು ಗಾಯತ್ರೀಮಂತ್ರದಿಂದ ಅಭಿಮಂತ್ರಿತವಾದ ಜಲವನ್ನು ಮೇಲಕ್ಕೆ ಚೆಲ್ಲುವರು. ಆ ಸಂಧ್ಯೋಪಾಸನೆಯ ಜಲದಿಂದ ನಿತ್ಯವೂ ಆ ಪಾಪಿಗಳು ಸುಡಲ್ಪಡುವರು.

ಯೋ ಸಂಧ್ಯಾಂ ನಾಪ್ಯುಪಾಸಂತೇ ಕೃತಘ್ನಾ ಯಾಂತಿ ರೌರವಂ ।
ಪ್ರತಿಮಾಸಂ ಪೃಥಕ್ಸೂರ್ಯ ಋಷಿಗಂಧರ್ವರಾಕ್ಷಸೈಃ ।
ಅಪ್ಸರೋ ಗ್ರಾಮಣೀ ಸರ್ಪೈರಥೋ ಯಾತಿ ಚ ಸಪ್ತಭಿಃ ॥ ೨೦ ॥
ಧಾತಾರ್ಯಮಾ ಮಿತ್ರವರುಣಾ ವಿವಸ್ವಾನಿಂದ್ರ ಏವ ಚ ॥ ೨೧ ॥
ಪೂಷಾ ಚ ಸವಿತಾ ಸೋಽಥ ಜಗಸ್ತ್ವಷ್ಟಾ ಚ ಕೀರ್ತಿತಃ ।
ವಿಷ್ಣುಶ್ಚೈತ್ರಾದಿ ಮಾಸೇಷು ಆದಿತ್ಯಾ ದ್ವಾದಶ ಸ್ಮೃತಾಃ ॥ ೨೨ ॥
ತತೋ ದಿವಾಕರಸ್ಥಾನಾನ್ಮಂಡಲಂ ಶಶಿನಂ ಸ್ಥಿತಂ ।
ಲಕ್ಷಮಾತ್ರೇಣ ತಸ್ಯಾಪಿ ತ್ರಿವಕ್ರೋ ರಥ ಉಚ್ಯತೇ ॥ ೨೩ ॥
ಕುಂದಾಭಾ ದಶ ಚೈವಾಶ್ವಾ ವಾಮದಕ್ಷಿಣತೋ ಯುತಾಃ ।
ಪೂರ್ಣೇ ಶತಸಹಸ್ರೇ ಚ ಯೋಜನಾನಾಂ ನಿಶಾಕರಾತ್ ।
ನಕ್ಷತ್ರಮಂಡಲಂ ಕೃತ್ಸ್ನಮುಪರಿಷ್ಟಾತ್ಪ್ರಕಾಶತೇ ॥ ೨೪ ॥
ಚತುರ್ದಶ ಚಾರ್ಬುದಾನ್ಯಷ್ಟಾಶೀತಿಃ ಸರಿತಾಂಪತಿಃ ॥ ೨೫ ॥
ವಿಂಶತಿಶ್ಚ ತಥಾ ಕೋಟ್ಯೋ ನಕ್ಷತ್ರಾಣಾಂ ಪ್ರಕೀರ್ತಿತಾಃ ।
ದ್ವೇ ಲಕ್ಷೇ ಚೋತ್ತರೇ ತಸ್ಮಾದ್ಬುಧೋ ನಕ್ಷತ್ರಮಂಡಲಾತ್ ॥ ೨೬ ॥

---

೨೦. ಯಾರು ಸಂಧ್ಯೋಪಾಸನೆಯನ್ನು ಮಾಡುವುದಿಲ್ಲವೊ, ಆ ಕೃತಘ್ನರು ರೌರವ ನರಕವನ್ನು ಹೊಂದುವರು. ಪ್ರತಿ ಮಾಸದಲ್ಲಿಯೂ ಸೂರ್ಯನು ಬೇರೆಬೇರೆ ದೇವತೆಗಳು, ಋಷಿಗಳು, ಗಂಧರ್ವರು, ರಾಕ್ಷಸರು, ಅಪ್ಸರರು, ಗ್ರಾಮಣಿಗಳು, ನಾಗರು ಎಂಬ ಸಪ್ತಗಣಗಳಿಂದೊಡಗೂಡಿ ಸಂಚರಿಸುವನು.

೨೧–೨೨. ಸೂರ್ಯನು, ಧಾತೃ, ಅರ್ಯಮ, ಮಿತ್ರ, ವರುಣ, ವಿವಸ್ವಂತ, ಇಂದ್ರ, ಪೂಷ, ಸವಿತೃ, ಭಗ, ತ್ವಷ್ಟೃ, ವಿಷ್ಣು ಎಂಬ ದ್ವಾದಶಾದಿತ್ಯರು ಚೈತ್ರಾದಿಮಾಸಗಳಲ್ಲಿ ಪ್ರಕಾಶಿಸುವರು.

೨೩–೨೪. ಸೂರ್ಯಮಂಡಲಕ್ಕಿಂತ ಒಂದು ಲಕ್ಷ ಯೋಜನದ ಮೇಲಕ್ಕೆ ಚಂದ್ರಮಂಡಲವಿರುವುದು. ಚಂದ್ರನಿಗೂ ತ್ರಿವಕ್ರರಥವಿರುವುದೆಂದು ಹೇಳಲ್ಪಟ್ಟಿರುವುದು. ಅದಕ್ಕೆ ಹತ್ತು ಶ್ವೇತಾಶ್ವಗಳು ಎಡಬಲಗಳಲ್ಲಿ ಹೂಡಲ್ಪಟ್ಟಿರುವುವು. ಚಂದ್ರಮಂಡಲದಮೇಲೆ ಲಕ್ಷಯೋಜನ ದೂರದಲ್ಲಿ ಸಕಲ ನಕ್ಷತ್ರಮಂಡಲವೂ ಪ್ರಕಾಶಿಸುತ್ತಿದೆ.

೨೫–೨೬. ನಕ್ಷತ್ರಗಳ ಸಂಖ್ಯೆಯು ಹದಿನಾಲ್ಕು ಅರ್ಬುದಗಳು, ಎಂಭತ್ತು ಸಾಗರಗಳು, ಇಪ್ಪತ್ತು ಕೋಟಿಗಳೆಂದು ಹೇಳಲ್ಪಟ್ಟಿರುವುದು. ನಕ್ಷತ್ರಮಂಡಲದಮೇಲೆ ಎರಡು ಲಕ್ಷ ಯೋಜನದ ದೂರದಲ್ಲಿ ಬುಧನು ಸಂಚರಿಸುತ್ತಿರುವನು. ಚಂದ್ರಸುತನಾದ ಆತನ ರಥವು ಅಗ್ನಿವಾಯುಗಳ ಅಂಶಗಳಿಂದ

ವಾಯ್ವಗ್ನಿದ್ರವ್ಯಸಂಭೂತೋ ರಥಶ್ಚಂದ್ರಸುತಸ್ಯ ಚ ।
ಪಿಶಂಗೈಸ್ತುರಗೈರ್ಯುಕ್ತಃ ಸೋಽಷ್ಟಾಭಿರ್ವಾಯುವೇಗಿಭಿಃ ॥ ೨೭ ॥
ದ್ವಿಲಕ್ಷೇ ಶ್ಚೋತ್ತರೇ ತಸ್ಮಾದ್ಬುಧಾಚ್ಚಾಪ್ಯುಶನಾ ಸ್ಮೃತಃ ।
ಶುಕಸ್ಯಾಪಿ ರಥೋಽಷ್ಟಾಭಿರ್ಯುಕ್ತೋಽಭೂತ್ಸಂಭವೈರ್ಹಯೈಃ ॥೨೮॥
ಲಕ್ಷದ್ವಯೇನ ಭೌಮಸ್ಯ ಸ್ಮೃತೋ ದೇವಪುರೋಹಿತಃ ।
ಅಷ್ಟಾಭಿಃ ಪಾಂಡುರೈರಶ್ವೈರ್ಯುಕ್ತೋಽಸ್ಯ ಕಾಂಚನೋ ರಥಃ ॥ ೨೯ ॥
ಸೌರಿರ್ಬೃಹಸ್ಪತೇಶ್ಚೋರ್ಧ್ವಂ ದ್ವಿಲಕ್ಷೇ ಸಮುಪಸ್ಥಿತಃ ।
ಆಕಾಶಸಂಭವೈರಶ್ವೈರಷ್ಟಾಭಿಃ ಶಬಲೈ ರಥಃ ॥ ೩೦ ॥
ಸ್ವರ್ಭಾನೋಸ್ತುರಗಾಶ್ಚಾಷ್ಟೌ ಭೃಂಗಾಭಾ ಧೂಸರಾ ರಥಂ ।
ವಹಂತಿ ಚ ಸಕೃದ್ಯುಕ್ತಾ ಆದಿತ್ಯಾಧಃ ಸ್ಥಿತಾಸ್ತಥಾ ॥ ೩೧ ॥
ಸೌರೇರ್ಲಕ್ಷಂ ಸ್ಮೃತಂ ಚೋರ್ಧ್ವಂ ತತಃ ಸಪ್ತರ್ಷಿಮಂಡಲಂ ।
ಋಷಿಭ್ಯಶ್ಚಾಪಿ ಲಕ್ಷೇಣ ಧ್ರುವಶ್ಚೋರ್ಧ್ವಂ ವ್ಯವಸ್ಥಿತಃ ॥ ೩೨ ॥
ಮೇಢೀಭೂತಃ ಸಮಸ್ತಸ್ಯ ಜ್ಯೋತಿಶ್ಚಕ್ರಸ್ಯ ವೈ ಧ್ರುವಃ ।
ಧ್ರುವೋಽಪಿ ಶಿಂಶುಮಾರಸ್ಯ ಪುಚ್ಛಾಧಾರೇ ವ್ಯವಸ್ಥಿತಃ ॥ ೩೩ ॥

---

ಮಾಡಲ್ಪಟ್ಟು ಕಂದುಬಣ್ಣದ ವಾಯುಸಮಾನ ವೇಗವುಳ್ಳ ಎಂಟು ಉತ್ತಮಾಶ್ವಗಳಿಂದ ಯುಕ್ತವಾಗಿರುವುದು.

೨೮–೨೯. ಬುಧನಿಂದ ಎರಡುಲಕ್ಷ ಯೋಜನಗಳ ಮೇಲೆ ಶುಕ್ರಮಂಡಲವಿರುವುದು. ಆತನ ರಥವೂ ಉತ್ತಮಕುಲಸಂಭೂತಗಳಾದ ಎಂಟು ಕುದುರೆಗಳಿಂದೆಳೆಯಲ್ಪಡುತ್ತಿರುವುದು. ಈ ಮಂಡಲದಮೇಲೆ ಎರಡು ಲಕ್ಷ ಯೋಜನದ ದೂರದಲ್ಲಿ ಬೃಹಸ್ಪತಿಯ ವಾಸಸ್ಥಾನವಿರುವುದು. ಆತನ ಕಾಂಚನಮಯವಾದ ರಥವು ಶುಭ್ರವರ್ಣದ ಎಂಟು ಕುದುರೆಗಳುಳ್ಳುದಾಗಿರುವುದು.

೩೦. ಬೃಹಸ್ಪತಿಗೆ ಮೇಲೆ ಎರಡು ಲಕ್ಷ ಯೋಜನಗಳ ದೂರದಲ್ಲಿ ಶನಿಗ್ರಹವಿರುವುದು. ಆತನ ರಥವು ಚಿತ್ರವರ್ಣದ ಆಕಾಶ ಸಂಭೂತಗಳಾದ ಎಂಟು ಕುದುರೆಗಳಿಂದ ಕೂಡಿದುದು.

೩೧. ರಾಹುವಿನ ರಥವನ್ನು ಭೃಂಗದಂತೆ ಬೂದಿಯ ಬಣ್ಣದ ಎಂಟು ಕುದುರೆಗಳು ಒಮ್ಮೊಮ್ಮೆ ಹೂಡಲ್ಪಟ್ಟವಾಗಿ ಸೂರ್ಯನ ಕೆಳಗೆ ಎಳೆಯುವುವು.

೩೨–೩೩. ಶನಿಯ ಸಂಚಾರಪ್ರದೇಶಕ್ಕೆ ಒಂದುಲಕ್ಷ ಯೋಜನಗಳ ಮೇಲೆ ಸಪ್ತರ್ಷಿಮಂಡಲವಿರುವುದು. ಅದಕ್ಕಿಂತ ಲಕ್ಷ ಯೋಜನಗಳ ಮೇಲೆ ಧ್ರುವನು ನೆಲಸಿರುವನು. ಈತನು ಸಕಲ ಜ್ಯೋತಿಶ್ಚಕ್ರದ ಸಂಚಾರಗಳಿಗೂ ಅಲಾತಸ್ತಂಭದಂತಿರುವನು. ಆತನೂ ಕೂಡ ಶಿಂಶುಮಾರದ ಪುಚ್ಛವನ್ನು ಆಧಾರ ಮಾಡಿಕೊಂಡು ನಿಂತಿರುವನು.

ಯಮಾಹುರ್ವಾಸುದೇವಸ್ಯ ರೂಪಮಾತ್ಮಾನಮವ್ಯಯಂ ।
ವಾಯುಪಾಶೈರ್ಧ್ರುವೇ ಬದ್ಧಂ ಸರ್ವಮೇತಚ್ಚ ಫಾಲ್ಗುನ ॥ ೩೪ ॥
ನವಯೋಜನಸಾಹಸ್ರಂ ಮಂಡಲಂ ಸವಿತುಃ ಸ್ಮೃತಂ ।
ದ್ವಿಗುಣಂ ಸೂರ್ಯವಿಸ್ತಾರಾನ್ಮಂಡಲಂ ಶಶಿನಃ ಸ್ಮೃತಂ ॥ ೩೫ ॥
ತುಲ್ಯಸ್ತಯೋಸ್ತು ಸ್ವರ್ಭಾನುರ್ಭೂತ್ವಾಧಸ್ತಾತ್ಪ್ರಸರ್ಪತಿ ।
ಉದ್ಧೃತ್ಯ ಪೃಥಿವೀಚ್ಛಾಯಾಂ ನಿರ್ಮಲಾಂ ಮಂಡಲಾಕೃತಿಃ ॥ ೩೬ ॥
ಚಂದ್ರಸ್ಯ ಷೋಡಶೋ ಭಾಗೋ ಭಾರ್ಗವಶ್ಚ ವಿಧೀಯತೇ ।
ಭಾರ್ಗವಾತ್ಪಾದಹೀನಸ್ತು ವಿಜ್ಞೇಯೋಥ ಬೃಹಸ್ಪತಿಃ ।
ಬೃಹಸ್ಪತೇಃ ಪಾದಹೀನೌ ವಕ್ರಸೌರೀ ಬುಧಸ್ತಥಾ ॥ ೩೭ ॥
ಶತಾನಿ ಪಂಚ ಚತ್ವಾರಿ ತ್ರೀಣಿ ದ್ವೇ ಚೈಕಯೋಜನಂ ।
ಯೋಜನಾರ್ಧಪ್ರಮಾಣಾನಿ ಭಾನಿ ಹ್ರಸ್ವಂ ನ ವಿದ್ಯತೇ ॥ ೩೮ ॥
ಭೂಮಿಲೋಕಶ್ಚ ಭೂರ್ಲೋಕಃ ಪಾದಗಮ್ಯಃ ಪ್ರಕೀರ್ತಿತಃ ।
ಭೂಮಿಸೂರ್ಯಾಂತರಂ ತಚ್ಚ ಭುವರ್ಲೋಕಃ ಪ್ರಕೀರ್ತಿತಃ ॥ ೩೯ ॥

---

೩೪. ಅದನ್ನೇ ಶ್ರೀನಾರಾಯಣನ ಅವ್ಯಯವಾದ ರೂಪವೆಂದು ಹೇಳುವರು. ಈ ಜ್ಯೋತಿಶ್ಚಕ್ರವೆಲ್ಲವೂ ಧ್ರುವಮಂಡಲಕ್ಕೆ ವಾಯುಪಾಶಗಳಿಂದ ಕಟ್ಟಲಾಗಿರುವುದು.

೩೫. ಸೂರ್ಯಬಿಂಬದ ಪರಿಮಾಣವು ಒಂಭತ್ತುಸಾವಿರ ಯೋಜನಗಳ ಪ್ರಮಾಣವುಳ್ಳದೆಂದು ಹೇಳಿದೆ. ಚಂದ್ರಮಂಡಲವು ಅದರ ಎರಡರಷ್ಟು ವಿಸ್ತಾರವುಳ್ಳದಾಗಿರುವುದು.

೩೬. ಅವೆರಡಕ್ಕೂ ಕೆಳಗಡೆ ಸೂರ್ಯಚಂದ್ರರಿಗೆ ಸಮಾನವಾದ ಪರಿಮಾಣವುಳ್ಳವನಾದ ರಾಹುವು ಮಂಡಲಾಕಾರನಾಗಿ ಭೂಮಿಯ ನೆರಳನ್ನು ಎತ್ತಿಹಿಡಿದು ಸಂಚರಿಸುತ್ತಿರುವನು.

೩೭. ಚಂದ್ರನ ಬಿಂಬದ ಹದಿನಾರನೆಯ ಒಂದು ಭಾಗದಷ್ಟು ಶುಕ್ರನೂ, ಶುಕ್ರನ ಮುಕ್ಕಾಲು ಭಾಗದಷ್ಟು ಬೃಹಸ್ಪತಿಯೂ, ಬೃಹಸ್ಪತಿ ಬಿಂಬದ ಮುಕ್ಕಾಲು ಭಾಗದಷ್ಟು ಕುಜ, ಶನಿ, ಬುಧರೂ ಇರುವರೆಂದು ತಿಳಿಯತಕ್ಕದ್ದು.

೩೮. ನಕ್ಷತ್ರಗಳು ನೂರು, ಐದು, ನಾಲ್ಕು, ಮೂರು, ಎರಡು, ಒಂದು, ಅರ್ಧಯೋಜನ ಪ್ರಮಾಣಗಳುಳ್ಳದಾಗಿರುವುವು. ಅದಕ್ಕೆ ಕಡಿಮೆಯಾದುವು ಯಾವುದೂ ಇರುವುದಿಲ್ಲ.

೩೯. ಭೂಲೋಕವು ಮನುಷ್ಯ ಸಂಚಾರ ಯೋಗ್ಯವೆಂದೆನಿಸಿರುವುದು. ಭೂಮಿಗೂ, ಸೂರ್ಯನಿಗೂ ಇರುವ ಅಂತರವೇ (ಅವಕಾಶವೇ) ಭುವರ್ಲೋಕವೆನಿಸುವುದು.

ಧ್ರುವಸೂರ್ಯಾಂತರಂ ತಚ್ಚ ನಿಯುತಾನಿ ಚತುರ್ದಶ ।
ಸ್ವರ್ಲೋಕಃ ಸೋಽಪಿ ಗದಿತೋ ಲೋಕಸಂಸ್ಥಾನಚಿಂತಕೈಃ ॥ ೪೦ ॥
ಧ್ರುವಾದೂರ್ಧ್ವಂ ತಥಾ ಕೋಟಿರ್ಮಹರ್ಲೋಕಃ ಪ್ರಕೀರ್ತಿತಃ ।
ದ್ವೇ ಕೋಟ್ಯೌ ಚ ಜನೋ ಯತ್ರ ನಿವಸಂತಿ ಚತುಃಸನಾಃ ॥ ೪೧ ॥
ಚತುರ್ಭಿಶ್ಚಾಪಿ ಕೋಟೀಭಿಸ್ತಪೋಲೋಕಸ್ತತಃ ಸ್ಮೃತಃ ।
ವೈರಾಜಾ ಯತ್ರ ತೇ ದೇವಾಃ ಸ್ಥಿತಾ ದಾಹವಿವರ್ಜಿತಾಃ ॥ ೪೨ ॥
ಷಡ್ಗುಣೇನ ತಪೋಲೋಕಾತ್ಸತ್ಯಲೋಕೋ ವಿರಾಜತೇ ।
ಅಪುನರ್ಮಾರಕಾ ಯತ್ರ ಬ್ರಹ್ಮಲೋಕೋ ಹಿ ಸ ಸ್ಮೃತಃ ॥ ೪೩ ॥
ಅಷ್ಟಾದಶ ತಥಾ ಕೋಟ್ಯೋ ಲಕ್ಷಾಣ್ಯಶೀತಿಪಂಚ ಚ ।
ಶುಭಂ ನಿರುಪಮಂ ಸ್ಥಾನಂ ತದೂರ್ಧ್ವಂ ಸಂಪ್ರಕಾಶತೇ ॥ ೪೪ ॥
ಭೂರ್ಭುವಃಸ್ವರಿತಿ ಪ್ರೋಕ್ತಂ ತ್ರೈಲೋಕ್ಯಂ ಕೃತಕಂ ತ್ವಿದಂ ।
ಜನಸ್ತಪಸ್ತಥಾ ಸತ್ಯಮಿತಿ ಚಾಕೃತಕಂ ತ್ರಯಂ ॥ ೪೫ ॥

---

೪೦. ಸೂರ್ಯನಿಗೂ ಧ್ರುವಮಂಡಲಕ್ಕೂ ಇರುವ ಹದಿನಾಲ್ಕು ಲಕ್ಷ ಯೋಜನಗಳ ಅಂತರವು ಲೋಕಸ್ಥಿತಿಜ್ಞರಿಂದ ಸ್ವರ್ಲೋಕವೆಂದು ಹೇಳಲ್ಪಟ್ಟಿರುವುದು.

೪೧. ಧ್ರುವಮಂಡಲದಮೇಲೆ ಒಂದು ಕೋಟಿ ಯೋಜನಗಳ ದೂರವು ಮಹರ್ಲೋಕವೆನಿಸುವುದು. ಅಲ್ಲಿ ಸನಕ, ಸನಂದನ, ಸನತ್ಕುಮಾರ, ಸನತ್ಸುಜಾತರೆಂಬ ಋಷಿವರ್ಯರೊಡನೆ ಎರಡು ಕೋಟಿ ಜನರು ವಾಸಿಸುತ್ತಿರುವರು.

೪೨. ಆ ಲೋಕದಮೇಲೆ ನಾಲ್ಕು ಕೋಟಿ ಯೋಜನದ ದೂರದಲ್ಲಿ ತಪೋಲೋಕವೆಂದು ತಿಳಿಯಲಾಗಿರುವುದು. ಅಲ್ಲಿ ವಿರಾಡ್ದೇವತೆಗಳು ನೆಲಸಿರುವರು. ಅವರಿಗೆ ಹಸಿವು ಬಾಯಾರಿಕೆಗಳೇ ಇರುವುದಿಲ್ಲವು.

೪೩. ತಪೋಲೋಕದ ಆರರಷ್ಟು ದೂರದಲ್ಲಿ ಸತ್ಯಲೋಕವಿರುವುದು. ಇಲ್ಲಿನ ನಿವಾಸಿಗಳು ಜರಾಮರಣವರ್ಜಿತರಾಗಿರುವರು. ಇದಕ್ಕೆ ಬ್ರಹ್ಮಲೋಕವೆಂದೂ ಹೆಸರು.

೪೪. ಈ ಲೋಕವು ಶುಭವೂ, ಸಮಾನರಹಿತವೂ ಆದ ಈ ಸ್ಥಾನವು ಹದಿನೆಂಟುಕೋಟಿ ಎಂಬತ್ತೈದುಲಕ್ಷಯೋಜನದ ವಿಸ್ತಾರವುಳ್ಳದ್ದಾಗಿ ಬೆಳಗುತ್ತಿರುವುದು.

೪೫. ಭೂಲೋಕ, ಭುವರ್ಲೋಕ, ಸುವರ್ಲೋಕಗಳು ಕೃತಕಗಳೆಂದೂ, ಜನೋಲೋಕ, ತಪೋಲೋಕ, ಸತ್ಯಲೋಕಗಳು ಅಕೃತಕಗಳೆಂದೂ ಕರೆಯಲ್ಪಟ್ಟಿರುವುವು.

ಕೃತಕಾಕೃತಯೋರ್ಮಧ್ಯೇ ಮಹರ್ಲೋಕ ಇತಿ ಸ್ಮೃತಃ ।
ಶೂನ್ಯೋ ಭವತಿ ಕಲ್ಪಾಂತೇ ಯೋಽತ್ಯಂತಂ ನ ವಿನಶ್ಯತಿ ॥ ೪೬ ॥
ಏತೇ ಸಪ್ತ ಸಮಾಖ್ಯಾತಾ ಲೋಕಾಃ ಪುಣ್ಯೈರುಪಾರ್ಜಿತಾಃ ॥ ೪೭ ॥
ಯಜ್ಞೈರ್ದಾನೈರ್ಜಪೈರ್ಹೋಮೈಸ್ತೀರ್ಥೈರ್ವ್ರತಸಮುಚ್ಚಯೈಃ ।
ವೇದಾದಿಪ್ರೋಕ್ತೈರನ್ಯೈಶ್ಚ ಸಾಧ್ಯಾನ್ಲೋಕಾನಿಮಾನ್ವಿದುಃ ॥ ೪೮ ॥
ತತಶ್ಚಾಂಡಸ್ಯ ಶಿರಸೋ ಧಾರಾ ನೀರಮಯೀ ಶಿವಾ ।
ಸರ್ವಲೋಕಾನ್ಸಮಾಪ್ಲಾವ್ಯ ಗಂಗಾ ಮೇರಾವುಪಾಗತಾ ॥ ೪೯ ॥
ತತೋ ಮಹೀತಲಂ ಸರ್ವಂ ಪಾತಾಲಂ ಪ್ರವಿವೇಶ ಸಾ ।
ಅಂಡಮೂರ್ಧ್ನಿ ಸ್ಥಿತಾ ದೇವೀ ಸತತಂ ದ್ವಾರವಾಸಿನೀ ॥ ೫೦ ॥
ದೇವಿನಾಂ ಕೋಟಿಕೋಟೀಭಿಃ ಸಂವೃತಾ ಪಿಂಗಲೇನ ಚ ।
ತತ್ರ ಸ್ಥಿತಾ ಸದಾ ರಕ್ಷಾಂ ಕುರುತೇಽಂಡಸ್ಯ ಸಾ ಶುಭಾ ॥ ೫೧ ॥
ನಿಹಂತಿ ದುಷ್ಟಸಂಘಾತಾನ್ಮಹಾಬಲಪರಾಕ್ರಮಾ ।
ವಾಯುಸ್ಕಂಧಾನಿ ಸಪ್ತಾಪಿ ಶೃಣು ಯದ್ವತ್ಸ್ಥಿತಾನ್ಯಪಿ ॥ ೫೨ ॥

---

೪೬. ಈ ಕೃತಕಾಕೃತಕ ಲೋಕಗಳ ಮಧ್ಯೆ ಮಹರ್ಲೋಕವಿರುವುದು. ಇದು ಕಲ್ಪಾಂತದ ಪ್ರಳಯದಲ್ಲಿ ಜನಶೂನ್ಯವಾದರೂ ನಿಶ್ಶೇಷವಾಗಿ ನಾಶವಾಗುವುದಿಲ್ಲವು.

೪೭-೪೮. ಇಂತು ಮೇಲೆ ಹೇಳಿದ ಏಳು ಊರ್ಧ್ವಲೋಕಗಳೂ ಜನರ ಪುಣ್ಯವಿಶೇಷಗಳಿಂದ ಲಭ್ಯಗಳಾಗಿರುವುವು. ಯಜ್ಞಗಳು, ದಾನಗಳು, ಹೋಮಗಳು, ತೀರ್ಥಯಾತ್ರೆಗಳು, ವ್ರತೋಪವಾಸಗಳು, ವೇದಾದಿ ಶಾಸ್ತ್ರಗಳಲ್ಲಿ ಉಕ್ತಗಳಾಗಿರುವ ಇತರ ನಿಯಮಗಳಿಂದಲೇ ಈ ಲೋಕಗಳನ್ನು ಹೊಂದಲು ಸಾಧ್ಯವೆಂದು ಬಲ್ಲವರು ಹೇಳುವರು.

೪೯-೫೦. ಈ ಲೋಕಗಳ ಮೇಲೆ ಬ್ರಹ್ಮಾಂಡದ ಶಿರೋಭಾಗದಿಂದ ಶುಭವಾದ ಜಲಪೂರ್ಣವಾದ ದೇವಗಂಗೆಯು ಸಕಲ ಲೋಕಗಳನ್ನೂ ತೋಯಿಸುತ್ತ ಮೇರುಪರ್ವತವನ್ನು ಸೇರಿದಳು. ಅಲ್ಲಿಂದ ಸಮಸ್ತ ಭೂಮಂಡಲವನ್ನೂ ವ್ಯಾಪಿಸಿ ಪಾತಾಲವನ್ನು ಪ್ರವೇಶಿಸಿದಳು. ಬ್ರಹ್ಮಾಂಡದ ತುದಿಯಲ್ಲಿರುವ ಆ ಗಂಗಾದೇವಿಯು ಯಾವಾಗಲೂ ದ್ವಾರಪಾಲಕಿಯಾಗಿ ನಿಂತಿರುವಳು.

೫೧. ಆಕೆಯು ಅನೇಕ ಕೋಟಿಕೋಟಿ ದೇವಿಯರಿಂದ ಪರಿವೃತಳಾಗಿ ನಿಂತು ಸರ್ವಕಾಲಗಳಲ್ಲಿಯೂ ಬ್ರಹ್ಮಾಂಡದ ರಕ್ಷಣೆಯನ್ನು ಮಾಡುತ್ತಿರುವಳು.

೫೨. ಇಷ್ಟೆಯಲ್ಲದೆ ಈ ಮಹಾದೇವಿಯು ಅತ್ಯಂತ ಬಲಪರಾಕ್ರಮಗಳಿಂದ ಕೂಡಿದವಳಾಗಿ ಸಕಲ ದುಷ್ಟಸಮೂಹಗಳನ್ನೂ ನಿಗ್ರಹಿಸುವಳು. ಇನ್ನು ಸಪ್ತವಾಯುಸ್ಕಂಧಗಳನ್ನೂ ಅವುಗಳ ಕಾರ್ಯಗಳನ್ನೂ ನಿರೂಪಿಸುವೆನು ಕೇಳು.

ಪೃಥಿವೀಂ ಸಮಭಿಕ್ರಮ್ಯ ಸಂಸ್ಥಿತೋ ಮೇಘಮಂಡಲೇ ।
ಪ್ರವಹೋ ನಾಮ ಯೋ ಮೇಘಾನ್ಪ್ರವಹತ್ಯತಿಶಕ್ತಿಮಾನ್ ॥ ೫೩ ॥
ಧೂಮಜಾಶ್ಚೋಷ್ಮಜಾ ಮೇಘಾಃ ಸಾಮುದ್ರೈರ್ಯೇನ ಪೂರಿತಾಃ ।
ತೋಯೈರ್ಭವಂತಿ ನೀಲಾಂಗಾ ವರ್ಷಿಷ್ಠಾಶ್ಚೈವ ಭಾರತ ॥ ೫೪ ॥
ದ್ವಿತೀಯಶ್ಚಾವಹೋ ನಾಮ ನಿಬದ್ಧಃ ಸೂರ್ಯಮಂಡಲೇ ।
ತೇನ ಬದ್ಧಂ ಧ್ರುವೇಣೇದಂ ಭ್ರಾಮ್ಯತೇ ಸೂರ್ಯಮಂಡಲಂ ॥ ೫೫ ॥
ತೃತೀಯಶ್ಚೋದ್ವಹೋ ನಾಮ ಚಂದ್ರಸ್ಕಂಧೇ ಪ್ರತಿಷ್ಠಿತಃ ।
ಬದ್ಧಂ ಧ್ರುವೇಣ ಯೇನೇದಂ ಭ್ರಾಮ್ಯತೇ ಚಂದ್ರಮಂಡಲಂ ॥ ೫೬ ॥
ಚತುರ್ಥಂ ಸಂವಹೋ ನಾಮ ಸ್ಥಿತೋ ನಕ್ಷತ್ರಮಂಡಲೇ ।
ವಾತರಶ್ಮಿಭಿರಾಬದ್ಧಂ ಧ್ರುವೇಣ ಸಹ ಭ್ರಾಮ್ಯತೇ ॥ ೫೭ ॥
ಗ್ರಹೇಷು ಪಂಚಮಃ ಸೋಽಪಿ ವಿವಹೋ ನಾಮ ಮಾರುತಃ ।
ಗ್ರಹಚಕ್ರಮಿದಂ ಯೇನ ಭ್ರಾಮ್ಯತೇ ಧ್ರುವಸಂಧಿತಂ ॥ ೫೮ ॥

---

೫೩. ಭೂಮಿಯನ್ನು ಸುತ್ತುವರೆದು ಮೇಘಮಂಡಲದಲ್ಲಿ ಪ್ರವಹವೆಂಬ ಸ್ಕಂಧವಿರುವುದು. ಅದರ ಬಲದಿಂದಲೇ ಅಂತರಿಕ್ಷದಲ್ಲಿ ಮೇಘಗಳು ಓಡಿಯಾಡುವುವು.

೫೪. ಅಯ್ಯಾ ಅರ್ಜುನನೇ! ಧೂಮದಿಂದ ಹುಟ್ಟಿದುವೂ, ಸೂರ್ಯನ ಶಾಖದಿಂದ ಹುಟ್ಟಿದುವೂ ಆದ ಈ ಮೇಘಗಳೇ ಸಮುದ್ರೋದಕಗಳನ್ನು ಹೊತ್ತು ನೀಲವರ್ಣವುಳ್ಳವುಗಳಾಗಿ ವೃಷ್ಟಿಗಳನ್ನು ಕರೆಯುತ್ತವೆ.

೫೫. ಎರಡನೆಯ ಆವಹವೆಂಬ ವಾಯುಸ್ಕಂಧವು ಸೂರ್ಯಮಂಡಲವನ್ನು ಆವರಿಸಿರುತ್ತದೆ. ಅದರಿಂದ ಸಂಬದ್ಧವಾಗಿಯೇ ಸೂರ್ಯನು ಧ್ರುವನಕ್ಷತ್ರದ ಸುತ್ತಲೂ ಸುತ್ತುತ್ತಿರುವನು.

೫೬. ಮೂರನೆಯ ಸ್ಕಂದಕ್ಕೆ ಉದ್ವಹವೆಂದು ಹೆಸರು. ಇದು ಚಂದ್ರಮಂಡಲದಲ್ಲಿ ಪ್ರತಿಷ್ಠಿತವಾಗಿರುವುದು. ಇದರಿಂದಲೇ ಚಂದ್ರನೂ ಬದ್ಧನಾಗಿ ಧ್ರುವನನ್ನು ಸುತ್ತುವರೆಯುತ್ತಿರುವನು.

೫೭. ನಾಲ್ಕನೆಯ ಸಂವಹಸ್ಕಂಧವು ನಕ್ಷತ್ರಮಂಡಲದಲ್ಲಿದ್ದು, ಅವುಗಳನ್ನೆಲ್ಲ ವಾಯುರಶ್ಮಿಗಳಿಂದ ಬಂಧಿಸಿ ಧ್ರುವನ ಸುತ್ತಲೂ ನಡೆಸುತ್ತಿರುವುದು.

೫೮. ಗ್ರಹಮಂಡಲದಲ್ಲಿರುವ ಐದನೆಯ ಸ್ಕಂಧಕ್ಕೆ ವಿವಹಸ್ಕಂಧವೆಂದು ಹೆಸರು. ಇದರ ಮೂಲಕವಾಗಿಯೇ ಸಕಲ ಗ್ರಹಗಳೂ ಧ್ರುವನನ್ನು ಸುತ್ತುತ್ತಿರುವುದು.

ಷಷ್ಠಃ ಪರಿವಹೋ ನಾಮ ಸ್ಥಿತಃ ಸಪ್ತರ್ಷಿಮಂಡಲೇ ।
ಭ್ರಮಂತಿ ಧ್ರುವಸಂಬದ್ಧಾ ಯೇನ ಸಪ್ತರ್ಷಯೋ ದಿವಿ ॥ ೫೯ ॥
ಸಪ್ತಮಶ್ಚ ಧ್ರುವೇ ಬದ್ಧೋ ವಾಯುರ್ನಾಮ್ನಾ ಪರಾವಹಃ ।
ಯೇನ ಸಂಸ್ಥಾಪಿತಂ ಧ್ರೌವ್ಯಂ ಚಕ್ರಂ ಚಾನ್ಯಾನಿ ಭಾರತ ॥ ೬೦ ॥
ಯಂ ಸಮಾಸಾದ್ಯ ವೇಗೇನ ದಿಶಾಮಂತಂ ಪ್ರಪೇದಿರೇ ।
ದಕ್ಷಸ್ಯ ದಶ ಪುತ್ರಾಣಾಂ ಸಹಸ್ರಾಣಿ ಪ್ರಜಾಪತೇಃ ॥ ೬೧ ॥
ಏವಮೇತೇ ದಿತೇಃ ಪುತ್ರಾಃ ಸಪ್ತಸಪ್ತ ವ್ಯವಸ್ಥಿತಾಃ ।
ಅನಾರಮಂತಃ ಸಂವಾಂತಿ ಸರ್ವಗಾಃ ಸರ್ವಧಾರಿಣಃ ॥ ೬೨ ॥
ಧ್ರುವಾದೂರ್ಧ್ವಮಸೂರ್ಯಂ ಚಾಪ್ಯನಕ್ಷತ್ರಮತಾರಕಂ ।
ಸ್ವತೇಜಸಾ ಸ್ವಶಕ್ತ್ಯಾ ಚಾಧಿಷ್ಠಿತಾಸ್ತೇ ಹಿ ನಿತ್ಯದಾ ॥ ೬೩ ॥
ಇತ್ಯೂರ್ಧ್ವಂ ತೇ ಸಮಾಖ್ಯಾತಂ ಪಾತಾಲಾನ್ಯಥ ಮೇ ಶೃಣು ॥ ೬೪ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿ ಸಾಹಸ್ರ್ಯಾಂ ಸಂಹಿತಾಯಾಂ
ಪ್ರಥಮೇ ಮಾಹೇಶ್ವರಖಂಡೇ ಕೌಮಾರಿಕಾಖಂಡೇ
"ಕುಮಾರಿಕಾಖ್ಯಾನೇ — ಲೋಕವ್ಯವಸ್ಥಿತಿವರ್ಣನಂ" ನಾಮ
ಅಷ್ಟತ್ರಿಂಶೋಽಧ್ಯಾಯಃ

---

೫೯–೬೧. ಆರನೆಯ ಪರಿವಹವೆಂಬ ವಾಯುಸ್ಕಂಧವು ಸಪ್ತರ್ಷಿಮಂಡಲದಲ್ಲಿರುವುದು. ಇದರಿಂದ ಸಪ್ತರ್ಷಿಗಳು ಧ್ರುವನಿಗೆ ಬದ್ಧರಾಗಿ ಆಕಾಶದಲ್ಲಿ ಸುತ್ತುತ್ತಿರುವರು. ಏಳನೆಯ ಪರಿವಹವೆಂಬ ಸ್ಕಂಧವು ಧ್ರುವಮಂಡಲದಲ್ಲಿಯೇ ನೆಲಸಿರುವುದು. ಅದರಿಂದಲೇ ಧ್ರುವಮಂಡಲವೂ, ಇತರ ಚಕ್ರಗಳೂ ಸಂಸ್ಥಾಪಿತವಾಗಿರುವುವು. ಇದನ್ನು ಹೊಂದಿಯೇ ಮುನ್ನು, ದಕ್ಷಪ್ರಜಾಪತಿಯ ಹತ್ತುಸಾವಿರ ಮಕ್ಕಳು ವೇಗದಿಂದ ದಿಕ್ಕುವಿದಿಕ್ಕುಗಳ ಕೊನೆಗಳನ್ನು ಸೇರಿದರು.

೬೨–೬೪. ಇಂತು ಈ ದಿತಿಪುತ್ರರು ಸಪ್ತವಾಯುಸ್ಕಂಧಗಳಾಗಿ, ಸರ್ವವ್ಯಾಪಕರಾಗಿಯೂ, ಸರ್ವಭೂತಧಾರಿಗಳಾಗಿಯೂ ಇದ್ದುಕೊಂಡು ವಿರಾಮವಿಲ್ಲದಂತೆ ವ್ಯವಸ್ಥೆಯಿಂದ ಬೀಸುತ್ತಿರುವರು. ಧ್ರುವಮಂಡಲಕ್ಕೆ ಮೇಲೆ ಸೂರ್ಯ, ನಕ್ಷತ್ರ, ತಾರೆಗಳಿಲ್ಲದ ಪ್ರದೇಶವಿರುವುದು. ಈ ಜ್ಯೋತಿಗಳೆಲ್ಲವೂ ತಮ್ಮತಮ್ಮ ತೇಜಸ್ಸಿನಿಂದಲೂ ಶಕ್ತಿಯಿಂದಲೂ ತಂತಮ್ಮ ಸ್ಥಾನಗಳಲ್ಲಿ ಸುಪ್ರತಿಷ್ಠಿತವಾಗಿರುವುವು. ಅರ್ಜುನಾ! ಇಂತು ಊರ್ಧ್ವಲೋಕಗಳ ವಿಚಾರವನ್ನು ನಿನಗೆ ಹೇಳಿರುವೆನು. ಇನ್ನು ಅಧೋಲೋಕಗಳ ವಿಷಯವನ್ನು ಕೇಳುವವನಾಗು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಎರಡನೆಯ ಕೌಮಾರಿಕಾಖಂಡದಲ್ಲಿ
"ಕೌಮಾರಿಕಾಖ್ಯಾನ — ಲೋಕವ್ಯವಸ್ಥಿತಿವರ್ಣನ"ವೆಂಬ
ಮೂವತ್ತೆಂಟನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥೈಕೋನಚತ್ವಾರಿಂಶೋಽಧ್ಯಾಯಃ

### ಬರ್ಕರೇಶ್ವರ ಮಾಹಾತ್ಮ್ಯ ವರ್ಣನಂ

ನಾರದ ಉವಾಚ :—

**ಸಹಸ್ರಸಪ್ತತ್ಯುಚ್ಛ್ರಾಯೇ ಪಾತಾಲಾನಿ ಪರಸ್ಪರಂ ।**
**ಅತಲಂ ವಿತಲಂ ಚೈವ ನಿತಲಂ ಚ ರಸಾತಲಂ ।**
**ತಲಾತಲಂ ಚ ಸುತಲಂ ಪಾತಾಲಂ ಚಾಪಿ ಸಪ್ತಮಂ ॥ ೧ ॥**
**ಕೃಷ್ಣಶುಕ್ಲಾರುಣಾಃ ಪೀತಾಃ ಶರ್ಕರಾಶ್ಶೈಲಕಾಂಚನಾಃ ।**
**ಭೂಮಯೋ ಯತ್ರ ಕೌರವ್ಯ ವರಪ್ರಾಸಾದಶೋಭಿತಾಃ ॥ ೨ ॥**
**ತೇಷು ದಾನವ ದೈತೇಯನಾಗಾಶ್ಚೈವ ಸಹಸ್ರಶಃ ॥ ೩ ॥**
**ಸ್ವರ್ಲೋಕಾದಪಿ ರಮ್ಯಾಣಿ ದೃಷ್ಟಾನಿ ಬಹುಶೋ ಮಯಾ ।**
**ಆಹ್ಲಾದಕಾರಿಣೋ ನಾನಾಮಣಯೋ ಯತ್ರ ಪನ್ನಗಾಃ ॥ ೪ ॥**
**ದೈತ್ಯದಾನವಕನ್ಯಾಭಿರ್ವರಹಾರೂಪಾಭಿರನ್ವಿತೇ ।**
**ಪಾತಾಲೇ ಕಸ್ಯ ನ ಪ್ರೀತಿರ್ವಿಮುಕ್ತಸ್ಯಾಪಿ ಜಾಯತೇ ॥ ೫ ॥**

---

### ಕನ್ನಡದ ಅನುವಾದ

#### ಬರ್ಕರೇಶ್ವರ ಮಾಹಾತ್ಮ್ಯವರ್ಣನ

೧. ನಾರದನು ಹೇಳುತ್ತಾನೆ:— ಎಪತ್ತುಸಾವಿರ ಯೋಜನಗಳ ಅಂತರದಲ್ಲಿ ಪಾತಾಲಗಳೆಲ್ಲವೂ ನೆಲಸಿರುವುವು. ಅತಲ, ವಿತಲ, ನಿತಲ, ರಸಾತಲ, ತಲಾತಲ, ಸುತಲ, ಪಾತಾಲಗಳೆಂಬುವೇ ಏಳು ಅಧೋಲೋಕಗಳು.

೨. ಕಪ್ಪು, ಬಿಳುಪು, ಕೆಂಪು, ಹಳದಿ ಬಣ್ಣಗಳುಳ್ಳ ಮಣ್ಣು, ಕಲ್ಲು, ಬಂಗಾರಗಳಿಂದ ಕೂಡಿದ ಆ ಪ್ರದೇಶಗಳಲ್ಲಿ ಉತ್ತಮವಾದ ಗೃಹಪ್ರಾಸಾದಗಳು ಕಂಗೊಳಿಸುತ್ತಿರುವುವು.

೩–೪. ಅವುಗಳಲ್ಲಿ ದಾನವರು, ರಾಕ್ಷಸರು, ನಾಗರು ಮುಂತಾದ ಸಾವಿರಾರು ನಿವಾಸಿಗಳಿರುವರು. ಸ್ವರ್ಗಲೋಕಕ್ಕಿಂತಲೂ ರಮ್ಯಗಳಾದ ಅನೇಕ ಪ್ರದೇಶಗಳು ಅಲ್ಲಿ ನನ್ನ ಕಣ್ಣುಗಳಿಗೆ ಕಾಣಿಸಿರುವುವು. ಅಲ್ಲಿ ನಾಗರು ನಾನಾರತ್ನ ವಿಭೂಷಿತರಾಗಿ ಮನಸ್ಸಿಗೆ ಆನಂದವನ್ನುಂಟುಮಾಡುತ್ತಿರುವರು.

೫. ಅತ್ಯಂತ ಸ್ಫುರದ್ರೂಪಿಣಿಯರಾದ ರಾಕ್ಷಸ ದಾನವ ಸ್ತ್ರೀಯರಿಂದ ತುಂಬಿರುವ ಆ ಪಾತಾಲಲೋಕದಲ್ಲಿ ಯಾವ ಮುಕ್ತನಿಗೆ ತಾನೆ ಪ್ರೀತಿಯುಂಟಾಗುವುದಿಲ್ಲ ?

**ಯತ್ರ ನೋಷ್ಣಂ ನ ವಾ ಶೀತಂ ನ ವರ್ಷಂ ದುಃಖಮೇವ ಚ ।**
**ಭಕ್ಷ್ಯಭೋಜ್ಯ ಮಹಾಭೋಗಕಾಲೋ ಯತ್ರಾಪಿ ಜಾಯತೇ ॥ ೬ ॥**
**ಪಾತಾಲೇ ಸಪ್ತಮೇ ಚಾಸ್ತಿ ಲಿಂಗಂ ಶ್ರೀ ಹಾಟಕೇಶ್ವರಂ ।**
**ಬ್ರಹ್ಮಣಾ ಸ್ಥಾಪಿತಂ ಪಾರ್ಥ ಸಹಸ್ರಯೋಜನೋಚ್ಛ್ರಿತಂ ॥ ೭ ॥**
**ಹಾಟಕಸ್ಯ ತು ಲಿಂಗಸ್ಯ ಪ್ರಾಸಾದೋ ಯೋಜನಾಯುತಃ ।**
**ಸರ್ವರತ್ನಮಯೋ ದಿವ್ಯೋ ನಾನಾಶ್ಚರ್ಯವಿಭೂಷಿತಃ ॥ ೮ ॥**
**ತಚ್ಚಾರ್ಚಯಂತಿ ತಲ್ಲಿಂಗಂ ನಾನಾನಾಗೇಂದ್ರಸತ್ತಮಾಃ ।**
**ತದಧಸ್ತಾಜ್ಜಲಂ ಭೂರಿ ತಸ್ಯಾಧೋ ನರಕಾಃ ಸ್ಮೃತಾಃ ॥ ೯ ॥**
**ಪಾಪಿನೋ ಯೇಷು ಪಾತ್ಯಂತೇ ತಚ್ಛೃಣುಷ್ವ ಮಹಾಮತೇ ।**
**ಕೋಟಿಯಃ ಪಂಚಪಂಚಾಶದ್ರಾಜಾನಶ್ಚೈಕವಿಂಶತಿಃ ॥ ೧೦ ॥**
**ರೌರವಃ ಶೂಕರೋ ರೋಧಸ್ತಾಲೋ ವಿಶಸನಸ್ತಥಾ ।**
**ಮಹಾಜ್ವಾಲಸ್ತಪ್ತಕುಂಭೋ ಲವಣೋಽಥ ವಿಮೋಹಕಃ ॥ ೧೧ ॥**
**ರುಧಿರಾಂಧೋ ವೈತರಣೀ ಕೃಮಿಶಃ ಕೃಮಿಭೋಜನಃ ।**
**ಅಸಿಪತ್ರವನಂ ಕೃಷ್ಣೋ ಲಾಲಾಭಕ್ಷ್ಯಶ್ಚ ದಾರುಣಃ ॥ ೧೨ ॥**

---

೬. ಅಲ್ಲಿ ಉಷ್ಣಶೀತಗಳಾಗಿ, ಅತಿವೃಷ್ಟಿಯಾಗಲಿ, ದುಃಖಗಳಾಗಲಿ, ಇರುವುದಿಲ್ಲವು. ಭಕ್ಷ್ಯಭೋಜ್ಯಗಳ ಮಹತ್ಪ್ರಾಪ್ತಿಯು ಕಾಲಕಾಲಕ್ಕೆ ಯಾವ ಪ್ರಯತ್ನವೂ ಇಲ್ಲದೆ ತಾನಾಗಿಯೇ ಆಗುವುದು.

೭. ಏಳನೆಯ ಪಾತಾಲಲೋಕದಲ್ಲಿ ಶ್ರೀ ಹಾಟಕೇಶ್ವರ ಲಿಂಗವಿರುವುದು. ಎಲೈ ಅರ್ಜುನನೆ! ಅದು ಬ್ರಹ್ಮನಿಂದ ಸ್ಥಾಪಿತವಾಗಿ ಒಂದುಸಾವಿರ ಯೋಜನ ಪ್ರಮಾಣವುಳ್ಳದಾಗಿರುವುದು.

೮. ಆ ಹಾಟಕೇಶ್ವರನ ಪ್ರಾಸಾದವು ಹತ್ತುಸಾವಿರ ಯೋಜನ ವಿಸ್ತಾರವುಳ್ಳದಲ್ಲದೆ, ಸಕಲ ರತ್ನಗಳಿಂದಲಂಕೃತವಾಗಿ ನಾನಾಶ್ಚರ್ಯಯುಕ್ತವಾಗಿ ಶೋಭಿಸುತ್ತಿರುವ ದಿವ್ಯಭವನವಾಗಿರುವುದು.

೯. ಅಲ್ಲಿರುವ ಅನೇಕ ಸರ್ಪಶ್ರೇಷ್ಠರು ಆ ಶಿವಲಿಂಗವನ್ನು ಭಕ್ತಿಯಿಂದ ರ್ಚಿಸುತ್ತಿರುವರು. ಅದರ ಕೆಳಗೆ ಅಪಾರವಾದ ಜಲವಿರುವುದು. ಆ ಜಲದ ಅಧೋಭಾಗದಲ್ಲಿ ನರಕಗಳಿರುವುವೆಂದು ಹೇಳುತ್ತಾರೆ.

೧೦. ಅವುಗಳಲ್ಲಿ ಇನ್ನೂರೈವತ್ತುಕೋಟಿ ಪಾಪಿಗಳು ಬಿದ್ದು ನರಳುತ್ತಿರುವರು. ಎಲೈ ಮಹಾಮತಿಯೇ! ಅವರಿಗೆ ಇಪ್ಪತ್ತೊಂದು ಮಂದಿ ಅಧಿಪತಿಗಳಿರುವರು.

೧೧–೧೪. ರೌರವ, ಶೂಕರ, ರೋಧ, ತಾಲ, ವಿಶಸನ, ಮಹಾಜ್ವಾಲ, ತಪ್ತಕುಂಭ, ಲವಣ, ವಿಮೋಹಕ, ರುಧಿರಾಂಧ, ವೈತರಣೀ, ಕೃಮಿಶ,

**ತಥಾ ಪೂಯವಹಃ ಪಾಪೋ ವಹ್ನಿಜ್ವಾಲೋಽಪ್ಯಧಃಶಿರಾಃ ।**
**ಸಂದಂಶಃ ಕೃಷ್ಣಸೂತ್ರಶ್ಚ ತಮಶ್ಚಾವೀಚಿರೇವ ಚ ॥ ೧೩ ॥**
**ಶ್ವಭೋಜನೋ ವಿಸೂಚಿಶ್ಚಾಪ್ಯವೀಚಿಶ್ಚ ತಥಾಪರಃ ।**
**ಕೂಟಸಾಕ್ಷೀ ರೌರವಂ ಚ ರೋಧಂ ಗೋವಿಪ್ರರೋಧಕಃ ॥ ೧೪ ॥**
**ಸುರಾಪಃ ಶೂಕರಂ ಯಾತಿ ತಾಲಂ ಮಿಥ್ಯಾಮನುಷ್ಯಹಾ ।**
**ಗುರುತಲ್ಪೀ ತಪ್ತಕುಂಭಂ ತಪ್ತಲೋಹಂ ಚ ಭಕ್ತಹಾ ॥ ೧೫ ॥**
**ಗುರೂಣಾಮವಮಂತಾ ಯೋ ಮಹಾಜ್ವಾಲೇ ನಿಪಾತ್ಯತೇ ।**
**ಲವಣಂ ಶಾಸ್ತ್ರಹಂತಾ ಚ ನಿರ್ಮರ್ಯಾದೋ ವಿಮೋಹಕೇ ॥ ೧೬ ॥**
**ಕೃಮಿಭಕ್ಷ್ಯೇ ದೇವದ್ವೇಷ್ಟಾ ಕೃಮಿಶೇ ತು ದುರಿಷ್ಟಕೃತ್ ।**
**ಪಿತೃದೇವಾತ್ಪೂರ್ವಮಶ್ನನ್ಲಾಲಾಭಕ್ಷ್ಯೇ ಪ್ರಯಾತಿ ಚ ॥ ೧೭ ॥**
**ಮಿಥ್ಯಾಜೀವವಿರೋಧೀ ವಿಶಸನೇ ಕೂಟಶಸ್ತ್ರಕೃತ್ ।**
**ಅಧೋಮುಖೇ ಹ್ಯಸದ್ಗ್ರಾಹೀ ಏಕಾಶೀ ಪೂಯವಾಹಕೇ ॥ ೧೮ ॥**

---

ಕೃಮಿಭೋಜನ, ಅಸಿಪತ್ರವನ, ಕೃಷ್ಣ, ಲಾಲಾಭಕ್ಷ್ಯ, ದಾರುಣ, ಪೂಯವಹ, ಪಾಪ, ವಹ್ನಿಜ್ವಾಲ, ಅಧಃಶಿರ, ಸಂದಂಶ, ಕೃಷ್ಣಸೂತ್ರ, ತಮ, ಅವೀಚಿ, ಶ್ವಭೋಜನ, ವಿಸೂಚಿ, ಆವೀಚಿ ಮುಂತಾದ ಅನೇಕ ನರಕಗಳಿರುವುವು. ಕೂಟಸಾಕ್ಷಿಯು ರೌರವವನ್ನೂ, ಗೋವಿಪ್ರರಿಗೆ ಕಂಟಕನಾದವನು ರೋಧವನ್ನೂ ಹೊಂದುವರು.

೧೫–೧೬. ಸುರಾಪಾನವನ್ನು ಮಾಡುವವನು ಶೂಕರವನ್ನೂ, ವ್ಯರ್ಥವಾಗಿ ಮನುಷ್ಯ ವಧೆಯನ್ನು ಮಾಡುವವನು ತಾಲವನ್ನೂ, ಗುರುತಲ್ಪಗಮನ ಮಾಡುವವನು ತಪ್ತ ಕುಂಭವನ್ನೂ, ಭಕ್ತರನ್ನು ಪೀಡಿಸುವವನು ತಪ್ತಲೋಕವನ್ನೂ ಸೇರುವರು. ಗುರುಹಿರಿಯರನ್ನು ಹೀಯಾಳಿಸುವವನು ಮಹಾಜ್ವಾಲದಲ್ಲಿ ಹಾಕಲ್ಪಡುವನು. ಶಾಸ್ತ್ರದೂಷಕನು ಲವಣದಲ್ಲಿಯೂ, ಮರ್ಯಾದಾರಹಿತನು ವಿಮೋಹಕದಲ್ಲಿಯೂ ನರಳುವರು.

೧೭. ದೇವತೆಗಳನ್ನು ದ್ವೇಷಿಸುವವನು ಕೃಮಿಭಕ್ಷ್ಯದಲ್ಲಿಯೂ, ಇತರರಿಗೆ ಸಂಕಟಗಳನ್ನುಂಟುಮಾಡುವವನು ಕೃಮಿಶದಲ್ಲಿಯೂ, ಪಿತೃಗಳಿಗೂ ದೇವತೆಗಳಿಗೂ ಹವ್ಯಕವ್ಯಗಳನ್ನು ಕೊಡದೆ ಭೋಜನವನ್ನು ಮಾಡುವವನು ಲಾಲಾಭಕ್ಷ್ಯದಲ್ಲಿಯೂ ಸಂಕಟಪಡುವರು.

೧೮. ವೃಥಾ ಇತರರಲ್ಲಿ ವಿರೋಧ ಮಾಡುವವನೂ, ಮೋಸದಿಂದ ಶಸ್ತ್ರ ಪ್ರಯೋಗವನ್ನು ಮಾಡುವವನೂ ವಿಶಸನದಲ್ಲಿಯೂ, ಅಸದ್ವಾದ ಗ್ರಾಹಿಯು ಅಧೋಮುಖದಲ್ಲಿಯೂ, ಒಬ್ಬನೇ ಭೋಜನಮಾಡುವವನು ಪೂಯವಾಹಕದಲ್ಲಿಯೂ ಬೀಳುವರು.

**ಮಾರ್ಜಾರಕುಕ್ಕುಟಶ್ವಾನಪಕ್ಷಿಪೋಷ್ಟಾ ಪ್ರಯಾತಿ ಚ ।**
**ಬಧಿರಾಂಧಗೃಹಕ್ಷೇತ್ರತೃಣಧಾನ್ಯಾದಿ ಜ್ವಾಲಕಃ ॥ ೧೯ ॥**
**ನಕ್ಷತ್ರರಂಗಜೀವೀ ಚ ಯಾತಿ ವೈತರಣೀಂ ನರಃ ।**
**ಧನಯೌವನಮತ್ತೋ ಯೋ ಧನಹಾ ಕೃಷ್ಣಮೇತಿ ಸಃ ॥ ೨೦ ॥**
**ಅಸಿಪತ್ರವನಂ ಯಾತಿ ವೃಕ್ಷಚ್ಛೇದೀ ವೃಥೈವ ಯಃ ।**
**ಕುಹಕಾಜೀವಿನಃ ಸರ್ವೇ ವಹ್ನಿಜ್ವಾಲೇ ಪತಂತಿ ತೇ ॥ ೨೧ ॥**
**ಪರಸ್ತ್ರೀಂ ಚ ಪರಾನ್ನಂಚ ಗಚ್ಛನ್ಸಂದಂಶಮೇತಿ ಚ ।**
**ದಿವಾಸ್ವಪ್ನಪರಾ ಯೇ ಚ ವ್ರತಲೋಪಪರಾಶ್ಚ ಯೇ ॥ ೨೨ ॥**
**ಶರೀರಮದಮತ್ತಾಶ್ಚ ಯಾಂತಿ ಚೈತೇ ಶ್ವಭೋಜನಂ ।**
**ಶಿವಂ ಹರಿಂ ನ ಮನ್ಯಂತೇ ಯಾಂತ್ಯವೀಚಿನಮೇವ ಚ ॥ ೨೩ ॥**
**ಇತ್ಯೇವಮಾದಿಭಿಃ ಪಾಪೈರಶಾಸ್ತ್ರೌಘಸ್ಯ ಸೇವನೈಃ ।**
**ಪತಂತ್ಯೇವ ಮಹಾಘೋರನರಕೇಷು ಸಹಸ್ರಶಃ ॥ ೨೪ ॥**

---

೧೯. ಮಾರ್ಜಾರ, ಕುಕ್ಕುಟ, ಶ್ವಾನ, ಪಕ್ಷಿ ಇವುಗಳ ಪೋಷಣ ವಿಕ್ರಯ ಗಳಿಂದ ಜೀವಿಸುವವರೂ, ಅಂತೆಯೇ ಬಧಿರ, ಅಂಧ, ಗೃಹ, ಕ್ಷೇತ್ರ, ತೃಣ, ಧಾನ್ಯಾದಿಗಳಿಗೆ ಬೆಂಕಿಯನ್ನು ಇಟ್ಟು ನಾಶಮಾಡುವವನೂ ಇದೇ ಪೂಯವಾಹಕ ನರಕದಲ್ಲಿ ಬಿದ್ದು ಕಷ್ಟಪಡುವರು.

೨೦. ನಕ್ಷತ್ರ ವಿದ್ಯೆಯಿಂದಲೂ, ರಂಗ (ಅಭಿನಯ) ವಿದ್ಯೆಯಿಂದಲೂ ಜೀವಿಸುವವನು ವೈತರಣಿಯನ್ನು ಸೇರುವನು. ಧನ, ಯೌವನಗಳ ಮದದಿಂದ ಇತರರ ಧನವನ್ನು ಅಪಹರಿಸುವವನು ಕೃಷ್ಣನಾಮಕ ನರಕವನ್ನು ಸೇರುವನು.

೨೧. ನಿಷ್ಕಾರಣವಾಗಿ ವೃಕ್ಷಗಳನ್ನು ಕಡಿದರೆ ಅಸಿಪತ್ರವನವೆಂಬ ನರಕದಲ್ಲಿ ಬೀಳುತ್ತಾನೆ. ಮೋಸ ಮೂಲಕವಾದ ವಿದ್ಯೆಗಳಿಂದ ಜೀವಿಸುವ ಜನರೆಲ್ಲರೂ ವಹ್ನಿಜ್ವಾಲವೆಂಬ ನರಕದಲ್ಲಿ ಬಿದ್ದು ನರಳುವರು.

೨೨–೨೩. ಪರಸ್ತ್ರೀಯನ್ನಾಗಲಿ, ಪರಾನ್ನವನ್ನಾಗಲಿ ಅಪೇಕ್ಷಿಸಿದರೆ ಸಂದಂಶವೆಂಬ ನರಕವನ್ನು ಹೊಂದುವನು. ಹಗಲಿನಲ್ಲಿ ನಿದ್ರಿಸುವವರೂ, ವ್ರತ ನಿಯಮಗಳಲ್ಲಿ ಲೋಪಗಳನ್ನು ಮಾಡುವವರೂ, ದೇಹಶಕ್ತಿಯ ಮದದಿಂದ ಉನ್ಮತ್ತರಾದವರೂ, ಶ್ವಭೋಜನವೆಂಬ ನರಕವನ್ನು ಅನುಭವಿಸುವರು. ಶಿವನನ್ನಾಗಲಿ ವಿಷ್ಣುವನ್ನಾಗಲಿ ಪೂಜಿಸದವನು ಅವೀಚಿಯೆಂಬ ನರಕದಲ್ಲಿ ವಾಸಿಸುತ್ತಾನೆ.

೨೪. ಇಂತು ಶಾಸ್ತ್ರ ಸಮೂಹಗಳ ನಿಯಮಗಳನ್ನು ಸೇವಿಸದೆ ವಿರುದ್ಧ ಧರ್ಮಗಳನ್ನು ಸೇವಿಸುವುದರಿಂದ ಸಾವಿರಾರು ಜನರು ಮಹಾ ಘೋರವಾದ ನರಕಗಳಲ್ಲಿ ಬೀಳುತ್ತಾರೆ.

ತಸ್ಮಾದ್ಯ ಇಚ್ಛೇದೇತೇಭ್ಯೋ ವಿಮೋಕ್ಷಂ ಬುದ್ಧಿಮಾನ್ನರಃ ।
ಶೃತಿಮಾರ್ಗೇಣ ತೇನಾರ್ಚ್ಯೌ ದೇವೌ ಹರಿಹರಾವುಭೌ ॥ ೨೫ ॥
ನರಕಾಣಾಮಧೋ ಭಾಗೇ ಸ್ಥಿತಃ ಕಾಲಾಗ್ನಿಸಂಜ್ಞಕಃ ।
ತದಧೋ ಹಟ್ಟಕಶ್ಚೈವ ಅನಂತಸ್ತದಧಃ ಸ್ಮೃತಃ ॥ ೨೬ ॥
ಯಸ್ಯೈತತ್ಸಕಲಂ ವಿಶ್ವಂ ಮೂರ್ಧಾಗ್ರೇ ಸರ್ಷಪಾಯತೇ ।
ಇತ್ಯನಂತಪ್ರಭಾವಾತ್ಸ ಹ್ಯನಂತ ಇತಿ ಕೀರ್ತ್ಯತೇ ॥ ೨೭ ॥
ದಿಶಾಂ ಗಜಾಸ್ತತ್ರ ಪದ್ಮಕುಮುದಾಂಜನವಾಮನಾಃ ।
ತದಧೋಽಂಡಕಟಾಹಶ್ಚ ಏಕವೀರಾಸ್ತಿ ತತ್ರ ಚ ॥ ೨೮ ॥
ಚತುರ್ಲಕ್ಷಸಹಸ್ರಾಣಿ ನವತಿಶ್ಚ ಶತಾತಿ ಚ ।
ಏತೇನೈವ ಪ್ರಮಾಣೇನ ಉದಕಂ ಚ ತತಃ ಸ್ಮೃತಂ ॥ ೨೯ ॥
ತಮಧೋ ನರಕಾಃ ಕೋಟ್ಯೋ ದ್ವಿಕೋಟ್ಯೋಽಗ್ನಿಸ್ತತೋ ಮಹಾನ್ ।
ಚತ್ವಾರಿಂಶತ್ಸಹಸ್ರೈಶ್ಚ ತದಧಸ್ತಮ ಉಚ್ಯತೇ ॥ ೩೦ ॥
ಚತ್ವಾರಿಂಶಚ್ಚ ಕೋಟ್ಯಸ್ತು ಚತಸ್ರಶ್ಚ ತತಃ ಪರಾಃ ।
ಏಕೋನನವತಿರ್ಲಕ್ಷಾಃ ಸಹಸ್ರಾಶೀತಿರೇವ ಚ ॥ ೩೧ ॥

---

೨೫. ಆದುದರಿಂದ ಬುದ್ಧಿವಂತನಾದ ಯಾವ ಮಾನವನು ಈ ನರಕಗಳಿಂದ ಬಿಡುಗಡೆಯನ್ನೆಳಸುವನೋ, ಅವನು ವೇದೋಕ್ತನಿಯಮಗಳಿಂದ ಮಹೇಶ್ವರನನ್ನೂ, ಮಹಾವಿಷ್ಣುವನ್ನೂ ಪೂಜಿಸಬೇಕು.

೨೬. ಈ ನರಕಗಳ ಕೆಳಗೆ ಕಾಲಾಗ್ನಿಯಿರುವುದು. ಅದರ ಕೆಳಗೆ ಹಟ್ಟಕವೆಂಬ ಪ್ರದೇಶವೂ, ಅದರ ಕೆಳಗೆ ಅನಂತನೂ ಇರುವರು.

೨೭–೨೯. ಆ ಆದಿಶೇಷನ ಫಣಾಭಾಗದಲ್ಲಿ ಈ ವಿಶ್ವವೆಲ್ಲವೂ ಸಾಸುವೆಯ ಕಾಳಿನಂತೆ ಲಘುವಾಗಿರುವುದು. ಇಂತು ಅಪರಿಮಿತವಾದ ವೈಭವವುಳ್ಳುದಾದುದರಿಂದಲೇ ಆತನಿಗೆ ಅನಂತನೆಂದು ಹೆಸರು. ಅಲ್ಲಿ ದಿಗ್ಗಜಗಳಾದ ಪದ್ಮ, ಕುಮುದ, ಅಂಜನ, ವಾಮನಗಳೂ, ಬ್ರಹ್ಮಾಂಡ ಕಟಾಹವೂ, ಏಕವೀರ ನಾಮಕಳಾದ ದೇವಿಯೂ ಇರುವರು. ಪಾತಾಲಗಳ ಕೆಳಗೆ ನಲವತ್ತುಕೋಟಿ ಒಂಬತ್ತುಸಾವಿರ ಯೋಜನ ಪ್ರಮಾಣವುಳ್ಳ ಉದಕವಿರುವುದು.

೩೦–೩೧. ಅದರ ಕೆಳಗೆ ಒಂದು ಕೋಟಿ ನರಕಗಳಿರುವುವು. ಮತ್ತೂ ಕೆಳಗೆ ಎರಡು ಕೋಟಿ ಯೋಜನಗಳ ಅಗ್ನಿಯು ಮಹತ್ತರವಾಗಿ ವ್ಯಾಪಿಸಿಕೊಂಡಿರುವುದು. ಅದರ ಕೆಳಗೆ ನಲವತ್ತುಸಾವಿರ ಯೋಜನ ವಿಸ್ತಾರದ ತಮಸ್ಸು ವ್ಯಾಪಿಸಿರುವುದು. ಇಂತು ಒಟ್ಟು ಅಧೋಭಾಗಗಳು ನಲವತ್ತನಾಲ್ಕು ಕೋಟಿ ಎಂಬತ್ತೊಂಬತ್ತು ಲಕ್ಷದ ಎಂಬತ್ತು ಸಾವಿರ ಯೋಜನಗಳವರೆಗೂ ಹಬ್ಬಿರುವುವು.

ತದಧೋಽಂಡಕಟಾಹೋಽಥ ಕೋಟಿಮಾತ್ರಸ್ತಥಾವರಃ ।
ದೇವೀ ಯುಕ್ತಾ ಕಪಾಲೀಶಾ ದಂಡಹಸ್ತೇನ ಚಾಪಿ ಸಾ ॥ ೩೨ ॥
ದೇವೀನಾಂ ಕೋಟಿಕೋಟೀಭಿಃ ಸಂವೃತಾ ತತ್ರ ಪಾಲಿನೀ ।
ಸಂಕರ್ಷಣಸ್ಯ ನಿಃಶ್ವಾಸಪ್ರೇರಿತೋ ದಾಹಕೋಽನಲಃ ॥ ೩೩ ॥
ಕಾಲಾಗ್ನಿಂ ಪ್ರೇರಯತ್ಯೇವ ಕಲ್ಪಾಂತೇ ದಹ್ಯತೇ ಜಗತ್ ।
ಏವಂವಿಧಮಧಃಸೂತ್ರಂ ನಿರ್ಮಿತಂ ಚಾತ್ರ ಭಾರತ ॥ ೩೪ ॥
ಮಧ್ಯಸೂತ್ರೇ ಕಟಾಹೇ ಚ ಪಾಲಕಾಂಸ್ತಾನ್ ಶೃಣುಷ್ವ ಮೇ ।
ವಸುಧಾಮಾ ಸ್ಥಿತಃ ಪೂರ್ವೇ ಶಂಖಪಾಲಶ್ಚ ದಕ್ಷಿಣೇ ।
ತಕ್ಷಕೇಶಃ ಸ್ಥಿತಂ ಪಶ್ಚಾದುತ್ತರೇ ಕೇತುಮಾನಿತಿ ॥ ೩೫ ॥
ಹರಸಿದ್ಧಿಃ ಸುಪರ್ಣಾಕ್ಷೀ ಭಾಸ್ಕರಾ ಯೋಗನಂದಿನೀ ।
ಕೋಟಿ ಕೋಟೀಯುತಾ ದೇವೀ ದೇವೀನಾಂ ಪಾಲಯತ್ಯಧಃ ॥ ೩೬ ॥
ಏವಮೇತನ್ಮಹಾಶ್ಚರ್ಯಂ ಬ್ರಹ್ಮಾಂಡಂ ಸ್ಥಾಪಿತಂ ಚ ಯೈಃ ।
ನಮಾಮಿ ತಾನಹಂ ನಿತ್ಯಂ ಬ್ರಹ್ಮವಿಷ್ಣುಮಹೇಶ್ವರಾನ್ ॥ ೩೭ ॥

---

೩೨. ಅದರ ಕೆಳಗೆ ಕೋಟಿಯೋಜನ ಪ್ರಮಾಣದ ಬ್ರಹ್ಮಾಂಡ ಕಟಾಹವಿರುವುದು. ಅಲ್ಲಿಯೇ ದೇವಿಯಾದ ಕಪಾಲೀಶ್ವರಿಯು ಹಸ್ತದಲ್ಲಿ ದಂಡವನ್ನು ಧರಿಸಿದವಳಾಗಿ ನೆಲಸಿರುವಳು.

೩೩-೩೪. ಆಕೆಯು ಅನೇಕ ಕೋಟಿ ಕೋಟಿ ದೇವಿಯರಿಂದ ಸೇವಿತಳಾಗಿ ಅಲ್ಲಿನಿಂದ ಸಮಸ್ತ ಲೋಕಗಳನ್ನೂ ಪಾಲಿಸುತ್ತಿರುವಳು. ಕಲ್ಪಾವಸಾನ ಸಮಯದಲ್ಲಿ ಸಂಕರ್ಷಣನ ನಿಟ್ಟುಸಿರಿನಿಂದ ಪ್ರೇರಿತವಾದ ಪ್ರಳಯಾಗ್ನಿಯನ್ನು ಆಕೆಯು ಪ್ರೇರೇಪಿಸುತ್ತಾಳೆ. ಅದರಿಂದಲೇ ಜಗತ್ತೆಲ್ಲವೂ ದಗ್ಧವಾಗುವುದು. ಎಲೈ ಅರ್ಜುನನೆ! ಇಂತು ಅಧೋಲೋಕಗಳ ವ್ಯವಸ್ಥಿತಿಯು ನಿರ್ಮಿತವಾಗಿರುವುದು.

೩೫. ಇನ್ನು ಬ್ರಹ್ಮಾಂಡದ ಮಧ್ಯದಲ್ಲಿರುವ ಕಟಾಹಪಾಲಕರನ್ನು ತಿಳಿಸುವೆನು ಕೇಳು. ಪೂರ್ವದಲ್ಲಿ ವಸುಧಾಮನೂ, ದಕ್ಷಿಣದಲ್ಲಿ ಶಂಖಪಾಲನೂ, ಪಶ್ಚಿಮದಲ್ಲಿ ತಕ್ಷಕೇಶ್ವರನೂ, ಉತ್ತರದಲ್ಲಿ ಕೇತುಮಂತನೂ ಇರುವರು.

೩೬. ದೇವಿಯೂ ಸಹ ಹರಸಿದ್ಧಿ, ಸುಪರ್ಣಾಕ್ಷಿ, ಭಾಸ್ಕರಾ, ಯೋಗನಂದಿನೀ ಎಂಬ ಹೆಸರುಗಳಿಂದ ಶೋಭಿಸುತ್ತ ಅನೇಕ ಕೋಟಿ ದೇವತೆಯರೊಡನೆ ಈ ಬ್ರಹ್ಮಾಂಡವನ್ನು ಪಾಲಿಸುತ್ತಿರುವಳು.

೩೭. ಇಂತಹ ಮಹಾಶ್ಚರ್ಯಗಳಿಂದ ಸಹಿತವಾದ ಬ್ರಹ್ಮಾಂಡವು ಯಾರಿಂದ ಸ್ಥಾಪಿತವಾಯಿತೋ, ಅಂತಹ ಬ್ರಹ್ಮ ವಿಷ್ಣು ಮಹೇಶ್ವರರೆಂಬ ಮುಮ್ಮೂರ್ತಿಗಳನ್ನು ನಾನು ನಿತ್ಯದಲ್ಲಿಯೂ ನಮಸ್ಕರಿಸುವೆನು.

ವಿಷ್ಣುಲೋಕೇ ರುದ್ರಲೋಕೇ ಬಹಿಶ್ಚಾಸ್ಮಾತ್ಪ್ರಕೀರ್ತ್ಯತೇ ।
ತಂ ಚ ವರ್ಣಯಿತುಂ ಬ್ರಹ್ಮಾ ಶಕ್ನೋತೀ ನೈವಾಸ್ಮದಾದಯಃ ॥ ೩೮ ॥
ವಿಮುಕ್ತಾ ಯತ್ರ ಸಂಯಾಂತಿ ನಿತ್ಯಂ ಹರಿಹರವ್ರತಾಃ ॥ ೩೯ ॥
ಬ್ರಹ್ಮಾಂಡಂ ಸಂವೃತಂ ಹ್ಯೇತತ್ಕಟಾಹೇನ ಸಮಂತತಃ ।
ಕಪಿತ್ಥಸ್ಯ ಯಥಾ ಬೀಜಂ ಕಟಾಹೇನ ಸುಸಂವೃತಂ ॥ ೪೦ ॥
ದಶೋತ್ತರೇಣ ಪಯಸಾ ವೃತಂ ತಚ್ಚಾಪಿ ತೇಜಸಾ ।
ತೇಜಶ್ಚ ವಾಯುನಾ ವಾಯುರ್ನಭಸಾಹಂತಯಾ ಚ ತತ್ ॥ ೪೧ ॥
ಅಹಂಕಾರಶ್ಚ ಮಹತಾ ತಂ ಚಾಪಿ ಪ್ರಕೃತಿಃ ಪರಾ ।
ದಶೋತ್ತರಾಣಿ ಸರ್ವಾಣಿ ಷಡಾಹುಃ ಸಪ್ತಮಂ ಚ ತತ್ ॥ ೪೨ ॥
ಪ್ರಾಕೃತಂ ಚರಣಂ ಪಾರ್ಥ ತದನಂತಂ ಪ್ರಕೀರ್ತಿತಂ ।
ಅಂಡಾನಾಂ ತು ಸಹಸ್ರಾಣಾಂ ಸಹಸ್ರಾಣ್ಯಯುತಾನಿ ಚ ॥ ೪೩ ॥
ಈದೃಶಾನಾಂ ತಥಾ ಚಾತ್ರ ಕೋಟಿಕೋಟಿಶತಾನಿ ಚ ।
ಸರ್ವಾಣ್ಯೇವಂವಿಧಾನ್ಯೇವ ಯಾದೃಶಂ ಕೀರ್ತಿತಂ ತ್ವಿದಂ ॥ ೪೪ ॥

---

೩೮. ಈ ಬ್ರಹ್ಮಾಂಡಕ್ಕಿಂತ ಪ್ರತ್ಯೇಕವಾಗಿ ವಿಷ್ಣುಲೋಕ, ರುದ್ರಲೋಕಗಳಿರುವುವೆಂದು ಹೇಳಿರುವರು. ಅವುಗಳನ್ನು ವರ್ಣಿಸಲು ಬ್ರಹ್ಮನೇ ಶಕ್ತನಲ್ಲವೆಂದಬಳಿಕ ನಮ್ಮಂತಹ ಕ್ಷುದ್ರಮಾನವರು ಸರ್ವಥಾ ಶಕ್ತರಲ್ಲವೇ ಅಲ್ಲವು.

೩೯–೪೦. ಶಿವಭಕ್ತರೂ, ವಿಷ್ಣುಭಕ್ತರೂ ಸಂಸಾರಬಂಧದಿಂದ ಮುಕ್ತರಾಗಿ ಅಲ್ಲಿ ನಿತ್ಯವೂ ವಿಹರಿಸುತ್ತಿರುವರು. ಇಂತು ಈ ಬ್ರಹ್ಮಾಂಡವು ಬೇಲದ ಹಣ್ಣುಬೀಜವು ಚಿಪ್ಪಿನಿಂದ ಮುಚ್ಚಿರುವಂತೆ ಆ ಕಟಾಹದಿಂದಾವೃತವಾಗಿರುವುದು.

೪೧. ಇದು ಹತ್ತುಯೋಜನ ಎತ್ತರದ ಜಲದಿಂದಲೂ, ಆ ಜಲವು ತೇಜಸ್ಸಿನಿಂದಲೂ, ಆ ತೇಜವು ವಾಯುವಿನಿಂದಲೂ, ಆ ವಾಯುವು ಆಕಾಶದಿಂದಲೂ ಆ ಆಕಾಶವು ಅಹಂಕಾರದಿಂದಲೂ ಆವೃತವಾಗಿರುವುವು.

೪೨. ಆ ಅಹಂಕಾರವೂ ಮಹತ್ತತ್ವದಿಂದಾವೃತವಾಗಿರುವುದು. ಆ ಮಹತ್ತತ್ವವನ್ನು ಮೂಲಪ್ರಕೃತಿಯು ಆವರಿಸಿರುವುದು. ಇಂತು ಮೊದಲನೆಯ ಆರು ಆವರಣಗಳೂ ಒಂದಕ್ಕಿಂತಲೂ ಒಂದು ದಶಯೋಜನ ವಿಸ್ತಾರವನ್ನು ಹೊಂದಿರುವುವು. ಏಳನೆಯ ಆವರಣವೇ ಮೂಲಪ್ರಕೃತಿಯು.

೪೩–೪೪. ಮೂಲಭೂತವಾದ ಈ ಪ್ರಕೃತಿಯು ಅನಂತವಾಗಿರುವುದೆಂದು ಹೇಳಲ್ಪಟ್ಟಿರುವುದು. ಎಲೈ ಪಾರ್ಥನೆ! ಸಾವಿರಗಟ್ಟಲೆಯಾಗಿಯೂ, ಕೋಟಿಕೋಟಿಗಟ್ಟಲೆಯಾಗಿಯೂ ಇರುವ ಇಂತಹ ಅನೇಕ ಬ್ರಹ್ಮಾಂಡಗಳು ನಾನು ಮೇಲೆ ಹೇಳಿದ ತೆರನಿಂದಲೇ ಕಲ್ಪಿತವಾಗಿದ್ದು, ಎಲ್ಲವೂ ಮೂಲಪ್ರಕೃತಿಯಲ್ಲಿಯೇ ಅಡಗಿರುವುವು.

ಯಸ್ಯೈವಂ ವೈಭವಂ ಪಾರ್ಥ ತಂ ನಮಾಮಿ ಸದಾಶಿವಂ ।
ಅಹೋ ಮಂದಃ ಸ ಪಾಪಾತ್ಮಾ ಕೋವಾ ತಸ್ಮಾದಚೇತನಃ ।
ಯ ಏವಂವಿಧಸಂಮೋಹಹತಾರಕಂ ನ ಶಿವಂ ಭಜೇತ್ ॥ ೪೫ ॥
ಅಥ ತೇ ಕೀರ್ತಯಿಷ್ಯಾಮಿ ಕಾಲಮಾನಂ ನಿಬೋಧ ತತ್ ॥ ೪೬ ॥

ಕಾಷ್ಠಾ ನಿಮೇಷಾ ದಶ ಪಂಚ ಚಾಹುಃ
ತ್ರಿಂಶಚ್ಚ ಕಾಷ್ಠಾ ಗಣಯೇತ್ಕಲಾಂ ।
ತ್ರಿಂಶತ್ಕಲಾಶ್ಚಾಪಿ ಭವೇನ್ಮುಹೂರ್ತಂ
ತತ್ತ್ರಿಂಶತಾ ರಾತ್ರ್ಯಹನೀ ಉಭೇ ಚ ॥ ೪೭ ॥

ದಿವಸೇ ಪಂಚಕಾಲಾಸ್ಸ್ಯುಸ್ತ್ರಿಮುಹೂರ್ತಾನ್ ಶೃಣುಷ್ವತಾನ್ ।
ಪ್ರಾತಸ್ತತಃ ಸಂಗವಶ್ಚ ಮಧ್ಯಾಹ್ನಶ್ಚಾಪರಾಹ್ಣಕಃ ॥ ೪೮ ॥
ಸಾಯಾಹ್ನಃ ಪಂಚಮಶ್ಚಾಪಿ ಮುಹೂರ್ತಾ ದಶ ಪಂಚ ಚ ।
ಅಹೋರಾತ್ರಾಃ ಪಂಚದಶ ಪಕ್ಷ ಇತ್ಯಭಿಧೀಯತೇ ॥ ೪೯ ॥
ಮಾಸಃ ಪಕ್ಷದ್ವಯೇನೋಕ್ತೋ ದ್ವೌಮಾಸೌ ಚಾರ್ಕಜಾವೃತುಃ ।
ಋತುತ್ರಯಂ ಚಾಪ್ಯಯನಂ ದ್ವೇऽಯನೇ ವರ್ಷಮುಚ್ಯತೇ ॥ ೫೦ ॥

---

೪೫. ಇಂತು ಬೆಳಗುತ್ತಿರುವ ಮಹಾ ವೈಭವದಿಂದೊಡಗೂಡಿದ ಸದಾಶಿವನನ್ನು ನಾನು ಮತ್ತೆ ಮತ್ತೆ ನಮಸ್ಕರಿಸುವೆನು. ಅಯ್ಯೋ! ಯಾವ ಮಾನವನು ಈ ವಿಧವಾದ ಸಂಸಾರದಿಂದ ಕಡೆಹಾಯಿಸುವ ಶಿವನನ್ನು ಭಜಿಸುವುದಿಲ್ಲವೊ, ಅವನು ಕೇವಲ ಮಂದಭಾಗ್ಯನು. ಅವನಿಗಿಂತ ಪಾಪಿಷ್ಠರು ಯಾರಿರುತ್ತಾರೆ?

೪೬–೪೭. ಇನ್ನು ನಿನಗೆ ಕಾಲಮಾನದ ವಿಚಾರವನ್ನು ತಿಳಿಸುವೆನು. ಕೇಳುವವನಾಗು. ಹದಿನೈದು ನಿಮಿಷಗಳಿಗೆ ಕಾಷ್ಠಾ ಎಂದು ಹೆಸರು. ಮೂವತ್ತು ಕಾಷ್ಠಗಳಿಗೆ ಕಲೆಯೆಂದು ಹೆಸರು. ಮೂವತ್ತು ಕಲೆಗಳು ಒಂದು ಮುಹೂರ್ತವನ್ನುಂಟುಮಾಡುವುವು. ಮೂವತ್ತು ಮುಹೂರ್ತಗಳಿಂದ ಹಗಲು ರಾತ್ರಿಗಳಿಂದ ಕೂಡಿದ ಒಂದು ದಿವಸವಾಗುವುದು.

೪೮–೪೯. ಹಗಲಿನಲ್ಲಿ ಮೂರು ಮೂರು ಮುಹೂರ್ತಗಳಂತೆ ಐದು ಕಾಲಗಳಿರುವುವು. ಅವುಗಳಾವುವೆಂದರೆ ಪ್ರಾತಃಕಾಲ, ಸಂಗವ, ಮಧ್ಯಾಹ್ನ, ಅಪರಾಹ್ಣ, ಸಾಯಾಹ್ನ ಎಂಬಿವು ಒಟ್ಟು ಹದಿನೈದು ಮುಹೂರ್ತಗಳುಳ್ಳವು. ಇಂತು ಹದಿನೈದು ಅಹೋರಾತ್ರಿಗಳಿಗೆ ಪಕ್ಷವೆಂದು ಹೆಸರು.

೫೦. ಎರಡು ಪಕ್ಷಗಳಿಗೆ ಮಾಸವೆಂದೂ, ಎರಡು ಸೌರಮಾಸಗಳಿಗೆ ಋತುವೆಂದೂ, ಮೂರು ಋತುಗಳಿಗೆ ಅಯನವೆಂದೂ, ಎರಡು ಅಯನಗಳಿಗೆ ವರ್ಷವೆಂದೂ ಹೆಸರುಗಳು.

**ಚತುರ್ಭೇದಂ ಮಾಸಮಾಹುಃ ಪಂಚಭೇದಂ ಚ ವತ್ಸರಂ ।**
**ಸಂವತ್ಸರಸ್ತು ಪ್ರಥಮೋ ದ್ವಿತೀಯಃ ಪರಿವತ್ಸರಃ ॥ ೫೧ ॥**
**ಇದ್ವತ್ಸರಸ್ತೃತೀಯೋಽಸೌ ಚತುರ್ಥಶ್ಚಾನುವತ್ಸರಃ ।**
**ಪಂಚಮಶ್ಚ ಯುಗೋನಾಮ ಗಣನಾನಿಶ್ಚಯೋ ಹಿ ಸಃ ॥ ೫೨ ॥**
**ಮಾಸೇನ ಚ ಮನುಷ್ಯಾಣಾಮಹೋರಾತ್ರಂ ಚ ಪೈತೃಕಂ ।**
**ಕೃಷ್ಣಪಕ್ಷಸ್ತ್ವಹಃ ಪ್ರೋಕ್ತಃ ಶುಕ್ಲಪಕ್ಷಶ್ಚ ಶರ್ವರೀ ॥ ೫೩ ॥**
**ಮಾನುಷೇಣ ಚ ವರ್ಷೇಣ ದೈವಿಕೋ ದಿವಸಃ ಸ್ಮೃತಃ ।**
**ಅಹಸ್ತತ್ರೋದಗಯನಂ ರಾತ್ರಿಃ ಸ್ಯಾದ್ದಕ್ಷಿಣಾಯನಂ ॥ ೫೪ ॥**
**ವರ್ಷೇಣ ಚೈವ ದೇವಾನಾಂ ಮತಃ ಸಪ್ತರ್ಷಿವಾಸರಃ ।**
**ಸಪ್ತರ್ಷೀಣಾಂ ಚ ವರ್ಷೇಣ ಧ್ರೌವಶ್ಚ ದಿವಸಃ ಸ್ಮೃತಃ ॥ ೫೫ ॥**
**ಮನುಷ್ಯಾಣಾಂ ಚ ವರ್ಷಾಣಿ ಲಕ್ಷ ಸಪ್ತದಶೈವ ತು ।**
**ಅಷ್ಟಾವಿಂಶತಿಸಹಸ್ರಾಣಿ ಕೃತಂ ತ್ರೇತಾಯುಗಂ ತತಃ ॥ ೫೬ ॥**
**ಲಕ್ಷದ್ವಾದಶಸಾಹಸ್ರಷಣ್ಣವತ್ಯಧಿಕಾಃ ಪರಾಃ ।**
**ಅಷ್ಟೌ ಲಕ್ಷಾಶ್ಚತುಷ್ಷಷ್ಟಿಸಹಸ್ರಾಣಿ ಚ ದ್ವಾಪರಃ ॥ ೫೭ ॥**

---

೫೧-೫೨. ಮಾಸವು ನಾಲ್ಕುವಿಧವುಳ್ಳುದೆಂದೂ, ವರ್ಷವು ಐದು ಪ್ರಭೇದಗಳುಳ್ಳುದೆಂದೂ ಬಲ್ಲವರು ಹೇಳುವರು. ವರ್ಷದ ಭೇದಗಳಾವುವೆಂದರೆ:— ಮೊದಲನೆಯದು ಸಂವತ್ಸರ; ಎರಡನೆಯದು ಪರಿವತ್ಸರ; ಮೂರನೆಯದು ಇದ್ವತ್ಸರ; ನಾಲ್ಕನೆಯದು ಅನುವತ್ಸರ; ಐದನೆಯದೇ ಸಾಧಾರಣವಾದ ಗಣನೆಗಾಗಿ ನಿಶ್ಚಿತವಾಗಿರುವ ಯುಗವತ್ಸರವೆಂಬುದು.

೫೩. ಮನುಷ್ಯಮಾನದ ಒಂದು ತಿಂಗಳಿಗೆ ಪಿತೃಲೋಕದ ಒಂದು ದಿನವೆನಿಸುವುದು. ನಮ್ಮ ಕೃಷ್ಣಪಕ್ಷವೇ ಅವರಿಗೆ ಹಗಲು; ನಮ್ಮ ಶುಕ್ಲಪಕ್ಷವೇ ಅವರಿಗೆ ರಾತ್ರಿಯು.

೫೪-೫೫. ಒಂದು ಮಾನುಷ ವರ್ಷವು ದೇವತೆಗಳಿಗೆ ದಿವಸವೆನಿಸುವುದು. ನಮ್ಮ ಉತ್ತರಾಯಣವೇ ಅವರಿಗೆ ಹಗಲು; ದಕ್ಷಿಣಾಯನವೇ ಆ ದೇವದಿನದ ಒಂದು ರಾತ್ರಿಯು. ಇಂತು ಕೂಡಿದ ದೇವವತ್ಸರವು ಸಪ್ತರ್ಷಿಲೋಕಕ್ಕೆ ಒಂದು ವಾರವಾಗುವುದು. ಇಂತಹ ವಾರಗಳಿಂದ ಕೂಡಿದ ಒಂದು ವರ್ಷವೇ ಧ್ರುವದಿವಸವೆನಿಸುವುದು.

೫೬-೫೭. ಮನುಷ್ಯಮಾನದ ಹದಿನೇಳು ಲಕ್ಷದ ಇಪ್ಪತ್ತೆಂಟು ವರ್ಷಗಳಿಂದ ಕೃತಯುಗವು ಕೂಡಿರುವುದು. ತ್ರೇತಾಯುಗವು ಹನ್ನೆರಡು ಲಕ್ಷದ ತೊಂಬತ್ತಾರು ಸಾವಿರ ವರ್ಷಗಳ ಕಾಲವಾಗಿರುವುದು. ದ್ವಾಪರಯುಗದಲ್ಲಿ ಎಂಟು ಲಕ್ಷ ಅರುವತ್ತು ನಾಲ್ಕು ಸಾವಿರ ವರ್ಷಗಳಿರುವುವು.

ಚತುರ್ಲಕ್ಷಂ ತು ದ್ವಾತ್ರಿಂಶತ್ಸಹಸ್ರಾಣಿ ಕಲಿಃ ಸ್ಮೃತಃ ।
ಚತುರ್ಭಿರೇತೈರ್ದೇವಾನಾಂ ಯುಗಮಿತ್ಯಭಿಧೀಯತೇ ॥ ೫೮ ॥
ಆಯುರ್ಮನೋರ್ಯುಗಾನಾಂ ಚ ಸಾಧಿಕಾ ಹ್ಯೇಕಸಪ್ತತಿಃ ।
ಚತುರ್ದಶಮನೂನಾಂ ಚ ಕಾಲೇನ ಬ್ರಹ್ಮಣೋ ದಿನಂ ॥ ೫೯ ॥
ಯುಗಾನಾಂ ಚ ಸಹಸ್ರೇಣ ಸ ಚ ಕಲ್ಪಃ ಶೃಣುಷ್ವ ತಾನ್ ।
ಭವೋದ್ಭವಸ್ತಪೋಭವ್ಯ ಋತುರ್ವಹ್ನಿರ್ವರಾಹಕಃ ॥ ೬೦ ॥
ಸಾವಿತ್ರ ಆಸಿಕಶ್ಚಾಪಿ ಗಾಂಧಾರಃ ಕುಶಿಕಸ್ತಥಾ ।
ಋಷಭಶ್ಚ ತಥಾ ಖಡ್ಗೋ ಗಾಂಧಾರೀಯಶ್ಚ ಮಧ್ಯಮಃ ॥ ೬೧ ॥
ವೈರಾಜಶ್ಚ ನಿಷಾದಶ್ಚ ಮೇಘವಾಹನಪಂಚಮೌ ।
ಚಿತ್ರಕೋ ಜ್ಞಾನ ಆಕೂತಿರ್ಮೀನೋ ದಂಶಶ್ಚ ಬೃಂಹಕಃ ॥ ೬೨ ॥
ಶ್ವೇತೋ ಲೋಹಿತರಕ್ತೌ ಚ ಪೀತವಾಸಾಃ ಶಿವಃ ಪ್ರಭುಃ ।
ಸರ್ವರೂಪಶ್ಚ ಮಾಸೋಽಯಮೇವಂ ವರ್ಷಶತಾವಧಿಃ ॥ ೬೩ ॥
ಪೂರ್ವಾರ್ಧಮಪರಾರ್ಧಂ ಚ ಬ್ರಹ್ಮಮಾನಮಿದಂ ಸ್ಮೃತಂ ।
ವಿಷ್ಣೋಶ್ಚ ಶಂಕರಸ್ಯಾಪಿ ನಾಹಂ ಶಕ್ತಶ್ಚ ವರ್ಣನೇ ॥ ೬೪ ॥

---

೫೮. ಕಲಿಯುಗವು ನಾಲ್ಕುಲಕ್ಷದ ಮುವ್ವತ್ತೆರಡುಸಾವಿರ ವರ್ಷಗಳುಳ್ಳು ದೆಂದು ಹೇಳುವರು. ಈ ನಾಲ್ಕು ಯುಗಗಳೂ ಒಟ್ಟುಗೂಡಿದರೆ ಒಂದು ದಿವ್ಯಯುಗವೆಂದು ಕರೆಯಲ್ಪಡುವುದು.

೫೯. ಇಂತಹ ಎಪ್ಪತ್ತೊಂದು ದಿವ್ಯ ಯುಗಗಳು ಒಬ್ಬ ಮನುವಿನ ಆಯುಃಪ್ರಮಾಣವೆನಿಸುವುದು. ಹದಿನಾಲ್ಕು ಮನ್ವಂತರಗಳ ಅವಧಿಗೆ ಬ್ರಹ್ಮನ ದಿನವೆಂದು ಹೇಳುವರು.

೬೦–೬೩. ಒಂದು ಸಾವಿರ ಚತುರ್ಯುಗಗಳಿಗೆ ಕಲ್ಪ ಅಥವ ಬ್ರಹ್ಮನ ದಿನವೆನ್ನುವರು. ಅವುಗಳ ಹೆಸರುಗಳನ್ನು ಕೇಳು. ಭವೋದ್ಭವ, ತಪೋಭವ್ಯ, ಋತು, ವಹ್ನಿ, ವರಾಹಕ, ಸಾವಿತ್ರ, ಆಸಿಕ, ಗಾಂಧಾರ, ಕುಶಿಕ, ಋಷಭ, ಖಡ್ಗ, ಗಾಂಧಾರೀಯ, ಮಧ್ಯಮ, ವೈರಾಜ, ನಿಷಾದ, ಮೇಘವಾಹನ, ಪಂಚಮ ಚಿತ್ರಕ, ಜ್ಞಾನ, ಆಕೂತಿ, ಮೀನ, ದಂಶ, ಬೃಂಹಕ, ಶ್ವೇತ, ಲೋಹಿತ, ರಕ್ತವು. ಇಂತು ಪೀತಾಂಬರಧಾರಿಯಾದ ಲೋಕೇಶ್ವರನಾದ ಶಿವನು ಸರ್ವ ಕಾಲರೂಪಿಯಾಗಿರುವನು. ಇಂತಹ ದಿನಗಳಿಂದಲೂ, ಮಾಸಗಳಿಂದಲೂ ಕೂಡಿದ ಒಂದು ನೂರು ವರ್ಷಗಳು ಬ್ರಹ್ಮನ ಆಯುರ್ಮಾನವೆನಿಸುವುದು.

೬೪. ಈ ಬ್ರಹ್ಮನ ಆಯುರ್ಭಾಗವು ಪೂರ್ವಾರ್ಧವೆಂದೂ ಅಪರಾರ್ಧ ವೆಂದೂ ವಿಭಜಿಸಲ್ಪಟ್ಟಿರುವುದು. ಇನ್ನು ವಿಷ್ಣು ಶಂಕರರ ಆಯುರ್ಮಾನ ಗಳನ್ನು ವರ್ಣಿಸಲು ನಾನು ಸರ್ವಥಾ ಶಕ್ತನಲ್ಲ.

ಕ್ವಾಹಮಲ್ಪಮತಿಃ ಪಾರ್ಥ ಕ್ವಾಪ್ಯೇತೌ ಹರಿತ್ರ್ಯಂಬಕೌ ।
ದೈವಿಕೇನೈವ ಮಾನೇನ ಪಾತಾಲೇಷ್ವಪಿ ಗಣ್ಯತೇ ॥ ೬೫ ॥
ಇತಿ ತೇ ಸೂಚಿತಂ ಬುದ್ಧ್ಯಾ ಶ್ರುಣು ತತ್ಪ್ರಾಕೃತಂ ಪುನಃ ॥ ೬೬ ॥
ಇತಿ ವೈಧಾತ್ರವ್ಯವಸ್ಥಿತಿಃ ॥

ಶ್ರೀ ನಾರದ ಉವಾಚ:—

ಋಷಭೋನಾಮ ಯನ್ನಾಮ್ನಾ ನಾನಾಪಾಷಂಡಕಲ್ಪನಾಃ ।
ಕಲೌ ಪಾರ್ಥ ಭವಿಷ್ಯಂತಿ ಲೋಕಾನಾಂ ಮೋಹನಾತ್ಮಿಕಾಃ ॥ ೬೭ ॥
ತಸ್ಯ ಪುತ್ರಸ್ತು ಭರತಃ ಶತಶೃಂಗಸ್ತು ತತ್ಸುತಃ ।
ತಸ್ಯ ಪುತ್ರಾಷ್ಟಕಂ ಜಾತಂ ತಥೈಕಾಚ ಕುಮಾರಿಕಾ ॥ ೬೮ ॥
ಇಂದ್ರದ್ವೀಪಃ ಕಸೇರುಶ್ಚ ತಾಮ್ರದ್ವೀಪೋ ಗಭಸ್ತಿಮಾನ್ ।
ನಾಗಃ ಸೌಮ್ಯಶ್ಚ ಗಾಂಧರ್ವೋ ವರುಣಶ್ಚ ಕುಮಾರಿಕಾ ॥ ೬೯ ॥
ವದನಂ ಚಾಪಿ ಕನ್ಯಾಯಾಃ ಪಾರ್ಥ ಬರ್ಕರಿಕಾಕೃತಿ ।
ಶ್ರುಣು ತತ್ಕಾರಣಂ ಸರ್ವಂ ಮಹಾಶ್ಚರ್ಯಸಮನ್ವಿತಂ ॥ ೭೦ ॥
ಮಹೀಸಾಗರಪರ್ಯಂತಂ ವೃಕ್ಷರಾಜಿವಿರಾಜಿತೇ ।
ಜಾಲೀಗುಲ್ಮಲತಾಕೀರ್ಣೇ ಸ್ತಂಭತೀರ್ಥಸ್ಯ ಸನ್ನಿಧೌ ॥ ೭೧ ॥

---

೬೫–೬೬. ಓ ಪಾರ್ಥ! ಅಲ್ಪಮತಿಯಾದ ನಾನೆಲ್ಲಿ! ಪರಾತ್ಪರರಾದ ವಿಷ್ಣು ಮಹೇಶ್ವರರೆಲ್ಲಿ! ಪಾತಾಲಾದಿ ಲೋಕಗಳಲ್ಲಿಯೂ ಕಾಲವು ದೇವ ಮಾನಗಳಿಂದಲೇ ಗಣಿಸಲ್ಪಡುತ್ತದೆ. ಇಂತು ಯಥಾಬುದ್ಧಿಯಾಗಿ ಬ್ರಹ್ಮಾಂಡದ ಸ್ಥಿತಿಯನ್ನು ವಿವರಿಸುವುದಕ್ಕೆ ಯತ್ನಿಸಿರುವೆನು. ಪ್ರಕೃತದ ಕಥೆಯನ್ನು ಅನುಸರಿಸೋಣ.

೬೭. ನಾರದನು ಹೇಳುತ್ತಾನೆ:— ಎಲೈ ಪಾರ್ಥನೆ! ಪೂರ್ವದಲ್ಲಿ ಋಷಭನೆಂಬವನಿದ್ದನು. ಆತನ ಹೆಸರಿನಿಂದಲೇ ಲೋಕಗಳನ್ನು ಮೋಹಗೊಳಿಸುವ ಅನೇಕ ಪಾಷಂಡ ಕಲ್ಪನೆಗಳು ಕಲಿಯುಗದಲ್ಲಿ ಸಂಭವಿಸುವುವು.

೬೮. ಆತನ ಪುತ್ರನೇ ಭರತನು. ಭರತನ ಪುತ್ರನು ಶತಶೃಂಗ. ಶತಶೃಂಗನಿಗೆ ಎಂಟುಜನ ಪುತ್ರರೂ, ಒಬ್ಬ ಕನ್ಯೆಯೂ ಜನಿಸಿದರು.

೬೯–೭೦. ಇಂದ್ರದ್ವೀಪ, ಕಸೇರು, ತಾಮ್ರದ್ವೀಪ, ಗಭಸ್ತಿಮಂತ, ನಾಗ ಸೌಮ್ಯ, ಗಾಂಧರ್ವ, ವರುಣರೆಂಬುವರೇ ಪುತ್ರರು. ಕನ್ಯೆಯ ಹೆಸರು ಕುಮಾರಿಕೆ. ಆ ಕನ್ಯೆಯ ಮುಖವು ಕುರಿಯ ಮುಖವಾಗಿದ್ದಿತು. ಅದಕ್ಕೆ ಕಾರಣವಾಗಿರುವ ಆಶ್ಚರ್ಯಕಾರಕವಾದ ವೃತ್ತಾಂತವನ್ನು ತಿಳಿಸುವೆನು ಕೇಳು.

೭೧–೭೩. ಮಹೀಸಾಗರಕ್ಷೇತ್ರದವರೆಗೂ ವಿಸ್ತರಿಸಿರುವುದೂ, ಅನೇಕ ಉತ್ತಮ ವೃಕ್ಷಗಳಿಂದಲೂ, ಪೊದೆಗಳಿಂದಲೂ, ಗುಲ್ಮಲತೆಗಳಿಂದಲೂ ಕೂಡಿ

ಅಜಾಸಮಾಜತೋ ಮಧ್ಯಾತ್ಕಾಚಿದೇಕಾ ಚ ಬರ್ಕರೀ ।
ಭ್ರಾಂತಾ ಸತೀ ಸಮಾಯಾತಾ ಪ್ರದೇಶೇ ತತ್ರ ದುಶ್ಚರೇ ॥ ೭೨ ॥
ಇತಸ್ತತೋ ಭ್ರಮಂತೀ ಸಾ ಜಾಲಿಮಧ್ಯೇ ಸಮಂತತಃ ।
ನಿರ್ಗಂತುಂ ನೈವ ಶಕ್ನೋತಿ ಕ್ಷುತ್ಪಿಪಾಸಾರ್ದಿತಾ ಶುಭಾ ॥ ೭೩ ॥
ವಿಲಗ್ನಾ ಜಾಲಿಮಧ್ಯೇ ತು ತತಃ ಪಂಚತ್ವಮಾಗತಾ ।
ಕಾಲೇನ ಕಿಯತಾ ತಸ್ಯ ತ್ರುಟಿತ್ವಾ ಶಿರಸೋ ಹ್ಯಧಃ ॥ ೭೪ ॥
ಪಪಾತ ಶನಿದರ್ಶೇ ಚ ಮಹೀಸಾಗರಸಂಗಮೇ ।
ಸರ್ವತೀರ್ಥಮಯೇ ತತ್ರ ಸರ್ವಪಾಪ ಪ್ರಮೋಚನೇ ॥ ೭೫ ॥
ಶಿರಸ್ತು ತದವಸ್ಥಂ ಹಿ ಸಮುಗ್ರಂ ತತ್ರ ಸಂಸ್ಥಿತಂ ।
ಜಾಲಿಗುಲ್ಮಾವಲಗ್ನಂ ಚ ತಸ್ಯಾ ನೈವಾಪತಜ್ಜಲೇ ॥ ೭೬ ॥
ಶೇಷಕಾಯಪ್ರಪಾತೇನ ಮಹೀಸಾಗರಸಂಗಮೇ ।
ತತ್ತೀರ್ಥಸ್ಯ ಪ್ರಭಾವೇನ ಬರ್ಕರೀ ಸಾ ಕುರೂದ್ವಹ ॥ ೭೭ ॥
ಶತಶೃಂಗಸ್ಯ ವೈ ರಾಜ್ಞಃ ಸಿಂಹಲೇಷ್ವಭವತ್ಸುತಾ ।
ಮುಖಂ ಬರ್ಕರಿಕಾತುಲ್ಯಂ ವ್ಯಕ್ತಂ ತಸ್ಯಾ ವ್ಯಜಾಯತ ॥ ೭೮ ॥

---

ದುದೂ ಆದ ಸ್ತಂಭತೀರ್ಥದ ಸಮೀಪದಲ್ಲಿ ಅನೇಕ ಕುರಿಗಳ ಹಿಂಡಿನೊಡನೆ ಬಂದ ಒಂದು ಹೆಣ್ಣುಕುರಿಯು ತಪ್ಪಿಸಿಕೊಂಡು ಅಲ್ಲಲ್ಲಿ ತಿರುಗಾಡುತ್ತ ಅತ್ಯಂತ ದುಸ್ಸಾಧ್ಯವಾದ ಆ ಪ್ರದೇಶಕ್ಕೆ ಬಂದಿತು.

೭೩. ಇಂತು ತಿರುಗಾಡುತ್ತ ಒಂದು ಮುಳ್ಳಿನ ಪೊದೆಯೊಳಗೆ ಸಿಕ್ಕಿ ಹೊರಬರಲು ಸುತ್ತಲೂ ಮಾರ್ಗವನ್ನೇ ಕಾಣದೆ ಆ ಕುರಿಯು ಹಸಿವು ಬಾಯಾರಿಕೆಗಳಿಂದ ಅತ್ಯಂತವಾಗಿ ದುಃಖಗೊಂಡಿತು.

೭೪–೭೫. ಅಂತೆಯೇ ಆ ಪೊದೆಯ ಮಧ್ಯದಲ್ಲಿ ಸಿಕ್ಕಿಕೊಂಡು ಪ್ರಾಣ ವನ್ನು ತ್ಯಜಿಸಿತು. ಬಹುಕಾಲದ ಮೇಲೆ ಅಸ್ಥಿಪಂಜರದ ಕತ್ತು ಮುರಿದು ಒಂದಾನೊಂದು ದಿನ ಶನಿದರ್ಶದ ಮುಹೂರ್ತದಲ್ಲಿ ಮಹೀಸಾಗರಸಂಗಮದಲ್ಲಿ ಶರೀರವು ಬಿದ್ದಿತು. ಆ ತೀರ್ಥವು ಸಕಲ ತೀರ್ಥಮಯವೂ ಸಮಸ್ತ ಪಾಪ ಕ್ಷಯಕರವೂ ಆಗಿರುವುದು.

೭೬. ತಲೆಯು ಮಾತ್ರ ಪೂರ್ತಿಯಾಗಿ ಮುಳ್ಳುಬಳ್ಳಿಗಳಲ್ಲಿ ಸಿಕ್ಕಿಕೊಂಡು ದಾಗಿ ನೀರಿನಲ್ಲಿ ಬೀಳಲಿಲ್ಲವು.

೭೭–೭೮. ಎಲೈ ಅರ್ಜುನನೆ! ಮಹೀಸಾಗರ ಜಲದಲ್ಲಿ ಶರೀರವೆಲ್ಲವೂ ಬೀಳಲು ಆ ತೀರ್ಥದ ಮಹಿಮೆಯಿಂದ ಆ ಕುರಿಯು ಸಿಂಹಲದೇಶದಲ್ಲಿ ಶತಶೃಂಗನ ಮಗಳಾಗಿ ಹುಟ್ಟಿದಳು. ಆಕೆಯ ಮುಖವು ಮಾತ್ರ ಕುರಿಯ ಮುಖದಂತಿದ್ದಿತು.

**ದಿವ್ಯನಾರೀ ಶುಭಾಕಾರಾ ಶೇಷಕಾಯೇ ಬಭೌ ಶುಭಾ ।**
**ಪೂರ್ವಂ ತಸ್ಯಾಪ್ಯಪುತ್ರಸ್ಯ ರಾಜ್ಞಃ ಪುತ್ರಶತೋಪಮಾ ॥ ೭೯ ॥**
**ಪುತ್ರೀ ಜಾತಾ ಪ್ರಮೋದೇನ ಸ್ವಜನಾನಂದ ವರ್ಧಿನೀ ।**
**ತತಸ್ತಸ್ಯಾ ವಿಲೋಕ್ಯಾಥ ಮುಖಂ ಬರ್ಕರಿಕಾಕೃತಿ ॥ ೮೦ ॥**
**ವಿಸ್ಮಯಂ ಸಮನುಪ್ರಾಪ್ತಾಃ ಸರ್ವೇ ತೇ ರಾಜಪೂರುಷಾಃ ।**
**ವಿಷಾದಂ ಪರಮಾಪನ್ನೋ ರಾಜಾ ಸಾಂತಃಪುರಸ್ತದಾ ।**
**ಖಿನ್ನಾಃ ಪ್ರಕೃತಯಃ ಸರ್ವಾಸ್ತದ್ರೂಪವಿಲೋಕನಾತ್ ॥ ೮೧ ॥**
**ತತ್ಕಿಮಿತ್ಯೇತದಾಶ್ಚರ್ಯಮೂಚುಃ ಪೌರಾಃ ಸುವಿಸ್ಮಿತಾಃ ॥ ೮೨ ॥**
**ತತಃ ಸಾ ಯೌವನಂ ಪ್ರಾಪ್ತಾ ಸಾಕ್ಷಾದ್ದೇವಸುತೋಪಮಾ ।**
**ಸ್ವಮುಖಂ ದರ್ಪಣೇ ವೀಕ್ಷ್ಯ ಸ್ಮೃತಃ ಪೂರ್ವೋ ಭವಸ್ತಯಾ ॥ ೮೩ ॥**
**ತತ್ತೀರ್ಥಸ್ಯ ಪ್ರಭಾವೇಣ ಮಾತಾಪಿತ್ರೋರ್ನಿವೇದಿತಂ ।**
**ವಿಷಾದೋ ನೈವ ಕರ್ತವ್ಯೋ ಮದರ್ಥೇ ತಾತ ನಿಶ್ಚಿತಂ ॥ ೮೪ ॥**

---

೭೯. ಆಕೆಯ ಶರೀರವು ಮಾತ್ರ ಪರಮ ಸುಂದರವಾಗಿದ್ದು ಸುರೂಪದಿಂದೊಡಗೂಡಿ ಮೆರೆಯುತ್ತಿದ್ದಿತು. ಇಷ್ಟಾದರೂ ಮೊದಲು ಮಕ್ಕಳೇ ಇಲ್ಲದಿದ್ದ ಆ ಶತಶೃಂಗ ರಾಜನಿಗೆ ಆಕೆಯು ನೂರು ಗಂಡುಮಕ್ಕಳಾದಂತೆ ಸಂತೋಷವನ್ನುಂಟುಮಾಡುತ್ತಿದ್ದಳು.

೮೦–೮೧. ಆಕೆಯು ಆಟಪಾಟಗಳಿಂದ ಸ್ವಜನರಿಗೆ ಆನಂದವನ್ನುಂಟುಮಾಡುತ್ತಿದ್ದಳು. ಆಕೆಯನ್ನು ನೋಡಿದ ರಾಜಪರಿವಾರದವರೆಲ್ಲರೂ ಕುರಿಯ ಮುಖದಂತಿರುವ ಆಕೆಯ ಮುಖವನ್ನು ಕಂಡು ಅತ್ಯಂತ ವಿಸ್ಮಯವನ್ನು ಹೊಂದಿದರು. ಅಂತಃಪುರ ಸಹಿತನಾದ ರಾಜನೂ ಸಹ ಬಹಳ ವಿಷಾದವನ್ನು ಹೊಂದಿದನು. ಆಕೆಯ ಮುಖದ ರೂಪವನ್ನು ಕಂಡು ಸಕಲ ಪ್ರಜೆಗಳೂ ಬಹಳವಾಗಿ ಸಂಕಟಪಟ್ಟರು.

೮೨–೮೩. ಪಟ್ಟಣಿಗರೆಲ್ಲರೂ ಆಶ್ಚರ್ಯಭರಿತರಾಗಿ ಇದಕ್ಕೆ ಕಾರಣವೇನೆಂದು ಹೇಳತೊಡಗಿದರು. ಕಾಲಾನುಗುಣವಾಗಿ ಆಕೆಯು ಯೌವನವಂತೆಯಾಗಿ ಭೂಮಿಗಿಳಿದ ದೇವಕನ್ಯೆಯಂತೆಯೇ ಕಾಣುತ್ತಿದ್ದಳು. ಒಂದಾನೊಂದು ದಿನ ಆಕೆಯು ಕನ್ನಡಿಯಲ್ಲಿ ತನ್ನ ಮುಖವನ್ನು ನೋಡಿಕೊಳ್ಳುತ್ತಿರಲು ತನ್ನ ಪೂರ್ವಜನ್ಮದ ಚರಿತ್ರೆಯೆಲ್ಲವೂ ಆಕೆಯ ಸ್ಮರಣೆಗೆ ಬರತೊಡಗಿತು.

೮೪. ಇಂತು ಆ ತೀರ್ಥದ ಪ್ರಭಾವದಿಂದ ಪೂರ್ವಜನ್ಮದ ಸ್ಮರಣೆಯನ್ನು ಹೊಂದಿದ ಆ ಕನ್ಯೆಯು ತಾಯಿತಂದೆಗಳನ್ನು ಕುರಿತು ಇಂತೆಂದಳು. “ಎಲೈ ತಂದೆಯೆ! ನೀನು ನಿಜವಾಗಿಯೂ ನನ್ನ ವಿಷಯವಾಗಿ ಯೋಚನೆಯನ್ನು ಮಾಡಬೇಡ.

ಮಾ ಶೋಕಂ ಕುರು ಮೇ ಮಾತಃ ಪೂರ್ವಜನ್ಮಾರ್ಜಿತಂ ಫಲಂ ।
ತತಃ ಪೂರ್ವಂ ಸ್ವವೃತ್ತಾಂತಮುಕ್ತ್ವಾ ಸಾ ಚ ಕುಮಾರಿಕಾ ॥ ೮೫ ॥
ಪೂರ್ವಜನ್ಮೋದ್ಭವಃ ಕಾಯಸ್ತಸ್ಯಾ ಯತ್ರಾಪತತ್ತಥಾ ।
ಗಮನಾಯ ತಮುದ್ದೇಶಂ ವಿಜ್ಞಾಪ್ಯ ಪಿತರಂ ತಯಾ ॥ ೮೬ ॥
ಅಹಂ ತಾತ ಗಮಿಷ್ಯಾಮಿ ಮಹೀಸಾಗರಸಂಗಮಂ ।
ಭವಾಮಿ ತತ್ರ ಸಂಪ್ರಾಪ್ತಾ ಯಥಾ ಕುರು ತಥಾ ನೃಪ । ॥ ೮೭ ॥
ತತಃ ಪಿತ್ರಾ ಪ್ರತಿಜ್ಞಾತಂ ಶತಶೃಂಗೇಣ ತತ್ತಥಾ ।
ತಸ್ಯಾಃ ಸಂವಾಹನಂ ಚಕ್ರೇ ರಾಜಪೋತೈಃ ಸರತ್ನಕೈಃ ॥ ೮೮ ॥
ಸ್ತಂಭತೀರ್ಥಂ ತತಃ ಸಾಪಿ ಪ್ರಾಪ್ಯ ಪೋತಾರ್ಥಸಂಯುತಾ ।
ಭೂರಿದಾನಂ ತತಶ್ಚಕ್ರೇ ದಾನಂ ಸರ್ವಸ್ವಲಕ್ಷಣಂ ॥ ೮೯ ॥
ಜಾಲಿಗುಲ್ಮಾಂತರೇಽನ್ವಿಷ್ಯ ತತೋ ದೃಷ್ಟಂ ನಿಜಂ ಶಿರಃ ।
ಅಸ್ಥಿಚರ್ಮಾವಶೇಷಂ ಚ ತದಾದಾಯ ಪ್ರಯತ್ನತಃ ॥ ೯೦ ॥
ದಗ್ಧ್ವಾ ಸಂಗಮಸಾನ್ನಿಧ್ಯೇ ಕ್ಷಿಪ್ತ್ವಾಸ್ಥೀನಿ ಸಂಗಮೇ ॥ ೯೧ ॥

---

೮೫–೮೬. ಎಲೌ ತಾಯೆ! ನೀನೂ ಶೋಕವನ್ನು ಮಾಡಬೇಡ. ಇದು ನನ್ನ ಪೂರ್ವಜನ್ಮದಲ್ಲಿ ಮಾಡಿದ ಕರ್ಮದ ಫಲವಾಗಿರುವುದು.'' ಬಳಿಕ ಆ ಕುಮಾರಿಯು ತನ್ನ ಪೂರ್ವಜನ್ಮದ ವೃತ್ತಾಂತವನ್ನು ಅವರಿಗೆ ತಿಳಿಸಿ ತನ್ನ ಹಿಂದಿನ ಕುರಿಯ ಶರೀರವು ಎಲ್ಲಿ ವಿಯೋಗಗೊಳಿಸಲ್ಪಟ್ಟಿತೋ, ಆ ಪ್ರದೇಶಕ್ಕೆ ತಾನು ಹೊರಡಲಿಚ್ಛಿಸಿರುವುದಾಗಿ ತಾಯಿತಂದೆಗಳಿಗೆ ವಿಜ್ಞಾಪಿಸಿಕೊಂಡಳು.

೮೭. "ಎಲೈ ತಂದೆಯೆ! ನಾನು ಮಹೀಸಾಗರಸಂಗಮಕ್ಷೇತ್ರವನ್ನು ಕುರಿತು ತೆರಳುವೆನು. ಅಲ್ಲಿಗೆ ಹೇಗೆ ಸೇರಬೇಕೆಂಬ ಉಪಾಯವನ್ನು ನೀನೇ ಯೋಚಿಸುವವನಾಗು.''

೮೮. ಆಗ ತಂದೆಯಾದ ಶತಶೃಂಗರಾಜನು ಅಂತೆಯೇ ಮಾಡುವೆನೆಂದು ಪ್ರತಿಜ್ಞೆಯನ್ನು ಮಾಡಿ ಅನೇಕ ರತ್ನರಾಶಿಗಳೊಡನೆ ಆಕೆಯನ್ನು ನಾವೆಗಳಲ್ಲಿ ಕಳಿಸಿಕೊಟ್ಟನು.

೮೯. ಇಂತು ಕುಮಾರಿಕೆಯು ಸಕಲೈಶ್ವರ್ಯಸಹಿತಳಾಗಿ ಸ್ತಂಭತೀರ್ಥವನ್ನು ಸೇರಿ ಅಲ್ಲಿ ಸರ್ವಸ್ವವನ್ನೂ ದಾನಮಾಡುವ ಲಕ್ಷಣಯುಕ್ತವಾದ ಭೂರಿದಾನವೆಂಬ ಕರ್ಮವನ್ನು ಮಾಡಿದಳು.

೯೦–೯೧ ಬಳಿಕ ಜಾಲಿಬಳ್ಳಿಗಳಲ್ಲಿ ಹುಡುಕುತ್ತ ತನ್ನ ಪೂರ್ವಶರೀರದ ಕುರಿದಲೆಯು ಕೇವಲ ಅಸ್ಥಿಚರ್ಮಾವಶಿಷ್ಟವಾಗಿರುವದನ್ನು ಕಂಡಳು. ಅದನ್ನು ಬಹಳ ಕಷ್ಟದಿಂದ ಹೊರಕ್ಕೆ ತಂದು ಆ ಸಂಗಮಕ್ಷೇತ್ರದಲ್ಲಿ ಯಥಾವಿಧಿಯಾಗಿ ದಹನಮಾಡಿ ಅಸ್ಥಿಯನ್ನು ತೀರ್ಥದಲ್ಲಿ ಹಾಕಿದಳು.

ತತಸ್ತೀರ್ಥಪ್ರಭಾವೇಣ ಮುಖಂ ಜಾತಂ ಶಶಿಪ್ರಭಂ ।
ನ ತಾದೃಗ್ದೇವಕನ್ಯಾನಾಂ ನ ತಾದೃಙ್ನಾಗಯೋಷಿತಾಂ ।
ನ ತಾದೃಙ್ಮರ್ತ್ಯನಾರೀಣಾಂ ತಸ್ಯಾ ಯಾದೃಙ್ಮುಖಂ ಮುಖಂ ॥ ೯೨ ॥
ಸುರಾಸುರನರಾಃ ಸರ್ವೇ ತಸ್ಯಾ ರೂಪೇಣ ಮೋಹಿತಾಃ ।
ಬಹುಧಾ ಪ್ರಾರ್ಥಯಂತ್ಯೇನಾಂ ನ ಸಾ ವರಮಭೀಪ್ಸತಿ ॥ ೯೩ ॥
ಕಷ್ಟಂ ತಯಾ ಮುದಾ ತತ್ರ ಪ್ರಾರಬ್ಧಂ ದುಷ್ಕರಂ ತಪಃ ।
ತತಃ ಸಂವತ್ಸರೇ ಪೂರ್ಣೇ ದೇವದೇವೋ ಮಹೇಶ್ವರಃ ॥ ೯೪ ॥
ಪ್ರತ್ಯಕ್ಷತಾಂ ಗತಸ್ತಸ್ಯೈ ವರದೋಽಸ್ಮೀತಿ ಚಾಬ್ರವೀತ್ ।
ತತಸ್ತಂ ಪೂಜಯಿತ್ವಾ ಚ ಕುಮಾರೀ ವಾಕ್ಯಮಬ್ರವೀತ್ ॥ ೯೫ ॥
ಯದಿ ತುಷ್ಟೋಽಸಿ ದೇವೇಶ ಯದಿ ದೇಯೋ ವರೋ ಮಮ ।
ಸಾನ್ನಿಧ್ಯಂ ಕ್ರಿಯತಾಮತ್ರ ಸರ್ವಕಾಲಂ ಹಿ ಶಂಕರ ।
ಏವಮಸ್ತ್ವಿತಿ ಶರ್ವೇಣ ಪ್ರೋಕ್ತೇ ಹೃಷ್ಟಾ ಕುಮಾರಿಕಾ ॥ ೯೬ ॥
ಯತ್ರ ದಗ್ಧಂ ಶಿರಸ್ತಸ್ಯಾಃ ಬರ್ಕರ್ಯಾಃ ಕುರುಸತ್ತಮ ।
ಬರ್ಕರೇಶಃ ಶಿವಸ್ತತ್ರ ತಯಾ ಸಂಸ್ಥಾಪಿತಸ್ತದಾ ॥ ೯೭ ॥

---

೯೨–೯೩. ಆಗಲಾ ತೀರ್ಥದ ಮಾಹಾತ್ಮ್ಯೆಯಿಂದ ಆಕೆಯ ಮುಖವು ಸರ್ವಲಕ್ಷಣ ಯುಕ್ತವಾಗಿ ಚಂದ್ರಬಿಂಬದಂತೆ ಪ್ರಕಾಶಿಸತೊಡಗಿತು. ದೇವಕನ್ಯೆಯರಲ್ಲಾಗಲಿ, ನಾಗಕನ್ಯೆಯರಲ್ಲಾಗಲಿ, ಮನುಷ್ಯ ಸ್ತ್ರೀಯರಲ್ಲಾಗಲಿ ಆಕೆಯ ಮುಖಕ್ಕೆ ಸಮಾನವಾದ ಮುಖವು ಕಾಣಲಿಲ್ಲ. ಇದನ್ನು ಕಂಡು ಸಕಲ ದೇವತೆಗಳೂ, ದಾನವರೂ, ಮನುಷ್ಯರೂ ಆಕೆಯ ಸೌಂದರ್ಯದಿಂದ ಮೋಹಗೊಂಡು ಬಹು ವಿಧವಾಗಿ ಆಕೆಯನ್ನು ಪ್ರಾರ್ಥಿಸಿದರೂ ಆಕೆಯು ಸುಮುಖಳಾಗಲಿಲ್ಲ.

೯೪. ಆಕೆಯು ಸಂತೋಷದಿಂದ ಆ ಕ್ಷೇತ್ರದಲ್ಲಿಯೇ ಅತ್ಯಂತ ದುಸ್ಸಾಧ್ಯವಾದ ತಪಸ್ಸನ್ನು ಮಾಡಲು ಪ್ರಾರಂಭಿಸಿದಳು. ಇಂತು ಒಂದು ಸಂವತ್ಸರವು ಪೂರ್ಣವಾಗಲು ದೇವೋತ್ತಮನಾದ ಮಹೇಶ್ವರನು ಆಕೆಗೆ ಪ್ರತ್ಯಕ್ಷವಾಗಿ ನಿನ್ನ ತಪಸ್ಸಿಗೆ ಪ್ರಸನ್ನನಾಗಿರುವೆನೆಂದು ಹೇಳಿದನು.

೯೫–೯೭. ಆಗ ಕುಮಾರಿಕೆಯು ಆತನನ್ನು ಪೂಜಿಸಿ ಆತನನ್ನು ಕುರಿತು ಇಂತೆಂದಳು. "ಎಲೈ ದೇವೇಶ್ವರನೇ! ನೀನು ನಿಜವಾಗಿಯೂ ನನ್ನಲ್ಲಿ ಸಂತುಷ್ಟನಾಗಿ ವರವನ್ನು ಕೊಡುವುದಾಗಿದ್ದರೆ, ಇಲ್ಲಿ ಸರ್ವಕಾಲದಲ್ಲಿಯೂ ನಿನ್ನ ಸಾನ್ನಿಧ್ಯವು ಇರುವುದಾಗಲಿ." ಅಂತೆಯೇ ಆಗಲೆಂದು ಶಿವನು ಹೇಳಲು ಹರ್ಷಗೊಂಡ ಕುಮಾರಿಕೆಯು ಆ ಕುರಿಯ ತಲೆಯು ದಗ್ಧವಾಗಿದ್ದ ಸ್ಥಳದಲ್ಲಿ ಉತ್ತಮವಾದ ಬರ್ಕರೇಶನೆಂಬ ಹೆಸರಿನಿಂದೊಪ್ಪುವ ಲಿಂಗವನ್ನು ಸ್ಥಾಪಿಸಿದಳು.

ಮನ್ಮುಖಾನ್ಮಹದಾಶ್ಚರ್ಯಂ ಶ್ರುತ್ವೇದಂ ಚ ತಲಾತಲಾತ್ ।
ಸ್ವಸ್ತಿಕೋನಾಮ ನಾಗೇಂದ್ರಃ ಕುಮಾರೀಂ ದ್ರಷ್ಟುಮಾಗತಃ ॥ ೯೮ ॥
ಶಿರಸಾ ಗಚ್ಛತಾ ತೇನ ಯತ್ರೋತ್ಕ್ಷಿಪ್ತಾ ಚ ಭೂರಭೂತ್ ।
ಈಶಾನೇ ಬರ್ಕರೇಶಸ್ಯ ಕೂಪೋಽಭೂತ್ಸ್ವಸ್ತಿಕಾಭಿಧಃ ॥ ೯೯ ॥
ಪೂರಿತೋ ಗಂಗಯಾ ಪಾರ್ಥ ಸರ್ವತೀರ್ಥಫಲಪ್ರದಃ ॥ ೧೦೦ ॥
ದೃಷ್ಟ್ವಾ ಚ ಸ್ಥಾಪಿತಂ ಲಿಂಗಂ ಶಿವಸ್ತುಷ್ಟೋ ವರಂ ದದೌ ।
ಯೇಷಾಂ ಮೃತಶರೀರಾಣಾಮತ್ರ ದಾಹಃ ಪ್ರಜಾಯತೇ ।
ತಿಷ್ಠಂತೇಽಬ್ಧೌ ತಥಾಸ್ಥೀ ತೇಷಾಂ ಸ್ಯಾದಕ್ಷಯಾ ಗತಿಃ ॥ ೧೦೧ ॥
ತೇ ಸ್ವರ್ಗೇ ಸುಚಿರಂ ಕಾಲಂ ವಸಿತ್ವಾತ್ರ ಸಮಾಗತಾಃ ।
ರಾಜಾನಃ ಸರ್ವಸಂಪೂರ್ಣಾಃ ಸಪ್ರತಾಪಾ ಭವಂತಿ ತೇ ॥ ೧೦೨ ॥
ಬರ್ಕರೇಶಂ ಚ ಯೋ ಭಕ್ತ್ಯಾ ಸಂಪೂಜಯತಿ ಮಾನವಃ ।
ಸ್ನಾತ್ವಾರ್ಣವಮಹೀತೋಯೇ ತಸ್ಯ ಸ್ಯಾನ್ಮನಸೇಪ್ಸಿತಂ ॥ ೧೦೩ ॥

---

೯೮. ಆ ಬಳಿಕ ಈ ಮಹಾಶ್ಚರ್ಯವನ್ನು ನನ್ನ ಮುಖದಿಂದ ಕೇಳಿ ತಲಾತಲ ಲೋಕದಲ್ಲಿದ್ದ ಸ್ವಸ್ತಿಕನೆಂಬ ನಾಗೇಂದ್ರನು ಕುಮಾರಿಕೆಯನ್ನು ನೋಡಲು ಅಲ್ಲಿಗೆ ಬಂದನು.

೯೯. ಇಂತು ಮೇಲಕ್ಕೆ ಬರುತ್ತಿರುವ ಆತನ ತಲೆಯಿಂದ ಚಿಮ್ಮ ಮಾಡಲ್ಪಟ್ಟ ಬಿಲವು ಬರ್ಕರೇಶ್ವರನ ಈಶಾನ್ಯಭಾಗದಲ್ಲಿ ಸ್ವಸ್ತಿಕಕೂಪವೆಂಬ ಹೆಸರಿನಿಂದ ಕಂಗೊಳಿಸುತ್ತಿರುವುದು.

೧೦೦–೧೦೧. ಎಲೈ ಪಾರ್ಥನೆ! ಈ ತೀರ್ಥವು ಪಾತಾಲಗಂಗೆಯಿಂದ ತುಂಬಿರುವುದಾಗಿ ಸ್ನಾನಮಾಡುವವರ ಸಕಲ ಇಷ್ಟಾರ್ಥಗಳನ್ನೂ ನೆರವೇರಿಸುವುದು. ಇಂತು ಸ್ಥಾಪಿತವಾದ ಲಿಂಗವನ್ನು ಕಂಡು ಸಂತೋಷಗೊಂಡ ಶಿವನು ಮತ್ತೆ ವರಗಳನ್ನು ಕೊಟ್ಟನೆಂತೆನೆ:— "ಯಾರ ಮೃತಕಳೇಬರಕ್ಕೆ ಇಲ್ಲಿ ದಹನಸಂಸ್ಕಾರವುಂಟಾಗುವುದೊ, ಅಸ್ಥಿಗಳು ಸಮುದ್ರದಲ್ಲಿ ಹಾಕಲ್ಪಡುವುವೊ, ಅವರಿಗೆ ಅಕ್ಷಯವಾದ ಮೋಕ್ಷವು ಲಭಿಸುವುದು.

೧೦೨. ಅವರು ಬಹಳಕಾಲ ಸ್ವರ್ಗದಲ್ಲಿ ವಾಸಮಾಡಿ ಭೂಲೋಕಕ್ಕೆ ಬಂದು ಸರ್ವೈಶ್ವರ್ಯಸಮೃದ್ಧರಾಗಿಯೂ, ಪ್ರತಾಪಶಾಲಿಗಳಾಗಿಯೂ ಜನಿಸಿ ಮಹಾರಾಜರಾಗುವರು.

೧೦೩. ಯಾವ ಮನುಷ್ಯನು ಭೂಸಾಗರದಲ್ಲಿ ಸ್ನಾನಮಾಡಿ ಭಕ್ತಿಯಿಂದ ಬರ್ಕರೇಶನನ್ನು ಪೂಜಿಸುವನೊ, ಅವನಿಗೆ ಸಕಲ ಮನೋರಥಗಳೂ ಸಿದ್ಧಿಸುವುದರಲ್ಲಿ ಸಂಶಯವಿಲ್ಲವು.

ಕಾರ್ತಿಕೇ ಚ ಚತುರ್ದಶ್ಯಾಂ ಕೃಷ್ಣಾಯಾಂ ಶ್ರದ್ಧಯಾನ್ವಿತಃ ॥ ೧೦೪ ॥
ಕೂಪೇ ಸ್ನಾನಂ ನರಃ ಕೃತ್ವಾ ಸಂತರ್ಪ್ಯ ಚ ಪಿತೄನ್ನಿಜಾನ್ ।
ಪೂಜಯೇದ್ಬರ್ಕರೇಶಂ ಯಃ ಸರ್ವಪಾಪೈಃ ಸ ಮುಚ್ಯತೇ ॥ ೧೦೫ ॥
ಏವಂ ಲಬ್ಧ್ವಾ ವರಾನ್ಸರ್ವಾನ್ಸಾ ಪುನಃ ಸಿಂಹಲಂ ಯಯೌ ।
ಶತಶೃಂಗಾಯ ಪಿತ್ರೇ ಚ ವೃತ್ತಾಂತ ಸ್ವಂ ನ್ಯವೇದಯತ್ ॥ ೧೦೬ ॥
ತಚ್ಛ್ರುತ್ವಾ ವಿಸ್ಮಿತೋ ರಾಜಾ ಲೋಕಾಃ ಸರ್ವೇ ಚ ಫಾಲ್ಗುನ ।
ಪ್ರಶಶಂಸುರ್ಮಹೀತೀರ್ಥಮಾಜಗ್ಮುಶ್ಚ ಕೃತಾದರಾಃ ॥ ೧೦೭ ॥
ಸ್ನಾತ್ವಾ ದತ್ವಾ ಚ ದಾನಾನಿ ವಿವಿಧಾನಿ ಚ ತೇ ತತಃ ।
ಸಿಂಹಲಂ ಚ ಯಯುರ್ಭೂಯಸ್ತೀರ್ಥಮಾಹಾತ್ಮ್ಯಹರ್ಷಿತಾಃ ॥೧೦೮॥
ಅನಿಚ್ಛಂತ್ಯಾಂ ಕುಮಾರ್ಯಾಂ ಚ ವರಂ ದ್ರವ್ಯಂ ಚ ಪಾರ್ಥಿವಃ ।
ತಥಾನ್ಯದಪಿ ಪ್ರೀತ್ಯಾಸೌ ಯದ್ದದೌ ನೃಪತಿಃ ಶೃಣು ॥ ೧೦೯ ॥
ಇದಂ ಭಾರತಖಂಡಂ ಚ ನವಧೈವ ವಿಭಜ್ಯ ಸಃ ।
ದದಾವಷ್ಟೌ ಸ್ವಪುತ್ರಾಣಾಂ ಕುಮಾರ್ಯೈ ನವಮಂ ತಥಾ ॥ ೧೧೦ ॥

---

೧೦೪–೧೦೫. ಯಾವನು ಕಾರ್ತಿಕಮಾಸದ ಕೃಷ್ಣ ಚತುರ್ದಶಿಯಲ್ಲಿ ಶ್ರದ್ಧಾ ಭಕ್ತಿಗಳೊಡನೆ ಸ್ವಸ್ತಿಕಕೂಪದಲ್ಲಿ ಮಿಂದು ಪಿತೃದೇವತೆಗಳಿಗೆ ತರ್ಪಣ ಗಳನ್ನಿತ್ತು ಬರ್ಕರೇಶನ ಪೂಜೆಯನ್ನು ಮಾಡುವನೋ ಅವನು ಸರ್ವ ಪಾಪ ರಹಿತನಾಗುವನು.''

೧೦೬. ಇಂತು ಮಹೇಶ್ವರನಿಂದ ಸಕಲ ವರಗಳನ್ನು ಹೊಂದಿ ಕುಮಾರಿ ಕೆಯು ಮತ್ತೆ ಸಿಂಹಳವನ್ನು ಸೇರಿ ತಂದೆಯಾದ ಶತಶೃಂಗನಿಗೆ ಅಲ್ಲಿ ನಡೆದ ಸಕಲ ವೃತ್ತಾಂತವನ್ನೂ ತಿಳಿಸಿದಳು.

೧೦೭. ಇದನ್ನು ಕೇಳಿ ರಾಜನು ವಿಸ್ಮಯಗೊಂಡನು. ಪ್ರಜೆಗಳೆಲ್ಲರೂ ಮಹೀಸಾಗರಸಂಗಮ ತೀರ್ಥವನ್ನು ಕೊಂಡಾಡುತ್ತ ಅಲ್ಲಿಗೆ ಬಂದರು.

೧೦೮. ಅವರೆಲ್ಲರೂ ಆ ಕ್ಷೇತ್ರದಲ್ಲಿ ಸ್ನಾನಮಾಡಿ ಅನೇಕ ದಾನಗಳನ್ನು ಕೊಟ್ಟು ಆ ಕ್ಷೇತ್ರದ ಮಾಹಾತ್ಮ್ಯೆಯಿಂದ ಅತ್ಯಂತ ಹರ್ಷಿತರಾಗಿ ತಮ್ಮ ದೇಶಕ್ಕೆ ಹಿಂದಿರುಗಿದರು.

೧೦೯. ಬಳಿಕ ಆ ಕುಮಾರಿಯು ಇಷ್ಟಪಡದಿದ್ದರೂ ಆಕೆಗೆ ಮಹಾರಾಜನು ಬಹಳವಾದ ದ್ರವ್ಯವನ್ನೂ, ಇತರ ವಿಶೇಷ ಬಹುಮತಿಗಳನ್ನೂ ಕೊಟ್ಟ ವಿವರ ವನ್ನು ತಿಳಿಸುವೆನು ಕೇಳು.

೧೧೦. ಈ ಭಾರತ ಖಂಡವನ್ನು ಒಂಭತ್ತು ಭಾಗವಾಗಿ ವಿಂಗಡಿಸಿ ತನ್ನ ಎಂಟು ಮಕ್ಕಳಿಗೆ ಎಂಟು ಭಾಗಗಳನ್ನೂ ಮಗಳಿಗೆ ಒಂದು ಭಾಗವನ್ನೂ ಕೊಟ್ಟನು.

ತೇಷಾಂ ವಿಭೇದಾನ್ವಕ್ಷ್ಯಾಮಿ ಪರ್ವತೈರುಪಶೋಭಿತಾನ್ ।
ಪುತ್ರನಾಮಾನಿ ವರ್ಷಾಣಿ ಪರ್ವತಾಂಶ್ಚ ಶೃಣುಷ್ವ ಮೇ ॥ ೧೧೧ ॥
ಮಹೇಂದ್ರೋ ಮಲಯಃ ಸಹ್ಯಃ ಶಕ್ತಿಮಾನೃಕ್ಷಪರ್ವತಃ ।
ವಿಂಧ್ಯಶ್ಚ ಪಾರಿಯಾತ್ರಶ್ಚ ಸಪ್ತಾತ್ರ ಕುಲಪರ್ವತಾಃ ॥ ೧೧೨ ॥
ಮಹೇಂದ್ರಪರತಶ್ಚೈವ ಇಂದ್ರದ್ವೀಪೋ ನಿಗದ್ಯತೇ ।
ಪಾರಿಯಾತ್ರಸ್ಯ ಚೈವಾರ್ವಾಕ್ಖಂಡಂ ಕೌಮಾರಿಕಂ ಸ್ಮೃತಂ ॥ ೧೧೩ ॥
ಸಹಸ್ರಮೇಕಮೇಕಂ ಚ ಸರ್ವಖಂಡಾನ್ಯಮೂನಿಚ ।
ನದೀನಾಂ ಸಂಭವಂ ಚಾಪಿ ಸಂಕ್ಷೇಪಾಚ್ಛೃಣು ಫಾಲ್ಗುನ ॥ ೧೧೪ ॥
ವೇದಸ್ಮೃತಿಮುಖಾ ನದ್ಯಃ ಪಾರಿಯಾತ್ರೋದ್ಭವಾ ಮತಾಃ ।
ನರ್ಮದಾಸರಸಾದ್ಯಾಶ್ಚ ನದ್ಯೋ ವಿಂಧ್ಯಾದ್ವಿನಿರ್ಗತಾಃ ॥ ೧೧೫ ॥
ಶತದ್ರೂಚಂದ್ರಭಾಗಾದ್ಯಾ ಋಕ್ಷಪರ್ವತಸಂಭವಾಃ ।
ಋಷಿಕುಲ್ಯಾ ಕುಮಾರ್ಯಾದ್ಯಾಃ ಶಕ್ತಿಮತ್ಪಾದಸಂಭವಾಃ ॥ ೧೧೬ ॥
ತಾಪೀ ಪಯೋಷ್ಣೀ ನಿರ್ವಿಂಧ್ಯಾ ಕಾವೇರೀ ಚ ಮಹೀನದೀ ।
ಕೃಷ್ಣಾ ವೇಣೀ ಭೀಮರಥೀ ಸಹ್ಯಪಾದೋದ್ಭವಾಃ ಸ್ಮೃತಾಃ ॥ ೧೧೭ ॥

---

೧೧೧. ನಾನಾ ಪರ್ವತಗಳಿಂದ ಮೆರೆಯುತ್ತಿರುವ ಆ ದೇಶಭೇದಗಳನ್ನೂ ಮಕ್ಕಳ ಹೆಸರುಗಳನ್ನೂ, ವರ್ಷಗಳನ್ನೂ, ಖಂಡಗಳನ್ನೂ, ಪರ್ವತಗಳನ್ನೂ ಕೇಳುವವನಾಗು.

೧೧೨–೧೧೩. ಮಹೇಂದ್ರ, ಮಲಯ, ಸಹ್ಯ, ಶಕ್ತಿಮಂತ, ಋಕ್ಷ, ವಿಂಧ್ಯ, ಪಾರಿಯಾತ್ರ ಎಂಬುವೇ ಸಪ್ತ ಕುಲಪರ್ವತಗಳೆನಿಸುವುವು. ಮಹೇಂದ್ರ ಪರ್ವತದ ಮೇಲ್ಗಡೆಗೆ ಇಂದ್ರದ್ವೀಪವಿರುವುದೆಂದು ಹೇಳುವರು. ಅಂತೆಯೇ ಪಾರಿಯಾತ್ರ ಪರ್ವತದ ಕೆಳಗೆ ಕೌಮಾರಿಕಾಖಂಡವಿರುವುದೆಂದು ಕೇಳಿರುವೆವು.

೧೧೪–೧೧೫. ಈ ಅಂತರದ ಖಂಡಗಳಲ್ಲಿ ಪ್ರತಿಯೊಂದೂ ಒಂದೊಂದು ಸಾವಿರ ಯೋಜನಗಳ ವಿಸ್ತಾರವುಳ್ಳದಾಗಿರುವುದೆಂದು ಹೇಳುವರು. ಆ ದೇಶ ಗಳಲ್ಲಿರುವ ನದಿಗಳನ್ನು ಸಂಕ್ಷೇಪವಾಗಿ ಕೇಳುವವನಾಗು. ಪಾರಿಯಾತ್ರ ಪರ್ವತ ದಲ್ಲಿ ವೇದಸ್ಮೃತಿಯೇ ಮೊದಲಾದ ನದಿಗಳು ಉದ್ಭವಿಸುವುವೆಂದು ಹೇಳುವರು. ವಿಂಧ್ಯಪರ್ವತದಿಂದ ನರ್ಮದೆ, ಸರಸೆ ಮುಂತಾದ ನದಿಗಳು ಹುಟ್ಟುವುವು.

೧೧೬–೧೧೭. ಶತದ್ರೂ, ಚಂದ್ರಭಾಗಾ ಮುಂತಾದ ನದಿಗಳು ಋಕ್ಷ ಪರ್ವತ ಸಂಭೂತಗಳು. ಋಷಿಕುಲ್ಯಾ, ಕುಮಾರೀ ಮುಂತಾದುವು ಶಕ್ತಿಮತ್ಪ ರ್ವತದಲ್ಲಿ ಹುಟ್ಟುವುವು. ತಪತೀ, ಪಯೋಷ್ಣೀ, ನಿರ್ವಿಂಧ್ಯಾ, ಕಾವೇರಿ, ಮಹೀ, ಕೃಷ್ಣಾ, ವೇಣೀ, ಭೀಮರಥೀ ಎಂಬ ನದಿಗಳು ಸಹ್ಯಪರ್ವತದ ಪಾದಪ್ರದೇಶ ದಲ್ಲಿ ಹುಟ್ಟುವುವು.

ಕೃತಮಾಲಾ ತಾಮ್ರಪರ್ಣೀಪ್ರಮುಖಾ ಮಲಯೋದ್ಭವಾಃ ।
ತ್ರಿಸಾಮಋಷ್ಯಕುಲ್ಯಾದ್ಯಾ ಮಹೇಂದ್ರಪ್ರಭವಾಃ ಸ್ಮೃತಾಃ ॥ ೧೧೮ ॥
ಏವಂ ವಿಭಜ್ಯ ಪುತ್ರೇಭ್ಯಃ ಕುಮಾರ್ಯೈ ಚ ಮಹೀಪತಿಃ ।
ಶತಶೃಂಗೋ ಗಿರಿಂ ಗತ್ವಾ ಉದೀಚ್ಯಾಂ ತಪ್ತವಾಂಸ್ತಪಃ ॥ ೧೧೯ ॥
ತತ್ರ ತಪ್ತ್ವಾ ತಪೋ ಘೋರಂ ಬ್ರಹ್ಮಲೋಕಂ ಜಗಾಮ ಸಃ ।
ಶತಶೃಂಗೋ ನೃಪಶ್ರೇಷ್ಠಃ ಶತಶೃಂಗೇ ನಗೋತ್ತಮೇ ॥ ೧೨೦ ॥
ಯತ್ರಜಾತೋಽಸಿ ಕೌಂತೇಯ ಪಾಂಡೋಸ್ತ್ವಂ ಸೋದರ್ಯೈಃ ಸಹ ।
ಕುಮಾರೀ ಚ ಮಹಾಭಾಗಾ ಸ್ತಂಭತೀರ್ಥಸ್ಥಿತಾ ಸತೀ ।
ಖಂಡೋದ್ಭವೇನ ದ್ರವ್ಯೇಣ ತೇಪೇ ದಾನಾನಿ ಯಚ್ಛತೀ ॥ ೧೨೧ ॥
ತತಃ ಕೇನಾಪಿ ಕಾಲೇನ ಭ್ರಾತೃಭ್ಯೋಽಷ್ಟಭ್ಯ ಏವ ಚ ।
ಮಹಾವೀರ್ಯಬಲೋತ್ಸಾಹಾ ಜಾತಾ ನವ ನವಾತ್ಮಜಾಃ ॥ ೧೨೨ ॥
ತೇ ಸಮೇತ್ಯ ಸಮಾಗಮ್ಯ ಕುಮಾರೀಂ ಪ್ರೋಚಿರೇ ತತಃ ।
ಕುಲದೇವೀ ತ್ವಮಸ್ಮಾಕಂ ಪ್ರಸಾದಂ ಕುರು ನಃ ಶುಭೇ ॥ ೧೨೩ ॥

---

೧೧೮. ಕೃತಮಾಲಾ, ತಾಮ್ರಪರ್ಣೀ, ಮುಂತಾದುವು ಮಲಯಜಗಳಾಗಿರುವುವು. ತ್ರಿಸಾಮ, ಋಷ್ಯಕುಲ್ಯ ಮುಂತಾದ ನದಿಗಳು ಮಹೇಂದ್ರ ಪರ್ವತದಲ್ಲಿ ಹುಟ್ಟಿದುವೆಂದು ಹೇಳುವರು.

೧೧೯. ಇಂತು ಶತಶೃಂಗ ಮಹಾರಾಜನು ತನ್ನ ಮಕ್ಕಳಿಗೂ, ಮಗಳಿಗೂ ರಾಜ್ಯವನ್ನು ವಿಭಜನೆಮಾಡಿ ಉತ್ತರ ಪರ್ವತಕ್ಕೆ ಹೋಗಿ ತಪಸ್ಸನ್ನು ಮಾಡಲಾರಂಭಿಸಿದನು.

೧೨೦. ಆತನು ತಪಸ್ಸನ್ನು ಮಾಡಿದ್ದರಿಂದ ಆ ಪರ್ವತಕ್ಕೂ ಶತಶೃಂಗ ಪರ್ವತವೆಂದೇ ಹೆಸರಾಯಿತು. ಅಲ್ಲಿಯೇ ಘೋರವಾದ ತಪಸ್ಸನ್ನು ಮಾಡಿ ಆ ಶತಶೃಂಗ ಮಹಾರಾಜನು ಬ್ರಹ್ಮಲೋಕವನ್ನು ಸೇರಿದನು.

೧೨೧. ಎಲೈ ಪಾರ್ಥನೆ! ನೀನೂ ನಿನ್ನ ಅಣ್ಣತಮ್ಮಂದಿರಾದ ಇತರ ಪಾಂಡವರೊಡನೆ ಅಲ್ಲಿಯೇ ಹುಟ್ಟಿದವನಾಗಿರುವೆ. ಬಳಿಕ ಕುಮಾರಿಕೆಯೂ ಕೂಡ ಮಹೈಶ್ವರ್ಯ ಸಮನ್ವಿತಳಾಗಿ ಆ ಸ್ತಂಭತೀರ್ಥದಲ್ಲಿಯೇ ನಿಂತು ತನ್ನ ದೇಶದಲ್ಲಿ ಉತ್ಪತ್ತಿಯಾಗುತ್ತಿದ್ದ ದ್ರವ್ಯದಿಂದ ಅನೇಕ ದಾನಧರ್ಮಗಳನ್ನು ಮಾಡುತ್ತ ತಪಸ್ಸನ್ನೆಸಗುತ್ತಿದ್ದಳು.

೧೨೨–೧೨೩. ಬಳಿಕ ಕಾಲಕ್ರಮದಲ್ಲಿ ಆ ಎಂಟು ಮಂದಿ ಅಣ್ಣತಮ್ಮಂದಿರಲ್ಲಿ ಪ್ರತಿಯೊಬ್ಬರಿಗೂ ಅತ್ಯಂತ ಬಲಪರಾಕ್ರಮಶಾಲಿಗಳಾದ ಒಂಬತ್ತು ಮಕ್ಕಳಾದರು. ಅವರೆಲ್ಲರೂ ಸೇರಿ ಆ ಮಹೀಸಾಗರಸಂಗಮ ಕ್ಷೇತ್ರಕ್ಕೆ ಬಂದು

ಅಷ್ಟೌ ಖಂಡಾನಿ ಚಾಸ್ಮಾಕಂ ವಿಭಜ್ಯ ಸ್ವಯಮೇವ ಚ ।
ದೇಹಿ ದ್ವಾಸಪ್ತತೀನಾಂ ನೋ ವಿಭೇದಃ ಸ್ಯಾದ್ಯಥಾ ನ ನಃ ॥ ೧೨೪ ॥
ಇತ್ಯುಕ್ತಾ ಸರ್ವಧರ್ಮಜ್ಞಾ ವಿಜ್ಞಾನೇ ಬ್ರಹ್ಮಣಾ ಸಮಾ ।
ದ್ವಾಸಪ್ತತಿವಿಭೇದೈಃ ಸಾ ನವಖಂಡಾನ್ಯಚೀಕರೋತ್ ॥ ೧೨೫ ॥
ತೇಷಾಂ ನಾಮಾನಿ ಗ್ರಾಮಾಂಶ್ಚ ಪತ್ತನಾನಿ ಚ ಫಾಲ್ಗುನ ।
ವೇಲಾಕೂಲಾನಿ ಸಂಖ್ಯಾಂ ಚ ವಕ್ಷ್ಯಾಮಿ ತವ ತತ್ತ್ವತಃ ॥ ೧೨೬ ॥
ಕೋಟೀಶ್ಚತಸ್ರೋ ಗ್ರಾಮಾಣಾಂ ನೀವೃದಾಸೀಚ್ಚ ಮಂಡಲೇ ।
ಸಾರ್ಧಕೋಟಿದ್ವಯೈರ್ಗ್ರಾಮೈರ್ದೇಶೋ ಬಾಲಾಕ ಉಚ್ಯತೇ ॥ ೧೨೭ ॥
ಸಪಾದಕೋಟೇರ್ಗ್ರಾಮಾಣಾಂ ಪುರಸಾಹರುಕೇ ವಿದುಃ ।
ಲಕ್ಷಾಶ್ಚತ್ವಾರ ಏವಾಪಿ ಗ್ರಾಮಾಣಾಮಂಥಲೇ ಸ್ಮೃತಾಃ ॥ ೧೨೮ ॥
ಏಕೋ ಲಕ್ಷಶ್ಚ ನೇಪಾಲೇ ಗ್ರಾಮಾಣಾಂ ಪರಿಕೀರ್ತಿತಃ ।
ಷಟ್ತ್ರಿಂಶಲ್ಲಕ್ಷಮಾನಂ ತು ಕಾನ್ಯಕುಬ್ಜೇ ಪ್ರಕೀರ್ತಿತಂ ॥ ೧೨೯ ॥

---

ಕುಮಾರಿಯನ್ನು ಕುರಿತು ಈ ರೀತಿ ಹೇಳಿದರು :—"ಎಲೌ ಮಂಗಳಾಂಗಿಯೆ! ನೀನು ನಮ್ಮೆಲ್ಲರಿಗೂ ಕುಲದೇವಿಯಾಗಿ ನಮ್ಮಲ್ಲಿ ಪ್ರಸನ್ನಳಾಗು.

೧೨೪. ನಮ್ಮ ಎಂಟು ಖಂಡಗಳನ್ನೂ ನೀನೇ ವಿಭಜನೆ ಮಾಡಿ ಈ ಎಪ್ಪತ್ತೆರಡು ಸಹೋದರರಲ್ಲಿ ಮುಂದೆ ವಿವಾದವುಂಟಾಗದಂತೆ ಸಮವಾಗಿ ಹಂಚಿಕೊಡು."

೧೨೫. ಇಂತು ಹೇಳಲು ಸಕಲ ಧರ್ಮಗಳನ್ನೂ ತಿಳಿದವಳೂ, ಬುದ್ಧಿಯಲ್ಲಿ ಬ್ರಹ್ಮನಿಗೆ ಸಮನಾದವಳೂ ಆದ ಆ ಕುಮಾರಿಕೆಯು ತನ್ನ ಭಾಗವನ್ನೂ ಸೇರಿಸಿ ಒಂಭತ್ತು ಖಂಡಗಳನ್ನೂ ಎಪ್ಪತ್ತೆರಡು ಭಾಗಗಳನ್ನಾಗಿ ವಿಂಗಡಿಸಿದಳು.

೧೨೬. ಅವುಗಳ ಹೆಸರುಗಳನ್ನೂ, ಗ್ರಾಮಗಳನ್ನೂ, ಪಟ್ಟಣಗಳನ್ನೂ, ಸಮುದ್ರತೀರಗಳನ್ನೂ, ಅವುಗಳ ಸಂಖ್ಯೆಗಳನ್ನೂ ನಿಜವಾಗಿ ಹೇಳುವೆನು ಕೇಳು.

೧೨೭. ಒಂದೊಂದು ಮಂಡಲವೂ ನಾಲ್ಕುಕೋಟಿ ಗ್ರಾಮಗಳಿಂದ ಯುಕ್ತವಾಗಿರುವುದು. ಬಾಲಾಕ ದೇಶವು ಎರಡೂವರೆ ಕೋಟಿ ಗ್ರಾಮಗಳುಳ್ಳದೆಂದು ಹೇಳುವರು.

೧೨೮. ಪುರಸಾರುಣಕದಲ್ಲಿ ಒಂದೂಕಾಲು ಕೋಟಿ ಗ್ರಾಮಗಳುಳ್ಳದ್ದಾಗಿರುವುದು. ಅಂಥಲ ದೇಶದಲ್ಲಿ ನಾಲ್ಕು ಲಕ್ಷ ಗ್ರಾಮಗಳಿರುವುವೆಂದು ಹೇಳುವರು.

೧೨೯. ನೇಪಾಳ ದೇಶದಲ್ಲಿ ಒಂದು ಲಕ್ಷ ಗ್ರಾಮಗಳಿರುವುವೆಂದು ಹೇಳಲ್ಪಟ್ಟಿರುವುದು. ಕನ್ಯಾಕುಬ್ಜದಲ್ಲಿ ಮುವ್ವತ್ತಾರು ಲಕ್ಷ ಗ್ರಾಮಗಳಿರುವುವು.

**ದ್ವಾಸಪ್ತತಿಸ್ತಥಾ ಲಕ್ಷಾ ಗ್ರಾಮಾ ಗಾಜಣಕೇ ಸ್ಮೃತಾಃ ।**
**ಅಷ್ಟಾದಶ ತಥಾ ಲಕ್ಷಾ ಗ್ರಾಮಾಣಾಂ ಗೌಡದೇಶಕೇ ॥ ೧೩೦ ॥**
**ಕಾಮರೂಪೇ ಚ ಗ್ರಾಮಾಣಾಂ ನವಲಕ್ಷಾಃ ಪ್ರಕೀರ್ತಿತಾಃ ।**
**ಡಾಹಲೇ ವೇದಸಂಜ್ಞೇ ತು ಗ್ರಾಮಾಣಾಂ ನವಲಕ್ಷಕಂ ॥ ೧೩೧ ॥**
**ನವೈವ ಲಕ್ಷಾಗ್ರಾಮಾಣಾಂ ಕಾಂತಿಪುರೇ ಪ್ರಕೀರ್ತಿತಾಃ ।**
**ನವಲಕ್ಷಾಸ್ತಥಾ ಚೈವ ಮಾಚಿಪೂರೇ ಪ್ರಕೀರ್ತಿತಾಃ ॥ ೧೩೨ ॥**
**ಓಡ್ಡಿಯಾಣೇ ತಥಾ ದೇಶೇ ನವಲಕ್ಷಾಃ ಪ್ರಕೀರ್ತಿತಾಃ ।**
**ಜಾಲಂಧರೇ ತಥಾ ದೇಶೇ ನವಲಕ್ಷಾಃ ಪ್ರಕೀರ್ತಿತಾಃ ॥ ೧೩೩ ॥**
**ಲೋಹಪೂರೇ ತಥಾ ದೇಶೇ ಲಕ್ಷಾಃ ಪ್ರೋಕ್ತಾ ನವೈವ ಚ ।**
**ಗ್ರಾಮಾಣಾಂ ಸಪ್ತಲಕ್ಷಂ ಚ ಕಾಂಚೀಪುರೇ ಪ್ರಕೀರ್ತಿತಂ ॥ ೧೩೪ ॥**
**ಗ್ರಾಮಾಣಾಂ ಸಪ್ತಲಕ್ಷಂ ಚ ರಟರಾಜೇ ಪ್ರಕೀರ್ತಿತಂ ।**
**ಹರೀ ಆಲೇ ಚ ಗ್ರಾಮಾಣಾಂ ಲಕ್ಷಪಂಚಕಸಮ್ಮಿತಂ ॥ ೧೩೫ ॥**
**ಸಾರ್ಧಲಕ್ಷತ್ರಯಂ ಪ್ರೋಕ್ತಂ ದ್ರುಡಸ್ಯ ವಿಷಯೇ ತಥಾ ।**
**ಸಾರ್ಧಲಕ್ಷತ್ರಯಂ ಪ್ರೋಕ್ತಂ ತಥಾವಂಭಣವಾಹಕೇ ॥ ೧೩೬ ॥**
**ಏಕವಿಂಶತಿಸಾಹಸ್ರಂ ಗ್ರಾಮಾಣಾಂ ನೀಲಪೂರಕೇ ।**
**ತಥಾಮಲವಿಷಯೇ ಸಾರ್ಧ ಗ್ರಾಮಾಣಾಮೇಕಲಕ್ಷಕಂ ॥ ೧೩೭ ॥**

---

೧೩೦. ಗಾಜಣಕದಲ್ಲಿ ಅಂತೆಯೇ ಎಪ್ಪತ್ತೆರಡು ಲಕ್ಷ ಗ್ರಾಮಗಳಿರುವುವೆಂದು ಹೇಳುವರು. ಗೌಡದೇಶದಲ್ಲಿ ಹದಿನೆಂಟು ಲಕ್ಷ ಗ್ರಾಮಗಳಿರುವುವೆಂದು ಕೇಳಿರುವೆವು.

೧೩೧-೧೩೪. ಕಾಮರೂಪ ದೇಶದಲ್ಲಿ ಒಂಬತ್ತು ಲಕ್ಷ ಗ್ರಾಮಗಳಿರುವುವು. ಅಂತೆಯೇ ವೇದಸಂಜ್ಞಕವಾದ ಡಾಹಲದೇಶದಲ್ಲಿಯೂ, ಕಾಂತಿಪುರದಲ್ಲಿಯೂ, ಮಂಚಿಪೂರದಲ್ಲಿಯೂ, ಓಡ್ಡಿಯೋಣದಲ್ಲಿಯೂ, ಜಾಲಂಧರದೇಶದಲ್ಲಿಯೂ, ಲೋಹಪೂರದಲ್ಲಿಯೂ, ಒಂಬತ್ತೊಂಬತ್ತು ಲಕ್ಷ ಗ್ರಾಮಗಳಿರುವುವೆಂದು ಹೇಳಿರುವರು. ಕಾಂಚಿಪುರದಲ್ಲಿ ಏಳು ಲಕ್ಷ ಗ್ರಾಮಗಳಿರುವುವೆಂದು ಹೇಳಲ್ಪಟ್ಟಿರುವುದು.

೧೩೫. ರಟರಾಜ ದೇಶದಲ್ಲಿ ಏಳು ಲಕ್ಷ ಗ್ರಾಮಗಳೂ, ಹರೀ ಆಲದಲ್ಲಿ ಐದು ಲಕ್ಷ ಗ್ರಾಮಗಳೂ ಇರುವುವೆಂದು ಪ್ರಸಿದ್ಧವು.

೧೩೬. ದ್ರುಡದೇಶದಲ್ಲಿಯೂ, ವಂಭಣವಾಹಕದಲ್ಲಿಯೂ, ಮೂರೂವರೆ ಲಕ್ಷ ಗ್ರಾಮಗಳಿರುವುವು.

೧೩೭. ನೀಲಪೂರಕದಲ್ಲಿ ಇಪ್ಪತ್ತೊಂದು ಸಾವಿರ ಗ್ರಾಮಗಳೂ, ಅಮಲ ದೇಶದಲ್ಲಿ ಒಂದು ಲಕ್ಷ ಗ್ರಾಮಗಳೂ ಇರುವುವು.

ನರೇಂದುನಾಮದೇಶೇತು ಲಕ್ಷಮೇಕಂ ಸಪಾದಕಂ ।
ಅತಿಲಾಂಗಲದೇಶೇ ಚ ಲಕ್ಷಃ ಪ್ರೋಕ್ತಃ ಸಪಾದಕಃ ॥ ೧೩೮ ॥
ಲಕ್ಷಾಷ್ಟಾದಶಸಾಹಸ್ರಂ ನವತೀ ದ್ವೇ ಚ ಮಾಲವೇ ।
ಸಯಾಭರೇ ತಥಾ ದೇಶೇ ಲಕ್ಷಃಪ್ರೋಕ್ತಃ ಸಪಾದಕಃ ॥ ೧೩೯ ॥
ಮೇವಾಡೇ ಚ ತಥಾ ಪ್ರೋಕ್ತೋ ಲಕ್ಷಶ್ಚೈಕಃ ಸಪಾದಕಃ ।
ಅಶೀತಿಶ್ಚ ಸಹಸ್ರಾಣಿ ವಾಗುರಿಃ ಪರಿಕೀರ್ತಿತಃ ॥ ೧೪೦ ॥
ಗ್ರಾಮಸಪ್ತತಿಸಾಹಸ್ರೋ ಗುರ್ಜರಾತ್ರಃ ಪ್ರಕೀರ್ತಿತಃ ।
ತಥಾ ಸಪ್ತತಿ ಸಾಹಸ್ರಃ ಪಾಂಡೋರ್ವಿಷಯ ಏವ ಚ ॥ ೧೪೧ ॥
ಜಹಾಹುತಿ ಸಹಸ್ರಾಣಿ ದ್ವಾಚತ್ವಾರಿಂಶದೇವ ಚ ।
ಅಷ್ಟಷಷ್ಟಿಸಹಸ್ರಾಣಿ ಪ್ರೋಕ್ತಂ ಕಾಶ್ಮೀರಮಂಡಲಂ ॥ ೧೪೨ ॥
ಷಷ್ಟಿತ್ರಿಂಶತ್ಸಹಸ್ರಾಣಿ ಗ್ರಾಮಾಣಾಂ ಕೌಂಕಣೇ ವಿದುಃ ।
ಚತುರ್ದಶಶತಂ ದ್ವೇ ಚ ವಿಂಶತೀ ಲಘುಕೌಂಕಣಂ ॥ ೧೪೩ ॥
ಸಿಂಧುಃ ಸಹಸ್ರದಶಕೇ ಗ್ರಾಮಾಣಾಂ ಪರಿಕೀರ್ತಿತಃ ॥ ೧೪೪ ॥
ಚತುರ್ದಶಶತೇ ದ್ವೇ ಚ ವಿಂಶತಿಃ ಕಚ್ಛಮಂಡಲಂ ।
ಪಂಚಪಂಚಾಶತ್ಸಾಹಸ್ರಂ ಗ್ರಾಮಾಃ ಸೌರಾಷ್ಟ್ರಮುಚ್ಯತೇ ॥ ೧೪೫ ॥

---

೧೩೮-೧೩೯. ನರೇಂದು ದೇಶದಲ್ಲಿಯೂ, ಅತಿಲಾಂಗಲ ದೇಶದಲ್ಲಿಯೂ, ಒಂದೂಕಾಲು ಲಕ್ಷ ಗ್ರಾಮಗಳಿರುವುವು. ಮಾಲವದೇಶದಲ್ಲಿ ಒಂದು ಲಕ್ಷದ ಹದಿನೆಂಟು ಸಾವಿರದ ಒಂದುನೂರ ಎಂಬತ್ತು ಗ್ರಾಮಗಳೂ, ಸಯಾಭರ ದೇಶದಲ್ಲಿ ಒಂದೂಕಾಲು ಲಕ್ಷ ಗ್ರಾಮಗಳೂ ಇರುವುವು.

೧೪೦. ಮೇವಾಡ ದೇಶದಲ್ಲಿ ಒಂದೂಕಾಲು ಲಕ್ಷ ಗ್ರಾಮಗಳೂ, ವಾಗುರಿ ದೇಶದಲ್ಲಿ ಎಂಬತ್ತು ಸಾವಿರ ಗ್ರಾಮಗಳೂ ಇರುವುವೆಂದು ಹೇಳುವರು.

೧೪೧. ಗೂರ್ಜರ ದೇಶವೂ, ಪಾಂಡುದೇಶವೂ ಎಪ್ಪತ್ತುಸಾವಿರ ಗ್ರಾಮಗಳಿಂದ ಕೂಡಿರುವುವು.

೧೪೨. ಜಹಾಹುತಿಯಲ್ಲಿ ಎಂಬತ್ತೆರಡುಸಾವಿರ ಗ್ರಾಮಗಳಿರುವುವು. ಕಾಶ್ಮೀರ ದೇಶದಲ್ಲಿ ನಾಲ್ಕು ಲಕ್ಷದ ಎಂಬತ್ತುಸಾವಿರ ಗ್ರಾಮಗಳಿರುವುವು.

೧೪೩. ಕೊಂಕಣ ದೇಶದಲ್ಲಿ ತೊಂಬತ್ತು ಸಾವಿರವೂ, ಲಘು ಕೊಂಕಣದಲ್ಲಿ ಸಾವಿರದ ನಾಲ್ಕುನೂರ ನಲವತ್ತೂ ಗ್ರಾಮಗಳಿರುವುವು.

೧೪೪-೧೪೫. ಸಿಂಧುದೇಶವು ಹತ್ತುಸಾವಿರ ಗ್ರಾಮಗಳಿಂದ ಕೂಡಿದುದಾಗಿ ಹೇಳಲ್ಪಟ್ಟಿರುವುದು. ಕಚ್ಛಮಂಡಲವು ಸಾವಿರದ ನಾಲ್ಕುನೂರ ನಲವತ್ತು ಗ್ರಾಮಗಳುಳ್ಳದು. ಸೌರಾಷ್ಟ್ರ ದೇಶದಲ್ಲಿ ಎರಡು ಲಕ್ಷದ ಐವತ್ತುಸಾವಿರ ಗ್ರಾಮಗಳಿರುವುವು.

ಏಕವಿಂಶತಿಸಾಹಸ್ರೋ ಲಾಡದೇಶಃ ಪ್ರಕೀರ್ತಿತಃ ।
ಅತಿಸಿಂಧುಶ್ಚ ಗ್ರಾಮಾಣಾಂ ದಶಸಾಹಸ್ರ ಉಚ್ಯತೇ ।
ತಥಾಚಾಶ್ವಮುಖಂ ಪಾರ್ಥ ದಶಸಾಹಸ್ರಮುಚ್ಯತೇ ॥ ೧೪೬ ॥
ಸಹಸ್ರದಶಕಂ ಚಾಪಿ ಏಕಪಾದಃ ಪ್ರಕೀರ್ತಿತಃ ॥ ೧೪೭ ॥
ತಥೈವ ದಶಸಾಹಸ್ರೋ ದೇಶಃ ಸೂರ್ಯಮುಖಃ ಸ್ಮೃತಃ ।
ಏಕಬಾಹುಸ್ತಥಾ ದೇಶೋ ದಶಸಾಹಸ್ರಮುಚ್ಯತೇ ॥ ೧೪೮ ॥
ಸಹಸ್ರದಶಕಂ ಚೈವ ಸಂಜಾಯುರಿತಿ ದೇಶಕಃ ।
ಶಿವನಾಮಾ ತಥಾದೇಶಃ ಸಹಸ್ರದಶಕಃ ಸ್ಮೃತಃ ।
ಸಹಸ್ರಾಣಿ ದಶ ಖ್ಯಾತಂ ತಥಾಕಾಲಹಯಂಜಯಃ ॥ ೧೪೯ ॥
ಲಿಂಗೋದ್ಭವಸ್ತಥಾ ದೇಶಃ ಸಹಸ್ರಾಣಿ ದಶೈವ ಚ ।
ಭದ್ರಶ್ಚ ದೇವಭದ್ರಶ್ಚ ಪ್ರತ್ಯೇಕಂ ದಶಕಾಸ್ಮೃತೌ ॥ ೧೫೦ ॥
ಷಟ್ತ್ರಿಂಶಚ್ಚ ಸಹಸ್ರಾಣಿ ಸ್ಮೃತಾ ಚಟವಿರಾಟಕೌ ।
ಷಟ್ತ್ರಿಂಶಚ ಸಹಸ್ರಾಣಿ ಯಮಕೋಟಿಃ ಪ್ರಕೀರ್ತಿತಾ ॥ ೧೫೧ ॥
ಅಷ್ಟಾದಶ ತಥಾಕೋಟ್ಯೋ ರಾಮಕೋ ದೇಶ ಉಚ್ಯತೇ ।
ತೋಮರಶ್ಚಾಪಿ ಕರ್ಣಾಟೋ ಯುಗಲಶ್ಚ ತ್ರಯಸ್ತ್ರಿಮೇ ॥ ೧೫೨ ॥
ಸಪಾದಲಕ್ಷಗ್ರಾಮಾಣಾಂ ಪ್ರತ್ಯೇಕಂ ಪರಿಕೀರ್ತಿತಃ ।
ಪಂಚಲಕ್ಷಾಶ್ಚ ಗ್ರಾಮಾಣಾಂ ಸ್ತ್ರೀರಾಜ್ಯಂ ಪರಿಕೀರ್ತಿತಂ ॥ ೧೫೩ ॥
ಪುಲಸ್ತ್ಯವಿಷಯಶ್ಚಾಪಿ ದಶಲಕ್ಷಕ ಉಚ್ಯತೇ ।
ಪ್ರತ್ಯೇಕಂ ಲಕ್ಷದಶಕೌ ದೇಶೌ ಕಾಂಭೋಜಕೋಶಲೌ ॥ ೧೫೪ ॥

---

೧೪೬. ಲಾಡದೇಶವು ಇಪ್ಪತ್ತೊಂದುಸಾವಿರ ಗ್ರಾಮಗಳುಳ್ಳುದು. ಸಿಂಧುದೇಶವೂ ಅಶ್ವಮುಖವೂ ಹತ್ತುಸಾವಿರ ಗ್ರಾಮಗಳುಳ್ಳವುಗಳು.

೧೪೭–೧೫೦. ಅಂತೆಯೇ ಏಕಪಾದ, ಸೂರ್ಯಮುಖ, ಏಕಬಾಹು, ಸಂಜಾಯು, ಶಿವದೇಶ, ಕಾಲಹಯಂಜಯ, ಲಿಂಗೋದ್ಭವ, ಭದ್ರ, ದೇವಭದ್ರ ಎಂಬ ದೇಶಗಳೊಂದೊಂದರಲ್ಲಿಯೂ ಹತ್ತುಸಾವಿರ ಗ್ರಾಮಗಳಿರುವುವು.

೧೫೧. ಚಟ, ವಿರಾಟಕ, ಯಮಕೋಟಿ ಯೆಂಬ ಮೂರು ದೇಶಗಳು ಮುವ್ವತ್ತಾರು ಸಾವಿರ ಗ್ರಾಮಗಳಿಂದ ಕೂಡಿರುವುವು.

೧೫೨–೧೫೪. ರಾಮಕದೇಶವೆಂಬದು ಹದಿನೆಂಟು ಕೋಟಿ ಗ್ರಾಮಗಳುಳ್ಳುದು. ತೋಮರ, ಕರ್ಣಾಟ, ಯುಗಳ ಎಂಬ ಮೂರು ದೇಶಗಳೂ ಒಂದೂಕಾಲು ಲಕ್ಷ ಗ್ರಾಮಗಳುಳ್ಳವಾಗಿರುವುವು. ಸ್ತ್ರೀ ರಾಜ್ಯವು ಐದು ಲಕ್ಷ ಗ್ರಾಮಗಳುಳ್ಳುದಾಗಿರುವುದು. ಪುಲಸ್ತ್ಯ, ಕಾಂಭೋಜ, ಕೋಸಲ ದೇಶಗಳು ಪ್ರತ್ಯೇಕವಾಗಿ ಹತ್ತು ಲಕ್ಷ ಗ್ರಾಮಗಳಿಂದೊಡಗೂಡಿರುವುವು.

ಗ್ರಾಮಾಣಾಂ ಚ ಚತುರ್ಲಕ್ಷೋ ಬಾಹ್ಲೀಕಃ ಪರಿಕೀರ್ತ್ಯತೇ ।
ಷಟ್ತ್ರಿಂಶಚ್ಚ ಸಹಸ್ರಾಣಿ ಲಂಕಾದೇಶಃ ಪ್ರಕೀರ್ತಿತಃ ॥ ೧೪೪ ॥
ಚತುಷ್ಷಷ್ಟಿಸಹಸ್ರಾಣಿ ಕುರುದೇಶಃ ಪ್ರಕೀರ್ತಿತಃ ।
ಸಾರ್ಧಲಕ್ಷಸ್ತಥಾ ಪ್ರೋಕ್ತಃ ಕಿರಾತವಿಜಯೋ ಜಯಃ ॥ ೧೪೫ ॥
ಪಂಚ ಪ್ರಾಹುಸ್ತಥಾ ಲಕ್ಷಾನ್ವಿದರ್ಭಾಯಾಂ ಚ ಗ್ರಾಮಕಾನ್ ।
ಚತುರ್ದಶಸಹಸ್ರಾಣಿ ವರ್ಧಮಾನಂ ಪ್ರಕೀರ್ತಿತಂ ॥ ೧೪೭ ॥
ಸಹಸ್ರದಶಕಂ ಚಾಪಿ ಸಿಂಹಲದ್ವೀಪಮುಚ್ಯತೇ ।
ಷಟ್ತ್ರಿಂಶಚ್ಚ ಸಹಸ್ರಾಣಿ ಗ್ರಾಮಾಣಾಂ ಪಾಂಡುದೇಶಕಃ ॥ ೧೪೮ ॥
ಲಕ್ಷೈಕಂ ಚ ತಥಾ ಪ್ರೋಕ್ತಂ ಗ್ರಾಮಾಣಾಂ ತು ಭಯಾಣಕಂ ।
ಷಟ್ಷಷ್ಟಿಂ ಚ ಸಹಸ್ರಾಣಿ ದೇಶೋ ಮಾಗಧ ಉಚ್ಯತೇ ॥ ೧೪೯ ॥
ಷಷ್ಟಿಃಸಹಸ್ರಾಣಿ ತಥಾ ಗ್ರಾಮಾಣಾಂ ಪಾಂಗುದೇಶಕಃ ।
ತ್ರಿಂಶತ್ಸಾಹಸ್ರ ಉಕ್ತಶ್ಚ ಗ್ರಾಮಾಣಾಂ ಚ ವರೇಂದುಕಃ ॥ ೧೫೦ ॥
ಪಂಚವಿಂಶತಿಸಾಹಸ್ರಂ ಮೂಲಸ್ಥಾನಂ ಪ್ರಕೀರ್ತಿತಂ ।
ಚತ್ವಾರಿಂಶತ್ಸಹಸ್ರಾಣಿ ಗ್ರಾಮಾಣಾಂ ಯಾವನಃ ಸ್ಮೃತಃ ॥ ೧೫೧ ॥

---

೧೪೪. ಬಾಹ್ಲೀಕ ದೇಶವು ನಾಲ್ಕು ಲಕ್ಷ ಗ್ರಾಮಗಳುಳ್ಳದ್ದಾಗಿರುವುದು. ಲಂಕಾದೇಶವು ಮುವ್ವತ್ತಾರು ಸಾವಿರ ಗ್ರಾಮಗಳುಳ್ಳದು.

೧೪೫. ಕುರುದೇಶವು ಅರುವತ್ತುನಾಲ್ಕುಸಾವಿರದ ಗ್ರಾಮಗಳುಳ್ಳದೆಂದು ಹೇಳಲ್ಪಟ್ಟಿರುವುದು. ಕಿರಾತರಿಂದ ಕೂಡಿದ ಜಯದೇಶವು ಒಂದೂವರೆ ಲಕ್ಷ ಗ್ರಾಮಗಳುಳ್ಳದಾಗಿರುವುದು.

೧೪೭. ವಿದರ್ಭದೇಶದಲ್ಲಿ ಐದು ಲಕ್ಷ ಗ್ರಾಮಗಳಿರುವುವೆಂದು ಹೇಳುವರು. ವರ್ಧಮಾನ ದೇಶವು ಹದಿನಾಲ್ಕು ಸಾವಿರ ಗ್ರಾಮಗಳುಳ್ಳದು.

೧೪೮. ಸಿಂಹಲದ್ವೀಪವು ಹತ್ತುಸಾವಿರ ಗ್ರಾಮಗಳುಳ್ಳದೆಂದೂ, ಪಾಂಡು ದೇಶವು ಮೂವತ್ತಾರು ಸಾವಿರ ಗ್ರಾಮಗಳುಳ್ಳದೆಂದೂ ಹೇಳುವರು.

೧೪೯. ಭಯಾಣಕ ದೇಶವು ಒಂದು ಲಕ್ಷ ಗ್ರಾಮಗಳುಳ್ಳದು. ಮಾಗಧ ದೇಶವು ಅರುವತ್ತಾರುಸಾವಿರ ಗ್ರಾಮಗಳಿಂದ ಯುಕ್ತವಾಗಿರುವುದು.

೧೫೦. ಪಾಂಗು ದೇಶವು ಅರುವತ್ತುಸಾವಿರ ಗ್ರಾಮಗಳಿಂದಲೂ, ವರೇಂದುಕವೆಂಬ ದೇಶವು ಮೂವತ್ತು ಸಾವಿರ ಗ್ರಾಮಗಳಿಂದಲೂ ಶೋಭಿಸುತ್ತಿರುವುವು.

೧೫೧. ಮೂಲಸ್ಥಾನದಲ್ಲಿ ಇಪ್ಪತ್ತೈದು ಸಾವಿರ ಗ್ರಾಮಗಳೂ ಯವನ ದೇಶದಲ್ಲಿ ನಲವತ್ತುಸಾವಿರ ಗ್ರಾಮಗಳೂ ಇರುವುವೆಂದು ಹೇಳುವರು.

ಚತ್ವಾರ್ಯೇವ ಸಹಸ್ರಾಣಿ ಪಕ್ಷಬಾಹುರುದೀರ್ಯತೇ ।
ದ್ವಾಸಪ್ತತಿರಮೀ ದೇಶಾಃ ಗ್ರಾಮಸಂಖ್ಯಾಃ ಪ್ರಕೀರ್ತಿತಾಃ ॥ ೧೬೨ ॥
ಏವಂ ಭರತ ಖಂಡೇಽಸ್ಮಿನ್ಷಣ್ಣವತ್ಯೇವ ಕೋಟಯಃ ।
ದ್ವಾಸಪ್ತತಿಸ್ತಥಾ ಲಕ್ಷಾಃ ಪತ್ತನಾನಾಂ ಪ್ರಕೀರ್ತಿತಾಃ ॥ ೧೬೩ ॥
ಷಟ್ತ್ರಿಂಶಚ್ಚ ಸಹಸ್ರಾಣಿ ಮೇಲಾಕುಲಾನಿ ಭಾರತ ।
ಏವಂ ವಿಭಜ್ಯ ಖಂಡಾನಿ ಭ್ರಾತೃವ್ಯಾಣಾಂ ದದೌ ನವ ॥ ೧೬೪ ॥
ಆತ್ಮೀಯಮಪಿ ಸಾ ದೇವೀ ಅನಿಚ್ಛುಷ್ವಪಿ ತೇಷು ಚ ।
ಯತೋ ಮಾನ್ಯೇತಿ ಭಗಿನೀ ಪ್ರತಿ ಕೃದ್ಧ್ಯಂತಿ ಭ್ರಾತರಃ ॥ ೧೬೫ ॥
ಭ್ರಾತೄನ್ಪ್ರತಿ ಭಗಿನೀ ಚ ವಿಚಾರ್ಯೈವ ದದೌ ಶುಭಾ ।
ತತ್ಕೃತ್ವಾ ಸಾನುಮಾನ್ಯೈತಾನ್ಸ್ತಂಭತೀರ್ಥಮುಪಾಗತಾ ॥ ೧೬೬ ॥
ತದಾ ತೇಷು ಚ ದೇಶೇಷು ಚತುರ್ವರ್ಗಸ್ಯ ಚ ಸಾಧನಂ ।
ಸರ್ವೇಷಾಂ ಪ್ರವರಂ ಪ್ರೋಕ್ತಂ ಕುಮಾರೀಶ್ವರಮೇವ ಚ ॥ ೧೬೭ ॥

---

೧೬೨. ದಕ್ಷಬಾಹು ದೇಶವು ನಲವತ್ತುಸಾವಿರ ಗ್ರಾಮಗಳುಳ್ಳದೆಂದು ಹೇಳಲ್ಪಟ್ಟಿರುವುದು. ಎಲೈ ಅರ್ಜುನನೇ! ಇಂತು ಈ ಭಾರತಖಂಡದಲ್ಲಿರುವ ಎಪ್ಪತ್ತೆರಡು ದೇಶಗಳನ್ನೂ ಅವುಗಳಲ್ಲಿರುವ ಗ್ರಾಮಗಳ ಸಂಖ್ಯೆಗಳನ್ನೂ ನಿನಗೆ ವಿಸ್ತಾರವಾಗಿ ತಿಳಿಸಿರುವೆನು.

೧೬೩. ಈ ರೀತಿಯಿಂದ ಈ ಭರತಖಂಡದಲ್ಲಿ ತೊಂಬತ್ತಾರು ಕೋಟಿಯ ಎಪ್ಪತ್ತೆರಡು ಲಕ್ಷ ಗ್ರಾಮಗಳಿರುವುವೆಂದು ಪ್ರಸಿದ್ಧವಾಗಿರುವುದು.

೧೬೪. ಎಲೈ ಪಾರ್ಥನೆ! ಸಮುದ್ರ ತೀರಪ್ರದೇಶಗಳು ಮುವ್ವತ್ತಾರು ಸಾವಿರಗಳಿರುವುವು. ಇಂತು ಭರತಖಂಡದ ಒಂಬತ್ತು ಭಾಗಗಳನ್ನೂ ಕುಮಾರಿಕೆಯು ತನ್ನ ಸೋದರಳಿಯಂದಿರಿಗೆ ವಿಭಾಗಿಸಿಕೊಟ್ಟಳು.

೧೬೫. ಆ ಕುಮಾರಿಕೆಯು ಅವರಿಗೆ ಇಷ್ಟವಿಲ್ಲದಿದ್ದರೂ ತನ್ನ ಭಾಗವನ್ನೂ ಅವರಿಗೇ ಕೊಟ್ಟುಬಿಟ್ಟಳು. ಅಯ್ಯಾ ಧನಂಜಯನೇ! ಹೆಣ್ಣುಮಕ್ಕಳಿಗೆ ಪಿತೃ ಧನದಲ್ಲಿ ಭಾಗವನ್ನು ಕೊಡಬೇಕೆಂದರೆ ಅಣ್ಣತಮ್ಮಂದಿರು ಸಹಜವಾಗಿಯೇ ಕೋಪಗೊಳ್ಳುವರಲ್ಲವೆ!

೧೬೬. ಇದನ್ನು ವಿಚಾರಮಾಡಿಯೇ ಆಕೆಯು ತನ್ನ ಭಾಗವನ್ನೂ ಅಣ್ಣಂದಿರ ಮಕ್ಕಳಿಗೇ ಹಂಚಿಬಿಟ್ಟಳು. ಇಂತು ತನ್ನ ಕೆಲಸವನ್ನು ಆಗಮಾಡಿ ಅವರೆಲ್ಲರನ್ನೂ ಬೀಳ್ಕೊಟ್ಟು ಆಕೆಯು ಸ್ತಂಭತೀರ್ಥಕ್ಕೆ ಆಗಮಿಸಿದಳು.

೧೬೭. ಈ ಮೇಲೆ ಹೇಳಿದ ಸಕಲ ಪ್ರದೇಶಗಳಲ್ಲಿಯೂ ಧರ್ಮಾಧಿ ಸಕಲ ಪುರುಷಾರ್ಥಗಳನ್ನೂ ಕೊಡುವುದರಲ್ಲಿ ಇತರ ಕ್ಷೇತ್ರಗಳಿಗಿಂತಲೂ ಕುಮಾರೀಶ್ವರ ಕ್ಷೇತ್ರವೇ ಉತ್ತಮವೆಂದು ಹೇಳಲ್ಪಟ್ಟಿರುವುದು.

ತತ್ರಾಪಿ ಗುಪ್ತಕ್ಷೇತ್ರಂ ಚ ವೇದ್ಯೈತತ್ಸಾ ಕುಮಾರಿಕಾ ।
ಗುಪ್ತಕ್ಷೇತ್ರೇ ಕುಮಾರೇಶಂ ಪೂಜಯಂತೀ ಮಹಾವ್ರತಾ ॥ ೧೬೮ ॥
ತಸ್ಥೌ ಹ್ರದೇಷು ಸ್ನಾಯಂತೀ ಷಟ್ಸು ಚೈವಾಪಿ ಸಂಗಮೇ ।
ತತಃ ಕಾಲಪ್ರಕರ್ಷಾಚ್ಚ ಪ್ರಾಸಾದೇ ಸ್ಕಂದನಿರ್ಮಿತೇ ।
ಜೀರ್ಣೇ ನವ್ಯಂ ಸ್ವರ್ಣಮಯಂ ಪ್ರಾಸಾದಂ ಸಾಪ್ಯಕಾರಯತ್ ॥ ೧೬೯ ॥
ತತಸ್ತುಸ್ಟೋ ಮಹಾದೇವಸ್ತಸ್ಯಾ ಭಕ್ತ್ಯಾತಿತೋಷಿತಃ ।
ಕುಮಾರಲಿಂಗಾದುತ್ಥಾಯ ಪ್ರತ್ಯಕ್ಷಸ್ತಾಮುವೋಚತ ॥ ೧೭೦ ॥
ಭದ್ರೇ ತವಾಹಂ ಭಕ್ತ್ಯಾ ಚ ವಿಜ್ಞಾನೇನ ಚ ತೋಷಿತಃ ।
ಜೀರ್ಣಃ ಪುನರುದ್ಧೃತೋಽಯಂ ಪ್ರಾಸಾದಸ್ತೇನ ತೋಷಿತಃ ॥ ೧೭೧ ॥
ತವ ನಾಮ್ನಾ ಚ ವಿಖ್ಯಾತೋ ಭವಿಷ್ಯಾಮಿ ಕುಮಾರಿಕೇ ॥ ೧೭೨ ॥
ಕರ್ತಾ ಚಾಪಿ ತಥೋದ್ಧರ್ತಾ ದ್ವೌ ವೈ ಸಮಫಲೌ ಶ್ರುತೌ ।
ಕುಮಾರೇಶಃ ಕುಮಾರೀಶ ಇತಿ ವಕ್ಷ್ಯಂತಿ ಮಾಂ ತತಃ ॥ ೧೭೩ ॥

---

೧೬೮. ಅಲ್ಲಿಯೂ ಸಹ ಗುಪ್ತಕ್ಷೇತ್ರವು ವಿಶೇಷ ಫಲದಾಯಕವಾದುದು. ಇದನ್ನು ತಿಳಿದೇ ಕುಮಾರಿಕೆಯು ಉಗ್ರವ್ರತವನ್ನು ಸ್ವೀಕರಿಸಿ ಕುಮಾರೇಶ್ವರ ಲಿಂಗವನ್ನು ಪೂಜಿಸುತ್ತ ಇದ್ದಳು.

೧೬೯. ಪ್ರತಿಜ್ಞೇಶ್ವರ ತೀರ್ಥ, ಕಪಾಲೇಶ್ವರ ತೀರ್ಥ, ಶಕ್ತಿಛಿದ್ರ ತೀರ್ಥ, ಸ್ತಂಭೇಶ್ವರ ತೀರ್ಥ, ಕುಮಾರೇಶ್ವರ ತೀರ್ಥ ಮತ್ತು ಸಿದ್ಧಕೂಪಗಳೆಂಬ ತೀರ್ಥಗಳಲ್ಲಿಯೂ, ಮಹೀಸಾಗರಸಂಗಮದಲ್ಲಿಯೂ ನಿತ್ಯವೂ ಸ್ನಾನಮಾಡುತ್ತಿದ್ದಳು. ಬಳಿಕ ಕಾಲಕ್ರಮದಿಂದ ಸ್ಕಂದ ನಿರ್ಮಿತವಾದ ದೇವಾಲಯವು ಶಿಥಿಲವಾಗಲು, ಹೊಸದಾಗಿ ಸ್ವರ್ಣಮಯವಾದ ಪ್ರಾಸಾದವನ್ನು ಕಟ್ಟಿಸಿದಳು.

೧೭೦. ಆಗ ಮಹಾದೇವನು ಆಕೆಯ ಭಕ್ತಿಯಿಂದ ಸುಪ್ರೀತನಾಗಿ ಕುಮಾರೇಶ್ವರ ಲಿಂಗದಿಂದುದ್ಭವಿಸಿ ಆಕೆಗೆ ಪ್ರತ್ಯಕ್ಷವಾಗಿ ಹೇಳತೊಡಗಿದನು.

೧೭೧. "ಎಲೌ ಮಂಗಳಾಂಗಿಯೆ! ನಿನ್ನ ಭಕ್ತಿಯಿಂದಲೂ, ಜ್ಞಾನದಿಂದಲೂ ನಾನು ಸಂತೋಷಗೊಂಡಿರುವೆನು. ನೀನು ಈ ಜೀರ್ಣ ಪ್ರಾಸಾದವನ್ನು ಮತ್ತೆ ಉದ್ಧಾರಮಾಡಿದುದರಿಂದ ಇನ್ನೂ ಸಂತುಷ್ಟನಾಗಿರುವೆನು.

೧೭೨-೧೭೩. ಎಲೌ ಕುಮಾರಿಕೆಯೆ! ನಾನು ಇನ್ನು ಮೇಲೆ ನಿನ್ನ ಹೆಸರಿನಿಂದಲೇ ಪ್ರಖ್ಯಾತನಾಗಿಪುವೆನು. ದೇವಲಯಾದಿಗಳ ಪ್ರತಿಷ್ಠೆಯನ್ನು ಮಾಡುವವನೂ, ಜೀರ್ಣೋದ್ಧಾರ ಮಾಡುವವನೂ ಸಮಫಲಗಳನ್ನನುಭವಿಸುವರೆಂದು ಕೇಳಿರುವೆವು. ಆದುದರಿಂದ ನನ್ನನ್ನು ಕುಮಾರೇಶನೆಂದೂ, ಕುಮಾರೀಶನೆಂದೂ ಕರೆಯುವರು.

ಬರ್ಕರೇಶೇ ಚ ಯೇ ದತ್ತಾ ವರಾ ದತ್ತಾಃ ಸದೈವತೇ ।
ತವಾಪಿ ಪ್ರಾಪ್ತಃ ಕಾಲಶ್ಚ ಸಮೀಪೇ ವರವರ್ಣಿನಿ ॥ ೧೭೪ ॥
ಅಭರ್ತೃಕಾಯಾ ನಾರ್ಯಾಶ್ಚ ನ ಸ್ವರ್ಗೋ ಮೋಕ್ಷ ಏವ ಚ ।
ಯಥೈವ ವೃದ್ಧಕನ್ಯಾಯಾಃ ಸರಸ್ವತ್ಯಾಃ ತಟೇ ಶುಭೇ ॥ ೧೭೫ ॥
ತಸ್ಮಾತ್ತ್ವಮತ್ರ ತೀರ್ಥೇ ಚ ಮಹಾಕಾಲಮಿತಿ ಸ್ಮೃತಂ ।
ಸಿದ್ಧಿಂ ಗತಂ ವೃಣು ಭದ್ರೇ ಪತಿತ್ವೇ ವರವರ್ಣಿನಿ ॥ ೧೭೬ ॥
ತತಃ ಸಾ ರುದ್ರವಾಕ್ಯೇನ ವರಯಾಮಾಸ ತಂ ಪತಿಂ ।
ರುದ್ರಲೋಕಂ ಯಯೌ ಚಾಪಿ ಮಹಾಕಾಲಸಮನ್ವಿತಾ ॥ ೧೭೭ ॥
ತತ್ರ ತಾಂ ಪಾರ್ವತೀ ಪ್ರಾಹ ಸಮಾಲಿಂಗ್ಯ ಪ್ರಹರ್ಷಿತಾ ।
ಯಸ್ಮಾತ್ತ್ವಯಾ ಚಿತ್ರವಚ್ಚ ಲಿಖಿತಾ ಪೃಥಿವೀ ಶುಭೇ ॥ ೧೭೮ ॥
ಚಿತ್ರಲೇಖೇತಿ ನಾಮ್ನಾ ತ್ವಂ ತಸ್ಮಾದ್ಭವ ಸಖೀ ಮಮ ।
ತತಃ ಸಖೀ ಸಮಭವಚ್ಚಿತ್ರಲೇಖೇತಿ ಸಾ ಶುಭಾ ॥ ೧೭೯ ॥
ಯಯಾನಿರುದ್ಧಃ ಕಥಿತ ಉಷಾಯಾಃ ಪತಿರುತ್ತಮಃ ।
ಯೋಗಿನೀನಾಂ ವರಿಷ್ಠಾಯಾ ಮಹಾಕಾಲಸ್ಯ ವಲ್ಲಭಾ ॥ ೧೮೦ ॥

---

೧೭೪–೧೭೫. ಬರ್ಕರೇಶ್ವರನ ವಿಷಯದಲ್ಲಿ ನಾನಿತ್ತ ವರಗಳೆಲ್ಲವೂ ಯಾವಾಗಲೂ ನಿನ್ನಲ್ಲಿ ಸಿದ್ಧಿಸುವುವು. ಎಲೌ ಮಂಗಳಗಾತ್ರಿಯೆ! ನಿನಗೂ ಶರೀರವಿಯೋಗದ ಕಾಲವು ಸಮೀಪದಲ್ಲಿಯೇ ಇರುವುದು. ಪತಿಯಿಲ್ಲದ ನಾರಿಗೆ ಸ್ವರ್ಗವಾಗಲಿ ಮೋಕ್ಷವಾಗಲಿ ಸಿಕ್ಕುವುದಿಲ್ಲವು. ಆಕೆಯ ಗತಿಯು ಪವಿತ್ರವಾದ ಸರಸ್ವತೀ ನದಿಯ ತೀರದಲ್ಲಿ ವಾಸಿಸುವ ವೃದ್ಧಕುಮಾರಿಯ ಜೀವನದಂತಾಗುವುದು.

೧೭೬. ಆದುದರಿಂದ ನೀನು ಈ ಕ್ಷೇತ್ರದಲ್ಲಿಯೇ ತಪಸ್ಸನ್ನು ಮಾಡಿ ಸಿದ್ಧಿಯನ್ನು ಪಡೆದ ಮಹಾಕಾಲನೆಂಬುವನನ್ನು ಪತಿಯಾಗಿ ಸ್ವೀಕರಿಸು.''

೧೭೭. ಬಳಿಕ ರುದ್ರ ವಚನಾನುಸಾರವಾಗಿ ಆಕೆಯು ಆತನನ್ನು ಪತಿಯೆಂದು ವರಿಸಿ ಆತನೊಡನೆ ರುದ್ರಲೋಕವನ್ನು ಸೇರಿದಳು.

೧೭೮–೧೮೦. ಆಕೆಯನ್ನು ಕಂಡು ಪಾರ್ವತಿಯು ಸಂಭ್ರಮದಿಂದ ಆಲಿಂಗಿಸಿ ಹೇಳಿದಳು:—''ಎಲೌ ಶುಭಾಂಗಿಯೇ! ನೀನು ಭೂಮಂಡಲವನ್ನು ಚಿತ್ರದಂತೆ ವಿಭಜಿಸಿ ಲೇಖನಮಾಡಿದುದರಿಂದ ನಿನಗೆ ಚಿತ್ರಲೇಖೆಯೆಂಬ ಹೆಸರು ಸಲ್ಲುವುದು. ಆ ಹೆಸರಿನಿಂದಲೇ ನೀನು ನನಗೆ ಸಖಿಯಾಗಿರು.'' ಇಂತು ಕುಮಾರಿಕೆಯು ಚಿತ್ರಲೇಖೆಯೆಂಬ ಹೆಸರಿನಿಂದ ಪಾರ್ವತಿಗೆ ಪ್ರಿಯಸಖಿಯಾದಳು. ಆಕೆಯೇ ಉಷಾದೇವಿಗೆ ಉತ್ತಮನಾದ ಪತಿಯೆಂಬ ಅನಿರುದ್ಧನನ್ನು ತೋರಿಸಿಕೊಟ್ಟಳು. ಆಕೆಯೇ ಮಹಾಕಾಲನ ಪತ್ನಿಯಾಗಿ ಯೋಗಿನಿಯರೆಲ್ಲರಿಗೂ ಉತ್ತಮಳೆನಿಸಿರುವಳು.

**ಅಪ್ಸು ಸಾ ವಾರ್ಷಿಕಂ ಬಿಂದುಂ ಪೂರ್ಣೇ ವರ್ಷಶತೇ ಪಪೌ ।**
**ತಪಶ್ಚರಂತೀ ತಸ್ಮಾತ್ಸಾ ಪ್ರೋಚ್ಯತೇ ಚಾಪ್ಸರಾ ದಿವಿ ॥ ೧೮೧ ॥**
**ಏವಂ ವಿಧಾ ಕುಮಾರೀ ಸಾ ಲಿಂಗಮೇತದ್ಧಿ ಫಾಲ್ಗುನ ।**
**ಸ್ಥಾಪಯಾಮಾಸ ಶಿವದಂ ಬರ್ಕರೇಶ್ವರಸಂಜ್ಞಿತಂ ॥ ೧೮೨ ॥**
**ತಸ್ಮಾದತ್ರ ನೃಣಾಂ ದಾಹಶ್ಚಾಸ್ಥಿಕ್ಷೇಪಶ್ಚ ಭಾರತ ।**
**ಪ್ರಯಾಗಾದಧಿಕೌ ಪ್ರೋಕ್ತೌ ಮಹೇಶಸ್ಯ ವಚೋ ಯಥಾ ॥ ೧೮೩ ॥**

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪ್ರಥಮೇ ಮಾಹೇಶ್ವರಖಂಡೇ ಕೌಮಾರಿಕಾಖಂಡೇ
"ಬರ್ಕರೇಶ್ವರ ಮಾಹಾತ್ಮ್ಯವರ್ಣನಂ"ನಾಮ ಏಕೋನಚತ್ವಾರಿಂಶೋಽಧ್ಯಾಯಃ

---

೧೮೧. ಆಕೆಯು ಒಂದು ನೂರು ವರ್ಷ ತಪಸ್ಸನ್ನು ಮಾಡುವವಳಾಗಿ ನೀರಿನಲ್ಲಿ ನಿಂತು ಕೇವಲ ವರ್ಷೋದಕದ ಬಿಂದುಗಳಿಂದಲೇ ಪ್ರಾಣಗಳನ್ನು ಧರಿಸಿದ್ದಳು. ಆದುದರಿಂದಲೇ ಸ್ವರ್ಗದಲ್ಲಿ ಆಕೆಗೆ ಅಪ್ಸರೆ ಎಂದು ಹೆಸರಾಯಿತು.

೧೮೨. ಎಲೈ ಅರ್ಜುನನೆ! ಆ ಕುಮಾರಿಕೆಯು ಇಂತಹ ಮಾಹಾತ್ಮ್ಯ ಯುಳ್ಳವಳು. ಆಕೆಯು ಬರ್ಕರೇಶ್ವರನೆಂಬ ಹೆಸರಿನಿಂದ ಈ ಲಿಂಗವನ್ನು ಸ್ಥಾಪನೆ ಮಾಡಿದಳು. ಇದು ಅತ್ಯಂತ ಶುಭಪ್ರದವಾದುದು.

೧೮೩. ಆದುದರಿಂದ ಯಾರ ಮೃತಕಳೇಬರವು ಈ ಕ್ಷೇತ್ರದಲ್ಲಿ ದಹನ ಸಂಸ್ಕಾರವನ್ನು ಪಡೆಯುವುದೋ, ಯಾರ ಅಸ್ಥಿಗಳು ಮಹೀಸಾಗರಸಂಗಮದಲ್ಲಿ ಹಾಕಲ್ಪಡುವುವೊ, ಅವರಿಗೆ ಈ ಎರಡು ಕರ್ಮಗಳೂ ಪ್ರಯಾಗ ಕ್ಷೇತ್ರ ಸಂಸ್ಕಾರಕ್ಕಿಂತಲೂ ಅಧಿಕ ಫಲಪ್ರದಗಳೆಂದು ಮಹೇಶ್ವರನ ಪ್ರತಿಜ್ಞೆ ಯಿರುವುದು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಎರಡನೆಯ ಕೌಮಾರಿಕಾಖಂಡದಲ್ಲಿ
"ಬರ್ಕರೇಶ್ವರ ಮಾಹಾತ್ಮ್ಯವರ್ಣನ"ವೆಂಬ ಮೂವತ್ತೊಂಬತ್ತನೆಯ
ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಚತ್ವಾರಿಂಶೋಽಧ್ಯಾಯಃ

## ಮಹಾಕಾಲ ಕರಂಧಮ ಸಂವಾದೇ ಚತುರ್ಯುಗವ್ಯವಸ್ಥಾ ವರ್ಣನಂ

ಅರ್ಜುನ ಉವಾಚ:—

**ಮಹಾಕಾಲಸ್ತ್ವಸೌ ಕಶ್ಚ ಕಥಂ ಸಿದ್ಧಿಮುಪಾಗತಃ ।**
**ಅಸ್ಮಿಂಸ್ತೀರ್ಥೇ ಮುನಿಶ್ರೇಷ್ಠ ಮಹದಾಶ್ಚರ್ಯಮತ್ರ ಮೇ ॥ ೧ ॥**
**ಸರ್ವಮೇತತ್ಸಮಾಖ್ಯಾಹಿ ಶ್ರದ್ದಧಾನಾಯ ಪೃಚ್ಛತೇ ॥ ೨ ॥**

ನಾರದ ಉವಾಚ:—

**ನಮಸ್ಕೃತ್ಯ ಮಹಾಕಾಲಂ ವರದಂ ಸ್ಥಾಣುಮವ್ಯಯಂ ।**
**ಶಕ್ತಿತಶ್ಚರಿತಂ ತಸ್ಯ ವಕ್ಷ್ಯೇ ಪಾಂಡುಕುಲೋದ್ವಹ ॥ ೩ ॥**
**ವಾರಾಣಸ್ಯಾಂ ಪುರಿ ಪುರಾ ಬಭೂವ ಜಪತಾಂ ವರಃ ।**
**ರುದ್ರಜಾಪೀ ಮಹಾಭಾಗೋ ಮಾಂಟಿರ್ನಾಮ ಮಹಾಯಶಾಃ ॥ ೪ ॥**
**ತಸ್ಯಾಪುತ್ರಸ್ಯ ಪುತ್ರಾರ್ಥೇ ರುದ್ರಾನ್ಸಂಜಪತಃ ಕಿಲ ।**
**ಗತಂ ವರ್ಷಶತಂ ತುಷ್ಟಸ್ತತಸ್ತಂ ಪ್ರಾಹ ಶಂಕರಃ ॥ ೫ ॥**

---

## ಕನ್ನಡದ ಅನುವಾದ

### ಮಹಾಕಾಲ ಕರಂಧಮ ಸಂವಾದ — ಚತುರ್ಯುಗವ್ಯವಸ್ಥಾ ವರ್ಣನ

೧. ಅರ್ಜುನನು ಕೇಳುತ್ತಾನೆ:—"ಎಲೈ ಮುನಿವರ್ಯನೆ! ಈ ಮಹಾಕಾಲನೆಂಬವನು ಯಾರು! ಈ ತೀರ್ಥದಲ್ಲಿ ಹೇಗೆ ಮೋಕ್ಷವನ್ನು ಹೊಂದಿದನು. ಈ ವಿಷಯದಲ್ಲಿ ನನಗೆ ಅತ್ಯಂತ ಆಶ್ಚರ್ಯವುಂಟಾಗಿರುವುದು.

೨. ಆದುದರಿಂದ ಶ್ರದ್ಧೆಯೊಡನೆ ಕೇಳುತ್ತಿರುವ ನನಗೆ ಈ ಚರಿತ್ರೆಯನ್ನು ಆಮೂಲಾಗ್ರವಾಗಿ ಹೇಳುವವನಾಗು."

೩. ನಾರದನು ಹೇಳುತ್ತಾನೆ:—ಎಲೈ ಪಾಂಡವಶ್ರೇಷ್ಠನೆ! ವರಪ್ರದನೂ ನಾಶರಹಿತನೂ ಆದ ಮಹಾಕಾಲೇಶ್ವರನಿಗೆ ನಮಸ್ಕರಿಸಿ ನೀನು ಕೇಳಿದ ಚರಿತ್ರೆಯನ್ನು ನನಗೆ ತಿಳಿದಮಟ್ಟಿಗೆ ಹೇಳುವೆನು, ಕೇಳು.

೪. ಪೂರ್ವದಲ್ಲಿ ಕಾಶೀಕ್ಷೇತ್ರದಲ್ಲಿ ರುದ್ರಜಪದಲ್ಲಿ ಪಾರಂಗತನೂ, ಮಹಾ ಭಾಗ್ಯವಂತನೂ ವಿಸ್ತಾರವಾದ ಯಶಸ್ಸುಳ್ಳವನೂ ಆದ ಮಾಂಟಿಯೆಂಬ ಹೆಸರಿನ ಬ್ರಾಹ್ಮಣೋತ್ತಮನೊಬ್ಬನಿದ್ದನು.

೫. ಆತನು ಸಂತಾನರಹಿತನಾಗಿ ಪುತ್ರರನ್ನು ಪಡೆಯಬೇಕೆಂಬ ಇಚ್ಛೆಯಿಂದ ಒಂದುನೂರು ವರ್ಷಗಳ ಕಾಲ ರುದ್ರಜಪವನ್ನು ಮಾಡಲು ಶಂಕರನು ಸಂತುಷ್ಟನಾಗಿ ಆತನಿಗೆ ಇಂತೆಂದನು:

ಮಾಂಟೇ ತವ ಸುತೋ ಧೀಮಾನ್ಮತ್ಪ್ರಭಾವಪರಾಕ್ರಮಃ ।
ವಂಶಸ್ಯ ತವ ಸರ್ವಸ್ಯ ಸಮುದ್ಧರ್ತಾ ಭವಿಷ್ಯತಿ ॥ ೬ ॥
ಇತಿ ಶ್ರುತ್ವಾ ರುದ್ರವಚೋ ಮಾಂಟಿರ್ಹರ್ಷಂ ಪರಂ ಗತಃ ।
ತತಃ ಕಾಲೇ ಕಿಯನ್ಮಾತ್ರೇ ಪತ್ನೀ ಮಾಂಟೇರ್ಮಹಾತ್ಮನಃ ।
ದಧಾರ ಗರ್ಭಂ ಚಟಿಕಾ ತಪೋಮೂರ್ತಿಧರಾ ಯಥಾ ॥ ೭ ॥
ತಸ್ಯ ಗರ್ಭಸ್ಯ ವರ್ಷಾಣಿ ಚತ್ವಾರಿ ಕಿಲ ಸಂಯಯುಃ ॥ ೮ ॥
ನ ಪುನರ್ಮಾತುರುದರಂ ತ್ಯಕ್ತ್ವಾ ನಿರ್ಗಚ್ಛತೇ ಬಹಿಃ ।
ತತೋ ಮಾಂಟಿರುಪಾಮಂತ್ರ್ಯ ಸಾಮಭಿಸ್ತಮುವೋಚತ ॥ ೯ ॥
ವತ್ಸ ಸಾಮಾನ್ಯಪುತ್ರೋಽಪಿ ಪಿತ್ರೋಃ ಸುಖಕರಃ ಸದಾ ।
ಶುದ್ಧಾಯಾಂ ಮಾತರಿ ಭವೋ ಮತ್ತಃ ಕಿಂ ಪೀಡಯಸ್ಯಲಂ ॥ ೧೦ ॥
ವತ್ಸ ಮಾನುಷ್ಯವಾಸಸ್ಯ ಸ್ಪೃಹಾ ತುಭ್ಯಂ ಕಥಂ ನ ಹಿ ।
ಯತ್ರ ಧರ್ಮಾರ್ಥಕಾಮಾನಾಂ ಮೋಕ್ಷಸ್ಯಾಪಿ ಚ ಸಂತತಿಃ ॥ ೧೧ ॥

---

೬. "ಎಲೈ ಮಾಂಟಿಯೆ! ನನ್ನ ಅನುಗ್ರಹದಿಂದ ನಿನಗೆ ಬುದ್ಧಿವಂತನೂ ಬಲಪರಾಕ್ರಮ ಸಹಿತನೂ ಆದ ಉತ್ತಮ ಪುತ್ರನು ಜನಿಸಿ ನಿನ್ನ ವಂಶವನ್ನೆಲ್ಲ ಉದ್ಧಾರಮಾಡುವನು."

೭. ಸದಾಶಿವನ ಈ ಮಾತುಗಳನ್ನು ಕೇಳಿ ಮಾಂಟಿಯು ಅತ್ಯಂತ ಹರ್ಷವನ್ನು ಹೊಂದಿದನು. ಬಳಿಕ ಕೆಲವು ಕಾಲವು ಕಳೆಯಲು ಆತನ ಪತ್ನಿಯಾದ ಚಟಿಕೆಯೆಂಬುವಳು ತಪಸ್ಸಿನ ಮೂರ್ತಿಯನ್ನೇ ತನ್ನಲ್ಲಿ ನೆಲೆಗೊಳಿಸಿದವಳಂತೆ ಕಾಣುತ್ತ ಆ ಮಹಾತ್ಮನಿಂದ ಉತ್ತಮವಾದ ಗರ್ಭವನ್ನು ಧರಿಸಿದಳು.

೮. ಆ ಗರ್ಭವು ನಾಲ್ಕುವರ್ಷಗಳು ಕಳೆದರೂ ತಾಯಿಯ ಉದರವನ್ನು ಬಿಟ್ಟು ಹೊರಕ್ಕೆ ಬರಲೊಲ್ಲದು.

೯–೧೦. ಆಗ ಮಾಂಟಿಯು ಸಾಮಮಂತ್ರಗಳಿಂದ ಆ ಗರ್ಭವನ್ನು ಆಹ್ವಾನಿಸಿ ಇಂತೆಂದನು:—"ಎಲೈ ಮಗುವೆ! ಸಾಧಾರಣ ಮಗನೂ ಕೂಡ ತಾಯಿತಂದೆಗಳಿಗೆ ಅತ್ಯಂತ ಸಂತೋಷವನ್ನುಂಟುಮಾಡುವನಲ್ಲವೆ! ಹೀಗಿರುವಲ್ಲಿ ನನ್ನಿಂದ ನೀನು ಪರಿಶುದ್ಧಳಾದ ತಾಯಿಯಲ್ಲಿ ಗರ್ಭವಾಗಿ ನಿಂತು ಸುಮ್ಮನೆ ನಮ್ಮನ್ನೇಕೆ ಪೀಡಿಸುತ್ತಿರುವೆ?

೧೧. ವತ್ಸ! ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ಚತುರ್ವಿಧ ಪುರುಷಾರ್ಥಗಳನ್ನನುಷ್ಠಾನ ಮಾಡಿ ಪುಣ್ಯಪರಂಪರೆಯನ್ನು ಹೊಂದಲು ಸಾಧನವಾದ ಮನುಷ್ಯಜನ್ಮವನ್ನು ಪಡೆಯುವ ಇಚ್ಛೆಯು ನಿನಗೆ ಇಲ್ಲದೆ ಹೋದುದೇಕೆ?

ಕದಾ ಮನುಷ್ಯಾ ಜಾಯೇಮ ಪೂಜಾ ಯತ್ರ ಮಹಾಫಲಾ ।
ಪಿತೄಣಾಂ ದೇವತಾನಾಂ ಚ ನಾನಾಧರ್ಮಾಶ್ಚ ಯತ್ರ ಹಿ ।
ಇತಿ ಭೂತಾನಿ ಶೋಚಂತಿ ನಾನಾಯೋನಿಗತಾನ್ಯಪಿ ॥ ೧೨ ॥
ತತ್ತ್ವಂ ಮಾನುಷ್ಯಮತುಲಂ ಸ್ಪೃಹಣೀಯಂ ದಿವೌಕಸಾಂ ।
ಅನಾದೃತ್ಯ ಕಥಂ ಬ್ರೂಹಿ ಸ್ಥಿತಶ್ಚೋದರ ಏವ ಚ ॥ ೧೩ ॥

ಗರ್ಭ ಉವಾಚ:—

ತಾತ ಜಾನಾಮ್ಯಹಂ ಸರ್ವಮೇತತ್ಪರಮದುರ್ಲಭಂ ।
ಕಿಂ ತು ಬಿಭೇಮಿ ಚಾತಿಮಾತ್ರಂ ಕಾಲಮಾರ್ಗಸ್ಯ ನಿತ್ಯಶಃ ॥ ೧೪ ॥
ದ್ವೌ ಮಾರ್ಗೌ ಕಿಲ ದೇವೇಷು ಪ್ರೋಕ್ತೌ ಕಾಲೋಽರ್ಚಿರೇವ ಚ ।
ಅರ್ಚಿಷಾ ಮೋಕ್ಷಮಾಯಾಂತಿ ಕಾಲಮಾರ್ಗೇಣ ಕರ್ಮಣಿ ॥ ೧೫ ॥
ಸ್ವರ್ಗೇ ವಾ ನರಕೇ ವಾಪಿ ಕಾಲಮಾರ್ಗಗತೋಽಹ್ಯಯಂ ।
ನ ಶರ್ಮ ಲಭತೇ ಕ್ವಾಪಿ ವ್ಯಾಧವಿದ್ಧಮೃಗೋ ಯಥಾ ॥ ೧೬ ॥

---

೧೨. ನಾನಾ ಯೋನಿಗಳಲ್ಲಿ ಜನಿಸುವ ಪ್ರಾಣಿಗಳೂ ಕೂಡ 'ಯಾವ ಜನ್ಮದಲ್ಲಿ ಪೂಜೆಯು ಮಹಾ ಫಲದಾಯಕವಾಗಿರುವುದೋ, ಯಾವ ಜನ್ಮದಲ್ಲಿ ಪಿತೃಗಳಿಗೂ, ದೇವತೆಗಳಿಗೂ ಪೂಜೆಮಾಡುವ ಅನೇಕ ಧರ್ಮಗಳನ್ನು ಅನುಷ್ಠಾನ ಮಾಡಬಹುದೋ, ಅಂತಹ ಮನುಷ್ಯರಾಗಿ ಎಂದಿಗೆ ಜನಿಸಿಯೇವು' ಎಂದು ದುಃಖಪಡುತ್ತಿರುವರು.

೧೩. ಹೀಗಿರುವಲ್ಲಿ ನೀನು ದೇವತೆಗಳಿಗೂ ಇಷ್ಟವಾಗಿರತಕ್ಕ ಮನುಷ್ಯ ಜನ್ಮವನ್ನು ನಿರಾಕರಿಸಿ ತಾಯಿಯ ಗರ್ಭದಲ್ಲಿಯೇ ನಿಂತಿರಲು ಕಾರಣವೇನು?"

೧೪. ಗರ್ಭವು ಹೇಳುತ್ತದೆ :— "ತಂದೆಯೆ! ಮನುಷ್ಯ ಜನ್ಮವು ಯಾವಾಗಲೂ ಪರಮ ದುರ್ಲಭವೆಂಬುದನ್ನು ನಾನು ಚೆನ್ನಾಗಿ ಬಲ್ಲೆನು. ಆದರೂ ಹುಟ್ಟಿದ ಮೇಲೆ ಕಾಲಮಾರ್ಗದಲ್ಲಿ ಬೀಳುವ ಭಯವು ನನ್ನನ್ನು ಬಹುವಾಗಿ ಬಾಧಿಸುತ್ತಿರುವುದು.

೧೫. ಜೀವನಿಗೆ ಕಾಲಮಾರ್ಗವೆಂದೂ, ಅರ್ಚಿರ್ಮಾರ್ಗವೆಂದೂ ಎರಡು ಗತಿಗಳು ವೇದಗಳಲ್ಲಿ ಹೇಳಲ್ಪಟ್ಟಿರುವುದಲ್ಲವೆ! ಅರ್ಚಿರ್ಮಾರ್ಗದಿಂದ ಜೀವರು ಮೋಕ್ಷವನ್ನೂ, ಕಾಲಮಾರ್ಗದಿಂದ ಕರ್ಮಭೂಮಿಗಳಾದ ಸ್ವರ್ಗಾದಿ ಲೋಕಗಳನ್ನೂ ಪಡೆಯುವರು.

೧೬. ಸ್ವರ್ಗದಲ್ಲಿಯಾಗಲಿ, ನರಕದಲ್ಲಿಯಾಗಲಿ ಜೀವನು ಕಾಲಮಾರ್ಗದಲ್ಲಿ ಸಿಕ್ಕಿರುವವನೇ ಆಗಿರುವನು. ಅಲ್ಲದೆ ಬೇಡನಿಂದ ಹಿಂಸೆಗೊಂಡ ಮೃಗದಂತೆ ಆಗ ಅವನಿಗೆ ಯಾವಾಗಲೂ ಸುಖವೆಂಬುದೇ ಸಿಕ್ಕುವುದಿಲ್ಲ.

ತಸ್ಯೈವ ಹೇತೋಃ ಪ್ರಯತೇತ್ಕೋವಿದೋ ಯನ್ನ ದುಃಖವಿತ್ ।
ಕಾಲೇನ ಘೋರರೂಪೇಣ ಗಂಭೀರೇಣ ಸಮಾಹಿತಃ ॥ ೧೭ ॥
ತಚ್ಛ್ರೇನ್ಮಮ ಮನಸ್ತಾತ ನಾನಾದೋಷೈರ್ನಮೋಹ್ಯತೇ ।
ತತೋಽಹಂ ದುರ್ಲಭಂ ಜನ್ಮ ಮಾನುಷ್ಯಂ ಶೀಘ್ರಮಾಪ್ನುಯಾಂ ॥ ೧೮ ॥
ತತಸ್ತಸ್ಯ ಪಿತಾ ಪಾರ್ಥ ಕಾಂದಿಶೀಕೋ ಮಹೇಶ್ವರಂ ।
ಜಗಾಮ ಶರಣಂ ದೇವಂ ತ್ರಾಹಿ ತ್ರಾಹಿ ಮಹೇಶ್ವರ ॥ ೧೯ ॥
ತ್ವಾಂ ವಿನಾ ಕೋಽಪರೋ ದೇವ ಪುತ್ರಸ್ಯಾಭೀಷ್ಟದೋಽಸ್ತಿ ಮೇ ।
ತ್ವಯೈವ ದತ್ತಸ್ತ್ವಂ ಚಾಮುಂ ಜನ್ಮ ಪ್ರಾಪಯ ಮೇ ಸುತಂ ॥ ೨೦ ॥
ತತಸ್ತಸ್ಯಾತಿಭಕ್ತ್ಯಾಸೌ ಪ್ರಾಹ ತುಷ್ಟೋ ಮಹೇಶ್ವರಃ ।
ವಿಭೂತೀಃ ಸ್ವಾ ಧರ್ಮಜ್ಞಾನ ವೈರಾಗ್ಯೈಶ್ವರ್ಯಮೇವ ಚ ॥ ೨೧ ॥
ವಿಪರೀತಶ್ಚ ಶೀಘ್ರಂ ಭೋ ಮಾಂಟಿಪುತ್ರಃ ಪ್ರಬೋಧ್ಯತಾಂ ।
ತತಸ್ತಾ ದ್ಯೋತಯಂತ್ಯಶ್ಚ ವಿಭೂತ್ಯೋ ಗರ್ಭಮೂಚಿರೇ ॥ ೨೨ ॥

---

೧೭. ಆದುದರಿಂದ ಘೋರಸ್ವರೂಪವುಳ್ಳದೂ, ಅಪಾರವಾದುದೂ ಆದ ಕಾಲಮಾರ್ಗವೆಂಬ ಭವಸಮುದ್ರದ ದುಃಖವೇ ಇಲ್ಲದ ಮೋಕ್ಷಮಾರ್ಗಕ್ಕಾಗಿಯೇ ಬುದ್ಧಿವಂತನಾದವನು ಸಮಾಹಿತ ಮನಸ್ಕನಾಗಿ ಪ್ರಯತ್ನಪಡಬೇಕು.

೧೮. ಎಲೈ ತಂದೆಯೆ! ನನ್ನ ಮನಸ್ಸು ಈ ಅನೇಕ ದೋಷಗಳಿಂದ ಮೋಹಗೊಳ್ಳುವುದಿಲ್ಲವೆಂಬ ಭರವಸೆಯಿದ್ದಿದ್ದರೆ, ನಾನು ಶೀಘ್ರವಾಗಿಯೇ ದುರ್ಲಭವಾದ ಈ ಮನುಷ್ಯಜನ್ಮವನ್ನು ಪಡೆಯುತ್ತಿದ್ದೆನು.''

೧೯. ಎಲೈ ಅರ್ಜುನನೆ! ಆಗ ತಂದೆಯಾದ ಮಾಂಟಿಯು ಅತ್ಯಂತ ಭಯಗ್ರಸ್ತನಾಗಿ ದೇವದೇವನಾದ ಮಹೇಶ್ವರನನ್ನು ಮತ್ತೆ ಶರಣುಹೊಕ್ಕು ಪ್ರಾರ್ಥಿಸಿದನೆಂತನೆ:—'' ಎಲೈ ಮಹೇಶ್ವರನೆ! ನನ್ನನ್ನು ಕಾಪಾಡು.

೨೦. ನನ್ನ ಮಗನ ಅಭೀಷ್ಟವನ್ನು ನೆರವೇರಿಸುವುದಕ್ಕೆ ನೀನಲ್ಲದೆ ಮತ್ತಾರು ಶಕ್ತರು? ಈ ಮಗನನ್ನೂ ನೀನೆ ದಯಪಾಲಿಸಿದೆಯಲ್ಲವೆ? ಈಗ ನೀನೆ ಅನುಗ್ರಹಿಸಿ ಈತನಿಗೆ ಜನ್ಮವನ್ನುಂಟುಮಾಡು.''

೨೧. ಆತನ ಉತ್ತಮ ಭಕ್ತಿಗೆ ಮೆಚ್ಚಿ ಮಹಾದೇವನು ಸಂತೋಷದಿಂದ ಧರ್ಮ, ಜ್ಞಾನ, ವೈರಾಗ್ಯ, ಐಶ್ವರ್ಯಗಳೆಂಬ ತನ್ನ ವಿಭೂತಿಗಳಿಗೆ ಅಪ್ಪಣೆ ಮಾಡಿದನು.

೨೨. ''ಎಲೈ ವಿಭೂತಿಗಳೇ! ಈ ಮಾಂಟಿಪುತ್ರನು ಧರ್ಮಭ್ರಾಂತಿಯಿಂದ ಮೋಹಗೊಂಡಿರುವನು. ಇವನನ್ನು ಎಚ್ಚರಗೊಳಿಸಿರಿ.'' ಆಗ ಅವುಗಳೆಲ್ಲವೂ ತೇಜೋಮಯಗಳಾಗಿ ಆ ಗರ್ಭವನ್ನು ಕುರಿತು ಹೇಳತೊಡಗಿದುವು.

ಮಹಾಮತೇ ಮಾಂಟಿಪುತ್ರ ನ ಧಾರ್ಯಂತೇ ಭಯಂ ಹೃದಿ ।
ಚತ್ವಾರಸ್ತ್ವಾಂ ಹಿ ಧರ್ಮಾದ್ಯಾ ಮನಸ್ತ್ಯಕ್ಷ್ಯಾಮಹೇ ನ ತೇ ॥ ೨೩ ॥
ತತೋಽಪರಾಸ್ತ್ವಧರ್ಮಾದ್ಯಾಃ ಪ್ರೋಚುರ್ನೈವ ತಥಾ ವಯಂ ।
ಭವಿಷ್ಯಾಮೋ ಮನಸ್ತುಭ್ಯಮಸ್ಮತ್ತ್ವ ಭಯಂ ನ ಹಿ ॥ ೨೪ ॥
ಇತ್ಯುಕ್ತೋ ಸ ವಿಭೂತೀಭಿಃ ಶೀಘ್ರಮೇವ ಕುಮಾರಕಃ ।
ನಿಃಸಸಾರ ಬಹಿರ್ಜಾತಶ್ಚ ಕಂಪೇಽತಿರುರೋದ ಚ ॥ ೨೫ ॥
ತತೋ ವಿಭೂತಯಃ ಪ್ರಾಹುರ್ಮಾಂಟೇ ತವ ಸುತಸ್ತ್ವಸೌ ।
ಅದ್ಯಾಪಿ ಕಾಲಮಾರ್ಗಸ್ಯ ಭೀತಃ ಕಂಪತಿ ರೋದಿತಿ ॥ ೨೬ ॥
ಕಾಲಭೀತಿರಿತಿ ಖ್ಯಾತಸ್ತಸ್ಮಾದೇಷ ಭವಿಷ್ಯತಿ ।
ಇಶಿ ದತ್ವಾ ವರಂ ತಾಶ್ಚ ಮಹಾದೇವಾಂತಿಕಂ ಯಯುಃ ॥ ೨೭ ॥
ಸೋಽಪಿ ಬಾಲಃ ಪ್ರವವೃಧೇ ಶುಕ್ಲಪಕ್ಷ ಇವೋಡುಪಃ ।
ಸಂಸ್ಕೃತಃ ಸ ಚ ಸಂಸ್ಕಾರೈರ್ಧೀಮಾನ್ಪಶುಪತಿವ್ರತೀ ॥ ೨೮ ॥
ಪಂಚಮಂತ್ರಾನ್ಜಪನ್ಬುದ್ಧಸ್ತೀರ್ಥಯಾತ್ರಾಪರೋಽಭವತ್ ।
ರುದ್ರಕ್ಷೇತ್ರೇಷು ಸರ್ವೇಷು ಜಪನ್ಮಂತ್ರಾಂಶ್ಚ ಭಾರತ ॥ ೨೯ ॥

---

೨೩. "ಎಲೈ ಮಹಾತ್ಮನಾದ ಮಾಂಟಿಪುತ್ರನೆ! ನಿನ್ನ ಮನಸ್ಸಿನಲ್ಲಿ ಸ್ವಲ್ಪವೂ ಭಯವನ್ನಿಟ್ಟುಕೊಳ್ಳಬೇಡ. ಧರ್ಮವೇ ಮೊದಲಾದ ಶಿವವಿಭೂತಿಗಳಾದ ನಾವು ನಾಲ್ವರೂ ನಿನ್ನ ಮನಸ್ಸನ್ನು ಬಿಟ್ಟು ಎಂದಿಗೂ ಹೊರಡುವುದಿಲ್ಲವು."

೨೪. ಬಳಿಕ ಇವುಗಳಿಗೆ ವಿಪರೀತಗಳಾದ ಅಧರ್ಮವೇ ಮೊದಲಾದವು ಗಳು, "ನಾವು ನಿನ್ನ ಮನಸ್ಸನ್ನು ಎಂದಿಗೂ ಆಕ್ರಮಿಸುವುದಿಲ್ಲ. ನಮ್ಮ ಭಯವು ನಿನಗೆ ಸ್ವಲ್ಪವೂ ಬೇಡ" ಎಂದು ಅಭಯವನ್ನಿತ್ತುವು.

೨೫. ಇಂತು ವಿಭೂತಿಗಳಿಂದ ಪ್ರತಿಜ್ಞೆಯನ್ನು ಪಡೆದವನಾಗಿ ಆ ಮಗುವು ತಾಯಿಯ ಗರ್ಭದಿಂದ ಹೊರಬಿದ್ದು ನಡುಗುತ್ತ ಗಟ್ಟಿಯಾಗಿ ಅಳತೊಡಗಿತು.

೨೬. ಆಗಲಾ ವಿಭೂತಿಗಳು ಮಾಂಟಿಯನ್ನು ಕುರಿತು "ಎಲೈ ಬ್ರಾಹ್ಮಣನೆ! ಈ ನಿನ್ನ ಮಗನು ಈಗಲೂ ಕೂಡ ಕಾಲಮಾರ್ಗದಲ್ಲಿ ಬೀಳುವ ಭಯದಿಂದ ನಡುಗಿ ಅಳುತ್ತಿರುವನು.

೨೭–೨೯. ಆದುದರಿಂದ ಈತನು ಲೋಕದಲ್ಲಿ ಕಾಲಭೀತಿಯೆಂಬ ಹೆಸರಿ ನಿಂದ ಪ್ರಖ್ಯಾತನಾಗುವನು" ಎಂದು ವರವನ್ನು ಕೊಟ್ಟು ಮಹಾದೇವನನ್ನು ಸೇರಿದುವು. ಆ ಬಾಲಕನೂ ಕೂಡ ಶುಕ್ಲಪಕ್ಷದ ಚಂದ್ರನಂತೆ ದಿನೇ ದಿನೇ ಅಭಿವೃದ್ಧಿಯನ್ನು ಹೊಂದುತ್ತ ಕಾಲಕಾಲಕ್ಕೆ ಜಾತಕರ್ಮಾದಿ ಸಂಸ್ಕಾರಗಳನ್ನು ಪಡೆದು ಸುಸಂಸ್ಕೃತನಾಗಿ ಉತ್ತಮ ಶಿವಭಕ್ತನಾದನು. ಪಂಚರುದ್ರಮಂತ್ರ ಗಳನ್ನು ಜಪಿಸಿ ಶುದ್ಧನಾಗಿ ತೀರ್ಥಯಾತ್ರೆಗೆ ಹೊರಟನು. ತರುವಾಯ ಅವನು

ಕಾಲಭೀತಿರ್ಗುಪ್ತಕ್ಷೇತ್ರಗುಣಾನ್ಶ್ರುತ್ವಾಭ್ಯುಪಾಯಯೌ ।
ಸ್ನಾತ್ವಾ ತತೋ ಮಹೀತೋಯೇ ಜಪ್ತ್ವಾ ಮಂತ್ರಾಶ್ಚ ಕೋಟಿಶಃ ॥ ೩೦॥
ನಿವೃತ್ತೋ ನಾತಿದೂರೇಽಥ ಬಿಲ್ವವೃಕ್ಷಂ ದದರ್ಶ ಸಃ ।
ದೃಷ್ಟ್ವಾ ತಂ ತಸ್ಯ ಚಾಧಸ್ತಾಲ್ಲಕ್ಷಮೇಕಂ ಜಜಾಪ ಸಃ ॥ ೩೧ ॥
ಜಪತಸ್ತಸ್ಯ ವಿಪ್ರಸ್ಯ ಇಂದ್ರಿಯಾಣಿ ಲಯಂ ಯಯುಃ ।
ಕೇವಲಂ ಪರಮಾನಂದ ಸ್ವರೂಪೋಽಸಾವಭೂತ್‌ಕ್ಷಣಾತ್ ॥ ೩೨ ॥
ತಸ್ಯಾನಂದಸ್ಯ ನೌಪಮ್ಯಂ ಸ್ವರ್ಗಾದೀನಾಂ ಭವೇತ್ಕ್ವಚಿತ್ ।
ಗಂಗೋದಕಸ್ಯೇವ ಮಾನಂ ಕೇವಲಂ ಸ್ಯೋಪ್ಯಸಾವಪಿ ॥ ೩೩ ॥
ತತ್ರ ಲೀನೋ ಮುಹೂರ್ತೇನ ಪುನಶ್ಚಾಭೂದ್ಯಥಾ ಪುರಾ ।
ತತೋ ವಿಸಿಸ್ಮಯೇ ಪಾರ್ಥ ಕಾಲಭೀತಿರುವಾಚ ಹ ॥ ೩೪ ॥
ನಾಯಂ ಮಮ ಮಹಾನಂದೋ ವಾರಾಣಸ್ಯಾಂ ನ ನೈಮಿಷೇ ।
ನ ಪ್ರಭಾಸೇ ನ ಕೇದಾರೇ ನ ಚಾಪ್ಯಮರಕಂಟಕೇ ॥ ೩೫ ॥

---

ರುದ್ರಾಧ್ಯಾಯದ ಮಂತ್ರಗಳನ್ನು ಜಪಿಸುತ್ತ ಸಕಲ ಶಿವಕ್ಷೇತ್ರಗಳಲ್ಲಿಯೂ ಸ್ನಾನಮಾಡಿದನು.

೩೦-೩೧. ಎಲೈ ಅರ್ಜುನನೆ! ಇಂತು ಸಂಚರಿಸುತ್ತ ಕಾಲಕ್ರಮದಲ್ಲಿ ಗುಪ್ತಕ್ಷೇತ್ರದ ಮಹಿಮೆಗಳನ್ನು ಕೇಳಿ ಇಲ್ಲಿಗೆ ಬಂದನು. ಮಹೀಸಾಗರ ಸಂಗಮದಲ್ಲಿ ಸ್ನಾನಮಾಡಿ ಕೋಟಿ ರುದ್ರಜಪವನ್ನು ಮಾಡಿ ಹೊರಕ್ಕೆ ಬಂದು ಸಮೀಪದಲ್ಲಿಯೇ ಪವಿತ್ರವಾದ ಬಿಲ್ವವೃಕ್ಷವನ್ನು ಕಂಡನು. ಅದನ್ನು ಕಂಡು ಅದರ ಕೆಳಗೆ ಕುಳಿತು ಒಂದು ಲಕ್ಷ ನಾಮಗಳನ್ನು ಜಪಿಸಿದನು.

೩೨. ಇಂತು ಜಪಿಸುತ್ತಿರುವ ಆ ಬ್ರಾಹ್ಮಣೋತ್ತಮನ ಇಂದ್ರಿಯ ವೃತ್ತಿಗಳು ಲಯವನ್ನು ಹೊಂದಿದವು. ಕ್ಷಣಕಾಲದಲ್ಲಿಯೇ ಆತನು ಕೇವಲ ಸಚ್ಚಿದಾನಂದ ಸ್ವರೂಪನಾದನು.

೩೩. ಆ ಆನಂದಕ್ಕೆ ಸ್ವರ್ಗದಲ್ಲಿರುವ ಭೋಗಗಳು ಎಷ್ಟುಮಾತ್ರವೂ ಸರಿದೂಗಲಾರವು. ಗಂಗಾನದಿಯ ಪ್ರವಾಹವನ್ನೆಂತು ಅಳೆಯಲು ಅಸಾಧ್ಯವೊ ಈ ಆನಂದವೂ ಅಂತೆಯೇ ಹೇಳಲಶಕ್ಯವಾದುದು!

೩೪. ಇಂತು ಮುಹೂರ್ತಕಾಲಮಾತ್ರ ಆತನು ಬ್ರಹ್ಮೈಕ್ಯವನ್ನನುಭವಿಸಿ ಎಂದಿನಂತೆಯೇ ಮತ್ತೆ ಬಹಿರ್ಮುಖನಾದನು. ಎಲೈ ಪಾರ್ಥನೆ! ಬಳಿಕ ಕಾಲಭೀತಿಯು ಅತ್ಯಂತ ವಿಸ್ಮಯಗೊಂಡು ತನ್ನಲ್ಲಿಯೇ ಹೇಳತೊಡಗಿದನು.

೩೫. "ಇಂತಹ ಮಹದಾನಂದವು ನನಗೆ ಕಾಶಿಯಲ್ಲಾಗಲಿ, ನೈಮಿಷಾರಣ್ಯದಲ್ಲಾಗಲಿ, ಪ್ರಭಾಸಕ್ಷೇತ್ರದಲ್ಲಾಗಲಿ, ಕೇದಾರದಲ್ಲಾಗಲಿ, ಅಮರಕಂಟಕದಲ್ಲಾಗಲಿ ಉಂಟಾಗಲಿಲ್ಲವು.

ಶ್ರೀಪರ್ವತೇ ನ ಚಾನ್ಯತ್ರ ಯಾದೃಶೋಽದ್ಯ ಪ್ರವರ್ತತೇ ।
ನಿರ್ವಿಕಾರಾಣಿ ಸ್ವಚ್ಛಾನಿ ಗಂಗಾಂಭಾಂಸೀವ ಖಾನಿ ಮೇ ॥ ೩೬ ॥
ಭೂತೇಷು ಪರಮಾ ಪ್ರೀತಿಸ್ತ್ರಿಜಗದ್ವ್ಯೋತತೇ ಸ್ಫುಟಂ ।
ಧರ್ಮಮೇಕಂ ಪರಂ ಮಹ್ಯಂ ಚೇತಶ್ಚಾಪ್ಯವಗಚ್ಛತಿ ॥ ೩೭ ॥
ಅಹೋ ಸ್ಥಾನಪ್ರಭಾವೋಽಯಂ ಸ್ಫುಟಂ ಚಾಪ್ಯತ್ರ ಪ್ರೋಚ್ಯತೇ ।
ನಿರ್ದೋಷಂ ಯಚ್ಛುಚಿ ಸ್ಥಾನಂ ಸರ್ವೋಪದ್ರವವರ್ಜಿತಂ ॥ ೩೮ ॥
ತತ್ರ ಸ್ಥಿತಸ್ಯ ಧರ್ಮಾರ್ಥಸ್ತದ್ವದ್ಭೂಯಾತ್ಸಹಸ್ರಧಾ ।
ತದಸ್ಮಾಚ್ಚ ಪ್ರಭಾವಾದ್ಧಿ ಜಾನಾಮೀತಃ ಸ್ವಚೇತಸಿ ॥ ೩೯ ॥
ವಿಶಿಷ್ಟಂ ಕಾಶಿಮುಖ್ಯೇಭ್ಯಸ್ತೀರ್ಥೇಭ್ಯಃ ಸ್ಥಾನಕಂ ತ್ವಿದಂ ।
ತಸ್ಮಾದತ್ರೈವ ಸಂಸ್ಥೋಽಹಂ ತಪಸ್ತಪ್ಸ್ಯಾಮಿ ಪುಷ್ಕಲಂ ॥ ೪೦ ॥
ಇದಂ ಚೇದಂ ತೀರ್ಥಮಿತಿ ಸದಾಯಸ್ತೃಷಿತಶ್ಚರೇತ್ ।
ನ ಸ ಸಿದ್ಧಿಮವಾಪ್ನೋತಿ ಕ್ಲೇಶೇನೈವ ವಿಪ್ರಿಯೇತ ಸಃ ॥ ೪೧ ॥

---

೩೬. ಶ್ರೀಪರ್ವತದಲ್ಲಾಗಲಿ ಇತರ ಕ್ಷೇತ್ರಗಳಲ್ಲಾಗಲಿ ಇಲ್ಲಿ ಉಂಟಾದ ಆನಂದಕ್ಕೆ ಸಮಾನವಾದ ಆನಂದವುಂಟಾಗಲಿಲ್ಲ. ನನ್ನ ಇಂದ್ರಿಯಗಳೆಲ್ಲವೂ ಗಂಗಾಜಲದಂತೆ ವಿಕಾರರಹಿತಗಳಾಗಿಯೂ, ಶುಭ್ರಗಳಾಗಿಯೂ ಇರುವುವು.

೩೭. ಮೂರು ಲೋಕಗಳ ನಿವಾಸಿಗಳಾದ ಭೂತಗಳಲ್ಲಿಯೂ ತೀವ್ರವಾದ ಅನುಕಂಪವು ನನ್ನಲ್ಲುಂಟಾಗುತ್ತಿರುವುದು. ನನ್ನ ಮನಸ್ಸೂ ಪರಾತ್ಪರವಾದ ಧರ್ಮವೊಂದನ್ನೇ ಹೊಂದಲಿಚ್ಛಿಸುತ್ತಿರುವುದು.

೩೮. ಇದು ನಿಜವಾಗಿಯೂ ಸ್ಥಳಮಹಿಮೆಯಲ್ಲದೆ ಬೇರೆಯಲ್ಲ. ಆದುದರಿಂದಲೇ ಬಲ್ಲವರು ಇದನ್ನು ದೋಷರಹಿತವೂ, ಶುಚಿಯೂ, ಸರ್ವೋಪದ್ರವ ವರ್ಜಿತವೂ ಆದ ಕ್ಷೇತ್ರವೆಂದು ಹೇಳುವರು.

೩೯. ಇಂತಹ ಕ್ಷೇತ್ರದಲ್ಲಿ ಮಾಡಿದ ಧರ್ಮಾದಿಗಳು ಸಾವಿರಪಾಲಿನಷ್ಟು ಹೆಚ್ಚಾದ ಫಲಗಳನ್ನು ಕೊಡುವುವೆಂದು ಕೇಳಿರುವೆನು. ಈ ಕ್ಷೇತ್ರದ ಮಹಾತ್ಮೆಯಿಂದಲೂ ಅಂತೆಯೇ ಆಗುವುದೆಂದು ನನ್ನ ಮನಸ್ಸಿನಲ್ಲಿಯೇ ನಿಶ್ಚಯವು ತೋರುತ್ತಿರುವುದು.

೪೦–೪೧. ಈ ಸ್ಥಾನವು ಕಾಶಿಯೇ ಮುಂತಾದ ಸಕಲ ಕ್ಷೇತ್ರಗಳಿಗಿಂತಲೂ ವಿಶೇಷ ಫಲದಾಯಕವಾದುದು. ಆದುದರಿಂದ ಇಲ್ಲಿಯೇ ನಿಂತು ನಾನು ಉಗ್ರವಾದ ತಪಸ್ಸನ್ನು ಮಾಡುವೆನು. ಯಾವನು 'ಇದಕ್ಕಿಂತ ಅದು ಉತ್ತಮ; ಅದಕ್ಕಿಂತಲೂ ಮತ್ತೊಂದು ಫಲದಾಯಕ'ವೆಂದು ಆಶೆಯಿಂದ ಕ್ಷೇತ್ರದಿಂದ ಕ್ಷೇತ್ರಕ್ಕೆ ತಿರುಗುತ್ತಿರುವನೊ, ಅವನು ಸಿದ್ಧಿಯನ್ನು ಹೊಂದುವುದೇ ಇಲ್ಲವು. ಅವನು ಕೇವಲ ಪ್ರಯಾಣಕ್ಲೇಶದಿಂದಲೇ ಸಾಯುವನು!!"

ಇತಿ ಸಂಚಿಂತ್ಯ ಬಿಲ್ವಸ್ಯ ವೃಕ್ಷಸ್ಯಾಧೋ ವ್ಯವಸ್ಥಿತಃ ।
ಜಜಾಪ ಮಂತ್ರಾನ್ರುದ್ರಸ್ಯ ಅಂಗುಷ್ಠಾಗ್ರೇಣ ಧಿಷ್ಠಿತಃ ।
ಗೃಹೀತ್ವಾ ನಿಯಮಂ ತೋಯಬಿಂದುಂ ವರ್ಷಶತೇಽಗ್ನಿವತ್ ॥ ೪೨ ॥
ಏವಂ ವರ್ಷಶತೇ ಯಾತೇ ಜಪತಸ್ತಸ್ಯ ಭಾರತ ।
ಕಶ್ಚಿತ್ತೋಯಭೃತಂ ಕುಂಭಂ ಗೃಹೀತ್ವಾ ನರ ಆವ್ರಜತ್ ॥ ೪೩ ॥
ಸ ತಂ ಪ್ರಣಮ್ಯ ಪ್ರಾಹೇದಂ ಕಾಲ ಭೀತಿಂ ಪ್ರಹರ್ಷಿತಃ ॥ ೪೪ ॥
ಅದ್ಯ ತೇ ನಿಯಮಃ ಪೂರ್ಣಸ್ತೋಯಮೇತನ್ಮಹಾಮತೇ ।
ಗೃಹಾಣ ಸಫಲಂ ಮಹ್ಯಂ ಶ್ರಮಂ ಕರ್ತುಮಿಹಾರ್ಹಸಿ ॥ ೪೫ ॥

ಕಾಲಭೀತಿರುವಾಚ :—

ಕೋ ಭವಾನ್ವರ್ಣತೋ ಬ್ರೂಹಿ ಕಿಮಾಚಾರಶ್ಚ ತತ್ತ್ವತಃ ।
ಜನ್ಮಾಚಾರಾನ್ ವಿದಿತ್ವಾ ತೇ ಗ್ರಹೀಷ್ಯಾಮ್ಯನ್ಯಥಾ ನ ಹಿ ॥ ೪೬ ॥

ನರ ಉವಾಚ :—

ನ ಜಾನೇ ಪಿತರೌ ಸ್ವೀಯೌ ನಷ್ಟೌ ವಾ ಸರ್ವಥಾ ನ ಹಿ ।
ಏವಮೇವಾಪಿ ಪಶ್ಯಾಮಿ ಸರ್ವದಾಹಂ ಸ ಏವ ಚ ॥ ೪೭ ॥

---

೪೨. ಇಂತು ನಿಶ್ಚಯಿಸಿ ಆ ಬಿಲ್ವವೃಕ್ಷದಡಿಯಲ್ಲಿ ನೆಲಸಿ, ನಿಯಮವನ್ನು ಕೈಕೊಂಡು ಕೇವಲ ಜಲಬಿಂದುಗಳನ್ನೇ ಭಕ್ಷಣಮಾಡುತ್ತ ಕಾಲಿನ ಅಂಗುಷ್ಠದ ಮೇಲೆ ದೇಹದ ಭಾರವನ್ನೆಲ್ಲ ಬಿಟ್ಟುಕೊಂಡು ಒಂದು ನೂರು ವರ್ಷಗಳ ಕಾಲ ಅಗ್ನಿಯಂತೆ ರುದ್ರಮಂತ್ರಗಳನ್ನು ಜಪಿಸುತ್ತಿದ್ದನು.

೪೩. ಇಂತು ಜಪದಲ್ಲಿಯೇ ನೂರು ವರ್ಷಗಳು ಕಳೆಯಲು ಅಲ್ಲಿಗೆ ಒಬ್ಬಾನೊಬ್ಬ ಮನುಷ್ಯನು ಕೈಯಲ್ಲಿ ನೀರಿನಿಂದ ತುಂಬಿದ ಕುಂಭವನ್ನು ತೆಗೆದು ಕೊಂಡು ಬಂದನು.

೪೪–೪೫. ಅವನು ಸಂತೋಷದಿಂದ ಕಾಲಭೀತಿಗೆ ನಮಸ್ಕರಿಸಿ ಇಂತೆಂದನು :—"ಎಲೈ ಮಹಾಪ್ರಾಜ್ಞನೆ! ಇಂದಿಗೆ ನಿನ್ನ ನಿಯಮವು ಸಮಾಪ್ತಿಯನ್ನೈದಿತು. ಈ ಜಲವನ್ನು ಅಂಗೀಕರಿಸಿ ನನ್ನ ಶ್ರಮವನ್ನು ಸಾರ್ಥಕಗೊಳಿಸಲು ನೀನು ಅರ್ಹನಾಗಿರುವೆ."

೪೬. ಕಾಲಭೀತಿಯು ಹೇಳುತ್ತಾನೆ :—"ನೀನು ಯಾವ ವರ್ಣದವನು? ಯಾವ ಆಚಾರವನ್ನನುಷ್ಠಾನಮಾಡುವವನು? ಇವುಗಳನ್ನು ಮೊದಲು ಹೇಳು. ನಿನ್ನ ಜನ್ಮಾಚಾರಗಳನ್ನು ತಿಳಿದು ಯುಕ್ತವಾದರೆ ಜಲವನ್ನು ಸ್ವೀಕರಿಸುವೆನೆ ಹೊರತು ಅನ್ಯಥಾ ಮಾಡಲಾರೆನು."

೪೭. ಮನುಷ್ಯನು ಹೇಳುತ್ತಾನೆ :—"ನನ್ನ ತಾಯಿತಂದೆಗಳಾರೆಂಬುದನ್ನು ನಾನರಿಯೆನು. ಅಥವಾ ಅವರು ಇರುವರೋ, ಮೃತರಾದರೊ ಎಂಬುದೂ

ಆಚಾರೈಶ್ಚಾಪಿ ಧರ್ಮೈಶ್ಚ ನ ಕಾರ್ಯಂ ಮಮ ಕಿಂ ಚ ನ ।
ತಸ್ಮಾದ್ವಕ್ಷ್ಯಾಮಿ ನಾಪ್ಯೇತನ್ನ ಚಾಪ್ಯಸ್ಮಿ ಸಮಾಚರೇ ॥ ೪೮ ॥

ಕಾಲಭೀತಿರುವಾಚ :—

ಯದ್ಯೇವಂ ನೋದಕಂ ತುಭ್ಯಂ ಗ್ರಹೀಷ್ಯಾಮ್ಯಸ್ಮಿ ಕರ್ಹಿಚಿತ್ ।
ಶೃಣುಷ್ವಾತ್ರ ವಚೋ ಯನ್ಮೇ ಗುರುರಾಹ ಶ್ರುತೀರಿತಂ ॥ ೪೯ ॥
ನ ಜ್ಞಾಯತೇ ಕುಲಂ ಯಸ್ಯ ಬೀಜಶುದ್ಧಿಂ ವಿನಾ ತತಃ ।
ತಸ್ಯ ಖಾದನ್ಪಿಬನ್ವಾಪಿ ಸಾಧುಃ ಸೀದತಿ ತತ್ಕ್ಷಣಾತ್ ॥ ೫೦ ॥
ಯಶ್ಚ ರುದ್ರಂ ನ ಜಾನಾತಿ ರುದ್ರಭಕ್ತಶ್ಚ ಯೋ ನ ಹಿ ।
ಅನ್ನೋದಕಂ ತಸ್ಯ ಭುಂಜನ್ಪಾತಕೀ ಸ್ಯಾನ್ನ ಸಂಶಯಃ ॥ ೫೧ ॥
ಅಜ್ಞಾತ್ವಾ ಯಃ ಶಿವಂ ಭುಙ್ಕ್ತೇ ಕಥ್ಯತೇ ಸೋಽತ್ರ ಬ್ರಹ್ಮಹಾ ।
ಮಾರ್ಷ್ಟಿ ಚ ಬ್ರಹ್ಮಹಾನ್ನಾದೇ ತಸ್ಮಾತ್ತಸ್ಯ ನ ಭಕ್ಷಯೇತ್ ॥ ೫೨ ॥

---

ನನಗೆ ತಿಳಿಯದು. ಈಗಿರುವಂತೆಯೇ ನಾನು ಯಾವಾಗಲೂ ಇರುವೆನು. ತ್ರಿಕಾಲಗಳಲ್ಲಿಯೂ ಒಂದೇ ವಿಧವಾಗಿರುವವನು.

೪೮. ಆಚಾರಗಳನ್ನೂ, ವರ್ಣಾಶ್ರಮ ಧರ್ಮಗಳನ್ನೂ ಕಟ್ಟಿಕೊಂಡು ನನಗಾಗಬೇಕಾದುದೇನೂ ಇಲ್ಲವು. ಆದುದರಿಂದ ಅವುಗಳನ್ನು ಹೇಳಲೂ ಅರೆನು. ಅವುಗಳನ್ನು ನಾನು ಆಚರಿಸುವುದೂ ಇಲ್ಲವು."

೪೯. ಕಾಲಭೀತಿಯು ಹೇಳುತ್ತಾನೆ:—"ನೀನಿಂತು ವರ್ಣಾಶ್ರಮಾಚಾರ ಗಳನ್ನು ಬಿಟ್ಟಿರುವವನಾದರೆ ನಿನ್ನಿಂದ ನಾನೇನನ್ನೂ ಪ್ರತಿಗ್ರಹಿಸಲಾರೆನು. ಈ ವಿಷಯದಲ್ಲಿ ಶ್ರುತ್ಯನುಸಾರವಾಗಿ ಗುರುಗಳು ನನಗೆ ಉಪದೇಶಿಸಿರುವುದನ್ನು ತಿಳಿಸುವೆನು ಕೇಳು.

೫೦. ಯಾವನ ಕುಲವು ತಿಳಿಯಲಾಗದೊ ಅವನಿಗೆ ಪ್ರಾಯಶ್ಚಿತ್ತವನ್ನು ಮಾಡದೆ ಅವನ ಉಪಚಾರಗಳಿಂದ ಅನ್ನೋದಕಗಳನ್ನು ಸ್ವೀಕರಿಸುವ ಸಾಧುವು ತಕ್ಷಣದಲ್ಲಿಯೇ ಪತಿತನಾಗುವನು.

೫೧. ಯಾವನು ರುದ್ರನನ್ನು ದೇವೋತ್ತಮನೆಂದು ತಿಳಿದಿಲ್ಲವೊ, ಯಾವನು ರುದ್ರಭಕ್ತನಲ್ಲವೊ, ಆತನ ಅನ್ನೋದಕಗಳ ಭೋಜನದಿಂದ ಅತಿಥಿಯು ಪಾತಕಿಯಾಗುವುದರಲ್ಲಿ ಸಂಶಯವಿಲ್ಲವು.

೫೨. ಯಾವನು ಶಿವಪಾರಮ್ಯವನ್ನು ತಿಳಿಯದೆ ಕೇವಲ ಉದರಂಭರಣ ವನ್ನು ಮಾಡುವನೊ ಅವನೇ ಬ್ರಹ್ಮಹತ್ಯೆಯನ್ನು ಮಾಡಿದವನು. ಅಂತಹ ಬ್ರಹ್ಮಘ್ನನು ತನ್ನ ಪಾಪಗಳನ್ನು ಅನ್ನದಾನಾದಿಗಳಿಂದ ಕಳೆದುಕೊಳ್ಳುವನು. ಆದುದರಿಂದ ಅಂತಹ ಮನುಷ್ಯನ ಅನ್ನವನ್ನು ಭಕ್ಷಿಸಬಾರದು.

ಗಂಗೋದಕುಂಭಃ ಸ್ಯಾದ್ಯದ್ವತ್ತನ್ಮಧ್ಯೇ ಮದ್ಯಬಿಂದುನಾ ।
ಅಶಿವಜ್ಞಸ್ಯ ಯೋ ಭುಂಕ್ತೇ ಶಿವಜ್ಞೋಽಪಿ ತಥೈವ ಸಃ ॥ ೫೩ ॥
ಹೀನವರ್ಣಶ್ಚ ಯಃ ಸ್ಯಾದ್ಧಿ ಶಿವಭಕ್ತೋಽಪಿ ನೈವ ಸಃ ।
ಪ್ರತಿಗೃಹ್ಯೌ ಗುಣೌ ತಸ್ಮಾದ್ವಿಲೋಕ್ಯೌ ದಾತ್ರಿ ಪ್ರತಿಗ್ರಹೇ ॥ ೫೪ ॥

ನರ ಉವಾಚ :—

ಏತೇನ ತವ ವಾಕ್ಯೇನ ಹಾಸ್ಯಂ ಸಂಜಾಯತೇ ಮಮ ।
ಅಹೋ ಮುಗ್ಧೋಽಸಿ ಮಿಥ್ಯಾ ತ್ವಮುಪಸ್ಮಾರೀ ಜಡೋಽಪಿ ಚ ॥ ೫೫ ॥
ಸದಾ ಸರ್ವೇಷು ಭೂತೇಷು ಶಿವೋ ವಸತಿ ನಿತ್ಯಶಃ ।
ಸಾಧ್ವಸಾಧು ತತೋ ವಾಕ್ಯಂ ನೈವ ನಿಂದಾ ಶಿವಸ್ಯ ಸಾ ॥ ೫೬ ॥
ಆತ್ಮನಶ್ಚ ಪರಸ್ಯಾಪಿ ಯಃ ಕರೋತ್ಯಂತರೋ ಹರಂ ।
ತಸ್ಯ ಭಿನ್ನದೃಶೋ ಮೃತ್ಯುರ್ವಿದಧೇ ಭಯಮುಲ್ಬಣಂ ॥ ೫೭ ॥

---

೫೩. ಪೂರ್ಣಕುಂಭದಲ್ಲಿರುವ ಪವಿತ್ರವಾದ ಗಂಗೋದಕವು ಕೇವಲ ಒಂದು ತೊಟ್ಟು ಮದ್ಯದಿಂದಲೇ ಹೇಗೆ ಕೆಡುವುದೊ, ಶಿವಭಕ್ತನಾದವನು ಎಷ್ಟು ಪರಿಶುದ್ಧನಾದರೂ ಅಂತಹ ಆಚಾರಹೀನನಲ್ಲಿ ಮಾಡಿದ ಒಂದು ಭೋಜನ ದಿಂದಲೇ ಕೆಟ್ಟುಹೋಗುವನು.

೫೪. ಮನುಷ್ಯನು ಹೀನವರ್ಣದವನೂ, ಶಿವಭಕ್ತಿಹೀನನೂ ಆಗಿರಬಹು ದಾದುದರಿಂದ ವರ್ಣಾಚಾರಗಳೆರಡನ್ನೂ ಪರೀಕ್ಷಿಸಬೇಕು. ಆದುದರಿಂದ ಪ್ರತಿಗ್ರಹಮಾಡುವುದಕ್ಕೆ ಮೊದಲು ದಾತೃವಿನ ಈ ಎರಡು ಗುಣಗಳನ್ನೂ ಪರಿಶೀಲಿಸಬೇಕು.''

೫೫. ಮನುಷ್ಯನು ಹೇಳುತ್ತಾನೆ:—''ಈ ನಿನ್ನ ಮಾತುಗಳು ನನಗೆ ಕೇವಲ ನಗೆಪಾಟಲೆಯಾಗಿಯೇ ತೋರುತ್ತಿರುವುದು. ನೀನು ಕೇವಲ ತಿಳಿಗೇಡಿಯೂ, ಕೇವಲ ಬೂಟಾಟಿಕೆಗಾಗಿ ಆಚಾರವನ್ನು ನಡೆಸುತ್ತಿರುವವನೂ, ಬುದ್ಧಿಪಲ್ಲಟವನ್ನು ಹೊಂದಿ ಯಾವುದನ್ನು ಮಾಡಬೇಕೆಂಬುದನ್ನರಿಯದವನೂ, ಜಡನೂ ಆಗಿರುವಂತೆ ತೋರುವುದು.

೫೬. ಸಕಲ ಪ್ರಾಣಿಗಳ ಹೃದಯದಲ್ಲಿಯೂ ಸಾಕ್ಷಾತ್ ಶಿವನು ನಿತ್ಯ ದಲ್ಲಿಯೂ ವಾಸಮಾಡುತ್ತಿರುವನಲ್ಲವೆ! ಆದುದರಿಂದ ಮನುಷ್ಯರನ್ನು ಸಾಧು ಗಳೆಂದೂ ಪಾಪಿಗಳೆಂದೂ ಈ ರೀತಿ ನೀನು ವಿಂಗಡಿಸಬಾರದು. ಹಾಗೆ ಮಾಡಿದರೆ ಅದು ಕೇವಲ ಶಿವನಿಂದೆಯೇ ಆಗುವುದು.

೫೭. ತನ್ನಲ್ಲಿಯೂ, ಇತರರಲ್ಲಿಯೂ ಅಂತರ್ಯಾಮಿಯಾದ ಶಿವನೊಬ್ಬ ನಲ್ಲಿಯೇ ಯಾವನು ಭೇದವನ್ನು ಕಲ್ಪಿಸುವನೊ, ಆವನಿಗೆ ಮೃತ್ಯುವು ಅಸಹ್ಯ ವಾದ ಭಯವನ್ನುಂಟುಮಾಡುವುದು.

**ಅಥವಾ ಕಾಹಿ ಪಾನೀಯೇ ಭವೇದಶುಚಿತಾ ವದ ।**
**ಮೃತ್ತಿಕೋದ್ಭವಕುಂಭೋಽಯಂ ಪಾವಕೇನಾಪಿ ಪಾಚಿತಃ ॥ ೫೮ ॥**
**ಪೂರ್ಣಶ್ಚ ಪಯಸಾ ಕಸ್ಮಿನ್ನೇಷಾಮಶುಚಿತಾ ಕುತಃ ॥ ೫೯ ॥**
**ಅಥ ಚೇನ್ಮಮ ಸಂಸರ್ಗಾದಶುಚಿತ್ವಂ ಚ ಜಾಯತೇ ।**
**ತದಸ್ಯಾಂ ಸಂಸ್ಥಿತಃ ಪೃಥ್ವ್ಯಾಮಹಂ ತ್ವಂ ಚ ಕುತೋ ವದ ॥ ೬೦ ॥**
**ಕುತಃ ಪೃಥಿವ್ಯಾಂ ಚರಸಿ ಖೇ ತ್ವಂ ನೈವ ಚರಸ್ಯುತ ।**
**ಏವಂ ವಿಚಾರ್ಯಮಾಣೇ ತೇ ಭಾಷಿತಂ ಮುಗ್ಧವದ್ಭವೇತ್ ॥ ೬೧ ॥**

**ಕಾಲಭೀತಿರುವಾಚ:—**

**ಸರ್ವಭೂತೇಷು ಚೇದೇವಂ ಶಿವ ಏವೇತಿ ಚೋಚ್ಯತೇ ।**
**ನಾಸ್ತಿಕಾ ಮೃತ್ತಿಕಾಂ ಕಸ್ಮಾದ್ಭಕ್ಷಯಂತಿ ನಭಸ್ಯಕೇ ॥ ೬೨ ॥**
**ಶುದ್ಧ್ಯರ್ಥಂ ತೇನ ವಿಶ್ವಸ್ಯ ಸ್ಥಾಪಿತಾ ಸಂಸ್ಥಿತಿರ್ಯಥಾ ।**
**ಫಲೇನ ಪಾಲಿತಾ ಸಾ ಚ ನಾನ್ಯಥಾ ತಾಂ ಶೃಣುಷ್ವ ಚ ॥ ೬೩ ॥**

---

೫೮–೫೯. ಅಥವಾ ಈ ಕಲಶೋದಕದಲ್ಲಿ ಯಾವ ವಿಧವಾದ ದೋಷ ವಿರುವುದೊ ತಿಳಿಸು. ನೋಡು; ಈ ಕುಂಭವು ಮಣ್ಣಿನಿಂದ ಮಾಡಲ್ಪಟ್ಟು ದಾದರೂ ಅಗ್ನಿದಗ್ಧವಾಗಿರುವುದರಿಂದ ಶುಚಿಯಾಗಿರುವುದು; ಶುದ್ಧೋದಕ ದಿಂದ ಭರಿತವಾಗಿರುವುದು. ಇವುಗಳಲ್ಲಿ ಯಾವುದಕ್ಕೆ ಯಾವ ವಿಧವಾದ ಅಶುಚಿತ್ವವುಂಟಾಗಿರುವುದೊ, ಹೇಳಬಲ್ಲೆಯಾ?

೬೦. ಅಥವಾ ನಾನು ಮುಟ್ಟಿದುದರಿಂದಲೇ ಅಶುಚಿತ್ವವು ಪ್ರಾಪ್ತವಾಯಿ ತೆಂದರೆ ಅದಕ್ಕೆ ಉತ್ತರವನ್ನು ಹೇಳುವೆನು. ನೀನೂ, ನಾನೂ, ಸಕಲ ಭೂತಗಳೂ ಪಾಂಚಭೌತಿಕಗಳಾದ ದೇಹಗಳನ್ನೇ ಹೊಂದಿ ಭೂಮಿಯಲ್ಲಿ ಓಡಾಡುತ್ತಿಲ್ಲವೆ?

೬೧. ನೀನು ಅಷ್ಟೊಂದು ಉತ್ತಮನಾದರೆ ಆಕಾಶಮಾರ್ಗದಲ್ಲಿ ಸಂಚರಿ ಸುವುದನ್ನು ಬಿಟ್ಟು ಭೂಮಿಯಲ್ಲಿಯೇ ಏಕೆ ಜೀವಿಸುತ್ತಿರುವೆ? ಇಂತು ಎಲ್ಲ ವಿಧಗಳಿಂದ ವಿಚಾರಿಸಿದರೂ ನಿನ್ನ ಮಾತುಗಳು ಕೇವಲ ಮೂಢಭಾಷಿತಗಳೇ ಹೊರತು ಬೇರೆಯಲ್ಲ.''

೬೨. ಕಾಲಭೀತಿಯು ಹೇಳುತ್ತಾನೆ:—'' ನೀನೆಂದಂತೆ ಸಕಲ ಭೂತ ಗಳಲ್ಲಿಯೂ ಕೇವಲ ಶಿವನೇ ಇರುವನಾದರೆ ನಾಸ್ತಿಕರಾದವರು ಲೋಕಾಂತರ ಗಳಲ್ಲಿ ಮಣ್ಣನ್ನು ಮುಕ್ಕುತ್ತಿರುವುದೇಕೆ?

೬೩. ಆದುದರಿಂದ ಬ್ರಹ್ಮಾಂಡದ ಶುದ್ಧಿಯ ನಿಮಿತ್ತವಾಗಿ ಸಂಸ್ಥಿತಿಯು ಸ್ಥಾಪಿತವಾಗಿರುವುದು. ಅದೂ ಕೂಡ ಪಾಲಿಸಲ್ಪಟ್ಟು ಮನುಷ್ಯರಿಗೆ ಉತ್ತಮ ಫಲದಾಯಕವಾಗಿರುವುದೇ ಹೊರತು ಅನ್ಯಥಾ ಇಲ್ಲ. ಅದರ ಸ್ವರೂಪವನ್ನು ತಿಳಿಸುವೆನು ಕೇಳು.

**ಸಸರ್ಜೇತಿ ಪುರಾ ಧಾತಾ ರೂಪಾತ್ಮಕಮಿದಂ ಜಗತ್ ।**
**ತಚ್ಚ ನಾಮಪ್ರಪಂಚೇನ ಬದ್ಧಂ ದಾಮ್ನಾ ಚ ಗೌರ್ಯಥಾ ॥ ೬೪ ॥**
**ಸ ಚ ನಾಮಪ್ರಪಂಚಸ್ತು ಚತುರ್ಧಾ ಭಿದ್ಯತೇ ಕಿಲ ।**
**ಧ್ವನಿರ್ವರ್ಣಾಃ ಪದಂ ವಾಕ್ಯಮಿತ್ಯಾಸ್ಪದಚತುಷ್ಟಯಂ ॥ ೬೫ ॥**
**ತತ್ರ ಧ್ವನಿರ್ನಾದಮಯೋ ವರ್ಣಾಶ್ಚಾಕಾರ ಪೂರ್ವಕಾಃ ।**
**ಪದಂ ಶ ವ ಮಿತಿ ಪ್ರೋಕ್ತಂ ವಾಕ್ಯಂ ಚೇತಿ ಶಿವಂ ಭಜೇತ್ ॥ ೬೬ ॥**
**ತಚ್ಚಾಪಿ ವಾಕ್ಯಂ ತ್ರಿವಿಧಂ ಭವೇದಿತಿ ಶ್ರುತೇರ್ಮತಂ ।**
**ಪ್ರಭುಸಮ್ಮಿತಮೇಕಂ ಚ ಸುಹೃತ್ಸಮ್ಮಿತಮೇವ ಚ ॥ ೬೭ ॥**
**ಕಾಂತಾಸಮ್ಮಿತಮೇವಾಪಿ ವಾಕ್ಯಂ ಹಿ ತ್ರಿವಿಧಂ ವಿದುಃ ।**
**ಪ್ರಭುಃ ಸ್ವಾಮೀ ಯಥಾ ಭೃತ್ಯಮಾದಿಶತ್ಯೇತದಾಚರ ॥ ೬೮ ॥**

---

೬೪. ಪೂರ್ವದಲ್ಲಿ ಚತುರ್ಮುಖ ಬ್ರಹ್ಮನು ನಾನಾ ರೂಪಗಳಿಂದೊಡಗೂಡಿದ ಈ ಜಗತ್ತನ್ನು ಸೃಷ್ಟಿಸಿದನು. ಈ ಪ್ರಕಾರ ಸೃಷ್ಟವಾದ ಜಗತ್ತು ಆಯಾ ರೂಪಗಳಿಗನುಗುಣಗಳಾದ ನಾಮಗಳಿಂದ ನಿರ್ದಿಷ್ಟವಾಗಿ ಹಗ್ಗದಿಂದ ಕಟ್ಟಲ್ಪಟ್ಟ ಆಕಳಿನಂತೆ ಒಂದು ಬಗೆಯಾದ ಕಟ್ಟುಪಾಡಿಗೆ ಒಳಗಾಗಿರುವುದು.

೬೫. ಆ ನಾಮಪ್ರಪಂಚವು ನಾಲ್ಕು ವಿಧವಾಗಿ ಭೇದಗೊಂಡಿರುವುದು. ಧ್ವನಿ, ವರ್ಣ, ಪದ, ವಾಕ್ಯ ಎಂಬಿವುಗಳೇ ನಾಮದ ನಾಲ್ಕು ಆಸ್ಪದಗಳೆನಿಸುವುವು.

೬೬. ಅವುಗಳಲ್ಲಿ ಧ್ವನಿಯೆಂಬುದು ನಾದಮಯವಾಗಿರುವುದು. ವರ್ಣಗಳು ಅಕಾರ ಸಹಿತಗಳಾಗಿರುವುವು. 'ಶ'ಕಾರ 'ವ'ಕಾರಗಳ ಸಮೂಹಕ್ಕೆ ಪದವೆಂದು ಹೆಸರು. ಮತ್ತು ಅರ್ಥದ್ಯೋತಕಗಳಾದ 'ಶ–ವ' ಮುಂತಾದ ಪದಗಳಿಂದ ಕೂಡಿದ "ಶಿವ" ಎನ್ನುವಂತಹ ಸಮೂಹಗಳು ವಾಕ್ಯಗಳೆಂದು ಭಾವಿಸಿ ಭಜಿಸಬೇಕು.

೬೭. ಆ ವಾಕ್ಯಗಳೂ ಮೂರು ವಿಧಗಳಾಗಿರುವುವೆಂದು ವೇದಸಂಮತವಾಗಿರುವುದು. ಮೊದಲನೆಯದು ಪ್ರಭುಸಮ್ಮಿತವು. ಎರಡನೆಯದು ಸುಹೃತ್ಸಮ್ಮಿತವು.

೬೮. ಮೂರನೆಯದೇ ಕಾಂತಾಸಮ್ಮಿತವು. ಈ ಪ್ರಕಾರವಾಗಿ ವಾಕ್ಯಗಳು ಮೂರು ವಿಧಗಳೆಂದು ತಿಳಿದವರು ಹೇಳುವರು. ಮಹಾರಾಜನೂ, ಸ್ವಾಮಿಯೂ ಅನುಚರರಿಗೆ ಹೇಗೆ 'ಇದನ್ನು ಮಾಡು' ಎಂದು ಆಜ್ಞಾಪಿಸುವರೊ, ಅಂತೆಯೇ ಕರ್ತವ್ಯಾಕರ್ತವ್ಯಗಳನ್ನು ಆಜ್ಞಾಪಿಸುವ ವೇದಗಳು ಪ್ರಭುಸಮ್ಮಿತಗಳೆಂದು ಹೇಳುವರು.

**ತಥಾ ಶ್ರುತಿಸ್ಮೃತೀ ಚೋಭೇ ಪ್ರಾಹತುಃ ಪ್ರಭುಸಮ್ಮಿತಂ ।**
**ಇತಿಹಾಸ ಪುರಾಣಾದಿ ಸುಹೃತ್ಸಮ್ಮಿತಮುಚ್ಯತೇ ॥ ೧೯ ॥**
**ಸುಹೃದ್ವತ್ಪ್ರತಿಬೋಧ್ಯೈನಂ ಪ್ರವರ್ತಯತಿ ತತ್ತ್ವತಃ ।**
**ಕಾವ್ಯಾಲಾಪಾದಿಕಂ ಯಚ್ಚ ಕಾಂತಾಸಮ್ಮಿತಮುಚ್ಯತೇ ॥ ೨೦ ॥**
**ಪ್ರಭುವಾಕ್ಯಂ ಸ್ಮೃತಂ ಯಚ್ಚ ಸಬಾಹ್ಯಾಭ್ಯಂತರಂ ಶುಚಿ ।**
**ಸುಹೃದ್ವಾಕ್ಯಂ ತಥಾ ಶೌಚಂ ಪಾಲಯೇತ್ಸ್ವರ್ಗಕಾಂಕ್ಷಯಾ ॥ ೨೧ ॥**
**ತದೇತತ್ಪಾಲನೀಯಂ ಸ್ಯಾದ್ಭೂಮಿಜಾನಾಂ ಶ್ರುತಿರ್ವದೇತ್ ।**
**ತ್ವಯಾ ನಾಸ್ತಿಕ್ಯವಾಕ್ಯೇನ ಚೇದೇತದಭಿಧೀಯತೇ ॥ ೨೨ ॥**
**ಏತೇನ ಶ್ರುತಿಶಾಸ್ತ್ರಾಣಿ ಪುರಾಣಂ ಚ ವೃಥೈವ ಕಿಂ ।**
**ಅಗ್ರೇ ಸಪ್ತರ್ಷಿಪೂರ್ವಾ ಯೇ ಬ್ರಾಹ್ಮಣಾಃ ಕ್ಷತ್ರಿಯಾಽಭವನ್ ॥ ೨೩ ॥**
**ಮುಗ್ಧಾಃ ಸರ್ವೇಽಭವನ್ದಕ್ಷಾ ಯೇ ಹಿ ವೇದಂ ಗತಾ ಹ್ಯನು ।**
**ತಥಾ ವೇದಾಂತವಚನಂ ಸತ್ತ್ವಸ್ಥಾ ಹ್ಯೂರ್ಧ್ವಗಾಮಿನಃ ॥ ೨೪ ॥**

---

೧೯. ಇತಿಹಾಸ ಪುರಾಣಾದಿ ಗ್ರಂಥಗಳು ಸುಹೃತ್ಸಮ್ಮಿತಗಳೆಂದು ಕರೆಯಲ್ಪಡುವುವು. ಇವುಗಳು ಮನುಷ್ಯನನ್ನು ಸ್ನೇಹಿತನಂತೆ ಜಾಗ್ರತಗೊಳಿಸಿ ವೈದಿಕಮಾರ್ಗದಲ್ಲಿ ಪ್ರವರ್ತಿಸುವಂತೆ ಮಾಡುವುವು.

೨೦–೨೧. ಕಾವ್ಯ ನಾಟಕಾದಿ ಗ್ರಂಥಗಳು ಕಾಂತಾ ಸಮ್ಮಿತಗಳೆನಿಸುವುವು. ಪ್ರಭುವಾಕ್ಯಗಳಿಂದ ವೇದಗಳು ನಿತ್ಯಗಳಾಗಿ ಒಳಗೂ ಹೊರಗೂ ಪರಿಶುದ್ಧಗಳಾಗಿರುವುವು; ಸ್ವರ್ಗಾದಿಲೋಕಗಳ ಅಪೇಕ್ಷೆಯಿಂದ ಸುಹೃತ್ಸಮ್ಮಿತಗಳಾದ ಇತಿಹಾಸ ಪುರಾಣಾದಿಗಳಲ್ಲಿ ಹೇಳುವ ನಿಯಮಗಳೂ ಅವಶ್ಯವಾಗಿ ಆಚರಿಸತಕ್ಕುವೇ ಆಗಿರುವುವು.

೨೨. ಆದುದರಿಂದ ಭೂಲೋಕವಾಸಿಗಳಿಗೆ ಇವುಗಳೆಲ್ಲವೂ ಶ್ರುತ್ಯನುಸಾರವಾಗಿ ವಿಧೇಯಗಳಾಗಿರುವುವು. ಅಥವಾ ನೀನು ಕೇವಲ ನಾಸ್ತಿಕನಾಗಿ ವೇದಾದಿಗಳಲ್ಲಿ ಪ್ರಾಮಾಣ್ಯವನ್ನಂಗೀಕರಿಸದೆ ಈ ರೀತಿ ಹೇಳುತ್ತಿದ್ದರೆ ವೇದಗಳೂ, ಶಾಸ್ತ್ರಗಳೂ, ಪುರಾಣಗಳೂ ವ್ಯರ್ಥಾಲಾಪಗಳೆಂದೇ ಹೇಳಬೇಕಲ್ಲವೆ?

೨೩. ಹಾಗಾದರೆ ಹಿಂದಿನಕಾಲದಲ್ಲಿ ಸಪ್ತರ್ಷಿಗಳೇ ಮೊದಲಾದ ಬ್ರಾಹ್ಮಣೋತ್ತಮರೂ, ಅನೇಕ ರಾಜರೂ ವೇದಮಾರ್ಗವನ್ನನುಸರಿಸಿದುದರಿಂದ ಕೇವಲ ಮುಗ್ಧರಾಗಿರಬೇಕಲ್ಲವೆ? ಆದರೆ ಅವರು ತದ್ವಿಪರೀತರಾಗಿ ಅತ್ಯಂತ ದಕ್ಷತೆಯಿಂದ ತಮ್ಮ ಕಾರ್ಯಗಳನ್ನು ತಾವು ನಿರ್ವಹಿಸುತ್ತಿರಲಿಲ್ಲವೆ!

೨೪. ಹೀಗೆಯೇ ವೇದಾಂತ ವಚನವೂ ಇರುವುದು. ಸಾತ್ವಿಕರು ಊರ್ಧ್ವಲೋಕಗಳಿಗೆ ಹೋಗುವರು. ರಾಜಸರು ಮಧ್ಯದಲ್ಲಿಯೇ ನಿಲ್ಲುವರು. ತಾಮಸ ಜನರು ಅಧೋಲೋಕಗಳಿಗೆ ಬೀಳುವರು.

ತಿಷ್ಠಂತಿ ರಾಜಸಾ ಮಧ್ಯೇ ಹ್ಯಧೋ ಗಚ್ಛಂತಿ ತಾಮಸಾಃ ।
ಸತ್ತ್ವಾಹಾರೈಃ ಸತ್ತ್ವವೃತ್ತ್ಯಾ ಸ್ವರ್ಗಕಾಮೋ ಭವೇತ್ತತಃ ॥ ೭೫ ॥
ನ ಚೈತದಪ್ಯಸೂಯಾಮೋ ಯದ್ಭೂತೇಷು ಶಿವೋ ನಹಿ ।
ಅಸ್ತ್ಯೇವ ಸರ್ವಭೂತೇಷು ಶೃಣ್ವತ್ರಾಪ್ಯುಪಮಾನಕಂ ॥ ೭೬ ॥
ಯಥಾ ಸುವರ್ಣಜಾತಾನಿ ಭೂಷಣಾನಿ ಬಹೂನಿ ಚ ।
ಕಾನಿಚಿಚ್ಛುದ್ಧರೂಪಾಣಿ ಹೀನರೂಪಾಣಿ ಕಾನಿಚಿತ್ ॥ ೭೭ ॥
ಸ್ವರ್ಣಂ ಸರ್ವೇಷು ಚಾಸ್ತ್ಯೇವ ತಥೈವ ಸ ಸದಾಶಿವಃ ।
ಹೀನರೂಪಂ ಶೋಧಿತಂ ಸಚ್ಛುದ್ಧಿಮೇತಿ ನ ಚೈಕತಾಂ ॥ ೭೮ ॥
ತಥೇದಂ ಶೋಧಿತಂ ದೇಹಂ ಶುದ್ಧಂ ದಿವಿ ವ್ರಜೇತ್ಸ್ಫುಟಂ ।
ತಸ್ಮಾತ್ಸರ್ವಾತ್ಮನಾ ಹೀನಾನ್ನಗ್ರಾಹ್ಯಂ ಬತ ಧೀಮತಾ ॥ ೭೯ ॥
ಚೇದಿದಂ ಶೋಧಯೇದ್ದೇಹಂ ನೈವ ಗ್ರಾಹ್ಯಂ ಸಮಂತತಃ ।
ಸರ್ವತೋ ಯಃ ಪ್ರತಿಗ್ರಾಹೀ ನಿಹಾರಾಹಾರಯೋರ್ನ ಚ।
ಶುಚಿಸ್ಸ್ಯಾದಲ್ಪದಿವಸಾತ್ಪಾಷಾಣೋಽಸೌ ಭವೇತ್ಸ್ಫುಟಂ ॥ ೮೦ ॥

---

೭೫–೭೬. ಸಾತ್ತ್ವಿಕಗಳಾದ ಆಹಾರಗಳಿಂದಲೂ ಸಾತ್ತ್ವಿಕಾಚಾರಗಳಿಂದಲೂ ಮನುಷ್ಯನು ಸ್ವರ್ಗಾದಿಲೋಕಗಳನ್ನು ಸೇರುವನು. ಇಂತು ಜೀವರಲ್ಲಿ ಪರಸ್ಪರಭೇದವನ್ನು ಕಲ್ಪಿಸಿದರೆ ಸರ್ವಾಂತರ್ಯಾಮಿಯಾದ ಶಿವನಿಲ್ಲವೆಂದು ಹೇಳಿದಂತಾಗುವುದಿಲ್ಲವೆ—ಎಂದರೆ ನಿಜವಾಗಿಯೂ ಶಿವನು ಸಕಲ ಭೂತಗಳಲ್ಲಿಯೂ ಅಂತರ್ಯಾಮಿಯಾಗಿರುವನು. ಆ ವಿಷಯದಲ್ಲಿ ಒಂದು ಉಪಮಾನವನ್ನು ಹೇಳುವೆನು.

೭೭. ಚಿನ್ನದಿಂದ ಮಾಡಿದ ಕುಂಡಲ ಕಿರೀಟಾದಿ ಅನೇಕ ಆಭರಣಗಳಿರುವುವಲ್ಲವೆ! ಅವುಗಳೆಲ್ಲವೂ ಒಂದೇ ಬಣ್ಣದ ಸುವರ್ಣದಿಂದ ಮಾಡಿದವುಗಳಲ್ಲ. ಕೆಲವು ಶುದ್ಧವಾದ ಚಿನ್ನದಿಂದ ಮಾಡಲ್ಪಡುವುವು. ಮತ್ತೆ ಕೆಲವು ಪ್ರಮಾಣಾಂತರಗಳಿಂದ ಅಶುದ್ಧಗಳೂ ಆಗಿರುವುವು.

೭೮. ಆದರೆ ಎಲ್ಲ ಒಡವೆಗಳಲ್ಲಿಯೂ ಚಿನ್ನವು ಇದ್ದೇ ಇರುವಂತೆ ಸಕಲ ಭೂತಗಳಲ್ಲಿಯೂ ಶಿವನೂ ಇದ್ದೇ ಇರುವನು. ಹೀನಗುಣದ ಒಡವೆಗಳನ್ನು ಶುದ್ಧಿಮಾಡಿದಂತೆಲ್ಲ ಸುವರ್ಣವು ಶುದ್ಧವಾಗುವುದೆ ಹೊರತು ಶುದ್ಧವಾದ ಇತರ ಆಭರಣಗಳೊಡನೆ ಐಕ್ಯವನ್ನು ಹೊಂದುವುದಿಲ್ಲ.

೭೯–೮೦. ಹಾಗೆಯೇ ಈ ದೇಹವೂ ಆಚಾರಾದಿಗಳಿಂದ ಪರಿಶುದ್ಧವಾಗಿ ಸ್ವರ್ಗಾದಿ ಲೋಕಗಳಿಗೆ ಹೋಗಲನುವಾಗುವುದು. ಆದುದರಿಂದ ಯಾವ ಪ್ರಕಾರದಿಂದಲೂ ನೀಚನಿಂದ ಬುದ್ಧಿವಂತನು ಪ್ರತಿಗ್ರಹವನ್ನು ಪಡೆಯಬಾರದು. ಈ ದೇಹವನ್ನು ಶುದ್ಧಗೊಳಿಸಬೇಕಾದರೆ ಎಲ್ಲರಿಂದಲೂ ದಾನಗಳನ್ನು

ತಸ್ಮಾತ್ಸರ್ವಾತ್ಮನಾ ನೈವ ಗ್ರಹೀಷ್ಯೇಽಹಂ ಜಲಂ ಸ್ಫುಟಂ ।
ಸಾಧು ವಾಪ್ಯಥವಾಸಾಧು ಪ್ರಮಾಣಂ ನಃ ಶ್ರುತಿಃ ಪರಾ ॥ ೮೧ ॥
ಏವಮುಕ್ತೇ ಸ ಚ ನರಃ ಪ್ರಹಸದ್ದಕ್ಷಿಣೇನ ಚ ।
ಅಂಗುಷ್ಠೇನ ಲಿಖನ್ಭೂಮಿಂ ಚಕ್ರೇ ಗರ್ತಂ ಮಹೋತ್ತಮಂ ॥ ೮೨ ॥
ತತ್ರ ಚಿಕ್ಷೇಪ ತತ್ತೋಯಂ ತೇನ ಗರ್ತಃ ಸ್ಮ ಪೂರಿತಃ ॥ ೮೩ ॥
ಅತ್ಯರಿಚ್ಯತ ತೋಯಂ ಚ ಚಕ್ರೇ ಪಾದೇನ ಸಂಲಿಖನ್ ।
ಚಕ್ರೇ ಸರಃ ಪೂರಿತಂ ಚಾಪ್ಯತಿರಿಕ್ತ ಜಲೇನ ತತ್ ॥ ೮೪ ॥
ತದದ್ಭುತಂ ಮಹದ್ದೃಷ್ಟ್ವಾ ನೈವ ವಿಪ್ರೋ ವಿಸಿಸ್ಮಯೇ ।
ಯತೋ ಬಹುವಿಧಂ ಚಿತ್ರಂ ಭವೇದ್ಭೂತಾದ್ಯುಪಾಸಿಷು ॥ ೮೫ ॥
ತಚ್ಚಿತ್ರೇಣ ನ ಜಹ್ಯಾಚ್ಚ ಶ್ರುತಿಮಾರ್ಗಂ ಸನಾತನಂ ॥ ೮೬ ॥

ನರ ಉವಾಚ :—

ಅತಿಮೂರ್ಖೋಽಸಿ ವಿಪ್ರ ತ್ವಂ ಪ್ರಜ್ಞಾವಾದಾಂಶ್ಚ ಭಾಷಸೇ ।
ಕಿಂ ನ ಶ್ರುತಸ್ತ್ವಯಾ ಶ್ಲೋಕಃ ಪುರಾವಿದ್ಭಿರುದೀರಿತಃ ।
ಕೂಪೋಽನ್ಯಸ್ಯ ಘಟೋಽನ್ಯಸ್ಯ ರಜ್ಜುರನ್ಯಸ್ಯ ಭಾರತ ॥ ೮೭ ॥

---

ತೆಗೆದುಕೊಳ್ಳಬಾರದು. ಯಾವನು ತನ್ನ ಆಹಾರವಿಹಾರಗಳಲ್ಲಿ ನಿಯಮವಿಲ್ಲದೆ ಎಲ್ಲರಿಂದಲೂ ಸ್ವೀಕರಿಸುವನೊ, ಅವನು ಕೇವಲ ಅಶುಚಿಯಾಗಿ ಸ್ವಲ್ಪಕಾಲ ದಲ್ಲಿಯೇ ಕಲ್ಲುಮರಗಳಂತೆ ನಿಕೃಷ್ಟಜನ್ಮವನ್ನು ಪಡೆಯುವುದು ನಿಶ್ಚಯವು.

೮೧. ಆದುದರಿಂದ ನಾನು ನಿನ್ನ ಕೈಯಿಂದ ಸರ್ವಥಾ ಜಲವನ್ನು ಸ್ವೀಕರಿಸುವುದಿಲ್ಲ. ಸಾಧುವಾಗಲಿ ಅಸಾಧುವಾಗಲಿ ನನಗೆ ಅಪೌರುಷೇಯ ವಾದ ಶ್ರುತಿಯೇ ಪರಮ ಪ್ರಮಾಣವಾಗಿರುವುದು.''

೮೨–೮೬. ಕಾಲಭೀತಿಯು ಇಂತು ಹೇಳುತ್ತಿರಲು ಆ ಮನುಷ್ಯನು ನಗುತ್ತ ತನ್ನ ಬಲಗಾಲಿನ ಅಂಗುಷ್ಠದಿಂದ ಗುಣಿಯನ್ನು ತೋಡಿ ಆ ನೀರನ್ನು ಅದರಲ್ಲಿ ಸುರಿದನು. ನೀರಿನಿಂದ ಆ ಗರ್ತವೆಲ್ಲವೂ ತುಂಬಿತು. ಹೆಚ್ಚಾದ ನೀರನ್ನು ಕಾಲಿನಿಂದಲೇ ಕಾಲುವೆಯನ್ನು ಮಾಡಿ ಆ ನೀರಿನಿಂದ ಒಂದು ದೊಡ್ಡ ಸರೋವರವನ್ನೇ ತುಂಬಿಸಿದನು. ಈ ಆಶ್ಚರ್ಯಕೃತ್ಯವನ್ನು ನೋಡಿ ಆ ಬ್ರಾಹ್ಮ ಣೋತ್ತಮನು ಸ್ವಲ್ಪವಾದರೂ ವಿಸ್ಮಯವನ್ನು ಹೊಂದಲಿಲ್ಲ. ಭೂತ ಪ್ರೇತಾದಿ ಗಳನ್ನು ಉಪಾಸನೆಮಾಡುವವರು ಅನೇಕ ವಿಧಗಳಾದ ಇಂತಹ ವಿಚಿತ್ರ ಗಳನ್ನು ಮಾಡುವರಲ್ಲವೆ! ಆದುದರಿಂದ ಇದಕ್ಕೆ ಮೋಸಹೋಗಿ ಆತನು ತನ್ನ ವೇದಮಾರ್ಗವನ್ನು ಬಿಡಲಿಲ್ಲವು.

೮೭–೮೮. ಮನುಷ್ಯನು ಹೇಳುತ್ತಾನೆ:—'' ಎಲೈ ಬ್ರಾಹ್ಮಣನೆ! ನೀನು ಕೇವಲ ಮೂರ್ಖನಾಗಿರುವೆ ಆದರೂ ಬುದ್ಧಿವಂತರಂತೆ ಮಾತುಗಳನ್ನು ಮಾತ್ರ

ಪಾಯಯಂತ್ಯನ್ಯೇ ಪಿಬಂತ್ಯನ್ಯೇ ಸರ್ವೇ ತೇ ಸಮಭಾಗಿನಃ ।
ತಜ್ಜಲಂ ಮಮ ಕಸ್ಮಾತ್ತ್ವಂ ಧರ್ಮಜ್ಞೋ ನ ಪಿಬಸ್ಯಪಿ ॥ ೮೮ ॥

ನಾರದ ಉವಾಚ:—

ತತೋ ವಿಮಮೃಶೇ ಶ್ಲೋಕೋ ಬಹುಧಾ ಸಮಭಾಗಿನಾಂ ।
ಅನಿಶ್ಚಯಾದ್ವಿಚಾರ್ಯಾಸೌ ಘಟಾದ್ಯೈಃ ಸಮಭಾಗಿತಾ ॥ ೮೯ ॥
ಬಹುಪೋತದ್ರವ್ಯಕ್ಷೇಪಃ ಸರ್ವೈಃ ಸಾ ಸಮಭಾಗಿತಾ ।
ಏವಂ ಕರ್ತುಃ ಫಲೈಃ ಸರ್ವೈಃ ಸಮಂ ಸ್ಯಾಚ್ಚ ಪುನಃ ಪುನಃ ॥ ೯೦ ॥
ಯಃ ಶುಚಿಶ್ಚ ದಿವಂ ಧ್ಯಾಯನ್ಪ್ರಾಸಾದಕೂಪಕರ್ತರಿ ।
ಜಲಪ್ರತಿಗ್ರಹಾಭಾವಾತ್ಪಿಬತೋಽಸ್ಯ ಸಮಂ ಫಲಂ ॥ ೯೧ ॥
ಇತಿ ನಿಶ್ಚಿತ್ಯ ಪ್ರೋವಾಚ ಕಾಲಭೀತಿರ್ನರಂ ಚ ತಂ ।
ಸತ್ಯಮೇತತ್ಕಿಂ ತು ಕುಂಭಪಯಸಾ ಗರ್ತಪೂರಣಂ ॥ ೯೨ ॥
ದೃಷ್ಟ್ವಾ ಪ್ರತ್ಯಕ್ಷತೋ ಮಾದೃಕ್ಕಥಂ ಪಿಬತಿ ಭೋ ವದ ।
ಸಾಧು ವಾಪ್ಯಥವಾಸಾಧು ನ ಪಿಬೇಯಂ ಕಥಂಚನ ॥ ೯೩ ॥
ಏವಂ ವಿನಿಶ್ಚಯಂ ದೃಷ್ಟ್ವಾಸ್ಯ ಸ್ಥಿರಂ ಕುರುನಂದನ ।
ಪುರುಷೋಽಸೌ ಪ್ರಹಸ್ಯೈವ ಕ್ಷಣಾದಂತರ್ದಧೇ ತತಃ ॥ ೯೪ ॥

---

ಆಡುತ್ತಿರುವೆ. ಪೂರ್ವಕಾಲದ ಜ್ಞಾನಿಗಳು ಹೇಳಿರುವ ಶ್ಲೋಕವು ನಿನ್ನಿಂದ ಕೇಳಲ್ಪಟ್ಟಿಲ್ಲವೆ? ಬಾವಿಯು ಒಬ್ಬನದು. ಬಿಂದಿಗೆಯು ಮತ್ತೊಬ್ಬನದು. ಹಗ್ಗವು ಬೇರೆಯವನದು. ನೀರನ್ನು ಸೇದುವವರು ಬೇರೆ. ಕುಡಿಯುವವರೂ ಬೇರೆ. ಆದರೆ ಇವರೆಲ್ಲರೂ ಫಲದಲ್ಲಿ ಸಮಭಾಗಿಗಳಾಗುವರು. ಆದುದರಿಂದ ಧರ್ಮಗಳನ್ನು ತಿಳಿದವನೆಂದು ಕೊಚ್ಚಿಕೊಳ್ಳುವ ನೀನು ನನ್ನ ಕೈಯಿಂದ ನೀರನ್ನೇಕೆ ಕುಡಿಯುವುದಿಲ್ಲ?''

೮೯–೯೩. ನಾರದನು ಹೇಳುತ್ತಾನೆ:–ಇಂತು ನಿಶ್ಚಯಿಸಿ ಕಾಲಭೀತಿಯು ಆ ಮನುಷ್ಯನನ್ನು ಕುರಿತು ಇಂತೆಂದನು:—''ಅದು ನಿಜವಾದರೂ ನಿನ್ನ ಕೈಯಿಂದಲೇ ಗರ್ತವನ್ನು ತುಂಬಿದುದನ್ನು ನಾನೇ ಪ್ರತ್ಯಕ್ಷವಾಗಿ ಕಂಡಿರುವುದರಿಂದ ಅದನ್ನು ತೀರ್ಥೋದಕವೆಂದು ಹೇಗೆ ತಾನೆ ಸ್ವೀಕರಿಸಲಿ? ನೀನೇ ಹೇಳು; ಹೇಗಾದರೂ ಸಾಧುವೊ, ಅಸಾಧುವೊ ಈ ನೀರನ್ನು ನಾನು ಖಂಡಿತವಾಗಿಯೂ ಸ್ವೀಕರಿಸುವುದಿಲ್ಲ.''

೯೪. ಇಂತಹ ಕಾಲಭೀತಿಯ ದೃಢವಾದ ಮನೋನಿಶ್ಚಯವನ್ನು ಕಂಡು ಆ ಪುರುಷನು ಗಟ್ಟಿಯಾಗಿ ನಗುತ್ತ ನಿಮಿಷಮಾತ್ರದಲ್ಲಿಯೇ ಅಲ್ಲಿಂದ ಅಂತರ್ಧಾನವನ್ನು ಹೊಂದಿದನು.

ಕಾಲಭೀತಿಶ್ಚ ಪರಮಂ ವಿಸ್ಮಯಂ ಸಮುಪಾಗತಃ ।
ವೃತ್ತಾಂತಃ ಕೋಽಯಮಿತ್ಯೇವ ಚಿಂತಯಾಮಾಸ ಭೂಯಸಾ ॥ ೯೫ ॥
ತತಶ್ಚಿಂತಯತಸ್ತಸ್ಯ ಬಿಲ್ವಾಧಸ್ತಾತ್ಸುಶೋಭನಂ ।
ಉಚ್ಛ್ರಿತಂ ಸುಮಹಾಲಿಂಗಂ ಪೃಥಿವ್ಯಾ ದ್ಯೋತಯದ್ದಿಶಃ ॥ ೯೬ ॥
ಪ್ರಾದುರ್ಭಾವೇ ತತಸ್ತಸ್ಯ ಮಹಾಲಿಂಗಸ್ಯ ಭಾರತ ।
ನನರ್ತ ಖೇಽಪ್ಸರೋವೃಂದಂ ಗಂಧರ್ವಾ ಲಲಿತಂ ಜಗುಃ ॥ ೯೭ ॥
ಪಾರಿಜಾತಮಯೀಂ ಪುಷ್ಪವೃಷ್ಟಿಮಿಂದ್ರೋ ಮುಮೋಚ ಹ ।
ಜಯೇತಿ ದೇವಾ ಮುನಯಸ್ತುಷ್ಟುವುರ್ವಿವಿಧೈಃ ಸ್ತವೈಃ ॥ ೯೮ ॥
ತಸ್ಮಿನ್ಮಹತಿ ಕೌರವ್ಯ ವರ್ತಮಾನೇ ಮಹೋತ್ಸವೇ ।
ಕಾಲಭೀತಿಃ ಪ್ರಮುದಿತಃ ಪ್ರಣಮ್ಯ ಸ್ತೋತ್ರಮೈರಯತ್ ॥ ೯೯ ॥

ಪಾಪಸ್ಯ ಕಾಲಂ ಭವಪಂಕಕಾಲಂ
ಕಲಾಕಲಂ ಕಾಲಮಾರ್ಗಸ್ಯ ಕಾಲಂ ।
ದೇವಂ ಮಹಾಕಾಲಮಹಂ ಪ್ರಪದ್ಯೇ
ಶ್ರೀಕಾಲಕಂಠಂ ಭವಕಾಲರೂಪಂ ॥ ೧೦೦ ॥

---

೯೫. ಕಾಲಭೀತಿಯು ಅತ್ಯಂತ ವಿಸ್ಮಯವನ್ನು ಹೊಂದಿ ನಡೆದ ವಿಚಾರದ ಕೊನೆಮೊದಲುಗಳನ್ನರಿಯಲಾರದೆ ಹೆಚ್ಚಿನ ಚಿಂತೆಗೊಳಗಾದನು.

೯೬-೯೭. ಆತನಿಂತು ಚಿಂತಿಸುತ್ತಿರಲು ಆ ಬಿಲ್ವವೃಕ್ಷದ ಕೆಳಗೆ ಪರಮ ಶೋಭನವಾಗಿ ಹತ್ತು ದಿಕ್ಕುಗಳನ್ನೂ ಬೆಳಗುತ್ತ ಒಂದು ಮಹಾಲಿಂಗವು ಉದ್ಭವಿಸಿತು. ಎಲೈ ಅರ್ಜುನನೆ! ಇಂತು ಮಹಾಲಿಂಗವು ಅಲ್ಲಿ ಪ್ರಾದುರ್ಭಾವ ವನ್ನು ಪಡೆಯಲು, ಗಗನದಲ್ಲಿ ಅಪ್ಸರಸ್ತ್ರೀಯರು ನರ್ತನಮಾಡಿದರು. ಗಂಧರ್ವರು ಮಧುರವಾಗಿ ಗಾನಮಾಡಿದರು.

೯೮. ಮಹೇಂದ್ರನು ಸ್ವರ್ಗದಿಂದ ಪಾರಿಜಾತ ಕುಸುಮಗಳ ಮಳೆಯನ್ನು ಸುರಿಸಿದನು. ದೇವತೆಗಳೂ, ಮುನಿಶ್ರೇಷ್ಠರೂ ಅನೇಕ ವಿಧಗಳಾದ ಸ್ತೋತ್ರ ಗಳಿಂದ ಹೊಗಳಿದರು.

೯೯. ಇಂತು ಅಪಾರವಾದ ಮಹೋತ್ಸವವು ನಡೆಯುತ್ತಿರಲು ಕಾಲ ಭೀತಿಯು ಸಂತೋಷದಿಂದ ಆ ಶಿವಲಿಂಗಕ್ಕೆ 'ನಮಸ್ಕರಿಸಿ ಇಂತು ಸ್ತೋತ್ರ ಮಾಡಿದನು.

೧೦೦. "ಓ ಪರಮೇಶ್ವರಾ! ಪಾಪಗಳಿಗೆ ಯಮಸ್ವರೂಪನಾಗಿ, ಸಂಸಾರ ವೆಂಬ ಕೆಸರನ್ನು ಕಳೆಯುವವನಾಗಿ, ಕಲಾಕಲನೂ, ಕಾಲಮಾರ್ಗಕ್ಕೆ ಕಾಲ ಸ್ವರೂಪನೂ, ಶ್ರೀಕಾಲಕಂಠನೂ, ಭವಕಾಲರೂಪನೂ ಆಗಿ ಮಹಾಕಾಲ ನೆನಿಸಿರುವ ನಿನ್ನನ್ನು ಶರಣುಹೊಂದುತ್ತೇನೆ !

ಈಶಾನವಕ್ತ್ರಂ ಪ್ರಣಮಾಮಿ ತ್ವಾಹಂ
ಸ್ತೌತಿ ಶ್ರುತಿಃ ಸರ್ವವಿದ್ಯೇಶ್ವರಸ್ತ್ವಂ ।
ಭೂತೇಶ್ವರಸ್ತ್ವಂ ಪ್ರಪಿತಾಮಹಸ್ತ್ವಂ
ತಸ್ಮೈ ನಮಸ್ತೇಽಸ್ತು ಮಹೇಶ್ವರಾಯ ॥ ೧೦೧ ॥
ಯಂ ಸ್ತೌತಿ ವೇದಸ್ತ್ವಮಹಂ ಪ್ರಪದ್ಯೇ
ತತ್ಪುರುಷಸಂಜ್ಞಂ ಶರಣಂ ದ್ವಿತೀಯಂ ।
ತ್ವಾಂ ವಿದ್ಮಹೇ ತಚ್ಚ ನಸ್ತ್ವಂ ಪ್ರದೇಹಿ
ಶ್ರೀರುದ್ರ ದೇವೇಶ ನಮೋ ನಮಸ್ತೇ ॥ ೧೦೨ ॥
ಅಘೋರವಕ್ತ್ರಂ ತ್ರಿತಯಂ ಪ್ರಪದ್ಯೇ
ಅಥರ್ವಜುಷ್ಟಂ ತವರೂಪಕಾಣಿ ।
ಅಘೋರಘೋರಾಣಿ ಚ ಘೋರಘೋರಾ
ಣ್ಯಹಂ ಸದಾ ನೌಮಿ ಭೂತಾನಿ ತುಭ್ಯಂ ॥ ೧೦೩ ॥
ಚತುರ್ಥವಕ್ತ್ರಂ ಚ ಸದಾ ಪ್ರಪದ್ಯೇ
ಸದ್ಯೋಽಭಿಜಾತಾಯ ನಮೋನಮಸ್ತೇ ।
ಭವೇಭವೇನಾದಿಭವೋ ಭವಸ್ವ
ಭವೋದ್ಭವೋ ಮಾಂ ಶಿವ ತತ್ರ ತತ್ರ ॥ ೧೦೪ ॥

---

೧೦೧-೧೦೨.. ದೇವಾ! ಈಶಾನವಕ್ತ್ರನಾದ ನಿನ್ನನ್ನು ನಮಸ್ಕರಿಸುವೆನು. ಎಲೈಮಹೇಶ್ವರನೇ! ಶ್ರುತಿಗಳು ನಿನ್ನನ್ನು ಸರ್ವವಿದ್ಯೇಶ್ವರನೆಂದೂ, ಭೂತೇಶ್ವರನೆಂದೂ, ಪ್ರಪಿತಾಮಹನೆಂದೂ ಸ್ತುತಿಸುತ್ತಿವೆ. ಅಂತಹ ನಿನಗೆ ನಮಸ್ಕಾರವಿರಲಿ! ಎಲೈ ಸ್ವಾಮಿಯೇ! ವೇದವು ಯಾವ ನಿನ್ನ ಎರಡನೆಯ ತತ್ಪುರುಷವೆಂಬ ಮುಖವನ್ನು ಸ್ತುತಿಸುವುದೋ ಅದನ್ನು ಶರಣುಹೊಂದುತ್ತೇನೆ. ನೀನು ಆ ತತ್ಪುರುಷಸ್ವರೂಪನೆಂದೇ ತಿಳಿದಿರುವೆನು. ಎಲೈ ಶ್ರೀರುದ್ರನೇ, ದೇವೇಶ! ನಿನಗೆ ನಮೋ ನಮಃ, ನಾನು ನಿನ್ನನ್ನು ಏನೆಂದು (ಮೋಕ್ಷಪ್ರದನೆಂದು) ಭಾವಿಸುವೆನೋ ಅದನ್ನೇ ನನಗೆ ಅನುಗ್ರಹಿಸು.

೧೦೩. ಮಹಾದೇವಾ! ಅಥರ್ವಣ ವೇದದಿಂದ ಸಂಸೇವಿತವಾಗಿರುವ ನಿನ್ನ ಮೂರನೆಯ ಅಘೋರ ವಕ್ತ್ರವನ್ನು ಶರಣುಹೊಂದುತ್ತೇನೆ. ಪ್ರಭುವೇ! ನಿನ್ನ ರೂಪಗಳೆಲ್ಲವೂ ಅಘೋರಗಳಾದರೂ, ಘೋರಗಳೂ, ಘೋರಘೋರಗಳೂ ಆದವುಗಳು. ಅಂತಹ ನಿನ್ನನ್ನು ನಾನು ಸದಾ ನಮಸ್ಕರಿಸುವೆನು.

೧೦೪. ಎಲೈ ಶಿವನೇ! ಸದ್ಯೋಜಾತವೆಂಬ ನಿನ್ನ ನಾಲ್ಕನೆಯ ವಕ್ತ್ರವನ್ನು ಶರಣುಹೊಂದುತ್ತೇನೆ. ಓ ಶಿವನೇ! ನಿನಗೆ ನಮೋ ನಮಃ. ಅನಾದಿಭವನೂ (ಸ್ವಯಂಭುವೂ), ಭವೋದ್ಭವನೂ ಆದ ನೀನು ಜನ್ಮಜನ್ಮಾಂತರಗಳಲ್ಲಿಯೂ ನನಗೆ ಶರಣ್ಯನಾಗು.

ನಮೋಽಸ್ತು ತೇ ವಾಮದೇವಾಯ ಜ್ಯೇಷ್ಠ
ರುದ್ರಾಯ ಕಾಲಾಯ ಕಲಾವಿಕಾರಿಣೇ ।
ಬಲಂಕರಾಯಾಪಿ ಬಲಪ್ರಮಾಥಿನೇ
ಭೂತಾನಿ ಹಂತ್ರೇ ಚ ಮನೋನ್ಮನಾಯ ॥ ೧೧೫ ॥
ತ್ರಿಯಂಬಕಂ ತ್ವಾಂ ಚ ಯಜಾಮಹೇ ವಯಂ
ಸುಪುಣ್ಯಗಂಧೈಃ ಶಿವಪುಷ್ಟಿವರ್ಧನಂ ।
ಉರ್ವಾರುಕಂ ಪಕ್ವಮಿವೋಗ್ರ ಬಂಧನಾತ್
ರಕ್ಷಸ್ವ ಮಾಂ ತ್ರ್ಯಂಬಕ ಮೃತ್ಯುಮಾರ್ಗಾತ್ ॥ ೧೧೬ ॥
ಷಡಕ್ಷರಂ ಮಂತ್ರವರಂ ತವೇಶ ।
ಜಪಂತಿ ಯೇ ಮುನಯೋ ವೀತರಾಗಾಃ ।
ತೇಷಾಂ ಪ್ರಸನ್ನೋಽಸಿ ಜಪಾಮಹೇ ತಂ
ತ್ವೋಂಕಾರಪೂರ್ವಂ ಚ ನಮಃ ಶಿವಾಯ ॥ ೧೧೭ ॥
ಏವಂ ಸ್ತುತೋ ಮಹಾದೇವೋ ಲಿಂಗಾನ್ನಿಃಸೃತ್ಯ ಭಾರತ ।
ತ್ರಿಜಗದ್ಯೋತಯನ್ಭಾಸಾ ಪ್ರತ್ಯಕ್ಷಃ ಪ್ರಾಹ ಸ ದ್ವಿಜಂ ॥ ೧೧೮ ॥

---

೧೧೫. ವಾಮದೇವನೂ, ಜ್ಯೇಷ್ಠನೂ, ರುದ್ರನೂ, ಕಾಲ (ಯಮನನ್ನು) ವಿಕಾರಕಾರಿಯೂ (ವಿಕಾರಗೊಳಿಸಿದವನೂ), ಭಕ್ತರಿಗೆ ಬಲವನ್ನನುಗ್ರಹಿಸುವವನೂ, ದುಷ್ಟರ ಬಲವನ್ನಡುಗಿಸುವವನೂ, ಭೂತಗಳೆಲ್ಲವನ್ನೂ ಲಯಗೊಳಿಸುವವನೂ, ಮನೋನ್ಮನನೂ ಆದ ಓ ಸ್ವಾಮಿಯೆ! ನಿನಗೆ ನಮಸ್ಕಾರವು!!

೧೧೬. ಓ ಪರಮಶಿವ! ಒಳ್ಳೆಯ ಪುಣ್ಯಕರವಾದ ವಾಸನೆಗಳಿಂದ ಕೂಡಿ ಶಿವ(ಮಂಗಳಕರವಾದ) ಪುಷ್ಟಿಯನ್ನು ವೃದ್ಧಿಗೊಳಿಸುವವನಾಗಿ ಮುಕ್ಕಣ್ಣನಾಗಿರುವ ನಿನ್ನನ್ನು ಪೂಜಿಸುತ್ತೇವೆ. ಎಲೈ ತ್ರಿಯಂಬಕನೇ! ಚೆನ್ನಾಗಿ ಹಣ್ಣಾದ ಕುಂಬಳಹಣ್ಣನ್ನು ತೊಟ್ಟಿನಿಂದೆಂತೋ ಅಂತು ನೀನು ನನ್ನನ್ನು ಮೃತ್ಯುಮಾರ್ಗವೆಂಬ ತೊಡಕಿನಿಂದ ಬಿಡಿಸಿ ಕಾಪಾಡು!

೧೧೭. ಪರಮೇಶ್ವರಾ! ನಿನ್ನ ಮಂತ್ರಶ್ರೇಷ್ಠವೆನಿಸಿರುವ, "ಓಂ ನಮಃ ಶಿವಾಯ" ಎಂಬ ಷಡಕ್ಷರ ಮಂತ್ರವನ್ನು ವೀತರಾಗರಾಗಿ ಯಾವ ಮುನಿಗಳು ಜಪಿಸುತ್ತಾರೆಯೋ ಅವರಿಗೆ ನೀನು ಪ್ರಸನ್ನನಾಗಿರುವೆ. ಆದುದರಿಂದ ನಾವು ಆ ಷಡಕ್ಷರ ಮಂತ್ರವನ್ನೇ ಜಪಿಸುತ್ತೇವೆ. (ನಮ್ಮ ವಿಷಯದಲ್ಲಿ ನೀನು ಪ್ರಸನ್ನನಾಗಬೇಕು!)

೧೧೮. ಅರ್ಜುನಾ! ಆ ಕಾಲಭೀತಿಯಿಂತು ಸ್ತುತಿಸುತ್ತಿರಲು ಮಹಾದೇವನು ಆ ಲಿಂಗದಿಂದ ಹೊರಬಂದು ಪ್ರತ್ಯಕ್ಷವಾಗಿ ತನ್ನ ತೇಜಸ್ಸಿನಿಂದ ಮೂರು ಲೋಕಗಳನ್ನೂ ಬೆಳಗುತ್ತ ಆ ಬ್ರಾಹ್ಮಣನನ್ನು ಕುರಿತು ಇಂತೆಂದನು:

ಯತ್ತ್ವಯಾತ್ರ ಮಹಾತೀರ್ಥೇ ಭೃಶಮಾರಾಧಿತೋ ದ್ವಿಜ ।
ತೇನಾತಿತುಷ್ಟಸ್ತೇ ವತ್ಸ ನೇಶಃ ಕಾಲಃ ಕಥಂಚನ ॥ ೧೦೯ ॥
ಅಹಂ ಚ ನರರೂಪೀ ಯೋ ದೃಷ್ಟ್ವಾ ತೇ ಧರ್ಮಸಂಸ್ಥಿತಿಂ ।
ಧನ್ಯಸ್ತ್ವದ್ಧರ್ಮಮಾರ್ಗೋಽಯಂ ಪಾಲ್ಯತೇ ಯದ್ಭವದ್ವಿಧೈಃ ॥ ೧೧೦ ॥
ಸರ್ವತೀರ್ಥೋದಕೈರ್ಗರ್ತಃ ಪೂರಿತೋ ಮೇ ಸರಸ್ತಥಾ ।
ಜಲಮೇತನ್ಮಹಾಪುಣ್ಯಂ ತ್ವದರ್ಥಂ ಮೇ ಸಮಾಹೃತಂ ॥ ೧೧೧ ॥
ಸಪ್ತಮಂತ್ರರಹಸ್ಯಂ ಚ ಯತ್ಕೃತಂ ಸ್ತವನಂ ಮಮ ।
ಅನೇನ ಪಠ್ಯಮಾನೇನ ಸಪ್ತಮಂತ್ರಫಲಂ ಭವೇತ್ ॥ ೧೧೨ ॥
ಅಭೀಷ್ಟಂ ಚ ವರಂ ಮತ್ತೋ ವೃಣೀಷ್ವ ಮನಸೇಪ್ಸಿತಂ ।
ತ್ವಯಾತಿತೋಷಿತೋ ಹ್ಯಸ್ಮಿ ನಾದೇಯಂ ವಿದ್ಯತೇ ತವ ॥ ೧೧೩ ॥

ಕಾಲಭೀತಿರುವಾಚ :—

ಧನ್ಯೋಽಸ್ಮ್ಯನುಗೃಹೀತೋಽಸ್ಮಿ ಯತ್ತ್ವಂ ತುಷ್ಟೋಽಸಿ ಶಂಕರ ।
ತ್ವತ್ತೋಷಾತ್ಸಫಲಾ ಧರ್ಮಾಃ ಶ್ರಮಾಯೈವಾನ್ಯಥಾ ಮತಾಃ ॥ ೧೧೪ ॥

---

೧೦೯. "ಎಲೈ ದ್ವಿಜನೆ! ನೀನು ಈ ಮಹಾಕ್ಷೇತ್ರದಲ್ಲಿ ನನ್ನನ್ನು ಬಹು ವಿಧವಾಗಿ ಪೂಜಿಸಿರುವುದರಿಂದ ನಾನು ಸಂತೋಷಗೊಂಡಿರುವೆನು. ಮಗನೆ! ಕಾಲನು ಎಂದಿಗೂ ನಿನಗೆ ನಿಯಾಮಕನಾಗುವುದಿಲ್ಲವು.

೧೧೦. ನಿನ್ನ ಧರ್ಮಮಾರ್ಗತತ್ಪರತೆಯನ್ನು ಪರೀಕ್ಷಿಸಲು ನಾನೇ ಆ ಮನುಷ್ಯನ ರೂಪದಿಂದ ಬಂದಿದ್ದೆನು. ನಿನ್ನಂತಹ ಭಕ್ತರಿಂದ ಪಾಲಿಸಲ್ಪಡುತ್ತಿರುವ ಈ ಸನಾತನಧರ್ಮವೇ ಅತ್ಯಂತ ಧನ್ಯವಾದುದು!

೧೧೧. ಈ ಗರ್ತವೂ ಸರೋವರವೂ ಸಕಲ ತೀರ್ಥಗಳ ಉದಕಗಳಿಂದ ನನ್ನಿಂದಲೇ ತುಂಬಲ್ಪಟ್ಟುದು. ಮಹಾಪುಣ್ಯಪ್ರದಾಯಕವಾದ ಈ ಜಲವು ನಿನಗಾಗಿಯೇ ನನ್ನಿಂದ ಶೇಖರಿಸಲ್ಪಟ್ಟಿತು.

೧೧೨. ಸಪ್ತಮಂತ್ರ ರಹಸ್ಯಗಳನ್ನೊಳಗೊಂಡ ನಿನ್ನ ಸ್ತೋತ್ರವನ್ನು ಯಾರು ಪಠಿಸುವರೊ, ಅವರಿಗೆ ಆ ವೈದಿಕ ಮಂತ್ರಗಳನ್ನು ಜಪಿಸಿದ ಪುಣ್ಯಫಲ ವುಂಟಾಗುವುದು.

೧೧೩. ಈಗ ನಿನ್ನ ಮನಸ್ಸಿಗೆ ಬಂದ ಇಷ್ಟಾರ್ಥಗಳನ್ನು ಕೇಳುವವನಾಗು. ನಿನ್ನ ಪೂಜೆಯಿಂದ ನಾನು ಬಹಳವಾಗಿ ಸಂತೋಷಗೊಂಡಿರುವೆನು. ನಿನಗೆ ಕೊಡಬಾರದುದಾವುದೂ ಇರುವುದಿಲ್ಲವು."

೧೧೪. ಕಾಲಭೀತಿಯು ಹೇಳುತ್ತಾನೆ:—"ಎಲೈ ಮಹೇಶ್ವರನೆ! ನೀನು ಸಂತೋಷಗೊಂಡುದರಿಂದಲೇ ನಾನು ಧನ್ಯನಾದೆನು. ನಿನ್ನ ಅನುಗ್ರಹವೂ ನನ್ನಲ್ಲಿ ಉಂಟಾಯಿತು. ಸಕಲ ಧರ್ಮಾಚರಣೆಗಳೂ ನಿನ್ನ ಸಂತೋಷಕ್ಕಾ

ಯದಿ ತುಷ್ಟೋಽಸಿ ಸಾನ್ನಿಧ್ಯಂ ಲಿಂಗೇಽತ್ರ ಕ್ರಿಯತಾಂ ಸದಾ ।
ಅಕ್ಷಯಂ ತತ್ಕೃತಂ ಚಾಸ್ತು ಯಲ್ಲಿಂಗೇ ಕ್ರಿಯತೇಽತ್ರ ಚ ॥ ೧೧೫ ॥
ಜಪತೋ ಯತ್ಫಲಂ ದೇವ ಪಂಚಮಂತ್ರಾಯುತೇನ ಚ ।
ತತ್ಫಲಂ ಜಾಯತಾಂ ನೃಣಾಮಸ್ಯ ಲಿಂಗಸ್ಯ ದರ್ಶನೇ ॥ ೧೧೬ ॥
ಕಾಲಮಾರ್ಗಾದಹಂ ಯಸ್ಮಾನ್ಮೋಚಿತೋಽಹಂ ಮಹೇಶ್ವರ ।
ಮಹಾಕಾಲಮಿತಿ ಖ್ಯಾತಂ ಲಿಂಗಂ ತಸ್ಮಾದ್ಭವತ್ವಿದಂ ॥ ೧೧೭ ॥
ಅಸ್ಮಿಂಶ್ಚ ಕೂಪೇ ಯೋ ಮರ್ತ್ಯಃ ಸ್ನಾತ್ವಾ ತರ್ಪಯತೇ ಪಿತೄನ್ ।
ಸರ್ವತೀರ್ಥಫಲಂ ಚಾಸ್ತು ಪಿತೄಣಾಮಕ್ಷಯಾ ಗತಿಃ ॥ ೧೧೮ ॥
ಇತಿ ತಸ್ಯ ವಚಃ ಶ್ರುತ್ವಾ ಪ್ರೀತಸ್ತಂ ಶಂಕರೋಽಬ್ರವೀತ್ ।
ಸ್ವಾಯಂಭುವಂ ಯತ್ರ ಲಿಂಗಂ ತತ್ರ ನಿತ್ಯಂ ವಸಾಮ್ಯಹಂ ॥ ೧೧೯ ॥
ಸ್ವಯಂಭುಬಾಣರತ್ನೋತ್ಥಧಾತುಪಾಷಾಣಲೋಹಜಂ ।
ಲಿಂಗಂ ಕ್ರಮೇಣ ಫಲದಮಂತ್ಯಾತ್ಪೂರ್ವಂ ದಶೋತ್ತರಂ ॥ ೧೨೦ ॥

---

ಗಿಯೆ ಹೊರತು ನಿನ್ನನ್ನು ತೃಪ್ತಿಪಡಿಸದೆ ಮಾಡುವ ಸಕಲ ಕಾರ್ಯಗಳೂ ವ್ಯರ್ಥಗಳೇ ಸರಿಯೆಂದು ಹೇಳಲ್ಪಟ್ಟಿರುವುವು.

೧೧೫–೧೧೬. ನೀನು ಸಂತುಷ್ಟನಾಗಿದ್ದರೆ ಈ ಶಿವಲಿಂಗದಲ್ಲಿಯೇ ಯಾವಾಗಲೂ ಸನ್ನಿಹಿತನಾಗಿರು. ಇದರ ಸಮಕ್ಷಮದಲ್ಲಿ ಮಾಡಿದ ಸಕಲ ಶುಭಕಾರ್ಯಗಳೂ ಅಕ್ಷಯ ಫಲದಾಯಕಳಾಗಿ ಪರಿಣಮಿಸಲಿ. ಎಲೈ ದೇವೋತ್ತಮನೆ! ಪಂಚಮಂತ್ರಗಳನ್ನು ಹತ್ತುಸಾವಿರ ಸಲ ಜಪಿಸುವುದರಿಂದುಂಟಾಗುವ ಪುಣ್ಯವು ಈ ಶಿವಲಿಂಗವನ್ನು ದರ್ಶನಮಾಡುವ ಮನುಷ್ಯರಿಗೆ ಲಭಿಸಲಿ.

೧೧೭–೧೧೮. ಮಹೇಶ್ವರನೆ! ಈ ಶಿವಲಿಂಗದ ಮಾಹಾತ್ಮ್ಯೆಯಿಂದ ನಾನು ಮೃತ್ಯುಮಾರ್ಗದಿಂದ ಬಿಡುಗಡೆಯನ್ನು ಹೊಂದಿದ ಕಾರಣದಿಂದ ಈ ಶಿವಲಿಂಗವು ಮಹಾಕಾಲವೆಂದು ಪ್ರಖ್ಯಾತವಾಗಲಿ. ಈ ಕೂಪದಲ್ಲಿ ಯಾವ ಮಾನವನು ಸ್ನಾನವನ್ನು ಮಾಡಿ ಪಿತೃಗಳಿಗೆ ತರ್ಪಣವನ್ನು ಕೊಡುವನೋ, ಅವನಿಗೆ ಸಕಲ ತೀರ್ಥಗಳಲ್ಲಿ ಮಿಂದ ಶುಭಫಲವುಂಟಾಗಲಿ. ಅವನ ಪಿತೃಗಳಿಗೂ ಶಾಶ್ವತವಾದ ಸದ್ಗತಿಯು ಪ್ರಾಪ್ತವಾಗಲಿ."

೧೧೯. ಇಂತೆಂದ ಕಾಲಭೀತಿಯ ಮಾತುಗಳನ್ನು ಕೇಳಿ ಶಂಕರನು ಪ್ರೀತಿಗೊಂಡು ಹೇಳಿದನು :— "ಈ ಸ್ವಯಂಭು ಲಿಂಗವಿರುವೆಡೆಯಲ್ಲಿ ನಾನು ಶಾಶ್ವತವಾಗಿ ನೆಲಸಿರುವೆನು.

೧೨೦. ಸ್ವಯಂಭು ಲಿಂಗ, ಬಾಣಲಿಂಗ, ರತ್ನಲಿಂಗ, ಗೈರಿಕಾದಿಧಾತುಮಯಲಿಂಗ, ಪಾಷಾಣ ಲಿಂಗ, ಲೋಹಮಯ ಲಿಂಗ—ಇವುಗಳಲ್ಲಿ ವಿಪರೀತ ಕ್ರಮದಿಂದ ಒಂದಕ್ಕಿಂತ ಒಂದು ದಶಗುಣಿತವಾದ ಫಲವನ್ನು ಕೊಡುವುವು.

ಆಕಾಶೇ ತಾರಕಾಲಿಂಗಂ ಪಾತಾಲೇ ಹಾಟಕೇಶ್ವರಂ ।
ಸ್ವಾಯಂಭುವಂ ಧರಾಪೃಷ್ಠೇ ತದೇತತ್ತ್ರಿತಯಂ ಸಮಂ ॥ ೧೨೧ ॥
ವಿಶೇಷಾತ್ಪ್ರಾರ್ಥಿತಂ ಯಚ್ಚ ತಚ್ಚ ಸರ್ವಂ ಭವಿಷ್ಯತಿ ।
ಅತ್ರ ಪುಷ್ಪಂ ಫಲಂ ಪೂಜಾ ನೈವೇದ್ಯಂ ಸ್ತವನಕ್ರಿಯಾ ॥ ೧೨೨ ॥
ದಾನಂ ವಾನ್ಯಚ್ಚ ಯತ್ಕಿಂಚಿದಕ್ಷಯಂ ತದ್ಭವಿಷ್ಯತಿ ।
ಮಾಘಾಸಿತಚತುರ್ದಶ್ಯಾಂ ಶಿವಯೋಗೇ ಚ ಪುತ್ರಕ ॥ ೧೨೩ ॥
ಲಿಂಗಾಚ್ಚ ಪೂರ್ವತಃ ಕೂಪೇ ಸ್ನಾತ್ವಾ ಯಸ್ತರ್ಪಯೇತ್ಪಿತೄನ್ ।
ಸರ್ವತೀರ್ಥಫಲಾವಾಪ್ತಿಃ ಪಿತೄಣಾಂ ಚಾಕ್ಷಯಾ ಗತಿಃ ॥ ೧೨೪ ॥
ತಸ್ಯಾಂ ರಾತ್ರೌ ಮಹಾಕಾಲಂ ಯಾಮೇ ಯಾಮೇ ಪ್ರಪೂಜಯೇತ್ ।
ಯಃ ಕ್ಷಿಪೇತ್ಸರ್ವಲಿಂಗೇಷು ಸ ಜಾಗರಫಲಂ ಲಭೇತ್ ॥ ೧೨೫ ॥
ಜಿತೇಂದ್ರಿಯಶ್ಚ ಯೋ ನಿತ್ಯಂ ಮಾಂ ಲಿಂಗೇಽತ್ರ ಪ್ರಪೂಜಯೇತ್ ।
ಭುಕ್ತಿಮುಕ್ತೀ ನದೂರಸ್ಥೇ ತಸ್ಯ ನಿತ್ಯಂ ದ್ವಿಜೋತ್ತಮ ॥ ೧೨೬ ॥
ಮಾಘೇ ಚತುರ್ದಶ್ಯಷ್ಟಮ್ಯಾಂ ಸೋಮವಾರೇ ಚ ಪರ್ವಣಿ ।
ಸ್ನಾತ್ವಾ ಸರಸಿ ಯೋಽಭ್ಯರ್ಚ್ಯ ಲಿಂಗಮೇತಚ್ಛಿವಂ ವ್ರಜೇತ್ ॥ ೧೨೭ ॥

---

೧೨೧. ಆಕಾಶದಲ್ಲಿ ತಾರಕಲಿಂಗವೂ, ಪಾತಾಲದಲ್ಲಿ ಹಾಟಕೇಶ್ವರ ಲಿಂಗವೂ, ಭೂಲೋಕದಲ್ಲಿ ಮಹಾಕಾಲ ಲಿಂಗವೂ ಸಮಾನ ಫಲದಾಯಕಗಳು.

೧೨೨–೧೨೪. ನೀನು ಈಗ ಕೇಳಿದುದೆಲ್ಲವೂ ಹೆಚ್ಚಾಗಿ ನೆರವೇರುವುದು. ಇಲ್ಲಿ ಅರ್ಪಿಸಿದ ಪುಷ್ಪ, ಫಲ, ಜಲ, ಪೂಜೆ, ನೈವೇದ್ಯ, ಸ್ತೋತ್ರ, ದಾನಧರ್ಮ ಗಳು ಮುಂತಾದ ಸಕಲ ಕಾರ್ಯಗಳೂ, ಪೂಜೆಗಳೂ ಅಕ್ಷಯ ಫಲದಾಯಕ ಗಳಾಗುತ್ತವೆ. ಎಲೈ ಪುತ್ರನೆ! ಮಾಘ ಕೃಷ್ಣಚತುರ್ದಶಿಯ ಶಿವರಾತ್ರಿ ಯಲ್ಲಿ ಲಿಂಗದ ಪೂರ್ವದಲ್ಲಿರುವ ಕೂಪದಲ್ಲಿ ಸ್ನಾನಮಾಡಿ ಯಾವನು ಪಿತೃ ತರ್ಪಣಗಳನ್ನು ಮಾಡುವನೊ, ಅವನಿಗೆ ಸಕಲ ತೀರ್ಥಗಳ ಸ್ನಾನದ ಪುಣ್ಯವು ಪ್ರಾಪ್ತವಾಗಿ, ಅವನ ಪಿತೃಗಳಿಗೆ ಶಾಶ್ವತವಾದ ಬ್ರಹ್ಮಲೋಕವು ದೊರಕುವುದು.

೧೨೫. ಆ ರಾತ್ರಿಯಲ್ಲಿ ಪ್ರತಿಯಾಮದಲ್ಲಿಯೂ ಶಿವಪೂಜೆಯನ್ನು ಮಾಡ ಬೇಕು. ಇಂತು ಸಕಲ ಲಿಂಗಗಳನ್ನೂ ಪೂಜಿಸಲು ಆತನು ಜಾಗರಣೆಯ ಫಲವನ್ನು ಹೊಂದುವನು.

೧೨೬. ಯಾವನು ಜಿತೇಂದ್ರಿಯನಾಗಿ ನನ್ನನ್ನು ಈ ಲಿಂಗದಲ್ಲಿ ಪೂಜಿಸು ವನೊ, ಅವನಿಗೆ ಐಹಿಕಾಮುಷ್ಮಿಕ ಸುಖಗಳೆರಡೂ ಸಮೀಪವರ್ತಿಗಳಾಗಿರುವುವು.

೧೨೭. ಮಾಘಮಾಸದಲ್ಲಿ ಚತುರ್ದಶಿ, ಅಷ್ಟಮಿ, ಸೋಮವಾರ, ಪರ್ವ ದಿವಸಗಳು—ಈ ದಿನಗಳಲ್ಲಿ ಈ ಲಿಂಗವನ್ನು ಪೂಜಿಸುವ ಮನುಷ್ಯನು ಶಿವ ಸಾಯುಜ್ಯವನ್ನು ಪಡೆಯುವನು.

**ದಾನಂ ತಪೋ ರುದ್ರಜಾಪಃ ಸರ್ವಮಕ್ಷಯಮೇವ ಚ ।**
**ತ್ವಂ ಚ ನಂದೀ ದ್ವಿತೀಯೋ ಮೇ ಪ್ರತೀಹಾರೋ ಭವಿಷ್ಯಸಿ ॥ ೧೨೮ ॥**
**ಕಾಲಮಾರ್ಗಜಯಾದ್ವತ್ಸ ಮಹಾಕಾಲಾಭಿಧಶ್ಚಿರಂ ।**
**ಕರಂಧಮೋಽತ್ರ ರಾಜರ್ಷಿರಚಿರಾದಾಗಮಿಷ್ಯತಿ ॥ ೧೨೯ ॥**
**ತಸ್ಯ ಪ್ರೋಚ್ಯ ಭವಾನ್ಧರ್ಮಾಂಸ್ತತೋಮಲ್ಲೋಕಮಾವ್ರಜ ।**
**ಇತ್ಯುಕ್ತ್ವಾ ಭಗವಾನ್ರುದ್ರೋ ಲಿಂಗಮಧ್ಯೇ ವ್ಯಲೀಯತ ॥ ೧೩೦ ॥**
**ಮಹಾಕಾಲೋಽಪಿ ಮುದಿತಸ್ತತ್ರ ತೇಪೇ ಮಹತ್ತರಃ ॥ ೧೩೧ ॥**

**ಇತಿ ಮಹಾಕಾಲಪ್ರಾದುರ್ಭಾವಃ ॥**

**ನಾರದ ಉವಾಚ :—**

**ಅಥ ಕೇನಾಪಿ ಕಾಲೇನ ಪಾರ್ಥ ರಾಜಾ ಕರಂಧಮಃ ।**
**ವಿಶೇಷಮಿಚ್ಛುರ್ಧರ್ಮೇಷು ಶ್ರುತ್ವಾ ತೀರ್ಥಮಹಾಗುಣಾನ್ ॥ ೧೩೨ ॥**
**ಮಹಾಕಾಲ ಚರಿತ್ರಂ ಚ ತತ್ರೈವ ಸಮುಪಾಯಯೌ ।**
**ಮಹೀಸಾಗರತೋಯೇಽಸೌ ಸ್ನಾತ್ವಾ ಲಿಂಗಾನ್ಯಥಾರ್ಚಯತ್ ।**
**ಮಹಾಕಾಲಮನುಪ್ರಾಪ್ಯ ಪರಮಾಂ ಪ್ರೀತಿಮಾಗತಃ ॥ ೧೩೩ ॥**

---

೧೨೮. ಇಲ್ಲಿ ಮಾಡುವ ದಾನ, ತಪಸ್ಸು, ರುದ್ರಜಪ, ಮುಂತಾದುದೆಲ್ಲವೂ ಅಕ್ಷಯವಾಗುವುದು. ನೀನೂ ಸಹ ನಂದಿಯಾಗಿ ನನಗೆ ಎರಡನೆಯ ಪ್ರತಿಹಾರಿಯಾಗುವೆ.

೧೨೯. ವತ್ಸ! ನೀನು ಭಕ್ತಿ ವಿಶೇಷದ ಫಲವಾಗಿ ಕಾಲನನ್ನು ಜಯಿಸಿದೆಯಾದುದರಿಂದ ನಿನಗೆ ಮಹಾಕಾಲನೆಂಬ ನಾಮವು ಶಾಶ್ವತವಾಗಿ ನಿಲ್ಲುವುದು. ಕೆಲವು ಕಾಲದಲ್ಲಿಯೇ ಇಲ್ಲಿಗೆ ಕರಂಧಮನೆಂಬೊಬ್ಬ ರಾಜರ್ಷಿಯು ಬರುವನು.

೧೩೦. ಆತನಿಗೆ ಧರ್ಮಗಳನ್ನುಪದೇಶಿಸಿ ಬಳಿಕ ನನ್ನ ಲೋಕವನ್ನು ಸೇರುವವನಾಗು.” ಇಂತೆಂದು ಹೇಳಿ ಭಗವಂತನಾದ ಮಹೇಶ್ವರನು ಆ ಲಿಂಗದಲ್ಲಿಯೇ ಅಂತರ್ಹಿತನಾದನು.

೧೩೧. ಮಹಾಕಾಲನೂ ಕೂಡ ಪರಮಸಂತೋಷಗೊಂಡು ಮುನ್ನಿನಂತೆಯೇ ಉಗ್ರವಾದ ತಪಸ್ಸನ್ನು ಮಾಡುತ್ತಿದ್ದನು.

**ಇಂತಿದು ಮಹಾಕಾಲ ಪ್ರಾದುರ್ಭಾವವು.**

೧೩೨–೩೩. ನಾರದನು ಹೇಳುತ್ತಾನೆ:—‘ಎಲೈ ಪಾರ್ಥನೆ! ಇಂತು ಕೆಲವು ಕಾಲ ಕಳೆಯಲು ರಾಜನಾದ ಕರಂಧಮನೆಂಬುವನು ಧರ್ಮವಿಶೇಷಗಳನ್ನು ಕೇಳಲಿಚ್ಛಿಸಿದವನಾಗಿ ಈ ಮಹೀಸಾಗರ ಕ್ಷೇತ್ರದ ಮಹಾಗುಣಗಳನ್ನೂ ಮಹಾಕಾಲ ಚರಿತ್ರೆಯನ್ನೂ ಕೇಳಿ ಅಲ್ಲಿಗೆ ಬಂದನು. ಆತನು ಮಹೀಸಾಗರಸಂಗಮದಲ್ಲಿ ಸ್ನಾನವನ್ನು ಮಾಡಿ ಲಿಂಗಗಳೆಲ್ಲವನ್ನೂ ಯಥಾವಿಧಿಯಾಗಿ ಪೂಜಿಸಿ ಮಹಾಕಾಲ ಲಿಂಗವನ್ನು ಕಂಡು ವಿಶೇಷ ಪ್ರೀತನಾದನು.

ಸ ಪಶ್ಯನ್ಸುಮಹಾಲಿಂಗಂ ನಾತೃಪ್ಯತ ಜನೇಶ್ವರಃ ।
ಯಥಾ ದರಿದ್ರಃ ಕೃಪಣೋ ನಿಧಿಕುಂಭಮವಾಪ್ಯ ಚ ॥ ೧೩೪ ॥
ಸಫಲಂ ಜೀವಿತಂ ಮೇನೇ ಮಹಾಕಾಲಂ ನಿರೀಕ್ಷ್ಯ ಸಃ ।
ಪಂಚಮಾತ್ರಾಯುತಜಪಫಲಂ ಯಸ್ಯೇಹ ದರ್ಶನಾತ್ ॥ ೧೩೫ ॥
ತತಃ ಸಪರ್ಯಯಾಭ್ಯರ್ಚ್ಯ ಮಹತ್ಯಾಸೌ ಪ್ರಣಮ್ಯ ಚ ।
ಶ್ರುತ್ವಾ ಚ ಲಿಂಗಪ್ರವರಂ ಮಹಾಕಾಲಮುಪಾಸದತ್ ॥ ೧೩೬ ॥
ತತೋ ರುದ್ರವಚಃ ಸ್ಮೃತ್ವಾ ಮಹಾಕಾಲಃ ಸ್ಮಯನ್ನಿವ ।
ಪ್ರತ್ಯುದ್ಗಮ್ಯ ನೃಪಂ ಪೂಜಾಮರ್ಘ್ಯಂ ಚ ಪ್ರತ್ಯಪಾದಯತ್ ॥ ೧೩೭ ॥
ತತಃ ಕುಶಲಪ್ರಶ್ನಾದಿ ಕೃತ್ವಾ ಶಾಂತಮುಖಂ ನೃಪಃ ।
ಮಹಾಕಾಲಮುಪಾಮಂತ್ರ್ಯ ಕಥಾಂತೇ ವಾಕ್ಯಮಬ್ರವೀತ್ ॥ ೧೩೮ ॥
ಭಗವನ್ಸಂಶಯೋ ಮಹ್ಯಂ ಸದಾಯಂ ಪರಿವರ್ತತೇ ॥ ೧೩೯ ॥
ಯದಿದಂ ತರ್ಪಣಂ ನಾಮ ಪಿತೄಣಾಂ ಕ್ರಿಯತೇ ನೃಭಿಃ ।
ಜಲಮಧ್ಯೇ ಜಲಂ ಯಾತಿ ಕಥಂ ತೃಪ್ಯಂತಿ ಪೂರ್ವಜಾಃ ॥ ೧೪೦ ॥

---

೧೩೪. ಆ ಮಹಾರಾಜನು ಮಹಾಲಿಂಗವನ್ನು ಎಷ್ಟು ನೋಡಿದರೂ ತೃಪ್ತನಾಗಲಿಲ್ಲ. ಅವನಿಗೆ ಆ ಸಮಯದಲ್ಲಿ ಕೃಪಣನಾದ ದರಿದ್ರನಿಗೆ ಬಂಗಾರದ ನಾಣ್ಯಗಳ ಕೊಡವೇ ಸಿಕ್ಕಿದಂತಾಯಿತು.

೧೩೫. ಯಾವುದರ ದರ್ಶನದಿಂದ ಹತ್ತುಸಾವಿರ ರುದ್ರ ಪಂಚಾಕ್ಷರಿ ಜಪದ ಫಲವು ಲಭಿಸುವುದೊ, ಅಂತಹ ಮಹಾಕಾಲೇಶ್ವರ ಲಿಂಗವನ್ನು ನೋಡಿ ಅವನು ತನ್ನ ಜೀವನವು ಸಾರ್ಥಕವಾಯಿತೆಂದು ತಿಳಿದನು.

೧೩೬–೧೩೭. ಬಳಿಕ ಅದನ್ನು ವಿಶೇಷ ಭಕ್ತಿಯಿಂದಲೂ ದ್ರವ್ಯಸಮೂಹ ದಿಂದಲೂ ಪೂಜಿಸಿ ನಮಸ್ಕರಿಸಿ ಆ ಲಿಂಗದ ಪ್ರಾದುರ್ಭಾವವನ್ನು ಕೇಳಿ ತರುವಾಯ ಮಹಾಕಾಲನನ್ನು ನೋಡಲು ಬಂದನು. ಆಗ ಮಹಾಕಾಲನು ಮಹೇಶ್ವರನ ಮಾತನ್ನು ಸ್ಮರಿಸಿಕೊಂಡು ಮುಗುಳ್ನಗೆಯೊಡನೆ ಇದಿರೆದ್ದು ಬಂದು ಅರ್ಘ್ಯಪಾದ್ಯಾದಿ ಅತಿಥಿಪೂಜೆಯನ್ನು ಕಲ್ಪಿಸಿದನು.

೧೩೮. ಬಳಿಕ ಶಾಂತವಾದ ಮುಖಭಾವವುಳ್ಳ ಬ್ರಾಹ್ಮಣೋತ್ತಮನನ್ನು ಕಂಡು ಮಹಾರಾಜನು ಕುಶಲಪ್ರಶ್ನೆಯನ್ನು ಮಾಡಿ ಹತ್ತಿರದಲ್ಲಿ ಕುಳ್ಳಿರಿಸಿ ಕೊಂಡು ಉಪಚಾರಾನಂತರದಲ್ಲಿ ಇಂತೆಂದನು.

೧೩೯–೧೪೦. "ಎಲೈ ಬ್ರಾಹ್ಮಣಶ್ರೇಷ್ಠನೆ! ನನ್ನ ಮನಸ್ಸಿನಲ್ಲಿ ಸಂದೇಹ ವೊಂದು ಯಾವಾಗಲೂ ಉಂಟಾಗುತ್ತಿರುವುದು. ಮನುಷ್ಯರಿಂದ ಪಿತೃಗಳ ನ್ನುದ್ದೇಶಿಸಿ ತರ್ಪಣವೆಂಬ ಕ್ರಿಯೆಯು ಮಾಡಲ್ಪಡುವುದಲ್ಲವೆ! ಈ ತರ್ಪಣದ

**ಏವಂ ಪಿಂಡಾದಿಪೂಜಾ ಚ ಸರ್ವಮತ್ರೈವ ದೃಶ್ಯತೇ ।**
**ಕಥಮೇವಂ ಸ್ಮ ಮನ್ಯಾಮಃ ಪಿತ್ರಾದ್ಯೈರುಪಭುಜ್ಯತೇ ॥ ೧೪೧ ॥**
**ನಚೈತದಸ್ತಿ ಯತ್ತೇಷಾಂ ನೋಪತಿಷ್ಠತಿ ಕಿಂಚನ ।**
**ಸ್ವಪ್ನೇ ಯಥಾಕ್ರಮ್ಯ ನರಂ ದೃಶ್ಯಂತೋ ಯಾಚಕಾಶ್ಚ ತೇ ॥ ೧೪೨ ॥**
**ದೇವಾನಾಂ ಚಾಪಿ ದೃಶ್ಯಂತೇ ಪ್ರತ್ಯಕ್ಷಾಃ ಪ್ರತ್ಯಯಾಃ ಸದಾ ।**
**ತತ್ಕಥಂ ಪ್ರತಿಗೃಹ್ಣಂತಿ ಮನೋ ಮೇಽತ್ರಪ್ರಮುಹ್ಯತಿ ॥ ೧೪೩ ॥**

**ಮಹಾಕಾಲ ಉವಾಚ :—**

**ಯೋನಿರೇವಂವಿಧಾ ತೇಷಾಂ ಪಿತೄಣಾಂ ಚ ದಿವೌಕಸಾಂ ।**
**ದೂರೋಕ್ತಂ ದೂರಪೂಜಾ ಚ ದೂರಸ್ತುತಿರಥಾಪಿ ಯತ್ ॥ ೧೪೪ ॥**
**ಭವ್ಯಂ ಭೂತಂ ಭವಿಷ್ಯಚ್ಚ ಸರ್ವಂ ಜಾನಂತಿ ಯಾಂತಿ ಚ ।**
**ಪಂಚತನ್ಮಾತ್ರರೂಪಂ ಚ ಮನೋಬುದ್ಧಿರಹಂ ಜಡಾಃ ॥ ೧೪೫ ॥**

---

ಜಲವು ಇತರ ಜಲದೊಡನೆ ಸೇರುವುದು. ಇದರಿಂದ ಆ ಮಾನವನ ಪೂರ್ವಜರು ತೃಪ್ತಿಗೊಳ್ಳುವುದೆಂತು ?

೧೪೧. ಹಾಗೆಯೇ ನಾವು ಮಾಡುವ ಪಿಂಡಪ್ರದಾನಾದಿಗಳಲ್ಲಿಯೂ ಪದಾರ್ಥಗಳೆಲ್ಲವೂ ಇಲ್ಲಿಯೇ ಕಾಣುತ್ತಿರುವುವು. ಆದುದರಿಂದ ಪಿತೃಗಳು ಇದನ್ನು ಭೋಜನಮಾಡುವರೆಂದು ಹೇಗೆ ನಂಬಬಹುದು ?

೧೪೨. ಅವರು ಸ್ವರೂಪರಹಿತರೆಂದೂ, ಯಾವ ವಿಧವಾದ ಉಪಚಾರವೂ ಅವರಿಗೆ ಸೇರುವುದಿಲ್ಲವೆಂದು ಹೇಳುವುದೂ ಸಮಾಚೀನವಲ್ಲ. ಅವರು ಕರ್ತೃವಿನ ಸ್ವಪ್ನದಲ್ಲಿ ಮನುಷ್ಯನನ್ನು ಸುತ್ತುವರೆದು ಯಾಚಿಸುವುದನ್ನು ಕಾಣು ವುದಿಲ್ಲವೆ ?

೧೪೩. ಹಾಗೆಯೇ ದೇವತೆಗಳ ವಿಷಯದಲ್ಲಿಯೂ ಪ್ರತ್ಯಕ್ಷಗಳಾದ ಅನೇಕ ವಿಶ್ವಾಸ ಹೇತುಗಳೂ ಕಾಣುತ್ತಿರುವುವು. ಆದುದರಿಂದ ನಾವು ಮಾಡುವ ಸಪರ್ಯೆ (ಪೂಜೆ)ಗಳನ್ನು ಅವರು ಹೇಗೆ ಸ್ವೀಕರಿಸುವರೆಂಬ ವಿಷಯ ದಲ್ಲಿ ನನ್ನ ಮನಸ್ಸು ಮೋಹಗೊಂಡಿರುವುದು.''

೧೪೪–೧೪೫. ಮಹಾಕಾಲನು ಹೇಳುತ್ತಾನೆ:—'' ಎಲೈ ರಾಜನೆ! ಪಿತೃ ಗಳಿಗೂ, ದೇವತೆಗಳಿಗೂ ಅಸಾಧಾರಣವಾದ ಸ್ವರೂಪವುಂಟು. ಅವರಿಗೆ ದೂರದಲ್ಲಿ ಹೇಳಿದುದೂ, ದೂರದ ಪೂಜೆಯೂ, ದೂರದ ಸ್ತೋತ್ರವೂ, ಭೂತ ಭವಿಷ್ಯ ದ್ವರ್ತಮಾನ ಕಾಲಗಳ ಆಗುಹೋಗುಗಳೂ ಎಲ್ಲವೂ ತಿಳಿಯುವುವಲ್ಲದೆ ಸೇರಲೂ ಸೇರುವುವು. ಅವರ ದೇಹಗಳು ಪಂಚತನ್ಮಾತ್ರೆಗಳು, ಮನಸ್ಸು, ಬುದ್ಧಿ, ಅಹಂಕಾರ, ಚಿತ್ತಗಳೆಂಬ ಒಂಭತ್ತು ತತ್ತ್ವಗಳಿಂದಾಗಿರುವುವು. ಜೀವನೇ ಹತ್ತನೆಯ ತತ್ತ್ವವೆಂದು ಹೇಳುವರು.

ನವತತ್ತ್ವಮಯಂ ದೇಹಂ ದಶಮಃ ಪುರುಷೋ ಮತಃ ।
ತಸ್ಮಾದ್ಗಂಧೇನ ತೃಪ್ಯಂತಿ ರಸತತ್ತ್ವೇನ ತೇ ತಥಾ ॥ ೧೪೬ ॥
ಶಬ್ದತತ್ತ್ವೇನ ತುಷ್ಯಂತಿ ಸ್ಪರ್ಶತತ್ತ್ವಂ ಚ ಗೃಹ್ಣತೇ ।
ಶುಚಿ ದೃಷ್ಟ್ವಾ ಚ ತೃಪ್ಯಂತಿ ನಾತ್ರರಾಜನ್ಭವೇನ್ಮೃಷಾ ॥ ೧೪೭ ॥
ಯಥಾ ತೃಣಂ ಪಶೂನಾಂ ಚ ನರಾಣಾಮನ್ನಮುಚ್ಯತೇ ।
ಏವಂ ದೈವತಯೋನೀನಾಮನ್ನಸಾರಸ್ಯ ಭೋಜನಂ ॥ ೧೪೮ ॥
ಶಕ್ತಯಃ ಸರ್ವಭಾವಾನಾಮಚಿಂತ್ಯಾ ಜ್ಞಾನಗೋಚರಾಃ ।
ತಸ್ಮಾತ್ತತ್ತ್ವಂ ಪ್ರಗೃಹ್ಣಂತಿ ಶೇಷಮತ್ರೈವ ದೃಶ್ಯತೇ ॥ ೧೪೯ ॥

ಕರಂಧಮ ಉವಾಚ:—

ಪಿತೃಭ್ಯೋ ದೀಯತೇ ಶ್ರಾದ್ಧಂ ಸ್ವಕರ್ಮವಶಗಾಶ್ಚ ತೇ ।
ಸ್ವರ್ಗಸ್ಥಾ ನರಕಸ್ಥಾ ವಾ ಕಥಂ ತೈರುಪಭುಜ್ಯತೇ ॥ ೧೫೦ ॥
ಅಥ ಸ್ವರ್ಗೇಽಥ ನರಕೇ ಸ್ಥಿತಾಃ ಕರ್ಮಾಭಿಯಂತ್ರಿತಾಃ ।
ಶಕ್ನುವಂತಿ ವರಾನೇತಾನ್ದಾತುಂ ತೇ ಚೇಶ್ವರಾಃ ಕಥಂ ॥ ೧೫೧ ॥

---

೧೪೬–೧೪೭. ಆದುದರಿಂದ ಅವರು ಕೇವಲ ಗಂಧದಿಂದಲೆ ತೃಪ್ತಿಪಡುವರು. ರಸಾಸ್ವಾದದಿಂದಲೇ ಸಂತುಷ್ಟರಾಗುವರು. ಶಬ್ದಗಳ ತತ್ತ್ವದಿಂದಲೇ ಸಂತೋಷಗೊಳ್ಳುವರು. ಹಾಗೆಯೇ ಸ್ಪರ್ಶ ತತ್ತ್ವವನ್ನೇ ಗ್ರಹಿಸುವರು. ಶುಚಿಯಾದ ಪದಾರ್ಥಗಳನ್ನು ದೃಷ್ಟಿಯಿಂದಲೇ ಸ್ವೀಕರಿಸುವರು. ಎಲೈ ರಾಜನೆ! ಈ ಮಾತುಗಳಲ್ಲಿ ಸ್ವಲ್ಪವಾದರೂ ಸುಳ್ಳಿರುವುದಿಲ್ಲವು.

೧೪೮. ಪಶುಗಳಿಗೆಂತು ತೃಣವು ಆಹಾರವೊ, ಮನುಷ್ಯರಿಗೆ ಅನ್ನವೆಂತು ಆಹಾರವೆಂದು ನಿಯಮಿತವಾಗಿರುವುದೊ, ಹಾಗೆಯೇ ದೇವಾದಿ ವಿಶೇಷ ಜೀವರಿಗೆ ಆಹಾರಗಳ ಸಾರಗ್ರಹಣವನ್ನೇ ಭೋಜನವೆಂದೆಣಿಸಬೇಕು.

೧೪೯. ಬ್ರಹ್ಮಾಂಡದ ಸಕಲ ಜೀವರ ಶಕ್ತಿಗಳನ್ನೂ ತಿಳಿಯಲು ಶಕ್ಯವಲ್ಲ. ಕೇವಲ ಜ್ಞಾನದಿಂದಲೇ ಊಹಿಸಬೇಕು. ಪಿತೃಗಳೂ, ದೇವತೆಗಳೂ ಸ್ಥೂಲ ನಿವೇದನಗಳ ಸಾರವನ್ನು ಸ್ವೀಕರಿಸುವರು. ಶೇಷವು ಇಲ್ಲಿಯೇ ನಿಲ್ಲುವುದು.''

೧೫೦. ಕರಂಧಮನು ಕೇಳುತ್ತಾನೆ:—''ನಾವು ಪಿತೃಗಳನ್ನುದ್ದೇಶಿಸಿ ಶ್ರಾದ್ಧಗಳನ್ನು ಮಾಡುತ್ತೇವೆ. ಅವರೂ ನಮ್ಮಂತೆಯೇ ತಮ್ಮ ತಮ್ಮ ಕರ್ಮ ಫಲಗಳನ್ನನುಭವಿಸುವರು. ಆದುದರಿಂದ ಸ್ವರ್ಗದಲ್ಲಿಯೋ, ನರಕದಲ್ಲಿಯೋ ಇರುವವರಿಂದ ನಮ್ಮ ನೈವೇದ್ಯವೆಂತು ಸ್ವೀಕರಿಸಲ್ಪಡುತ್ತದೆ?

೧೫೧. ಅಲ್ಲದೆಯೇ ಕರ್ಮಯಂತ್ರದಲ್ಲಿ ಸಿಕ್ಕಿ ತಾವೇ ಸ್ವರ್ಗನರಕಗಳಲ್ಲಿ ಅನುಭವಿಸುತ್ತಿರುವ ಪಿತೃಗಳು ನಮಗೆ ವರಗಳನ್ನೆಂತು ಕೊಡಲು ಸಮರ್ಥರಾದಾರು? ಅವರಿಗೆ ಆ ಐಶ್ವರ್ಯವೆಂತು ಸಂಭವಿಸುವುದು?

**ಆಯುಃ ಪ್ರಜಾಂ ಧನಂ ವಿದ್ಯಾಂ ಸ್ವರ್ಗಂ ಮೋಕ್ಷಂ ಸುಖಾನಿ ಚ ।**
**ಪ್ರಯಚ್ಛಂತಿ ಕಥಂ ರಾಜ್ಯಂ ಪ್ರೀತಾ ನೄಣಾಂ ಪಿತಾಮಹಾಃ ॥ ೧೫೨ ॥**

**ಮಹಾಕಾಲ ಉವಾಚ :—**

**ಸತ್ಯಮೇತತ್ಸ್ವಕರ್ಮಸ್ಥಾಃ ಪಿತರೋ ಯನ್ನೃಪೋತ್ತಮ ।**
**ಕಿಂತು ದೇವಾಸುರಾಣಾಂ ಚ ಯಕ್ಷಾದೀನಾಮಮೂರ್ತಕಾಃ ॥ ೧೫೩ ॥**
**ಮೂರ್ತಾಶ್ಚತುರ್ಣಾಂ ವರ್ಣಾನಾಂ ಪಿತರಃ ಸಪ್ತಧಾಸ್ಮೃತಾಃ ।**
**ತೇ ಹಿ ಸರ್ವೇ ಪ್ರಯಚ್ಛಂತಿ ದಾತುಃ ಸರ್ವಂ ಯಥೇಪ್ಸಿತಂ ॥ ೧೫೪ ॥**
**ಏಕತ್ರಿಂಶದ್ಗಣಾ ಯೇಷಾಂ ಪಿತೄಣಾಂ ಪ್ರಬಲಾ ನೃಪ ।**
**ಕೃತಂ ಚ ತದಿದಂ ಶ್ರಾದ್ಧಂ ತರ್ಪಯೇತ್ತಾನ್ಪರಾನ್ಪಿತೄನ್ ॥ ೧೫೫ ॥**
**ತೇ ತೃಪ್ತಾಸ್ತರ್ಪಯಂತ್ಯಸ್ಯ ಪೂರ್ವಜಾ ಹ್ಯತ್ರ ಸಂಸ್ಥಿತಾನ್ ।**
**ಏವಂ ಸ್ವಾನಾಂ ಚೋಪತಿಷ್ಠೇಚ್ಛ್ರಾದ್ಧಂ ಯಚ್ಛಂತಿ ತೇ ವರಾನ್ ॥ ೧೫೬ ॥**

---

೧೫೨. ತೃಪ್ತಿಗೊಂಡ ಪಿತೃಪಿತಾಮಹರು ಕರ್ತೃವಿಗೆ ಆಯುಸ್ಸು, ಸಂತಾನ, ಧನ, ವಿದ್ಯೆ, ಸ್ವರ್ಗ. ಮೋಕ್ಷ, ಸುಖ, ರಾಜ್ಯ ಮುಂತಾದುವುಗಳನ್ನು ಹೇಗೆ ಅನುಗ್ರಹಿಸುವರು ?"

೧೫೩. ಮಹಾಕಾಲನು ಹೇಳುತ್ತಾನೆ:—"ಎಲೈ ರಾಜನೆ! ಪಿತೃಗಳು ತಮ್ಮ ತಮ್ಮ ಕರ್ಮಗಳ ಫಲಗಳನ್ನನುಭವಿಸುವರೆಂಬುದು ನಿಜವೇ. ಆದರೆ ಅವರಲ್ಲಿ ಒಂದು ವಿಶೇಷವುಂಟು. ಲೋಕಾಂತರವಾಸಿಗಳಲ್ಲಿ ದೇವತೆಗಳೂ, ರಾಕ್ಷಸರೂ, ಯಕ್ಷಾದಿಗಳೂ ಅಮೂರ್ತರಾಗಿರುವರು.

೧೫೪. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಶೂದ್ರರೆಂಬ ಚತುರ್ವರ್ಣದವರ ಪಿತೃಗಳು ಮೂರ್ತರೆಂದೆನಿಸುವರು. ಇಂತು ಏಳು ಬಗೆಯಾಗಿ ವಿಂಗಡಿಸಿರುವರು. ಅವರೆಲ್ಲರೂ ಕರ್ತೃವಿನ ಮನೋಽಭೀಷ್ಟಗಳೆಲ್ಲವನ್ನೂ ನೆರವೇರಿಸಿ ಕೊಡುವರು.

೧೫೫. ಎಲೈ ರಾಜನೆ! ಈ ಪಿತೃಗಳಲ್ಲಿ ಮೂವತ್ತೊಂದು ಗಣಗಳವರು ಪ್ರಬಲರೆಂದು ಹೇಳಲ್ಪಟ್ಟಿರುವರು. ನಾವು ಮಾಡುವ ಶ್ರಾದ್ಧಾದಿ ಕಾರ್ಯಗಳೆಲ್ಲವೂ ಮೊದಲು ಅವರನ್ನು ತೃಪ್ತಿಪಡಿಸುವುವು.

೧೫೬. ಅವರು ತೃಪ್ತರಾದರೆ ಬಳಿಕ ತಮ್ಮ ಕರ್ಮಾನುಸಾರವಾಗಿ ಸ್ವರ್ಗ ನರಕಾದಿ ಲೋಕಗಳಲ್ಲಿರುವ ಆಯಾ ಪಿತೃಗಳಿಗೆ ತೃಪ್ತಿಯನ್ನುಂಟುಮಾಡುವರು. ಇಂತು ನಾವು ಮಾಡುವ ಕರ್ಮದಿಂದ ಪಿತೃಗಳಿಗೆ ತೃಪ್ತಿಯುಂಟಾಗಿ ಅವರು ನಮಗೆ ವರಗಳನ್ನು ಕೊಡುವರು."

ರಾಜೋವಾಚ :—

ಭೂತಾದಿಭ್ಯೋ ಯಥಾವಿಪ್ರ ನಾಮ್ನಾ ವೋದ್ದಿಶ್ಯ ದೀಯತೇ ।
ಸುರಾದೀನಾಂ ಕಥಂ ಚೈವ ಸಂಕ್ಷೇಪೇಣ ನ ದೀಯತೇ ॥ ೧೫೭ ॥
ಇದಂ ಪಿತೃಭ್ಯೋ ದೇವೇಭ್ಯೋ ದ್ವಿಜೇಭ್ಯಃ ಪಾವಕಾಯ ಚ ।
ಏವಂ ಕಸ್ಮಾದ್ವಿಸ್ತರಾಃ ಸ್ಯುರ್ಮನಃಕಾಯಾದಿ ಕಷ್ಟದಾಃ ॥ ೧೫೮ ॥

ಮಹಾಕಾಲ ಉವಾಚ :—

ಉಚಿತಾ ಪ್ರತಿಪತ್ತಿಶ್ಚ ಕಾರ್ಯಾ ಸರ್ವೇಷು ನಿತ್ಯಶಃ ।
ಪ್ರತಿಪತ್ತಿಂ ಚೋಚಿತಾಂ ತೇ ವಿನಾಗೃಹ್ಣಂತಿ ನೈವ ಚ ॥ ೧೫೯ ॥
ಯಥಾ ಶ್ವಾ ಗೃಹದ್ವಾರಸ್ಥೋ ಬಲಿಂ ಗೃಹ್ಣಾತಿ ಕಿಂ ತಥಾ ।
ಪ್ರಧಾನಪುರುಷೋ ರಾಜನ್ಗೃಹ್ಣಾತಿ ಚ ಶುನಾ ಸಮಃ ॥ ೧೬೦ ॥
ಏವಂ ತೇ ಭೂತವದ್ದೇವಾ ನ ಹಿ ಗೃಹ್ಣಂತಿ ಕರ್ಹಿಚಿತ್ ।
ಶುಚಿ ಕಾಮಂ ಜುಷಂತೇ ನ ಹವಿರಶ್ರದ್ಧಧಾನತಃ ॥ ೧೬೧ ॥
ವಿನಾಮಂತ್ರೈಶ್ಚ ಯದ್ದತ್ತಂ ನ ತದ್ಗೃಹ್ಣಂತಿ ತೇಽಮಲಾಃ ।
ಶ್ರುತಿರಪ್ಯತ್ರ ಪ್ರಾಹೇದಂ ಮಂತ್ರಾಣಾಂ ವಿಷಯೇ ನೃಪ ॥ ೧೬೨ ॥

---

೧೫೭. ರಾಜನು ಕೇಳುತ್ತಾನೆ:—ಎಲೈ ವಿಪ್ರೋತ್ತಮನೆ! ಭೂತಾದಿಗಳಿಗೂ, ದೇವತಾದಿ ವ್ಯಕ್ತಿಗಳಿಗೂ ಕೊಡುವ ಹವ್ಯಕವ್ಯಗಳನ್ನು ನಾಮಸಹಿತವಾಗಿಯೇ ಏಕೆಕೊಡಬೇಕು? ಸಾಮೂಹಿಕವಾಗಿ ಕೊಡಲು ಏಕೆ ಆಗುವುದಿಲ್ಲ?

೧೫೮. 'ಇದು ಪಿತೃಗಳಿಗೆ, ಇದು ದೇವರಿಗೆ, ಇದು ಬ್ರಾಹ್ಮಣರಿಗೆ, ಇದು ಅಗ್ನಿಗೆ' ಎಂಬುದಾಗಿ ವಿಸ್ತರಿಸಬೇಕಾದ ಪ್ರಮೇಯವೇನು? ಮನಸ್ಸು ಮತ್ತು ಶರೀರಗಳಿಗೆ ಕೇವಲ ಕಷ್ಟವೇ ಹೊರತು ಇವುಗಳಲ್ಲಿ ಫಲವಿಶೇಷವೇನು?''

೧೫೯–೧೬೦. ಮಹಾಕಾಲನು ಹೇಳುತ್ತಾನೆ:—''ಸರ್ವಕಾಲಗಳಲ್ಲಿಯೂ ಸರ್ವಕಾರ್ಯಗಳಲ್ಲಿಯೂ ಯಥೋಚಿತವಾದ ಶ್ರದ್ಧೆಯನ್ನು ವಹಿಸಬೇಕು. ಇಂತಹ ಶ್ರದ್ಧೆಯಿಲ್ಲದಿದ್ದರೆ ಅವರು ನಮ್ಮ ಉಪಚಾರಗಳನ್ನು ಖಂಡಿತವಾಗಿಯೂ ಸ್ವೀಕರಿಸುವುದಿಲ್ಲ. ಎಲೈ ರಾಜನೆ! ಮನೆಯ ಬಾಗಿಲಿನಲ್ಲಿ ಕಟ್ಟಿರುವ ನಾಯಿಯು ಹಾಕಿದುದನ್ನೆಲ್ಲ ತಿನ್ನುವಂತೆ ಉತ್ತಮ ಪುರುಷನು ಎಂದಾದರೂ ಅಶ್ರದ್ಧೆಯಿಂದಿತ್ತುದನ್ನು ಸ್ವೀಕರಿಸುವನೆ?

೧೬೧. ಹಾಗೆಯೇ ದೇವತೆಗಳೂ, ಭೂತಗಳ ಅಧಿದೇವತೆಗಳೂ ಹೇಗಾದರೂ ಬಂದುದನ್ನು ಗ್ರಹಿಸುವುದಿಲ್ಲ. ಶುಚಿಯಾದ ಪದಾರ್ಥವನ್ನು ಒಪ್ಪಿಕೊಳ್ಳುವರೇ ಹೊರತು ಅಶ್ರದ್ಧೆಯಿಂದ ಕೊಟ್ಟ ಹವಿಸ್ಸನ್ನೆಂದೂ ಸ್ವೀಕರಿಸುವುದಿಲ್ಲ.

೧೬೨. ಅವರು ಕೇವಲ ಪರಿಶುದ್ಧರಾದುದರಿಂದ ಮಂತ್ರಪೂರ್ವಕವಾಗಿ ಬಂದುದನ್ನೆಲ್ಲ ಸ್ವೀಕರಿಸರು. ಎಲೈ ರಾಜನೆ! ಮಂತ್ರವತ್ತಾಗಿಯೇ ಹವಿರ್ಭಾಗ

**ಮಂತ್ರಾ ದೈವತಾ ಯದ್ಯದ್ವಿದ್ವಾನ್ಮಂತ್ರವತ್ಕರೋತಿ ದೇವತಾಭಿರೇವ ತತ್ಕ ರೋತಿ ಯದ್ದದಾತಿದೇವತಾಭಿರೇವ ತದ್ದದಾತಿ ಯತ್ಪ್ರತಿಗೃಹ್ಣಾತಿ ದೇವ ತಾಭಿರೇವ ತತ್ಪ್ರತಿಗೃಹ್ಣಾತಿ ತಸ್ಮಾನ್ನಾಮಂತ್ರವತ್ಪ್ರತಿಗೃಹ್ಣೀಯಾತ್ ನಾಮಂತ್ರವತ್ಪ್ರತಿಪದ್ಯತೇ ॥ ೧೬೩ ॥**

**ತಸ್ಮಾನ್ಮಂತ್ರೈಃ ಸದಾ ದೇಯಂ ಪೌರಾಣೈರ್ವೈದಿಕೈರಪಿ ।**
**ಅನ್ಯಥಾ ತೇ ನಗೃಹ್ಣಂತಿ ಭೂತಾನಾಮುಪತಿಷ್ಠತಿ ॥ ೧೬೪ ॥**

**ರಾಜೋವಾಚ :—**

**ದರ್ಭಾಂಸ್ತಿಲಾನಕ್ಷತಾಂಶ್ಚ ತೋಯಂ ಚೈತೈಃ ಸುಸಂಯುತಂ ।**
**ಕಸ್ಮಾತ್ಪ್ರದೀಯತೇ ದಾನಂ ಜ್ಞಾತು ಮಿಚ್ಛಾಮಿ ಕಾರಣಂ ॥ ೧೬೫ ॥**

**ಮಹಾಕಾಲ ಉವಾಚ :—**

**ಪುರಾಕಿಲ ಪ್ರದತ್ತಾನಿ ಭೂಮೇರ್ದಾನಾನಿ ಭೂರಿಶಃ ।**
**ಪ್ರತ್ಯಗೃಹ್ಣಂತ ದೈತ್ಯಾಶ್ಚ ಪ್ರವಿಶ್ಯಾಭ್ಯಂತರಂ ಬಲಾತ್ ॥ ೧೬೬ ॥**

---

ವನ್ನು ಕೊಡಬೇಕೆಂಬ ವಿಷಯದಲ್ಲಿ ವೇದವೂ ಪ್ರಮಾಣವಾಗಿ ಇಂತು ಹೇಳು ತ್ತಿರುವುದು :

೧೬೩. 'ಮಂತ್ರಗಳೇ ದೇವತೆಗಳು, ಇದನ್ನು ತಿಳಿದವನು ಯಾವ ಯಾವು ದನ್ನು ಮಂತ್ರಸಹಿತವಾಗಿ ಮಾಡುವನೊ, ಅದನ್ನು ದೇವತಾಸಹಿತವಾಗಿಯೇ ಮಾಡುವನೆಂದು ತಿಳಿಯಬೇಕು. ಅವನು ಕೊಡುವುದೂ ದೇವತಾ ಸಹಿತ ವಾದ ದಾನವಾಗುವುದು. ತೆಗೆದುಕೊಳ್ಳುವುದೂ ದೇವತಾಸಹಿತವಾಗಿಯೇ ಪ್ರತಿಗ್ರಹವೆನಿಸುವುದು. ಆದುದರಿಂದ ಮಂತ್ರಪೂರ್ವಕವಾಗಿಯೇ ಪ್ರತಿಗ್ರಹಿಸ ಬೇಕು. ಮಂತ್ರಹೀನವಾದ ಕಾರ್ಯವಾವುದೂ ಸಫಲವಾಗುವುದಿಲ್ಲ.'

೧೬೪. ಆದುದರಿಂದ ಯಾವಾಗಲೂ ಕಾಲೋಚಿತಗಳಾದ ವೈದಿಕ ಪೌರಾಣಿಕ ಮಂತ್ರಗಳ ಸಹಿತವಾಗಿಯೇ ದಾನಮಾಡಬೇಕು. ಹಾಗಲ್ಲದಿದ್ದರೆ ಪಿತೃಗಳೂ, ದೇವತೆಗಳೂ ನಮ್ಮ ನಿವೇದನವನ್ನು ಸ್ವೀಕರಿಸುವುದಿಲ್ಲ. ಅವು ಗಳೆಲ್ಲವೂ ಕೇವಲ ಭೌತಿಕವಸ್ತುಗಳಾಗಿಯೇ ನಿಲ್ಲುವುವು.''

೧೬೫. ರಾಜನು ಕೇಳುತ್ತಾನೆ:—''ಎಲೈ ಮಹಾತ್ಮನೆ! ದಾನಮಾಡು ವವನು ದರ್ಭೆ, ತಿಲ, ಅಕ್ಷತೆ, ಉದಕ ಮುಂತಾದ ದ್ರವ್ಯಗಳೊಡನೆಯೇ ದಾನ ವನ್ನೇತಕ್ಕೆ ಮಾಡಬೇಕು? ಇದರ ಕಾರಣವನ್ನು ನಿನ್ನಿಂದ ತಿಳಿಯಲೆಳಸುವೆನು.''

೧೬೬. ಮಹಾಕಾಲನು ಹೇಳುತ್ತಾನೆ:—''ಪೂರ್ವದಲ್ಲಿ ಭೂಲೋಕದಲ್ಲಿ ಜನರು ಬಹಳವಾಗಿ ದಾನಗಳನ್ನು ಕೊಡುತ್ತಿದ್ದರು. ಆದರೆ ಬಲಿಷ್ಠರಾದ ದೈತ್ಯರು ತಮ್ಮ ಶಕ್ತ್ಯುತ್ಕರ್ಷದಿಂದ ಅವುಗಳೆಲ್ಲವನ್ನೂ ತಾವೇ ಆಕರ್ಷಿಸಿ ಕೊಳ್ಳತೊಡಗಿದರು.

ತತೋ ದೇವಾಶ್ಚ ಪಿತರಃ ಪ್ರತ್ಯೂಚುಃ ಪದ್ಮಸಂಭವಮ್ ॥ ೧೬೭ ॥
ಸ್ವಾಮಿನ್ನಃ ಪಶ್ಯತಾಮೇವ ಸರ್ವಂ ದೈತ್ಯೈಃ ಪ್ರಗೃಹ್ಯತೇ ।
ವಿಧೇಹಿ ತೇಷಾಂ ರಕ್ಷಾಂ ತ್ವಂ ನ ನಷ್ಟಾಃ ಸ್ಮೋ ಯಥಾ ವಯಮ್ ॥೧೬೮॥
ತತೋ ವಿಮೃಶ್ಯೈವ ವಿಧೀ ರಕ್ಷೋಪಾಯಮಚೀಕರತ್ ।
ತಿಲೈರ್ಯುಕ್ತಂ ಪಿತೄಣಾಂ ಚ ದೇವಾನಾಮಕ್ಷತೈಃ ಸಹ ॥ ೧೬೯ ॥
ತೋಯಂ ದರ್ಭಾಂಶ್ಚ ಸರ್ವತ್ರ ಏವಂ ಗೃಹ್ಣಂತಿ ನಾಸುರಾಃ ।
ಏತಾನ್ವಿನಾ ಪ್ರದತ್ತಂ ಯತ್ಫಲಂ ದೈತ್ಯೈಃ ಪ್ರಗೃಹ್ಯತೇ ॥ ೧೭೦ ॥
ನಿಃಶ್ವಸ್ಯ ಪಿತರೋ ದೇವಾ ಯಾಂತಿ ದಾತುಃ ಫಲಂ ನ ಹಿ ।
ತಸ್ಮಾದ್ಯುಗೇಷು ಸರ್ವೇಷು ದಾನಮೇವಂ ಪ್ರದೀಯತೇ ॥ ೧೭೧ ॥

ಕರಂಧಮ ಉವಾಚ:—

ಚತುರ್ಯುಗವ್ಯವಸ್ಥಾನಂ ಶ್ರೋತುಮಿಚ್ಛಾಮಿ ತತ್ತ್ವತಃ ।
ಮಹತೀಯಂ ವಿವಿತ್ಸಾ ಮೇ ಸದೈವ ಪರಿವರ್ತತೇ ॥ ೧೭೨ ॥

ಮಹಾಕಾಲ ಉವಾಚ:—

ಆದ್ಯಂ ಕೃತಯುಗಂ ವಿದ್ಧಿ ತತಸ್ತ್ರೇತಾಯುಗಂ ಸ್ಮೃತಮ್ ।
ದ್ವಾಪರಂ ಚ ಕಲಿಶ್ಚೇತಿ ಚತ್ವಾರಶ್ಚ ಸಮಾಸತಃ ॥ ೧೭೩ ॥

---

೧೬೭–೧೬೮. ಆಗ ದೇವತೆಗಳೂ, ಪಿತೃಗಳೂ ಬ್ರಹ್ಮನನ್ನು ಕುರಿತು ಇಂತು ವಿಜ್ಞಾಪಿಸಿಕೊಂಡರು. 'ಎಲೈ ಲೋಕನಾಥನೆ! ನಾವು ನೋಡುತ್ತಿರುವಂತೆಯೇ ನಮ್ಮ ಭಾಗವೆಲ್ಲವೂ ದೈತ್ಯರಿಂದ ಅಪಹರಿಸಲ್ಪಡುತ್ತಿರುವುದು. ಆದುದರಿಂದ ನಾವು ಪ್ರಣಷ್ಟರಾಗದಂತೆ ನೀನು ತಕ್ಕ ಸಂರಕ್ಷಣೆಯನ್ನು ಮಾಡು.'

೧೬೯–೧೭೦. ಆಗ ಬ್ರಹ್ಮನು ತನ್ನ ಮನಸ್ಸಿನಲ್ಲಿಯೇ ನಿಷ್ಕರ್ಷೆಮಾಡಿಕೊಂಡು ರಕ್ಷೋಪಾಯವನ್ನು ವಿರಚಿಸಿದನೆಂತೆನೆ:—ಪಿತೃಗಳಿಗೆ ತಿಲಯುಕ್ತವಾಗಿಯೂ, ದೇವತೆಗಳಿಗೆ ಅಕ್ಷತಸಹಿತವಾಗಿಯೂ, ಸಕಲ ಕರ್ಮಗಳಲ್ಲಿಯೂ ದರ್ಭೋದಕಸಹಿತವಾಗಿಯೂ ದಾನಮಾಡಲು ಆ ದಾನಗಳು ದೈತ್ಯರಿಗೆ ಸೇರುವುದಿಲ್ಲವು. ಇವುಗಳಿಲ್ಲದೆ ಮಾಡಿದ ದಾನಗಳೆಲ್ಲವೂ ದೈತ್ಯರಿಗೆ ಸೇರುವುವು.

೧೭೧. ಆಗ ಪಿತೃಗಳೂ ದೇವತೆಗಳೂ ನಿಟ್ಟುಸಿರನ್ನು ಬಿಡುತ್ತ ಹಿಂದಿರುಗುವರು. ಕರ್ತೃವಿಗೂ ಯಾವ ಪುಣ್ಯವೂ ಲಭಿಸುವುದಿಲ್ಲ. ಆದುದರಿಂದ ಸಕಲ ಯುಗಗಳಲ್ಲಿಯೂ ಈ ವಿಧವಾದ ದಾನವೇ ಕೊಡಲ್ಪಡುವುದು.

೧೭೨. ಕರಂಧಮನು ಕೇಳುತ್ತಾನೆ:—"ಚತುರ್ಯುಗಗಳ ವ್ಯವಸ್ಥೆಯ ಕ್ರಮವನ್ನು ಸರಿಯಾಗಿ ತಿಳಿಯಲೆಳಸಿರುವೆನು. ಈ ಆಶೆಯು ಪ್ರಬಲವಾಗಿ ನನ್ನಲ್ಲಿ ಯಾವಾಗಲೂ ಉಂಟಾಗುತ್ತಿರುವುದು."

೧೭೩. ಮಹಾಕಾಲನು ಹೇಳುತ್ತಾನೆ:—ಮೊದಲನೆಯದು ಕೃತಯುಗವು,

**ಸತ್ವಂ ಕೃತಂ ರಜಸ್ತ್ರೇತಾ ದ್ವಾಪರಂಚ ರಜಸ್ತಮಃ ।**
**ಕಲಿಸ್ತಮಸ್ತು ವಿಜ್ಞೇಯಂ ಯುಗವೃತ್ತಂ ಯುಗೇಷು ಚ ॥ ೧೭೪ ॥**
**ಧ್ಯಾನಂ ಪರಂ ಕೃತಯುಗೇ ತ್ರೇತಾಯಾಂ ಯಜ್ಞ ಉಚ್ಯತೇ ।**
**ವೃತ್ತಂ ಚ ದ್ವಾಪರೇ ಸತ್ಯಂ ದಾನಮೇವ ಕಲೌ ಯುಗೇ ॥ ೧೭೫ ॥**
**ಕೃತೇ ತು ಮಾನವೀ ಸೃಷ್ಟಿರ್ವೃತ್ತಿಃ ಸಾಕ್ಷಾದ್ರಸೋಲ್ಲಸಾ ।**
**ತೇಜೋಮಯ್ಯಃ ಪ್ರಜಾಸ್ತೃಪ್ತಾಃ ಸದಾನಂದಾಶ್ಚ ಭೋಗಿನಃ॥ ॥೧೭೬॥**
**ಅಧಮೋತ್ತಮೋನ್ನತಾನಾಂ ತಾ ನಿರ್ವಿಶೇಷಾಃ ಪ್ರಜಾಃ ಶುಭಾಃ ।**
**ತುಲ್ಯಮಾಯುಃ ಸುಖಂ ರೂಪಂ ತಾಸಾಂ ತಸ್ಮಿನ್ಕೃತೇ ಯುಗೇ ॥೧೭೭॥**
**ನ ಚಾಪ್ರೀತಿರ್ನ ಚ ದ್ವಂದ್ವೋ ನದ್ವೇಷೋ ನಾಪಿ ಚ ಕ್ಲಮಃ ।**
**ಪರ್ವತೋದಧಿವಾಸಿನ್ಯೋ ಹ್ಯನುಕ್ರೋಶಪ್ರಿಯಾಸ್ತು ತಾಃ ॥ ೧೭೮ ॥**

---

ಬಳಿಕ ತ್ರೇತಾಯುಗವು, ಬಳಿಕ ದ್ವಾಪರ ಮತ್ತು ಕಲಿಯುಗಗಳಾಗುವುವು. ಇಂತು ಒಟ್ಟು ನಾಲ್ಕು ಯುಗಗಳಾಗುವುವು.

೧೭೪. ಕೃತಯುಗವು ಸತ್ತ್ವಮಯಗುಣವಾದುದು. ತ್ರೇತಾಯುಗದಲ್ಲಿ ರಜೋಗುಣವು ಕಾಣುವುದು. ದ್ವಾಪರಯುಗದಲ್ಲಿ ತಮಸ್ಸಿನಿಂದ ಕೂಡಿದ ರಜೋಗುಣವು ಪ್ರಧಾನವು. ಕಲಿಯುಗವು ಕೇವಲ ತಮೋಗುಣಮಯವಾಗಿರುವುದು. ಪ್ರತಿಯೊಂದು ಯುಗದಲ್ಲಿಯೂ ಆಯಾ ಗುಣಗಳನ್ನನುಸರಿಸಿ ವ್ಯವಹಾರಗಳು ನಡೆಯುವುವು.

೧೭೫. ಕೃತಯುಗದಲ್ಲಿ ಧ್ಯಾನವೇ ಉತ್ತಮ ಸಾಧನವು. ತ್ರೇತಾಯುಗದಲ್ಲಿ ಯಜ್ಞಯಾಗಾದಿಗಳೇ ಸಾಧನಗಳು. ದ್ವಾಪರಯುಗದಲ್ಲಿ ಸತ್ಯವಾಕ್ಯವೇ ಸಾಧನವು. ಮತ್ತು ಕಲಿಯುಗದಲ್ಲಿ ದಾನಧರ್ಮಗಳೇ ಮೋಕ್ಷ ಸಾಧನಗಳು.

೧೭೬. ಕೃತಯುಗದಲ್ಲಿ ಸಂಕಲ್ಪಮಾತ್ರದಿಂದಲೇ ಅಭೀಷ್ಟಗಳು ದೊರಕುವುವು. ಜನರ ವ್ಯವಹಾರಗಳು ಮಾಧುರ್ಯಪೂರಿತಗಳಾಗಿರುವುವು. ಪ್ರಜೆಗಳು ತೇಜೋವಂತರಾಗಿ ಯಾವಾಗಲೂ ಸಂತುಷ್ಟರಾಗಿರುವರು. ನಿತ್ಯದಲ್ಲೂ ಆನಂದದಿಂದ ಭೋಗಭಾಗ್ಯಗಳನ್ನನುಭವಿಸುತ್ತಿರುವರು.

೧೭೭. ಅವರಲ್ಲಿ ಉತ್ತಮ ನೀಚರೆಂಬ ಭೇದವಿಲ್ಲ. ಎಲ್ಲರೂ ವಿಶೇಷರಹಿತರಾಗಿ ಶುಭಾಚರಣೆಯುಳ್ಳವರೇ! ಕೃತಯುಗದಲ್ಲಿ ಎಲ್ಲರಿಗೂ ಸಮಾನವಾದ ಆಯುರ್ದಾಯವೂ, ಸುಖವೂ, ಸೌಂದರ್ಯವೂ ಉಂಟಾಗಿರುವುವು.

೧೭೮. ಅವರಲ್ಲಿ ವೈರಸ್ಯವಾಗಲಿ, ಸುಖ ದುಃಖ, ಶೀತೋಷ್ಣಗಳೇ ಮೊದಲಾದ ದ್ವಂದ್ವಗಳಾಗಲಿ, ದ್ವೇಷಾಸೂಯೆಗಳಾಗಲಿ, ಶರೀರಶ್ರಮವಾಗಲಿ ಇಲ್ಲವು. ಪರ್ವತ, ಸಮುದ್ರಗಳಲ್ಲಿ ವಾಸಮಾಡುವವರಾಗಿ ಅವರು ಭೂತದಯೆಯಿಂದೊಡಗೂಡಿರುವರು.

ವರ್ಣಾಶ್ರಮವ್ಯವಸ್ಥಾ ಚ ತದಾಸೀನ್ನಹಿ ಸಂಕರಃ ।
ಏಕಮನ್ಯಂ ನ ಧ್ಯಾಯಂತಿ ಪರಮಂ ತೇ ಸದಾಶಿವಂ ॥ ೧೭೯ ॥
ಚತುರ್ಥೇ ಚ ತತಃ ಪಾದೇ ನಷ್ಟಾ ಸಾಭೂದ್ರಸೋಲ್ಲಸಾ ।
ಪ್ರಾದುರಾಸಂಸ್ತತಸ್ತಾಸಾಂ ವೃಕ್ಷಾಶ್ಚಗೃಹಸಂಜ್ಞಿತಾಃ ॥ ೧೮೦ ॥
ವಸ್ತ್ರಾಣಿ ಚ ಪ್ರಸೂಯಂತೇ ಫಲಾನ್ಯಾಭರಣಾನಿ ಚ ।
ತೇಷ್ವೇವ ಜಾಯತೇ ತಾಸಾಂ ಗಂಧವರ್ಣರಸಾನ್ವಿತಂ ॥ ೧೮೧ ॥
ಸುಮಾಕ್ಷಿಕಂ ಮಹಾವೀರ್ಯಂ ಪುಟಕೇ ಪುಟಕೇ ಮಧು ।
ತೇನ ತಾ ವರ್ತಯಂತಿ ಸ್ಮ ಕೃತಸ್ಯಾಂತೇ ಪ್ರಜಾಸ್ತದಾ ॥ ೧೮೨ ॥
ಹೃಷ್ಟಪುಷ್ಟಾಸ್ತಥಾ ವೃದ್ಧಾಃ ಪ್ರಜಾ ವೈ ವಿಗತಜ್ವರಾಃ ।
ತತಃ ಕಾಲೇನ ಕೇನಾಪಿ ತಾಸಾಂ ವೃದ್ಧೇ ರಸೇಂದ್ರಿಯೇ ॥ ೧೮೩ ॥
ಯುಗಭಾವಾತ್ತಥಾ ಧ್ಯಾನೇ ಸ್ವಲ್ಪೀಭೂತೇ ಶಿವಸ್ಯ ಚ ।
ವೃಕ್ಷಾಂಸ್ತಾನ್ಪರ್ಯಗೃಹ್ಣಂತ ಮಧು ವಾ ಮಾಕ್ಷಿಕಂ ಬಲಾತ್ ॥೧೮೪॥
ತಾಸಾಂ ತೇನೋಪಚಾರೇಣ ಲೋಭದೋಷಕೃತೇನ ವೈ ।
ಪ್ರಣಷ್ಟಾ ಮಧುನಾ ಸಾರ್ಧಂ ಕಲ್ಪವೃಕ್ಷಾಃ ಕ್ವಚಿತ್ಕ್ವಚಿತ್ ॥ ೧೮೫ ॥

---

೧೭೯. ಆ ಯುಗದಲ್ಲಿ ವರ್ಣಾಶ್ರಮಗಳ ವ್ಯವಸ್ಥೆಯು ಚೆನ್ನಾಗಿ ನಡೆದು ವರ್ಣಸಾಂಕರ್ಯಕ್ಕೆ ಅವಕಾಶವಿಲ್ಲ. ಅನ್ಯೋನ್ಯಾಚಾರಗಳನ್ನನುಸರಿಸದೆ ಜನರೆಲ್ಲರೂ ಯಾವಾಗಲೂ ಶಿವನನ್ನೇ ಧ್ಯಾನಿಸುತ್ತಿರುವರು.

೧೮೦. ಬಳಿಕ ಕೃತಯುಗದ ನಾಲ್ಕನೆಯ ಪಾದದಲ್ಲಿ ಆ ಮಾಧುರ್ಯವೆಲ್ಲವೂ ನಷ್ಟವಾಗಿ ಜನರಿಗೆ ವೃಕ್ಷಗಳೇ ನಿವಾಸಸ್ಥಾನಗಳಾಗಿ ಪರಿಣಮಿಸಿದುವು.

೧೮೧–೧೮೨. ಅವುಗಳೇ ವಸ್ತ್ರಗಳನ್ನೂ ಫಲಗಳನ್ನೂ ಆಭರಣಗಳನ್ನೂ ಕೊಡುತ್ತಿದ್ದುವು. ಜನರ ಉಪಯೋಗಕ್ಕಾಗಿ ಆ ವೃಕ್ಷಗಳಲ್ಲಿಯೇ ಉತ್ತಮವಾದ ಸುಗಂಧ, ವರ್ಣ, ರಸಗಳಿಂದ ಯುಕ್ತವಾದ ಮಧುವು ಉತ್ಪನ್ನವಾಗುತ್ತಿದ್ದಿತು. ಪ್ರತಿಯೊಂದೆಲೆಯಲ್ಲಿಯೂ ಮಧುವೇ ಸಿಕ್ಕುತ್ತಿದ್ದಿತು. ಕೃತಯುಗದ ಅಂತ್ಯಭಾಗದಲ್ಲಿ ಆ ಮಧುವಿನಿಂದಲೇ ಜನರು ಜೀವನವನ್ನು ನಡೆಸುತ್ತಿದ್ದರು.

೧೮೩–೧೮೪. ಜನರು ಹರ್ಷದಿಂದಿರುತ್ತ ದೃಢಕಾಯರಾಗಿ ದೀರ್ಘಜೀವಿಗಳಾಗಿದ್ದರು. ಅವರಿಗೆ ಯಾವ ರೋಗ ರುಜಿನಗಳೂ ಉಂಟಾಗುತ್ತಿರಲಿಲ್ಲ. ಬಳಿಕ ಯುಗಧರ್ಮಕ್ಕನುಸಾರವಾಗಿ ಕಾಲಮಹಿಮೆಯಿಂದ ರಸೇಂದ್ರಿಯವು ವೃದ್ಧಿಯಾಗಲು, ಶಿವಧ್ಯಾನವೂ ಜನರಲ್ಲಿ ಕಡಿಮೆಯಾಯಿತು. ಜನರು ಬಲಾತ್ಕಾರವಾಗಿ ಆ ವೃಕ್ಷಗಳನ್ನೂ ಮಧುವನ್ನೂ ಅನುಭವಿಸಲು ಪ್ರಾರಂಭಿಸಿದರು.

೧೮೫. ಅವರಿಂತು ಲೋಭವೆಂಬ ದೋಷದಿಂದ ಆವಿಷ್ಟರಾಗಿ ವ್ಯವಹರಿಸಲು ಆ ಕಲ್ಪವೃಕ್ಷಗಳೆಲ್ಲವೂ ಕೊಂಚಕೊಂಚವಾಗಿ ತಮ್ಮ ಮಧುವಿನೊಡನೆ ನಷ್ಟವಾಗತೊಡಗಿದುವು.

**ತಸ್ಯಾಂ ಚಾಪ್ಯಲ್ಪಶಿಷ್ಟಾಯಾಂ ದ್ವಂದ್ವಾನ್ಯಭ್ಯುತ್ಥಿತಾನಿ ವೈ ।**
**ಶೀತಾತಪೈರ್ಮನೋದುಃಖೈಸ್ತತಸ್ತಾ ದುಃಖಿತಾ ಭೃಶಂ ॥ ೧೮೬ ॥**
**ಚಕ್ರುರಾವರಣಾರ್ಥಂ ಹಿ ಕೇತನಾನಿ ತತಸ್ತತಃ ।**
**ತತಃ ಪ್ರಾದುರ್ಬಭೌ ತಾಸಾಂ ಸಿದ್ಧಿಸ್ತ್ರೇತಾಯುಗೇ ಪುನಃ ॥ ೧೮೭ ॥**
**ವೃಷ್ಟ್ಯಾ ಬಭೂವುರೌಷಧ್ಯೋ ಗ್ರಾಮ್ಯಾರಣ್ಯಾಶ್ಚತುರ್ದಶ ।**
**ಅಕೃಷ್ಟಪಚ್ಯಾಶ್ಚಾನೂಪ್ತಾ ಸ್ತೋಯಭೂಮಿ ಸಮಾಗಮಾತ್ ॥ ೧೮೮ ॥**
**ಋತುಪುಷ್ಪಫಲೈಶ್ಚೈವ ವೃಕ್ಷಗುಲ್ಮಾಶ್ಚ ಜಜ್ಞಿರೇ ।**
**ತೈಶ್ಚ ವೃತ್ತಿರಭೂತ್ತಾಸಾಂ ಧಾನ್ಯೈಃ ಪುಷ್ಪೈಃ ಫಲೈಸ್ತಥಾ ॥ ೧೮೯ ॥**
**ತತಃ ಪುನರಭೂತ್ತಾಸಾಂ ರಾಗೋ ಲೋಭಶ್ಚ ಸರ್ವತಃ ।**
**ಕಾಲವೀರ್ಯೇಣ ವಾ ಗೃಹ್ಯ ನದೀಕ್ಷೇತ್ರಾಣಿ ಪರ್ವತಾನ್ ।**
**ವೃಕ್ಷಗುಲ್ಮೌಷಧೀಶ್ಚೈವ ಪ್ರಸಹ್ಯಾಶು ಯಥಾ ಬಲಂ ॥ ೧೯೦ ॥**
**ವಿಪರ್ಯಯೇಣ ಚೌಷಧ್ಯಃ ಪ್ರಣಷ್ಟಾಶ್ಚ ಚತುರ್ದಶ ॥ ೧೯೧ ॥**
**ನತ್ವಾ ಧರಾಂ ಪ್ರವಿಷ್ಟಾಸ್ತಾ ಓಷಧ್ಯಃ ಪೀಡಿತಾಃ ಪ್ರಜಾಃ ।**
**ದುದೋಹ ಗಾಂ ಪೃಥುರ್ವೈನ್ಯಃ ಸರ್ವಭೂತಹಿತಾಯ ವೈ ॥ ೧೯೨ ॥**

---

೧೮೬. ಕೃತಯುಗವು ಸ್ವಲ್ಪವೇ ಅವಶಿಷ್ಟವಾಗಿ ಉಳಿಯಲು ಶೀತೋಷ್ಣಗಳೇ ಮೊದಲಾದ ದ್ವಂದ್ವಗಳುಂಟಾದುವು. ಅಲ್ಲದೆ ಮನಸ್ಸಿನ ದುಃಖಗಳಿಂದಲೂ ಜನರು ವಿಶೇಷವಾಗಿ ಪೀಡಿತರಾದರು.

೧೮೭. ಅವರು ತಮ್ಮ ದೇಹಸಂರಕ್ಷಣೆಗಾಗಿ ಮನೆಗಳನ್ನು ಕಟ್ಟಿಕೊಳ್ಳಲಾರಂಭಿಸಿದರು. ಅದರಿಂದಲೇ ಅವರಿಗೆ ತ್ರೇತಾಯುಗದ ಸಿದ್ಧಿಯುಂಟಾಗುವುದು.

೧೮೮. ಮಳೆಯ ದೆಸೆಯಿಂದ ಗ್ರಾಮ್ಯಗಳೂ, ಅರಣ್ಯಗಳೂ ಆದ ಹದಿನಾಲ್ಕು ವಿಧಗಳಾದ ಓಷಧಿಗಳುಂಟಾದುವು. ಇವುಗಳು ಬೀಜಾವಾಪ ಮೊದಲಾದ ವ್ಯವಸಾಯವಿಲ್ಲದೆಯೇ ಕೇವಲ ಭೂಮಿ ಜಲಸಂಯೋಗದಿಂದಲೇ ಬೆಳೆದುವು.

೧೮೯. ಬಳಿಕ ಋತುಗಳನ್ನನುಸರಿಸಿ ಪುಷ್ಪಫಲವನ್ನೀಯುವ ವೃಕ್ಷಗಳೂ ಲತೆಗಳೂ ಉಂಟಾದುವು. ಆಗ ಜನರಿಗೆ ಅವುಗಳ ಧಾನ್ಯಗಳಿಂದಲೂ, ಪುಷ್ಪಗಳಿಂದಲೂ, ಫಲಗಳಿಂದಲೂ ಜೀವನವು ಸಾಗುವುದು.

೧೯೦. ಆಮೇಲೆ ಅವರಲ್ಲಿ ಎಲ್ಲೆಲ್ಲಿಯೂ ಮತ್ತೆ ರಾಗದ್ವೇಷಗಳೂ ಲೋಭಗಳೂ ಉಂಟಾಗುವುವು. ಕಾಲಬಲದಿಂದ ಜನರು ನದೀ ಕ್ಷೇತ್ರಗಳನ್ನೂ ಪರ್ವತಗಳನ್ನೂ ವೃಕ್ಷ, ಗುಲ್ಮ, ಲತೆಗಳನ್ನೂ ಬಲಾತ್ಕಾರವಾಗಿ ಕಸಿದುಕೊಂಡು ಸ್ವಂತವಾಗಿ ಅನುಭವಿಸಲೆಳಸಿದರು.

೧೯೧–೧೯೨. ಈ ವಿಪರ್ಯದಿಂದ ಹದಿನಾಲ್ಕು ಓಷಧಿಗಳೂ ನಷ್ಟವಾಗುವುವು. ಮತ್ತು ಭೂದೇವಿಯನ್ನು ನಮಸ್ಕರಿಸಿ ಭೂಮಿಯೊಳಕ್ಕೆ ಹೋಗುವುವು.

**ತದಾ ಪ್ರಭೃತಿ ಚೌಷಧ್ಯಃ ಫಲಕೃಷ್ಟಾಃ ಪ್ರಜಾಸ್ತತಃ ।**
**ವಾರ್ತಯಾ ವರ್ತಯಂತಿ ಸ್ಮ ಪಾಲ್ಯಮಾನಾಶ್ಚ ಕ್ಷತ್ರಿಯೈಃ ॥ ೧೯೩ ॥**
**ವರ್ಣಾಶ್ರಮಪ್ರತಿಷ್ಠಾ ಚ ಯಜ್ಞಸ್ತ್ರೇತಾಸು ಚೋಚ್ಯತೇ ।**
**ಸದಾಶಿವಧ್ಯಾನಮಯಂ ತ್ಯಕ್ತ್ವಾ ಮೋಕ್ಷಮಚೇತನಾಃ ॥ ೧೯೪ ॥**
**ಪುಷ್ಪಿತಾಂ ವಾಚಮಾಶ್ರಿತ್ಯ ರಾಗಾತ್ಸ್ವರ್ಗಮಸಾಧಯನ್ ।**
**ದ್ವಾಪರೇ ಚ ಪ್ರವರ್ತಂತೇ ಮತಿಭೇದಾಸ್ತತೋ ನೃಣಾಂ ॥ ೧೯೫ ॥**
**ಮನಸಾ ಕರ್ಮಣಾ ವಾಚಾ ಕೃಚ್ಛ್ರಾದ್ವಾರ್ತಾ ಪ್ರಸಿದ್ಧ್ಯತಿ ।**
**ಲೋಭೋಽಧೃತಿಃ ಶಿವಂ ತ್ಯಕ್ತ್ವಾ ಧರ್ಮಾಣಾಂ ಸಂಕರಸ್ತಥಾ ॥೧೯೬॥**
**ವರ್ಣಾಶ್ರಮಪರಿಧ್ವಂಸಾಃ ಪ್ರವರ್ತಂತೇ ಚ ದ್ವಾಪರೇ ।**
**ತದಾ ವ್ಯಾಸೈಶ್ಚತುರ್ಧಾ ಚ ವ್ಯಸ್ಯತೇ ದ್ವಾಪರಾತ್ತತಃ ॥ ೧೯೭ ॥**
**ಏಕೋ ವೇದಃ ಚತುಷ್ಪಾದೈಃ ಕ್ರಿಯತೇ ದ್ವಿಜಹೇತವೇ ।**
**ಇತಿಹಾಸಪುರಾಣಾನಿ ಭಿದ್ಯಂತೇ ಲೋಕಗೌರವಾತ್ ॥ ೧೯೮ ॥**

---

ಪ್ರಜೆಗಳು ಪೀಡೆಗಳಿಗೊಳಗಾಗುವರು. ಆಗ ವೇನನ ಮಗನಾದ ಪೃಥುರಾಜನು ಸಕಲ ಭೂತಗಳ ಹಿತವನ್ನು ಮಾಡುವುದಕ್ಕಾಗಿ ಗೋರೂಪಿಯಾದ ಭೂದೇವಿಯನ್ನು ದೋಹನಮಾಡುವನು.

೧೯೩. ಆಗ ಮೊದಲಾಗಿ ಓಷಧಿಗಳು ವ್ಯವಸಾಯಲಭ್ಯಗಳಾಗಿ ಪರಿಣಮಿಸುವುವು. ಪ್ರಜೆಗಳು ಕ್ಷತ್ರಿಯರಿಂದ ಪರಿಪಾಲಿತರಾಗಿ ಅನ್ಯೋನ್ಯ ವ್ಯವಹಾರದಿಂದ ಜೀವನಗಳನ್ನು ನಡೆಸುವರು.

೧೯೪. ತ್ರೇತಾಯುಗದಲ್ಲಿ ವರ್ಣಾಶ್ರಮಗಳ ವ್ಯವಸ್ಥೆಯು ಸರಿಯಾಗಿ ನಡೆಯುವುದು. ಯಜ್ಞಯಾಗಾದಿಗಳು ಮಾಡಲ್ಪಡುವುವು. ಆದರೆ ಸದಾಶಿವನ ಧ್ಯಾನವೆಂಬ ಮೋಕ್ಷಮಾರ್ಗವನ್ನು ಅನುಸರಿಸದೆ ಅವರು ಅಚೇತನರಂತಿರುವರು.

೧೯೫. ದ್ವಾಪರಯುಗದಲ್ಲಿ ಮನುಷ್ಯರು ಇತರರ ಮನೋಹರವಾದ ವಾಕ್ಯಗಳಿಗೆ ಮರುಳಾಗಿ, ಕಾಮಾದಿಗಳಲ್ಲಿ ಮನಸ್ಸನ್ನಿಟ್ಟು, ಸ್ವರ್ಗಾಪೇಕ್ಷೆಯಿಲ್ಲದೆ ಪ್ರವರ್ತಿಸುವರು. ಆದುದರಿಂದ ಜನರಲ್ಲಿ ಭೇದಭಾವಗಳುಂಟಾಗುವುವು.

೧೯೬. ಮನಸ್ಸಿನಿಂದಲೂ, ಕಾಯಿಕವಾಗಿಯೂ, ವಾಚಿಕವಾಗಿಯೂ ಬಹಳ ಕಷ್ಟದಿಂದ ವ್ಯವಹಾರಗಳು ನಡೆಯುವುವು. ಲೋಭವೂ, ಇಂದ್ರಿಯ ಲೌಲುಪ್ಯವೂ ಹೆಚ್ಚುವುವು. ದೇವರನ್ನು ಮರೆಯುವರು. ವರ್ಣಸಾಂಕರ್ಯವೂ ಉಂಟಾಗುವುದು.

೧೯೭–೧೯೮. ದ್ವಾಪರಯುಗದಲ್ಲಿ ವರ್ಣಾಶ್ರಮ ನಿಯಮಗಳೆಲ್ಲವೂ ನಾಶವಾಗುವುವು. ಆಗ ಬ್ರಾಹ್ಮಣರ ಅಧ್ಯಯನಾನುಕೂಲ್ಯಕ್ಕಾಗಿ ಒಂದೇ ವೇದವು ವ್ಯಾಸಮಹರ್ಷಿಗಳಿಂದ ನಾಲ್ಕು ಭಾಗಗಳಾಗಿ ವಿಭಜನೆಯಾಗುವುದು. ಅಂತೆಯೇ

ಬ್ರಾಹ್ಮಂ ಪಾದ್ಮಂ ವೈಷ್ಣವಂ ಚ ಶೈವಂ ಭಾಗವತಂ ತಥಾ ।
ತಥಾನ್ಯನ್ನಾರದೀಯಂ ಚ ಮಾರ್ಕಂಡೇಯಂ ಚ ಸಪ್ತಮಂ ॥ ೧೯೯ ॥
ಆಗ್ನೇಯಮಷ್ಟಮಂ ಪ್ರೋಕ್ತಂ ಭವಿಷ್ಯಂ ನವಮಂ ಸ್ಮೃತಂ ।
ದಶಮಂ ಬ್ರಹ್ಮವೈವರ್ತಂ ಲೈಂಗಮೇಕಾದಶಂ ತಥಾ ॥ ೨೦೦ ॥
ವಾರಾಹಂ ದ್ವಾದಶಂ ಚೈವ ಸ್ಕಾಂದಂ ಚೈವ ತ್ರಯೋದಶಂ ।
ಚತುರ್ದಶಂ ವಾಮನಂ ಚ ಕೌರ್ಮಂ ಪಂಚದಶಂ ಸ್ಮೃತಂ ॥ ೨೦೧ ॥
ಮಾತ್ಸ್ಯಂ ಷೋಡಶಕಂ ಪ್ರೋಕ್ತಂ ಗಾರುಡಂ ಚ ತತಃ ಪರಂ ।
ಅತಃ ಪರಂ ತು ಬ್ರಹ್ಮಾಂಡಮೇವಂಚಾಷ್ಟಾದಶಾನಿ ಹಿ ॥ ೨೦೨ ॥
ಅಸ್ಮಿನ್ವಾರಾಹಕಲ್ಪೇ ಚ ವ್ಯಾಸೇನಾಕರ್ಣಯಸ್ವ ಚ ।
ಋತುಃ ಸತ್ಯೋ ಭಾರ್ಗವಶ್ಚ ಅಂಗಿರಾಃ ಸವಿತಾ ತಥಾ ॥ ೨೦೩ ॥
ಮೃತ್ಯುಃ ಶತಕ್ರತುರ್ಧೀಮಾನ್ವಸಿಷ್ಠೋ ಭವಿತಾಧುನಾ
ಸಾರಸ್ವತಸ್ತ್ರಿಧಾಮಾ ಚ ವೇದವಿತ್ತ್ರಿವೃತೋ ಮುನಿಃ ॥ ೨೦೪ ॥
ಶತತೇಜಾ ಸ್ವಯಂ ವಿಷ್ಣುರ್ನಾರಾಯಣ ಇತಿ ಸ್ಮೃತಂ ।
ಕರಕಶ್ಚಾರುಣಿರ್ಧೀಮಾಂಸ್ತಥಾ ದೇವ ಋತಂಜಯಃ ॥ ೨೦೫ ॥
ಕೃತಂಜಯೋ ಭರದ್ವಾಜೋ ಗೌತಮಃ ಕವಿಸತ್ತಮಃ ।
ವಾಜಶ್ರವಾ ಮುನಿಶ್ಚೈವ ತಥಾ ಯುಷ್ಮಾಯಣೋ ಮುನಿಃ ॥ ೨೦೬ ॥
ತೃಣಬಿಂದುಸ್ತಥಾ ಋಕ್ಷಃ ಶಕ್ತಿಃ ಪಾರಾಶರಸ್ತಥಾ ।
ಜಾತೂಕರ್ಣ್ಯೋಽಥ ವಿಷ್ಣುಶ್ಚ ಸ್ವಯಂ ದ್ವೈಪಾಯನೋ ಮುನಿಃ ॥ ೨೦೭ ॥

---

ಲೋಕಾನುಗ್ರಹಾರ್ಥವಾಗಿ ಅನೇಕ ಇತಿಹಾಸ ಪುರಾಣಗಳು ಪ್ರಚಾರವನ್ನು ಹೊಂದುವುವು.

೧೯೯–೨೦೨. ಬ್ರಾಹ್ಮ, ಪಾದ್ಮ, ವೈಷ್ಣವ, ಶೈವ, ಭಾಗವತ, ನಾರದೀಯ, ಮಾರ್ಕಂಡೇಯ, ಆಗ್ನೇಯ, ಭವಿಷ್ಯ, ಬ್ರಹ್ಮವೈವರ್ತ, ಲೈಂಗ್ಯ, ವಾರಾಹ, ಸ್ಕಾಂದ, ವಾಮನ, ಕೌರ್ಮ, ಮಾತ್ಸ್ಯ, ಗಾರುಡ, ಬ್ರಹ್ಮಾಂಡಗಳೆಂಬುದಾಗಿ ಹದಿನೆಂಟು ಮಹಾ ಪುರಾಣಗಳಿರುವುವು.

೨೦೩–೨೦೮. ಈ ವಾರಾಹಕಲ್ಪದಲ್ಲಿ ವೇದವಿಭಾಜಕರಾದ ವ್ಯಾಸರನ್ನು ಕೇಳು. ಋತು, ಸತ್ಯ, ಭಾರ್ಗವ, ಅಂಗಿರಸ್ಸು, ಸವಿತೃ, ಮೃತ್ಯು, ಶತಕ್ರತು, ಈಗ ಇರುವ ಬುದ್ಧಿವಂತನಾದ ವಸಿಷ್ಠ, ಸಾರಸ್ವತ, ತ್ರಿಧಾಮ, ವೇದಜ್ಞನಾದ ತ್ರಿವೃತನೆಂಬ ಋಷಿ, ಶತತೇಜ (ಈತನು ಸಾಕ್ಷಾನ್ನಾರಾಯಣನಾದ ಮಹಾವಿಷ್ಣುವೆಂದು ಹೇಳಲ್ಪಟ್ಟವನು), ಕರಕ, ಧೀಮಂತನಾದ ಅರುಣಿ, ದೇವಸಮಾನನಾದ ಋತುಂಜಯ, ಕೃತಂಜಯ, ಭರದ್ವಾಜ, ಜ್ಞಾನಿಗಳಲ್ಲಿ ಉತ್ತಮನಾದ ಗೌತಮ, ವಾಜಶ್ರವ ಮುನಿ, ಯುಷ್ಮಾಯಣ, ತೃಣಬಿಂದು,

ಅಶ್ವತ್ಥಾಮಮುಖಾಶ್ಚೈತೇ ಭವಿಷ್ಯಾಃ ಸೂಚಿತಾಸ್ತ್ವವ ।
ಧರ್ಮಶಾಸ್ತ್ರಾಣಿ ಲೋಕಾರ್ಥಂ ಭಿದ್ಯಂತೇ ಚಾಪಿ ದ್ವಾಪರೇ ॥ ೨೦೮ ॥
ಮನ್ವತ್ರಿವಿಷ್ಣುಹಾರೀತಯಾಜ್ಞವಲ್ಕ್ಯೋಶನೋಽಂಗಿರಾಃ ।
ಯಮಾಪಸ್ತಂಬಸಂವರ್ತಾಃ ಕಾತ್ಯಾಯನಬೃಹಸ್ಪತೀ ॥ ೨೦೯ ॥
ಪರಾಶರವ್ಯಾಸಶಂಖಲಿಖಿತಾ ದಕ್ಷಗೌತಮೌ ।
ಶಾತಾತಪೋ ವಸಿಷ್ಠಶ್ಚ ಧರ್ಮಶಾಸ್ತ್ರಪ್ರಯೋಜಕಾಃ ॥ ೨೧೦ ॥
ತತೋ ದ್ವಾಪರಸಂಧ್ಯಾಯಾಂ ಪ್ರವರ್ತತಿ ಕಲೌ ಯುಗೇ ।
ನಶ್ಯಮಾನೇ ಶೈವಯೋಗೇ ಜಾಯಂತೇ ಯೋಗನಂದನಾಃ ॥ ೨೧೧ ॥
ಆದ್ಯೇ ಶ್ವೇತಕಲೌ ರುದ್ರಃ ಸುತಾರಸ್ತಾರಣಸ್ತಥಾ ।
ಸುಹೋತ್ರಃ ಕಂಕಣಶ್ಚೈವ ಲೋಕಾಖ್ಯಶ್ಚ ಮಹಾಮುನಿಃ ॥ ೨೧೨ ॥
ಜೈಗೀಷವ್ಯಶ್ಚ ಭಾವ್ಯೋ ವೈ ಭಗವಾನ್ದಧಿವಾಹನಃ ।
ಋಷಭಶ್ಚ ಮುನಿರ್ಧರ್ಮ ಉಗ್ರಶ್ಚಾತ್ರಿಃ ಸಬಾಲಕಃ ॥ ೨೧೩ ॥
ಗೌತಮೋ ವೇದಶೀರ್ಷಶ್ಚ ಗೋಕರ್ಣಶ್ಚ ಶಿಖಂಡಿಭೃತ್ ।
ಗುಹಾವಾಸೀ ಜಟಾಮಾಲೀ ಅಟ್ಟಹಾಸಶ್ಚ ದಾರುಣಃ ॥ ೨೧೪ ॥

---

ಋಕ್ಷ, ಶಕ್ತಿ, ಪರಾಶರ, ಜಾತೂಕರ್ಣ್ಯ, ಸಾಕ್ಷಾದ್ವಿಷ್ಣುವೆಂದು ಕರೆಯಲ್ಪಡುವ ದ್ವೈಪಾಯನ ಮುನಿ, ಅಶ್ವತ್ಥಾಮ ಮುಂತಾದ ಅನೇಕರು ಮುಂದೆ ಉಂಟಾಗುವರು. ಹಾಗೆಯೇ ದ್ವಾಪರಯುಗದಲ್ಲಿ ಧರ್ಮಶಾಸ್ತ್ರಗಳೂ ಅನೇಕವಾಗಿ ಲೋಕಾನುಗ್ರಹಕ್ಕಾಗಿ ರಚಿಸಲ್ಪಡುವುವು.

೨೦೯–೨೧೦. ಮನು, ಅತ್ರಿ, ವಿಷ್ಣು, ಹಾರೀತ, ಯಾಜ್ಞವಲ್ಕ್ಯ, ಉಶನಸ, ಅಂಗಿರಸ್ಸು, ಯಮ, ಆಪಸ್ತಂಬ, ಸಂವರ್ತ, ಕಾತ್ಯಾಯನ, ಬೃಹಸ್ಪತಿ, ಪರಾಶರ, ವ್ಯಾಸ, ಶಂಖ, ಲಿಖಿತ, ದಕ್ಷ, ಗೌತಮ, ಶಾತಾತಪ, ವಸಿಷ್ಠ ಇವರು ಧರ್ಮಶಾಸ್ತ್ರಪ್ರವರ್ತಕರಾಗುವರು.

೨೧೧. ಬಳಿಕ ದ್ವಾಪರಯುಗದ ಸಂಧ್ಯಾಕಾಲವು ಪ್ರಾಪ್ತಿಯಾಗಿ, ಕಲಿ ಪ್ರವೇಶವಾಗತೊಡಗಲು ಶಿವಧರ್ಮಗಳು ನಷ್ಟಗಳಾಗುವುವು. ಅವುಗಳನ್ನುದ್ಧರಿಸಲು ಅನೇಕ ಯೋಗಿವರ್ಯರು ಭೂಲೋಕದಲ್ಲಿ ಅವತರಿಸುವರು.

೨೧೨–೨೧೬. ಮೊದಲನೆಯ ಶ್ವೇತಕಲಿಯಲ್ಲಿ ರುದ್ರ, ಸುತಾರ, ತಾರಣ, ಸುಹೋತ್ರ, ಕಂಕಣ, ಲೋಕನೆಂಬ ಮಹಾಮುನಿ, ಜೈಗೀಷವ್ಯ, ಮುಂದೆ ಬರುವ ಭಗವತ್ಸ್ವರೂಪನಾದ ದಧಿವಾಹನ, ಋಷಭಮುನಿ, ಧರ್ಮ, ಉಗ್ರ, ಪುತ್ರಸಹಿತನಾದ ಅತ್ರಿ, ಗೌತಮ, ವೇದಶೀರ್ಷ, ಗೋಕರ್ಣ, ಶಿಖಂಡಿಭೃತ್, ಗುಹಾವಾಸಿ, ಜಟಾಮಾಲಿ, ಅಟ್ಟಹಾಸ, ದಾರುಣ, ಲಾಂಗಲಿ, ಸಂಯಮಿ, ಶೂಲಿ, ಡಿಂಡಿ, ಜುಂಡೀಶ್ವರ, ಸಹಿಷ್ಣು, ಸೋಮಶರ್ಮ, ಲಾಕುಲೀಶ,

ಲಾಂಗಲೀ ಸಂಯಮಿಾ ಶೂಲೀ ಡಿಂಡೀ ಜುಂಡೀಶ್ವರಃ ಸ್ವಯಂ ।
ಸಹಿಷ್ಣುಃ ಸೋಮಶರ್ಮಾಚ ಲಕುಲೀಶಶ್ಚ ಪಾರ್ಥಿವ ॥ ೨೧೫ ॥
ಕಾಯಾವರೋಹಣೋ ಭಾವೀತ್ಯಾದ್ಯಾ ಯೋಗೋಶ್ವರಾಃ ಕ್ರಮಾತ್ ।
ಏತೇ ಸಂಕ್ಷಿಪ್ಯ ವಕ್ಷ್ಯಂತಿ ಶಿವಧರ್ಮಂ ಕಲೌಯುಗೇ ॥ ೨೧೬ ॥
ಏವಂ ಕಲಿಯುಗೇ ರಾಜನ್ಶಾಸ್ತ್ರಂ ಸಂಕ್ಷೇಪ ಉಚ್ಯತೇ ।
ಶೃಣ ಶಿಷ್ಯಪ್ರವೃತ್ತಿಂ ಚ ಹರ್ಷೋದ್ವೇಗಕರೀಂ ಕಿಲ ॥ ೨೧೭ ॥
ಶಿಷ್ಯೇ ಮಾಯಾಮಸೂಯಾಂ ಚ ವಧಂ ಚೈವ ತಪಸ್ವಿನಾಂ ।
ಸಾಧಯಂತಿ ನರಾಸ್ತತ್ರ ತಮಸಾ ವ್ಯಾಕುಲೇಂದ್ರಿಯಾಃ ॥ ೨೧೮ ॥
ಕಲೌ ಪ್ರಮಾಥಕೋ ರಾಗಃ ಸತತಂ ಕ್ಷುದ್ಭಯಾನಿ ಚ ।
ಅನಾವೃಷ್ಟಿಭಯಂ ಘೋರಂ ದೇಶಾನಾಂ ಚ ವಿಪರ್ಯಯಃ ॥ ೨೧೯ ॥
ನ ಪ್ರಮಾಣಂ ಶ್ರುತೇರಸ್ತಿ ನೃಣಾಂ ಚಾಧರ್ಮಸೇವನಾತ್ ।
ಅಧಾರ್ಮಿಕಾಸ್ತ್ವನಾಚಾರಾ ಮಹಾಕೋಪಾಲ್ಪತೇಜಸಃ ॥ ೨೨೦ ॥
ಅನೃತಂ ಬ್ರುವತೇ ಲುಬ್ಧಾ ನಾರೀಪ್ರಾಯಾಶ್ಚ ದುಷ್ಪ್ರಜಾಃ ।
ದುರಿಷ್ಟೈರ್ದುರಧೀತೈಶ್ಚ ದುರಾಚಾರೈರ್ದುರಾಗಮೈಃ ॥ ೨೨೧ ॥

---

ಕಾಯಾವರೋಹಣ ಮುಂತಾದವರು ಕ್ರಮವಾಗಿ ಯೋಗೇಶ್ವರರಾಗುವರು. ಇವರೆಲ್ಲರೂ ಕಲಿಯುಗದಲ್ಲಿ ಸಂಕ್ಷೇಪವಾಗಿ ಶಿವಧರ್ಮವನ್ನು ಬೋಧಿಸುವರು.

೨೧೭–೨೧೮. ಎಲೈ ಕರಂಧಮನೆ! ಇಂತು ಕಲಿಯುಗದಲ್ಲಿ ಸಂಕ್ಷೇಪಗೊಂಡ ಶಾಸ್ತ್ರವೇ ಹೇಳಲ್ಪಡುವುದು. ಇನ್ನು ಹರ್ಷೋದ್ವೇಗಗಳಿಂದೊಡಗೂಡಿದ ಕಲಿಯುಗದ ಜನರ ಪ್ರವೃತ್ತಿಗಳನ್ನು ತಿಳಿಸುವೆನು ಕೇಳು. ಕಲಿಕಾಲದಲ್ಲಿ ಜನರು ಮೋಸವನ್ನೂ, ಅಸೂಯೆಯನ್ನೂ, ತಪೋನಿಷ್ಠರ ವಧಾದಿ ಹಿಂಸೆಗಳನ್ನೂ ಸಾಧಿಸುವರು. ತಮೋಗುಣದಿಂದ ಆವೃತವಾದ ಮನಸ್ಸುಳ್ಳವರಾಗುವರು.

೨೧೯. ಕಲಿಯುಗದಲ್ಲಿ ಅನುರಾಗವೆಂಬುದು ಮನಸ್ಸನ್ನು ಮಥಿಸುವುದು. ಯಾವಾಗಲೂ ಜನರಿಗೆ ಹಸಿವಿನ ಭಯವು ತಪ್ಪದು. ಭಯಂಕರವಾದ ಅನಾವೃಷ್ಟಿಯ ಭಯವುಂಟಾಗುವುದು. ದೇಶಗಳು ವಿಪರ್ಯಸ್ತಗಳಾಗುವುವು.

೨೨೦. ಜನರು ಕೇವಲ ಅಧರ್ಮದಲ್ಲಿ ಪ್ರವರ್ತಿಸುವುದರಿಂದ ವೇದಗಳಿಗೆ ಪ್ರಾಮಾಣ್ಯವು ಇರುವುದಿಲ್ಲ. ಅವರು ಧಾರ್ಮಿಕರಲ್ಲದೆ ಅನಾಚಾರ ಸಹಿತರಾಗಿ ಸ್ವಲ್ಪ ಪರಾಕ್ರಮಿಗಳಾದರೂ ಹೆಚ್ಚಾದ ಕೋಪತಾಪಗಳುಳ್ಳವರಾಗುವರು.

೨೨೧. ಪ್ರಜೆಗಳೆಲ್ಲರೂ ಲುಬ್ಧರೂ, ಸ್ತ್ರೀಪ್ರಾಯರೂ, ದುಷ್ಟರೂ ಆಗಿ ಕೆಟ್ಟ ಉದ್ದೇಶಗಳಿಂದಲೂ, ಮಿಥ್ಯಾಧ್ಯಯನಗಳಿಂದಲೂ, ದುರಾಚಾರಗಳಿಂದಲೂ, ದುಷ್ಟಶಾಸ್ತ್ರಗಳಿಂದಲೂ ತುಂಬಿದವರಾಗಿ ಕೇವಲ ಅನೃತಗಳನ್ನೇ ಭಾಷಿಸುವರು.

ವಿಪ್ರಾಣಾಂ ಕರ್ಮದೋಷೈಶ್ಚ ಪ್ರಜಾನಾಂ ಜಾಯತೇ ಕ್ಷಯಃ ।
ಉತ್ಸೀದಂತಿ ಕ್ಷತ್ರವಿಶೋ ವರ್ಧಂತೇ ಶೂದ್ರವಿಪ್ರಕಾಃ ॥ ೨೨೨ ॥
ಶೂದ್ರಾ ವಿಪ್ರೈಃ ಸಹಾಸಂತೇ ಶಯನಾಸನಭೋಜನೈಃ ।
ಶೂದ್ರಾಶ್ಚ ಬ್ರಾಹ್ಮಣಾಚಾರಾಃ ಶೂದ್ರಾಚಾರಾಶ್ಚ ಬ್ರಾಹ್ಮಣಾಃ ॥೨೨೩॥
ರಾಜವೃತ್ತ್ಯಾಂ ಸ್ಥಿತಾಶ್ಚೌರಾಶ್ಚೌರಾಚಾರಾಶ್ಚ ಪಾರ್ಥಿವಾಃ ।
ಏಕಪತ್ನ್ಯೋ ನಶಿಷ್ಯಂತಿ ವರ್ಧಯಂತ್ಯಭಿಸಾರಿಕಾಃ ॥ ೨೨೪ ॥
ತದಾ ಹ್ಯಲ್ಪಫಲಾ ಭೂಮಿಃ ಕ್ವಚಿಚ್ಚಾಪಿ ಮಹಾಫಲಾ ।
ಅರಕ್ಷಿತಾರೋ ಹರ್ತಾರೋ ರಾಜಾನಃ ಪಾಪನಿರ್ಭಯಾಃ ॥ ೨೨೫ ॥
ಅಕ್ಷತ್ರಿಯಾಸ್ತು ರಾಜಾನಃ ವಿಪ್ರಾಃ ಶೂದ್ರೋಪಜೀವಿನಃ ।
ಶೂದ್ರಾ ವಿವಾದಿನಃ ಸರ್ವೇ ಬ್ರಾಹ್ಮಣೈರಭಿನಂದಿತಾಃ ॥ ೨೨೬ ॥
ಆಸನಸ್ಥಾನ್ದ್ವಿಜಾನ್ದೃಷ್ಟ್ವಾ ಚಲಂತ್ಯತ್ಯಲ್ಪಬುದ್ಧಯಃ ।
ಆಸ್ಯೇ ನಿಧಾಯ ವೈ ಹಸ್ತಂ ಕರ್ಣೇ ಶೂದ್ರಸ್ಯ ಚ ದ್ವಿಜಾಃ ॥ ೨೨೭ ॥

---

೨೨೨. ಬ್ರಾಹ್ಮಣರ ಕರ್ಮಲೋಪಗಳಿಂದ ಪ್ರಜಾಕ್ಷಯವು ಸಂಭವಿಸುವುದು. ಕ್ಷತ್ರಿಯರೂ, ವೈಶ್ಯರೂ, ನಷ್ಟರಾಗುವರು. ಬ್ರಾಹ್ಮಣರಂತೆ ತೋರುವ ಶೂದ್ರರು ಏಳಿಗೆಯನ್ನು ಹೊಂದುವರು.

೨೨೩. ಶಯನ, ಆಸನ, ಭೋಜನಗಳಲ್ಲಿ ಶೂದ್ರರು ವಿಪ್ರರೊಡನೆ ಸೇರಿ ವ್ಯವಹರಿಸುವರು. ಶೂದ್ರರು ಬ್ರಾಹ್ಮಣಕರ್ಮನಿರತರೂ, ಬ್ರಾಹ್ಮಣರು ಶೂದ್ರವೃತ್ತಿ ನಿರತರೂ ಆಗುವರು.

೨೨೪. ರಾಜೋದ್ಯೋಗಗಳಲ್ಲಿ ಕೇವಲ ಚೋರರೇ ಮುಂದುವರಿಯುವರು. ರಾಜರೂ ಕೂಡ ಚೌರ್ಯಕಾರ್ಯಗಳಿಂದಲೇ ಜೀವಿಸುವರು. ಪತಿವ್ರತೆಯರಾದ ಸ್ತ್ರೀಯರೇ ಕಾಣದಂತಾಗಿ ಅಭಿಸಾರಿಕೆಯರೇ ಎಲ್ಲೆಲ್ಲೂ ಕಾಣುವರು.

೨೨೫. ಆಗ ಭೂಮಿಯು ಸ್ವಲ್ಪಫಲವನ್ನೇ ಕೊಡುವುದು. ಕೆಲವೆಡೆಗಳಲ್ಲಿ ಮಹಾಫಲವೂ ಲಭಿಸುವುದು. ರಾಜರು ರಕ್ಷಣೆಯನ್ನು ಮಾಡದೆ ಪಾಪಭಯವನ್ನು ಬಿಟ್ಟು ಪ್ರಜೆಗಳ ಐಶ್ವರ್ಯಗಳನ್ನು ಅಪಹರಿಸುವರು.

೨೨೬. ಕ್ಷತ್ರಿಯರಲ್ಲದವರು ಸಿಂಹಾಸನಾರೋಹಣವನ್ನು ಮಾಡುವರು. ಬ್ರಾಹ್ಮಣರು ಶೂದ್ರರನ್ನನುಸರಿಸಿ ಜೀವನಮಾಡುವರು. ಶೂದ್ರರು ಬ್ರಾಹ್ಮಣರಿಂದ ಅನುಮೋದಿತರಾಗಿ ಶಾಸ್ತ್ರವಾದಗಳಲ್ಲಿ ಪ್ರವರ್ತಿಸುವರು.

೨೨೭. ನೀಚಬುದ್ಧಿಯುಳ್ಳವರು ಆಸನಮರ್ಯಾದೆಯನ್ನು ಹೊಂದಿದ ಬ್ರಾಹ್ಮಣರನ್ನು ಕಂಡು ಅಸೂಯೆಗೊಳ್ಳುವರು. ಬ್ರಾಹ್ಮಣರು ಹಣೆಯಲ್ಲಿ ಕೈಗಳನ್ನು ಜೋಡಿಸಿಕೊಂಡು ವಿನೀತರಾಗಿ ನೀಚನಾದ ಶೂದ್ರನಿಗೆ ಉಪದೇಶವಾಕ್ಯಗಳನ್ನು ಹೇಳುತ್ತಿರುವರು.

ನೀಚಸ್ಯಾಪಿ ತದಾ ವಾಕ್ಯಂ ವಕ್ಷ್ಯಂತಿ ವಿನಯೇನ ತಂ ।
ಉಚ್ಚಾಸನಸ್ಥಾನ್ಶೂದ್ರಾಂಶ್ಚ ದ್ವಿಜಾನಾಂ ಪಶ್ಯತಾಮಪಿ ।
ಜ್ಞಾತ್ವಾ ನ ಹಿಂಸತೇ ರಾಜಾ ಪಶ್ಯ ಕಾಲಬಲಂ ನೃಪ ॥ ೨೨೮ ॥
ಪುಷ್ಪೈಶ್ಚಭಸಿತೈಶ್ಚೈವ ತಥಾನ್ಯೈರ್ಮಂಡನೈರ್ದ್ವಿಜಾಃ ।
ಶೂದ್ರಾನಭ್ಯರ್ಚಯಂತ್ಯಲ್ಪಶ್ರುತಭಾಗ್ಯಬಲಾನ್ವಿತಾಃ ॥ ೨೨೯ ॥
ಪಾಷಂಡಿನಾಂ ಚ ಗೃಹ್ಣಂತಿ ಬ್ರಾಹ್ಮಣಾಃ ಕುಪ್ರತಿಗ್ರಹಂ ॥ ೨೩೦ ॥
ಯೇನ ತೇ ರೌರವಂ ಯಾಂತಿ ಸುದುಸ್ತಾರಂ ದ್ವಿಜಾಧಮಾಃ ।
ತಪೋಯಜ್ಞಫಲಾನಾಂ ಚ ವಿಕ್ರೇತಾರೋ ದ್ವಿಜಾಸ್ತಥಾ ॥ ೨೩೧ ॥
ಯತಯಶ್ಚ ಭವಿಷ್ಯಂತಿ ಬಹವಃ ಕೋಟಿಶಃ ಕಲೌ ।
ಪುರುಷಾಲ್ಪಬಹುಸ್ತ್ರೀಕೋ ನೃಣಾಂ ಚಾಪತ್ಯಸಂಭವಃ ॥ ೨೩೨ ॥
ನಿಂದಂತಿ ವೇದವಾಕ್ಯಾನಿ ವೇದಾರ್ಥಾಂಶ್ಚ ಕಲೌ ಯುಗೇ ।
ಶೂದ್ರೈಃ ಸ್ವಯಂ ನಿರ್ಮಿತಂ ಯತ್ಪ್ರಮಾಣಂ ಶಾಸ್ತ್ರಮೇವ ತತ್ ॥೨೩೩॥
ಶ್ವಾಪದಪ್ರಬಲತ್ವಂ ಚ ಗವಾಂ ಚಾಪಿ ಪರಿಕ್ಷಯಃ
ಕಸ್ಯಚಿದ್ದಾನಪ್ರಭೃತಿಧರ್ಮಸ್ಯಾಸ್ತಿ ನ ಶುದ್ಧತಾ ॥ ೨೩೪ ॥

---

೨೨೮. ಬ್ರಾಹ್ಮಣರು ನೋಡುತ್ತಿರುವಂತೆಯೇ ಶೂದ್ರರು ಉಚ್ಚಸ್ಥಾನಗಳಲ್ಲಿ ಕುಳಿತುಕೊಳ್ಳುವರು. ಇದನ್ನು ತಿಳಿದೂ ರಾಜರು ಅವರನ್ನು ದಂಡಿಸುವುದಿಲ್ಲ. ಅಯ್ಯಾ ಕರಂಧಮನೆ! ಕಾಲಮಹಿಮೆಯನ್ನು ಕಂಡೆಯಾ!

೨೨೯. ಬ್ರಾಹ್ಮಣರೂ ಸ್ವಲ್ಪ ಜ್ಞಾನವುಳ್ಳವರಾಗಿ ಸ್ವಲ್ಪೈಶ್ವರ್ಯಸಮನ್ವಿತರಾದುದರಿಂದ ಶೂದ್ರರನ್ನು ಪುಷ್ಪಗಳಿಂದಲೂ, ಉತ್ತಮಾಕ್ಷತೆಗಳಿಂದಲೂ, ಇತರ ಮಂಗಳದ್ರವ್ಯಗಳಿಂದಲೂ ಪೂಜಿಸುವರು.

೨೩೦–೨೩೨. ಬ್ರಾಹ್ಮಣರು ಕೇವಲ ಪಾಷಂಡವಾದಿಗಳಿಂದ ನೀಚದಾನಗಳನ್ನೂ ಸ್ವೀಕರಿಸುವರು. ಅದರ ಫಲವಾಗಿ ಈ ದ್ವಿಜಾಧಮರು ಅಪಾರವಾದ ರೌರವ ನರಕವನ್ನು ಹೊಂದುವರು. ದ್ವಿಜರೂ ಹಾಗೆಯೇ ತಪಸ್ಸು, ಯಜ್ಞಗಳ ಫಲಗಳನ್ನು ವಿಕ್ರಯಿಸತೊಡಗುವರು. ಕೋಟಿಗಟ್ಟಲೆ ಮನುಜರು ಯತಿವೇಷಧಾರಿಗಳೂ ಆಗುವರು. ಮನುಷ್ಯರ ಸಂತತಿಯೂ ಸ್ವಲ್ಪ ಗಂಡುಮಕ್ಕಳಿಂದಲೂ ಅನೇಕ ಹೆಣ್ಣುಮಕ್ಕಳಿಂದಲೂ ಕೂಡಿರುವುದು.

೨೩೩–೨೩೪. ಕಲಿಯುಗದ ಜನರು ವೇದವಾಕ್ಯಗಳನ್ನೂ, ವೇದಾರ್ಥಗಳನ್ನೂ ನಿಂದೆಮಾಡುವರು. ಶೂದ್ರರಿಂದ ಮಾಡಲ್ಪಟ್ಟ ಗ್ರಂಥಗಳೇ ಪರಮಪ್ರಮಾಣಗಳಾದ ಶಾಸ್ತ್ರಗಳಾಗುವುವು. ಹಿಂಸ್ರಮೃಗಗಳು ಬಹುವಾಗಿ ವೃದ್ಧಿಯನ್ನೈದಿ ಗೋವುಗಳು ಕ್ಷಯವನ್ನು ಹೊಂದುವುವು. ಅಪರೂಪವಾಗಿ ನಡೆಯುವ ಕೆಲವು ದಾನಗಳಲ್ಲಿಯೂ ಶುದ್ಧತೆಯೆಂಬುದಿರುವುದಿಲ್ಲವು.

**ಸಾಧೂನಾಂ ಬಹವೋ ನಾಶಾಃ ಪಾರ್ಥಿವಾಶ್ಚಾಪ್ಯರಕ್ಷಿಣಃ ।**
**ಅಟ್ಟಶೂಲಾ ಜನಪದಾಃ ಶಿವಶೂಲಾಶ್ಚತುಷ್ಪಥಾಃ ॥ ೨೩೫ ॥**
**ಪ್ರಮದಾಃ ಕೇಶಶೂಲಿನ್ಯೋ ಭವಿಷ್ಯಂತಿ ಕಲೌ ಯುಗೇ ।**
**ಸ್ತ್ರೀಪ್ರಧಾನಾನಿ ಗೇಹಾನಿ ಕುಲ್ಯೈಲಾಸ್ತಾಶ್ಚ ಕರ್ಕಶಾಃ ॥ ೨೩೬ ॥**
**ಬಹುಭಕ್ತ್ಯಾವಲಿಪ್ತಾಶ್ಚ ಕೃತ್ವಾ ಇವ ಭವಂತಿ ಚ ।**
**ಸರ್ವೇ ವಣಿಗ್ಜನಾಶ್ಚಾಪಿ ಚಿತ್ರವರ್ಷೀ ಚ ವಾಸವಃ ॥ ೨೩೭ ॥**
**ಕುಶೀಲಚರ್ಯಾಪಾಷಂಡೈರ್ವೃಥಾರೂಪೈಃ ಸಮಾವೃತಃ ।**
**ಬಹುಯಾಚನಕೋ ಲೋಕೋ ಭವಿಷ್ಯತಿ ಪರಸ್ಪರೀ ॥ ೨೩೮ ॥**
**ಅಶಂಕಶ್ಚೈವ ಪಾಪೇಷು ತದಾ ಲೋಕೋ ಭವಿಷ್ಯತಿ ।**
**ಹರ್ತಾರಃ ಪರರತ್ನಾನಾಂ ಪರದಾರಪ್ರಧರ್ಷಕಾಃ ॥ ೨೩೯ ॥**
**ಊನಷೋಡಶವರ್ಷಾಶ್ಚ ಪ್ರಜಾಯಂತೇ ಯುಗಕ್ಷಯೇ ।**
**ತಥಾ ದ್ವಾದಶವರ್ಷಾಶ್ಚ ಪ್ರಸವಂತಿ ಸ್ತ್ರಿಯಸ್ತದಾ ॥ ೨೪೦ ॥**

---

೨೩೫. ಸಾಧುಗಳಿಗೆ ಬಹು ವಿಧಗಳಾದ ನಷ್ಟಗಳು ಸಂಭವಿಸುವುವು. ರಾಜರೂ ಪ್ರಜಾರಕ್ಷಣೆಯನ್ನು ಮಾಡುವುದಿಲ್ಲ. ದೇಶಗಳೆಲ್ಲವೂ ಅನ್ನವಿಕ್ರಯದಿಂದ ತುಂಬಿರುವುವು. ಬ್ರಾಹ್ಮಣರು ವೇದವಿಕ್ರಯದಿಂದ ಜೀವಿಸುವರು.

೨೩೬. ಸ್ತ್ರೀಯರು ಶರೀರವಿಕ್ರಯವನ್ನು ಮಾಡುವರು. ಇವು ಕಲಿಯುಗದ ಆಚಾರಗಳು. ಗೃಹಗಳೆಲ್ಲವೂ ಸ್ತ್ರೀಯರ ಅಧೀನಗಳಾಗಿರುವುವು. ಅವರೂ ನೀಚವಸ್ತ್ರಧಾರಿಗಳಾಗಿಯೂ ಕಠಿನಹೃದಯರಾಗಿಯೂ ಇರುವರು.

೨೩೭. ವ್ಯಾಪಾರಗಾರರೆಲ್ಲರೂ ಅಧಿಕಲಾಭಪಿಶಾಚದಿಂದ ಗ್ರಸ್ತರಾಗಿ ತಾವು ಕೃತಕೃತ್ಯರಾದಂತೆ ತಿಳಿಯುವರು. ಇಂದ್ರನು ನಿಯಮವಿಲ್ಲದೆ ಮಳೆಯನ್ನು ಕೊಡುವನು.

೨೩೮. ಲೋಕದ ಜನರೆಲ್ಲರೂ ನೀಚಗಳಾದ ನಡತೆಯೂ ಆಚಾರವೂ ಉಳ್ಳವರೂ, ವ್ಯರ್ಥಜೀವಿಗಳೂ ಆದ ಪಾಷಂಡರಿಂದ ತುಂಬಿಹೋಗಿ ಪರಸ್ಪರ ಯಾಚನೆಯಲ್ಲಿಯೇ ನಿರತರಾಗಿರುವರು.

೨೩೯. ಆಗ ಲೋಕದಲ್ಲಿ ಪಾಪಿಗಳಲ್ಲಿ ಸಂಯಮವುಂಟಾಗುವುದಿಲ್ಲ. ಜನರು ಇತರರ ಉತ್ತಮ ವಸ್ತುಗಳನ್ನು ಕದಿಯುವರು. ಪರಸ್ತ್ರೀಯರನ್ನು ಅವಮಾನಗೊಳಿಸುವರು.

೨೪೦. ಕಲಿಯುಗವು ಕೊನೆಯಾಗಿಬರಲು ಹದಿನಾರು ವರ್ಷಕ್ಕೆ ಕಡಿಮೆಯ ವಯಸ್ಸಿನ ಹುಡುಗರು ಗರ್ಭಾದಾನ ಮಾಡುವರು. ಹನ್ನೆರಡು ವರ್ಷವಿಲ್ಲದ ಹುಡುಗಿಯರೂ ಮಕ್ಕಳನ್ನು ಪಡೆಯುವರು.

ಚೌರಾಶ್ಚೌರಸ್ಯ ಹರ್ತಾರೋ ಹರ್ತುರ್ಹರ್ತಾ ತಥಾಪರಃ ।
ಜ್ಞಾನಕರ್ಮಣ್ಯುಪರತೇ ಲೋಕೇ ನಿಷ್ಕ್ರಿಯತಾಂ ಗತೇ ॥ ೨೪೧ ॥
ಕೀಟಮೂಷಕಸರ್ಪಾಶ್ಚ ಧರ್ಷಯಿಷ್ಯಂತಿ ಮಾನವಾನ್ ।
ವರ್ಣಾಶ್ರಮಾಣಾಂ ಯೇ ಚಾನ್ಯೇ ಪಾಷಂಡಾಃ ಪರಿಪಂಥಿನಃ ।
ತೇ ತದಾ ಪ್ರೋದ್ಭವಿಷ್ಯಂತಿ ತೇಷಾಂ ವೃದ್ಧಿಶ್ಚ ಪಾರ್ಥಿವ ॥ ೨೪೨ ॥
ದುಃಖಃ ಪುತ್ರಕಲತ್ರಾದ್ಯಂ ದೇಹೋತ್ಸಾದಃ ಸರೋಗತಾ ।
ಅಧರ್ಮಾಭಿನಿವೇಶತ್ವಾತ್ತಮಸೋ ಜಾಯತೇ ಕಲೌ ॥ ೨೪೩ ॥
ಕಲೇರ್ದೋಷನಿಧೇಶ್ಚೈವ ಶೃಣುಷ್ವೇವಂ ಮಹಾಗುಣಂ ।
ತದಾಲ್ಪೇನೈವ ಕಾಲೇನ ಸಿದ್ಧಿಂ ಗಚ್ಛಂತಿ ಮಾನವಾಃ ॥ ೨೪೪ ॥
ತ್ರಿಯುಗೀನಾ ವದಂತ್ಯೇವಂ ಧನ್ಯಾ ಧರ್ಮಂ ಚರಂತಿ ಯೇ ।
ಶ್ರುತಿಸ್ಮೃತಿಪುರಾಣೋಕ್ತಂ ಕಲೌ ಶ್ರದ್ಧಾಪರಾಯಣಾಂ ॥ ೨೪೫ ॥
ತ್ರೇತಾಯಾಂ ವಾರ್ಷಿಕೋ ಧರ್ಮೋ ದ್ವಾಪರೇ ಮಾಸಿಕಃಸ್ಮೃತಃ ।
ಯಥಾ ಕ್ಲೇಶಂ ಚರನ್ಪ್ರಾಜ್ಞಃ ತದಹ್ನಾ ಪ್ರಾಪ್ಯತೇ ಕಲೌ ॥ ೨೪೬ ॥

---

೨೪೧. ಚೋರರ ದ್ರವ್ಯವನ್ನು ಇತರ ಚೋರರು ಅಪಹರಿಸುವರು. ಅವರಿಂದ ಮತ್ತಿತರರು ಕಸಿದುಕೊಳ್ಳುವರು. ಜ್ಞಾನಮಾರ್ಗ, ಕರ್ಮಮಾರ್ಗ ಗಳೆರಡೂ ನಾಶಹೊಂದಿ ಲೋಕವೆಲ್ಲವೂ ವೈದಿಕಕರ್ಮರಹಿತವಾಗುವುದು.

೨೪೨. ಕ್ಷುದ್ರ ಕೀಟಗಳೂ, ಮೂಷಕಗಳೂ, ಸರ್ಪಗಳೂ ಮನುಷ್ಯ ರನ್ನೇ ಭಯಪಡಿಸುವುವು. ಎಲೈ ರಾಜನೇ! ಕಲಿಕಾಲದಲ್ಲಿ ವರ್ಣಾಶ್ರಮ ಧರ್ಮಗಳಿಗೆ ವಿರೋಧಿಗಳಾದ ಪಾಂಷಂಡರೆಲ್ಲರೂ ಹುಟ್ಟುವರು. ಅವರಿಗೇ ಉತ್ತೇಜನವೂ ದೊರಕುವುದು.

೨೪೩. ತಮೋಗುಣದ ಮಹಿಮೆಯಿಂದ ಜನರು ಕೇವಲ ಅಧರ್ಮಕಾರ್ಯ ಗಳಲ್ಲಿಯೇ ತೊಡಗಿರುವ ಕಾರಣ ಪುತ್ರಪತ್ನಿಯರ ದೆಸೆಯಿಂದ ದುಃಖವೂ, ದೇಹತ್ಯಾಗವೂ, ರೋಗಬಾಹುಳ್ಯವೂ ಉಂಟಾಗುವುವು.

೨೪೪. ಇಂತು ಕಲಿಯುಗವು ದೋಷಗಳ ತವರುಮನೆಯಾಗಿದ್ದರೂ, ಅದರಲ್ಲಿ ಒಂದು ಮುಖ್ಯವಾದ ಮಹಾಗುಣವಿರುವುದನ್ನು ಕೇಳು. ಆ ಯುಗದಲ್ಲಿ ಮನುಷ್ಯರು ಸ್ವಲ್ಪಕಾಲದ ತಪಸ್ಸಿನಿಂದಲೇ ಸಿದ್ಧಿಯನ್ನು ಪಡೆಯುವರು.

೨೪೫–೨೪೬. 'ಕಲಿಯುಗದಲ್ಲಿ ಶ್ರುತಿಸ್ಮೃತಿಗಳಲ್ಲಿ ಹೇಳಿರುವ ಧರ್ಮ ವನ್ನು ಯಾರು ಶ್ರದ್ಧೆಯಿಂದ ಆಚರಿಸುವರೊ, ಅವರೇ ಪರಮಧನ್ಯರು' ಎಂದು ಇತರ ಯುಗಗಳ ಜನರು ಹೇಳುತ್ತಿರುವರು. ತ್ರೇತಾಯುಗದಲ್ಲಿ ಒಂದು ವರ್ಷವೂ, ದ್ವಾಪರದಲ್ಲಿ ಒಂದು ತಿಂಗಳೂ ಧರ್ಮವನ್ನು ಕಷ್ಟದಿಂದ ಆಚರಿಸಿದ ಫಲವನ್ನು ಕಲಿಯುಗದಲ್ಲಿ ಒಂದು ದಿನದಲ್ಲಿಯೇ ಸಂಪಾದಿಸಬಹುದು.

ಯುಗತ್ರಯೇಣ ತಾವಂತಃ ಸಿದ್ಧಿಂ ಗಚ್ಛಂತಿ ಪಾರ್ಥಿವಃ ।
ಯಾವಂತಃ ಸಿದ್ಧಿಮಾಯಾಂತಿ ಕಲೌ ಹರಿಹರವ್ರತಾಃ ॥ ೨೪೭ ॥
ಅಷ್ಟಾವಿಂಶೇ ಕಲೌ ಯಚ್ಚ ಭಾವಿ ತತ್ತ್ವಂ ನಿಬೋಧ ಮೇ ॥ ೨೪೮ ॥
ತ್ರಿಷು ವರ್ಷಸಹಸ್ರೇಷು ಕಲೇರ್ಯಾತೇಷು ಪಾರ್ಥಿವಃ ।
ತ್ರಿಶತೇಷು ದಶನ್ಯೂನೇಷ್ವಸ್ಯಾಂ ಭುವಿ ಭವಿಷ್ಯತಿ ॥ ೨೪೯ ॥
ಶೂದ್ರಕೋ ನಾಮ ವೀರಾಣಾಮಧಿಪಃ ಸಿದ್ಧಿಮತ್ರ ಸಃ ।
ಚರ್ಚಿತಾಯಾಂ ಸಮಾರಾಧ್ಯ ಲಪ್ಸ್ಯತೇ ಭೂಭರಾಪಹಃ ॥ ೨೫೦ ॥
ತತಸ್ತ್ರಿಷು ಸಹಸ್ರೇಷು ದಶಾಧಿಕಶತತ್ರಯೇ ।
ಭವಿಷ್ಯಂ ನಂದರಾಜ್ಯಂ ಚ ಚಾಣಕ್ಯೋ ಯಾನ್ಹನಿಷ್ಯತಿ ॥ ೨೫೧ ॥
ಶುಕ್ಲತೀರ್ಥೇ ಸರ್ವಪಾಪನಿರ್ಮುಕ್ತಿಂ ಯೋಽಭಿಲಪ್ಸ್ಯತಿ ।
ತತಸ್ತ್ರಿಷು ಸಹಸ್ರೇಷು ವಿಂಶತ್ಯಾ ಚಾಧಿಕೇಷು ಚ ॥ ೨೫೨ ॥
ಭವಿಷ್ಯಂ ವಿಕ್ರಮಾದಿತ್ಯರಾಜ್ಯಂ ಸೋಽಥ ಪ್ರಲಪ್ಸ್ಯತೇ ।
ಸಿದ್ಧಿಪ್ರಸಾದಾದ್ದುರ್ಗಾಣಾಂ ದೀನಾನ್ ಯೋ ಹ್ಯುದ್ಧರಿಷ್ಯತಿ ॥ ೨೫೩ ॥

---

೨೪೭. ಎಲೈ ಕರಂಧಮನೆ! ಕಲಿಯುಗದಲ್ಲಿ ಶಿವಭಕ್ತ ವಿಷ್ಣುಭಕ್ತರು ಎಷ್ಟುಜನ ಮೋಕ್ಷವನ್ನು ಹೊಂದುವರೊ, ಮಿಕ್ಕ ಮೂರು ಯುಗಗಳೆಲ್ಲವುಗಳಲ್ಲಿಯೂ ಕೂಡ ಅಷ್ಟೇ ಜನರು ಸಿದ್ಧಿಯನ್ನು ಪಡೆಯುವರು.

೨೪೮–೨೫೦. ಇಪ್ಪತ್ತೆಂಟನೆಯ ಕಲಿಯುಗದಲ್ಲಿ ಮುಂದೆ ನಡೆಯುವುದನ್ನು ಹೇಳುವೆನು ಕೇಳು. ಕಲಿಯುಗದ ಮೂರು ಸಾವಿರದ ಇನ್ನೂರ ತೊಂಬತ್ತು ವರ್ಷಗಳು ಕಳೆಯಲು ಭೂಲೋಕದಲ್ಲಿ ಒಬ್ಬ ಚಕ್ರವರ್ತಿಯು ಜನಿಸುವನು. ಆತನು ಶೂದ್ರಕನೆಂಬ ಹೆಸರಿನಿಂದ ಅನೇಕ ವೀರರಿಗೆ ನಾಯಕನಾಗುವನು. ಆತನು ತನ್ನ ರಾಜ್ಯದಲ್ಲಿ ಧರ್ಮವನ್ನು ನೆಲೆಗೊಳಿಸಿ ಮುಕ್ತಿಯನ್ನು ಹೊಂದುವನು.

೨೫೧. ಆಮೇಲೆ ಮೂರು ಸಾವಿರದ ಮುನ್ನೂರ ಹತ್ತು ವರ್ಷಗಳು ಕಳೆಯಲು ನಂದರಾಜ್ಯವು ನಡೆಯುವುದು. ಚಾಣಕ್ಯನೆಂಬುವನು ಆ ನಂದರನ್ನೆಲ್ಲ ಸಂಹರಿಸುವನು.

೨೫೨–೧೫೩. ಶುಕ್ಲ ತೀರ್ಥಸೇವನೆಯಿಂದ ಆತನು ತನ್ನ ಸಕಲಪಾಪಗಳನ್ನೂ ಕಳೆದುಕೊಳ್ಳುವನು. ಬಳಿಕ ಮೂರು ಸಾವಿರದ ಇಪ್ಪತ್ತುವರ್ಷಗಳು ಕಳೆಯಲು ವಿಕ್ರಮಾದಿತ್ಯ ರಾಜ್ಯವು ವಿಸ್ತರಿಸುವುದು. ಆತನು ರಾಜ್ಯಭಾರವನ್ನು ಮಾಡುತ್ತ ಅನೇಕ ದುರ್ಗಗಳನ್ನು ಸಾಧಿಸಿ ವಶಪಡಿಸಿಕೊಂಡು ದೀನರನ್ನು ಉದ್ಧರಿಸುವನು.

ತತಃ ಶತಸಹಸ್ರೇಷು ಶತೇನಾಪ್ಯಧಿಕೇಷು ಚ ।
ಶಕೋ ನಾಮ ಭವಿಷ್ಯಶ್ಚ ಯೋಽತಿದಾರಿದ್ರ್ಯಹಾರಕಃ ॥ ೨೫೪ ॥
ತತಸ್ತ್ರಿಷು ಸಹಸ್ರೇಷು ಷಟ್ಶತೈರಧಿಕೇಷು ಚ ।
ಮಾಗಧೇ ಹೇಮಸದನಾದಂಜನ್ಯಾಂ ಪ್ರಭವಿಷ್ಯತಿ ॥ ೨೫೫ ॥
ವಿಷ್ಣೋರಂಶೋ ಧರ್ಮಪಾಲೋ ಬುಧಃ ಸಾಕ್ಷಾತ್ಸ್ವಯಂ ಪ್ರಭುಃ ।
ತಸ್ಯ ಕರ್ಮಾಣಿ ಭೂರೀಣಿ ಭವಿಷ್ಯಂತಿ ಮಹಾತ್ಮನಃ ॥ ೨೫೬ ॥
ಜ್ಯೋತಿರ್ಬಿಂದುಮುಖಾನುಗ್ರಾನ್ಸ ಹನಿಷ್ಯತಿ ಕೋಟಿಶಃ ।
ಚತುಃ ಷಷ್ಟಿಂ ಸ ವರ್ಷಾಣಿ ಭುಕ್ತ್ವಾ ದ್ವೀಪಾನಿ ಸಪ್ತ ಚ ।
ಭಕ್ತೇಭ್ಯಃ ಸ್ವಯಶೋ ಮುಕ್ತ್ವಾ ದಿವಂ ಪಶ್ಚಾದ್ಗಮಿಷ್ಯತಿ ॥ ೨೫೭ ॥
ಸರ್ವೇಷಾಂ ಚಾವತಾರಾಣಾಂ ಗುಣೈಃ ಸಮಧಿಕೋ ಯುತಃ ॥ ೨೫೮ ॥
ತತೋ ವಕ್ಷ್ಯಂತಿ ತಂ ಭಕ್ತ್ಯಾ ಸರ್ವಪಾಪಹರಂ ಬುಧಂ ।
ಚತುರ್ಷು ಚ ಸಹಸ್ರೇಷು ಶತೇಷ್ವಪಿ ಚತುರ್ಷು ಚ ॥ ೨೫೯ ॥
ಸಾಧಿಕೇಷು ಮಹಾನ್ರಾಜಾ ಪ್ರಮಿತಿಃ ಪ್ರಭವಿಷ್ಯತಿ ।
ಗೋತ್ರೇಷು ವೈ ಚಂದ್ರಮಸೋ ಬಹುಸೇನಾಪತಿರ್ಬಲೀ ॥ ೨೬೦ ॥

---

೨೫೪–೨೫೬. ಬಳಿಕ ಒಂದು ಲಕ್ಷದ ಒಂದುನೂರು ವರ್ಷಗಳು ಕಳೆಯಲು ಶಕನೆಂಬುವನು ಚಕ್ರವರ್ತಿಯಾಗಿ ಬಂದು ಜನರ ದಾರಿದ್ರ್ಯವನ್ನು ಕಡೆಗಾಣಿಸುವನು. ಆಮೇಲೆ ಮೂರು ಸಾವಿರದ ಆರುನೂರು ವರ್ಷಗಳು ಕಳೆದಮೇಲೆ ಮಗಧ ದೇಶದಲ್ಲಿ ಹೇಮಸದನನೆಂಬವನಿಗೆ ಅಂಜನೀದೇವಿಯಲ್ಲಿ ಒಬ್ಬ ಪುತ್ರನು ಹುಟ್ಟುವನು. ಆತನು ಬುಧನೆಂಬ ಹೆಸರಿನಿಂದ ಕೂಡಿ ವಿಷ್ಣುವಿನ ಅಂಶದಿಂದ ವೈದಿಕ ಧರ್ಮಗಳನ್ನು ರಕ್ಷಿಸುತ್ತ ಏಕಚ್ಛತ್ರಾಧಿಪತಿಯಾಗಿರುವನು. ಆ ಮಹಾತ್ಮನಿಂದ ಧರ್ಮಕಾರ್ಯಗಳು ಅನೇಕವಾಗಿ ನಡೆಯುವುವು.

೨೫೭. ಜ್ಯೋತಿರ್ಬಿಂದುವೇ ಮೊದಲಾದ ಅನೇಕ ದುಷ್ಟರನ್ನು ಕೋಟಿಗಟ್ಟಲೆಯಾಗಿ ಆತನು ನಿಗ್ರಹಿಸುವನು. ಇಂತು ಭೂಮಂಡಲದ ಸಪ್ತದ್ವೀಪಗಳನ್ನೂ ಅರವತ್ತುನಾಲ್ಕು ವರ್ಷಗಳಕಾಲ ಆಳಿದವನಾಗಿ ತನ್ನ ಭಕ್ತರಲ್ಲಿ ಯಶಸ್ಸನ್ನು ನಿಲ್ಲಿಸಿ ಆತನು ಸ್ವರ್ಗವನ್ನು ಸೇರುವನು.

೨೫೮–೨೬೦. ಅಲ್ಲಿಯವರೆಗೆ ನಡೆಯುವ ಅವತಾರಗಳೆಲ್ಲವುಗಳಲ್ಲಿಯೂ ಆತನು ಹೆಚ್ಚು ಗುಣಶಾಲಿಯಾಗಿರುವುದರಿಂದ ಜನರು ಭಕ್ತಿಸಮನ್ವಿತರಾಗಿ ಆ ಬುಧನನ್ನು ಸಕಲಪಾಪನಿವಾರಕನೆಂದು ಕರೆಯುವರು. ಬಳಿಕ ನಾಲ್ಕು ಸಾವಿರದ ನಾಲ್ಕುನೂರು ವರ್ಷಗಳು ಕಳೆಯಲು ಪ್ರಮಿತಿಯೆಂಬೊಬ್ಬ ಮಹಾರಾಜನು ಜನಿಸುವನು. ಆತನು ಚಂದ್ರವಂಶದವನಾಗಿ ಅನೇಕ ಸೈನ್ಯಗಳನ್ನು ಸೇರಿಸಿಕೊಂಡು ಬಹಳ ಬಲಶಾಲಿಯಾಗುವನು.

ಮ್ಲೇಚ್ಛಾನ್ಸ ಕೋಟಿಶೋ ಹತ್ವಾ ಪಾಷಂಡಾಂಶ್ಚಾಪಿ ಸರ್ವಶಃ ।
ವೈದಿಕಂ ಕೇವಲಂ ಶುದ್ಧಂ ಸದ್ಧರ್ಮಂ ವರ್ತಯಿಷ್ಯತಿ ॥ ೨೬೧ ॥
ಗಂಗಾಯಮುನಯೋರ್ಮಧ್ಯೇ ನಿಷ್ಠಾಂ ಯಾಸ್ಯತಿ ಪಾರ್ಥಿವಃ ।
ತತಃ ಪ್ರಜಾಶ್ಚ ಕಾಲೇನ ಕೇನಾಪಿ ಭೃಶಪೀಡಿತಾಃ ।
ಘೋರಂ ವಾ ಧರ್ಮಮಾಶ್ರಿತ್ಯ ಶೌರ್ಯೇಣ ಚ ಭವಂತಿ ತಾಃ ॥ ೨೬೨ ॥
ಅಪ್ರಗ್ರಹಾಸ್ತತಸ್ತಾ ವೈ ಲೋಭಾವಿಷ್ಟಾಶ್ಚ ಬೃಂದಶಃ ।
ಉಪಹಿಂಸಂತಿ ಚಾನ್ಯೋನ್ಯಂ ವ್ಯಾಕುಲಾಃ ಶ್ರಮಪೀಡಿತಾಃ ॥ ೨೬೩ ॥
ನಷ್ಟೇ ಶ್ರೌತೇ ತಥಾ ಸ್ಮಾರ್ತೇ ಪರಸ್ಪರಹತಾಸ್ತದಾ ॥ ೨೬೪ ॥
ನಿರ್ಮರ್ಯಾದಾ ನಿಷ್ಕರುಣಾ ನಿಸ್ಸ್ನೇಹಾ ನಿರಪತ್ರಪಾಃ ।
ಗೃಹದಾರಾಣಿ ಸಂತ್ಯಜ್ಯ ಹ್ರಸ್ವಕಾಃ ಪಂಚವಿಂಶತಿಃ ॥ ೨೬೫ ॥
ಹಾಹಾಭೂತಾಶ್ಚರಿಷ್ಯಂತಿ ವಿಷಾದವ್ಯಾಕುಲೇಂದ್ರಿಯಾಃ ।
ಅನಾವೃಷ್ಟಿಹತಾಶ್ಚೈವ ವಾರ್ತಾಮುತ್ಸೃಜ್ಯ ದುಃಖಿತಾಃ ॥ ೨೬೬ ॥

---

೨೬೧. ಆತನು ಹತ್ತು ದಿಕ್ಕುಗಳಲ್ಲಿಯೂ ಕೋಟಿಸಂಖ್ಯೆಯಾಗಿ ಮ್ಲೇಚ್ಛರನ್ನೂ ಪಾಷಂಡರನ್ನೂ ನಿಗ್ರಹಿಸಿ ಕೇವಲ ವೈದಿಕವೂ, ಪರಿಶುದ್ಧವೂ, ಆದ ಸನಾತನಧರ್ಮವನ್ನು ಆಚರಣೆಗೆ ತಂದು ನೆಲೆಗೊಳಿಸುವನು.

೨೬೨. ಆ ರಾಜನು ಗಂಗಾ ಯಮುನಾಸಂಗಮದ ಮಧ್ಯಪ್ರದೇಶದಲ್ಲಿ ದೇಹತ್ಯಾಗವನ್ನು ಮಾಡುವನು. ಬಳಿಕ ಕಾಲಮಹಿಮೆಯಿಂದ ಜನರು ರೋಗ ರುಜಿನಾದಿಗಳಿಂದಲೂ, ಇತರ ದ್ವಂದ್ವಗಳಿಂದಲೂ ಅತ್ಯಂತ ಪೀಡಿತರಾಗಿ ಮೌಢ್ಯದಿಂದ ಘೋರವಾದ ಧರ್ಮವನ್ನಾಚರಿಸುವವರಾಗುವವರು.

೨೬೩. ತಡೆದು ನಿಲ್ಲಿಸುವ ಪ್ರಭುಗಳಿರುವುದಿಲ್ಲವಾದುದರಿಂದ ಅವರೆಲ್ಲರೂ ಗುಂಪುಕಟ್ಟಿಕೊಂಡು ಸ್ವೇಚ್ಛೆಯಾಗಿ ತಿರುಗುತ್ತ ಲೋಭಾವಿಷ್ಟರಾಗಿ, ಮನಸ್ಸಿನ ದುಃಖದಿಂದಲೂ, ದೇಹಾಲಸ್ಯದಿಂದಲೂ ಪೀಡಿತರಾಗಿ, ಒಬ್ಬರನ್ನೊಬ್ಬರು ಹಿಂಸಿಸತೊಡಗುವರು.

೨೬೪–೨೬೬. ಶ್ರೌತ ಸ್ಮಾರ್ತಕರ್ಮಗಳೆಲ್ಲವೂ ನಾಶವನ್ನೈದಲು ಪರಸ್ಪರ ಪ್ರಾಣಗಳನ್ನು ಅಪಹರಿಸುವರು. ಕಟ್ಟು ಕಾಯಿದಗಳಿಲ್ಲದೆ ನಿಷ್ಕರುಣಿಗಳಾಗಿ ಸ್ನೇಹಗಳನ್ನೂ, ಲಜ್ಜೆಮರ್ಯಾದೆಗಳನ್ನೂ ತ್ಯಜಿಸುವರು. ಪತಿವ್ರತೆಯರಾದ ಮನೆಯ ಸ್ತ್ರೀಯರನ್ನು ತ್ಯಜಿಸುವರು. ಇಪ್ಪತ್ತೈದು ಅಂಗುಲಗಳ ಕುಬ್ಜರೂಪಗಳಿಂದ ಬಳಲುವರು. ನಾನಾಬಗೆಯ ದುಃಖಗಳಿಂದ ವ್ಯಾಕುಲಿತಗಳಾದ ಇಂದ್ರಿಯಗಳುಳ್ಳವರಾಗಿ ಹಾಹಾಕಾರಗಳನ್ನು ಮಾಡುತ್ತ ಭೂಮಿಯಲ್ಲಿ ತಿರುಗುತ್ತಿರುವರು. ಅನಾವೃಷ್ಟಿಯಿಂದ ಅನ್ನಾಹಾರಗಳಿಲ್ಲದೆ ಪರಸ್ಪರವಾಗಿ ತಂತಮ್ಮ ಯೋಗಕ್ಷೇಮಗಳಲ್ಲಿಯೇ ಉದಾಸೀನರಾಗಿ ದುಃಖಗೊಳ್ಳುವರು.

ಪ್ರತ್ಯಂತಾಂಸ್ತಾ ನಿಷೇವಂತಿ ಹಿತ್ವಾ ಜನಪದಾನ್ಸ್ವಕಾನ್ ।
ಸರಿತ್ಸಾಗರಕೂಲಾಂಶ್ಚ ಸೇವಂತೇ ಪರ್ವತಾಃ ಸ್ತಥಾ ॥ ೨೬೭ ॥
ಮಾಂಸೈರ್ಮೂಲಫಲೈಶ್ಚೈವ ವರ್ತಯಂತಿ ಸುದುಃಖಿತಾಃ ।
ಚೀರಪತ್ರಾಜಿನಧರಾ ನಿಷ್ಕ್ರಿಯಾ ನಿಷ್ಪರಿಗ್ರಹಾಃ ॥ ೨೬೮ ॥
ಧರ್ಮಸ್ಯ ವಾಸಮಾತ್ರಂ ಚ ಶಾಲ್ವೋ ಮ್ಲೇಚ್ಛೋ ಹನಿಷ್ಯತಿ ।
ಉತ್ತಮಾಧಮಮಧ್ಯತ್ವಂ ಸರ್ವಮುಚ್ಛಿದ್ಯ ಘೋರಕೃತ್ ॥ ೨೬೯ ॥
ತತಸ್ತಸ್ಯ ವಧಾರ್ಥಾಯ ವಿಷ್ಣುಸ್ಸಾಕ್ಷಾಜ್ಜಗತ್ಪತಿಃ ।
ಶಂಭಲೇ ವಿಷ್ಣುಯಶಸೋ ಭೂತ್ವಾ ಪುತ್ರೋ ನೃಪೋತ್ತಮ ।
ದ್ವಿಜೋತ್ತಮೈಃ ಪರಿವೃತಃ ಶಾಲ್ವಂ ತಂ ಸಂಹರಿಷ್ಯತಿ ॥ ೨೭೦ ॥
ಕೋಟಿಶೋಽರ್ಬುದಶಃ ಪಾಪಾನ್ನಿಹತ್ಯ ಚ ನಿಖರ್ವಶಃ ॥ ೨೭೧ ॥
ಪಾಲಯಿಷ್ಯತಿ ತಂ ಧರ್ಮಂ ಯೋ ಧರ್ಮಃ ಶ್ರುತಿಪೂರ್ವಕಃ ॥ ೨೭೨ ॥
ಕೃತ್ವಾ ಪೋತಂ ಧರ್ಮರೂಪಂ ಸಾಧೂನಾಂ ಪರಮೇಶ್ವರಃ ।
ಗಮಿಷ್ಯತಿ ಪರಂ ಲೋಕಂ ಕೃತ್ವಾ ಕರ್ಮಾಣಿ ಭೂರಿಶಃ ॥ ೨೭೩ ॥

---

೨೬೭-೨೬೯. ತಮ್ಮ ರಾಜ್ಯ ದೇಶಗಳನ್ನು ಬಿಟ್ಟು ಇತರ ದೇಶಗಳನ್ನು ಸೇರಲೆಳಸುವರು. ನದೀ ಸಮುದ್ರಗಳ ತೀರಗಳನ್ನೂ ಪರ್ವತಗಳನ್ನೂ ಆಶ್ರಯಿಸಿ ಜೀವಿಸುವರು. ವನ್ಯಮೃಗಗಳ ಮಾಂಸದಿಂದಲೂ, ಗಡ್ಡೆಗೆಣಸುಗಳಿಂದಲೂ, ಹಣ್ಣು ಹಂಪಲುಗಳಿಂದಲೂ ಬಹಳ ಕಷ್ಟದಿಂದ ಜೀವನಯಾತ್ರೆಯನ್ನು ಸಾಗಿಸುವರು. ನಾರುಡೆಗಳೂ, ಎಲೆಗಳೂ, ಚರ್ಮಗಳೂ ಅವರಿಗೆ ಉಡಿಗೆ ತೊಡಿಗೆಗಳಾಗುವುವು. ನಿತ್ಯ ನೈಮಿತ್ತಿಕ ಕ್ರಿಯೆಗಳನ್ನುಮಾಡದೆ ಗೃಹಕ್ಷೇತ್ರಾದಿಗಳನ್ನೂ ಕಳೆದುಕೊಳ್ಳುವರು. ಇಂತು ಕಲಿಕಾಲದ ಕೊನೆಗೆ ಧರ್ಮದ ಲವಲೇಶವುಮಾತ್ರ ನಿಂತಿರುವುದು. ಅದನ್ನೂ ಕೂಡ ಶಾಲ್ವನೆಂಬ ಮ್ಲೇಚ್ಛನು ನಾಶಮಾಡುವನು. ಉತ್ತಮ, ಮಧ್ಯಮ, ಅಧಮರೆಂಬ ಸಕಲ ಮರ್ಯಾದೆಗಳನ್ನೂ ನಿರ್ಮೂಲಗೊಳಿಸಿ ಘೋರಕೃತ್ಯಗಳನ್ನು ಮಾಡಲಾರಂಭಿಸುವನು.

೨೭೦. ಆಗ ಆತನ ಸಂಹಾರಾರ್ಥವಾಗಿ ಜಗನ್ನಾಯಕನಾದ ಮಹಾವಿಷ್ಣುವು ಶಂಭಲಗ್ರಾಮದಲ್ಲಿ ವಿಷ್ಣುಯಶಸ್ಸೆಂಬುವನ ಮಗನಾಗಿ ಜನಿಸಿ ಅನೇಕ ಬ್ರಾಹ್ಮಣರಿಂದೊಡಗೂಡಿದವನಾಗಿ ಆ ಶಾಲ್ವನನ್ನು ನಿಗ್ರಹಿಸುವನು.

೨೭೧-೨೭೨. ಕೋಟಿ, ಅರ್ಬುದ, ನಿಖರ್ವ ಸಂಖ್ಯಾಕರಾದ ಪಾಪಿಗಳನ್ನು ಕೊಂದು ವೇದಗಳಿಗನುಸಾರವಾದ ಸನಾತನಧರ್ಮವನ್ನು ನೆಲೆಗೊಳಿಸುವನು.

೨೭೩. ಇಂತು ಪರಮೇಶ್ವರನು ಧರ್ಮರೂಪವಾದ ದೋಣಿಯನ್ನುಮಾಡಿ ಸಾಧುಗಳನ್ನುದ್ಧರಿಸಿ ಅನೇಕ ಧರ್ಮಸಂಸ್ಥಾಪನೆಯ ಕಾರ್ಯಗಳನ್ನುಮಾಡಿ ತನ್ನ ಲೋಕವನ್ನು ಸೇರುವನು.

ತತಃ ಕೃತಯುಗಂ ಭೂಯಃ ಪ್ರವರ್ತಿಷ್ಯತಿ ಪಾರ್ಥಿವ ।
ಆದ್ಯಂ ಕೃತಯುಗಂ ಚಾನ್ಯಂ ತದನ್ಯೇಭ್ಯೋ ವಿಶಿಷ್ಯತೇ ॥ ೨೭೪ ॥
ಅಷ್ಟಾವಿಂಶಕಲಿಶ್ಚೈವ ಶೇಷಃ ಪ್ರಾವರ್ತತೇಽನ್ಯತಃ ।
ತತಃ ಕೃತೇ ಸೂರ್ಯವಂಶಃ ಸೋಮವಂಶಃ ಪ್ರವತ್ಸ್ಯತಿ ।
ಮಹಾರಾಜಾಚ್ಚ ದೇವಾಪೇಃ ಶ್ರುತದೇವಾಚ್ಚ ಬ್ರಾಹ್ಮಣಾಃ ॥ ೨೭೫ ॥
ಇತಿ ಚಾತುರ್ಯುಗೀ ರಾಜನ್ವ್ಯವಸ್ಥಾ ಪರಿವರ್ತನೇ ।
ಚತುರ್ಯುಗೇ ಚ ತೇ ಧನ್ಯಾ ಯೇ ಭಜಂತಿ ಹರಾಚ್ಯುತೌ ॥ ೨೭೬ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿ ಸಾಹಸ್ರ್ಯಾಂ ಸಂಹಿತಾಯಾಂ
ಪ್ರಥಮೇ ಮಾಹೇಶ್ವರಖಂಡೇ ಕೌಮಾರಿಕಾಖಂಡೇ
"ಮಹಾಕಾಲ ಕರಂಧಮ ಸಂವಾದೇ ಚತುರ್ಯುಗವ್ಯವಸ್ಥಾವರ್ಣನಂ" ನಾಮ
ಚತ್ವಾರಿಂಶತ್ತಮೋಽಧ್ಯಾಯಃ

---

೨೭೪. ಎಲೈ ರಾಜನೆ! ಬಳಿಕ ಮತ್ತೆ ಕೃತಯುಗವು ಪ್ರಾರಂಭಿಸುವುದು. ಸೃಷ್ಟ್ಯಾದಿಯು ಕೃತಯುಗವು. ಇದು ಇತರ ಕೃತಯುಗಗಳಿಗಿಂತ ವಿಶೇಷ ಮಾಹಾತ್ಮ್ಯವುಳ್ಳದ್ದೆಂದು ಹೇಳುವರು.

೨೭೫. ಹಾಗೆಯೇ ಇಪ್ಪತ್ತೆಂಟನೆಯ ಕಲಿಯುಗವು ಇತರ ಕಲಿಯುಗಗಳಿಗಿಂತ ವಿಶೇಷವ್ಯಾಪನೆಯುಳ್ಳದ್ದೆಂದೂ ಅವಶೇಷವೆಂದೂ ಹೇಳುವರು. ಬಳಿಕ ಕೃತಯುಗದಲ್ಲಿ ಮತ್ತೆ ಮಹಾರಾಜನಾದ ದೇವಾಪಿಯೆಂಬುವನಿಂದ ಸೂರ್ಯವಂಶ ಚಂದ್ರವಂಶಗಳೆಂಬ ಕ್ಷತ್ರಿಯ ಸಂತತಿಗಳೂ, ಶ್ರುತದೇವನೆಂಬವನಿಂದ ಬ್ರಾಹ್ಮಣಕುಲವೂ ಬೆಳೆಯುವುವು.

೨೭೬. ಎಲೈ ಕರಂಧಮರಾಜನೆ! ಈ ವಿಧವಾಗಿ ಚತುರ್ಯುಗಗಳ ವ್ಯವಸ್ಥೆಯು ನಡೆಯುತ್ತಿರುತ್ತದೆ. ಯಾವ ಯುಗದಲ್ಲಾದರೂ ಶಿವನನ್ನಾಗಲಿ ಮಹಾವಿಷ್ಣುವನ್ನಾಗಲಿ ಭಕ್ತಿಯಿಂದ ಭಜನೆಮಾಡುವವರೇ ಪರಮಧನ್ಯರು."

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಎರಡನೆಯ ಕೌಮಾರಿಕಾಖಂಡದಲ್ಲಿ
"ಮಹಾಕಾಲ ಕರಂಧಮ ಸಂವಾದ – ಚತುರ್ಯುಗವ್ಯವಸ್ಥಾವರ್ಣನ"ವೆಂಬ
ನಲವತ್ತೆಂಟನೆಯ ಅಧ್ಯಾಯವು ಮುಗಿದುದು

ಪ್ರತ್ಯಂತಾಂಸ್ತಾ ನಿಷೇವಂತಿ ಹಿತ್ವಾ ಜನಪದಾನ್ಸ್ವಕಾನ್ ।
ಸರಿತ್ಸಾಗರಕೂಲಾಂಶ್ಚ ಸೇವಂತೇ ಪರ್ವತಾಃ ಸ್ತಥಾ ॥ ೨೬೭ ॥
ಮಾಂಸೈರ್ಮೂಲಫಲೈಶ್ಚೈವ ವರ್ತಯಂತಿ ಸುದುಃಖಿತಾಃ ।
ಚೀರಪತ್ರಾಜಿನಧರಾ ನಿಷ್ಕ್ರಿಯಾ ನಿಷ್ಪರಿಗ್ರಹಾಃ ॥ ೨೬೮ ॥
ಧರ್ಮಸ್ಯ ನಾಶಮಾತ್ರಂ ಚ ಶಾಲ್ವೋ ಮ್ಲೇಚ್ಛೋ ಹನಿಷ್ಯತಿ ।
ಉತ್ತಮಾಧಮಮಧ್ಯತ್ವಂ ಸರ್ವಮುಚ್ಛಿದ್ಯ ಘೋರಕೃತ್ ॥ ೨೬೯ ॥
ತತಸ್ತಸ್ಯ ವಧಾರ್ಥಾಯ ವಿಷ್ಣುಸ್ಸಾಕ್ಷಾಜ್ಜಗತ್ಪತಿಃ ।
ಶಂಭಲೇ ವಿಷ್ಣುಯಶಸೋ ಭೂತ್ವಾ ಪುತ್ರೋ ನೃಪೋತ್ತಮ ।
ದ್ವಿಜೋತ್ತಮೈಃ ಪರಿವೃತಃ ಶಾಲ್ವಂ ತಂ ಸಂಹರಿಷ್ಯತಿ ॥ ೨೭೦ ॥
ಕೋಟಿಶೋಽರ್ಬುದಶಃ ಪಾಪಾನ್ನಿಹತ್ಯ ಚ ನಿಖರ್ವಶಃ ॥ ೨೭೧ ॥
ಪಾಲಯಿಷ್ಯತಿ ತಂ ಧರ್ಮಂ ಯೋ ಧರ್ಮಃ ಶ್ರುತಿಪೂರ್ವಕಃ ॥ ೨೭೨ ॥
ಕೃತ್ವಾ ಪೋತಂ ಧರ್ಮರೂಪಂ ಸಾಧೂನಾಂ ಪರಮೇಶ್ವರಃ ।
ಗಮಿಷ್ಯತಿ ಪರಂ ಲೋಕಂ ಕೃತ್ವಾ ಕರ್ಮಾಣಿ ಭೂರಿಶಃ ॥ ೨೭೩ ॥

---

೨೬೭–೨೬೯. ತಮ್ಮ ರಾಜ್ಯ ದೇಶಗಳನ್ನು ಬಿಟ್ಟು ಇತರ ದೇಶಗಳನ್ನು ಸೇರ ಲೆಳಸುವರು. ನದೀ ಸಮುದ್ರಗಳ ತೀರಗಳನ್ನೂ ಪರ್ವತಗಳನ್ನೂ ಆಶ್ರಯಿಸಿ ಜೀವಿಸುವರು. ವನ್ಯಮೃಗಗಳ ಮಾಂಸದಿಂದಲೂ, ಗಡ್ಡೆ ಗೆಣಸುಗಳಿಂದಲೂ, ಹಣ್ಣು ಹಂಪಲುಗಳಿಂದಲೂ ಬಹಳ ಕಷ್ಟದಿಂದ ಜೀವನಯಾತ್ರೆಯನ್ನು ಸಾಗಿಸುವರು. ನಾರುಡೆಗಳೂ, ಎಲೆಗಳೂ, ಚರ್ಮಗಳೂ ಅವರಿಗೆ ಉಡಿಗೆ ತೊಡಿಗೆಗಳಾಗುವುವು. ನಿತ್ಯ ನೈಮಿತ್ತಿಕ ಕ್ರಿಯೆಗಳನ್ನುಮಾಡದೆ ಗೃಹಕ್ಷೇತ್ರಾದಿಗಳನ್ನೂ ಕಳೆದುಕೊಳ್ಳುವರು. ಇಂತು ಕಲಿಕಾಲದ ಕೊನೆಗೆ ಧರ್ಮದ ಲವಲೇಶವುಮಾತ್ರ ನಿಂತಿರುವುದು. ಅದನ್ನೂ ಕೂಡ ಶಾಲ್ವನೆಂಬ ಮ್ಲೇಚ್ಛನು ನಾಶಮಾಡುವನು. ಉತ್ತಮ, ಮಧ್ಯಮ, ಅಧಮರೆಂಬ ಸಕಲ ಮರ್ಯಾದೆಗಳನ್ನೂ ನಿರ್ಮೂಲಗೊಳಿಸಿ ಘೋರಕೃತ್ಯಗಳನ್ನು ಮಾಡಲಾರಂಭಿಸುವನು.

೨೭೦. ಆಗ ಆತನ ಸಂಹಾರಾರ್ಥವಾಗಿ ಜಗನ್ನಾಯಕನಾದ ಮಹಾವಿಷ್ಣುವು ಶಂಭಲಗ್ರಾಮದಲ್ಲಿ ವಿಷ್ಣುಯಶಸ್ಸೆಂಬುವನ ಮಗನಾಗಿ ಜನಿಸಿ ಅನೇಕ ಬ್ರಾಹ್ಮಣರಿಂದೊಡಗೂಡಿದವನಾಗಿ ಆ ಶಾಲ್ವನನ್ನು ನಿಗ್ರಹಿಸುವನು.

೨೭೧–೨೭೨. ಕೋಟಿ, ಅರ್ಬುದ, ನಿಖರ್ವ ಸಂಖ್ಯಾಕರಾದ ಪಾಪಿಗಳನ್ನು ಕೊಂದು ವೇದಗಳಿಗನುಸಾರವಾದ ಸನಾತನಧರ್ಮವನ್ನು ನೆಲೆಗೊಳಿಸುವನು.

೨೭೩. ಇಂತು ಪರಮೇಶ್ವರನು ಧರ್ಮರೂಪವಾದ ದೋಣಿಯನ್ನುಮಾಡಿ ಸಾಧುಗಳನ್ನುದ್ಧರಿಸಿ ಅನೇಕ ಧರ್ಮಸಂಸ್ಥಾಪನೆಯ ಕಾರ್ಯಗಳನ್ನುಮಾಡಿ ತನ್ನ ಲೋಕವನ್ನು ಸೇರುವನು.

ತತಃ ಕೃತಯುಗಂ ಭೂಯಃ ಪ್ರವರ್ತಿಷ್ಯತಿ ಪಾರ್ಥಿವ ।
ಆದ್ಯಂ ಕೃತಯುಗಂ ಚಾನ್ಯಂ ತದನ್ಯೇಭ್ಯೋ ವಿಶಿಷ್ಯತೇ ॥ ೨೭೪ ॥
ಅಷ್ಟಾವಿಂಶಕಲಿಶ್ಚೈವ ಶೇಷಃ ಪ್ರಾವರ್ತತೇಽನ್ಯತಃ ।
ತತಃ ಕೃತೇ ಸೂರ್ಯವಂಶಃ ಸೋಮವಂಶಃ ಪ್ರವತ್ಸ್ಯತಿ ।
ಮಹಾರಾಜಾಚ್ಚ ದೇವಾಪೇಃ ಶ್ರುತದೇವಾಚ್ಚ ಬ್ರಾಹ್ಮಣಾಃ ॥ ೨೭೫ ॥
ಇತಿ ಚಾತುರ್ಯುಗೀ ರಾಜನ್ವ್ಯವಸ್ಥಾ ಪರಿವರ್ತನೇ ।
ಚತುರ್ಯುಗೇ ಚ ತೇ ಧನ್ಯಾ ಯೇ ಭಜಂತಿ ಹರಾಚ್ಯುತೌ ॥ ೨೭೬ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿ ಸಾಹಸ್ರ್ಯಾಂ ಸಂಹಿತಾಯಾಂ
ಪ್ರಥಮೇ ಮಾಹೇಶ್ವರಖಂಡೇ ಕೌಮಾರಿಕಾಖಂಡೇ
"ಮಹಾಕಾಲ ಕರಂಧಮ ಸಂವಾದೇ ಚತುರ್ಯುಗವ್ಯವಸ್ಥಾವರ್ಣನಂ" ನಾಮ
ಚತ್ವಾರಿಂಶತ್ತಮೋಽಧ್ಯಾಯಃ

---

೨೭೪. ಎಲೈ ರಾಜನೆ! ಬಳಿಕ ಮತ್ತೆ ಕೃತಯುಗವು ಪ್ರಾರಂಭಿಸುವುದು. ಸೃಷ್ಟ್ಯಾದಿಯು ಕೃತಯುಗವು. ಇದು ಇತರ ಕೃತಯುಗಗಳಿಗಿಂತ ವಿಶೇಷ ಮಾಹಾತ್ಮ್ಯವುಳ್ಳದ್ದೆಂದು ಹೇಳುವರು.

೨೭೫. ಹಾಗೆಯೇ ಇಪ್ಪತ್ತೆಂಟನೆಯ ಕಲಿಯುಗವು ಇತರ ಕಲಿಯುಗಗಳಿಗಿಂತ ವಿಶೇಷವ್ಯಾಪನೆಯುಳ್ಳದ್ದೆಂದೂ ಅವಶೇಷವೆಂದೂ ಹೇಳುವರು. ಬಳಿಕ ಕೃತಯುಗದಲ್ಲಿ ಮತ್ತೆ ಮಹಾರಾಜನಾದ ದೇವಾಪಿಯೆಂಬುವನಿಂದ ಸೂರ್ಯವಂಶ ಚಂದ್ರವಂಶಗಳೆಂಬ ಕ್ಷತ್ರಿಯ ಸಂತತಿಗಳೂ, ಶ್ರುತದೇವನೆಂಬವನಿಂದ ಬ್ರಾಹ್ಮಣಕುಲವೂ ಬೆಳೆಯುವುವು.

೨೭೬. ಎಲೈ ಕರಂಧಮರಾಜನೆ! ಈ ವಿಧವಾಗಿ ಚತುರ್ಯುಗಗಳ ವ್ಯವಸ್ಥೆಯು ನಡೆಯುತ್ತಿರುತ್ತದೆ. ಯಾವ ಯುಗದಲ್ಲಾದರೂ ಶಿವನನ್ನಾಗಲಿ ಮಹಾವಿಷ್ಣುವನ್ನಾಗಲಿ ಭಕ್ತಿಯಿಂದ ಭಜನೆಮಾಡುವವರೇ ಪರಮಧನ್ಯರು."

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಎರಡನೆಯ ಕೌಮಾರಿಕಾಖಂಡದಲ್ಲಿ
"ಮಹಾಕಾಲ ಕರಂಧಮ ಸಂವಾದ – ಚತುರ್ಯುಗವ್ಯವಸ್ಥಾವರ್ಣನ"ವೆಂಬ
ನಲವತ್ತೆಂಟನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥೈಕಚತ್ವಾರಿಂಶತ್ತಮೋಽಧ್ಯಾಯಃ

**ಮಹಾಕಾಲ ಕರಂಧಮಸಂವಾದೇ ಶಿವಪೂಜನವಿಧಿ ನಿತ್ಯಕರ್ತವ್ಯಧರ್ಮನಿರೂಪಣಪೂರ್ವಕ ಮಹಾಕಾಲ ಶಿವಲೋಕಪ್ರಾಪ್ತಿವರ್ಣನಂ**

ಕರಂಧಮ ಉವಾಚ :—

**ಕೇಚಿಚ್ಛಿವಂ ಸಮಾಶ್ರಿತ್ಯ ವಿಷ್ಣುಮಾಶ್ರಿತ್ಯ ವೇಧಸಂ ।**
**ವರ್ಣಯಂತಿ ಪರೇ ಮೋಕ್ಷಂ ತ್ವಂ ತು ಕಸ್ಮಾತ್ತು ಮನ್ಯಸೇ ॥ ೧ ॥**

ಮಹಾಕಾಲ ಉವಾಚ :—

**ಅಪಾರವೈಭವಾ ದೇವಾಸ್ತ್ರಯೋಽಪ್ಯೇತೇ ನರರ್ಷಭ ।**
**ಯೋಗೀಂದ್ರಾಣಾಮಪಿ ತ್ವತ್ರ ಚೇತೋ ಮುಹ್ಯತಿ ಕಿಂ ಮಮ ॥ ೨ ॥**
**ಪುರಾ ಕಿಲೈವಂ ಮುನಯೋ ನೈಮಿಷಾರಣ್ಯವಾಸಿನಃ ।**
**ಸಂದಿಹ್ಯಾಂತಃ ಶ್ರೇಷ್ಠತಾಯಾಂ ಬ್ರಹ್ಮಲೋಕಮುಪಾಗಮನ್ ॥ ೩ ॥**
**ತಸ್ಮಿನ್ಕ್ಷಣೇ ವಿರಿಂಚೋಽಪಿ ಶ್ಲೋಕಂ ಪ್ರಹ್ವೋಽಬ್ರವೀತ್ಕಿಲ ।**
**ಅನಂತಾಯ ನಮಸ್ತಸ್ಮೈ ಯಸ್ಯಾಂತೋ ನೋಪಲಭ್ಯತೇ ॥ ೪ ॥**

---

## ಕನ್ನಡದ ಅನುವಾದ

**ಮಹಾಕಾಲ ಕರಂಧಮಸಂವಾದ — ಶಿವಪೂಜನ ವಿಧಿ ನಿತ್ಯಕರ್ತವ್ಯ ಧರ್ಮನಿರೂಪಣಪೂರ್ವಕ ಮಹಾಕಾಲ ಶಿವಲೋಕಪ್ರಾಪ್ತಿವರ್ಣನ**

೧. ಕರಂಧಮನು ಕೇಳುತ್ತಾನೆ:—"ಕೆಲವರು ಶಿವನನ್ನೂ, ಕೆಲವರು ವಿಷ್ಣುವನ್ನೂ, ಹಲವರು ಬ್ರಹ್ಮನನ್ನೂ ಹೆಚ್ಚೆಂದು ತಿಳಿದು ಅವರಿಂದಲೇ ಮೋಕ್ಷವೆಂದು ವರ್ಣಿಸುವರು. ನಿನ್ನ ಅಭಿಪ್ರಾಯದಲ್ಲಿ ಯಾರಿಂದ ಮೋಕ್ಷವೆಂದು ನಿಶ್ಚಯಿಸಿರುವೆ?

೨. ಮಹಾಕಾಲನು ಹೇಳುತ್ತಾನೆ:—"ಎಲೈ ಮನುಷ್ಯಶ್ರೇಷ್ಠನೆ! ಈ ಮೂವರು ದೇವತೆಗಳೂ ಅಪಾರವಾದ ಮಹಾತ್ಮ್ಯೆಯುಳ್ಳವರು. ಇವರಲ್ಲಿ ಹೆಚ್ಚುಕಡಿಮೆಯನ್ನು ನಿಷ್ಕರ್ಷಿಸಲು ದೊಡ್ಡದೊಡ್ಡ ಯೋಗೀಂದ್ರರಿಗೂ ಮನಸ್ಸು ಮೋಹಗೊಳ್ಳುವುದು. ಎಂದಮೇಲೆ ನನ್ನ ವಿಷಯವನ್ನು ಹೇಳಬೇಕೆ?

೩. ಪೂರ್ವದಲ್ಲೊಮ್ಮೆ ಇವರಲ್ಲಿ ಯಾರು ದೊಡ್ಡವರೆಂದು ಸಂದೇಹಗೊಂಡು ಇತ್ಯರ್ಥಮಾಡಲು ನೈಮಿಷಾರಣ್ಯವಾಸಿಗಳಾದ ಮಹರ್ಷಿಗಳು ಸತ್ಯಾನ್ವೇಷಣೆಗಾಗಿ ತೆರಳಿದರು.

೪-೫. ಆ ಸಮಯದಲ್ಲಿ ಬ್ರಹ್ಮನು ನಮ್ರಭಾವದಿಂದ ಹೀಗೆನ್ನುತ್ತಿದ್ದನು: 'ಯಾವನ ತುದಿಮೊದಲುಗಳು ತಿಳಿಯಲಸಾಧ್ಯವೊ, ಅಂತಹ ಅನಂತನೆಂಬ ನಾರಾಯಣನಿಗೆ ನಮಸ್ಕಾರವು. ಮಹೇಶ್ವರನಿಗೂ ನಮಸ್ಕಾರವು.

ಮಹೇಶಾಯ ಚ ಭಕ್ತೇ ದ್ವೌ ಕೃಪಾಯೇತಾಂ ಸದಾ ಮಯಿ ।
ತತಃ ಶ್ರೇಷ್ಠಂ ಚ ತಂ ಮತ್ವಾ ಕ್ಷೀರೋದಂ ಮುನಯೋ ಯಯುಃ ॥೫॥
ತತ್ರಯೋಗೇಶ್ವರಃ ಶ್ಲೋಕಂ ಪ್ರಬುಧ್ಯನ್ನಮುಮಬ್ರವೀತ್ ।
ಬ್ರಹ್ಮಾಣಂ ಸರ್ವಭೂತೇಷು ಪರಮಂ ಬ್ರಹ್ಮರೂಪಿಣಂ ॥ ೬ ॥
ಸದಾಶಿವಂ ಚ ವಂದೇ ತಂ ಭವೇತಾಂ ಮಂಗಲಾಯ ಮೇ ।
ತತಸ್ತೇ ವಿಸ್ಮಿತಾ ವಿಪ್ರಾ ಅಪಸೃತ್ಯ ಯಯುಃ ಪುನಃ ॥ ೭ ॥
ಕೈಲಾಸೇ ದದೃಶುಃ ಸ್ಥಾಣುಂ ವದಂತಂ ಗಿರಿಜಾಂಪ್ರತಿ ।
ಏಕಾದಶ್ಯಾಂ ಪ್ರನೃತ್ಯಾನಿ ಜಾಗರೇ ವಿಷ್ಣು ಸದ್ಮನಿ ॥ ೮ ॥
ಸದಾ ತಪಸ್ಯಾಂ ಚರಾಮಿ ಪ್ರೀತ್ಯರ್ಥಂ ಹರಿವೇಧಸೋಃ ।
ಶ್ರುತ್ವೇತಿ ಚಾಪಸೃತ್ಯೈವ ಖಿನ್ನಾಸ್ತೇ ಮುನಯೋಽಬ್ರುವನ್ ॥ ೯ ॥
ಯದ್ವಾ ದೇವಾ ನ ಸಂಯಾಂತಿ ಪಾರಂ ಯೇ ಚ ಪರಸ್ಪರಂ ।
ತತ್ಸೃಷ್ಟಸೃಷ್ಟಸೃಷ್ಟೇಷು ಗಣನಾ ಕಾಸ್ಮದಾದಿಷು ॥ ೧೦ ॥

---

ನೀವಿಬ್ಬರೂ ಭಕ್ತನಾದ ನನ್ನಲ್ಲಿ ಯಾವಾಗಲೂ ಕೃಪೆಯುಳ್ಳವರಾಗಿರಿ.' ಎಲೈ ದೊರೆಯೆ! ಬ್ರಹ್ಮದೇವನ ಈ ನುಡಿಗಳನ್ನು ಕೇಳಿ ಆ ಮಹರ್ಷಿಗಳೆಲ್ಲರೂ ಮಹಾ ವಿಷ್ಣುವನ್ನೇ ಎಲ್ಲರಗಿಂತಲೂ ಶ್ರೇಷ್ಠನೆಂದು ತಿಳಿದು ಆತನು ನೆಲಸಿದ್ದ ಕ್ಷೀರ ಸಮುದ್ರದ ಬಳಿಗೆ ಹೋದರು.

೬-೭. ಅಲ್ಲಿ ಯೋಗಿಗಳಿಗೆಲ್ಲ ಒಡೆಯನಾದ ಶ್ರೀಮನ್ನಾರಾಯಣನು ಯೋಗ ನಿದ್ರೆಯಿಂದೆಚ್ಚತ್ತುಕೊಳ್ಳುತ್ತ ಇಂತೆಂದು ಶ್ಲೋಕವನ್ನು ಹೇಳುತ್ತಿದ್ದನು: "ಸಕಲ ಭೂತಗಳಲ್ಲಿ ಅಂತರ್ಯಾಮಿಯೂ ಉತ್ತಮನೂ, ವೇದಸ್ವರೂಪಿಯೂ ಆದ ಬ್ರಹ್ಮನನ್ನೂ ಸದಾಶಿವನನ್ನೂ ನಮುಸ್ಕರಿಸುವೆನು. ಅವರಿಬ್ಬರೂ ನನಗೆ ಮಂಗಳವನ್ನುಂಟುಮಾಡುವವರಾಗಲಿ!" ಅದನ್ನು ಕೇಳಿ ಆ ಬ್ರಾಹ್ಮಣೋತ್ತಮರು ವಿಸ್ಮಯಗೊಂಡು ಹಿಂದಿರುಗಿ ಮತ್ತೆ ಪರಶಿವನ ನೆಲೆವೀಡಾದ ಕೈಲಾಸಪರ್ವತಕ್ಕೆ ಹೊರಟರು.

೮-೯. ಕೈಲಾಸದಲ್ಲಿಯಾದರೊ ಶಿವನು ಗಿರಿಜೆಯನ್ನು ಕುರಿತು ಇಂತೆನ್ನುತ್ತಿದ್ದನು: 'ನಾನು ಬ್ರಹ್ಮವಿಷ್ಣುಗಳ ಪ್ರೀತಿಯನ್ನು ಸಂಪಾದಿಸುವ ಉದ್ದೇಶದಿಂದ ಪ್ರತಿ ಏಕಾದಶಿಯಲ್ಲಿಯೂ ವಿಷ್ಣುದೇವಾಲಯದಲ್ಲಿ ಜಾಗರಣೆಯನ್ನುಮಾಡಿ ನರ್ತನದಿಂದ ಕೂಡಿದ ತಪಸ್ಸನ್ನು ಯಾವಾಗಲೂ ಆಚರಿಸುತ್ತಿರುವೆನು.' ಇದನ್ನು ಕೇಳಿ ಆ ಮುನಿಗಳು ತಮ್ಮ ವಾಸಸ್ಥಳಕ್ಕೆ ಹಿಂದಿರುಗಿ ಖಿನ್ನ ಮನಸ್ಕರಾಗಿ ಇಂತೆಂದು ಹೇಳಿದರು.

೧೦. 'ಈ ದೇವತೆಗಳೇ ಪರಸ್ಪರವಾಗಿ ತಮ್ಮ ಇತ್ಯರ್ಥಗಳನ್ನೂ ಅವುಗಳ ಪಾರವನ್ನೂ ಕಾಣಲಿಲ್ಲವೆಂದಮೇಲೆ ಅವರಿಂದ ಸೃಷ್ಟರಾದ ಜೀವಕೋಟಿ ಯೊಳಗಿನ ನಮ್ಮಂತಹವರಲ್ಲಿ ಆದರ ನಿಶ್ಚಯವಾಗುವುದು ಹೇಗೆ?

ಉತ್ತಮಾಧಮಮಧ್ಯತ್ವಮಮೀಷಾಂ ವರ್ಣಯಂತಿ ಯೇ ।
ಅಸತ್ಯವಾದಿನಃ ಪಾಪಾಸ್ತೇ ಯಾಂತಿ ನಿರಯಂ ಧ್ರುವಂ ॥ ೧೧ ॥
ಏವಂ ತೇ ನಿಶ್ಚಯಾಮಾಸುರ್ನೈಮಿಷೇಯಾಸ್ತಪಸ್ವಿನಃ ।
ಸತ್ಯಮೇತಚ್ಚ ರಾಜೇಂದ್ರ ಮಮಾಪೀದಂ ಮತಂ ಸ್ಫುಟಂ ॥ ೧೨ ॥
ಜಾಪಕಾನಾಂ ಸಹಸ್ರಾಣಿ ವೈಷ್ಣವಾನಾಂ ತಥೈವ ಚ ।
ಶೈವಾನಾಂ ಚ ವಿಧಿಂ ವಿಷ್ಣುಂ ಸ್ಥಾಣುಂಚಾಪ್ಯನ್ವಮೂಮುಚನ್ ॥ ೧೩ ॥
ತಸ್ಮಾದ್ಯಸ್ಯ ಮನೋರಾಗೋ ಯಸ್ಮಿನ್ದೇವೇ ಭವೇತ್ಸ್ಫುಟಂ ।
ಸ ತಂ ಭವೇದ್ವಿಪಾಪಃ ಸ್ಯಾನ್ಮಮೇದಂ ಮತಮುತ್ತಮಂ ॥ ೧೪ ॥

ಕರಂಧಮ ಉವಾಚ :—

ಕಾನಿ ಪಾಪಾನಿ ವಿಪ್ರೇಂದ್ರ ಯೈಸ್ತು ಸಂಮೂಢಚೇತಸಃ ।
ನ ವೇದೇಷು ನ ಧರ್ಮೇಷು ರತಿಮಾಪದ್ಯತೇ ಮನಃ ॥ ೧೫ ॥

---

೧೧. ಬ್ರಹ್ಮ ವಿಷ್ಣು ಮಹೇಶ್ವರರೆಂಬ ಮೂವರಲ್ಲಿ ಉತ್ತಮ, ಮಧ್ಯಮ, ಅಧಮ ಎಂಬ ಅವಾಂತರ ಭೇದಗಳನ್ನು ಯಾರು ಕಲ್ಪಿಸಿ ಉಪದೇಶಮಾಡುವರೊ, ಅವರೆಲ್ಲರೂ ಅಸತ್ಯವಾದಿಗಳೇ ಸರಿ. ಅಂತಹ ಪಾಪಿಗಳು ಶಾಶ್ವತವಾದ ನರಕವನ್ನು ಹೊಂದುವರು.'

೧೨. ಇಂತು ಆ ನೈಮಿಷಾರಣ್ಯವಾಸಿಗಳಾದ ಮಹರ್ಷಿಗಳು ನಿಶ್ಚಯವನ್ನುಮಾಡಿಕೊಂಡರು. ಎಲೈ ರಾಜೇಂದ್ರನೆ! ನಿಜವಾಗಿಯೂ ಈ ಮತವೇ ಸತ್ಯವೆಂದು ನನಗೂ ಚೆನ್ನಾಗಿ ತಿಳಿದಿರುವುದು.

೧೩. ಬ್ರಹ್ಮಜಾಪಕರಲ್ಲಿಯೂ, ವೈಷ್ಣವರಲ್ಲಿಯೂ, ಶೈವರಲ್ಲಿಯೂ ಅನೇಕರು ಬ್ರಹ್ಮ, ವಿಷ್ಣು, ಮಹೇಶ್ವರರನ್ನು ಅನುಸರಿಸಿ ಮೋಕ್ಷವನ್ನು ಹೊಂದಿರುವರು.

೧೪. ಆದುದರಿಂದ ಯಾವ ಮನುಷ್ಯನ ಮನಸ್ಸು ಯಾವ ದೇವತೆಯಲ್ಲಿ ಅನುರಾಗವನ್ನು ಚೆನ್ನಾಗಿ ಹೊಂದುವುದೊ, ಅವನು ಆ ಮೂರ್ತಿ ವಿಶೇಷವನ್ನೇ ಧ್ಯಾನಿಸಬೇಕು. ಹಾಗೆಯೇ ಅವನು ಪಾಪರಹಿತನಾಗುವನು. ಇದೇ ನನ್ನ ಉತ್ತಮವಾದ ಮತವು."

೧೫. ಕರಂಧಮನು ಕೇಳುತ್ತಾನೆ :—"ಎಲೈ ಬ್ರಾಹ್ಮಣೋತ್ತಮನೆ! ಈ ಲೋಕದಲ್ಲಿ ಜನರು ಕೇವಲ ಚಿತ್ತಭ್ರಾಂತಿಯನ್ನು ಹೊಂದಿದವರಾಗಿ ಯಾವ ಯಾವ ಪಾಪಗಳನ್ನು ಮಾಡುವುದರಿಂದ ಅವರ ಮನಸ್ಸು ಮುಕ್ತಿಯನ್ನು ದೊರಕಿಸಿಕೊಡುವ ವೇದಗಳಲ್ಲಿಯೂ ಧರ್ಮಗಳಲ್ಲಿಯೂ ಶ್ರದ್ಧೆಯನ್ನು ಹೊಂದುವುದಿಲ್ಲವೆಂಬುದನ್ನು ನನಗೆ ತಿಳಿಸುವವನಾಗು?"

ಮಹಾಕಾಲ ಉವಾಚ:—

**ಅಧರ್ಮಭೇದಾ ವಿಜ್ಞೇಯಾಶ್ಚಿತ್ತವೃತ್ತಿಪ್ರಭೇದತಃ ।**
**ಸ್ಥೂಲಾಃ ಸೂಕ್ಷ್ಮಾ ಅಸೂಕ್ಷ್ಮಾಶ್ಚ ಕೋಟಿಭೇದೈರನೇಕಶಃ ॥ ೧೬ ॥**
**ತತ್ರ ಯೇ ಪಾಪನಿಚಯಾಃ ಸ್ಥೂಲಾ ನರಕಹೇತವಃ ।**
**ತೇ ಸಮಾಸೇನ ಕಥ್ಯಂತೇ ಮನೋವಾಕ್ಕಾಯಸಾಧನಾಃ ॥ ೧೭ ॥**
**ಪರಸ್ತ್ರೀದ್ರವ್ಯಸಂಕಲ್ಪಶ್ಚೇತಸಾನಿಷ್ಟಚಿಂತನಂ ।**
**ಅಕಾರ್ಯಾಭಿನಿವೇಶಶ್ಚ ಚತುರ್ಧಾ ಕರ್ಮ ಮಾನಸಂ ॥ ೧೮ ॥**
**ಅನಿಬದ್ಧಪ್ರಲಾಪಿತ್ವಮಸತ್ಯಂ ಚಾಪ್ರಿಯಂ ಚ ಯತ್ ।**
**ಪರಾಪವಾದ ಪೈಶುನ್ಯಂ ಚತುರ್ಧಾ ಕರ್ಮ ವಾಚಿಕಂ ॥ ೧೯ ॥**
**ಅಭಕ್ಷ್ಯಭಕ್ಷಣಂ ಹಿಂಸಾ ಮಿಥ್ಯಾಕಾಮಸ್ಯ ಸೇವನಂ ।**
**ಪರಸ್ವಾನಾಮುಪಾದಾನಂ ಚತುರ್ಧಾ ಕರ್ಮ ಕಾಯಿಕಂ ॥ ೨೦ ॥**

---

೧೬. ಮಹಾಕಾಲನು ಹೇಳುತ್ತಾನೆ:—"ಅಧರ್ಮದಲ್ಲಿ ಅನೇಕ ಪ್ರಭೇದಗಳು ಕರ್ತೃವಿನ ಚಿತ್ತವೃತ್ತಿಯ ಪ್ರಭೇದಗಳನ್ನನುಸರಿಸಿ ಸ್ಥೂಲವೆಂದೂ, ಸೂಕ್ಷ್ಮವೆಂದೂ, ಮಧ್ಯಮವೆಂದೂ, ಹೇಳಲ್ಪಡುವುವು. ಇವುಗಳಲ್ಲಿಯೂ ಪ್ರಾಯಶಃ ಅನೇಕಕೋಟಿ ಭೇದಗಳೂ ಉಂಟಾಗುವುವು. ಅವುಗಳು ಲೆಕ್ಕವಿಲ್ಲದಷ್ಟಿರುತ್ತವೆಯಾದುದರಿಂದ ಎಲ್ಲವನ್ನೂ ಇಲ್ಲಿ ಹೇಳಲಾಗುವುದಿಲ್ಲ.

೧೭. ಆದರೂ ಅವುಗಳಲ್ಲಿ ಕೇವಲ ಸ್ಥೂಲಗಳಾಗಿ ಮನೋವಾಕ್ಕಾಯಗಳಿಂದ ಮಾಡಲ್ಪಟ್ಟು ನರಕಪ್ರಾಪ್ತಿಗೆ ಕಾರಣಭೂತಗಳಾದ ಕೆಲವನ್ನು ಸಾರ್ವತ್ರಿಕವಾಗಿ ತಿಳಿಸುವೆನು.

೧೮. ಪರಸ್ತ್ರೀಯರಲ್ಲಿಯೂ ಪರದ್ರವ್ಯದಲ್ಲಿಯೂ ಅಭಿಲಾಷೆಯನ್ನು ಮಾಡುವುದು, ಮನಸ್ಸಿನಲ್ಲಿ ಇತರರಿಗೆ ಕೆಟ್ಟುದನ್ನು ಕೋರುವುದು, ಕೆಟ್ಟ ಕಾರ್ಯಗಳಲ್ಲಿ ಮನಸ್ಸನ್ನು ಹರಿಯಬಿಡುವುದು—ಇವು ನಾಲ್ಕೂ ಮಾನಸಿಕ ಕರ್ಮಗಳೆನಿಸುವುವು.

೧೯. ಅಸಂಬದ್ಧ ಪ್ರಲಾಪವನ್ನು ಮಾಡುವುದು, ಅಸತ್ಯವೂ ಅಪ್ರಿಯವೂ ಆದ ಮಾತುಗಳನ್ನಾಡುವುದು, ಪರರನ್ನು ನಿಂದಿಸುವುದು, ಪರೋಕ್ಷದಲ್ಲಿ ಜನರನ್ನು ಹಿಯ್ಯಾಳಿಸುವುದು—ಇವು ನಾಲ್ಕು ವಾಚಿಕವಾದ ಅಪರಾಧಗಳೆನಿಸುವುವು.

೨೦. ಗರ್ಹಿತವಸ್ತುಗಳ ಭೋಜನ, ಪ್ರಾಣಿಹಿಂಸೆ, ಅಶಾಶ್ವತಗಳಾದ ಭೋಗಗಳನ್ನು ಸೇವಿಸುವುದು, ಇತರರ ಪದಾರ್ಥಗಳನ್ನು ಯಾಚಿಸುವುದು—ಈ ನಾಲ್ಕೂ ಕಾಯಿಕಪಾಪಗಳೆನಿಸುವುವು. ಈ ರೀತಿ ಪಾಪಗಳು ಕಾಯಿಕ, ವಾಚಿಕ, ಮಾನಸಿಕಗಳೆಂದು ಮೂರು ವಿಧ.

ಇತ್ಯೇತದ್ದ್ವಾದಶವಿಧಂ ಕರ್ಮಪ್ರೋಕ್ತಂ ತ್ರಿಸಂಭವಂ ।
ಅಸ್ಯ ಭೇದಾನ್ಪುನರ್ವಕ್ಷ್ಯೇ ಯೇಷಾಂ ಫಲಮನಂತಕಂ ॥ ೨೧ ॥
ಯೇ ದ್ವಿಷಂತಿ ಮಹಾದೇವಂ ಸಂಸಾರಾರ್ಣವತಾರಕಂ ।
ಸುಮಹತ್ಪಾತಕೋಪೇತಾಸ್ತೇ ಯಾಂತಿ ನರಕಾಗ್ನಿಷು ॥ ೨೨ ॥
ಮಹಾಂತಿ ಪಾತಕಾನ್ಯಾಹುರ್ನಿರಂತರಫಲಾನಿ ಷಟ್ ।
ನಾಭಿನಂದಂತಿ ಯೇ ದೃಷ್ಟ್ವಾ ಶಂಕರಂ ನ ಸ್ತುವಂತಿ ಯೇ ॥ ೨೩ ॥
ಯಥೇಷ್ಟಚೇಷ್ಟಾ ನಿಃಶಂಕಾಃ ಸಂತಿಷ್ಠಂತಿ ರಮಂತಿ ಚ ।
ಉಪಚಾರವಿನಿರ್ಮುಕ್ತಾಃ ಶಿವಸ್ಯ ಗುರುಸನ್ನಿಧೌ ।
ಶಿವಾಚಾರಂ ನ ಮನ್ಯಂತೇ ಶಿವಭಕ್ತಾನ್ದ್ವಿಷಂತಿ ಷಟ್ ॥ ೨೪ ॥
ಗುರುಮಾರ್ತಮಶಕ್ತಂ ವಾ ವಿದೇಶಪ್ರಸ್ಥಿತಂ ತಥಾ ।
ಅರಿಭಿಃ ಪರಿಭೂತಂ ವಾ ಯಸ್ತ್ಯಜತಿ ಸ ಪಾಪಕೃತ್ ॥ ೨೫ ॥
ತದ್ಭಾರ್ಯಾಪುತ್ರಮಿತ್ರೇಷು ಯಶ್ಚಾವಜ್ಞಾಂ ಕರೋತಿ ವಾ ।
ಇತ್ಯೇತತ್ಪಾತಕಂ ಜ್ಞೇಯಂ ಗುರುನಿಂದಾಸಮಂ ಮಹತ್ ॥ ೨೬ ॥

---

೨೧. ಈ ಕಾಯಿಕ, ವಾಚಿಕ, ಮಾನಸಿಕಗಳೆಂಬ ಪಾಪಗಳಲ್ಲಿ ಹನ್ನೆರಡು ವಿಧಗಳಿರುವುವು. ಇನ್ನು ಇವುಗಳ ಅವಾಂತರ ಭೇದಗಳನ್ನೂ ಸ್ವಲ್ಪಮಟ್ಟಿಗೆ ತಿಳಿಸುವೆನು. ಇವುಗಳ ಫಲಗಳೂ ಅನಂತಗಳಾಗಿರುವುವು.

೨೨. ಸಂಸಾರ ಸಮುದ್ರದಿಂದ ಕಡೆಹಾಯಿಸುವ ಮಹಾದೇವನನ್ನು ಯಾರು ದ್ವೇಷಿಸುವರೊ ಅವರು ಮಹತ್ತರವಾದ ಪಾಪವನ್ನು ಮಾಡಿದವರೆನಿಸಿ ನರಕಾಗ್ನಿಗಳಲ್ಲಿ ಬಿದ್ದು ವ್ಯಥೆಯನ್ನು ಹೊಂದುವರು.

೨೩–೨೪. ಮುಂದೆ ಹೇಳುವ ಆರು ಕಾರ್ಯಗಳೂ ಮಹತ್ಪಾಕಗಳೆಂದೂ ಶಾಶ್ವತವಾದ ನರಕವನ್ನು ಕೊಡುವುವೆಂದೂ ತಿಳಿದವರು ಹೇಳುವರು. ಯಾರು ಶಿವಲಿಂಗವನ್ನು ಕಂಡು ನಮಸ್ಕರಿಸುವುದಿಲ್ಲವೊ, ಯಾರು ಸ್ತೋತ್ರಮಾಡುವುದಿಲ್ಲವೊ, ಶಿವಸನ್ನಿಧಿಯಲ್ಲಿ ನಿರ್ಭಯವಾಗಿ ಮನಸ್ಸು ಬಂದಂತೆ ಚೇಷ್ಟೆಗಳನ್ನು ಮಾಡುತ್ತ ಸಂತೋಷಪಡುವರೊ, ಯಾರು ಶಿವನ ಪರಮಪಾವನವಾದ ಸನ್ನಿಧಿಯಲ್ಲಿ ಆದರೋಪಚಾರ ಹೀನರಾಗಿರುವರೊ, ಯಾರು ಶಿವಾಚಾರಗಳನ್ನು ಮನ್ನಣೆ ಮಾಡುವುದಿಲ್ಲವೊ, ಯಾರು ಶಿವಭಕ್ತರನ್ನು ದ್ವೇಷಿಸುವರೊ—ಈ ಆರು ಬಗೆಯ ಜನರೂ ಪಾತಕಿಗಳೆನಿಸುವರು.

೨೫–೨೬. ಗುರುವು ಆರ್ತನಾದಾಗಲು, ನಿಶ್ಶಕ್ತನಾಗಿರಲು, ಪರದೇಶಕ್ಕೆ ಹೊರಟಿರಲು, ಶತ್ರುಗಳಿಂದ ಪರಾಭವವನ್ನು ಹೊಂದಿದಾಗಲು ಕೈಬಿಡುವ ಶಿಷ್ಯನು ಪಾಪಿಯು. ಗುರುವಿನ ಪತ್ನಿ, ಪುತ್ರ, ಸ್ನೇಹಿತರನ್ನು ಯಾವನು ಅಸಡ್ಡೆಯಿಂದ ಕಾಣುವನೊ, ಅವನ ಕೃತ್ಯವೂ ಗುರುನಿಂದೆಗೆ ಸಮಾನವೆನಿಸಿದ ಮಹತ್ಪಾತಕವು.

ಬ್ರಹ್ಮಘ್ನಶ್ಚ ಸುರಾಪಶ್ಚ ಸ್ತೇಯೀ ಚ ಗುರುತಲ್ಪಗಃ ।
ಮಹಾಪಾತಕಿನಸ್ತ್ವೇತೇ ತತ್ಸಂಯೋಗೀ ಚ ಪಂಚಮಃ ॥ ೨೭ ॥
ಕ್ರೋಧಾದ್ದ್ವೇಷಾದ್ಭಯಾಲ್ಲೋಭಾದ್ಬ್ರಾಹ್ಮಣಸ್ಯ ವದಂತಿ ಯೇ ।
ಮರ್ಮಾಂತಿಕಂ ಮಹಾದೋಷಂ ಬ್ರಹ್ಮಘ್ನಃ ಸ ಪ್ರಕೀರ್ತಿತಃ ॥ ೨೮ ॥
ಬ್ರಾಹ್ಮಣಂ ಯಃ ಸಮಾಹೂಯ ಯಾಚಮಾನಮಕಿಂಚನಂ ।
ಪಶ್ಚಾನ್ನಾಸ್ತೀತಿ ಯೋ ಬ್ರೂಯಾತ್ಸ ಚ ವೈ ಬ್ರಹ್ಮಹಾ ಸ್ಮೃತಃ ॥ ೨೯ ॥
ಯಶ್ಚ ವಿದ್ಯಾಭಿಮಾನೇನ ನಿಸ್ತೇಜಯತಿ ಸದ್ದ್ವಿಜಂ ।
ಉದಾಸೀನಃ ಸಭಾಮಧ್ಯೇ ಬ್ರಹ್ಮಹಾ ಸ ಪ್ರಕೀರ್ತಿತಃ ॥ ೩೦ ॥
ಮಿಥ್ಯಾಗುಣೈಃ ಸ್ವಮಾತ್ಮಾನಂ ನಯತ್ಯುತ್ಕರ್ಷತಾಂ ಬಲಾತ್ ।
ವಿರುದ್ಧಂ ಗುರುಭಿಃ ಸಾರ್ಧಂ ಬ್ರಹ್ಮಘ್ನಃ ಸ ಪ್ರಕೀರ್ತಿತಃ ॥ ೩೧ ॥
ಕ್ಷುತ್ತೃಷ್ಣಾತಪ್ತದೇಹಾನಾಂ ದ್ವಿಜಾನಾಂ ಭೋಕ್ತುಮಿಚ್ಛತಾಂ ।
ಯಃ ಸಮಾಚರತೇ ವಿಘ್ನಂ ತಮಾಹುರ್ಬ್ರಹ್ಮಘಾತಕಂ ॥ ೩೨ ॥

---

೨೭. ಬ್ರಾಹ್ಮಣಘಾತಕ, ಸುರಾಪಾನಮಾಡುವವನು, ಕಳ್ಳ, ಗುರುಪತ್ನೀಗಮನವನ್ನು ಮಾಡುವವನು, ಇವರಲ್ಲಿ ಯಾರೊಡನೆಯಾದರೂ ಸೇರುವನು — ಈ ಐವರೂ ಮಹಾಪಾತಕಿಗಳು.

೨೮. ಕ್ರೋಧದಿಂದಾಗಲಿ, ದ್ವೇಷದಿಂದಾಗಲಿ, ಭಯದಿಂದಾಗಲಿ, ದುಡ್ಡಿನಾಶೆಗಾಗಲಿ, ಬ್ರಾಹ್ಮಣನ ವಿಷಯದಲ್ಲಿ ಮರ್ಮಘಾತಕವೂ ಮಹಾದೋಷಯುಕ್ತವೂ ಆದ ಮಾತನ್ನು ಯಾವನು ಆಡುವನೊ, ಅವನು ಬ್ರಹ್ಮಘಾತಕನು.

೨೯. ಸ್ವಲ್ಪವೂ ಯಾಚಿಸದಿರುವ ಬ್ರಾಹ್ಮಣನನ್ನು ತಾನೇ ಕರೆದು ಹಿಂದೆ ಏನೂ ಇಲ್ಲವೆಂದು ಹೇಳುವನು ಬ್ರಹ್ಮಘ್ನನೆಂದು ಹೇಳಲ್ಪಟ್ಟಿರುವನು.

೩೦. ಯಾವನು ಉದಾಸೀನಭಾವದಿಂದ ಸಭಾಮಧ್ಯದಲ್ಲಿ ಕುಳಿತು ತನ್ನ ವಿದ್ಯೆಯ ಅಹಂಕಾರದಿಂದ ಸದ್ಬ್ರಾಹ್ಮಣನ ತೇಜೋವಧೆಯನ್ನು ಮಾಡುವನೊ, ಅವನು ಬ್ರಹ್ಮಘಾತಕನು.

೩೧. ಗುರುಗಳಲ್ಲಿ ವಿರುದ್ಧವಾಗಿ ನಡೆದುಕೊಂಡು ಇಲ್ಲದ ಗುಣಗಳಿಂದ ಬಲಾತ್ಕಾರವಾಗಿ ತನ್ನನ್ನು ತಾನೇ ಹೆಚ್ಚಿಸಿಕೊಳ್ಳಲಪೇಕ್ಷಿಸುವವನು ಬ್ರಹ್ಮಘ್ನನು.

೩೨. ಹಸಿವು ಬಾಯಾರಿಕೆಗಳಿಂದ ಬೆಂಡಾದ ದೇಹವುಳ್ಳವರಾಗಿ ಭೋಜನವನ್ನು ಅಪೇಕ್ಷಿಸುವ ಬ್ರಾಹ್ಮಣರಿಗೆ ವಿಘ್ನವನ್ನಾಚರಿಸುವವನೊಬ್ಬ ಬ್ರಹ್ಮಘಾತಕನು.

ಪಿಶುನಃ ಸರ್ವಲೋಕಾನಾಂ ಛಿದ್ರಾನ್ವೇಷಣ ತತ್ಪರಃ ।
ಉದ್ವೇಗಜನನಃ ಕ್ರೂರಃ ಸ ಚ ವೈ ಬ್ರಹ್ಮಹಾ ಸ್ಮೃತಃ ॥ ೩೩ ॥
ಗವಾಂ ತೃಷಾಭಿಭೂತಾನಾಂ ಜಲಾರ್ಥಮುಪಸರ್ಪತಾಂ ।
ಯಃ ಸಮಾಚರತೇ ವಿಘ್ನಂ ತಮಾಹುರ್ಬ್ರಹ್ಮಘಾತಕಂ ॥ ೩೪ ॥
ಪರದೋಷಂ ಪರಿಜ್ಞಾಯ ನೃಪಕರ್ಣೇ ಜಪೇತ ಯಃ ।
ಪಾಪೀಯಾನ್ಪಿಶುನಃ ಕ್ರೂರಸ್ತಮಾಹುರ್ಬ್ರಹ್ಮಘಾತಕಂ ॥ ೩೫ ॥
ನ್ಯಾಯೇನೋಪಾರ್ಜಿತಂ ವಿಪ್ರೈಸ್ತದ್ರವ್ಯಹರಣಂ ಚ ಯತ್ ।
ಛದ್ಮನಾ ವಾ ಬಲಾದ್ವಾಪಿ ಬ್ರಹ್ಮಹತ್ಯಾಸಮಂ ಮತಂ ॥ ೩೬ ॥
ಅಧೀತ್ಯ ಯಶ್ಚ ಶಾಸ್ತ್ರಾಣಿ ಪರಿತ್ಯಜತಿ ಮೂಢಧೀಃ ।
ಸುರಾಪಾನಸಮಂ ಜ್ಞೇಯಂ ಜೀವನಾಯೈವ ವಾ ಪಠೇತ್ ॥ ೩೭ ॥
ಅಗ್ನಿಹೋತ್ರಪರಿತ್ಯಾಗಃ ಪಂಚಯಜ್ಞೋಪಕರ್ಮಣಾಂ ॥ ೩೮ ॥
ಮಾತಾಪಿತೃಪರಿತ್ಯಾಗಃ ಕೂಟಸಾಕ್ಷೀ ಸುಹೃದ್ವಧಃ ।
ಅಭಕ್ಷ್ಯಭಕ್ಷಣಂ ವನ್ಯಜಂತೂನಾಂ ಕಾಮ್ಯಯಾ ವಧಃ ॥ ೩೯ ॥

---

೩೩. ಚಾಡಿಯನ್ನು ಹೇಳುವವನೂ, ಸಕಲ ಜನರಲ್ಲಿಯೂ ಹುಳುಕುಗಳನ್ನೇ ಹುಡುಕುತ್ತಿರುವವನೂ, ಮನಸ್ಸಿನ ಉದ್ವೇಗವನ್ನುಂಟುಮಾಡುವವನೂ, ಕ್ರೂರನೂ ಆದ ಮನುಷ್ಯನು ಬ್ರಹ್ಮಘಾತಕನೆಂದು ಹೇಳುವರು.

೩೪. ಬಾಯಾರಿಕೆಯಿಂದ ನೀರನ್ನು ಹುಡುಕಿಕೊಂಡು ತಿರುಗುತ್ತಿರುವ ಗೋವುಗಳಿಗೆ ವಿಘ್ನವನ್ನಾಚರಿಸುವವನು ಬ್ರಹ್ಮಘಾತಕನೆನಿಸುವನು.

೩೫. ಯಾವ ಪಾಪಿಯು ಹಿಂದೆ ನಿಂದಿಸುವ ಕ್ರೂರನಾಗಿ, ಇತರರ ದೋಷಗಳನ್ನು ತಿಳಿದು ಅವುಗಳನ್ನು ರಾಜನ ಕಿವಿಯಲ್ಲಿ ಊದುರುವನೊ, ಅವನೇ ಬ್ರಹ್ಮಘ್ನನು.

೩೬. ಬ್ರಾಹ್ಮಣರು ಸ್ವವೃತ್ತಿಯಿಂದ ಆರ್ಜಿಸಿದ ದ್ರವ್ಯವನ್ನು ಮೋಸದಿಂದಾಗಲಿ, ಬಲಾತ್ಕಾರದಿಂದಲಾಗಲಿ ಕಿತ್ತುಕೊಳ್ಳುವುದು ಬ್ರಹ್ಮಹತ್ಯೆಯೆನಿಸಿಕೊಳ್ಳುವುದು.

೩೭. ಯಾವನು ಶಾಸ್ತ್ರಗಳನ್ನು ಸಾಂಗವಾಗಿ ಅಧ್ಯಯನಮಾಡಿ ಬಳಿಕ ಅಧ್ಯಾಪನವನ್ನು ಮಾಡಿಸದೆ ಕೈಬಿಡುವನೊ, ಅಥವಾ ಯಾವನು ಅಧ್ಯಯನ ಮಾಡಿದ ಶಾಸ್ತ್ರಗಳನ್ನು ಜೀವನೋಪಾಯವನ್ನಾಗಿ ಮಾಡಿಕೊಳ್ಳುವನೊ, ಆ ಮಂದಮತಿಯ ಪಾಪವು ಸುರಾಪಾನಸಮವೆನಿಸುವುದು.

೩೮–೪೦. ಅಗ್ನಿಹೋತ್ರವನ್ನು ತ್ಯಜಿಸುವುದು, ದೇವರ್ಷಿಪಿತೃಮನುಷ್ಯ ಭೂತ ಯಜ್ಞಗಳನ್ನು ಕೈಬಿಡುವುದು, ತಂದೆತಾಯಿಯರನ್ನು ಸೇವಿಸದಿರುವುದು, ಸುಳ್ಳುಸಾಕ್ಷ್ಯವನ್ನು ಹೇಳುವುದು, ಸ್ನೇಹಿತರ ವಧೆ, ಅಭಕ್ಷ್ಯ ಭಕ್ಷಣ,

ಗ್ರಾಮಂ ವನಂ ಗವಾವಾನಂ ಯಶ್ಚ ಕ್ರೋಧೇನ ದೀಪಯೇತ್ ।
ಇತಿ ಘೋರಾಣಿಪಾಪಾನಿ ಸುರಾಪಾನ ಸಮಾನಿ ಚ ॥ ೪೦ ॥
ದೀನಸರ್ವಸ್ವಹರಣಂ ನರಸ್ತ್ರೀಗಜವಾಜಿನಾಂ ।
ಗೋಭೂರತ್ನಹಿರಣ್ಯಾನಾಮೌಷಧೀನಾಂ ರಸಸ್ಯ ಚ ॥ ೪೧ ॥
ಚಂದನಾಗರು ಕರ್ಪೂರಕಸ್ತೂರೀ ಪಟ್ಟವಾಸಸಾಂ ।
ಹಸ್ತನ್ಯಾಸಾಪಹರಣಂ ರುಕ್ಮಸ್ತೇಯಸಮಂ ಸ್ಮೃತಂ ॥ ೪೨ ॥
ಕನ್ಯಾನಾಂ ವರಯೋಗ್ಯಾನಾಮದಾನಂ ಸದೃಶೇ ವರೇ ।
ಪುತ್ರಮಿತ್ರಕಲತ್ರೇಷು ಗಮನಂ ಭಗಿನೀಷು ಚ ॥ ೪೩ ॥
ಕುಮಾರೀ ಸಾಹಸಂ ಘೋರಮಂತ್ಯಜಸ್ತ್ರೀನಿಷೇವಣಂ ।
ಸವರ್ಣಾಯಾಶ್ಚ ಗಮನಂ ಗುರುತಲ್ಪಸಮಂ ಸ್ಮೃತಂ ॥ ೪೪ ॥
ದ್ವಿಜಾಯಾರ್ಥಂ ಪ್ರತಿಶ್ರುತ್ಯ ನ ಪ್ರಯಚ್ಛತಿ ಯಃ ಪುನಃ ।
ನ ಚ ಸ್ಮಾರಯತೇ ವಿಪ್ರಂ ತುಲ್ಯಂ ತದುಪಪಾತಕಂ ॥ ೪೫ ॥
ಅಭಿಮಾನೋಽತಿಕೋಪಶ್ಚ ದಾಂಭಿಕತ್ವಂ ಕೃತಘ್ನತಾ ।
ಅತ್ಯಂತವಿಷಯಾಸಕ್ತಿಃ ಕಾರ್ಪಣ್ಯಂ ಶಾಠ್ಯಮತ್ಸರಂ ॥ ೪೬ ॥

---

ನಿಷ್ಕಾರಣವಾಗಿ ವನಮೃಗಗಳನ್ನು ಕೊಲ್ಲುವುದು, ಕೋಪದಿಂದ ಗ್ರಾಮ, ವನ, ಗೋಶಾಲೆಗಳನ್ನು ಬೆಂಕಿಯಿಟ್ಟು ನಾಶಗೊಳಿಸುವುದು, ಮುಂತಾದ ಪಾಪಗಳೆಲ್ಲವೂ ಸುರಾಪಾನಕ್ಕೆ ಸಮಾನಗಳೆಂದು ಹೇಳಲ್ಪಟ್ಟಿರುವುವು.

೪೧–೪೨. ದೀನಜನರ ಸರ್ವಸ್ವವನ್ನೂ ಅಪಹರಿಸುವುದು, ಮನುಷ್ಯ, ಸ್ತ್ರೀ, ಗಜ, ಅಶ್ವಗಳನ್ನು ಕದಿಯುವುದು, ಗೋವುಗಳು, ಭೂಮಿ, ನವರತ್ನ, ಹಿರಣ್ಯ, ಔಷಧಿ ರಸಗಳು, ಶ್ರೀಗಂಧ, ಅಗರು, ಕರ್ಪೂರ, ಕಸ್ತೂರಿ, ಪೀತಾಂಬರ ಗಳನ್ನು ಬಲವಂತವಾಗಿ ಕೈಯಿಂದ ಕಸಿದುಕೊಳ್ಳುವುದು, ಇವೆಲ್ಲವೂ ಸ್ವರ್ಣ ಸ್ತೇಯಕ್ಕೆ ಸಮಾನವೆನಿಸುವುವು.

೪೩–೪೪. ಪ್ರಾಪ್ತವಯಸ್ಕಳಾದ ಕನ್ಯೆಯನ್ನು ಯೋಗ್ಯನಾದ ವರನಿಗೆ ಕೊಡದಿರುವುದು, ಪುತ್ರ ಮಿತ್ರರ ಸ್ತ್ರೀಯರಲ್ಲಿಯೂ ಸಹೋದರಿಯರಲ್ಲಿಯೂ ಗಮನಮಾಡುವುದು, ಅವಿವಾಹಿತ ಕನ್ಯೆಯಲ್ಲಿ ಸಾಹಸವನ್ನು ಮಾಡುವುದು, ಚಂಡಾಲಸ್ತ್ರೀಸಂಪರ್ಕ, ಸವರ್ಣಳಾದ ಪರಸ್ತ್ರೀಯನ್ನು ಸೇರುವುದು— ಇವು ಗಳೆಲ್ಲವೂ ಗುರುತಲ್ಪಗಮನಕ್ಕೆ ಸಮವೆಂದು ಹೇಳಲ್ಪಟ್ಟಿರುವುವು.

೪೫–೬೦. ಬ್ರಾಹ್ಮಣನಿಗೆ ಕೊಡಲು ವಾಗ್ದಾನವನ್ನುಮಾಡಿ ಬಳಿಕ ಕೊಡ ಧಿರುವುದೂ, ಆತನು ಮರತಲ್ಲಿ ಆತನಿಗೆ ಜ್ಞಾಪಿಸದೆ ಇರುವುದೂ ಉಪಪಾತಕ ಗಳಿಗೆ ಸಮವು. ಸ್ವಾಭಿಮಾನ, ಅತಿಕೋಪ, ಜಂಭವನ್ನು ಕೊಚ್ಚಿಕೊಳ್ಳುವುದು, ಉಪಕಾರಿಗಳಲ್ಲಿ ಎರಡೆಣಿಸುವುದು, ಮಿತಿಯಿಲ್ಲದ ವಿಷಯಭೋಗದ ಆಸಕ್ತಿ,

ಭೃತ್ಯಾನಾಂ ಚ ಪರಿತ್ಯಾಗಃ ಸಾಧುಬಂಧುತಪಸ್ವಿನಾಂ ।
ಗವಾಂ ಕ್ಷತ್ರಿಯವೈಶ್ಯಾನಾಂ ಸ್ತ್ರೀಶೂದ್ರಾಣಾಂ ಚ ತಾಡನಂ ॥ ೪೭ ॥
ಶಿವಾಶ್ರಮತರೂಣಾಂ ಚ ಪುಷ್ಪಾರಾಮವಿನಾಶನಂ ।
ಅಯಾಜ್ಯಾನಾಂ ಯಾಜನಂ ಚಾಪ್ಯಯಾಚ್ಯಾನಾಂ ಚ ಯಾಚನಂ ॥ ೪೮ ॥
ಯಜ್ಞಾರಾಮತಡಾಗಾದಿದಾರಾಪತ್ಯಸ್ಯ ವಿಕ್ರಯಃ ।
ತೀರ್ಥಯಾತ್ರೋಪವಾಸಾನಾಂ ವ್ರತಾಯತನಕರ್ಮಣಾಂ ॥ ೪೯ ॥
ಸ್ತ್ರೀಧನಾನ್ಯುಪಜೀವಂತಿ ಸ್ತ್ರೀಭಿರತ್ಯಂತವರ್ಜಿತಾಃ ।
ಅರಕ್ಷಣಂ ಚ ನಾರೀಣಾಂ ಮದ್ಯಪಸ್ತ್ರೀನಿಷೇವಣಂ ॥ ೫೦ ॥
ಋಣಾನಾಮಪ್ರದಾನಂ ಚ ಮಿಥ್ಯಾವೃದ್ಧ್ಯುಪಜೀವನಂ ।
ನಿಂದಿತಾನಾಂ ಧನಾದಾನಂ ಸಾಧ್ವೀಕನ್ಯೋಕ್ತಿದೂಷಣಂ ॥ ೫೧ ॥
ವಿಷಮಾರಣಯಂತ್ರಾಣಾಂ ಪ್ರಯೋಗೇ ಮೂಲಕರ್ಮಣಾಂ ।
ಉಚ್ಚಾಟನಾಭಿಚಾರಾಶ್ಚ ರಾಗವಿದ್ವೇಷಣಕ್ರಿಯಾ ॥ ೫೨ ॥
ಜಿಹ್ವಾಕಾಮೋಪಭೋಗಾರ್ಥಂ ಯಸ್ಯಾರಂಭಃ ಸ್ವಕರ್ಮಸು ।
ಮೂಲ್ಯೇನಾಧ್ಯಾಪಯೇದ್ಯಸ್ತು ಮೂಲ್ಯೇನಾಧೀಯತೇ ಚ ಯೇ ॥ ೫೩ ॥

---

ಅನೌದಾರ್ಯ, ಹಟ ಮಾಡುವುದು, ಸೇಡನ್ನು ಇಟ್ಟುಕೊಳ್ಳುವುದು, ಸೇವಕರನ್ನೂ, ಸಾಧುಗಳನ್ನೂ, ಬಂಧುಗಳನ್ನೂ, ತಪಸ್ಸಂಪನ್ನರನ್ನೂ ಪಾಲಿಸದಿರುವುದು, ಗೋವುಗಳನ್ನೂ, ಕ್ಷತ್ರಿಯರನ್ನೂ, ವೈಶ್ಯರನ್ನೂ, ಶೂದ್ರರನ್ನೂ, ಸ್ತ್ರೀಯರನ್ನೂ ದಂಡಿಸುವುದು, ಶಿವದೇವಾಲಯಗಳ ತೋಟಗಳಲ್ಲಿ ವೃಕ್ಷಗಳನ್ನೂ ಹೂದೋಟಗಳನ್ನೂ ಧ್ವಂಸಮಾಡುವುದು, ಯಜ್ಞಕ್ಕೆ ಅನರ್ಹರಾದವರಿಂದ ಯಜ್ಞಗಳನ್ನು ಮಾಡಿಸುವುದು, ಯಾಚನಾನರ್ಹರಲ್ಲಿ ಯಾಚಿಸುವುದು, ಯಜ್ಞಫಲ, ತೋಟ, ಕೊಳ, ಹೆಂಡತಿ, ಮಕ್ಕಳುಗಳನ್ನು ಮಾರಿಕೊಳ್ಳುವುದು, ತೀರ್ಥಯಾತ್ರೆಯ ಉಪವಾಸದ ಫಲಗಳನ್ನೂ ವ್ರತ, ದೇವಾಲಯನಿರ್ಮಾಣದ ಫಲಗಳನ್ನೂ ಮಾರುವುದು, ಸ್ತ್ರೀಧನದಿಂದ ಜೀವನಯಾತ್ರೆಯನ್ನು ಸಾಗಿಸುವುದು, ಹೆಂಗಸರ ಕೈಯಲ್ಲಿ ಸಿಕ್ಕಿಕೊಳ್ಳುವುದು, ಗೃಹಸ್ತ್ರೀಯರನ್ನು ರಕ್ಷಿಸದಿರುವುದು, ಮದ್ಯಪಾನವನ್ನು ಮಾಡುವ ಸ್ತ್ರೀಯನ್ನು ಸೇರುವುದು, ಸಾಲವನ್ನು ಹಿಂದಕ್ಕೆ ಕೊಡದಿರುವುದು, ಮೋಸದ ಹಣದಿಂದ ಜೀವಿಸುವುದು, ನೀಚರಿಂದ ದ್ರವ್ಯವನ್ನು ಸ್ವೀಕರಿಸುವುದು, ಸಾಧ್ವಿಯರಾದ ಸ್ತ್ರೀಯರನ್ನು ದೂಷಿಸುವುದು, ವಿಷವನ್ನೂ, ಮಾರಣ ಕ್ರಿಯೆಯನ್ನೂ ಮೂಲಕರ್ಮವನ್ನೂ ಮಾಡಿಸುವುದು, ಉಚ್ಚಾಟನೆಯೇ ಮೊದಲಾದ ಅಭಿಚಾರಗಳನ್ನು ಮಾಡುವುದು, ಇತರರಲ್ಲಿ ರಾಗ ದ್ವೇಷಗಳನ್ನುಂಟುಮಾಡುವುದು, ಜಿಹ್ವೇಂದ್ರಿಯ ಗುಹ್ಯೇಂದ್ರಿಯಗಳ ತೃಪ್ತಿಗಳಾಗಿ ಸ್ವಕರ್ಮಗಳಲ್ಲಿ ಪ್ರವೃತ್ತನಾಗುವುದು, ಹಣದಾಸೆಯಿಂದ ಪಾಠ

ವ್ರಾತ್ಯತಾ ವ್ರತಸಂತ್ಯಾಗಃ ಸರ್ವಾಹಾರನಿಷೇವಣಂ ।
ಅಸಚ್ಛಾಸ್ತ್ರಾಭಿಗಮನಂ ಶುಷ್ಕತರ್ಕಾವಲಂಬನಂ ॥ ೫೪ ॥
ದೇವಾಗ್ನಿಗುರುಸಾಧೂನಾಂ ನಿಂದಾ ಗೋಬ್ರಾಹ್ಮಣಸ್ಯ ಚ ।
ಪ್ರತ್ಯಕ್ಷಂ ವಾ ಪರೋಕ್ಷಂ ವಾ ರಾಜ್ಞಾಂ ಮಂಡಲಿನಾಮಪಿ ೫೫ ॥
ಉತ್ಸನ್ನಪಿತೃದೇವೇಜ್ಯಾಃ ಸ್ವಕರ್ಮತ್ಯಾಗಿನಶ್ಚ ಯೇ ।
ದುಃಶೀಲಾ ನಾಸ್ತಿಕಾಃ ಪಾಪಾ ನ ಸದಾ ಸತ್ಯವಾದಿನಃ ॥ ೫೬ ॥
ಪರ್ವಕಾಲೇ ದಿವಾ ಚಾಪ್ಸು ವಿಯೋನೌ ಪಶುಯೋನಿಷು ।
ರಜಸ್ವಲಾಸ್ವಯೋನೌ ಚ ಮೈಥುನಂ ಯಃ ಸಮಾಚರೇತ್ ॥ ೫೭ ॥
ಸ್ತ್ರೀ ಪುತ್ರ ಮಿತ್ರಸುಹೃದಾಮಾಶಾಚ್ಛೇದಕರಾಶ್ಚ ಯೇ ।
ಜನಸ್ಯಾಪ್ರಿಯವಕ್ತಾರಃ ಕ್ರೂರಾಃ ಸಮಯಭೇದಿನಃ ॥ ೫೮ ॥
ಭೇತ್ತಾ ತಡಾಗಕೂಪಾನಾಂ ಸಂಕ್ರಮಾಣಾಂ ರಸಸ್ಯ ಚ ।
ಏಕಪಙ್ಕ್ತಿಸ್ಥಿತಾನಾಂ ಚ ಪಾಕಭೇದಂ ಕರೋತಿ ಯಃ ॥ ೫೯ ॥
ಇತ್ಯೇತೈಶ್ಚ ನರಾಃ ಪಾಪೈರುಪಪಾತಕಿನಃ ಸ್ಮೃತಾಃ ॥ ೬೦ ॥

---

ಪ್ರವಚನಗಳನ್ನು ಮಾಡಿಸುವುದು, ಹಣದಿಂದ ವಿದ್ಯೆಯನ್ನು ಕೊಳ್ಳುವುದು, ನೀಚಸಹವಾಸ, ವ್ರತಾಚಾರಗಳನ್ನು ವರ್ಜಿಸುವುದು, ಜಾತ್ಯಾಶ್ರಯ ವಿವೇಚನೆಯಿಲ್ಲದೆ ಆಹಾರವನ್ನು ಸೇವಿಸುವುದು, ವೇದವಿರುದ್ಧಶಾಸ್ತ್ರಗಳನ್ನು ಅಭ್ಯಾಸ ಮಾಡುವುದು, ದುರಂತವಾದ ತರ್ಕದಿಂದ ವಾದಮಾಡುವುದು, ದೇವತೆಗಳು, ಅಗ್ನಿ, ಗುರು, ಸಾಧುಗಳು, ಗೋಬ್ರಾಹ್ಮಣರು ಇವರನ್ನು ನಿಂದಿಸುವುದು, ಪ್ರತ್ಯಕ್ಷವಾಗಿಯಾಗಲಿ ಪರೋಕ್ಷವಾಗಿಯಾಗಲಿ ರಾಜರನ್ನೂ ಮತ್ತು ಚಕ್ರವರ್ತಿಗಳನ್ನೂ ದೂಷಿಸುವುದು, ಪಿತೃಗಳ ಮತ್ತು ದೇವತೆಗಳ ಪೂಜೆಗಳನ್ನು ತ್ಯಜಿಸುವುದು, ವರ್ಣಾಶ್ರಮ ವಿಹಿತಗಳಾದ ಕರ್ಮಗಳನ್ನು ಬಿಡುವುದು, ಕೆಟ್ಟ ನಡತೆಯುಳ್ಳದ್ದು, ದೇವರು, ಪರಲೋಕಗಳಿಲ್ಲವೆಂಬವಾದವು, ಪಾಪಕೃತ್ಯಗಳಲ್ಲಿ ತೊಡಗುವುದು, ಯಾವಾಗಲೂ ಅಸತ್ಯವನ್ನಾಡುವುದು, ಪರ್ವಕಾಲದಲ್ಲಿಯೂ, ಹಗಲಿನಲ್ಲಿಯೂ, ಜಲಕ್ರೀಡೆಯ ಸಮಯದಲ್ಲಿಯೂ, ವಿಯೋನಿಗಳಲ್ಲಿಯೂ, ಪಶುಯೋನಿಗಳಲ್ಲಿಯೂ, ರಜಸ್ವಲೆಯರಲ್ಲಿಯೂ, ಕನ್ಯಕೆಯಲ್ಲಿಯೂ ಮೈಥುನವನ್ನಾಚರಿಸುವುದು, ಪತ್ನೀ ಪುತ್ರ, ಮಿತ್ರ ಬಂಧುಗಳ ಆಶೆಗಳನ್ನು ನಾಶಗೊಳಿಸುವುದು, ಜನರಿಗೆ ಅಪ್ರಿಯವನ್ನು ಬೋಧಿಸುವುದು, ಕ್ರೌರ್ಯವನ್ನು ತೋರುವುದು, ಸಮಯದಲ್ಲಿ ಜಗಳವನ್ನು ಸಾಧಿಸುವುದು, ತಟಾಕಗಳನ್ನೂ ಭಾವಿಗಳನ್ನೂ ನದಿಗಳನ್ನೂ ದಾಟಲನುವಾದ ಸೇತುವೆಗಳನ್ನು ನಾಶಪಡಿಸುವುದು, ಒಂದೇ ಪಙ್ಕ್ತಿಯಲ್ಲಿ ಊಟಕ್ಕೆ ಕುಳಿತವರಿಗೆ ಪಾಕಭೇದಗಳನ್ನು ಮಾಡಿ ಬಡಿಸುವುದು—ಇವೇ ಮುಂತಾದುವುಗಳನ್ನು ಮಾಡುವುದರಿಂದ ಜನರು ಉಪಪಾತಕಿಗಳಾಗುವರೆಂದು ಹೇಳಲ್ಪಟ್ಟಿರುವುದು.

ಯುಕ್ತಾಸ್ತದೂನಕ್ಯೈಃ ಪಾಪೈಃ ಪಾಪಿನಸ್ತಾನ್ನಿಬೋಧ ಮೇ ।
ಯೇ ಗೋಬ್ರಾಹ್ಮಣಕನ್ಯಾನಾಂ ಸ್ವಾಮಿಮಿತ್ರತಪಸ್ವಿನಾಂ ।
ಅಂತರಂ ಯಾಂತಿ ಕಾರ್ಯೇಷು ತೇ ಸ್ಮೃತಾಃ ಪಾಪಿನೋ ನರಾಃ ॥೬೧॥
ಪರಶ್ರಿಯಾಭಿತಪ್ಯಂತೇ ಹೀನಾಂ ಸೇವಂತಿ ಯೇ ಸ್ತ್ರಿಯಂ ।
ಪಜ್ಞ್ಯರ್ಥಂ ಯೇ ನಕುರ್ವಂತಿ ದಾನಯಜ್ಞಾದಿಕಾಃ ಕ್ರಿಯಾಃ ॥ ೬೨ ॥
ಗೋಷ್ಠಾಗ್ನಿಜಲರಥ್ಯಾಸು ತರುಚ್ಛಾಯಾನಗೇಷು ಚ ।
ತ್ಯಜಂತಿ ಯೇ ಪುರೀಷಾದ್ಯಮಾರಾಮಾಯತನೇಷು ಚ ॥ ೬೩ ॥
ಗೀತವಾದ್ಯರತಾ ನಿತ್ಯಂ ಮತ್ತಾಃ ಕಿಲಕಿಲಾಪರಾಃ ।
ಕೂಟವೇಷಕ್ರಿಯಾಚಾರಾಃ ಕೂಟಸಂವ್ಯವಹಾರಿಣಃ ॥ ೬೪ ॥
ಕೂಟಶಾಸನಕರ್ತಾರಃ ಕೂಟಯುದ್ಧಕರಾಶ್ಚಯೇ ।
ನಿರ್ದಯೋಽತೀವ ಭೃತ್ಯೇಷು ಪಶೂನಾಂ ದಮನಶ್ಚ ಯಃ ॥ ೬೫ ॥
ಮಿಥ್ಯಾಪ್ರಸಾದಿತೋ ವಾಕ್ಯಮಾಕರ್ಣಯತಿ ಯಃ ಶನೈಃ ।
ಚಪಲಶ್ಚಾಪಿ ಮಾಯಾವೀ ಶಠೋ ಮಿಥ್ಯಾವಿನೀತಕಃ ॥ ೬೬ ॥

---

೬೧. ಮತ್ತೆ ಕೆಲವರು ಊನ ಪಾತಕಗಳಿಂದ ಯುಕ್ತರಾಗುವರು. ಅವರನ್ನು ತಿಳಿಸುವೆನು ಕೇಳು. ಯಾರು ಕಾರ್ಯಗಳಲ್ಲಿ ಗೋವುಗಳಲ್ಲಿಯೂ, ಬ್ರಾಹ್ಮಣರಲ್ಲಿಯೂ ಕನ್ಯೆಯರಲ್ಲಿಯೂ, ಸ್ವಾಮಿಗಳಲ್ಲಿಯೂ ಮಿತ್ರರಲ್ಲಿಯೂ, ತಪಸ್ವಿಗಳಲ್ಲಿಯೂ ಭೇದಗಳನ್ನು ಕಲ್ಪಿಸುವರೊ, ಆ ಮಾನವರಿಗೆ ಪಾಪಿಗಳೆಂದು ಹೇಳಬೇಕು.

೬೨–೬೭. ಇತರರ ಐಶ್ವರ್ಯವನ್ನು ಕಂಡು ಸಹಿಸದವರು, ನೀಚ ಸ್ತ್ರೀಯನ್ನು ಸೇವಿಸುವವರು, ಸಹವಾಸಬಲದಿಂದ ದಾನ ಯಜ್ಞಾದಿ ಸತ್ಕರ್ಮಗಳನ್ನು ಮಾಡದಿರುವವರು, ದನದಕೊಟ್ಟಿಗೆ, ಅಗ್ನಿ, ಜಲ, ಬೀದಿಗಳು, ಗಿಡಗಳ ನೆರಳು, ಪರ್ವತಗಳು, ತೋಟಗಳು, ಮನೆಗಳು ಇವುಗಳಲ್ಲಿ ಮೂತ್ರ ಪುರೀಷಗಳನ್ನು ವಿಸರ್ಜಿಸುವವರು, ಯಾವಾಗಲೂ ಗೀತವಾದ್ಯಗಳಲ್ಲಿ ನಿರತರಾಗಿರುವವರು, ಮತ್ತರಾಗಿರುವವರು, ಇತರರನ್ನು ಹಾಸ್ಯಮಾಡಿ ಗಹಗಹಿಸಿ ನಗುವವರು, ಮೋಸದ ವೇಷಗಳನ್ನೂ ಕೆಲಸಗಳನ್ನೂ ಮಾಡುವವರು, ಮೋಸದಿಂದಲೇ ಸಕಲ ವ್ಯವಹಾರಗಳನ್ನೂ ಮಾಡುವವರು, ಮೋಸದ ರಾಜನೀತಿಗಳನ್ನು ಮಾಡುವವರು, ಮೋಸಯುದ್ಧವನ್ನು ಮಾಡುವವರು, ಸೇವಕರಲ್ಲಿ ಅತ್ಯಂತ ಕ್ರೂರತೆಯಿಂದ ವರ್ತಿಸುವವರು, ಪಶುಗಳನ್ನು ಹಿಂಸಿಸುವವರು, ದುರುದ್ದೇಶದಿಂದಲೇ ಪ್ರಸನ್ನರಂತೆ ಕಾಣುತ್ತ ಇತರರ ವಾಕ್ಯಗಳನ್ನು ಚೆನ್ನಾಗಿ ಕೇಳುವವರು, ಚಪಲಬುದ್ಧಿಯುಳ್ಳವರು, ಮಾಯಾವಿಗಳು, ಮೂರ್ಖರು,

ಯೋ ಭಾರ್ಯಾಪುತ್ರಮಿತ್ರಾಣಿ ಬಾಲವೃದ್ಧಕೃಶಾತುರಾನ್ ।
ಭೃತ್ಯಾನತಿಥಿಬಂಧೂಂಶ್ಚ ತ್ಯಕ್ತ್ವಾಶ್ನಾತಿ ಬುಭುಕ್ಷಿತಾನ್ ॥ ೬೭ ॥
ಯಃ ಸ್ವಯಂ ಮೃಷ್ಟಮಶ್ನಾತಿ ವಿಪ್ರಾಯಾನ್ಯತ್ಪ್ರಯಚ್ಛತಿ ।
ವೃಥಾಪಾಕಃ ಸ ವಿಜ್ಞೇಯೋ ಬ್ರಹ್ಮವಾದಿವಿಗರ್ಹಿತಃ ॥ ೬೮ ॥
ನಿಯಮಾನ್ಸ್ವಯಮಾದಾಯ ಯೇ ತ್ಯಜಂತ್ಯಜಿತೇಂದ್ರಿಯಾಃ ।
ಯೇ ತಾಡಯಂತಿ ಗಾಂ ನಿತ್ಯಂ ವಾಹಯಂತಿ ಮುಹುರ್ಮುಹುಃ ॥೬೯॥
ದುರ್ಬಲಾನ್ನೈವ ಪುಷ್ಣಂತಿ ಪ್ರಣಷ್ಟಾರ್ಥಾನ್ದ್ವಿಷಂತಿ ಚ ।
ಪೀಡಯಂತ್ಯಭಿಚಾರೇಣ ಸಕ್ತಾನ್ವಾಹಯಂತಿ ಚ ॥ ೭೦ ॥
ತೇಷಾಮದತ್ವಾಚಾಶ್ನಂತಿ ಚಿಕಿತ್ಸಂತಿ ನ ರೋಗಿಣಃ ।
ಅಜಾನಿಕೋ ಮಾಹಿಷಿಕಃ ಸಮುದ್ರೀ ವೃಷಲೀಪತಿಃ ॥ ೭೧ ॥
ಹೀನವರ್ಣಾತ್ಮವೃತ್ತಿಶ್ಚ ವೈದ್ಯೋ ಧರ್ಮಧ್ವಜೀ ಚ ಯಃ ।
ಯಶ್ಚ ಶಾಸ್ತ್ರಮತಿಕ್ರಮ್ಯ ಸ್ವೇಚ್ಛಯೈವಾಹರೇತ್ಕರಂ ॥ ೭೨ ॥

---

ಮೋಸದ ಇಚ್ಛೆಯಿಂದ ವಿನೀತಭಾವವನ್ನು ತೋರಿಸುವವರು, ಪತ್ನೀ ಪುತ್ರ ಮಿತ್ರರನ್ನೂ, ಬಾಲವೃದ್ಧಕೃಶರಾಗಿ ಆತುರಗೊಂಡವರನ್ನೂ, ಸೇವಕರನ್ನೂ ಅತಿಥಿಬಂಧುಗಳನ್ನೂ ಹಸಿದಕಾಲದಲ್ಲಿ ತ್ಯಜಿಸಿ ತಾನೊಬ್ಬನೇ ಭೋಜನವನ್ನು ಮಾಡುವವನೂ ಪಾತಕಿಗಳಾಗುವರು.

೬೮. ಯಾವನು ತನಗಾಗಿ ಮೃಷ್ಟಾನ್ನವನ್ನುಮಾಡಿಸಿ ಅತಿಥಿಯಾದ ಬ್ರಾಹ್ಮಣನಿಗೆ ಕದನ್ನವನ್ನು ಕೊಡುವನೊ, ಅವನಿಗೆ ವೃಥಾಪಾಕನೆಂದು ಹೆಸರು. ಅವನನ್ನು ಬ್ರಹ್ಮವಾದಿಗಳು ಬಹುವಾಗಿ ನಿಂದಿಸುವರು.

೬೯–೭೩. ಯಾರು ತಾವೇ ನಿಯಮಗಳನ್ನು ಹಿಡಿದು ಇಂದ್ರಿಯಲೋಲು ಪತೆಯಿಂದ ಬಳಿಕ ಕೈಬಿಡುವರೊ, ಗೋವುಗಳನ್ನು ನಿತ್ಯವೂ ಹೆಚ್ಚಾಗಿ ಹೊಡೆ ಯುವರೊ, ಅವುಗಳ ಮೇಲೆ ಮತ್ತೆ ಮತ್ತೆ ಹೆಚ್ಚಾದ ಭಾರಗಳನ್ನು ಹೊರಿಸು ವರೊ, ದುರ್ಬಲರನ್ನು ಯಾರು ಪೋಷಿಸುವುದಿಲ್ಲವೊ, ಬಡವರಾಗಿ ಯಾರು ಇತರರನ್ನು ಕಂಡು ದ್ವೇಷಿಸುವರೊ, ಅಭಿಚಾರಿಕ ಕ್ರಿಯೆಗಳಿಂದ ಯಾರು ಇತರರನ್ನು ಪೀಡಿಸುವರೊ, ಗಾಯಗೊಂಡವರ ಕೈಯಲ್ಲಿ ಹೊರಿಸುವರೊ, ಅವರಿಗೆ ಕೊಡದೆ ತಾವೇ ತಿನ್ನುವರೊ, ಯಾರು ರೋಗಿಗಳಿಗೆ ಚಿಕಿತ್ಸೆಯನ್ನು ಮಾಡುವುದಿಲ್ಲವೊ, ಯಾರು ಮೇಕೆಗಳು, ಎಮ್ಮೆಗಳು, ಸಮುದ್ರಯಾನ ಮುಂತಾದುವುಗಳಿಂದ ಜೀವಿಸುವರೊ, ಯಾವನು ಶೂದ್ರ ಸ್ತ್ರೀ ಸಂಗವನ್ನು ಮಾಡುವನೊ, ಯಾವನು ಹೀನಜಾತಿಯ ವೃತ್ತಿಯಿಂದ ಜೀವನವನ್ನು ನಡೆಸು ವನೊ, ಯಾವನು ವೈದ್ಯವೃತ್ತಿಯನ್ನು ನಡೆಸುವನೊ, ಯಾವನು ತನ್ನ ಧರ್ಮ ಜೀವನವನ್ನು ಜನರಲ್ಲಿ ವ್ಯಕ್ತಪಡಿಸುವನೊ, ಯಾವರಾಜನು ಶಾಸ್ತ್ರನಿಯಮ

ಸದಾ ದಂಡರುಚಿರ್ಯಶ್ಚ ಯೋ ವಾ ದಂಡರುಚಿರ್ನಹಿ ।
ಉತ್ಕೋಚಕೈರಧಿಕೃತೈಸ್ತಸ್ಕರೈಶ್ಚ ಪ್ರಪೀಡ್ಯತೇ ।
ಯಸ್ಯ ರಾಜ್ಞಃ ಪ್ರಜಾರಾಷ್ಟ್ರೇ ಪಚ್ಯತೇ ನರಕೇಷು ಸಃ ॥ ೭೩ ॥
ಅಚೌರಂ ಚೌರವತ್ಪಶ್ಯೇಚ್ಚೌರಂ ವಾಚೌರರೂಪಿಣಂ ।
ಆಲಸ್ಯೋಪಹತೋ ರಾಜಾ ವ್ಯಸನೀ ನರಕಂ ವ್ರಜೇತ್ ॥ ೭೪ ॥
ಏವಮಾದೀನಿ ಚಾನ್ಯಾನಿ ಪಾಪಾನ್ಯಾಹುಃ ಪುರಾವಿದಃ ॥ ೭೫ ॥
ಯದ್ವಾ ತದ್ವಾ ಪರದ್ರವ್ಯಮಪಿ ಸರ್ಷಪಮಾತ್ರಕಂ ।
ಅಪಹೃತ್ಯ ನರಃ ಪಾಪೋ ನಾರಕೀ ನಾತ್ರ ಸಂಶಯಃ ॥ ೭೬ ॥
ಏವಮಾದ್ಯೈರ್ನರಃ ಪಾಪೈರುತ್ಕ್ರಾಂತ್ಯೈಃ ಸಮನಂತರಂ ।
ಶರೀರಂ ಯಾತನಾರ್ಥಾಯ ಪೂರ್ವಾಕಾರಮವಾಪ್ನುಯಾತ್ ॥ ೭೭ ॥
ತಸ್ಮಾತ್ತ್ರಿವಿಧಮಪ್ಯೇತನ್ನಾರಕೀಯಂ ವಿವರ್ಜಯೇತ್ ।
ಸದಾಶಿವಂ ಚ ಶರಣಂ ವ್ರಜೇತ್ಸಚ್ಛ್ರದ್ಧಯಾ ಯುತಃ ॥ ೭೮ ॥

---

ವನ್ನತಿಕ್ರಮಿಸಿ ಸ್ವೇಚ್ಛೆಯಾಗಿ ತೆರಿಗೆಗಳನ್ನು ಹಾಕುವನೊ, ಯಾವನು ಯಾವಾಗಲೂ ದಂಡವನ್ನೇ ಪ್ರಯೋಗಿಸುವನೊ, ಯಾವನು ಉಚಿತ ವ್ಯವಹಾರಗಳಲ್ಲಿಯೂ ದಂಡವನ್ನು ಪ್ರಯೋಗಿಸುವುದಿಲ್ಲವೊ, ಯಾವ ರಾಜನ ರಾಜ್ಯದಲ್ಲಿ ಪ್ರಜೆಗಳು ಅಧಿಕೃತಗಳಾದ ಲಂಚಗಳಿಂದಲೂ, ಚೋರರಿಂದಲೂ ಪೀಡಿತರಾಗಿರುವರೊ, ಅವರೆಲ್ಲರೂ ನರಕಗಳಲ್ಲಿ ಬಹುವಿಧಗಳಾದ ಯಾತನೆಗಳನ್ನನುಭವಿಸುವರು.

೭೪–೭೫. ಋಜುಮನುಷ್ಯನನ್ನು ಚೋರನೆಂದು ಹಿಂಸಿಸಿ, ಚೋರನನ್ನು ಒಳ್ಳೆಯವನೆಂದು ತಿಳಿದು, ಯಾವಾಗಲೂ ನಿದ್ರಾಲಸ್ಯಯುಕ್ತನಾಗಿ ಸ್ತ್ರೀದ್ಯೂತ್ಯಾದಿ ವ್ಯಸನಗಳಲ್ಲಿ ನಿರತನಾಗಿರುವ ರಾಜನು ನರಕಭಾಗಿಯಾಗುವನು. ಇವೇ ಮೊದಲಾದ ಅನೇಕಕೃತ್ಯಗಳನ್ನು ಪೂರ್ವಿಕರು ಪಾಪಗಳೆಂದು ಹೇಳಿರುವರು.

೭೬. ಯಾವ ಕಾರಣದಿಂದಲಾದರೂ ಒಂದು ಸಾಸಿವೆಯ ಕಾಳಿನಷ್ಟು ಪರದ್ರವ್ಯವನ್ನು ಅಪಹರಿಸಲು ಪಾಪಿಯಾದ ಆ ಮನುಷ್ಯನು ನರಕವನ್ನು ಹೊಂದುವನೆಂಬುದರಲ್ಲಿ ಸಂಶಯವಿಲ್ಲ.

೭೭. ಇವೇ ಮೊದಲಾದ ಪಾಪಗಳು ಫಲೋನ್ಮುಖಗಳಾಗಲು ಈ ದೇಹಪಾತವಾದಮೇಲೆ ಆ ಪಾಪ ಫಲಗಳನ್ನನುಭವಿಸುವುದಕ್ಕಾಗಿ ಇದರ ಆಕಾರದಿಂದೊಡಗೂಡಿದ ಮತ್ತೊಂದು ಯಾತನಾದೇಹವನ್ನು ಹೊಂದುವನು.

೭೮. ಆದುದರಿಂದ ಕಾಯಿಕ, ವಾಚಿಕ ಮತ್ತು ಮಾನಸಿಕಗಳೆಂಬ ಮೂರು ವಿಧಗಳಾದ ನರಕಗಾಮಿಗಳಾದ ಪಾಪಗಳನ್ನೂ ತ್ಯಜಿಸಬೇಕು. ಉತ್ತಮವಾದ ಶ್ರದ್ಧೆಯಿಂದ ಕೂಡಿ ಸದಾಶಿವನ ಪಾದಪದ್ಮಗಳನ್ನು ಶರಣುಹೊಗಬೇಕು.

**ನಮಸ್ಕಾರಃ ಸ್ತುತಿಃ ಪೂಜಾ ನಾಮಸಂಕೀರ್ತನಂ ತಥಾ ।**
**ಸಂಪರ್ಕಾತ್ಕೌತುಕಾಲ್ಲೋಭಾನ್ನ ತಸ್ಯ ವಿಫಲಂ ಭವೇತ್ ॥ ೭೯ ॥**

**ಕರಂಧಮ ಉವಾಚ :—**

**ಸಂಕ್ಷೇಪಾಚ್ಛಿವಪೂಜಾಯಾ ವಿಧಾನಂ ವಕ್ತುಮರ್ಹಸಿ ।**
**ಕೃತೇನ ಯೇನ ಮನುಜಃ ಶಿವಪೂಜಾಫಲಂ ಲಭೇತ್ ॥ ೮೦ ॥**

**ಮಹಾಕಾಲ ಉವಾಚ :—**

**ಪ್ರಾತರ್ಮಧ್ಯಾಹ್ನಸಾಯಾಹ್ನೇ ಶಂಕರಂ ಸರ್ವದಾ ಭಜೇತ್ ।**
**ದರ್ಶನಾತ್ಸ್ಪರ್ಶನಾನ್ಮರ್ತ್ಯಃ ಕೃತಕೃತ್ಯೋ ಭವೇತ್ಸ್ಫುಟಂ ॥ ೮೧ ॥**
**ಆದೌ ಸ್ನಾನಂ ಪ್ರಕುರ್ವೀತ ಭಸ್ಮಸ್ನಾನಮಥಾಪಿ ವಾ ।**
**ಆಪದ್ಗತಃ ಕಂಠಸ್ನಾನಂ ಮಂತ್ರಸ್ನಾನಮಥಾಪಿ ವಾ ॥ ೮೨ ॥**
**ಆವಿಕಂ ಪರಿದಧ್ಯಾಚ್ಚ ತತೋ ವಾಸಃ ಸಿತಂ ಚ ವಾ ।**
**ಧಾತುರಕ್ತಮಥೋ ನವ್ಯಂ ಮಲಿನಂ ಸಂಧಿತಂ ನ ಚ ॥ ೮೩ ॥**

---

೭೯. ನಮಸ್ಕಾರ, ಸ್ತೋತ್ರ, ಪೂಜೆ, ನಾಮಪಾರಾಯಣ— ಇವುಗಳನ್ನು ಸಹವಾಸದಿಂದಲಾಗಲಿ, ಕೌತುಕದಿಂದಲಾಗಲಿ, ಲೋಭದಿಂದಲಾಗಲಿ ಮಾಡಲು ನಿಷ್ಫಲವಾಗುವುದಿಲ್ಲ. ಆದುದರಿಂದ ಮೋಕ್ಷಹೇತುಗಳಾದ ಈ ಎಲ್ಲ ಸತ್ಕರ್ಮಗಳನ್ನು ಎಲ್ಲರೂ ಮಾಡಲೇಬೇಕು.''

೮೦. ಕರಂಧಮನು ಕೇಳುತ್ತಾನೆ :—'' ಯಾವುದನ್ನು ಮಾಡುವುದರಿಂದ ಮನುಷ್ಯನಿಗೆ ಶಿವಪೂಜೆಯ ಫಲವು ಲಭಿಸುವುದೊ, ಅಂತಹ ಪೂಜೆಯನ್ನು ಸಂಕ್ಷೇಪವಾಗಿ ನನಗೆ ವಿವರಿಸು.''

೮೧. ಮಹಾಕಾಲನು ಹೇಳುತ್ತಾನೆ:—ಪ್ರಾತಃಕಾಲ, ಮಧ್ಯಾಹ್ನ, ಸಾಯಂಕಾಲಗಳೆಂಬ ತ್ರಿಸಂಧ್ಯೆಗಳಲ್ಲಿಯೂ, ಇತರ ಸಕಲ ಕಾಲಗಳಲ್ಲಿಯೂ ಶಂಕರನನ್ನು ಭಜಿಸಬೇಕು. ಶಿವಲಿಂಗದ ದರ್ಶನ ಸ್ಪರ್ಶಗಳಿಂದ ಮನುಷ್ಯನು ಖಂಡಿತವಾಗಿಯೂ ಕೃತಕೃತ್ಯನಾಗುವನು.

೮೨. ಮೊದಲು ನೀರಿನಿಂದಾಗಲಿ ಭಸ್ಮದಿಂದಾಗಲಿ ಸರ್ವಾಂಗಸ್ನಾನವನ್ನು ಮಾಡಬೇಕು. ರೋಗಾದಿಗಳಿಂದ ಪೀಡಿತನಾಗಿದ್ದಲ್ಲಿ ಅಥವಾ ಇತರ ಆಪತ್ತುಗಳಿಗೆ ಸಿಕ್ಕಿದ್ದಲ್ಲಿ ಆಕಂಠಸ್ನಾನವನ್ನೂ, ಕಡೆಯ ಪಕ್ಷದಲ್ಲಿ ಮಂತ್ರಸ್ನಾನವನ್ನಾದರೂ ಮಾಡಲೇಬೇಕು.

೮೩. ಉಣ್ಣೆಯ ಬಟ್ಟೆಯನ್ನಾಗಲಿ, ಬೆಳ್ಳಗಿರುವ ಹತ್ತಿಯ ಬಟ್ಟೆಯನ್ನಾಗಲಿ ಉಟ್ಟುಕೊಳ್ಳಬೇಕು. ಗೈರಿಕಾದಿ ಧಾತುಗಳಿಂದ ರಕ್ತವಾದುದನ್ನೂ, ನೂತನ ವಸ್ತ್ರವನ್ನೂ, ಕೊಳಕು ಬಟ್ಟೆಯನ್ನೂ, ಹರಿದು ಹೊಲಿದುದನ್ನೂ ಉಪಯೋಗಿಸಬಾರದು.

ಉತ್ತರೀಯಂ ಚ ಸಂದಧ್ಯಾದ್ವಿನಾ ತನ್ನಿಷ್ಫಲಾರ್ಚನಂ ।
ಭಸ್ಮತ್ರಿಪುಂಡ್ರಧಾರೀ ಚ ಲಲಾಟೇ ಹೃದಿ ಚಾಂಸಯೋಃ ॥ ೮೪ ॥
ಪೂಜಯೇದ್ಯೋ ಮಹಾದೇವಂ ಪ್ರೀತಃ ಪಶ್ಯತಿ ತಂ ಮುಹುಃ ।
ಸರ್ವದೋಷಾನ್ಬಹಿಃಕ್ಷಿಪ್ಯ ಶಿವಾಯತನಮಾವಿಶೇತ್ ॥ ೮೫ ॥
ಪ್ರವಿಶ್ಯ ಚ ಪ್ರಣಮ್ಯೇಶಂ ತತೋ ಗರ್ಭಗೃಹಂ ವಿಶೇತ್ ।
ಪಾಣೀ ಪ್ರಕ್ಷಾಲ್ಯ ತಚ್ಚಿತ್ತೋ ನಿರ್ಮಾಲ್ಯಮಪರೋಪಯೇತ್ ॥ ೮೬ ॥
ಯೇನ ರುದ್ರಾಯನೇ ಭಕ್ತ್ಯಾ ಕುರುತೇ ಮಾರ್ಜನಕ್ರಿಯಾಂ ।
ತಸ್ಮಾನ್ಮಾರ್ಜಯತೇ ತ್ವೇವಂ ಸ್ಥಾಣುನೈತತ್ಪರಸ್ಪರಂ ॥ ೮೭ ॥
ರುದ್ರಭಕ್ತ್ಯಾ ಚ ಸಂತಿಷ್ಠೇನ್ಮಾಲಿನ್ಯಂ ಮಾರ್ಜಯೇತ್ತತಃ ।
ಭಕ್ತಿರ್ದೇವಸ್ಯ ತಿಷ್ಠೇನ್ನ ಮಾಲಿನ್ಯಂ ಮಾರ್ಜತಃ ಸದಾ ॥ ೮೮ ॥
ಗಡುಕಾನ್ಪೂರಯೇತ್ಪಶ್ಚಾನ್ನಿರ್ಮಲೇನ ಜಲೇನ ವೈ ।
ಗಡುಕಾಸ್ತು ಸಮಾಃ ಸರ್ವೇ ಸರ್ವೇ ಚ ಶುಭದರ್ಶನಾಃ ॥ ೮೯ ॥

---

೮೪. ಶುಭ್ರವಾದ ಉತ್ತರೀಯವನ್ನೂ ಹೊದೆಯಬೇಕು. ಅದಿಲ್ಲದಿದ್ದರೆ ಪೂಜೆಯು ನಿಷ್ಫಲವಾಗುವುದು. ಬಳಿಕ ಹಣೆಯಲ್ಲಿಯೂ, ಹೃದಯದಲ್ಲಿಯೂ, ಭುಜಗಳಲ್ಲಿಯೂ ಭಸ್ಮದ ತ್ರಿಪುಂಡ್ರಗಳನ್ನೂ ಧರಿಸಬೇಕು.

೮೫. ಇಂತು ಮಾಡಿ ಯಾವನು ಮಹಾದೇವನನ್ನು ಪೂಜಿಸುವನೊ, ಆತನಲ್ಲಿ ದೇವರು ಹೆಚ್ಚು ಪ್ರೀತಿಯುಳ್ಳವನಾಗುವನು. ಮತ್ತು ಸಕಲ ದೋಷಗಳನ್ನೂ ಹೊರಗೆ ಬಿಸುಟು ಶಿವಮಂದಿರವನ್ನು ಪ್ರವೇಶಿಸಬೇಕು.

೮೬. ಹೀಗೆ ಪ್ರವೇಶಿಸಿ ನಮಸ್ಕಾರವನ್ನು ಮಾಡಿ ಬಳಿಕ ಗರ್ಭಗೃಹವನ್ನು ಸೇರಬೇಕು. ಆತನನ್ನೇ ಧ್ಯಾನಿಸುತ್ತ ಕೈಗಳನ್ನು ತೊಳೆದುಕೊಂಡು ಲಿಂಗದ ಮೇಲಿರುವ ನಿರ್ಮಾಲ್ಯವನ್ನು ತೆಗೆಯಬೇಕು.

೮೭. ಭಕ್ತನು ಎಷ್ಟು ಭಕ್ತಿಯಿಂದ ಲಿಂಗದ ನಿರ್ಮಾಲ್ಯ ಮಾರ್ಜನವನ್ನು ಮಾಡುವನೊ, ಅದಕ್ಕನುಗುಣವಾಗಿ ಶಿವನೂ ಭಕ್ತನ ಪಾಪಗಳನ್ನೂ ಮಾರ್ಜನ ಮಾಡುವನು. ಇಂತು ಪರಸ್ಪರ ಸಂಬಂಧವಿರುವುದು.

೮೮. ಆದುದರಿಂದ ಉತ್ತಮವಾದ ರುದ್ರಭಕ್ತಿಯಿಂದ ನಿಂತು ಮಾಲಿನ್ಯವನ್ನು ತೊಳೆದುಬಿಡಬೇಕು. ಭಕ್ತಿಯಿಂದ ಮಾರ್ಜನಮಾಡಲು ಮಾಲಿನ್ಯವು ಸ್ವಲ್ಪವೂ ದೇವದೇವನಲ್ಲಿ ಕಾಣಬಾರದು.

೮೯. ಆಮೇಲೆ ಕುಂಭಗಳನ್ನು ನಿರ್ಮಲವಾದ ಜಲದಿಂದ ತುಂಬಿಕೊಳ್ಳಬೇಕು. ಆ ಕುಂಭಗಳೆಲ್ಲವೂ ಒಂದೇ ಸಮನಾಗಿಯೂ ಸುಂದರವಾಗಿಯೂ ಇರಬೇಕು.

ನಿರ್ವ್ರಣಾಃ ಸೌಮ್ಯರೂಪಾಶ್ಚ ಸರ್ವೇ ಚೋದಕಪೂರಿತಾಃ ।
ವಸ್ತ್ರಪೂತಜಲೈಃ ಪೂರ್ಣಾಃ ಗಂಧಧೂಪೈಶ್ಚ ವಾಸಿತಾಃ ॥ ೯೦ ॥
ಕ್ಷಾಲಿತಾಃ ಪೂರಿತಾ ನೀತಾಃ ಷಡಕ್ಷರಜಪೇನ ಚ ।
ಗಡುಕಾಷ್ಟಾಶತಂ ಕುರ್ಯಾದಥವಾಪ್ಯಷ್ಟವಿಂಶತಿಃ ॥ ೯೧ ॥
ಅಷ್ಟಾದಶಾಪಿ ಚತುರಸ್ತತೋ ನ್ಯೂನಂ ನ ಕಾರಯೇತ್ ।
ಪಯೋ ದಧಿ ಘೃತಂ ಚೈವ ಕ್ಷೌದ್ರಮಿಕ್ಷುರಸಂ ತಥಾ ॥ ೯೨ ॥
ಏವಂ ಸರ್ವಂ ಚ ತದ್ದ್ರವ್ಯಂ ವಾಮತಃ ಸಂನ್ಯಸೇದ್ಭವಾತ್ ।
ತತೋ ಬಹಿರ್ವಿನಿಷ್ಕ್ರಮ್ಯ ಪೂಜಯೇತ್ಪ್ರತಿಹಾರಕಾನ್ ॥ ೯೩ ॥
ಸರ್ವೇಷಾಂ ವಾಚಕಾ ಮಂತ್ರಾಃ ಕಥ್ಯಂತೇಽತಃ ಪರಂ ಕ್ರಮಾತ್ ॥೯೪॥
ಓಂ ಗಂ ಗಣಪತಯೇ ನಮಃ ಓಂ ಕ್ಷಂ ಕ್ಷೇತ್ರಪಾಲಾಯ ನಮಃ ।
ಓಂ ಗಂ ಗುರುಭ್ಯೋ ನಮಃ (ಇತಿ ಆಕಾಶೇ) ।
ಓಂ ಕೌಂ ಕುಲದೇವ್ಯೈನಮಃ ಓಂ ನಂದಿನೇ ನಮಃ ।
ಓಂ ಮಹಾಕಾಲಾಯ ನಮಃ ಓಂ ಧಾತ್ರೇ ವಿಧಾತ್ರೇ ನಮಃ ॥
ತತಃ ಪ್ರವಿಶ್ಯ ಲಿಂಗಾಚ್ಚ ಕಿಂಚಿದ್ದಕ್ಷಿಣತಃ ಶುಚಿಃ ।
ಉದಙ್ಮುಖಃ ಕ್ಷಣಂ ಧ್ಯಾಯೇತ್ಸಮಕಾಯಾಸನಸ್ಥಿತಃ ॥ ೯೫ ॥

---

೯೦. ಅವುಗಳಿಗೆ ಏಟು ಬಿದ್ದಿರಬಾರದು, ಮತ್ತು ಸೌಮ್ಯರೂಪವುಳ್ಳ ವಾಗಿಯೂ, ವಸ್ತ್ರಪೂತ ಜಲದಿಂದ ತುಂಬಿದವುಗಳಾಗಿಯೂ, ಗಂಧಧೂಪಾದಿ ವಾಸನ ದ್ರವ್ಯಗಳಿಂದ ಕೂಡಿದುವಾಗಿಯೂ ಇರಬೇಕು.

೯೧-೯೨. ಅವುಗಳನ್ನು 'ಓಂ ನಮಃ ಶಿವಾಯ' ಎಂಬ ಷಡಕ್ಷರ ಮಂತ್ರದ ಜಪದೊಡನೆ ತೊಳೆದು ನೀರನ್ನು ತುಂಬಿ ದೇವಾಲಯಕ್ಕೆ ತರಬೇಕು. ಇಂತು ಒಂದು ನೂರ ಎಂಟು ಘಟಗಳನ್ನಾಗಲಿ, ಇಪ್ಪತ್ತೆಂಟನ್ನಾಗಲಿ, ಕಡೆಯ ಪಕ್ಷ ಹದಿನೆಂಟನ್ನಾದರೂ ಶೇಖರಿಸಬೇಕು. ಅಷ್ಟಕ್ಕೆ ಕಡಮೆಯಾಗಬಾರದು. ಅಂತೆಯೇ ಹಾಲು, ಮೊಸರು, ತುಪ್ಪ, ಜೇನುತುಪ್ಪ, ಕಬ್ಬಿನ ಹಾಲುಗಳನ್ನು ಅಣಿಮಾಡಿಕೊಳ್ಳಬೇಕು.

೯೩-೯೪. ಇಂತು ಸಕಲ ಪೂಜಾಸಂಭಾರಗಳನ್ನೂ ಶಿವಲಿಂಗದ ಎಡ ಭಾಗದಲ್ಲಿ ಶೇಖರಿಸಿಡಬೇಕು. ಬಳಿಕ ಹೊರಕ್ಕೆ ಬಂದು ಶಿವನ ಪ್ರತಿಹಾರಕ ರನ್ನು ಮೊದಲು ಪೂಜಿಸಬೇಕು. ಇವರೆಲ್ಲರಿಗೂ ಹೇಳಬೇಕಾದ ಮಂತ್ರಗಳನ್ನು ಮುಂದೆ ಕ್ರಮವಾಗಿ ಹೇಳುವೆನು.

೯೫. 'ಓಂ ಗಂ ಗಣಪತಯೇ ನಮಃ, ಓಂ ಕ್ಷಂ ಕ್ಷೇತ್ರಪಾಲಾಯ ನಮಃ, ಓಂ ಗಂ ಗುರುಭ್ಯೋ ನಮಃ, ಓಂ ಕೌಂ ಕುಲದೇವ್ಯೈ ನಮಃ, ಓಂ ನಂದಿನೇ ನಮಃ, ಓಂ ಮಹಾಕಾಲಾಯ ನಮಃ, ಓಂ ಧಾತ್ರೇ ವಿಧಾತ್ರೇ ನಮಃ'

**ದರ್ಭಾದಿಭಿಃ ಪರಿವೃತಂ ಮಧ್ಯಸದ್ಮಾರ್ಕಮಂಡಲಂ ।**
**ಸೋಮಮಂಡಲಮಧ್ಯಸ್ಥಂ ಧ್ಯಾಯೇದ್ವೈ ವಹ್ನಿಮಂಡಲಂ ॥ ೯೬ ॥**
**ತನ್ಮಧ್ಯೇ ವಿಶ್ವರೂಪಂ ಚ ವಾಮಾದ್ಯಷ್ಟಾದಿಶಕ್ತಿಕಂ ।**
**ಪಂಚವಕ್ತ್ರಂ ದಶಭುಜಂ ತ್ರಿನೇತ್ರಂ ಚಂದ್ರಭೂಷಿತಂ ॥ ೯೭ ॥**
**ವಾಮಾಂಕಗಿರಿಜಂ ದೇವಂ ಧ್ಯಾಯೇತ್ಸಿದ್ಧೈಃ ಸ್ತುತಂ ಮುಹುಃ ।**
**ತತಃ ಪೂರ್ವಂ ಪ್ರದದ್ಯಾಚ್ಚ ಪಾದ್ಯಾರ್ಘ್ಯಂ ಶಂಭವೇ ನೃಪ ॥ ೯೮ ॥**
**ಪಾನೀಯಮಕ್ಷತಾ ದರ್ಭಾ ಗಂಧಪುಷ್ಪಂ ಸಸರ್ಪಿಷಂ ।**
**ಕ್ಷೀರಂ ದಧಿ ಮಧು ಪುನರ್ನವಾಂಗೋಽರ್ಘ್ಯಃ ಪ್ರಕೀರ್ತಿತಃ ॥ ೯೯ ॥**
**ತತಃ ಶ್ರದ್ಧಾರ್ದ್ರಚಿತ್ತಸ್ಯ ಸ್ನಾನಂ ಲಿಂಗಸ್ಯ ಚಾಚರೇತ್ ।**
**ಗೃಹೀತ್ವಾ ಗಡುಕಂ ಪೂರ್ವಂ ಮಲಸ್ನಾನಂ ಸಮಾಚರೇತ್ ॥ ೧೦೦ ॥**
**ಅರ್ಘೇನ ಸ್ನಾಪಯೇತ್ಪೂರ್ವಂ ಕುರ್ಯಾಚ್ಚ ಮಲಘರ್ಷಣಂ ।**
**ಸರ್ವೇಣ ಸ್ನಾಪಯೇತ್ಪಶ್ಚಾತ್ಪೂಜಯೇತ್ಸ್ನಾಪಯೇತ್ತತಃ ॥ ೧೦೧ ॥**
**ಪ್ರಣಮ್ಯ ಚ ತತೋ ಭಕ್ತ್ಯಾ ಸ್ನಾಪಯೇನ್ಮೂಲಮಂತ್ರತಃ ॥ ೧೦೨ ॥**

---

ಎಂಬುದೇ ಪ್ರತಿಹಾರಕ ಪೂಜೆಯ ಮಂತ್ರವು. ಬಳಿಕ ಒಳಹೊಕ್ಕು ಶುಚಿಯಾಗಿ ಶಿವಲಿಂಗದ ಬಲಭಾಗದಲ್ಲಿ ಕುಳಿತು ಉತ್ತರ ಮುಖನಾಗಿ ಸಮಕಾಯವುಳ್ಳವನಾಗಿ ಒಂದು ಕ್ಷಣಕಾಲ ಶಿವನನ್ನು ಧ್ಯಾನಿಸಬೇಕು.

೯೬–೯೯. ದರ್ಭಾದಿ ದ್ರವ್ಯಗಳಿಂದ ಸುತ್ತುವರೆಯಲ್ಪಟ್ಟ ಪ್ರದೇಶದ ಮಧ್ಯದಲ್ಲಿ ಸೂರ್ಯಮಂಡಲವನ್ನೂ ಅದರ ಮಧ್ಯೆ ಚಂದ್ರಮಂಡಲವನ್ನೂ ಅದರ ಮಧ್ಯೆ ಅಗ್ನಿಮಂಡಲವನ್ನೂ ಧ್ಯಾನಿಸಬೇಕು. ಅದರ ಮಧ್ಯದಲ್ಲಿ ವಾಮಾದ್ಯಷ್ಟ ಆದಿಶಕ್ತಿಗಳಿಂದೊಡಗೂಡಿದವನೂ, ಪಂಚವಕ್ತ್ರನೂ, ಹತ್ತು ಭುಜಗಳುಳ್ಳವನೂ, ಫಾಲನೇತ್ರನೂ, ಚಂದ್ರಶೇಖರನೂ, ಎಡತೊಡೆಯಲ್ಲಿ ಗೌರಿಯನ್ನು ಪಡೆದಿರುವವನೂ, ಸಿದ್ಧಚಾರಣರಿಂದ ಹೊಗಳಿಸಿಕೊಳ್ಳಲ್ಪಡುವವನೂ, ವಿಶ್ವರೂಪಿಯೂ ಆದ ಸದಾಶಿವನನ್ನು ಧ್ಯಾನಿಸಬೇಕು. ಎಲೈ ರಾಜನೆ! ಬಳಿಕ ಮೊದಲು ಪಾದ್ಯವನ್ನೂ ಅರ್ಘ್ಯವನ್ನೂ ಸಮರ್ಪಿಸಬೇಕು. ಜಲವು, ಅಕ್ಷತೆ, ದರ್ಭೆ, ಗಂಧ, ಪುಷ್ಪ, ತುಪ್ಪ, ಹಾಲು, ಮೊಸರು, ಜೇನುತುಪ್ಪ—ಈ ಒಂಭತ್ತು ದ್ರವ್ಯಗಳಿಂದ ಕೂಡಿದುದಕ್ಕೆ ಅರ್ಘ್ಯವೆಂದು ಹೆಸರು.

೧೦೦. ಬಳಿಕ ತನ್ನ ಶ್ರದ್ಧೆಯಿಂದ ಶಿವನನ್ನು ಆರ್ದ್ರಚಿತ್ತನನ್ನಾಗಿ ಮಾಡಿ ಲಿಂಗಕ್ಕೆ ಸ್ನಾನವನ್ನು ಮಾಡಿಸಬೇಕು. ಮೊದಲು ಒಂದು ಕುಂಭವನ್ನು ತೆಗೆದುಕೊಂಡು ಮಲಸ್ನಾನವನ್ನು ಮಾಡಿಸಬೇಕು.

೧೦೧–೧೦೨. ಅರ್ಘ್ಯಕೊಡದ ನೀರಿನಿಂದ ಸ್ನಾನಮಾಡಿಸಿ ಲಿಂಗವನ್ನು ಚೆನ್ನಾಗಿ ತೊಳೆದು ಮತ್ತೆ ಮಿಕ್ಕ ನೀರಿನಿಂದ ಸ್ನಾನಮಾಡಿಸಬೇಕು. ಬಳಿಕ

ಓಂ ಹೂಂ ವಿಶ್ವಮೂರ್ತಯೇ ಶಿವಾಯ ನಮಃ ।
(ಇತಿ ದ್ವಾದಶಾಕ್ಷರೋ ಮೂಲಮಂತ್ರಃ)
ವಾರಿಕ್ಷೀರದಧಿಕ್ಷೌದ್ರ ಘೃತೇನೇಕ್ಷುರಸೇನ ಚ ।
ಸ್ನಾಪಯೇನ್ಮೂಲಮಂತ್ರೇಣ ಜಲಧೂಪಾರ್ಚನಾತ್ಪೃಥಕ್ ॥ ೧೦೩ ॥
ಗಡುಕೈಃ ಸ್ನಾಪಯೇತ್ಸರ್ವೈಃ ಸ್ನಾತಂ ಗಂಧೈರ್ವಿರೂಕ್ಷಯೇತ್ ॥೧೦೪॥
ವಿರೂಕ್ಷಿತಂ ತತಃ ಸ್ನಾಪ್ಯ ಶ್ರೀಖಂಡೇನ ವಿಲೇಪಯೇತ್ ।
ಪೂಜಯೇದ್ವಿವಿಧೈಃ ಪುಷ್ಪೈರ್ವಿಧಿನಾ ಯೇನ ತಚ್ಛೃಣು ॥ ೧೦೫ ॥

(ಆಗ್ನೇಯ ಪಾದೇ) ಓಂ ಧರ್ಮಾಯ ನಮಃ ।
(ನೈರ್ಋತಕೇ) ಓಂ ಜ್ಞಾನಾಯ ನಮಃ ।
(ವಾಯವ್ಯೇ) ಓಂ ವೈರಾಗ್ಯಾಯ ನಮಃ ।
(ಈಶಾನ ಪಾದೇ) ಓಂ ಐಶ್ವರ್ಯಾಯ ನಮಃ ।
(ಪೂರ್ವಪಾದೇ) ಓಂ ಅಧರ್ಮಾಯ ನಮಃ ।
(ದಕ್ಷಿಣೇ) ಓಂ ಅಜ್ಞಾನಾಯ ನಮಃ ।
(ಪಶ್ಚಿಮೇ) ಓಂ ಅವೈರಾಗ್ಯಾಯ ನಮಃ ।
(ಉತ್ತರೇ) ಓಂ ಅನೈಶ್ವರ್ಯಾಯ ನಮಃ ॥
ಓಂ ಅನಂತಾಯ ನಮಃ ಓಂ ಪದ್ಮಾಯ ನಮಃ ।
ಓಂ ಅರ್ಕಮಂಡಲಾಯ ನಮಃ ।
ಓಂ ಸೋಮಮಂಡಲಾಯ ನಮಃ ।
ಓಂ ವಹ್ನಿಮಂಡಲಾಯನಮಃ ।
ಓಂ ವಾಮಾಜ್ಯೇಷ್ಠಾದಿಪಂಚಮಂತ್ರಶಕ್ತಿಭ್ಯೋ ನಮಃ ।
ಓಂ ಪರಮಪ್ರಕೃತ್ಯೈದೇವ್ಯೈ ನಮಃ ।

---

ಪೂಜಿಸಿ ಮತ್ತೆ ಅಭಿಷೇಕವನ್ನು ಮಾಡಿಸಬೇಕು. ಇಂತು ಭಕ್ತಿಯಿಂದ ನಮಸ್ಕರಿಸಿ ಮೂಲಮಂತ್ರದೊಡನೆ ಅಭಿಷೇಚಿಸಬೇಕು.

೧೦೩–೧೦೪. 'ಓಂ ಹೂಂ ವಿಶ್ವಮೂರ್ತಯೇ ಶಿವಾಯ ನಮಃ' ಎಂಬ ದ್ವಾದಶಾಕ್ಷರ ಮೂಲಮಂತ್ರವನ್ನುಚ್ಚರಿಸುತ್ತ ಜಲ, ಹಾಲು, ಮೊಸರು, ಕಬ್ಬಿನರಸಗಳಿಂದ ಸ್ನಾನಮಾಡಿಸಿ ಧೂಪಾರ್ಚನೆಯನ್ನು ಮಾಡಬೇಕು. ಇಂತು ಎಲ್ಲ ಕುಂಭಗಳ ನೀರಿನಿಂದ ಅಭಿಷೇಕವನ್ನು ಮಾಡಿ ಗಂಧದಿಂದ ಲೇಪನವನ್ನು ಮಾಡಬೇಕು.

೧೦೫. ಬಳಿಕ ಲೇಪಿತ ಲಿಂಗವನ್ನು ಮತ್ತೆ ತೊಳೆದು ಶ್ರೀಖಂಡಲೇಪನವನ್ನು ಮಾಡಿ ವಿವಿಧ ಪುಷ್ಪಗಳಿಂದ ವಿಧ್ಯುಕ್ತ ರೀತಿಯಲ್ಲಿ ಪೂಜಿಸಬೇಕು. ಅದರ ಮಂತ್ರಗಳನ್ನು ಹೇಳುವೆನು.

**ಓಂ ಈಶಾನ ತತ್ಪುರುಷಾಘೋರವಾಮದೇವಸದ್ಯೋಜಾತ ಪಂಚ ವಕ್ತ್ರಾಯ ರುದ್ರಸಾಧ್ಯವಸ್ವಾದಿತ್ಯವಿಶ್ವೇದೇವಾದಿದೇವ ವಿಶ್ವರೂಪಾಯ ಅಂಡಜ ಸ್ವೇದಜೋದ್ಭಿಜ್ಜ ಜರಾಯುಜರೂಪಸ್ಥಾವರಜಂಗಮ ಮೂರ್ತಯೇ ಪರಮೇಶ್ವರಾಯ ಓಂ ಹೂಂ ವಿಶ್ವಮೂರ್ತಯೇ ಶಿವಾಯ ನಮಸ್ತ್ರಿಶೂಲಧನುಃ ಖಡ್ಗಕಪಾಲದಂಡಕುಠಾರೇಭ್ಯಃ ॥ ೧೦೬ ॥**

**ತತೋ ಜಲಾಧಾರಮುಖೇ ಚಂಡೀಶ್ವರಾಯ ನಮಃ ।**
**ಏವಂ ಸಂಪೂಜ್ಯ ವಿಧಿವತ್ತತೋಽರ್ಘ್ಯಂ ಸನ್ನಿವೇಶಯೇತ್ ॥ ೧೦೭ ॥**
**ಪಾನೀಯಮಕ್ಷತಾಃ ಪುಷ್ಪಮೇತೈರ್ಯುಕ್ತಂ ಫಲೋತ್ತಮೈಃ ।**
**ಗೃಹಾಣಾರ್ಘ್ಯಂ ಮಹಾದೇವ ಪೂಜಾಸಂಪೂರ್ತಿಹೇತವೇ ॥ ೧೦೮ ॥**
**ಅರ್ಘ್ಯಾದನಂತರಂ ಶಕ್ತಃ ಪೂಜಯೇದ್ವಸುಪೂಜಯಾ ।**
**ಧೂಪಂ ದೀಪಂ ಚ ನೈವೇದ್ಯಂ ಕ್ರಮಾತ್ಪಶ್ಚಾನ್ನಿವೇಶಯೇತ್ ॥ ೧೦೯ ॥**
**ಘಂಟಾಂ ಚ ವಾದಯೇತ್ತತ್ರ ತತೋ ನೀರಾಜನಂ ಚರೇತ್ ।**
**ಭ್ರಾಮಯೇದ್ದೇವದೇವಸ್ಯ ಶಂಖವಾದಿತ್ರ ನಿಸ್ವನೈಃ ॥ ೧೧೦ ॥**
**ನೀರಾಜನಂ ಚ ಯಃ ಪಶ್ಯೇದ್ದೇವದೇವಸ್ಯ ಶೂಲಿನಃ ।**
**ಸ ಮುಚ್ಯೇತ್ಪಾತಕೈಃ ಸರ್ವೈಃ ಕಿಂ ಪುನರ್ಯಃ ಕರಿಷ್ಯತಿ ॥ ೧೧೧ ॥**

---

೧೦೬–೧೦೭. 'ಓಂ ಧರ್ಮಾಯನಮಃ......ಚಂಡೀಶ್ವರಾಯನಮಃ' ಎಂಬ ನಾಮದವರೆಗೂ ಮೇಲೆ ಮೂಲದಲ್ಲಿರುವ ಮಂತ್ರಗಳನ್ನುಚ್ಚರಿಸಿಕೊಂಡು ವಿಧಿವತ್ತಾಗಿ ಪುಷ್ಪಪೂಜೆಯನ್ನು ಮಾಡಿ ಬಳಿಕ ಅರ್ಘ್ಯವನ್ನೊಪ್ಪಿಸಬೇಕು.

೧೦೮. 'ಎಲೈ ಮಹಾದೇವನೆ! ಜಲ, ಅಕ್ಷತೆ, ಪುಷ್ಪಗಳಿಂದಲೂ ಉತ್ತಮ ಫಲಗಳಿಂದಲೂ ಕೂಡಿದ ಈ ಅರ್ಘ್ಯವನ್ನು ಸ್ವೀಕರಿಸಿ ಪೂಜೆಯ ಸಮಾಪ್ತಿಯನ್ನು ಆಗಗೊಳಿಸು.'

೧೦೯. ಇಂತು ಅರ್ಘ್ಯವನ್ನು ಕೊಟ್ಟಮೇಲೆ ಅನುಕೂಲವಿದ್ದಲ್ಲಿ ವಸ್ತ್ರ ಭೂಷಣಾದಿಗಳಿಂದ ಪೂಜಿಸಬೇಕು. ಬಳಿಕ ಕ್ರಮವಾಗಿ ಧೂಪ, ದೀಪ, ನೈವೇದ್ಯಗಳನ್ನು ಅರ್ಪಿಸಬೇಕು.

೧೧೦. ಅಲ್ಲಿ ಘಂಟೆಯನ್ನು ಬಾರಿಸುತ್ತ ನೀರಾಜನವನ್ನು ಮಾಡಬೇಕು. ಶಂಖಗಳೇ ಮೊದಲಾದ ವಾದ್ಯಗಳ ಧ್ವನಿಯೊಡನೆ ಮಹಾದೇವನಿಗೆ ಮಂಗಳಾರತಿಯನ್ನು ಬೆಳಗಬೇಕು.

೧೧೧. ಯಾವನು ದೇವದೇವನಾದ ತ್ರಿಶೂಲಿಯ ಮಂಗಳಾರತಿಯ ವೈಭವವನ್ನು ನೋಡುವನೊ ಅವನು ಸಕಲ ಪಾಪಗಳಿಂದಲೂ ಮುಕ್ತನಾಗುವನೆಂದಮೇಲೆ ಆರತಿಯನ್ನು ತಾನೇ ಬೆಳಗುವವನ ವಿಷಯವನ್ನೇನು ಹೇಳಬೇಕು?

ನೃತ್ಯಂ ಗೀತಂ ಚ ವಾದ್ಯಂ ಚ ಅಲೀಕಮಪಿ ಯಶ್ಚರೇತ್ ।
ತಸ್ಯ ತುಷ್ಯೇದನಂತಂ ಹಿ ಗೀತವಾದ್ಯಫಲಂ ಯತಃ ॥ ೧೧೨ ॥
ಸ್ತೋತ್ರೈಸ್ತತಶ್ಚ ಸಂಸ್ತೂಯ ದಂಡವತ್ಪ್ರಣಮೇದ್ಭುವಿ ।
ಕ್ಷಮಾಪಯೇಚ್ಚ ದೇವೇಶಂ ಸುಕೃತಂ ಕುಕೃತಂ ಕ್ಷಮ ॥ ೧೧೩ ॥
ಯ ಏವಂ ಯಜತೇ ರುದ್ರಮಸ್ಮಿಂಲ್ಲಿಂಗೇ ವಿಶೇಷತಃ ।
ಪಿತರಂ ಪಿತಾಮಹಂ ಚೈವ ತಥೈವ ಪ್ರಪಿತಾಮಹಂ ।
ಸರ್ವಾನ್ಪಾಪಾತ್ಸಮುತ್ತಾರ್ಯ ರುದ್ರಲೋಕೇ ವಸೇಚ್ಚಿರಂ ॥ ೧೧೪ ॥
ಏವಂ ಮಾಹೇಶ್ವರೋ ಭೂತ್ವಾ ಸದಾಚಾರವ್ರತಸ್ಥಿತಃ ॥ ೧೧೫ ॥
ಪಶುಪಾಶವಿಮೋಕ್ಷಾರ್ಥಂ ಪೂಜಯೇತ್ತನ್ಮನಾ ಯದಿ ।
ಯ ಏವಂ ಯಜತೇ ರುದ್ರಂ ತೇನೈತತ್ತರ್ಪಿತಂ ಜಗತ್ ॥ ೧೧೬ ॥
ಕಿಂ ತ್ವೇತತ್ಸಫಲಂ ರಾಜನ್ನಾಚಾರಂ ಯೋ ನ ಲಂಘಯೇತ್ ।
ಆಚಾರಾತ್ಫಲತೇ ಧರ್ಮೋ ಹ್ಯಾಚಾರಾತ್ಸ್ವರ್ಗಮಶ್ನುತೇ ।
ಆಚಾರಾಲ್ಲಭತೇ ಹ್ಯಾಯುರಾಚಾರೋ ಹಂತ್ಯಲಕ್ಷಣಂ ॥ ೧೧೭ ॥

---

೧೧೨. ಸ್ವಲ್ಪವಾಗಿಯಾದರೂ ನೃತ್ಯ, ಗೀತ, ವಾದ್ಯಗಳನ್ನು ಮಾಡಿಸುವ ಭಕ್ತನಲ್ಲಿ ಭಗವಂತನು ಬಹಳ ಸಂತೋಷಗೊಳ್ಳುವನು. ಗೀತವಾದ್ಯಗಳ ಫಲವು ಅನಂತವಾಗಿರುವುದು.

೧೧೩. ಬಳಿಕ ಅನೇಕ ಸ್ತೋತ್ರಗಳಿಂದ ಪರಮಾತ್ಮನನ್ನು ಹೊಗಳಿ ಭೂಮಿಯಲ್ಲಿ ಸಾಷ್ಟಾಂಗ ಪ್ರಣಾಮವನ್ನು ಮಾಡಬೇಕು. 'ದೇವಾಧಿದೇವನೆ! ನಾನು ಮಾಡಿರುವ ಸುಕೃತ ದುಷ್ಕೃತಗಳೆಲ್ಲವನ್ನೂ ಕ್ಷಮಿಸು' ಎಂಬುದಾಗಿ ಕ್ಷಮೆಯನ್ನು ಬೇಡಿಕೊಳ್ಳಬೇಕು.

೧೧೪. ಯಾವನು ಈ ರೀತಿಯಿಂದ ಶಿವಪೂಜೆಯನ್ನು ಮಾಡುವನೊ, ವಿಶೇಷವಾಗಿ ಈ ಮಹಾಕಾಲಲಿಂಗವನ್ನು ಪೂಜಿಸುವನೊ, ಅವನು ತನ್ನ ಪಿತೃ ಪಿತಾಮಹರನ್ನೂ, ಪ್ರಪಿತಾಮಹರನ್ನೂ ಸಕಲ ಪಾಪಗಳಿಂದಲೂ ಮುಕ್ತರನ್ನಾಗಿ ಮಾಡುವನು. ತಾನೂ ಬಹಳ ಕಾಲ ರುದ್ರಲೋಕದಲ್ಲಿ ವಾಸಮಾಡುವನು.

೧೧೫–೧೧೬. ಇಂತು ಮಾನವನಾದವನು ಪಶುಪಾಶಗಳಿಂದ ಬಿಡುಗಡೆಯನ್ನು ಹೊಂದಲೋಸುಗ ಶಿವಭಕ್ತನಾಗಿ, ಶಿವಾಚಾರವ್ರತಗಳಲ್ಲಿ ನೆಲೆಗೊಂಡವನಾಗಿ, ಶಿವಧ್ಯಾನಾಸಕ್ತಹೃದಯನಾಗಿ ಶಿವಪೂಜೆಯನ್ನು ಮೇಲೆ ಹೇಳಿದ ಕ್ರಮದಿಂದ ಮಾಡಬೇಕು. ಯಾವನು ಈ ವಿಧವಾದ ಶಿವಪೂಜೆಯನ್ನು ಮಾಡುವನೊ, ಅವನ ಕೃತ್ಯದಿಂದ ಜಗತ್ತೆಲ್ಲವೂ ತೃಪ್ತಿಗೊಳ್ಳುವುದು.

೧೧೭. ಎಲೈ ರಾಜೇಂದ್ರನೆ! ಆದರೆ ಇಲ್ಲಿ ಒಂದು ವಿಶೇಷವುಂಟು. ಯಾವನು ವರ್ಣಾಶ್ರಮ ವಿಹಿತಗಳಾದ ಆಚಾರಗಳನ್ನು ಚೆನ್ನಾಗಿ ಅನುಸರಿ

**ಯಜ್ಞದಾನತಪಾಂಸೀಹ ಪುರುಷಸ್ಯ ನ ಭೂತಯೇ ॥ ೧೧೮ ॥**
**ಭವಂತಿ ಯಃ ಸದಾಚಾರಂ ಸಮುಲ್ಲಂಘ್ಯಪ್ರವರ್ತತೇ ।**
**ತಸ್ಯ ಕಿಂಚಿತ್ಸಮುದ್ದೇಶಂ ವಕ್ಷ್ಯೇ ತಂ ಶೃಣು ಪಾರ್ಥಿವ ॥ ೧೧೯ ॥**
**ತ್ರಿವರ್ಗಸಾಧನೇ ಯತ್ನಃ ಕರ್ತವ್ಯೋ ಗೃಹಮೇಧಿನಾ ।**
**ತತ್ಸಂಸಿದ್ಧೌ ಗೃಹಸ್ಥಸ್ಯ ಸಿದ್ಧಿರತ್ರ ಪರತ್ರ ಚ ॥ ೧೨೦ ॥**
**ಬ್ರಾಹ್ಮೇ ಮುಹೂರ್ತೇ ಬುಧ್ಯೇತ ಧರ್ಮಾರ್ಥೌ ಚಾಪಿ ಚಿಂತಯೇತ್ ।**
**ಸಮುತ್ಥಾಯ ತಥಾಚಮ್ಯ ದಂತಧಾವನಪೂರ್ವಕಂ ॥ ೧೨೧ ॥**
**ಸಂಧ್ಯಾಮುಪಾಸೀತ ಬುಧಃ ಸಂಶಾಂತಃ ಪ್ರಯತಃ ಶುಚಿಃ ।**
**ಪೂರ್ವಾಂ ಸಂಧ್ಯಾಂ ಸನಕ್ಷತ್ರಾಂ ಪಶ್ಚಿಮಂ ಸದಿವಾಕರಾಂ ॥ ೧೨೨ ॥**
**ಉಪಾಸೀತ ಯಥಾನ್ಯಾಯಂ ನೈನಾಂ ಜಹ್ಯಾದನಾಪದಿ ।**
**ವರ್ಜಯೇದನೃತಂ ಚಾಸತ್ಪ್ರಲಾಪಂ ಪರುಷಂ ತಥಾ ।**
**ಅಸತ್ಸೇವಾಂ ಹ್ಯಸದ್ವಾದಂ ಹ್ಯಸಚ್ಛಾಸ್ತ್ರಂ ಚ ಪಾರ್ಥಿವ ॥ ೧೨೩ ॥**

---

ಸುವನೊ ಅವನಿಗೆ ಮಾತ್ರ ಶಿವಪೂಜೆಯ ಫಲವು ಲಭಿಸುವುದು. ಸದಾಚಾರದಿಂದಲೇ ಧರ್ಮವು ಫಲಿಸುವುದು. ಆಚಾರದಿಂದಲೇ ಮನುಷ್ಯನು ಸ್ವರ್ಗವನ್ನು ಹೊಂದುವನು. ಆಚಾರದಿಂದಲೇ ದೀರ್ಘಾಯುವುಂಟಾಗುವುದು. ಆಚಾರವು ಸಕಲ ಅಶ್ರೇಯಸ್ಸುಗಳನ್ನೂ ನಾಶಗೊಳಿಸುವುದು.

೧೧೮-೧೧೯. ಯಾವ ಪುರುಷನು ಸದಾಚಾರವನ್ನು ಅತಿಕ್ರಮಿಸಿ ನಡೆಯುವನೊ, ಅವನು ಮಾಡಿದ ಯಜ್ಞ, ದಾನ, ತಪಸ್ಸು ಮೊದಲಾದ ಕರ್ಮಗಳಿಗೆ ಪುಣ್ಯಫಲವು ಲಭಿಸುವುದಿಲ್ಲ. ಎಲೈ ರಾಜನೆ! ಆದುದರಿಂದ ಆಚಾರದ ಕೆಲವು ವಿಷಯಗಳನ್ನು ದಿಗ್ದರ್ಶನರೂಪದಿಂದ ಹೇಳುವೆನು ಕೇಳು.

೧೨೦. ಗಾರ್ಹಸ್ಥ್ಯದಲ್ಲಿರುವವನು ಪ್ರಯತ್ನದಿಂದ ತ್ರಿವರ್ಗಗಳನ್ನು ಸಾಧಿಸಬೇಕು. ಅವುಗಳ ಸಾಧನೆಯಿಂದ ಐಹಿಕಾಮುಷ್ಮಿಕ ಸುಖಗಳೆರಡೂ ಲಭಿಸುವುವು.

೧೨೧. ಬ್ರಾಹ್ಮ ಮುಹೂರ್ತದಲ್ಲಿ ಹಾಸಿಗೆಯಿಂದೆದ್ದು ದಂತಧಾವನ ಮುಖ ಪ್ರಕ್ಷಾಲನಗಳನ್ನು ಮಾಡಿಕೊಂಡು ಆಚಮನವನ್ನು ಮಾಡಿ ಧರ್ಮಾರ್ಥ ಧರ್ಮಗಳನ್ನು ಕುರಿತು ಚಿಂತಿಸಬೇಕು.

೧೨೨. ಇಂತು ಶಾಂತನಾಗಿ ನಿಯಮದಿಂದ ಶುಚಿರ್ಭೂತನಾಗಿ ಪ್ರಾತಃಕಾಲದ ಆಹ್ನಿಕವನ್ನು ನಕ್ಷತ್ರಗಳಿರುವಾಗಲೂ, ಸಾಯಮಾಹ್ನಿಕವನ್ನು ಸೂರ್ಯಾಸ್ತಮಯಕ್ಕೆ ಮುಂಚೆಯೂ ಪ್ರಾರಂಭಿಸಬೇಕು.

೧೨೩. ತಮ್ಮ ತಮ್ಮ ಆಚಾರವನ್ನನುಸರಿಸಿ ಉಪಾಸನೆಯನ್ನು ಖಂಡಿತವಾಗಿಯೂ ಮಾಡಲೇಬೇಕು. ಆಪತ್ಕಾಲದಲ್ಲಲ್ಲದೆ ಮತ್ತಾವಾಗಲೂ ಇದನ್ನು

**ಆದರ್ಶದರ್ಶನಂ ದಂತಧಾವನಂ ಕೇಶಸಾಧನಂ ।**
**ದೇವಾರ್ಚನಂ ಚ ಪೂರ್ವಾಹ್ಣೇ ಕಾರ್ಯಾಣ್ಯಾಹುರ್ಮನೀಷಿಣಃ ॥**
**ಪಾಲಾಶಮಾಸನಂ ಚೈವ ಪಾದುಕೇ ದಂತಧಾವನಂ ।**
**ವರ್ಜಯೇದಾಸನಂ ಚೈವ ಪದಾ ನಾಕರ್ಷಯೇದ್ಬುಧಃ ॥ ೧೨೫ ॥**
**ಜಲಮಗ್ನಿಂ ಚ ವಿನಯೇದ್ಯುಗಪನ್ನ ವಿಚಕ್ಷಣಃ ।**
**ಪಾದೌ ಪ್ರಸಾರಯೇನ್ನೈವ ಗುರುದೇವಾಗ್ನಿಸಮ್ಮುಖೌ ॥ ೧೨೬ ॥**
**ಚತುಷ್ಪಥಂ ಚೈತ್ಯತರುಂ ದೇವಾಗಾರಂ ತಥಾ ಯತಿಂ ॥ ೧೨೭ ॥**
**ವಿದ್ಯಾಧಿಕಂ ಗುರುಂ ವೃದ್ಧಂ ಕುರ್ಯಾದೇತಾನ್ಪ್ರದಕ್ಷಿಣಾನ್ ॥ ೧೨೮ ॥**
**ಆಹಾರ ನೀಹಾರವಿಹಾರಯೋಗಾಃ**
**ಸುಸಂವೃತಾ ಧರ್ಮವಿದಾನುಕಾರ್ಯಾಃ ।**
**ವಾಗ್ಬುದ್ಧಿವೀರ್ಯಾಣಿ ತಪಸ್ತಥೈವ**
**ವಾರ್ತಾಯುಷೀ ಗುಪ್ತತಮೇ ಚ ಕಾರ್ಯೇ ॥ ೧೨೯ ॥**

---

ತಪ್ಪಬಾರದು. ಸುಳ್ಳನ್ನೂ, ಕೆಲಸಕ್ಕೆ ಬಾರದ ಮಾತುಗಳನ್ನೂ, ಕಠಿನವಾಕ್ಯಗಳನ್ನೂ, ನೀಚ ಸೇವೆಯನ್ನೂ, ಶುಷ್ಕವಾದವನ್ನೂ, ಅಸಚ್ಛಾಸ್ತ್ರಗಳನ್ನೂ ತ್ಯಜಿಸಬೇಕು.

೧೨೪. ಕನ್ನಡಿಯನ್ನು ನೋಡುವುದು, ದಂತಧಾವನ, ಕೂದಲುಗಳನ್ನು ನೇವರಿಸುವುದು, ದೇವತಾರ್ಚನೆ— ಇವುಗಳನ್ನು ಪ್ರಾತಃಕಾಲದಲ್ಲಿ ಮಾತ್ರ ಮಾಡಬೇಕೆಂದು ಬಲ್ಲವರು ಹೇಳುವರು.

೧೨೫–೧೨೬. ಪಲಾಶ ವೃಕ್ಷದಿಂದ ಮಾಡಿದ ಆಸನವನ್ನಾಗಲಿ, ಪಾದುಕೆಗಳನ್ನಾಗಲಿ ಉಪಯೋಗಿಸಬಾರದು. ಅದರ ಕಡ್ಡಿಗಳಿಂದ ದಂತಧಾವನವನ್ನು ಮಾಡಬಾರದು. ಕೂಡುವ ಮಣೆಯನ್ನು ಬುದ್ಧಿವಂತನು ಕಾಲಿನಿಂದ ಎಳೆದಾಡಬಾರದು. ವಿಚಕ್ಷಣನು ಅಗ್ನಿಯನ್ನೂ ಜಲವನ್ನೂ ಒಮ್ಮೆಯೇ ತೆಗೆದುಕೊಂಡು ಹೋಗಕೂಡದು. ಗುರುಗಳು, ದೇವರು, ಅಗ್ನಿ ಇವರ ಸಮ್ಮುಖದಲ್ಲಿ ಕಾಲುಗಳನ್ನು ಚಾಚಿಕೊಂಡು ಕೂತುಕೊಳ್ಳಕೂಡದು.

೧೨೭–೧೨೯. ಬ್ರಾಹ್ಮಣನನ್ನೂ, ಅಶ್ವತ್ಥವೃಕ್ಷವನ್ನೂ, ದೇವಾಲಯವನ್ನೂ, ಸನ್ಯಾಸಿಯನ್ನೂ, ವಿದ್ಯೆಯಿಂದ ಅಧಿಕನಾದವನನ್ನೂ, ಗುರುವನ್ನೂ, ವಯೋವೃದ್ಧನನ್ನೂ ಕಂಡೊಡನೆ ಪ್ರದಕ್ಷಿಣೆಯನ್ನು ಮಾಡಬೇಕು. ಧರ್ಮಜ್ಞನು, ಆಹಾರ, ಪುರೀಷಕಾರ್ಯ, ವಿಹಾರ, ಯೋಗಾಭ್ಯಾಸಗಳನ್ನು ಏಕಾಂತದಲ್ಲಿ ಮಾಡಬೇಕು. ವಾಕ್ಛಕ್ತಿಯನ್ನೂ, ಬುದ್ಧಿಯನ್ನೂ, ಪರಾಕ್ರಮವನ್ನೂ, ತಪಶ್ಶಕ್ತಿಯನ್ನೂ ಇತರರೆದುರಿಗೆ ಕೊಚ್ಚಿಕೊಳ್ಳಬಾರದು. ತನ್ನ ಶೀಲವನ್ನೂ, ಆಯುಃಪ್ರಮಾಣವನ್ನೂ ವಿಶೇಷ ಗುಪ್ತವಾಗಿಟ್ಟುಕೊಳ್ಳಬೇಕು.

ಉಭೇ ಮೂತ್ರಪುರೀಷೇ ತು ದಿವಾ ಕುರ್ಯಾದುದಙ್ಮುಖಃ ।
ದಕ್ಷಿಣಾಭಿಮುಖೋ ರಾತ್ರೌ ಹ್ಯೇವಮಾಯುರ್ನ ರಿಷ್ಯತೇ ॥ ೧೩೦ ॥
ಪ್ರತ್ಯಗ್ನಿಂ ಪ್ರತಿಸೂರ್ಯಂ ಚ ಪ್ರತಿಗಾಂ ವ್ರತಿನಂ ಪ್ರತಿ ।
ಪ್ರತಿ ಸೋಮೋದಕಂ ಸಂಧ್ಯಾಂ ಪ್ರಜ್ಞಾ ನಶ್ಯತಿ ಮೇಹತಃ ॥ ೧೩೧ ॥
ಭೋಜನೇ ಶಯನೇ ಸ್ಥಾನೇ ಉತ್ಸರ್ಗೇ ಮಲಮೂತ್ರಯೋಃ ।
ರಥ್ಯಾಚಂಕ್ರಮಣೇ ಚಾರ್ದ್ರಪಂಚಕಶ್ಚಾಚಮೇತ್ಸದಾ ॥ ೧೩೨ ॥
ನ ನದ್ಯಾಂ ಮೇಹನಂ ಕುರ್ಯಾನ್ನ ಸ್ಮಶಾನೇ ನ ಭಸ್ಮನಿ ।
ನ ಗೋಮಯೇ ನ ಕೃಷ್ಟೇ ಚ ನೈವಾಲೂನೇ ನ ಶಾಡ್ವಲೇ ॥ ೧೩೩ ॥
ಉದ್ಧೃತಾಭಿಸ್ತಥಾದ್ಭಿಸ್ತು ಶೌಚಂ ಕುರ್ಯಾದ್ವಿಚಕ್ಷಣಃ ।
ಅಂತರ್ಜಲಾದ್ದೇವ ಕುಲಾದ್ವಲ್ಮೀಕಾನ್ಮೂಷಕಸ್ಥಲಾತ್ ॥ ೧೩೪ ॥
ಅಪವಿದ್ಧಾಪಶೌಚಾಚ್ಚ ವರ್ಜಯೇತ್ಪಂಚಮೃತ್ತಿಕಾಃ ।
ಗಂಧಲೇಪಾಪಹರಣಂ ಶೌಚಂ ಕುರ್ಯಾತ್ತಥಾ ಬುಧಃ ॥ ೧೩೫ ॥

---

೧೩೦–೧೩೧. ಮೂತ್ರಪುರೀಷೋತ್ಸರ್ಜನೆಯನ್ನು ಹಗಲಿನಲ್ಲಿ ಉತ್ತರಾಭಿಮುಖನಾಗಿಯೂ, ರಾತ್ರಿಯಲ್ಲಿ ದಕ್ಷಿಣಾಭಿಮುಖನಾಗಿಯೂ ಮಾಡುವುದರಿಂದ ಮನುಷ್ಯನ ಆಯುಷ್ಯವು ಕ್ಷೀಣವಾಗುವುದಿಲ್ಲ. ಅಗ್ನಿಗೂ, ಸೂರ್ಯನಿಗೂ, ಗೋವಿಗೂ, ವ್ರತಿಯಾದವನಿಗೂ, ಚಂದ್ರನಿಗೂ, ಕೂಪತಟಾಕಾದಿಗಳಿಗೂ, ಉದಯಾಸ್ತಮಯಗಳ ಸೂರ್ಯನಿಗೂ ಅಭಿಮುಖನಾಗಿ ಮೂತ್ರವನ್ನು ಮಾಡಲು ಮನುಷ್ಯನ ಬುದ್ಧಿಶಕ್ತಿಯು ನಾಶವಾಗುವುದು.

೧೩೨. ಭೋಜನವಾದ ಮೇಲೂ, ನಿದ್ದೆಯಿಂದೆಚ್ಚತ್ತ ಮೇಲೂ, ಭೋಜನಕ್ಕೆ ಕೂಡುವಾಗಲೂ, ಮಲಮೂತ್ರಗಳನ್ನು ಬಿಟ್ಟಮೇಲೂ, ಬೀದಿಗಳಲ್ಲಿ ತಿರುಗಾಡಿದ ಮೇಲೂ ಕೈಕಾಲುಗಳನ್ನೂ ಮುಖವನ್ನೂ ತೊಳೆದುಕೊಂಡು ಆಚಮನವನ್ನು ಮಾಡಬೇಕು.

೧೩೩. ನದಿಯಲ್ಲಿಯೂ, ಸ್ಮಶಾನದಲ್ಲಿಯೂ, ಭಸ್ಮದಲ್ಲಿಯೂ, ಗೋಮಯದಲ್ಲಿಯೂ, ಉಳುಮೆಯಾದ ಭೂಮಿಯಲ್ಲಿಯೂ, ಧಾನ್ಯವು ನಿಂತಿರುವಲ್ಲಿಯೂ, ಹಸುರು ಹುಲ್ಲುಗಾವಲಿನಲ್ಲಿಯೂ ಮೂತ್ರವನ್ನು ಮಾಡಬಾರದು.

೧೩೪–೧೩೫. ವಿಚಕ್ಷಣನಾದವನು ಕೆರೆ, ಕೊಳಗಳಿಂದ ನೀರನ್ನು ಬೇರೆ ತೆಗೆದುಕೊಂಡು ಶೌಚವನ್ನೆಸಗಬೇಕು. ನೀರಿನ ಬುಡದಲ್ಲಿಯೂ, ದೇವಾಲಯದಲ್ಲಿಯೂ, ಹುತ್ತದಲ್ಲಿಯೂ, ಮೂಷಕಬಿಲದಲ್ಲಿಯೂ, ಶೌಚಕ್ಕಾಗಿ ಉಪಯೋಗಿಸುವ ಸ್ಥಳದಲ್ಲಿಯೂ ಇರುವ ಮಣ್ಣನ್ನು ಶೌಚಕ್ಕಾಗಿ ಉಪಯೋಗಿಸಬಾರದು. ಗಂಧಯುಕ್ತವಾದ ಮೃತ್ತಿಕೆಯಿಂದಲೇ ಜ್ಞಾನಿಯು ಶೌಚವನ್ನು ಮಾಡಿಕೊಳ್ಳಬೇಕು.

**ನಾತ್ಮಾನಂ ತಾಡಯೇನ್ನೈವ ದದ್ಯಾದುಃಖೇಭ್ಯ ಏವ ಚ ।**
**ಉಭಾಭ್ಯಾಮಪಿ ಪಾಣಿಭ್ಯಾಂ ಕಂಡೂಯೇನ್ನಾತ್ಮನಃ ಶಿರಃ ॥ ೧೩೬ ॥**
**ರಕ್ಷೇದ್ದಾರಾಂಸ್ತ್ಯಜೇದೀರ್ಷ್ಯಾಂ ತಾಸು ನಿಷ್ಕಾರಣಂ ಬುಧಃ ।**
**ಸೂರ್ಯಾಸ್ತೇನ ವಿನಾ ಕಾಶ್ಚಿತ್ತಯಂ ನೈವಾಚರೇತ್ತಥಾ ॥ ೧೩೭ ॥**
**ಅದ್ರೋಹೇಣೈವ ಭೂತಾನಾಮಲ್ಪದ್ರೋಹೇಣ ವಾ ಪುನಃ ।**
**ಶಿವಚಿತ್ತೋऽರ್ಜಯೇದ್ವಿತ್ತಂ ನ ಚಾತಿ ಕೃಪಣೋ ಭವೇತ್ ॥ ೧೩೮ ॥**
**ನೇರ್ಷ್ಯುಃ ಸ್ಯಾನ್ನ ಕೃತಘ್ನಃ ಸ್ಯಾನ್ನ ಪರದ್ರೋಹಕರ್ಮಧೀಃ ।**
**ನ ಪಾಣಿಪಾದಚಪಲೋ ನ ನೇತ್ರ ಚಪಲೋऽನೃಜುಃ ॥ ೧೩೯ ॥**
**ನ ಚ ವಾಗಂಗಚಪಲೋ ನ ಚಾಶಿಷ್ಟಸ್ಯ ಗೋಚರಃ ।**
**ನ ಶುಷ್ಕವಾದಂ ಕುರ್ವೀತ ಶುಷ್ಕವೈರಂ ತಥೈವ ಚ ॥ ೧೪೦ ॥**
**ಉಪಾಯೈಃ ಸಾಧಯೇದರ್ಥಾನ್ದಂಡಸ್ತ್ವಗತಿಕಾ ಗತಿಃ ।**
**ಭಿನ್ನಾಶನಂ ಭಿನ್ನಶಯ್ಯಾಂ ವರ್ಜಯೇದ್ಭಿನ್ನಭಾಜನಂ ॥ ೧೪೧ ॥**

---

೧೩೬. ತನ್ನ ಶರೀರವನ್ನು ತಾನೇ ಹೊಡೆದುಕೊಳ್ಳಬಾರದು. ದುಃಖಗಳಿಗೆಡೆಗೊಡಬಾರದು. ಎರಡೂ ಕೈಗಳಿಂದ ತಲೆಯನ್ನು ತುರಿಸಿಕೊಳ್ಳಬಾರದು.

೧೩೭. ವಿವೇಕಿಯಾದವನು ಅಗ್ನಿಸಾಕ್ಷಿಕವಾಗಿ ಕೈಹಿಡಿದ ಹೆಂಡತಿಯನ್ನು ರಕ್ಷಿಸಬೇಕು. ಅವಳಲ್ಲಿ ನಿಷ್ಕಾರಣವಾಗಿ ಅಸೂಯೆಪಡಬಾರದು. ಅವಳೊಡನೆ ಸೂರ್ಯಾಸ್ತಮಯವಾಗುವವರೆಗೂ ಯಾವ ವ್ಯವಹಾರವನ್ನೂ ಮಾಡಬಾರದು.

೧೩೮. ಸಕಲ ಭೂತಗಳಲ್ಲಿಯೂ ದ್ರೋಹರಹಿತನಾಗಿಯೂ, ಸಾಧ್ಯವಿಲ್ಲದಿದ್ದಲ್ಲಿ ಆದಷ್ಟು ಅಲ್ಪದ್ರೋಹದಿಂದಾದರೂ ಧನವನ್ನಾರ್ಜಿಸಬೇಕು. ಯಾವಾಗಲೂ ಶಿವಧ್ಯಾನತತ್ಪರನಾಗಿ, ಧನದ ವಿಷಯದಲ್ಲಿ ವಿಶೇಷ ಕೃಪಣನಾಗಿರಬಾರದು. ಶಕ್ತಿಯಿದ್ದಷ್ಟು ದಾನ ಮಾಡಬೇಕು.

೧೩೯–೧೪೦. ಅಸೂಯಾಪರನೂ, ಕೃತಘ್ನನೂ, ಪರದ್ರೋಹವನ್ನು ಮಾಡುವ ಮನಸ್ಸುಳ್ಳವನೂ ಆಗಬಾರದು. ಕೈಕಾಲುಗಳ ಚಾಪಲ್ಯವೂ, ನೇತ್ರಚಾಪಲ್ಯವೂ, ವಕ್ರಬುದ್ಧಿಯೂ, ವಾಕ್ಚಾಪಲ್ಯವೂ ಇರಬಾರದು. ಶಿಷ್ಟಾಚಾರವಿಲ್ಲದವರನ್ನು ನೋಡಬಾರದು. ಶುಷ್ಕವಾದವನ್ನು ಮಾಡಬಾರದು. ಯಾರಲ್ಲಿಯೂ ನಿಷ್ಕಾರಣವಾಗಿ ವೈರವನ್ನು ಸಾಧಿಸಬಾರದು.

೧೪೧. ಉಪಾಯದಿಂದಲೇ ಕಾರ್ಯಗಳನ್ನು ನಿರ್ವಹಿಸಿಕೊಳ್ಳಬೇಕು. ದಂಡವನ್ನು ಕೊನೆಯ ಉಪಾಯವನ್ನಾಗಿ ತಿಳಿಯಬೇಕು. ಊಟದಲ್ಲಿಯೂ, ಶಯ್ಯೆಯಲ್ಲಿಯೂ, ಉಪಚಾರದಲ್ಲಿಯೂ ಪಙ್ಕ್ತಿಭೇದವನ್ನು ಮಾಡಬಾರದು.

ಅಂತರೇಣ ನ ಗಚ್ಛೇತ ದ್ವಯೋರ್ಜ್ವಲನ ಲಿಂಗಯೋಃ ।
ನ್ಯಾಗ್ನ್ಯೋರ್ನ ವಿಪ್ರಯೋಶ್ಚೈವ ನ ದಂಪತ್ಯೋರ್ನೃಪೋತ್ತಮ ॥೧೪೨॥
ನ ಸೂರ್ಯವ್ಯೋಮಯೋರ್ನೈವ ಹರಸ್ಯ ವೃಷಭಸ್ಯ ಚ ।
ಏತೇಷಾಮಂತರಂ ಕುರ್ವನ್ನತಃ ಪಾಪಮವಾಪ್ನುಯಾತ್ ॥ ೧೪೩ ॥
ನೈಕವಸ್ತ್ರಶ್ಚ ಭುಂಜೀತ ನಾಗ್ನೌ ಹೋಮಮಥಾಚರೇತ್ ।
ನ ಚಾರ್ಚಯೇದ್ದ್ವಿಜಾನ್ನೈವ ಕುರ್ಯಾದ್ದೇವಾರ್ಚನಂ ಬುಧಃ ॥೧೪೪॥
ಖಂಡನಂ ಪೇಕ್ಷಣಂ ಮಾರ್ಷ್ಟಿಂ ಜಲಸಂಶೋಧನಂ ತಥಾ ।
ರಂಧನಂ ಭೋಜನಂ ಸ್ವಾಪ ಉತ್ಥಾನಂ ಗಮನಂ ಕ್ಷುತಂ ॥ ೧೪೫ ॥
ಕಾರ್ಯಾರಂಭಂ ಸಮಾಪ್ತಿಂ ಚ ವಚಃ ಪ್ರೋಚ್ಯ ತಥಾಪ್ರಿಯಂ ।
ಪಿಬಂಜಿಘ್ರನ್ಸ್ಪೃಶನ್ಶೃಣ್ವನ್ನಿವಕ್ಷನ್ಮೈಥುನಂ ತಥಾ ॥ ೧೪೬ ॥
ಶುಚಿತ್ವಂ ಚ ಜಪನ್ ಸ್ಥಾಣುಂ ಯಃ ಕುರ್ಯಾದ್ವಿಂಶತಿಂ ತಥಾ ।
ಮಾಹೇಶ್ವರಃ ಸ ವಿಜ್ಞೇಯಃ ಶೇಷೋಽನ್ಯೋ ನಾಮಧಾರಕಃ ॥ ೧೪೭ ॥
ಸವೈ ರುದ್ರಮಯೋ ಭೂತ್ವಾ ತತಶ್ಚಾಂತೇ ಶಿವಂ ವ್ರಜೇತ್ ।
ಪರಸ್ತ್ರಿಯಂ ನಾಭಿಭಾಷ್ಯೇತ್ತಥಾ ಸಂಭಾಷ್ಯಯೇದ್ಯದಿ ॥ ೧೪೮ ॥

---

೧೪೨. ತೇಜೋಮಯಗಳಾದ ಎರಡು ಲಿಂಗಗಳ ಮಧ್ಯದಲ್ಲಿಯೂ, ಎರಡು ಅಗ್ನಿಗಳಿಗೂ, ಬ್ರಾಹ್ಮಣರಿಗೂ, ಪತಿ ಪತ್ನಿಯರಿಗೂ ಮಧ್ಯದಲ್ಲಿ ಹೋಗಬಾರದು.

೧೪೩. ಸೂರ್ಯಾಕಾಶಗಳಿಗೂ, ಶಿವ ವೃಷಭರಿಗೂ ವ್ಯತ್ಯಾಸವನ್ನು ಕಾಣುವವನು ಪಾಪಿಯಾಗುವನು.

೧೪೪. ಭೋಜನವನ್ನಾಗಲಿ, ಅಗ್ನಿಯಲ್ಲಿ ಹೋಮವನ್ನಾಗಲಿ, ಬ್ರಾಹ್ಮಣ ಪೂಜೆಯನ್ನಾಗಲಿ, ದೇವತಾರ್ಚನೆಯನ್ನಾಗಲಿ ಒಂದೇ ವಸ್ತ್ರವನ್ನುಟ್ಟುಕೊಂಡು ಮಾಡಲಾಗದು.

೧೪೫–೧೪೭. ಕುಟ್ಟುವುದು, ಹಿಟ್ಟುಮಾಡುವುದು, ಶುದ್ಧಿಮಾಡುವುದು, ನೀರಿನಲ್ಲಿ ತೊಳೆಯುವುದು, ಅಡುಗೆಯನ್ನು ಮಾಡುವುದು, ಭೋಜನವನ್ನು ಮಾಡುವುದು, ನಿದ್ರೆ, ಏಳುವುದು, ನಡೆಯುವುದು, ಶೀನುವುದು, ಕಾರ್ಯದಲ್ಲಿ ತೊಡಗುವುದು, ಮುಗಿಸುವುದು, ಪ್ರಿಯವಾದ ಮಾತನ್ನಾಡುವುದು, ಕುಡಿಯುವುದು, ಆಘ್ರಾಣಿಸುವುದು, ಮುಟ್ಟುವುದು, ಕೇಳುವುದು, ಮಾತನಾಡುವುದು, ಸಂಭೋಗಿಸುವುದು, ಶೌಚಕರ್ಮವನ್ನು ಮಾಡುವುದು—ಈ ಇಪ್ಪತ್ತು ಕೆಲಸಗಳನ್ನು ಯಾವನು ಮಾಡುವಾಗಲೆಲ್ಲ ಸದಾಶಿವನನ್ನು ಸ್ಮರಿಸುತ್ತಿರುವನೊ ಅವನೇ ಶಿವಭಕ್ತನೆಂದು ತಿಳಿಯಬೇಕು. ಇತರರು ಕೇವಲ ನಾಮಧಾರಕರು.

೧೪೮. ಆತನೇ ರುದ್ರಮಯನಾಗಿ ದೇಹಾವಸಾನವಾದನಂತರ ಶಿವ ಲೋಕವನ್ನು ಹೊಂದುವನು. ಪರಸ್ತ್ರೀಯನ್ನು ಮಾತಾಡಿಸಬಾರದು. ಹಾಗೂ

**ಮಾತಃ ಸ್ವಸುರಥೋ ಪುತ್ರಿ ಆರ್ಯೇತಿ ಚ ವದೇದ್ಬುಧಃ ।**
**ಉಚ್ಛಿಷ್ಟೋ ನಾಲಭೇತ್ಕಿಂಚಿನ್ನ ಚ ಸೂರ್ಯಂ ವಿಲೋಕಯೇತ್ ॥೧೪೯॥**
**ನೇಂದುರ್ನತಾರಕಾಶ್ಚೈವ ನಾದಯೇನ್ನಾತ್ಮನಃ ಶಿರಃ ।**
**ಸ್ವಸ್ರಾ ದುಹಿತ್ರಾ ಮಾತ್ರಾವಾ ನೈಕಾಂತಾಸನಮಾಚರೇತ್ ॥ ೧೫೦ ॥**
**ದುರ್ಜಯೋ ಹೀಂದ್ರಿಯಗ್ರಾಮೋ ಮುಹ್ಯತೇ ಪಂಡಿತೋಽಪಿ ಸನ್ ।**
**ಗುರುಮಭ್ಯಾಗತಂ ಗೇಹೇ ಸ್ವಯಮುತ್ಥಾಯ ಯತ್ನತಃ ॥ ೧೫೧ ॥**
**ಆಸನಂ ಕಲ್ಪಯೇತ್ತಸ್ಯ ಕುರ್ಯಾತ್ಪಾದಾಭಿವಂದನಂ ।**
**ನೋದಕ್ಛಿರಾಸ್ಸ್ವಪೇಜ್ಜಾತು ನ ಚ ಪ್ರತ್ಯಕ್ಛಿರಾ ಬುಧಃ ।**
**ಶಿರಸ್ಯಗಸ್ತ್ಯಮಾಧಾಯ ತಥೈವ ಚ ಪುರಂದರಂ ॥ ೧೫೨ ॥**
**ಉದಕ್ಯಾದರ್ಶನಂ ಸ್ಪರ್ಶಂ ವರ್ಜ್ಯಂ ಸಂಭಾಷಣಂ ತಥಾ ।**
**ನಾಪ್ಸುಮೂತ್ರಂ ಪುರೀಷಂ ವಾ ಮೈಥುನಂವಾ ಸಮಾಚರೇತ್ ॥೧೫೩॥**
**ಕೃತ್ವಾ ವಿಭವತೋ ದೇವಮನುಷ್ಯರ್ಷಿಸಮರ್ಚನಾಂ ।**
**ಪಿತೃಣಾಂ ಚ ತತಃ ಶೇಷಂ ಭೋಕ್ತುಂ ಮಾಹೇಶ್ವರೋಽರ್ಹತಿ ॥ ೧೫೪ ॥**

---

ಮಾತನಾಡಿಸಲೇಬೇಕಾದ ಸಂದರ್ಭದಲ್ಲಿ 'ತಾಯಿ, ತಂಗಿ, ಮಗಳೆ, ಆರ್ಯೆ' ಮುಂತಾದ ಶಬ್ದಗಳಿಂದ ಸಂಬೋಧಿಸಬೇಕು.

೧೪೯–೧೫೦. ಉಚ್ಛಿಷ್ಟವನ್ನು ಸ್ವೀಕರಿಸಬಾರದು. ಸೂರ್ಯನನ್ನೂ, ಚಂದ್ರನನ್ನೂ, ನಕ್ಷತ್ರಗಳನ್ನೂ ನೋಡಬಾರದು. ತನ್ನ ತಲೆಯನ್ನು ಕುಟ್ಟಿಕೊಳ್ಳಬಾರದು. ತಂಗಿಯೊಡನೆಯೂ, ಮಗಳೊಡನೆಯೂ, ತಾಯಿಯೊಡನೆಯೂ ಏಕಾಂತದಲ್ಲಿ ಕುಳಿತುಕೊಳ್ಳಬಾರದು. ಇಂದ್ರಿಯ ಸಮೂಹವು ಅತ್ಯಂತ ದುರ್ಜೇಯವಾದುದು. ಎಂತಹ ಪಂಡಿತನಾದರೂ ಮೋಹಗೊಳ್ಳುವ ಸಂಭವವುಂಟು.

೧೫೧–೧೫೨. ಮನೆಗೆ ಗುರುವು ಬರಲು ಶಿಷ್ಯನು ಪ್ರಯತ್ನಪೂರ್ವಕವಾಗಿ ಎದ್ದು ಇದಿರುಗೊಂಡು ಆತನನ್ನು ಉಚಿತಾಸನದಲ್ಲಿ ಕುಳ್ಳಿರಿಸಿ ಪಾದಗಳಿಗೆ ನಮಸ್ಕಾರವನ್ನು ಮಾಡಬೇಕು. ಉತ್ತರಕ್ಕಾಗಲಿ, ಪಶ್ಚಿಮಕ್ಕಾಗಲಿ ತಲೆಯನ್ನಿಟ್ಟುಕೊಂಡು ವಿವೇಕಿಯಾದವನು ಯಾವಾಗಲೂ ಮಲಗಬಾರದು. ದಕ್ಷಿಣಕ್ಕಾಗಲಿ, ಪೂರ್ವಕ್ಕಾಗಲಿ ಮಲಗಬೇಕು.

೧೫೩–೧೫೪. ರಜಸ್ವಲೆಯಾದ ಸ್ತ್ರೀಯ ದರ್ಶನ, ಸ್ಪರ್ಶ, ಸಂಭಾಷಣಗಳನ್ನು ವರ್ಜಿಸಬೇಕು. ನೀರಿನಲ್ಲಿ ಮೂತ್ರಪುರೀಷಗಳನ್ನಾಗಲಿ, ಮೈಥುನವನ್ನಾಗಲಿ ಮಾಡಬಾರದು. ಶಿವಭಕ್ತನಾದವನು ತನ್ನ ಉಪಪತ್ತಿಗೆ ತಕ್ಕಂತೆ ದೇವತೆಗಳು, ಮನುಷ್ಯರು, ಋಷಿಗಳು, ಪಿತೃಗಳು—ಇವರಿಗೆ ಪೂಜಾದಿಗಳಿಂದ ತೃಪ್ತಿಪಡಿಸಿ ಬಳಿಕ ಭೋಜನವನ್ನು ಮಾಡಬೇಕು.

ವಾಗ್ಯತಃ ಶುಚಿರಾಚಾಂತಃ ಪ್ರಾಙ್ಮುಖೋದಙ್ಮುಖೋಽಪಿವಾ ।
ಅಂತರ್ಜಾನುಶ್ಚ ತಚ್ಚಿತ್ತೋ ಭುಂಜೀತಾನ್ನಮಕುತ್ಸಯನ್ ॥ ೧೫೫ ॥
ನೋಪಘಾತಂ ವಿನಾ ದೋಷಾನ್ನ ತಸ್ಯೋದಾಹರೇದ್ಬುಧಃ ॥ ೧೫೬ ॥
ನಗ್ನಸ್ನಾನಂ ನ ಕುರ್ವೀತ ನ ಶಯೀತ ವ್ರಜೇತ ವಾ ।
ದುಷ್ಕೃತಂ ನ ಗುರೋರ್ಬ್ರೂಯಾತ್ಕ್ರುದ್ಧಂ ಚೈನಂ ಪ್ರಸಾದಯೇತ್ ॥೧೫೭॥
ಪರಿವಾದಂ ನ ಶೃಣುಯಾದನ್ಯೇಷಾಮಪಿ ಜಲ್ಪತಾಂ ।
ಸದಾಕರ್ಣಯೇದ್ಧರ್ಮಾಂಸ್ತ್ಯಕ್ತ್ವಾ ಕೃತ್ಯಶತಾನ್ಯಪಿ ॥ ೧೫೮ ॥
ನಿತ್ಯಂ ನಿತ್ಯಂ ಹಿ ಸದ್ಧರ್ಮಾನ್ ಗೇಹದರ್ಪಣಯೋರಿವ ।
ಶುಕ್ಲಾಯಾಂ ಚ ಚತುರ್ದಶ್ಯಾಂ ನಕ್ತಭೋಜೀ ಸದಾ ಭವೇತ್ ॥ ೧೫೯ ॥
ತಿಸ್ರೋ ರಾತ್ರೀರ್ನ ಶಕ್ತಶ್ಚೇದೇವಂ ಮಾಹೇಶ್ವರೋ ಭವೇತ್ ।
ಸಂಯಾವಕೃಶರಾಮಾಂಸಂ ನಾತ್ಮಾನಮುಪಸಾಧಯೇತ್ ॥ ೧೬೦ ॥

---

೧೫೫–೧೫೬. ಮೌನವನ್ನವಲಂಬಿಸಿ ಶುಚಿಯಾಗಿ ಆಚಮನವನ್ನು ಮಾಡಿ, ಪೂರ್ವಕ್ಕಾಗಲಿ, ಉತ್ತರಕ್ಕಾಗಲಿ ಮುಖವನ್ನು ಮಾಡಿಕೊಂಡು ಕುಳಿತು, ಕೈಗಳನ್ನು ಮೊಳಕಾಲುಗಳೊಳಕ್ಕೆ ಸೇರಿಸಿ ಅನ್ನವನ್ನು ನಿಂದಿಸದೆ ಪರಬ್ರಹ್ಮೋಪಾಸನೆ ಮಾಡುತ್ತ ತದೇಕಚಿತ್ತದಿಂದ ಊಟಮಾಡಬೇಕು. ಬುದ್ಧಿವಂತನಾದವನು ವ್ಯಾಧಿಗ್ರಸ್ತನಾದವನಲ್ಲದಿದ್ದರೆ ಆಹಾರದಲ್ಲಿ ಯಾವ ಬಗೆಯ ದೋಷವನ್ನೂ ಎಣಿಸಬಾರದು.

೧೫೭. ವಿವಸ್ತ್ರನಾಗಿ ಸ್ನಾನವನ್ನಾಗಲಿ, ಶಯನವನ್ನಾಗಲಿ, ಓಡಾಟವನ್ನಾಗಲಿ ಮಾಡಬಾರದು. ಗುರುವಿನ ದುಷ್ಕೃತ್ಯಗಳನ್ನೆಂದೂ ಜನರಲ್ಲಿ ಸಾರಬಾರದು. ಆತನು ಕೋಪಗೊಂಡಲ್ಲಿ ಶಾಂತಿಯನ್ನು ಹೊಂದುವಂತೆ ಮಾಡಬೇಕು.

೧೫೮. ಇತರರು ಹರಟುತ್ತಿರುವಾಗ ಆಡುವ ನಿಂದೆಯ ಮಾತುಗಳನ್ನು ಕೇಳಬಾರದು. ನೂರು ಕೆಲಸಗಳನ್ನಾದರೂ ಬಿಟ್ಟು ಶಿವಧರ್ಮಗಳ ಶ್ರವಣವನ್ನು ಮಾಡಬೇಕು.

೧೫೯–೧೬೦. ಸದ್ಧರ್ಮ, ಸತ್ಕಥಾಶ್ರವಣವೆಂಬುದು ಮತ್ತೆ ಮತ್ತೆ ಆಗುವುದರಿಂದ ಆಗಾಗ ಬೆಳಗುತ್ತಿರುವ ಗೃಹ, ಕನ್ನಡಿಗಳಂತೆ ಚಿತ್ತವು ಶುದ್ಧಿಯನ್ನೈದುವುದು. ಚಿತ್ತಶುದ್ಧಿಯಾದರೆ ಜೀವನ್ಮುಕ್ತಿ. ಪ್ರತಿ ಮಾಸದಲ್ಲಿಯೂ ಶುಕ್ಲ ಚತುರ್ದಶಿಯ ಹಿಂದಿನ ಮತ್ತು ಮುಂದಿನ ರಾತ್ರಿಗಳನ್ನು ಕೂಡಿ ಮೂರು ರಾತ್ರಿಗಳಾಗಲಿ ಸಾಧ್ಯವಾಗದಿದ್ದಲ್ಲಿ ಖಂಡಿತವಾಗಿಯೂ ಅಂದಿನ ದಿನವಾದರೂ ರಾತ್ರಿ ಭೋಜನವನ್ನು ಮಾತ್ರ ಮಾಡಬೇಕು. ಯವಾನ್ನ, ಕೃಶರ, ಮಾಂಸಗಳಿಂದ ದೇಹಪೋಷಣೆಯನ್ನು ಮಾಡಬಾರದು.

ಸಾಯಂಪ್ರಾತಶ್ಚ ಭೋಕ್ತವ್ಯಂ ಕೃತ್ವಾ ಹ್ಯತಿಥಿಭೋಜನಂ ।
ಸ್ವಪ್ನಾಧ್ಯಯನಭೋಜ್ಯಾನಿ ಸಂಧ್ಯಯೋಶ್ಚ ವಿವರ್ಜಯೇತ್ ॥ ೧೬೧ ॥
ಭುಂಜಾನಃ ಸಂಧ್ಯಯೋರ್ಮೋಹಾದಸುರಾವಸಥೋ ಭವೇತ್ ।
ಸ್ನಾತೋ ನ ಧೂನಯೇತ್ಕೇಶಾನ್‌ಕ್ಷುತೇ ನಿಷ್ಠೀವಿತೇಽಧ್ವನಿ ॥ ೧೬೨ ॥
ಆಲಭೇದ್ದಕ್ಷಿಣಂ ಕರ್ಣಂ ಸರ್ವಭೂತಾನಿ ಕ್ಷಾಮಯೇತ್ ।
ನ ಚಾಪಿ ನೀಲಿವಾಸಾಃ ಸ್ಯಾನ್ನ ವಿಪರ್ಯಸ್ತವಸ್ತ್ರಧೃಕ್ ॥ ೧೬೩ ॥
ವರ್ಜ್ಯಂ ಚ ಮಲಿನಂ ವಸ್ತ್ರಂ ದಶಾಭಿಶ್ಚ ವಿವರ್ಜಿತಂ ।
ಪ್ರಕ್ಷಾಲ್ಯ ಮುಖಹಸ್ತೌ ಚ ಪಾದೌ ಚಾಪ್ಯುಪವಿಶ್ಯ ಚ ॥ ೧೬೪ ॥
ಅಂತರ್ಜಾನುಸ್ತ್ರಿರಾಚಾಮೇದ್ದ್ವಿರ್ಮುಖಂ ಪರಿಮಾರ್ಜಯೇತ್ ।
ತೋಯೇನ ಸ್ಪರ್ಶಯೇತ್ಖಾನಿ ಸ್ವಮೂರ್ಧಾನಂ ತಥೈವ ಚ ॥ ೧೬೫ ॥
ಆಚಮ್ಯ ಪುನರಾಚಮ್ಯ ಕ್ರಿಯಾಃ ಕುರ್ವೀತ ಸರ್ವಶಃ ।
ಕ್ಷುತೇ ನಿಷ್ಠೀವಿತೇ ಚೈವ ದಂತಲಗ್ನೇ ತಥೈವ ಚ ॥ ೧೬೬ ॥
ಪತಿತಾನಾಂ ಚ ಸಂಭಾಷೇ ಕುರ್ಯಾದಾಚಮನಕ್ರಿಯಾಂ ।
ಅಧ್ಯೇತವ್ಯಾ ತ್ರಯೀ ನಿತ್ಯಂ ಭವಿತವ್ಯಂ ವಿಪಶ್ಚಿತಾ ॥ ೧೬೭ ॥

---

೧೬೧–೧೬೩. ಅತಿಥಿಗಳಿಗೆ ಸತ್ಕಾರವನ್ನು ಮಾಡಿ ಮಧ್ಯಾಹ್ನ, ರಾತ್ರಿಗಳಲ್ಲಿ ಮಾತ್ರ ಭೋಜನವನ್ನು ಮಾಡಬೇಕು. ಸಂಧ್ಯಾಕಾಲಗಳಲ್ಲಿ ನಿದ್ರೆ, ಅಧ್ಯಯನ ಭೋಜನಗಳನ್ನು ವರ್ಜಿಸಬೇಕು. ಮೋಹದಿಂದ ಸಂಧ್ಯೆಗಳಲ್ಲಿ ಭೋಜನವನ್ನು ಮಾಡಲು ಮನುಷ್ಯನು ರಾಕ್ಷಸ ನಿವಾಸನಾಗುವನು. ಸ್ನಾನ ಮಾಡಿ ಕೂದಲುಗಳನ್ನು ಕೆಡವಬಾರದು. ದಾರಿಯಲ್ಲಿ ಶೀನುವಾಗಲೂ, ಉಗುಳುವಾಗಲೂ ಬಲಗಿವಿಯನ್ನು ಮುಟ್ಟಿಕೊಳ್ಳಬೇಕು. ಸಕಲ ಭೂತಗಳಲ್ಲಿಯೂ ಕ್ಷಮೆಯುಳ್ಳವನಾಗಬೇಕು. ನೀಲವಸ್ತ್ರವನ್ನುಡಬಾರದು. ಉಡುಪನ್ನು ಅಸ್ತವ್ಯಸ್ತವಾಗಿ ಧರಿಸಬಾರದು.

೧೬೪–೧೬೭. ಮಲಿನವಾದುದನ್ನೂ, ಅಂಚು, ಸೆರಗುಗಳಿಲ್ಲದುದನ್ನೂ ಉಪಯೋಗಿಸಬಾರದು. ಯಾವ ಕಾರ್ಯವನ್ನು ಮಾಡುವಾಗಲೂ ಮುಖ, ಕೈಕಾಲುಗಳನ್ನು ತೊಳೆದುಕೊಂಡು ಕುಳಿತು ಕೈಗಳನ್ನು ಮೊಣಕಾಲುಗಳೊಳಗಿರಿಸಿ ಮೂರು ಆಚಮನಗಳನ್ನು ಮಾಡಬೇಕು. ಎರಡು ಸಲ ಮುಖಮಾರ್ಜನವನ್ನು ಮಾಡಬೇಕು. ನೀರಿನಿಂದ ಇಂದ್ರಿಯ ದ್ವಾರಗಳನ್ನೂ, ತಲೆಯನ್ನೂ ಸ್ಪರ್ಶಿಸಬೇಕು. ಮತ್ತೆ ಎರಡು ಆಚಮನಗಳನ್ನು ಮಾಡಬೇಕು. ಶೀನುವಾಗಲೂ, ಉಗುಳುವಾಗಲೂ, ಹಲ್ಲುಗಳನ್ನು ಮುಟ್ಟಿಕೊಂಡಾಗಲೂ, ಪತಿತರೊಡನೆ ಮಾತನಾಡಿದ ಮೇಲೂ ಆಚಮನಕ್ರಿಯೆಯನ್ನೆಸಗಬೇಕು. ಬುದ್ಧಿವಂತನು ನಿತ್ಯದಲ್ಲಿಯೂ ವೇದಾಧ್ಯಯನವನ್ನು ಮಾಡಬೇಕು.

ಧರ್ಮತೋ ಧನಮಾಹಾರ್ಯ ಯಷ್ಟವ್ಯಂ ಚಾಪಿ ಯತ್ನತಃ ।
ಹೀನೇಭ್ಯೋಽಪಿ ನ ಯುಂಜೀತ ತ್ವಂಕಾರಂ ಕರ್ಹಿಚಿದ್ಬುಧಃ ।
ತ್ವಂಕಾರೋ ವಾ ವಧೋ ವಾಪಿ ಗುರೂಣಾಮುಭಯಂ ಸಮಂ ॥೧೬೮॥

ಸತ್ಯಂ ವಾಚ್ಯಂ ನಿತ್ಯಮೈತ್ರೇಣ ಭಾವ್ಯಂ
ಕಾರ್ಯಂ ತ್ಯಾಜ್ಯಂ ನಿತ್ಯಮಾಯಾಸಕಾರಿ ।
ಲೋಕೇಽಮುಷ್ಮಿನ್ಯದ್ವಿನಂ ಸ್ಯಾತ್ತಥಾಸ್ಮಿನ್
ಆತ್ಮಾಯೋಗೇ ಯೋಜನೀಯೋ ಗಭೀರೈಃ ॥ ೧೬೯ ॥

ತೀರ್ಥಸ್ನಾನೈಃ ಸೋಪವಾಸೈರ್ವ್ರತೈಶ್ಚ
ಪಾತ್ರೇ ದಾನೈರ್ಹೋಮಜಪ್ಯೈಶ್ಚ ಯಜ್ಞೈಃ ।
ಭವಾರ್ಚನೈರ್ದೇವಪೂಜಾವಿಶೇಷೈಃ
ರಾತ್ಮಾನಿತ್ಯಂ ಶೋಧನೀಯೋ ಮಲಾಕ್ತಃ ॥ ೧೭೦ ॥

ಯತ್ರಾಪಿ ಕುರ್ವತೋ ನಾತ್ಮಾ ಜುಗುಪ್ಸಾಮೇತಿ ಪಾರ್ಥಿವ ।
ತತ್ಕರ್ತವ್ಯಮನಂಗೇನ ಯನ್ನ ಗೋಪ್ಯಂ ಮಹಾಜನೇ ॥ ೧೭೧ ॥

---

೧೬೮. ಧರ್ಮದಿಂದ ಧನವನ್ನು ಸಂಪಾದಿಸಿ ಯತ್ನದಿಂದ ಯಜ್ಞಯಾಗಾದಿಗಳನ್ನು ಮಾಡಬೇಕು. ವಿವೇಕಿಯಾದವನು ಎಂದಿಗೂ ಹೀನರಿಗೂ ಕೂಡ "ನೀನು" ಎಂಬ ಏಕವಚನವನ್ನು ಉಪಯೋಗಿಸಬಾರದು. ಗುರುಹಿರಿಯರಿಗಂತು ಏಕವಚನವೂ ವಧೆಯೂ ಒಂದೇ ಸಮವಾದುವೆಂದು ತಿಳಿಯಬೇಕು.

೧೬೯. ಸತ್ಯವನ್ನು ನುಡಿಯಬೇಕು. ಯಾವಾಗಲೂ ಸಕಲ ಭೂತಗಳಲ್ಲಿಯೂ ಮೈತ್ರಿಯಿಂದ ವರ್ತಿಸಬೇಕು. ಅತ್ಯಂತ ಆಯಾಸವನ್ನುಂಟು ಮಾಡುವ ಕಾರ್ಯಗಳನ್ನು ಮಾಡಬಾರದು. ಲೋಕಾಂತರಗಳಲ್ಲಿ ಹೇಗೆಯೋ, ಹಾಗೆಯೇ ಇಹಲೋಕದಲ್ಲಿಯೂ ಪ್ರತಿನಿತ್ಯವೂ ಗಂಭೀರಭಾವವುಳ್ಳವರು ಆತ್ಮಲಾಭಕ್ಕಾಗಿ ಯೋಗಾಭ್ಯಾಸವನ್ನು ಮಾಡಬೇಕು.

೧೭೦. ತೀರ್ಥಸ್ನಾನಗಳಿಂದಲೂ, ಉಪವಾಸಸಹಿತಗಳಾದ ವ್ರತನಿಯಮಗಳಿಂದಲೂ, ಸತ್ಪಾತ್ರರಲ್ಲಿ ದಾನಗಳನ್ನು ಮಾಡುವುದರಿಂದಲೂ, ಹವನಹೋಮಗಳಿಂದಲೂ, ಜಪತಪಗಳಿಂದಲೂ, ಯಜ್ಞಯಾಗಾದಿಗಳಿಂದಲೂ, ಶಿವಪೂಜೆಗಳಿಂದಲೂ, ವಿಶೇಷ ಪೂಜೆಗಳಿಂದ ಇತರ ಕಾಲಗಳಲ್ಲಿ ಇತರ ದೇವತೆಗಳಿಂದಲೂ ಮಲಸಹಿತನಾದ ಈ ಜೀವಾತ್ಮನನ್ನು ಶುದ್ಧಿಗೊಳಿಸಬೇಕು.

೧೭೧. ಎಲೈ ಕರಂಧಮನೆ! ಯಾವ ಕೆಲಸಗಳನ್ನು ಮಾಡುವುದರಿಂದ ಆತ್ಮನು ಹೀನಭಾವವನ್ನು ಹೊಂದುವುದಿಲ್ಲವೊ, ಯಾವ ಕರ್ಮಗಳು ಜನಮಧ್ಯದಲ್ಲಿ ಗೋಪ್ಯಗಳಲ್ಲವೊ ಅವುಗಳನ್ನು ಆಸಕ್ತಬುದ್ಧಿಯಿಂದ ಮಾಡಲೇಬೇಕು.

ಇತಿ ತೇ ವೈ ಸಮುದ್ದೇಶಃ ಕೀರ್ತಿತಃ ಕಿಂಚಿದೇವ ಚ ।
ಶೇಷಃ ಸ್ಮೃತಿಪುರಾಣೇಭ್ಯಸ್ತ್ವಯಾ ಶ್ರೋತವ್ಯ ಏವ ಚ ॥ ೧೭೨ ॥
ಏವಮಾಚರತೋ ಧರ್ಮಂ ಮಹೇಶಸ್ಯ ಗೃಹೇ ಸತಃ ।
ಧರ್ಮಾರ್ಥಕಾಮಸಂಪ್ರಾಪ್ತೌ ಪರತ್ರೇಹ ಚ ಶೋಭನಂ ॥ ೧೭೩ ॥
ಏವಂ ನಾನಾವಿಧಾನ್ಧರ್ಮಾನ್ಮಹಾಕಾಲಸ್ಯ ಫಾಲ್ಗುನ ।
ವದತೋ ಧ್ವನಿರಾಕಾಶೇ ಸುಮಹಾಸಭ್ಯಜಾಯತ ॥ ೧೭೪ ॥
ಯಾವತ್ಪಶ್ಯಂತಿ ಯೇ ತತ್ರ ಸಮಾಜಗ್ಮುಃ ಶೃಣುಷ್ವ ತಾನ್ ।
ಬ್ರಹ್ಮಾ ವಿಷ್ಣುಃ ಸ್ವಯಂ ರುದ್ರೋ ದೇವೀ ರುದ್ರಗಣಾಸ್ತಥಾ ॥ ೧೭೫ ॥
ಇಂದ್ರಾದಯಸ್ತಥಾ ದೇವಾ ವಸಿಷ್ಠಾದ್ಯಾ ಮುನೀಶ್ವರಾಃ ।
ತುಂಬರುಪ್ರವರಾಶ್ಚಾಪಿ ಗಂಧರ್ವಾಪ್ಸರಸಾಂ ಗಣಾಃ ॥ ೧೭೬ ॥
ತಾನ್ಮಹೇಶಮುಖಾನ್ಸರ್ವಾನ್ಮಹಾಕಾಲೋ ಮಹಾಮತಿಃ ।
ಅರ್ಚಯಾಮಾಸ ಬಹುಧಾ ಭಕ್ತ್ಯುದ್ರೇಕಾತಿಪೂರಿತಃ ॥ ೧೭೭ ॥
ತತೋ ಬ್ರಹ್ಮಾದಿಭಿರ್ದೇವೈರ್ವರೇ ರತ್ನಮಯಾಸನೇ ।
ಉಪವಿಷ್ಟೋಽಭಿಷಿಕ್ತಶ್ಚ ಮಹೀಸಾಗರಸಂಗಮೇ ॥ ೧೭೮ ॥

---

೧೭೨–೧೭೩. ಇಂತು ಧರ್ಮದ ಸ್ವರೂಪವು ಸ್ವಲ್ಪಮಟ್ಟಿಗೆ ನಿನಗೆ ತಿಳಿಸಲ್ಪಟ್ಟಿತು. ವಿಶೇಷ ವಿಷಯಗಳನ್ನು ಸ್ಮೃತಿಗಳು, ಪುರಾಣಗಳಿಂದ ಕೇಳಿ ತಿಳಿದುಕೊಳ್ಳಬೇಕು. ಈ ಧರ್ಮವನ್ನಾಚರಿಸುತ್ತ ಶಿವಾಲಯದಲ್ಲಿ ವಾಸಮಾಡು ವವನಿಗೆ ಧರ್ಮಾರ್ಥಕಾಮಗಳು ಇಹಲೋಕದಲ್ಲಿ ಲಭಿಸಿ ಪರಲೋಕದಲ್ಲಿಯೂ ಮೋಕ್ಷವು ಸಿಕ್ಕುತ್ತದೆ.''

೧೭೪. ಎಲೈ ಅರ್ಜುನನೆ! ಇಂತು ಮಹಾಕಾಲನೆಂಬ ಆ ಬ್ರಾಹ್ಮಣನು ಕರಂಧಮರಾಜನಿಗೆ ಅನೇಕ ವಿಧಗಳಾದ ಧರ್ಮಗಳನ್ನುಪದೇಶಿಸುತ್ತಿರಲು ಆಕಾಶದಲ್ಲಿ ದೊಡ್ಡದಾದ ಧ್ವನಿಯುಂಟಾಯಿತು.

೧೭೫–೧೭೭. ಇವರು ನೋಡುತ್ತಿರುವಂತೆಯೇ ಬ್ರಹ್ಮ, ವಿಷ್ಣು, ಮಹಾದೇವ, ಪಾರ್ವತಿ, ರುದ್ರಗಣಗಳು, ಇಂದ್ರಾದಿ ದೇವತೆಗಳು, ವಸಿಷ್ಠಾದಿ ಮುನಿಶ್ರೇಷ್ಠರು, ತುಂಬುರು ಗಣಗಳು, ಗಂಧರ್ವರು, ಅಪ್ಸರೋಗಣಗಳು ಮುಂತಾದವರೆಲ್ಲರೂ ಅಲ್ಲಿ ನೆರೆದರು. ವಿದ್ವದ್ವರಿಷ್ಠನಾದ ಮಹಾಕಾಲನು ಅತ್ಯಂತ ಭಕ್ತಿಯುಕ್ತನಾಗಿ ರುದ್ರನೇ ಮೊದಲಾದ ಅವರೆಲ್ಲರಿಗೂ ಅನೇಕ ವಿಧಗಳಾದ ಆತಿಥ್ಯಗಳನ್ನು ನಡೆಸಿದನು.

೧೭೮. ಬಳಿಕ ಆ ಮಹೀಸಾಗರಸಂಗಮಕ್ಷೇತ್ರದಲ್ಲಿಯೇ ಆತನನ್ನು ಉತ್ತಮವಾದ ರತ್ನಮಯವಾದ ಸಿಂಹಾಸನದಲ್ಲಿ ಕುಳ್ಳಿರಿಸಿ ಬ್ರಹ್ಮಾದಿ ದೇವತೆಗಳು ಆತನಿಗೆ ಅಭಿಷೇಕವನ್ನು ಮಾಡಿದರು.

ತತೋ ದೇವ್ಯಾ ಸಮಾಲಿಂಗ್ಯ ನೀತ್ವೋತ್ಸಂಗಂ ಸ್ವಕಂ ಮುದಾ ।
ಪುತ್ರತ್ವೇ ಕಲ್ಪಿತಃ ಪಾರ್ಥ ಮಹಾಕಾಲೋ ಮಹಾಮತಿಃ ॥ ೧೭೯ ॥
ಉಕ್ತಂಚ ಯಾವದ್ಬ್ರಹ್ಮಾಂಡಮಿದಮಾಸ್ತೇ ಶಿವವ್ರತ ।
ತಾವತ್ತಿಷ್ಠ ಶಿವಸ್ಥಾನೇ ಶಿವವಚ್ಛಿವಭಕ್ತಿತಃ ॥ ೧೮೦ ॥
ದೇವೇನ ಚ ವರೋ ದತ್ತಃ ತ್ವಲ್ಲಿಂಗಂ ಯೋಽರ್ಚಯಿಷ್ಯತಿ ।
ಜಿತೇಂದ್ರಿಯಃ ಶುಚಿರ್ಭೂತ್ವಾ ಊರ್ಧ್ವಂ ಮಲ್ಲೋಕಮೇಷ್ಯತಿ ॥ ೧೮೧ ॥
ದರ್ಶನಂ ಸ್ತವನಂ ಪೂಜಾ ಪ್ರಣಾಮಶ್ಚ ತತೋ ಜಪಃ ।
ದಾನಂ ಚಾತ್ರ ಕೃತಂ ಲಿಂಗೇ ಮಮಾತಿತೃಪ್ತಿಕಾರಣಂ ॥ ೧೮೨ ॥
ಇತ್ಯುಕ್ತೇ ವಿಸ್ಮಿತಾ ದೇವಾಃ ಸಾಧು ಸಾಧ್ವಿತಿ ತೇ ಜಗುಃ ।
ಬ್ರಹ್ಮವಿಷ್ಣುಮುಖಾಶ್ಚೈವ ಮಹಾಕಾಲಂ ಪ್ರತುಷ್ಟುವುಃ ॥ ೧೮೩ ॥
ತತಃ ಸುರೈಃ ಸ್ತೂಯಮಾನೋ ವಂದ್ಯಮಾನಶ್ಚ ಚಾರಣೈಃ ।
ನೃತ್ಯದ್ಭಿರಪ್ಸರೋಭಿಶ್ಚ ಗೀತೈರ್ಗಂಧರ್ವಜೈಃ ಶುಭೈಃ ॥ ೧೮೪ ॥
ಕೋಟಿ ಕೋಟಿಗಣೈಶ್ಚೈವ ಸ್ತುವದ್ಭಿಃ ಸರ್ವತೋ ವೃತಃ ।
ಮಹಾಕಾಲೋ ರುದ್ರಭವನಂ ಗತೋ ಭವಪುರಸ್ಸರಃ ।
ಏವಮೇತನ್ಮಹಾಲಿಂಗಮುತ್ಪನ್ನಂ ಕುರುನಂದನ ॥ ೧೮೬ ॥

---

೧೭೯. ಬಳಿಕ ಆ ಮಹಾಕಾಲನು ಪಾರ್ವತಿಯಿಂದ ಕರೆಯಲ್ಪಟ್ಟವನಾಗಿ ಆಕೆಯ ತೊಡೆಯ ಮೇಲೆ ಕುಳಿತು ಮಗನಂತೆ ಭಾವಿಸಲ್ಪಟ್ಟನು.

೧೮೦. ಆ ಬಳಿಕ ಆಕೆಯು ಆತನಿಗಿಂತು ವರವನ್ನಿತ್ತಳು :—'' ಎಲೈ ಶಿವಾಚಾರತತ್ಪರನೆ! ಈ ಬ್ರಹ್ಮಾಂಡವು ಎಲ್ಲಿಯವರೆಗೆ ನಿಲ್ಲುವುದೊ, ಅಲ್ಲಿಯವರೆಗೂ ನೀನು ನಿನ್ನ ಶಿವಭಕ್ತಿಯ ಪ್ರಭಾವದ ಫಲವಾಗಿ ಶಿವಲೋಕದಲ್ಲಿ ನೆಲಸಿರು.''

೧೮೧. ಮಹಾದೇವನೂ ಕೂಡ ವರವನ್ನು ಕೊಟ್ಟನೆಂತನೆ :—'' ಈ ನನ್ನ ಲಿಂಗವನ್ನು ಜಿತೇಂದ್ರಿಯನೂ ಶುಚಿರ್ಭೂತನೂ ಆಗಿ ಯಾವನು ಪೂಜಿಸುವನೊ, ಅವನು ದೇಹಪಾತವಾದ ಮೇಲೆ ನನ್ನ ಲೋಕವನ್ನು ಸೇರುವನು.

೧೮೨. ಈ ಶಿವಲಿಂಗದ ಸನ್ನಿಧಿಯಲ್ಲಿ ಮಾಡಿದ ದರ್ಶನ, ಸ್ತೋತ್ರ, ಪೂಜೆ, ನಮಸ್ಕಾರ, ಜಪ, ದಾನಗಳು ನನಗೆ ಅತ್ಯಂತ ತೃಪ್ತಿಯನ್ನುಂಟುಮಾಡುವುವು.''

೧೮೩. ಇಂತು ಹೇಳಿದ ಮಹೇಶ್ವರನ ಮಾತುಗಳನ್ನು ಕೇಳಿ ಬ್ರಹ್ಮ, ವಿಷ್ಣು, ಮೊದಲಾದ ದೇವತೆಗಳೆಲ್ಲರೂ ವಿಸ್ಮಯಗೊಂಡು ಸಾಧುವಾದವನ್ನು ಮಾಡುತ್ತ ಮಹಾಕಾಲನನ್ನು ಸ್ತುತಿಸಿದರು.

೧೮೪–೧೮೬. ಹೀಗೆ ದೇವತೆಗಳು ಸ್ತೋತ್ರಮಾಡುತ್ತಿರಲು, ಚಾರಣರು ನಮಸ್ಕರಿಸುತ್ತಿರಲು, ಅಪ್ಸರಸೆಯರು ನರ್ತಿಸುತ್ತಿರಲು, ಗಂಧರ್ವರು ಮಧುರವಾಗಿ ಗಾಯನಮಾಡುತ್ತಿರಲು, ಕೋಟಿಕೋಟಿ ಸಂಖ್ಯಾಕರಾದ ರುದ್ರಗಣಗಳು

ಕೂಪಶ್ಚಾಪಿ ಸರಃ ಪುಣ್ಯಂ ಮಹಾಕಾಲಸ್ಯ ಸಿದ್ಧಿದಂ ।
ಅತ್ರ ಯೇ ಮನುಜಾಃ ಪಾರ್ಥ ಲಿಂಗಸ್ಯಾರಾಧನೇ ರತಾಃ ॥ ೧೮೭ ॥
ಮಹಾಕಾಲಃ ಸಮಾಲಿಂಗ್ಯ ತಾನ್ಶಿವಾಯ ನಿವೇದಯೇತ್ ।
ಏತದತ್ಯದ್ಭುತಂ ಲಿಂಗಂ ತ್ರಿಷು ಲೋಕೇಷು ವಿಶ್ರುತಂ ॥ ೧೮೮ ॥
ದೃಷ್ಟಂ ಸ್ಪೃಷ್ಟಂ ಪೂಜಿತಂ ಚ ಗತಾಸ್ತೇ ಭವಪದ್ಮ ತತ್ ।
ಏವಮೇತಾನಿ ಲಿಂಗಾನಿ ಸಪ್ತ ಜಾತಾನಿ ಫಾಲ್ಗುನ ॥ ೧೮೯ ॥
ಯೇ ಶೃಣ್ವಂತಿ ಗೃಣಂತ್ಯೇತತ್ತೇಽಪಿ ಧನ್ಯಾ ನರೋತ್ತಮಾಃ ॥ ೧೯೦ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪ್ರಥಮೇ ಮಾಹೇಶ್ವರಖಂಡೇ ಕೌಮಾರಿಕಾಖಂಡೇ
"ಶ್ರೀ ಮಹಾಕಾಲ ಮಾಹಾತ್ಮ್ಯೇ ಮಹಾಕಾಲಕರಂಧಮಸಂವಾದೇ ಶಿವಪೂಜನವಿಧಿ
ನಿತ್ಯಕರ್ತವ್ಯಧರ್ಮನಿರೂಪಣ ಪೂರ್ವಕ ಮಹಾಕಾಲ ಶಿವಲೋಕ ಪ್ರಾಪ್ತಿ ವರ್ಣನಂ"
ನಾಮ ಏಕಚತ್ವಾರಿಂಶೋಽಧ್ಯಾಯಃ

---

ಸ್ತುತಿಸುತ್ತ ಸುತ್ತುವರೆದಿರಲು ಮಹಾಕಾಲನು ಶಿವನನ್ನು ಹಿಂಬಾಲಿಸಿ ಕೈಲಾಸವನ್ನು ಕುರಿತು ತೆರಳಿದನು. ಎಲೈ ಪಾಂಡವಶ್ರೇಷ್ಠನೆ! ಇಂತು ಈ ಮಹಾಕಾಲ ಲಿಂಗವು ಉತ್ಪನ್ನವಾಯಿತು.

೧೮೭. ಮಹಾಕಾಲನ ಕೂಪವೂ, ಸರೋವರವೂ ಪುಣ್ಯವನ್ನೂ ಕಾರ್ಯ ಸಿದ್ಧಿಯನ್ನೂ ಉಂಟುಮಾಡುವುವು. ಎಲೈ ಪಾರ್ಥನೆ! ಇಲ್ಲಿ ಯಾರು ಲಿಂಗದ ಆರಾಧನೆಯಲ್ಲಿ ನಿರತರಾಗಿರುವರೊ, ಅವರನ್ನು ಮಹಾಕಾಲನೇ ಆಲಿಂಗನ ಪೂರ್ವಕವಾಗಿ ಕರೆದುಕೊಂಡು ಹೋಗಿ ಶಿವನಿಗೆ ಒಪ್ಪಿಸುವನು.

೧೮೮. ಈ ಅದ್ಭುತವಾದ ಲಿಂಗವು ಮೂರು ಲೋಕಗಳಲ್ಲಿಯೂ ಪ್ರಸಿದ್ಧ ವಾಗಿರುವುದು. ಇದನ್ನು ಯಾರು ನೋಡಿ ಮುಟ್ಟಿ ಪೂಜಿಸುವರೊ, ಅವರು ಶಿವಸಾಯುಜ್ಯವನ್ನು ಹೊಂದುವರು.

೧೮೯-೧೯೦. ಎಲೈ ಅರ್ಜುನನೆ! ಈ ಪ್ರಕಾರ ಮಹೀಸಾಗರಸಂಗಮ ಕ್ಷೇತ್ರದಲ್ಲಿ ಏಳು ಶಿವಲಿಂಗಗಳು ಸ್ಥಾಪಿತವಾಗಿರುವುವು. ಈ ಚರಿತ್ರೆಯನ್ನು ಯಾರು ಕೇಳುವರೊ, ಹೇಳುವರೊ ಆ ಮನುಷ್ಯೋತ್ತಮರೂ ಕೂಡ ಧನ್ಯರು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಎರಡನೆಯ ಕೌಮಾರಿಕಾಖಂಡದಲ್ಲಿ
"ಶ್ರೀ ಮಹಾಕಾಲ ಕರಂಧಮಸಂವಾದ – ಶಿವಪೂಜನ ವಿಧಿ, ನಿತ್ಯಕರ್ತವ್ಯ
ಧರ್ಮನಿರೂಪಣ, ಮಹಾಕಾಲನ ಶಿವಲೋಕಪ್ರಾಪ್ತಿ ವರ್ಣನ"ವೆಂಬ
ನಲವತ್ತೊಂದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ದ್ವಿಚತ್ವಾರಿಂಶೋಽಧ್ಯಾಯಃ

### ಶ್ರೀ ವೃದ್ಧವಾಸುದೇವ ಮಾಹಾತ್ಮ್ಯವರ್ಣನಂ — ಐತರೇಯ ಬ್ರಾಹ್ಮಣ ಚರಿತ್ರವರ್ಣನಂ

ನಾರದ ಉವಾಚ:—

ತತೋ ಮಯಾ ಸ್ಥಾಪಿತೇ ಚ ಸ್ಥಾನೇ ಕಾಲಾಂತರೇಣ ಹ ।
ಚಿಂತಿತಂ ಹೃದಯೇ ಭೂಯೋ ದ್ವಿಜಾನುಗ್ರಹಕಾಮ್ಯಯಾ ॥ ೧ ॥
ವಾಸುದೇವ ವಿಹೀನಂ ಹಿ ತೀರ್ಥಮೇತನ್ನ ರೋಚತೇ ।
ಅಸೂರ್ಯಂ ಹಿ ಜಗದ್ಯದ್ವತ್ಸಹಿ ಭೂಷಣಭೂಷಣಂ ॥ ೨ ॥
ಯತ್ರ ನೈವ ಹರಿಃ ಸ್ವಾಮೀ ತೀರ್ಥೇ ಗೇಹೇಽಥ ಮಾನಸೇ ।
ಶಾಸ್ತ್ರೇ ವಾ ತದಸತ್ಸರ್ವಂ ಹಾಸಂ ತೀರ್ಥಂ ನ ವಾಯಸಂ ॥ ೩ ॥
ತಸ್ಮಾತ್ಪ್ರಸಾದ್ಯ ವರದಂ ತೀರ್ಥೇಽಸ್ಮಿನ್ಪುರುಷೋತ್ತಮಂ ।
ಆನೇಷ್ಯೇ ಕಲಯಾ ಸಾಕ್ಷಾದ್ವಿಶ್ವಾನುಗ್ರಹಕಾಮ್ಯಯಾ ॥ ೪ ॥
ಇತಿ ಸಂಚಿಂತ್ಯ ಕೌರವ್ಯ ತತೋಽಹಂ ಚಾತ್ರ ಸಂಸ್ಥಿತಃ ।
ಜ್ಞಾನಯೋಗೇನ ಯೋಗೀಂದ್ರಂ ಶತಂ ವರ್ಷಾಣ್ಯತೋಷಯಂ ॥ ೫ ॥

---

## ಕನ್ನಡದ ಅನುವಾದ

### ಶ್ರೀ ವೃದ್ಧವಾಸುದೇವ ಮಾಹಾತ್ಮ್ಯವರ್ಣನ— ಐತರೇಯ ಬ್ರಾಹ್ಮಣ ಚರಿತ್ರವರ್ಣನ

೧. ನಾರದನು ಹೇಳುತ್ತಾನೆ:—ಬಳಿಕ ನಾನೇ ಸ್ಥಾಪಿಸಿದ ಈ ಕ್ಷೇತ್ರದಲ್ಲಿರಲು ಕೆಲವು ಕಾಲದ ಮೇಲೆ ಬ್ರಾಹ್ಮಣರಿಗೆ ಅನುಗ್ರಹವನ್ನು ಮಾಡಬೇಕೆಂಬ ಚಿಂತೆಯು ನನ್ನ ಹೃದಯದಲ್ಲಿ ಮೂಡಿತು.

೨. "ಸೂರ್ಯನಿಲ್ಲದ ಪ್ರಪಂಚದಂತೆ ವಾಸುದೇವನಿಲ್ಲದ ಈ ಕ್ಷೇತ್ರವು ಶೋಭಿಸುವುದಿಲ್ಲ. ಆತನೇ ಸಕಲ ಭೂಷಣಗಳಿಗೂ ಭೂಷಣಪ್ರಾಯನು.

೩. ಯಾವ ತೀರ್ಥದಲ್ಲಿಯೂ, ಗೃಹದಲ್ಲಿಯೂ, ಮನಸ್ಸಿನಲ್ಲಿಯೂ ಶಾಸ್ತ್ರದಲ್ಲಿಯೂ ಲೋಕನಾಯಕನಾದ ಹರಿಯು ನೆಲಸಿರುವುದಿಲ್ಲವೋ ಅದು ಕೇವಲ ನಿಕೃಷ್ಟವೇ ಸರಿ. ಆ ತೀರ್ಥವೂ ವಾಯಸ ಸೇವಿತವೆನಿಸುವುದೇ ಹೊರತು ಹಂಸಾಶ್ರಯವೆನಿಸುವುದಿಲ್ಲವು.

೪. ಆದುದರಿಂದ ವರಪ್ರದನಾದ ಪುರುಷೋತ್ತಮನನ್ನು ಪ್ರಸನ್ನೀಕರಿಸಿಕೊಂಡು ಲೋಕಾನುಗ್ರಹವನ್ನು ಮಾಡಲು ಆತನನ್ನೇ ಸಾಕ್ಷಾತ್ತಾಗಿ ಅಂಶರೂಪದಿಂದ ಇಲ್ಲಿಗೆ ಕರೆತರುವೆನು."

೫–೬. ಎಲೈ ಅರ್ಜುನನೇ! ಇಂತು ಯೋಚಿಸಿ ನಾನು ಅಷ್ಟಾಕ್ಷರಿಯನ್ನು ಜಪಿಸುತ್ತ, ಇಂದ್ರಿಯಗಳನ್ನು ನಿಗ್ರಹಿಸಿ, ವಾಸುದೇವನಲ್ಲಿಯೇ ನಟ್ಟ

ಅಷ್ಟಾಕ್ಷರಂ ಜಪನ್ಮಂತ್ರಂ ಸನ್ನಿಗೃಹ್ಯೇಂದ್ರಿಯಾಣಿ ಚ ।
ವಾಸುದೇವಮಯೋ ಭೂತ್ವಾ ಸರ್ವಭೂತದಯಾಪರಃ ॥ ೬ ॥
ಏವಂ ಮಯಾರಾಧ್ಯಮಾನೋ ಗರುಡಂ ಹರಿರಾಸ್ಥಿತಃ ।
ಗಣಕೋಟಿಪರಿವೃತಃ ಪ್ರತ್ಯಕ್ಷಃ ಸಮಜಾಯತ ॥ ೭ ॥
ತಮಹಂ ಪ್ರಾಂಜಲಿರ್ಭೂತ್ವಾ ದತ್ವಾಽರ್ಘ್ಯಂ ವಿಧಿವದ್ಧರೇಃ ।
ಪ್ರತ್ಯವೋಚಂ ಪ್ರಣಮ್ಯಾಥ ಪ್ರಬದ್ಧಕರಸಂಪುಟಃ ॥ ೮ ॥
ಶ್ವೇತದ್ವೀಪೇ ಪುರಾ ದೃಷ್ಟಂ ಮಯಾ ರೂಪಂ ತವ ಪ್ರಭೋ ।
ಅಜಂ ಸನಾತನಂ ವಿಷ್ಣೋ ನರನಾರಾಯಣಾತ್ಮಕಂ ॥ ೯ ॥
ತದ್ರೂಪಸ್ಯ ಕಲಾಮೇಕಾಂ ಸ್ಥಾಪಯಾತ್ರ ಜನಾರ್ದನ ।
ಯದಿ ತುಷ್ಟೋಽಸಿ ಮೇ ವಿಷ್ಣೋ ತದಿದಂ ಕ್ರಿಯತಾಂ ತ್ವಯಾ ॥ ೧೦ ॥
ಏವಂ ಮಯಾ ಪ್ರಾರ್ಥಿತೋಽಥ ಪ್ರೋವಾಚ ಗರುಡಧ್ವಜಃ ।
ಏವಮಸ್ತು ಬ್ರಹ್ಮಪುತ್ರ ಯತ್ತ್ವಯಾಭೀಪ್ಸಿತಂ ಹೃದಿ ।
ತತ್ತಥಾ ಭವಿತಾ ಸರ್ವಮಸ್ಯತ್ರಸ್ಥಂ ಸದೈವ ಹಿ ॥ ೧೧ ॥

---

ಮನಸ್ಸುಳ್ಳವನಾಗಿ, ಸಕಲ ಭೂತಗಳಲ್ಲಿಯೂ ದಯೆಯನ್ನು ತೋರಿಸುತ್ತ, ಜ್ಞಾನಯೋಗದ ಮಾರ್ಗದಿಂದ ನೂರು ವರ್ಷಗಳ ಕಾಲ ಇಲ್ಲಿ ನಿಂತು ತಪಸ್ಸು ಮಾಡಿ ಯೋಗಿಗಳೊಡೆಯನಾದ ನಾರಾಯಣನನ್ನು ಸಂತೋಷಗೊಳಿಸಿದೆನು.

೭–೮. ಇಂತು ನನ್ನಿಂದ ಭಜಿಸಲ್ಪಟ್ಟವನಾಗಿ ಮಹಾವಿಷ್ಣುವು ಗರುಡಾರೂಢನಾಗಿ, ಅನೇಕ ಕೋಟಿ ವೈಷ್ಣವ ಗಣಗಳಿಂದ ಪರಿವೃತನಾಗಿ, ನನಗೆ ಪ್ರತ್ಯಕ್ಷನಾದನು. ಆಗಲಾ ಹರಿಗೆ ನಮಸ್ಕರಿಸಿ ಅರ್ಘ್ಯವಾದ್ಯಾದಿಗಳನ್ನು ವಿಧ್ಯುಕ್ತ ರೀತಿಯಿಂದಿತ್ತು ಕೈಗಳನ್ನು ಜೋಡಿಸಿಕೊಂಡು ನಾನು ಮುಂದೆ ಹೇಳುವಂತೆ ಪ್ರಾರ್ಥಿಸಿಕೊಂಡೆನು.

೯. "ಲೋಕೇಶ್ವರನಾದ ವಿಷ್ಣುವೇ! ಪೂರ್ವದಲ್ಲಿ ಶ್ವೇತದ್ವೀಪದಲ್ಲಿ ಜನ್ಮರಹಿತವಾಗಿಯೂ, ಶಾಶ್ವತವಾದುದಾಗಿಯೂ ಇರುವ ನರನಾರಾಯಣಾತ್ಮಕವಾದ ನಿನ್ನ ರೂಪವನ್ನು ನಾನು ನೋಡಿದ್ದೆನು.

೧೦. ಎಲೈ ಜನಾರ್ದನನೆ! ಆ ರೂಪದ ಒಂದು ಅಂಶವನ್ನು ಇಲ್ಲಿ ಸ್ಥಾಪಿಸುವವನಾಗು. ಎಲೈ ವಿಷ್ಣುವೆ! ನನ್ನ ತಪಸ್ಸಿನಿಂದ ನೀನು ಸಂತುಷ್ಟನಾಗಿದ್ದಲ್ಲಿ ನನಗಾಗಿ ಈ ಕಾರ್ಯವನ್ನು ಮಾಡು."

೧೧. ಈ ರೀತಿ ನನ್ನಿಂದ ಪ್ರಾರ್ಥಿತನಾಗಿ ಶ್ರೀಮಹಾವಿಷ್ಣುವು ಇಂತೆಂದನು. "ಎಲೈ ಬ್ರಹ್ಮಮಾನಸ ಪುತ್ರನಾದ ನಾರದನೆ! ನೀನು ಹೃದಯದಲ್ಲಿ ನೆನಸಿದಂತೆಯೇ ಆಗಲಿ. ಇಲ್ಲಿರುವ ಸಕಲವೂ ಸರ್ವಕಾಲದಲ್ಲಿಯೂ ನಿನ್ನ ಇಷ್ಟದಂತೆಯೇ ಇರುವುದು."

ಏವಮುಕ್ತ್ವಾ ಗತೇ ವಿಷ್ಣೌ ನಿವೇಶ್ಯ ಸಕಲಾಂ ಪ್ರಭೋ ।
ಮಯಾ ಸಂಸ್ಥಾಪಿತೋ ವಿಷ್ಣುರ್ಲೋಕಾನುಗ್ರಹಕಾಮ್ಯಯಾ ॥ ೧೨ ॥
ಯಸ್ಮಾತ್ಸ್ವಯಂ ಶ್ವೇತದ್ವೀಪನಿವಾಸ್ಯತ್ರ ಹರಿಃ ಸ್ಥಿತಃ ।
ವೃದ್ಧೋ ವಿಶ್ವಸ್ಯ ವಿಶ್ವಾಖ್ಯೋ ವಾಸುದೇವಸ್ತತಃ ಸ್ಮೃತಃ ॥ ೧೩ ॥
ಕಾರ್ತಿಕೇ ಶುಕ್ಲಪಕ್ಷೇ ಯಾ ಭವತ್ಯೇಕಾದಶೀ ಶುಭಾ ॥ ೧೪ ॥
ಸ್ನಾನಂ ಕೃತ್ವಾ ವಿಧಾನೇನ ತೋಯಪ್ರಸ್ರವಣಾದಿಷು ।
ಯೋಽರ್ಚಯೇದಚ್ಯುತಂ ಭಕ್ತ್ಯಾ ಪಂಚೋಪಚಾರಪೂಜಯಾ ॥ ೧೫ ॥
ಉಪೋಷ್ಯ ಜಾಗರಂ ಕುರ್ಯಾದ್ಗೀತವಾದ್ಯಂ ಹರೇಃ ಪುರಃ ।
ಕಥಾಂ ವಾ ವೈಷ್ಣವೀಂ ಕುರ್ಯಾದ್ದಂಭಕ್ರೋಧವಿವರ್ಜಿತಃ ॥ ೧೬ ॥
ದಾನಂ ದದ್ಯಾದ್ಯಥಾಶಕ್ತ್ಯಾ ನಿಯತೋ ಹೃಷ್ಟಮಾನಸಃ ।
ಅನೇಕಭವಸಂಭೂತಾತ್ಕಲ್ಮಷಾದಖಿಲಾದಪಿ ॥ ೧೭ ॥
ಮುಚ್ಯತೇಽಸೌ ನ ಸಂದೇಹೋ ಯದ್ಯಪಿ ಬ್ರಹ್ಮಘಾತಕಃ ।
ಗಾರುಡೇನ ವಿಮಾನೇನ ವೈಕುಂಠಂ ಪದಮಾಪ್ನುಯಾತ್ ॥ ೧೮ ॥

---

೧೨. ಎಲೈ ಅರ್ಜುನನೆ! ಇಂತು ಹೇಳಿ ವಿಷ್ಣುವು ಅಂತರ್ಹಿತನಾಗಲು ಇಲ್ಲಿ ಲೋಕಾನುಗ್ರಹವಾಗಲೆಂಬ ಅಪೇಕ್ಷೆಯಿಂದ ವಿಷ್ಣುಮೂರ್ತಿಯು ನನ್ನಿಂದ ಸ್ಥಾಪಿಸಲ್ಪಟ್ಟಿತು.

೧೩. ಶ್ವೇತದ್ವೀಪ ನಿವಾಸಿಯಾದ ಹರಿಯೇ ಇಲ್ಲಿ ನೆಲಸಿರುವುದರಿಂದ ವಿಶ್ವನೆಂಬ ಹೆಸರುಳ್ಳವನೂ, ಪ್ರಪಂಚಕ್ಕೆ ಮೊದಲಿನಿಂದಿರುವ ಅನಾದಿಪುರುಷನೂ ಆದ ಹರಿಯು ವೃದ್ಧ ವಾಸುದೇವನೆಂದೆನಿಸಿರುವನು.

೧೪-೧೮. ಕಾರ್ತಿಕಮಾಸದ ಶುಕ್ಲಪಕ್ಷದ ಏಕಾದಶಿಯ ದಿವಸ ಸಮಾಹಿತ ಮನಸ್ಸಿನಿಂದ ತಟಾಕದಲ್ಲಾಗಲಿ, ನದಿಯಲ್ಲಾಗಲಿ ಸ್ನಾನವನ್ನು ಮಾಡಿ ಪಂಚೋಪಚಾರಗಳಿಂದ ಭಗವಂತನನ್ನು ಪೂಜಿಸಿ, ಉಪವಾಸವ್ರತವನ್ನನುಸರಿಸಿ ರಾತ್ರಿಯಲ್ಲಿ ಆ ಹರಿಯ ಸನ್ನಿಧಿಯಲ್ಲಿ ಗೀತವಾದ್ಯಗಳಿಂದಲಾಗಲಿ ವೈಷ್ಣವ ಸತ್ಕಥಾಶ್ರವಣದಿಂದಲಾಗಲಿ ಜಾಗರಣೆಯನ್ನು ಮಾಡಬೇಕು. ಅಹಂಕಾರ ಕ್ರೋಧಗಳನ್ನು ವರ್ಜಿಸಬೇಕು. ನಿಯಮದಿಂದಲೂ ಸಂತೋಷಗೊಂಡ ಮನಸ್ಸಿನಿಂದಲೂ ಶಕ್ತ್ಯನುಸಾರವಾಗಿ ದಾನವನ್ನು ಮಾಡಬೇಕು. ಇಂತು ಭಕ್ತಿಯಿಂದ ಪೂಜೆಯನ್ನು ಮಾಡಲು ಬ್ರಹ್ಮಘಾತಕನೂ ಕೂಡ ಅನೇಕ ಜನ್ಮಗಳಲ್ಲಿ ಮಾಡಿದ ಸಮಸ್ತ ಪಾಪಗಳಿಂದಲೂ ಬಿಡುಗಡೆಯನ್ನು ಹೊಂದುವನು. ಇದರಲ್ಲಿ ಸಂದೇಹವೇ ಇಲ್ಲವು. ಆತನು ಗರುಡನಿಂದೊಡಗೂಡಿದ ವಿಮಾನದಲ್ಲಿ ವೈಕುಂಠವನ್ನು ಕುರಿತು ತೆರಳುವನು.

ಕುಲಾನಾಂ ತಾರಯೇತ್ಪಾರ್ಥ ಶತಮೇಕೋತ್ತರಂ ನರಃ ।
ಶ್ರದ್ಧಾಯುಕ್ತಂ ಮುದಾ ಯುಕ್ತಂ ಸೋತ್ಸಾಹಂ ಸಸ್ಪೃಹಂ ತಥಾ ॥
ಅಹಂಕಾರವಿಹೀನಂ ಚ ಸ್ನಾನಂ ಧೂಪಾನುಲೇಪನಂ ।
ಪುಷ್ಪನೈವೇದ್ಯಸಂಯುಕ್ತಮರ್ಘ್ಯದಾನಸಮನ್ವಿತಂ ॥ ೨೦ ॥
ಯಾಮೇ ಯಾಮೇ ಮಹಾಭಕ್ತ್ಯಾ ಕೃತಾರಾರ್ತಿಕಸಂಯುತಂ ।
ಚಾಮರಾಹ್ಲಾದಸಂಯುಕ್ತಂ ಭೇರೀನಾದಪುರಸ್ಕೃತಂ ॥ ೨೧ ॥
ಪುರಾಣಶ್ರುತಿಸಂಪನ್ನಂ ಭಕ್ತಿನೃತ್ಯಸಮನ್ವಿತಂ ।
ವಿನಿದ್ರಂ ಕ್ಷುತ್ತೃಷಾಸ್ವಾದಸ್ಪೃಹಾಹೀನಂ ಚ ಭಾರತ ॥ ೨೨ ॥
ತತ್ಪಾದ ಸೌರಭಘ್ರಾಣಸಂಯುತಂ ವಿಷ್ಣುವಲ್ಲಭಂ ।
ಸಂಗೀತಂ ಸಾರ್ಚನಕರಂ ತತ್ ಕ್ಷೇತ್ರ ಗಮನಾನ್ವಿತಂ ॥ ೨೩ ॥
ಪಾಯುರೋಧೇನ ಸಂಯುಕ್ತಂ ಬ್ರಹ್ಮಚರ್ಯಸಮನ್ವಿತಂ ।
ಸ್ತುತಿಪಾಠೇನ ಸಂಯುಕ್ತಂ ಪಾದೋದಕವಿಭೂಷಿತಂ ॥ ೨೪ ॥
ಸತ್ಯಾನ್ವಿತಂ ಸತ್ಯಯೋಗಸಂಯುತಂ ಪುಣ್ಯವಾರ್ತಯಾ ।
ಪಂಚವಿಂಶತಿಭಿರ್ಯುಕ್ತಂ ಗಣೈರ್ಯೋ ಜಾಗರಂ ನರಃ ।
ಏಕಾದಶ್ಯಾಂ ಪ್ರಕುರ್ವೀತ ಪುನರ್ನ ಜಾಯತೇ ಭುವಿ ॥ ೨೫ ॥

---

೧೯–೨೫. ಎಲೈ ಪಾರ್ಥನೆ! ಅಂತಹ ಹರಿಭಕ್ತನು ತನ್ನ ನೂರೊಂದು ಕುಲದವರನ್ನೂ ಉದ್ಧರಿಸುವನು. ಶ್ರದ್ಧಾಯುಕ್ತವೂ, ಸಂತೋಷದಿಂದೊಡಗೂಡಿದುದೂ, ಉತ್ಸಾಹಭರಿತವಾದುದೂ, ಇಚ್ಛಾಯುಕ್ತವೂ, ಅಹಂಕಾರರಹಿತವೂ ಸ್ನಾನ, ಧೂಪ, ಲೇಪನ, ಪುಷ್ಪ, ನೈವೇದ್ಯ, ಅರ್ಘ್ಯದಾನಗಳಿಂದ ಕೂಡಿದುದೂ, ಪ್ರತಿಯಾಮದಲ್ಲಿಯೂ ಮಹಾಭಕ್ತಿಯಿಂದ ಮಂಗಳಾರತಿಯನ್ನುಮಾಡುವುದೂ, ಚಾಮರಗಳನ್ನು ಸಂತೋಷದಿಂದ ಬೀಸುವುದೂ, ಭೇರಿಯೇ ಮೊದಲಾದ ಮಂಗಳವಾದ್ಯ ಸಹಿತವೂ, ಪುರಾಣಶ್ರವಣಯುಕ್ತವೂ, ಭಕ್ತಿಯಿಂದ ನರ್ತನ ಮಾಡುವುದೂ, ನಿದ್ರೆಯನ್ನು ಮಾಡದಿರುವುದೂ, ಹಸಿವು, ನೀರಡಿಕೆ, ಉಪಹಾರ ಫಲಾಪೇಕ್ಷೆಗಳಿಂದ ರಹಿತವಾದುದೂ, ಪರಮಾತ್ಮನ ಪಾದಕಮಲಗಳ ಸುಗಂಧವನ್ನಾಘ್ರಾಣಿಸುವುದೂ, ವಿಷ್ಣುವೇ ಸ್ವಾಮಿಯೆಂಬ ಭಾವವೂ, ಸಂಗೀತವನ್ನು ಹಾಡುವುದೂ, ಕೈತುಂಬ ಪೂಜಿಸುವುದೂ, ವಿಷ್ಣುಕ್ಷೇತ್ರಗಳನ್ನು ಸುತ್ತುವುದೂ, ಪಾಯೂಪಸ್ಥೆಗಳ ನಿರೋಧವೂ, ಬ್ರಹ್ಮಚರ್ಯದಿಂದಿರುವುದೂ, ವಿಷ್ಣುವಿನ ಸ್ತೋತ್ರಪಾಠಗಳನ್ನು ಹೇಳುವುದೂ, ಪಾದೋದಕವನ್ನು ಸೇವಿಸುವುದೂ, ಸತ್ಯ ಯುಕ್ತವಾದ ನಡೆವಳಿಕೆಯೂ, ಸತ್ಯಸ್ವರೂಪಿಯಾದ ಪರಮಾತ್ಮನೊಡನೆ ಸೇರುವುದೂ, ಪುಣ್ಯತಮಗಳಾದ ಭಾಗವತರ ಚರಿತ್ರೆಗಳೇ ಮೊದಲಾದ ಸತ್ಕಥೆ

ಅತ್ರ ತೀರ್ಥವರೇ ಪೂರ್ವಮೈತರೇಯ ಇತಿ ದ್ವಿಜಃ ।
ಸಿದ್ಧಿಂ ಪ್ರಾಪ್ತೋ ಮಹಾಭಾಗೋ ವಾಸುದೇವ ಪ್ರಸಾದತಃ ॥ ೨೬ ॥
ಅರ್ಜುನ ಉವಾಚ :—
ಐತರೇಯಃ ಕಸ್ಯ ಪುತ್ರೋ ನಿವಾಸಃ ಕ್ವಾಸ್ಯ ವಾ ಮುನೇ ।
ಕಥಂ ಸಿದ್ಧಿಮಗಾದ್ಧೀಮಾನ್ವಾಸುದೇವಪ್ರಸಾದತಃ ॥ ೨೭ ॥
ನಾರದ ಉವಾಚ :—
ಅಸ್ಮಿನ್ನೇವ ಮಮ ಸ್ಥಾನೇ ಹಾರೀತಸ್ಯಾನ್ವಯೇಽಭವತ್ ॥ ೨೮ ॥
ಮಾಂಡೂಕಿರಿತಿ ವಿಪ್ರಾಗ್ರ್ಯೋ ವೇದವೇದಾಂಗಪಾರಗಃ ॥ ೨೯ ॥
ತಸ್ಯಾಸೀದಿತರಾ ನಾಮ ಭಾರ್ಯಾ ಸಾಧ್ವೀ ಗುಣೈರ್ಯುತಾ ।
ತಸ್ಯಾಮುತ್ಪದ್ಯತ ಸುತಸ್ತ್ವೈತರೇಯ ಇತಿ ಸ್ಮೃತಃ ॥ ೩೦ ॥
ಸ ಚ ಬಾಲ್ಯಾತ್ಪ್ರಭೃತ್ಯೇವ ಪ್ರಾಗ್ಜನ್ಮನ್ಯನುಶಿಕ್ಷಿತಂ ।
ಜಜಾಪ ಮಂತ್ರಂ ತ್ವನಿಶಂ ದ್ವಾದಶಾಕ್ಷರ ಸಂಜ್ಞಿತಂ ॥ ೩೧ ॥

---

ಗಳನ್ನು ಕೇಳುವುದೂ ಎಂಬಿವೇ ಮೊದಲಾಧ ಈ ಇಪ್ಪತ್ತೈದು ಕರ್ಮಗಳಿಂದ ಏಕಾದಶಿಯ ದಿನದಲ್ಲಿ ಯಾವನು ಜಾಗರಣೆಯನ್ನು ಮಾಡುವನೊ, ಅವನು ಮತ್ತೆ ಭೂಮಿಯಲ್ಲಿ ಹುಟ್ಟುವುದಿಲ್ಲ.

೨೬. ಈ ಪುಣ್ಯತೀರ್ಥದಲ್ಲಿಯೇ ಮುನ್ನ ಮಹಾಭಾಗ್ಯವಂತನಾದ ಐತರೇಯನೆಂಬ ಬ್ರಾಹ್ಮಣೋತ್ತಮನು ಶ್ರೀಮನ್ನಾರಾಯಣನ ಕೃಪೆಯಿಂದ ಮೋಕ್ಷವನ್ನು ಹೊಂದಿದನು.

೨೭. ಅರ್ಜುನನು ಕೇಳುತ್ತಾನೆ:—ಎಲೈ ಮುನಿಯೆ! ಐತರೇಯನು ಯಾರ ಮಗನು? ಆತನ ನಿವಾಸವೆಲ್ಲಿ? ಬುದ್ಧಿವಂತನಾದ ಆತನು ನಾರಾಯಣನ ಕೃಪೆಯಿಂದ ಸಿದ್ಧಿಯನ್ನು ಹೇಗೆ ಹೊಂದಿದನು?

೨೮-೨೯. ನಾರದನು ಹೇಳುತ್ತಾನೆ:— ಈ ನನ್ನ ಸ್ಥಾನದಲ್ಲಿಯೇ ಪೂರ್ವದಲ್ಲಿ ಹಾರೀತ ಕುಲದವನೂ ವೇದವೇದಾಂಗಪಾರಂಗತನೂ ಆದ ಮಾಂಡೂಕಿಯೆಂಬ ಬ್ರಾಹ್ಮಣೋತ್ತಮನಿದ್ದನು.

೩೦. ಆತನಿಗೆ ಸಾಧ್ವೀಮಣಿಯೂ, ಸದ್ಗುಣವತಿಯೂ ಆದ ಇತರೆಯೆಂಬ ಪತ್ನಿಯಿದ್ದಳು. ಆತನಿಗೆ ಆಕೆಯಲ್ಲಿ ಐತರೇಯನೆಂದು ವಿಖ್ಯಾತನಾದ ಮಗನೊಬ್ಬನು ಜನಿಸಿದನು.

೩೧. ಆ ಹುಡುಗನಾದರೊ ಬಾಲ್ಯದಿಂದಲೇ ಪೂರ್ವಜನ್ಮದಲ್ಲಿ ಉಪದೇಶವನ್ನು ಪಡೆದಿದ್ದ ದ್ವಾದಶಾಕ್ಷರಿಯೆಂಬ ಉತ್ತಮಮಂತ್ರವನ್ನು ಅಹರ್ನಿಶಿಯಲ್ಲಿಯೂ ಜಪಿಸುತ್ತಿದ್ದನು.

ನ ಶ್ರುಣೋತಿ ನ ವಕ್ತ್ಯೇವ ಮನಸಾಪಿ ಚ ಕಿಂಚನ ।
ಏವಂ ಪ್ರಭಾವಃ ಸೋಽಭೂಚ್ಚ ಬಾಲ್ಯೇ ವಿಪ್ರಸುತಸ್ತದಾ ॥ ೩೨ ॥
ತತೋ ಮೂಕೋಽಯಮಿತ್ಯೇವ ನಾನೋಪಾಯೈಃಪ್ರಬೋಧಿತಃ ।
ಪಿತ್ರಾ ಯದಾ ನ ಕುರುತೇ ವ್ಯವಹಾರಾಯ ಮಾನಸಂ ॥ ೩೩ ॥
ತತೋ ನಿಶ್ಚಿತ್ಯ ಮನಸಾ ಜಡೋಽಯಮಿತಿ ಭಾರತ ।
ಅನ್ಯಾಂ ವಿವಾಹಯಾಮಾಸ ದಾರಾನ್ಪುತ್ರಾಂಸ್ತಥಾ ದಧೇ ।
ಪಿಂಗಾ ನಾಮ ಚ ಸಾ ಭಾರ್ಯಾ ತಸ್ಯಾಃ ಪುತ್ರಾಶ್ಚ ಜಜ್ಞಿರೇ ॥ ೩೪ ॥
ಚತ್ವಾರಃ ಕರ್ಮಕುಶಲಾಃ ವೇದವೇದಾಂಗವಾದಿನಃ ।
ಯಜ್ಞೇಷು ಶಾಂತಿಹೋಮೇಷು ದ್ವಿಜೈಃ ಸರ್ವತ್ರ ಪೂಜಿತಾಃ ॥ ೩೫ ॥
ಐತರೇಯೋಪಿ ನಿತ್ಯಂ ಚ ತ್ರಿಕಾಲಂ ಹರಿಮಂದಿರೇ ।
ಜಜಾಪ ಪರಮಂ ಜಾಪ್ಯಂ ನಾನ್ಯತ್ರ ಕುರುತೇ ಶ್ರಮಂ ॥ ೩೬ ॥
ತತೋ ಮಾತಾ ನಿರೀಕ್ಷ್ಯೈವ ಸಪತ್ನೀತನಯಾಂಸ್ತಥಾ ।
ದಾರ್ಯಮಾಣೇನ ಮನಸಾ ತನಯಂ ವಾಕ್ಯಮಬ್ರವೀತ್ ॥ ೩೭ ॥

---

೩೨. ಯಾವುದನ್ನೂ ಕೇಳುತ್ತಿರಲಿಲ್ಲ; ಮನಸ್ಸಿಟ್ಟು ಯಾವುದನ್ನೂ ಮಾತನಾಡುತ್ತಿರಲಿಲ್ಲ. ಆ ಬ್ರಾಹ್ಮಣಕುಮಾರನು ಬಾಲ್ಯದಲ್ಲಿಯೇ ಇಂತಹ ನಡೆವಳಿಕೆಯುಳ್ಳವನಾಗಿದ್ದನು.

೩೩. ಆದುದರಿಂದ ಅವನನ್ನು ಮೂಗನೆಂದೆಣಿಸಿ ತಂದೆಯಾದ ಮಾಂಡೂಕಿಯು ಅನೇಕ ಉಪಾಯಗಳಿಂದ ಬುದ್ಧಿಯನ್ನು ಕಲಿಸಲು ಪ್ರಯತ್ನಿಸಿದರೂ ಅವನು ಲೌಕಿಕ ವ್ಯವಹಾರಕ್ಕೇ ಮನಸ್ಸುಮಾಡಲಿಲ್ಲ.

೩೪–೩೫. ಎಲೈ ಅರ್ಜುನನೆ! ಆದುದರಿಂದ ಇವನು ಜಡನೆಂದೂ ನಿರುಪಯೋಗಿಯೆಂದೂ ನಿಶ್ಚಯಿಸಿ ಆಕೆಯಲ್ಲಿ ಮತ್ತೆ ಮಕ್ಕಳಾಗದಿದ್ದುದರಿಂದ ಮತ್ತೊಬ್ಬಳನ್ನು ಮದುವೆಮಾಡಿಕೊಂಡು ಮಕ್ಕಳನ್ನು ಪಡೆದನು. ಆಕೆಯ ಹೆಸರು ಪಿಂಗಾ. ಆಕೆಗೆ ವ್ಯವಹಾರ ಕುಶಲರೂ ವೇದಾಧ್ಯಯನಸಂಪನ್ನರೂ ಆದ ನಾಲ್ವರು ಮಕ್ಕಳು ಹುಟ್ಟಿದರು.

೩೬. ಅವರೆಲ್ಲರೂ ಯಜ್ಞಯಾಗಾದಿಗಳಲ್ಲಿಯೂ, ಶಾಂತಿಕರ್ಮಗಳಲ್ಲಿಯೂ ಬ್ರಾಹ್ಮಣರಿಂದ ವಿಶೇಷ ಸತ್ಕಾರವನ್ನು ಪಡೆಯುತ್ತಿದ್ದರು. ಈ ಐತರೇಯನಾದರೊ, ನಿತ್ಯದಲ್ಲಿಯೂ, ತ್ರಿಕಾಲಗಳಲ್ಲಿಯೂ ವಿಷ್ಣುದೇವಾಲಯದಲ್ಲಿ ಕುಳಿತು ಪರಮಪವಿತ್ರವಾದ ಮಂತ್ರವನ್ನು ಜಪಿಸುವುದಲ್ಲದೆ ಬೇರೆ ಕಾರ್ಯದಲ್ಲಿ ಪ್ರವರ್ತಿಸುತ್ತಿರಲಿಲ್ಲ.

೩೭. ಒಂದಾನೊಂದು ದಿನ ಇತರಾದೇವಿಯು ತನ್ನ ಸವತಿಯ ಮಕ್ಕಳನ್ನು ನೋಡಿ ಉದ್ವೇಗಗೊಂಡ ಮನಸ್ಸಿನಿಂದ ಮಗನನ್ನು ಕುರಿತು ಇಂತೆಂದಳು.

ಕ್ಲೇಶಾಯೈವ ಚ ಜಾತೋಽಸಿ ಧಿಙ್ಮೇ ಜನ್ಮ ಚ ಜೀವಿತಂ ।
ನಾರ್ಯಾಸ್ತಸ್ಯಾ ನೃಲೋಕೇಽತ್ರ ವರೈವಾಜನನಿಃ ಸ್ಫುಟಂ ॥ ೩೮ ॥
ವಿಮಾನಿತಾಯಾ ಭರ್ತ್ರಾಸ್ಯಾನ್ನ ಪುತ್ರಃ ಸ್ಯಾದ್ಗುಣೈರ್ಯುತಃ ॥ ೩೯ ॥
ಪಿಂಗೇಯಂ ಕೃತಪುಣ್ಯಾ ಹಿ ಯಸ್ಯಾಃ ಪುತ್ರಾ ಮಹಾಗುಣಾಃ ।
ವೇದವೇದಾಂಗತತ್ತ್ವಜ್ಞಾಃ ಸರ್ವತ್ರಾಭ್ಯರ್ಚಿತಾ ಗುಣೈಃ ॥ ೪೦ ॥
ತದಹಂ ಪುತ್ರ ದುರ್ಭಾಗ್ಯಾ ಮಹೀಸಾಗರಸಂಗಮೇ ।
ನಿಮಜ್ಜಿಷ್ಯೇ ವರಂ ಮೃತ್ಯುರ್ಜೀವಿತೇ ಕಿಂ ಫಲಂ ಮಮ ।
ತ್ವಮಪ್ಯೇವಂ ಮಹಾಮೌನೀ ನಂದ ಭಕ್ತೋ ಹರೇಶ್ಚಿರಂ ॥ ೪೧ ॥

ನಾರದ ಉವಾಚ :—

ಇತಿ ಮಾತುರ್ವಚಃ ಶ್ರುತ್ವಾ ಪ್ರಹಸನ್ನೈತರೇಯಕಃ ।
ಧ್ಯಾತ್ವಾ ಮುಹೂರ್ತಂ ಧರ್ಮಜ್ಞೋ ಮಾತರಂ ಪ್ರಣತೋಽಬ್ರವೀತ್ ॥
ಮಾತರ್ಮಿಥ್ಯಾಭಿಭೂತಾಸಿ ಅಜ್ಞಾನೇ ಜ್ಞಾನವತ್ಯಸಿ ।
ಅಶೋಚ್ಯೇ ಶೋಚ್ಯಸಿ ಶುಭೇ ಶೋಚ್ಯೇ ನೈವಾಪಿ ಶೋಚಸಿ ॥ ೪೩ ॥

---

೩೮–೩೯. "ನೀನು ನನಗೆ ಕಷ್ಟವನ್ನು ಕೊಡುವುದಕ್ಕಾಗಿಯೇ ಹುಟ್ಟಿರುವೆ. ನನ್ನ ಜನ್ಮಕ್ಕೂ ಜೀವಿತಕ್ಕೂ ಧಿಕ್ಕಾರವಿರಲಿ. ಮಗನು ಗುಣಹೀನನೆಂದು ಗಂಡನಿಂದ ಅವಮಾನವನ್ನು ಪಡೆಯುವ ಸ್ತ್ರೀಯ ಜನ್ಮಕ್ಕಿಂತ ಈ ಲೋಕದಲ್ಲಿ ಬಂಜೆಯಾಗಿರುವುದೇ ಸಾವಿರಪಾಲು ಮೇಲು.

೪೦. ನನ್ನ ಸವತಿಯಾದ ಪಿಂಗೆಯೇ ಪುಣ್ಯವತಿ; ಧನ್ಯಳು. ಆಕೆಯ ಪುತ್ರರೆಲ್ಲರೂ ಮಹಾಗುಣಸಂಪನ್ನರು; ವೇದವೇದಾಂಗಗಳ ರಹಸ್ಯಗಳನ್ನರಿತವರು; ಎಲ್ಲೆಲ್ಲಿಯೂ ತಮ್ಮ ಸದ್ಗುಣಗಳಿಂದ ಪೂಜೆಯನ್ನು ಕೈಕೊಳ್ಳುವವರೂ ಆಗಿರುವರು.

೪೧. ಆದುದರಿಂದ ಪುತ್ರವಿಷಯದ ಭಾಗ್ಯವಿಲ್ಲದ ನಾನು ಈ ಮಹೀಸಾಗರಸಂಗಮಕ್ಷೇತ್ರದಲ್ಲಿ ಮುಳುಗಿ ಪ್ರಾಣಗಳನ್ನು ಬಿಡುವೆನು. ನನಗೆ ಮರಣವೇ ಲೇಸೆನಿಸಿರುವುದು. ನಾನಿನ್ನು ಬದುಕಿ ಫಲವೇನು? ನೀನೂ ಹೀಗೆಯೇ ಮೌನವ್ರತವನ್ನು ಸಾಧಿಸಿ ವಿಷ್ಣುಭಕ್ತನಾಗಿ ಸಂತೋಷದಿಂದ ಹೀಗೆಯೇ ಕಾಲವನ್ನು ಕಳೆ."

೪೨. ನಾರದನು ಹೇಳುತ್ತಾನೆ:—ಇಂತು ಹೇಳಿದ ತಾಯಿಯ ಮಾತುಗಳನ್ನು ಕೇಳಿ ನಗುತ್ತ ಐತರೇಯಕನು ಮುಹೂರ್ತಕಾಲ ಚಿಂತಿಸಿ ಧರ್ಮಜ್ಞನಾದುದರಿಂದ ತಾಯಿಗೆ ನಮಸ್ಕರಿಸಿ ಇಂತೆಂದನು.

೪೩–೪೪. "ಎಲೌ ತಾಯೆ! ನೀನು ಕೇವಲ ಮಿಥ್ಯೆಯಾದ ವಿಷಯದಲ್ಲಿ ಅಭಿಮಾನವನ್ನು ಮಾಡುತ್ತಿರುವೆ. ಅಜ್ಞಾನಿಯಾಗಿದ್ದರೂ ಜ್ಞಾನಿಯಂತೆ

ದೇಹಸ್ಯಾಸ್ಯ ಕೃತೇ ಮಿಥ್ಯಾಸಂಸಾರೇ ಕಿಂ ವಿಮುಹ್ಯಸಿ ।
ಮೂರ್ಖಾಚರಿತಮೇತದ್ಧಿ ಮಾತುರುಚಿತಂ ನ ಹಿ ॥ ೪೪ ॥
ಅನ್ಯತ್ಸಂಸಾರಸಾರಂ ಚ ಸಾರಮನ್ಯಚ್ಚ ಮೋಹಿತಾಃ ।
ಪ್ರಪಶ್ಯಂತಿ ಯಥಾ ರಾತ್ರೌ ಖದ್ಯೋತಂ ದೀಪವತ್ಸ್ಥಿತಂ ॥ ೪೫ ॥
ಯದಿದಂ ಮನ್ಯಸೇ ಸಾರಂ ಶೃಣು ತಸ್ಯಾಪ್ಯಸಾರತಾಂ ।
ಏವಂವಿಧಂ ಹಿ ಮಾನುಷ್ಯಮಾಗರ್ಭಾದತಿ ಕಷ್ಟದಂ ॥ ೪೬ ॥
ಅಸ್ಥಿಪಟ್ಟಿತುಲಾಸ್ತಂಭೇ ಸ್ನಾಯುಬಂಧೇನ ಯಂತ್ರಿತೇ ॥ ೪೭ ॥
ರಕ್ತಮಾಂಸಮೃದಾಲಿಪ್ತೇ ವಿಣ್ಮೂತ್ರದ್ರವ್ಯಭಾಜನೇ ।
ಕೇಶರೋಮತೃಣಚ್ಛನ್ನೇ ಸುವರ್ಣತ್ವಕ್ಸುಧೂತಕೇ ॥ ೪೮ ॥
ವದನೈಕಮಹಾದ್ವಾರೇ ಷಡ್ಗವಾಕ್ಷವಿಭೂಷಿತೇ ।
ಓಷ್ಠದ್ವಯಕಪಾಟೇ ಚ ತಥಾ ದಂತಾರ್ಗಲಾನ್ವಿತೇ ॥ ೪೯ ॥

---

ಮಾತನಾಡುತ್ತಿರುವೆ. ಮಂಗಳಾಂಗಿಯಾದ ನೀನು ಶೋಚಿಸಲನರ್ಹವಾದ ವಿಷಯದಲ್ಲಿ ಶೋಕವನ್ನು ಮಾಡುತ್ತ ಶೋಚನೀಯವಾದ ವಿಷಯದಲ್ಲಿ ದುಃಖಿಸುತ್ತಿಲ್ಲ. ಈ ದೇಹಕ್ಕಾಗಿಯೂ, ಮಾಯಾಕೃತವಾದ ಈ ಸಂಸಾರಕ್ಕಾಗಿಯೂ ಮೋಹಗೊಳ್ಳುತ್ತಿರುವೆಯೇಕೆ? ಇದು ಕೇವಲ ಮೂರ್ಖರಿಗೆ ತಕ್ಕುದೇ ಹೊರತು ನನ್ನ ತಾಯಿಯಾದ ನಿನಗೆ ಉಚಿತವಲ್ಲ.

೪೫. ಸಂಸಾರದ ಸಾರವೇ ಬೇರೆ. ವಸ್ತುನಿಷ್ಠವಾದ ಸಾರವೇ ಬೇರೆ. ಜನರು ಮೋಹಗೊಂಡು, ರಾತ್ರಿಯಲ್ಲಿ ಮಿಂಚುಹುಳುವನ್ನು ಕಂಡು ದೀಪವೆಂದು ಭ್ರಮಿಸುವ ಮೂಢನಂತೆ ಸಂಸಾರದಲ್ಲಿ ಸಾರವನ್ನು ಕಾಣುವರು.

೪೬. ನೀನು ಸಾರತರವೆಂದು ತಿಳಿದಿರುವ ಸಂಸಾರದ ನಿಸ್ಸಾರತೆಯನ್ನು ಹೇಳುವೆನು, ಕೇಳು. ಮನುಷ್ಯಜನ್ಮವೆಂಬುದು ಗರ್ಭಧಾರಣದಿಂದ ಮೊದಲುಗೊಂಡು ಕೇವಲ ಕಷ್ಟಮಯವಾದುದೇ ಅಲ್ಲವೆ !

೪೭–೫೦. ಮೂಳೆಗಳೆಂಬ ದೊಡ್ಡ ತೊಲೆಗಂಬಗಳುಳ್ಳದ್ದೂ, ನರಗಳೆಂಬ ಹಗ್ಗಗಳಿಂದ ಬಿಗಿಯಲ್ಪಟ್ಟುದೂ, ರಕ್ತ, ಮಾಂಸ, ಮೇದಸ್ಸುಗಳಿಂದ ಲೇಪಿತವಾದುದೂ, ಮೂತ್ರಪುರೀಷಗಳೆಂಬ ಪದಾರ್ಥಗಳ ಸ್ಥಾನವೂ, ತಲೆಯಲ್ಲೂ ಮೈಯಲ್ಲೂ ಕೂದಲುಗಳೆಂಬ ಹುಲ್ಲುಗಳ ಹೊದಿಕೆಯುಳ್ಳುದೂ, ಚಿನ್ನದ ಬಣ್ಣದ ಚರ್ಮವೆಂಬ ಹೊದಿಕೆಯುಳ್ಳುದೂ, ಬಾಯಿಯೆಂಬ ಹೆಬ್ಬಾಗಿಲುಳ್ಳದ್ದೂ, ಕಣ್ಣುಗಳು, ಕಿವಿಗಳು ಮತ್ತು ನಾಸಿಕೆಗಳೆಂಬ ಆರು ಗವಾಕ್ಷಗಳನ್ನು ಹೊಂದಿದುದೂ, ಎರಡು ತುಟಿಗಳೆಂಬ ಕದಗಳುಳ್ಳದುದೂ, ದಂತಗಳೆಂಬ ಅಗುಳಿಗಳಿಂದಲೂ, ನಾಡಿಗಳಲ್ಲಿ ಸ್ವೇದದ ಪ್ರವಾಹವುಳ್ಳುದೂ, ಕಾಲನೆಂಬ ಬೆಂಕಿಗೆ

**ನಾಡೀಸ್ವೇದಪ್ರವಾಹೇ ಚ ಕಾಲವಕ್ತ್ರಾನಲಸ್ಥಿತೇ ।**
**ಏವಂವಿಧೇ ಗೃಹೇ ಗೇಹೀ ಜೀವೋ ನಾಮಾಸ್ತಿ ಶೋಭನೇ ॥ ೫೦ ॥**
**ಗುಣತ್ರಯಮಯೀ ಭಾರ್ಯಾ ಪ್ರಕೃತಿಸ್ತಸ್ಯ ತತ್ರ ಚ ।**
**ಬೋಧಾಹಂಕಾರಕಾಮಾಶ್ಚ ಕ್ರೋಧಲೋಭಾದಯೋಽಪಿ ಚ ॥ ೫೧ ॥**
**ಅಪತ್ಯಾನ್ಯಸ್ಯ ಹಾ ಕಷ್ಟಮೇವಂ ಮೂಢಃ ಪ್ರವರ್ತತೇ ।**
**ತಸ್ಯ ಯೋ ಯೋ ಯಥಾ ಮೋಹಸ್ತಥಾ ತಂ ಶೃಣು ತತ್ತ್ವತಃ ॥ ೫೨ ॥**
**ಸ್ರೋತಾಂಸಿ ಯಸ್ಯ ಸತತಂ ಪ್ರಸ್ರವಂತಿ ಗಿರೇರಿವ ।**
**ಕಫಮೂತ್ರಾದಿಕಾನ್ಯಸ್ಯ ಕೃತೇ ದೇಹಸ್ಯ ಮುಹ್ಯತಿ ॥ ೫೩ ॥**
**ಸರ್ವಾಶುಚಿನಿಧಾನಸ್ಯ ಶರೀರಸ್ಯ ನವಿದ್ಯತೇ ।**
**ಶುಚಿರೇಕಪ್ರದೇಶೋಽಪಿ ವಿಣ್ಮೂತ್ರಸ್ಯ ಧೃತೇರಿವ ॥ ೫೪ ॥**
**ಸ್ಪೃಷ್ಟ್ವಾ ಸ್ವದೇಹಸ್ರೋತಾಂಸಿ ಮೃತ್ತೋಯೈಃ ಶೋಧ್ಯತೇ ಕರಃ ।**
**ತಥಾಪ್ಯಶುಚಿಭಾಂಡಸ್ಯ ನ ವಿರಜ್ಯತಿ ಕಿಂ ನರಃ ॥ ೫೫ ॥**

---

ತುತ್ತಾದುದೂ ಆಗಿರುವ ಈ ವಿಧವಾದ ದೇಹವೆಂಬ ಮನೆಯಲ್ಲಿ ಜೀವನೆಂಬ ಗೃಹಸ್ಥನು ವಾಸಮಾಡುತ್ತಿರುವನು.

೫೧–೫೨. ಅಲ್ಲಿ ಆತನಿಗೆ ಸತ್ವರಜಸ್ತಮೋಗುಣಗಳ ಸಾಮ್ಯಾವಸ್ಥೆಯೆಂಬ ಪ್ರಕೃತಿಯು ಗೃಹಿಣಿಯಾಗಿರುವಳು. ಜ್ಞಾನ, ಅಹಂಕಾರ, ಕಾಮ, ಕ್ರೋಧ, ಲೋಭ ಮುಂತಾದ ಪುತ್ರರೊಡನೆ ಅತ್ಯಂತ ಕಷ್ಟತರವಾದ ಸಂಸಾರದಲ್ಲಿ ಜೀವನು ಪ್ರವೃತ್ತನಾಗಿರುವನು. ಅವನನ್ನು ಯಾವ ಯಾವ ಮೋಹಗಳು ಆವರಿಸಿ ಹೇಗೆ ಹೇಗೆ ಕಷ್ಟಪಡಿಸುವುವೆಂಬುದನ್ನು ನಿಜರೀತಿಯಿಂದ ತಿಳಿಸುವೆನು, ಕೇಳುವವಳಾಗು.

೫೩. ಬೆಟ್ಟದ ತಪ್ಪಲುಗಳಿಂದ ಯಾವಾಗಲೂ ಹರಿಯುವ ಒರತೆಗಳಂತೆ ಶ್ಲೇಷ್ಮ, ಮೂತ್ರಗಳೇ ಮೊದಲಾದವುಗಳು ನಿತ್ಯವೂ ಸ್ರವಿಸುತ್ತಿರುವ ಈ ದೇಹದಲ್ಲಿ ಯಾರು ತಾನೆ ಮೋಹಗೊಳ್ಳಬಹುದು? ಯಾರೂ ಮೋಹಗೊಳ್ಳ ಬಾರದೆಂಬುದನ್ನರಿತುಕೊ.

೫೪. ಮೂತ್ರಪುರೀಷಗಳ ನೆಲೆವನೆಯೆನಿಸಿ ಅಶುಚಿಗಳಾದ ಸಕಲ ಪದಾರ್ಥಗಳಿಗೂ ನಿಧಾನವೆನಿಸಿದ ಈ ಶರೀರದಲ್ಲಿ ಶುಚಿಯೆನಿಸಿದ ಒಂದು ಪ್ರದೇಶವಾದರೂ ಕಾಣುವುದಿಲ್ಲ.

೫೫. ತನ್ನ ದೇಹದಿಂದ ಹೊರಬಿದ್ದ ಮಲಮೂತ್ರಗಳನ್ನು ಮುಟ್ಟಿದರೆ ಮನುಷ್ಯನು ಜಲ ಮೃತ್ತಿಕೆಗಳಿಂದ ಶೌಚವನ್ನು ಮಾಡುವನು. ಅಂತಾದರೂ ಅಶುಚಿಭಾಂಡವಾದ ಈ ದೇಹದಲ್ಲಿ ಮಾತ್ರ ಏಕೆ ವಿರಕ್ತಿಯನ್ನು ಹೊಂದು ವುದಿಲ್ಲ?

ಕಾಯಃ ಸುಗಂಧತೋಯಾದ್ಯೈರ್ಯತ್ನೇನಾಪಿ ಸುಸಂಸ್ಕೃತಃ ।
ನ ಜಹಾತಿ ಸ್ವಕಂ ಭಾವಂ ಶ್ವಪುಚ್ಛಮಿವ ನಾಮಿತಂ ॥ ೫೬ ॥
ಸ್ವದೇಹಾಶುಚಿಗಂಧೇನ ನ ವಿರಜ್ಯತಿ ಯೋ ನರಃ ।
ವಿರಾಗೇ ಕಾರಣಂ ತಸ್ಯ ಕಿಮನ್ಯದುಪದಿಶ್ಯತೇ ॥ ೫೭ ॥
ಗಂಧಲೇಪಾಪನೋದಾರ್ಥಂ ಶೌಚಂ ದೇಹಸ್ಯ ಕೀರ್ತಿತಂ ।
ದ್ವಯಸ್ಯಾಪಗಮಾತ್ಪಶ್ಚಾದ್ಭಾವಶುದ್ಧ್ಯಾ ವಿಶುದ್ಧ್ಯತಿ ॥ ೫೮ ॥
ಗಂಗಾತೋಯೇನ ಸರ್ವೇಣ ಮೃದ್ಭಾರೈಃ ಪರ್ವತೋಪಮೈಃ ।
ಆಮೃತ್ಯೋರಾಚರಞ್ಛೌಚಂ ಭಾವದುಷ್ಟೋ ನ ಶುದ್ಧ್ಯತಿ ॥ ೫೯ ॥
ತೀರ್ಥಸ್ನಾನೈಸ್ತಪೋಭಿರ್ವಾ ದುಷ್ಟಾತ್ಮಾ ನೈವ ಶುದ್ಧ್ಯತಿ ।
ಸ್ವೇದಿತಃ ಕ್ಷಾಲಿತಸ್ತೀರ್ಥೇ ಕಿಂ ಶುದ್ಧಿಮಧಿಗಚ್ಛತಿ ॥ ೬೦ ॥
ಅಂತರ್ಭಾವಪ್ರದುಷ್ಟಸ್ಯ ವಿಶತೋಽಪಿ ಹುತಾಶನಂ ।
ನ ಸ್ವರ್ಗೋ ನಾಪವರ್ಗಶ್ಚ ದೇಹನಿರ್ದಹನಂ ಪರಂ ॥ ೬೧ ॥
ಭಾವಶುದ್ಧಿಃ ಪರಂ ಶೌಚಂ ಪ್ರಮಾಣಂ ಸರ್ವಕರ್ಮಸು ।
ಅನ್ಯಥಾಲಿಂಗ್ಯತೇ ಕಾಂತಾ ಭಾವೇನ ದುಹಿತಾನ್ಯಥಾ ।
ಅನ್ಯಥೈವ ಸ್ತನಂ ಪುತ್ರಶ್ಚಿಂತಯತ್ಯನ್ಯಥಾ ಪತಿಃ ॥ ೬೨ ॥

---

೫೬. ಶರೀರವೆಂಬುದು ಗಂಧ, ಪುಷ್ಪ, ಪನ್ನೀರು ಮೊದಲಾದುವುಗಳಿಂದ ಪ್ರಯತ್ನಪೂರ್ವಕವಾಗಿ ಶುದ್ಧಿಗೊಳಿಸಿದರೂ ಕೂಡ, ತಿದ್ದಲಾಗದ ನಾಯಿಯ ಡೊಂಕು ಬಾಲದಂತೆ ತನ್ನ ದುರ್ಗಂಧವನ್ನು ಮಾತ್ರ ಬಿಡಲಾರದು.

೫೭–೫೯. ತನ್ನ ದೇಹದ ಅಶುಚಿಯಾದ ವಾಸನೆಯಿಂದ ವಿರಾಗವನ್ನು ಹೊಂದಿದ ಮನುಷ್ಯನಿಗೆ ಬೇರೆ ಯಾವ ಕಾರಣದ ಮೂಲಕ ವೈರಾಗ್ಯವನ್ನುಪ ದೇಶಿಸಲು ಸಾಧ್ಯವಾದೀತು ? ಗಂಧಲೇಪಾದಿಗಳನ್ನು ಕಳೆಯಲು ಶೌಚಕರ್ಮವು ಶಾಸ್ತ್ರಗಳಲ್ಲಿ ಹೇಳಲ್ಪಟ್ಟಿರುವುದು. ದೇಹದ ಸಹಜವಾದ ದುರ್ಗಂಧವೂ, ಲೇಪಿಸಿದ ಗಂಧಾದಿಗಳೂ, ಎರಡೂ ಕಳೆದ ಮೇಲೆ ಮನುಷ್ಯನು ಮನಶ್ಶುದ್ಧಿ ಯಿಂದಲೇ ಪುನೀತನಾಗುವನು.

೬೦–೬೨. ದೂಷಿತನಾದ ಆತ್ಮನು ತೀರ್ಥಸ್ನಾನದಿಂದಲೂ, ತಪಸ್ಸುಗ ಳಿಂದಲೂ ಶುದ್ಧನಾಗುವುದಿಲ್ಲ. ಶರೀರವು ಬೆವರನ್ನು ಸುರಿಸಿದರೂ ತೀರ್ಥದಲ್ಲಿ ತೊಳೆಯಲ್ಪಡುವುದು. ಅದರಿಂದ ಯಾವ ಶುದ್ಧಿಯನ್ನು ತಾನೆ ಮನುಷ್ಯನು ಹೊಂದಿಯಾನು ? ಮನಸ್ಸಿನ ಅಂತಶ್ಶುದ್ಧಿಯುಳ್ಳವನಾಗದಿದ್ದರೆ ಅಗ್ನಿಪ್ರವೇಶ ವನ್ನು ಮಾಡಿದರೂ ಕೇವಲ ದೇಹದಹನವಾಗುವುದೇ ಹೊರತು ಸ್ವರ್ಗವಾಗಲಿ ಮೋಕ್ಷವಾಗಲಿ ಸಿಕ್ಕಲಾರದು. ಆದುದರಿಂದ ಭಾವಶುದ್ಧಿಯೇ ಸಕಲ ಕಾರ್ಯ ಗಳಲ್ಲಿಯೂ ಉತ್ತಮವಾದ ಶೌಚವೆಂದು ಪ್ರಮಾಣವಾಕ್ಯವಿರುವುದು. ಪತ್ನಿ

ಚಿತ್ತಂ ವಿಶೋಧಯೇತ್ತಸ್ಮಾತ್ಕಿಮನ್ಯೈರ್ಬಾಹ್ಯಶೋಧನೈಃ ।
ಭಾವತಃ ಸಂವಿಶುದ್ಧಾತ್ಮಾ ಸ್ವರ್ಗಂ ಮೋಕ್ಷಂ ಚ ವಿಂದತಿ ॥ ೬೩ ॥
ಜ್ಞಾನಾಮಲಾಂಭಸಾ ಪುಂಸಃ ಸದ್ವೈರಾಗ್ಯಮೃದಾ ಪುನಃ ॥ ೬೪ ॥
ಅವಿದ್ಯಾರಾಗವಿಣ್ಮೂತ್ರಲೇಪಗಂಧವಿಶೋಧನಂ ।
ಏವಮೇತಚ್ಛರೀರಂ ಹಿ ನಿಸರ್ಗಾದಶುಚಿಂ ವಿದುಃ ।
ತ್ವಙ್ಮಾತ್ರಸಾರನಿಃಸಾರಂ ಕದಲೀಸಾರಸನ್ನಿಭಂ ॥ ೬೫ ॥
ಜ್ಞಾತ್ವೈವಂ ದೋಷವದ್ದೇಹಂ ಯಃ ಪ್ರಾಜ್ಞಃ ಶಿಥಿಲೀಭವೇತ್ ।
ಸ ನಿಷ್ಕ್ರಾಮತಿ ಸಂಸಾರೇ ದೃಢಗ್ರಾಹೀ ಸ ತಿಷ್ಠತಿ ॥ ೬೬ ॥
ಏವಮೇತನ್ಮಹಾಕಷ್ಟಂ ಜನ್ಮ ದುಃಖಂ ಪ್ರಕೀರ್ತಿತಂ ।
ಪುಂಸಾಮಜ್ಞಾತದೋಷೇಣ ನಾನಾಕರ್ಮವಶೇನ ಚ ॥ ೬೭ ॥

---

ಯನ್ನು ಆಲಿಂಗಿಸುವ ಭಾವವೇ ಬೇರೆ. ಮಗಳನ್ನು ಆಲಿಂಗಿಸುವ ಭಾವವೇ ಬೇರೆ. ಒಬ್ಬಳೇ ಸ್ತ್ರೀಯಳ ಸ್ತನಗಳನ್ನು ಪುತ್ರನೇ ಒಂದು ದೃಷ್ಟಿಯಿಂದ ನೋಡುವನು. ಪತಿಯು ಮತ್ತೊಂದು ದೃಷ್ಟಿಯಿಂದ ನೋಡುವನು.

೬೩. ಆದುದರಿಂದ ವಿವೇಕಿಯಾದವನು ಬುದ್ಧಿಯನ್ನು ಚೆನ್ನಾಗಿ ಶೋಧಿಸಬೇಕು. ಶರೀರಾದಿಗಳನ್ನು ಶೋಧಿಸುವುದರಿಂದ ಯಾವ ಪ್ರಯೋಜನವುಂಟು? ಶುದ್ಧಭಾವಗಳನ್ನು ಹೊಂದಿದ ಆತ್ಮವುಳ್ಳವನು ಸ್ವರ್ಗವನ್ನೂ, ಮೋಕ್ಷವನ್ನೂ ಹೊಂದುವನು.

೬೪. ಮನುಷ್ಯನಿಗೆ ಅವಿದ್ಯೆ ಮತ್ತು ಅನುರಾಗಗಳೆಂಬ ಮಲಮೂತ್ರಗಳ ಲೇಪದ ದುರ್ಗಂಧವು ನಾಶವಾಗಲು ಜ್ಞಾನವೆಂಬ ಪರಿಶುದ್ಧವಾದ ತೀರ್ಥೋದಕವೂ, ವೈರಾಗ್ಯವೆಂಬ ಮೃತ್ತಿಕೆಯೂ ನೆರವಾಗಿರುವುವು.

೬೫. ಈ ವಿಧವಾಗಿ ಶರೀರವೆಂಬುದು ಸ್ವತಃ ಅಶುಚಿಯಾದುದೆಂದೇ ಬಲ್ಲವರು ಹೇಳುವರು. ಚರ್ಮಮಾತ್ರದಿಂದ ಸಾರವಂತವಾಗಿ ತೋರುವುದಾದರೂ ತತ್ತ್ವತಃ ನಿಸ್ಸಾರವಾದುದು. ಬಾಳೆಯ ಮರದ ದಿಂಡಿನಂತೆ ಹೊರಗೆ ಆಕಾರವುಳ್ಳದ್ದಾದರೂ ಒಳಗೆ ನಿಸ್ಸತ್ವವುಳ್ಳದ್ದಾಗಿರುವುದು.

೬೬–೬೭. ಇಂತು ದೇಹವು ದೋಷಭೂಯಿಷ್ಠವಾದುದೆಂದು ತಿಳಿದು ಯಾವ ವಿವೇಕಿಯು ಅದರಲ್ಲಿ ಅಭಿಮಾನವನ್ನು ಬಿಡುವನೊ, ಅವನೇ ಈ ಸಂಸಾರಸಾಗರದಿಂದ ಕಡೆಹಾಯುವನು. ದೇಹಾಭಿಮಾನಿಯು ಮತ್ತೆ ಮತ್ತೆ ಸಂಸಾರದಲ್ಲಿಯೇ ಸಿಕ್ಕಿಕೊಂಡು ನರಳುವನು. ಇಂತು ಮನುಷ್ಯರ ಅಜ್ಞಾನದ ದೋಷದಿಂದಲೂ, ಅನೇಕ ಕರ್ಮಗಳು ಫಲೋನ್ಮುಖಗಳಾಗುವುದರಿಂದಲೂ ಉಂಟಾಗುವ ಗರ್ಭವಾಸವೆಂಬುದು ಅತ್ಯಂತ ಕಷ್ಟವೆಂದೂ, ದುಃಖದಾಯಕವೆಂದೂ ಹೇಳಲ್ಪಟ್ಟಿರುವುದು.

ಯಥಾ ಗಿರಿವರಾಕ್ರಾಂತಃ ಕಶ್ಚಿದ್ದುಃಖೇನ ತಿಷ್ಠತಿ ।
ತಥಾ ಜರಾಯುಣಾ ದೇಹೀ ದುಃಖಂ ತಿಷ್ಠತಿ ವೇಷ್ಟಿತಃ ॥ ೬೮ ॥
ಪತಿತಃ ಸಾಗರೇ ಯದ್ವದ್ದುಃಖಮಾಸ್ತೇ ಸಮಾಕುಲಃ ।
ಗರ್ಭೋದಕೇನ ಸಿಕ್ತಾಂಗಸ್ತಥಾಸ್ತೇ ವ್ಯಾಕುಲಃ ಪುಮಾನ್ ॥ ೬೯ ॥
ಲೋಹಕುಂಭೇ ಯಥಾ ನ್ಯಸ್ತಃ ಪಚ್ಯತೇ ಕಶ್ಚಿದಗ್ನಿನಾ ।
ಗರ್ಭಕುಂಭೇ ತಥಾ ಕ್ಷಿಪ್ತಃ ಪಚ್ಯತೇ ಜಠರಾಗ್ನಿನಾ ॥ ೭೦ ॥
ಸೂಚೀಭಿರಗ್ನಿವರ್ಣಾಭಿರ್ವಿಭಿನ್ನಸ್ಯ ನಿರಂತರಂ ।
ಯದ್ದುಃಖ ಜಾಯತೇ ತಸ್ಯ ತದ್ಗರ್ಭೇಽಷ್ಟಗುಣಂ ಭವೇತ್ ॥ ೭೧ ॥
ಇತ್ಯೇತದ್ಗರ್ಭದುಃಖಂ ಹಿ ಪ್ರಾಣಿನಾಂ ಪರಿಕೀರ್ತಿತಂ ॥ ೭೨ ॥
ಚರಸ್ಥಿರಾಣಾಂ ಸರ್ವೇಷಾಮಾತ್ಮಗರ್ಭಾನುರೂಪತಃ ।
ತತ್ರಸ್ಥಸ್ಯ ಚ ಸರ್ವೇಷಾಂ ಜನ್ಮನಾಂ ಸ್ಮರಣಂ ಭವೇತ್ ॥ ೭೩ ॥
ಮೃತಶ್ಚಾಹಂ ಪುನರ್ಜಾತೋ ಜಾತಶ್ಚಾಹಂ ಪುನರ್ಮೃತಃ ।
ನಾನಾಯೋನಿಸಹಸ್ರಾಣಿ ಮಯಾ ದೃಷ್ಟಾನ್ಯನೇಕಧಾ ॥ ೭೪ ॥

---

೬೮. ಪರ್ವತಗಳಿಂದ ಸುತ್ತುವರೆಯಲ್ಪಟ್ಟ ಗೊಂಡಾರಣ್ಯದಲ್ಲಿ ಸಿಕ್ಕಿಕೊಂಡ ಮನುಷ್ಯನು ನರಳುವಂತೆ ಗರ್ಭವು ಜರಾಯುವಿನಿಂದ ಸುತ್ತಲ್ಪಟ್ಟುದಾಗಿ ಜೀವನಿಗೆ ಕಷ್ಟದಾಯಕವಾದ ನಿವಾಸವಾಗಿರುವುದು.

೬೯. ಸಮುದ್ರದಲ್ಲಿ ಬಿದ್ದವನು ನವದ್ವಾರಗಳಲ್ಲಿಯೂ ನೀರು ತುಂಬಿಕೊಂಡು ಹೇಗೆ ದುಃಖಪಡುವನೋ, ಹಾಗೆಯೇ ಶಿಶುವೂ ಕೂಡ ಗರ್ಭೋದಕದಿಂದ ಸಿಕ್ತವಾದ ಶರೀರವುಳ್ಳವನಾಗಿ ವ್ಯಾಕುಲಪಡುತ್ತಿರುವನು.

೭೦. ಲೋಹದ ಪಾತ್ರೆಯಲ್ಲಿರುವ ಧಾನ್ಯಾದಿಗಳು ಕೆಳಗಿನ ಅಗ್ನಿಯಿಂದ ಹೇಗೆ ಪಚನವಾಗುವುವೊ, ಹಾಗೆಯೇ ಗರ್ಭದಲ್ಲಿರುವ ಶರೀರವೂ ಸಹ ತಾಯಿಯ ಜಠರದೊಳಗಿನ ಅಗ್ನಿಯಿಂದ ಬೇಯಿಸಲ್ಪಡುವುದು.

೭೧. ಕೆಂಪಗೆ ಕಾದ ಸೂಜಿಗಳಿಂದ ಸರ್ವಾಂಗಗಳಲ್ಲಿಯೂ ಚುಚ್ಚಿಸಿಕೊಳ್ಳುತ್ತಿರುವ ಮನುಷ್ಯನಿಗೆ ಯಾವ ದುಃಖವುಂಟಾಗುವುದೊ, ಅದಕ್ಕೆ ಎಂಟರಷ್ಟು ಕಷ್ಟವು ಗರ್ಭಸ್ಥ ಶಿಶುವಿಗುಂಟಾಗುವುದು.

೭೨. ಇಂತು ಸಕಲ ಸ್ಥಾವರಜಂಗಮಗಳಿಗೂ ತಮ್ಮ ತಮ್ಮ ಜಾತ್ಯನುಗುಣಗಳಾದ ಗರ್ಭಗಳಲ್ಲಿ ದುಃಖಗಳುಂಟಾಗುವುವೆಂದು ಹೇಳಲ್ಪಟ್ಟಿರುವುದು.

೭೩–೭೫. ಮಾತೃಗರ್ಭದಲ್ಲಿರುವ ಸಕಲ ಜೀವರಿಗೂ ತಮ್ಮ ಪೂರ್ವಜನ್ಮಗಳ ಸ್ಮರಣೆಯುಂಟಾಗುವುದು. "ನಾನು ಸತ್ತು ಮತ್ತೆ ಹುಟ್ಟಿದೆನು. ಹುಟ್ಟಿ ಮತ್ತೆ ಸತ್ತೆನು. ಅನೇಕ ಸಾವಿರ ಯೋನಿಗಳಲ್ಲಿ ಅನೇಕ ಸಲ ಜನ್ಮಗಳನ್ನು ಅನುಭವಿಸಿರುವೆನು. ಈ ಸಲ ನಾನು ಹುಟ್ಟುತ್ತಲೆ ಸಂಸ್ಕಾರಗಳನ್ನು

ಅಧುನಾ ಜಾತಮಾತ್ರೋಽಹಂ ಪ್ರಾಪ್ತಸಂಸ್ಕಾರ ಏವ ಚ ।
ತತಃ ಶ್ರೇಯಃ ಕರಿಷ್ಯಾಮಿ ಯೇನ ಗರ್ಭೋ ನ ಸಂಭವೇತ್ ।
ಅಧ್ಯೇಷ್ಯಾಮಿ ಹರೇರ್ಜ್ಞಾನಂ ಸಂಸಾರವಿನಿವರ್ತನಂ ॥ ೭೫ ॥
ಏವಂ ಸಂಚಿಂತಯನ್ನಾಸ್ತೇ ಮೋಕ್ಷೋಪಾಯಂ ವಿಚಿಂತಯನ್ ।
ಗರ್ಭಾತ್ಕೋಟಿಗುಣಂ ದುಃಖಂ ಜಾಯಮಾನಸ್ಯ ಜಾಯತೇ ॥ ೭೬ ॥
ಗರ್ಭವಾಸೇ ಸ್ಮೃತಿರ್ಯಾಸೀತ್ಸಾ ಜಾತಸ್ಯ ಪ್ರಣಶ್ಯತಿ ।
ಸ್ಪೃಷ್ಟಮಾತ್ರಸ್ಯ ಬಾಹ್ಯೇನ ವಾಯುನಾ ಮೂಢತಾ ಭವೇತ್ ॥ ೭೭ ॥
ಸಂಮೂಢಸ್ಯ ಸ್ಮೃತಿಭ್ರಂಶಃ ಶೀಘ್ರಂ ಸಂಜಾಯತೇ ಪುನಃ ॥ ೭೮ ॥
ಸ್ಮೃತಿಭ್ರಂಶಾತ್ತತಸ್ತಸ್ಯ ಪೂರ್ವಕರ್ಮವಶೇನ ಚ ।
ರತಿಃ ಸಂಜಾಯತೇ ತೂರ್ಣಂ ಜಂತೋಸ್ತತ್ರೈವ ಜನ್ಮನಿ ॥ ೭೯ ॥
ರಕ್ತೋ ಮೂಢಶ್ಚ ಲೋಕೋಽಯಮಕಾರ್ಯೇ ಸಂಪ್ರವರ್ತತೇ ।
ತತ್ರಾತ್ಮಾನಂ ನ ಜಾನಾತಿ ನ ಪರಂ ನ ಚ ದೈವತಂ ॥ ೮೦ ॥
ನ ಶೃಣೋತಿ ಪರಂ ಶ್ರೇಯಃ ಸತಿ ಚಕ್ಷುಷಿ ನೇಕ್ಷತೇ ।
ಸಮೇ ಪಥಿ ಸಮೈರ್ಗಚ್ಛನ್ಸ್ಖಲತೀವ ಪದೇಪದೇ ॥ ೮೧ ॥

---

ಹೊಂದಿದವನಾಗಿ ಪುನಃ ನನಗೆ ಗರ್ಭವಾಸವು ಸಂಭವಿಸದಂತೆ ಶ್ರೇಯಸ್ಕಾರಕಗಳಾದ ಕರ್ಮಗಳನ್ನು ಮಾಡುತ್ತೇನೆ. ಸಂಸಾರವನ್ನು ನಿರ್ಮೂಲಗೊಳಿಸುವಂತಹ ಹರಿಯ ಜ್ಞಾನವನ್ನು ಸಾಧಿಸುತ್ತೇನೆ.”

೭೬. ಇಂತು ಯೋಚಿಸುತ್ತ ಮೋಕ್ಷೋಪಾಯದಲ್ಲಿ ಮನಸ್ಸುಳ್ಳವನಾಗಿ ಜೀವನು ಗರ್ಭಕೋಶದಲ್ಲಿರುವನು. ಹೊರಬೀಳುವಾಗಲಂತು ಗರ್ಭವಾಸದ ದುಃಖಕ್ಕೆ ಕೋಟಿಗಣಿತವಾದ ವ್ಯಥೆಯನ್ನು ಅನುಭವಿಸುವನು.

೭೭–೭೯. ಗರ್ಭವಾಸದಲ್ಲಿದ್ದ ಜನ್ಮಸ್ಮರಣೆಯು ಜನನಕ್ಲೇಶದಿಂದ ನಷ್ಟವಾಗುವುದು. ಹುಟ್ಟಿದ ಮಗುವಿಗೆ ಬಹಿರ್ವಾಯುವಿನ ಸ್ಪರ್ಶವಾದ ಕೂಡಲೆ ಮೌಢ್ಯವು ಸಂಭವಿಸುವುದು. ಇಂತು ಸಂಮೂಢನಾದವನಿಗೆ ಶೀಘ್ರದಲ್ಲಿಯೇ ಮತ್ತೆ ಸ್ಮೃತಿಯ ನಾಶವುಂಟಾಗುವುದು. ಈ ಸ್ಮೃತಿಭ್ರಂಶದಿಂದಲೂ ಪೂರ್ವಕರ್ಮದ ಬಲದಿಂದಲೂ ಜೀವನಿಗೆ ಆ ಜನ್ಮದಲ್ಲಿಯೇ ಅಧಿಕವಾದ ಪ್ರೀತಿಯುಂಟಾಗುವುದು.

೮೦–೮೧. ಇಂತು ಲೋಕವೆಲ್ಲವೂ ಅನುರಾಗದಿಂದಲೂ, ಮೌಢ್ಯದಿಂದಲೂ ಅಕಾರ್ಯಗಳಲ್ಲಿ ಪ್ರವರ್ತಿಸುವುದು. ಮನುಷ್ಯನು ತನ್ನನ್ನೂ ಇತರರನ್ನೂ ಪರದೈವವನ್ನೂ ತಿಳಿಯುವುದಿಲ್ಲ. ಪರಮ ಶ್ರೇಯಸ್ಸಾಧನವನ್ನು ಕೇಳುವುದಿಲ್ಲ. ಕಣ್ಣುಗಳಿದ್ದರೂ ನೋಡಲಾರನು. ಸಮಮಾರ್ಗದಲ್ಲಿ ಸಮಾನರೊಡನೆ ನಡೆಯುತ್ತಿದ್ದರೂ ಎಡವುತ್ತಿರುವವನಂತೆ ಕಾಣುವನು.

ಸತ್ಯಾಂ ಬುದ್ಧೌ ನ ಜಾನಾತಿ ಬೋಧ್ಯಮಾನೋ ಬುಧೈರಪಿ ।
ಸಂಸಾರೇ ಕ್ಲಿಶ್ಯತೇ ತೇನ ರಾಗಮೋಹವಶಾನುಗಃ ॥ ೮೨ ॥
ಗರ್ಭಸ್ಮೃತೇರಭಾವೇನ ಶಾಸ್ತ್ರಮುಕ್ತಂ ಮಹರ್ಷಿಭಿಃ ।
ತದ್ದುಃಖಕಥನಾರ್ಥಾಯ ಸ್ವರ್ಗಮೋಕ್ಷಪ್ರಸಾಧಕಂ ॥ ೮೩ ॥
ಯೇ ಶಾಸ್ತ್ರಜ್ಞಾನೇ ಸತ್ಯಸ್ಮಿನ್ಸರ್ವಕರ್ಮಾರ್ಥಸಾಧಕೇ ।
ನ ಕುರ್ವಂತ್ಯಾತ್ಮನಃ ಶ್ರೇಯಸ್ತದತ್ರ ಪರಮದ್ಭುತಂ ॥ ೮೪ ॥
ಅವ್ಯಕ್ತೇಂದ್ರಿಯವೃತ್ತಿತ್ವಾದ್ಬಾಲ್ಯೇ ದುಃಖಂ ಮಹತ್ಪುನಃ ।
ಇಚ್ಛನ್ನಪಿ ನ ಶಕ್ನೋತಿ ವಕ್ತುಂ ಕರ್ತುಂ ಚ ಕಿಂಚನ ॥ ೮೫ ॥
ದಂತೋತ್ಥಾನೇ ಮಹದ್ದುಃಖಂ ಮೂಲೇನ ವ್ಯಾಧಿನಾ ತಥಾ ।
ಬಾಲರೋಗೈಶ್ಚ ವಿವಿಧೈಃ ಪೀಡಾ ಬಾಲಗ್ರಹೈರಪಿ ॥ ೮೬ ॥
ತೃಡ್ಬುಭುಕ್ಷಾಪರೀತಾಂಗಃ ಕ್ವಚಿತ್ತಿಷ್ಠತಿ ರಾರಟನ್ ।
ವಿಣ್ಮೂತ್ರಭಕ್ಷಣಾದ್ಯಂ ಚ ಮೋಹಾದ್ಬಾಲಃ ಸಮಾಚರೇತ್ ॥ ೮೭ ॥

---

೮೨. ತನಗೆ ಬುದ್ಧಿಯಿದ್ದರೂ, ಇತರ ಪ್ರಾಜ್ಞರು ಹೇಳಿದರೂ ತತ್ತ್ವಗಳನ್ನು ತಿಳಿಯಲಾರನು. ಆದುದರಿಂದ ರಾಗದಿಂದಲೂ, ಮೋಹದಿಂದಲೂ ಅಭಿಭೂತನಾಗಿ ಸಂಸಾರದಲ್ಲಿ ಕ್ಲೇಶಗೊಳ್ಳುವನು.

೮೩. ಗರ್ಭಸ್ಥನಾಗಿದ್ದಾಗ ಇದ್ದ ಸ್ಮೃತಿಯಿಲ್ಲದುದರಿಂದಲೂ, ಆ ದುಃಖಗಳನ್ನು ನಿರೂಪಿಸುವುದಕ್ಕಾಗಿಯೂ, ಸ್ವರ್ಗ ಮತ್ತು ಮೋಕ್ಷಗಳನ್ನು ಸಾಧಿಸಿಕೊಡುವಂತಹ ಶಾಸ್ತ್ರವು ಮಹರ್ಷಿಗಳಿಂದ ಹೇಳಲ್ಪಟ್ಟಿರುವುದು.

೮೪. ಇಂತಹ ಸಕಲ ಪುರುಷಾರ್ಥಗಳನ್ನೂ ಈಡೇರಿಸುವ ಶಾಸ್ತ್ರಜ್ಞಾನವು ಇರುತ್ತಿರಲು ತಮ್ಮ ಆತ್ಮಶ್ರೇಯಸ್ಸನ್ನು ಮಾಡಿಕೊಳ್ಳುವುದಕ್ಕೆ ಪ್ರಯತ್ನಿಸದಿರುವ ಮಾನವರ ನಡತೆಯು ಪರಮಾಶ್ಚರ್ಯವೇ ಅಲ್ಲವೆ!

೮೫. ಜನನವಾದ ಮೇಲೆ ಇಂದ್ರಿಯಗಳು ಚೆನ್ನಾಗಿ ವ್ಯಕ್ತಗಳಾಗಿಲ್ಲದುದರಿಂದ ಬಾಲ್ಯಾವಸ್ಥೆಯಲ್ಲಿ ಜೀವನಿಗೆ ಮತ್ತೆ ಹಿರಿದಾದ ದುಃಖವುಂಟಾಗುವುದು. ಮಗುವು ಇಚ್ಛೆಯುಳ್ಳದ್ದಾದರೂ, ಯಾವುದನ್ನು ಹೇಳುವುದಕ್ಕೂ ಮಾಡುವುದಕ್ಕೂ ಶಕ್ತಿಯಿರುವುದಿಲ್ಲ.

೮೬. ಹಲ್ಲುಗಳು ಹುಟ್ಟುವಾಗಲೂ, ಮೂಲವ್ಯಾಧಿಗಳಿಂದಲೂ ಅತ್ಯಂತ ದುಃಖವುಂಟಾಗುವುದು. ಇವುಗಳಲ್ಲದೆ ಬಾಲ್ಯಾವಸ್ಥೆಗೆ ಸಹಜಗಳಾದ ಇತರ ರೋಗಗಳೂ, ಬಾಲಗ್ರಹಾದಿ ಪೀಡೆಗಳೂ ಹಿಂಸೆಯನ್ನು ಕೊಡುವುವು.

೮೭. ಬಾಲಕನು ಹಸಿವು ಬಾಯಾರಿಕೆಗಳಿಂದ ನೊಂದ ಶರೀರವುಳ್ಳವನಾಗಿ ಕೆಲವು ವೇಳೆ ಅಳುತ್ತಿರುವನು. ಮೋಹದಿಂದ ತನ್ನ ಮಲಮೂತ್ರಗಳನ್ನೇ ಭಕ್ಷಿಸುವನು.

**ಕೌಮಾರೇ ಕರ್ಣವೇಧೇನ ಮಾತಾಪಿತ್ರೋರ್ವಿತಾಡನೈಃ ।**
**ಅಕ್ಷರಾಧ್ಯಯನಾದ್ಯೈಶ್ಚ ದುಃಖಂ ಸ್ಯಾದ್ಗುರುಶಾಸನಾತ್ ॥ ೮೮ ॥**
**ಪ್ರಮತ್ತೇಂದ್ರಿಯವೃತ್ತ್ಯಾ ಚ ಕಾಮರಾಗಪ್ರಪೀಡನಾತ್ ।**
**ರಾಗೋದ್ವೃತ್ತಸ್ಯ ಸತತಂ ಕುತಃ ಸೌಖ್ಯಂ ಹಿ ಯೌವನೇ ॥ ೮೯ ॥**
**ಈರ್ಷ್ಯಯಾ ಸುಮಹದ್ದುಃಖಂ ಮೋಹಾದ್ರಕ್ತಸ್ಯ ಜಾಯತೇ ।**
**ಮತ್ತಸ್ಯ ಕುಪಿತಸ್ಯೈವ ರಾಗೋ ದೋಷಾಯ ಕೇವಲಂ ॥ ೯೦ ॥**
**ನರಾತ್ರೌ ವಿಂದತೇ ನಿದ್ರಾಂ ಕಾಮಾಗ್ನಿಪರಿಖೇದಿತಃ ।**
**ದಿವಾಪಿ ಹಿ ಕುತಃ ಸೌಖ್ಯಮರ್ಥೋಪಾರ್ಜನಚಿಂತಯಾ ॥ ೯೧ ॥**
**ನಾರೀಷು ತ್ವನುಭೂತಾಸು ಸರ್ವದೋಷಾಶ್ರಯಾಸು ಚ ।**
**ವಿಣ್ಮೂತ್ರೋತ್ಸರ್ಗಸದೃಶಂ ಸೌಖ್ಯಂ ಮೈಥುನಜಂ ಸ್ಮೃತಂ ॥ ೯೨ ॥**
**ಸನ್ಮಾನಮಪಮಾನೇನ ವಿಯೋಗೇನೇಷ್ಟಸಂಗಮಃ ।**
**ಯೌವನಂ ಜರಯಾ ಗ್ರಸ್ತಂ ಕ್ವ ಸೌಖ್ಯಮನುಪದ್ರವಂ ॥ ೯೩ ॥**

---

೮೮. ಇನ್ನು ಕೌಮಾರದಶೆಯಲ್ಲಿ ಕಿವಿಗಳನ್ನು ಚುಚ್ಚುವುದರಿಂದಲೂ, ತಾಯಿ ತಂದೆಗಳ ಏಟುಗಳಿಂದಲೂ, ಅಕ್ಷರಾಭ್ಯಾಸ, ಅಧ್ಯಯನಗಳನ್ನು ಮಾಡುವಾಗ ಗುರುಗಳ ಕೈಯ ಹೊಡೆತಗಳಿಂದಲೂ ಮಹತ್ತರವಾದ ದುಃಖ ವುಂಟಾಗುವುದು.

೮೯. ಯೌವನಾವಸ್ಥೆಯನ್ನು ಹೊಂದಲು, ಮದಿಸಿದ ಇಂದ್ರಿಯಗಳ ವ್ಯಾಪಾರಗಳಿಂದಲೂ, ಕಾಮ, ಅನುರಾಗಗಳ ಪೀಡನದಿಂದಲೂ ಯಾವಾಗಲೂ ರಾಗಲೋಲುಪನಾದವನಿಗೆ ಸೌಖ್ಯವೆಲ್ಲಿ ಸಿಕ್ಕಬೇಕು ?

೯೦. ಅಸೂಯೆಯಿಂದಲೂ, ಬಿಂದುಮೋಹದಿಂದಲೂ ವಿಶೇಷ ದುಃಖ ವುಂಟಾಗುವುದು. ಉನ್ಮತ್ತನೂ ಕೋಪಗೊಂಡವನೂ ಆದವನ ಅನುರಾಗವು ಕೇವಲ ದೋಷಭೂಯಿಷ್ಠವು.

೯೧. ಕಾಮಾಗ್ನಿತಪ್ತನಾದುದರಿಂದ ರಾತ್ರಿಗಳಲ್ಲಿ ಅವನಿಗೆ ಸರಿಯಾಗಿ ನಿದ್ದೆಯು ಇರುವುದಿಲ್ಲ. ಹಗಲಿನಲ್ಲಂತೂ ಹಣವನ್ನು ಸಂಪಾದಿಸುವ ಚಿಂತೆ ಯಿಂದ ಸೌಖ್ಯವೆಂಬುದೆಲ್ಲಿಯದು ?

೯೨. ಸಕಲ ದೋಷಗಳಿಗೂ ಆಶ್ರಯಗಳೆನಿಸಿದ ಸ್ತ್ರೀಯರನ್ನು ಅನುಭವಿ ಸುವವರ ಮೈಥುನ ಸುಖವು ಮಲಮೂತ್ರಗಳ ವಿಸರ್ಜನೆಯ ಸೌಖ್ಯಕ್ಕೆ ಸಮಾನವಾದುದೆಂದು ಹೇಳಲ್ಪಟ್ಟಿರುವುದು.

೯೩. ಗೌರವವು ಅವಮಾನದಿಂದಲೂ, ಇಷ್ಟಪ್ರಾಪ್ತಿಯು ವಿಯೋಗ ದಿಂದಲೂ, ಯೌವನವು ಮುಪ್ಪಿನಿಂದಲೂ ಅಂತ್ಯವನ್ನು ಹೊಂದುವುವೆಂದ ಮೇಲೆ ನಿರುಪದ್ರವವಾದ ಸೌಖ್ಯವೆಲ್ಲಿ ದೊರಕುವುದು ?

ವಲೀಪಲಿತಕಾಯೇನ ಶಿಥಿಲೀಕೃತವಿಗ್ರಹಃ ।
ಸರ್ವಕ್ರಿಯಾಸ್ವಶಕ್ತಶ್ಚ ಜರಯಾ ಜರ್ಜರೀಕೃತಃ ॥ ೯೪ ॥
ಸ್ತ್ರೀಪುಂಸೋರ್ಯೌವನಂ ರೂಪಂ ಯದನ್ಯೋನ್ಯಾಶ್ರಯಂ ಪುರಾ ।
ತದೇವಂ ಜರಯಾ ಗ್ರಸ್ತಮುಭಯೋರಪಿ ನ ಪ್ರಿಯಂ ॥ ೯೫ ॥
ಜರಾಭಿಭೂತಃ ಪುರುಷಃ ಪತ್ನೀಪುತ್ರಾದಿಬಾಂಧವೈಃ ।
ಅಶಕ್ತತ್ವಾದ್ದುರಾಚಾರೈರ್ಭೃತ್ಯೈಶ್ಚ ಪರಿಭೂಯತೇ ॥ ೯೬ ॥
ಧರ್ಮಮರ್ಥಂ ಚ ಕಾಮಂ ಚ ಮೋಕ್ಷಂ ಚಾನಾತುರೋ ಯತಃ ।
ಶಕ್ತಿಃ ಸಾಧಯಿತುಂ ತಸ್ಮಾದ್ಯುವಾ ಧರ್ಮಂ ಸಮಾಚರೇತ್ ॥ ೯೭ ॥
ವಾತಪಿತ್ತಕಫಾದೀನಾಂ ವೈಷಮ್ಯಂ ವ್ಯಾಧಿರುಚ್ಯತೇ ।
ವಾತಾದೀನಾಂ ಸಮೂಹಶ್ಚ ದೇಹೋಽಯಂ ಪರಿಕೀರ್ತಿತಃ ॥ ೯೮ ॥
ತಸ್ಮಾದ್ವ್ಯಾಧಿಮಯಂ ಜ್ಞೇಯಂ ಶರೀರಮಿದಮಾತ್ಮನಃ ।
ರೋಗೈರ್ನಾನಾವಿಧೈರ್ಯಾಂತಿ ದೇಹೇ ದುಃಖಾನ್ಯನೇಕಶಃ ॥ ೯೯ ॥

---

೯೪. ಯೌವನವು ಕಳೆದಮೇಲೆ ಸುಕ್ಕಿದ ದೇಹದಿಂದಲೂ, ಕೂದಲಿಲ್ಲದ ತಲೆಯಿಂದಲೂ, ಶಿಥಿಲಗಳಾದ ಕೈಕಾಲುಗಳಿಂದಲೂ ಕೂಡಿ ಯಾವ ಕೆಲಸಗಳನ್ನು ಮಾಡುವುದಕ್ಕೂ ಶಕ್ತಿಯಿಲ್ಲದೆ, ಮುಪ್ಪಿನಿಂದ ಜರ್ಜರಿತನಾಗುವನು.

೯೫. ಪೂರ್ವಾವಸ್ಥೆಯಲ್ಲಿ ಯಾವ ಸ್ತ್ರೀ ಪುರುಷರ ರೂಪಗಳು ಅನ್ಯೋನ್ಯಾಶ್ರಯವನ್ನು ಹೊಂದಿದ್ದುವೊ, ಅವುಗಳೇ ಮುಪ್ಪಡಸಿದ ಮೇಲೆ ಇಬ್ಬರಿಗೂ ಅಸಹ್ಯಗಳಾಗುತ್ತವೆ.

೯೬. ಮುದುಕನಾದವನು ಕೈಲಾಗದೆ ಕುಳಿತಿರುವುದರಿಂದ ಪತ್ನೀ ಪುತ್ರರಿಂದಲೂ, ಬಾಂಧವರಿಂದಲೂ, ದುರಾಚಾರಿಗಳಾದ ಸೇವಕರಿಂದಲೂ ಮಾತಿಮಾತಿಗೂ ನಿಂದಿಸಲ್ಪಡುತ್ತಿರುವರು.

೯೭. ಇಂತಹ ಆಪತ್ಕಾಲವು ಪ್ರಾಪ್ತವಾಗುವುದಕ್ಕೆ ಮುಂಚೆಯೇ ಧರ್ಮಾರ್ಥಕಾಮಮೋಕ್ಷಗಳನ್ನು ಸಾಧಿಸಿಕೊಳ್ಳಬೇಕು. ಆದುದರಿಂದ ಯೌವನಾವಸ್ಥೆಯಲ್ಲಿರುವಾಗಲೇ ಧರ್ಮಾಚರಣೆಯಲ್ಲಿ ಮನಸ್ಸನ್ನಿಡಬೇಕು.

೯೮. ವಾತ, ಪಿತ್ಥ, ಕಫಗಳೇ ಮೊದಲಾದುವುಗಳ್ಳ ವಿಷಮಾವಸ್ಥೆಗೆ ವ್ಯಾಧಿಯೆಂದು ಹೆಸರು. ಈ ಪಾಂಚಭೌತಿಕದೇಹವೂ ಕೂಡ ಅವುಗಳ ಸಮೂಹವೇ ಆಗಿರುವುದೆಂದು ಹೇಳಲ್ಪಟ್ಟಿರುವುದು.

೯೯. ಆದುದರಿಂದ ನಮ್ಮ ದೇಹಗಳೆಲ್ಲವೂ ವ್ಯಾಧಿಮಯಗಳೆಂದೇ ತಿಳಿಯಬೇಕು. ಈ ದೇಹಗಳಲ್ಲಿ ವಿಧವಿಧವಾದ ರೋಗಗಳಿಂದ ಅನೇಕ ದುಃಖಗಳನ್ನು ಜೀವರು ಅನುಭವಿಸುವರು.

ತಾನಿ ಚ ಸ್ವಾತ್ಮವೇದ್ಯಾನಿ ಕಿಮನ್ಯತ್ಕಥಯಾಮ್ಯಹಂ ।
ಏಕೋತ್ತರಂ ಮೃತ್ಯುಶತಮಸ್ಮಿನ್ದೇಹೇ ಪ್ರತಿಷ್ಠಿತಂ ॥ ೧೦೦ ॥
ತತ್ರೈಕಃ ಕಾಲಸಂಯುಕ್ತಃ ಶೇಷಾಸ್ತ್ವಾಗಂತವಃ ಸ್ಮೃತಾಃ ।
ಯೇ ತ್ವಿಹಾಗಂತವಃ ಪ್ರೋಕ್ತಾಸ್ತೇ ಪ್ರಶಾಮ್ಯಂತಿ ಭೈಷಜೈಃ ॥ ೧೦೧ ॥
ಜಪಹೋಮಪ್ರದಾನೈಶ್ಚ ಕಾಲಮೃತ್ಯುರ್ನಶಾಮ್ಯತಿ ।
ವಿವಿಧಾ ವ್ಯಾಧಯಃ ಶಸ್ತ್ರಾಃ ಸರ್ಪಾದ್ಯಾಃ ಪ್ರಾಣಿನಸ್ತಥಾ ॥ ೧೦೨ ॥
ವಿಷಾಣಿ ಚಾಭಿಚಾರಾಶ್ಚ ಮೃತ್ಯೋರ್ದ್ವಾರಾಣಿ ದೇಹಿನಾಂ ।
ಪೀಡಿತಂ ಸರ್ಪರೋಗಾದ್ಯೈರಪಿ ಧನ್ವಂತರಿಃ ಸ್ವಯಂ ॥ ೧೦೩ ॥
ಸ್ವಸ್ಥೀಕರ್ತುಂ ನ ಶಕ್ನೋತಿ ಕಾಲಪ್ರಾಪ್ತಂ ಹಿ ದೇಹಿನಂ ।
ನೌಷಧಂ ನ ತಪೋ ಮಂತ್ರಾ ನ ಮಿತ್ರಾಣಿ ನ ಬಾಂಧವಾಃ ॥ ೧೦೪ ॥
ಶಕ್ನುವಂತಿ ಪರಿತ್ರಾತುಂ ನರಂ ಕಾಲೇನ ಪೀಡಿತಂ ।
ರಸಾಯನತಪೋಜಪ್ಯೈರ್ಯೋಗಸಿದ್ಧೈರ್ಮಹಾತ್ಮಭಿಃ ॥ ೧೦೫ ॥

---

೧೦೦. ಅವುಗಳು ಎಲ್ಲರಿಗೂ ತಿಳಿದವುಗಳೇ ಆಗಿರುವುವು. ಆದುದರಿಂದ ನಾನು ಬೇರೆ ನಿರೂಪಿಸಲು ಅವಶ್ಯಕವಿಲ್ಲ. ಈ ದೇಹದಲ್ಲಿ ಮೃತ್ಯುವಿಗೆ ನೂರಾರು ಕಾರಣಗಳು ನೆಲಸಿರುವುವು.

೧೦೧-೧೦೨. ಈ ಮೃತ್ಯುಗಳಲ್ಲಿ ಒಂದು ಮಾತ್ರ ಕಾಲಪ್ರಾಪ್ತವೆಂದೂ, ಇತರಗಳು ಆಗಂತುಕಗಳೆಂದೂ ಹೇಳಲ್ಪಟ್ಟಿರುವುವು. ಯಾವುವನ್ನು ಆಗಂತುಕಗಳೆಂದು ಹೇಳಿರುವೆನೊ, ಅವುಗಳಿಗೆ ವೈದ್ಯರಿಂದ ಚಿಕಿತ್ಸೆಗಳನ್ನು ಮಾಡಿಸಬಹುದು. ಜಪಗಳು, ಹೋಮ, ದಾನಧರ್ಮಗಳು, ಮುಂತಾದುವುಗಳಿಂದ ಕಾಲಮೃತ್ಯುವು ಶಮನವಾಗುವುದಿಲ್ಲ. ದೇಹಿಯಾದ ಜೀವನಿಗೆ ಅನೇಕ ವ್ಯಾಧಿಗಳೂ, ಸರ್ಪಾದಿ ಕೀಟಗಳೂ, ವ್ಯಾಘ್ರಾದಿ ಪ್ರಾಣಿಗಳೂ, ವಿಷಗಳೂ, ಮಾರಣ ಕ್ರಿಯೆಯೇ ಮೊದಲಾದ ಅಭಿಚಾರಗಳೂ ಮೃತ್ಯುಕಾರಣಗಳೆಂದು ಪ್ರಸಿದ್ಧಗಳಾಗಿರುವುವು.

೧೦೩-೧೦೪. ಕಾಲಮೃತ್ಯುವಿಗೆ ಕಾರಣಗಳಾದ ಸರ್ಪರೋಗಾದಿಗಳಿಂದ ಪೀಡಿತನಾದ ಮನುಷ್ಯನನ್ನು ಸ್ವಸ್ಥದೇಹನನ್ನಾಗಿ ಮಾಡಲು ಸಾಕ್ಷಾದ್ಧನ್ವಂತರಿಯೂ ಸಹ ಶಕ್ತನಲ್ಲ. ಕಾಲಮೃತ್ಯುವಿನಿಂದ ಪೀಡಿತನಾದ ಮನುಷ್ಯನನ್ನು ಔಷಧಗಳಾಗಲಿ, ತಪಸ್ಸಾಗಲಿ, ಮಂತ್ರತಂತ್ರಗಳಾಗಲಿ, ಸ್ನೇಹಿತರಾಗಲಿ, ಬಾಂಧವರಾಗಲಿ ರಕ್ಷಿಸಲು ಶಕ್ಯವಲ್ಲ.

೧೦೫. ಔಷಧ, ತಪಸ್ಸು, ಜಪ, ಮುಂತಾದುವುಗಳಲ್ಲಿ ಒಂದೊಂದರಿಂದಾಗಲಿ, ಸಾಮೂಹಿಕವಾಗಿಯಾಗಲಿ ಯೋಗಸಿದ್ಧರೂ, ಮೇಧಾವಿಗಳೂ ಆದ ಮಹಾತ್ಮರೂ ಕೂಡ ಸನ್ನಿಹಿತವಾದ ಕಾಲಮೃತ್ಯುವನ್ನು ತಪ್ಪಿಸಲಾರರು.

ಕಾಲಮೃತ್ಯುರಪಿ ಪ್ರಾಜ್ಞೈರ್ನೀಯತೇ ನಾಪಿ ಸಂಯುತೈಃ ।
ನಾಸ್ತಿ ಮೃತ್ಯುಸಮಂ ದುಃಖಂ ನಾಸ್ತಿ ಮೃತ್ಯುಸಮಂ ಭಯಂ ।
ನಾಸ್ತಿ ಮೃತ್ಯುಸಮಸ್ತ್ರಾಸಃ ಸರ್ವೇಷಾಮಪಿ ದೇಹಿನಾಂ ॥ ೧೦೬ ॥
ಸದ್ಭಾರ್ಯಾಪುತ್ರಮಿತ್ರಾಣಿ ರಾಜ್ಯೈಶ್ವರ್ಯಸುಖಾನಿ ಚ ।
ಆಬದ್ಧಾನಿ ಸ್ನೇಹಪಾಶೈರ್ಮೃತ್ಯುಃ ಸರ್ವಾಣಿ ಕೃಂತತಿ ॥ ೧೦೭ ॥
ಕಿಂ ನ ಪಶ್ಯಸಿ ಮಾತಸ್ತ್ವಂ ಸಹಸ್ರಸ್ಯಾಪಿ ಮಧ್ಯತಃ ।
ಜನಾಃ ಶತಾಯುಷಃ ಪಂಚ ಭವಂತಿ ನ ಭವಂತಿ ವಾ ॥ ೧೦೮ ॥
ಅಶೀತಿಕಾ ವಿಪದ್ಯಂತೇ ಕೇಚಿತ್ಸಪ್ತತಿಕಾ ನರಾಃ ।
ಪರಮಾಯುಃ ಸ್ಥಿತಾ ಷಷ್ಟಿಸ್ತದಪ್ಯಸ್ತಿ ನ ನಿಶ್ಚಿತಂ ॥ ೧೦೯ ॥
ತಸ್ಯ ಯಾವದ್ಭವೇದಾಯುರ್ದೇಹಿನಃ ಪೂರ್ವಕರ್ಮಭಿಃ ।
ತಸ್ಯಾರ್ಧಮಾಯುಷೋ ರಾತ್ರಿರ್ಹರತೇ ಮೃತ್ಯುರೂಪಿಣೀ ॥ ೧೧೦ ॥
ಬಾಲಭಾವೇನ ಮೋಹೇನ ವಾರ್ಧಕೇ ಜರಯಾ ತಥಾ ।
ವರ್ಷಾಣಾಂ ವಿಂಶತಿರ್ಯಾತಿ ಧರ್ಮಕಾಮಾರ್ಥವರ್ಜಿತಃ ॥ ೧೧೧ ॥

---

೧೦೬–೧೦೭. ಮೃತ್ಯುವಿಗೆ ಸಮಾನವಾದ ದುಃಖವಾಗಲಿ, ಭಯವಾಗಲಿ, ಮೈನಡುಕವಾಗಲಿ ಸಕಲ ಪ್ರಾಣಿಗಳಿಗೂ ಮತ್ತೆ ಯಾವುದರಿಂದಲೂ ಉಂಟಾಗಲಾರದು. ಸ್ನೇಹವೆಂಬ ಪಾಶದಿಂದ ಕಟ್ಟಲ್ಪಟ್ಟಿರುವ ಹೆಂಡಿರು, ಮಕ್ಕಳು, ಸ್ನೇಹಿತರು, ರಾಜ್ಯ, ಐಶ್ವರ್ಯ, ಶರೀರಸೌಖ್ಯ ಮುಂತಾದುವುಗಳನ್ನೆಲ್ಲ ಮೃತ್ಯುವು ಬಲವಂತವಾಗಿ ಕಡಿದುಹಾಕುವುದು.

೧೦೮. ಎಲೌ ತಾಯೆ! ನಾವೇ ಕಣ್ಣುಗಳಿಂದ ನೋಡುವೆವಲ್ಲವೆ! ಸಾವಿರಾರು ಜನರಲ್ಲಿ ಒಂದು ನೂರು ವರ್ಷಗಳ ಪೂರ್ಣಾಯುಸ್ಸುಳ್ಳವರು ಐದು ಜನರು ಸಿಕ್ಕುವರೊ, ಇಲ್ಲವೊ!

೧೦೯. ಕೆಲವರು ಎಂಬತ್ತು ವರ್ಷಗಳಿಗೆ ಸಾಯುವರು. ಕೆಲವು ಮನುಷ್ಯರು ಎಪ್ಪತ್ತು ವರ್ಷದ ಆಯುಸ್ಸುಳ್ಳವರು. ಸಾಧಾರಣವಾಗಿ ಅರುವತ್ತು ವರ್ಷಗಳೇ ಮನುಷ್ಯನ ಪರಮಾಯುರ್ದಾಯವಾಗಿರುವುದು. ಅದೂ ಸಹ ಎಲ್ಲರಿಗೂ ಲಭಿಸುವುದಿಲ್ಲ.

೧೧೦. ಅದರಲ್ಲಿಯೂ ಪೂರ್ವಕರ್ಮಗಳ ಬಲದಿಂದ ಎಷ್ಟು ಆಯುಸ್ಸೆಂದು ನಿರ್ದಿಷ್ಟವಾಗಿರುವುದೊ, ಅದರಲ್ಲಿ ಅರ್ಧವನ್ನು ಮೃತ್ಯುರೂಪಿಯಾದ ರಾತ್ರಿಯು ಅಪಹರಿಸಿರುವುದು.

೧೧೧. ಬಾಲ್ಯದಲ್ಲಿಯೂ, ಯೌವನದ ಕಾಮವಿಲಾಸದಲ್ಲಿಯೂ, ವಾರ್ಧಕ್ಯದ ಅಶಕ್ತತೆಯಲ್ಲಿಯೂ, ಧರ್ಮಾರ್ಥಕಾಮಗಳಿಗೆ ಉಪಯೋಗವಿಲ್ಲದಂತೆ ಇಪ್ಪತ್ತು ವರ್ಷಗಳು ಕಳೆಯುವುವು.

ಆಗಂತುಕೈರ್ಭಯೈಃ ಪುಂಸಾಂ ವ್ಯಾಧಿಶೋಕೈರನೇಕಧಾ ।
ಹ್ರಿಯತೇಽರ್ಥಂ ಹಿ ತತ್ರಾಪಿ ಯಚ್ಛೇಷಂ ತದ್ಧಿ ಜೀವಿತಂ ॥ ೧೧೨ ॥
ಜೀವಿತಾಂತೇ ಚ ಮರಣಂ ಮಹಾಘೋರಮವಾಪ್ನುಯಾತ್ ।
ಜಾಯತೇ ಯೋನಿಕೋಟೀಷು ಮೃತಃ ಕರ್ಮವಶಾತ್ಪುನಃ ॥ ೧೧೩ ॥
ದೇಹಭೇದೇನ ಯಃ ಪುಂಸಾಂ ವಿಯೋಗಃ ಕರ್ಮಸಂಖ್ಯಯಾ ।
ಮರಣಂ ತದ್ವಿನಿರ್ದಿಷ್ಟಂ ನ ನಾಶಃ ಪರಮಾರ್ಥತಃ ॥ ೧೧೪ ॥
ಮಹಾತಮಃಪ್ರವಿಷ್ಟಸ್ಯ ಛಿದ್ಯಮಾನೇಷು ಮರ್ಮಸು ।
ಯದ್ದುಃಖಂ ಮರಣಂ ಜಂತೋರ್ನ ಸತ್ಯೇಹೋಪಮಾ ಕ್ವಚಿತ್ ॥೧೧೫॥
ಹಾ ತಾತ ಮಾತರ್ಹಾ ಕಾಂತೇ ಕ್ರಂದತ್ಯೇವಂ ಸುದುಃಖಿತಃ ।
ಮಂಡೂಕ ಇವ ಸರ್ಪೇಣ ಗೀರ್ಯತೇ ಮೃತ್ಯುನಾ ಜನಃ ॥ ೧೧೬ ॥
ಬಾಂಧವೈಃ ಸಂಪರಿತ್ಯಕ್ತಃ ಪ್ರಿಯೈಶ್ಚ ಪರಿವಾರಿತಃ ।
ನಿಶ್ವಸನ್ದೀರ್ಘಮುಷ್ಣಂ ಚ ಮುಖೇನ ಪರಿಶುಷ್ಯತಾ ॥ ೧೧೭ ॥

---

೧೧೨. ಅದರಲ್ಲಿಯೂ ಕೂಡ ಆಗಂತುಕಗಳಾದ ಭಯಗಳಿಂದಲೂ, ರೋಗಗಳಿಂದಲೂ ಅನೇಕ ವಿಧವಾಗಿ ಜನರ ಜೀವನವು ಕಳೆದುಹೋಗುತ್ತದೆ. ಇವುಗಳೆಲ್ಲ ಕಳೆದಮೇಲೆ ಉಳಿದುದೇ ನಿಜವಾದ ಜೀವಿತವೆನಿಸುವುದು.

೧೧೩. ಜೀವನದ ಕೊನೆಯಲ್ಲಿ ಘೋರವಾದ ಮರಣವನ್ನು ಹೊಂದುವನು. ಮತ್ತೆ ಕರ್ಮಫಲಗಳನ್ನು ಅನುಭವಿಸಲು ಸತ್ತವನು ಕೋಟಿ ಯೋನಿಗಳಲ್ಲಿ ಯಾವುದರಲ್ಲಿಯಾದರೂ ಒಂದರಲ್ಲಿ ಹುಟ್ಟುವನು.

೧೧೪. ಕರ್ಮವಶದಿಂದ ಮನುಷ್ಯರಿಗೆ ದೇಹಾಭಿಮಾನಗಳಿಂದ ವಿಯೋಗವು ಸಂಭವಿಸುವುದು. ಆದರೆ ಆ ಮರಣವು ಸ್ವರೂಪನಾಶವಲ್ಲವೆಂದು ಶಾಸ್ತ್ರಗಳಲ್ಲಿ ನಿರೂಪಿಸಲ್ಪಟ್ಟಿರುವುದು.

೧೧೫. ಮಹತ್ತರವಾದ ತಮಸ್ಸನ್ನು ಪ್ರವೇಶಿಸುವನಾಗಿ ಮರ್ಮಸ್ಥಾನಗಳಲ್ಲೆಲ್ಲ ಯಾತನೆಯನ್ನನುಭವಿಸುತ್ತಿರಲು ಮನುಷ್ಯನಿಗೆ ಸಂಭವಿಸುವ ಮರಣವೆಂಬ ದುಃಖಕ್ಕೆ ಸರಿಯಾದ ಉಪಮಾನವೇ ಇಲ್ಲ.

೧೧೬. ಅಯ್ಯೋ! ತಂದೆಯೆ! ತಾಯಿಯೆ! ಪ್ರಿಯಪತ್ನಿಯೆ! ಎಂದು ಅತ್ಯಂತ ದುಃಖದಿಂದ ಮುಮೂರ್ಷುವು ಆಕ್ರಂದನವನ್ನು ಮಾಡುವನು. ಲೋಕವೆಲ್ಲವೂ ಹಾವಿನ ಬಾಯಿಗೆ ಸಿಕ್ಕಿರುವ ಕಪ್ಪೆಯಂತೆ ಮೃತ್ಯುವಿನ ಬಾಯಿಗೆ ತುತ್ತಾಗಿರುವುದು.

೧೧೭–೧೧೮. ಮಿತ್ರಬಾಂಧವರಿಂದ ಬಿಡಲ್ಪಟ್ಟವನಾಗಿ ಕೇವಲ ಇಷ್ಟರಿಂದಲೇ ಕೂಡಿಕೊಂಡು, ಒಣಗುತ್ತಿರುವ ಮುಖದಿಂದ ಬಿಸಿಯಾದ ನಿಟ್ಟುಸಿರು

**ಚತುರಂತೇಷು ಖಟ್ವಾಯಾಃ ಪರಿವರ್ತನ್ಮುಹುರ್ಮುಹುಃ ।**
**ಸಂಮೂಢಃ ಕ್ಷಿಪತೇಽತ್ಯರ್ಥಂ ಹಸ್ತಪಾದಾವಿತಸ್ತತಃ ॥ ೧೧೮ ॥**
**ಖಟ್ವಾತೋ ವಾಂಛತೇ ಭೂಮಿಂ ಭೂಮೇಃ ಖಟ್ವಾಂ ಪುನರ್ಮಹೀಂ ।**
**ವಿವಸ್ತ್ರೋ ಮುಕ್ತಲಜ್ಜಶ್ಚ ಮೂತ್ರವಿಷ್ಠಾನುಲೇಪಿತಃ ॥ ೧೧೯ ॥**
**ಯಾಚಮಾನಶ್ಚ ಸಲಿಲಂ ಶುಷ್ಕಕಂಠೋಷ್ಠತಾಲುಕಃ ।**
**ಚಿಂತಯಾನಂ ಸ್ವವಿತ್ತಾನಿ ಕಸ್ಯೈತಾನಿ ಮೃತೇ ಮಯಿ ॥ ೧೨೦ ॥**
**ಪಂಚಾವಟಾನ್ಖನ್ಯಮಾನಃ ಕಾಲಪಾಶೇನ ಕರ್ಷಿತಃ ।**
**ಮ್ರಿಯತೇ ಪಶ್ಯತಾಮೇವ ಗಲೇ ಘುರ್ಘುರರಾವಕೃತ್ ॥ ೧೨೧ ॥**
**ಜೀವಸ್ತೃಣಜಲೂಕೇವ ದೇಹಾದ್ದೇಹಂ ವಿಶೇತ್ಕ್ರಮಾತ್ ।**
**ಸಂಪ್ರಾಪ್ಯೋತ್ತರಮಂಶೇನ ದೇಹಂ ತ್ಯಜತಿ ಪೂರ್ವಕಂ ॥ ೧೨೨ ॥**
**ಮರಣಾತ್ಪ್ರಾರ್ಥನಾದುಃಖಮಧಿಕಂ ಹಿ ವಿವೇಕಿನಃ ।**
**ಕ್ಷಣಿಕಂ ಮರಣೇ ದುಃಖಮನಂತಂ ಪ್ರಾರ್ಥನಾಕೃತಂ ॥ ೧೨೩ ॥**

---

ಗಳನ್ನು ಬಿಡುವವನಾಗಿ, ಮಂಚದ ನಾಲ್ಕು ಕಾಲುಗಳ ನಡುವೆ ಹೊರಳಾಡುತ್ತ ಜ್ಞಾನಶೂನ್ಯನಾಗಿ ಮನುಷ್ಯನು ಕೈಕಾಲುಗಳನ್ನು ಬಹುವಿಧವಾಗಿ ಬಡಿದು ಕೊಳ್ಳುವನು.

೧೧೯. ಮಂಚದ ಮೇಲಿನಿಂದ ನೆಲವನ್ನೂ, ನೆಲದಿಂದ ಮಂಚವನ್ನೂ, ಮತ್ತೆ ಭೂಮಿಯನ್ನೂ ಇಚ್ಛಿಸುವನು. ಬೆತ್ತಲೆಯಾಗಿ ಬಿದ್ದುಕೊಂಡು ಲಜ್ಜೆಯಿಲ್ಲದವನಾಗಿ ತನ್ನ ಮಲಮೂತ್ರಗಳಲ್ಲಿಯೇ ಹೊರಳಾಡುವನು.

೧೨೦–೧೨೧. ಗಂಟಲು, ಬಾಯಿ, ತುಟಿಗಳು ಒಣಗುತ್ತಿರಲು ನೀರನ್ನು ಕೇಳುತ್ತ, 'ನಾನು ಸತ್ತಮೇಲೆ ನನ್ನ ಐಶ್ವರ್ಯವು ಯಾರಿಗೆ ಸೇರುವುದೊ' ಎಂದು ಯೋಚಿಸುತ್ತ, ಕೈಬೆರಳುಗಳಿಂದ ಭೂಮಿಯನ್ನು ಬಗೆಯುತ್ತ, ಯಮನ ಪಾಶಗಳಿಂದ ಸೆಳೆಯಲ್ಪಟ್ಟವನಾಗಿ ಎಲ್ಲರೂ ನೋಡುತ್ತಿರುವಂತೆಯೇ ಗಂಟಲಲ್ಲಿ ಗೊರಗುಟ್ಟಿಕೊಂಡು ಸಾಯುವನು.

೧೨೨. ಜೀವನು ತೃಣಜಲೂಕವೆಂಬ ಕೀಟದಂತೆ ಕ್ರಮವಾಗಿ ದೇಹವನ್ನು ಬಿಟ್ಟು ಮತ್ತೊಂದು ದೇಹವನ್ನು ಸೇರುವನು. ಮುಂದಿನ ದೇಹವನ್ನು ಸ್ವಲ್ಪ ವಾಗಿ ಆಶ್ರಯಿಸಿಕೊಂಡೇ ಹಿಂದಿನ ಶರೀರವನ್ನು ತ್ಯಜಿಸುವುದು.

೧೨೩. ಇನ್ನು ಜೀವನೋಪಾಯವನ್ನು ಕುರಿತು ಯೋಚಿಸೋಣ. ವಿವೇಕಿ ಯಾದವನಿಗೆ ಮರಣಕ್ಕಿಂತಲೂ ಯಾಚನೆಯೆಂಬುದು ಮಹಾ ದುಃಖಕರವು. ಮರಣದಲ್ಲಿ ಕ್ಷಣಿಕವಾದ ದುಃಖವಾದರೆ ಯಾಚನಾವೃತ್ತಿಯಲ್ಲಿ ನಿರಂತರವಾದ ದುಃಖವಿರುವುದು.

ಜ್ಞಾತಂ ಮಯೈತದಧುನಾ ಮೃತೋ ಭವತಿ ಯದ್ಗುರುಃ ।
ನ ಪರಂ ಪ್ರಾರ್ಥಯೇದ್ಭೂಯಸ್ತೃಷ್ಣಾ ಲಾಘವಕಾರಣಂ ॥ ೧೨೪ ॥
ಆದೌ ದುಃಖಂ ತಥಾಮಧ್ಯೇ ಹ್ಯನ್ತ್ಯೇ ದುಃಖ ಚ ದಾರುಣಂ ।
ನಿಸರ್ಗಾತ್ಸರ್ವಭೂತಾನಾಮಿತಿ ದುಃಖಪರಂಪರಾ ॥ ೧೨೫ ॥
ಕ್ಷುಧಾ ಚ ಸರ್ವರೋಗಾಣಾಂ ವ್ಯಾಧಿಃ ಶ್ರೇಷ್ಠತಮಃ ಸ್ಮೃತಃ ।
ಸ ಚಾನ್ನೌಷಧಿಲೇಪೇನ ಕ್ಷಣಮಾತ್ರಂ ಪ್ರಶಾಮ್ಯತಿ ॥ ೧೨೬ ॥
ಕ್ಷುದ್ವ್ಯಾಧೇರ್ವೇದನಾ ತೀವ್ರಾ ನಿಶ್ಶೇಷಬಲಕೃಂತನೀ ।
ತಯಾಭಿಭೂತೋ ಮ್ರಿಯತೇ ಯಥಾನ್ಯೈರ್ವ್ಯಾಧಿಭಿರ್ನರಃ ॥ ೧೨೭ ॥
ರಾಜ್ಞೋಽಭಿಮಾನಮಾತ್ರಂ ಹಿ ಮನ್ಯೈವ ವಿದ್ಯತೇ ಗೃಹೇ ।
ಸರ್ವಮಾಭರಣಂ ಭಾರಂ ಸರ್ವಮಾಲೇಪನಂ ಮಮ ॥ ೧೨೮ ॥
ಸರ್ವಂ ಪ್ರಲಾಪಿತಂ ಗೀತಂ ನಿತ್ಯಮುನ್ಮತ್ತಚೇಷ್ಟಿತಂ ॥ ೧೨೯ ॥
ಇತ್ಯೇವಂ ರಾಜ್ಯಸಂಭೋಗೈಃ ಕುತಃ ಸೌಖ್ಯಂ ವಿಚಾರತಃ ।
ನೃಪಾಣಾಂ ವ್ಯಗ್ರಚಿತ್ತಾನಾಮನ್ಯೋನ್ಯ ವಿಜಿಗೀಷಯಾ ॥ ೧೩೦ ॥

---

೧೨೪. ಸತ್ತವನು ಏಕೆ ಗುರು (ಭಾರ)ವಾಗುವನೆಂಬುದನ್ನು ನಾನು ಈಗ ತಿಳಿದೆನು. ಅವನು ಮತ್ತೆ ಬೇರೆಯವನನ್ನು ಯಾಚಿಸುವುದಿಲ್ಲವಷ್ಟೆ. ಆಶೆಯೆಂಬುದೇ ಲಾಘವಕ್ಕೆ ಕಾರಣವು.

೧೨೫–೧೨೬. ಜನನವು ದುಃಖವು; ಜೀವನವು ದುಃಖವು; ಮರಣವಂತೂ ದಾರುಣವಾದ ದುಃಖವು. ಈ ರೀತಿಯಾಗಿ ಸಕಲ ಪ್ರಾಣಿಗಳಿಗೂ ದುಃಖಗಳ ಪರಂಪರೆಯು ಸಹಜವಾಗಿಯೇ ಇರುವುದು. ಸಕಲ ರೋಗಗಳಲ್ಲಿಯೂ ಹಸಿವೆಂಬ ವ್ಯಾಧಿಯು ಶ್ರೇಷ್ಠವೆಂದು ಹೇಳಲ್ಪಟ್ಟಿರುವುದು. ಆ ವ್ಯಾಧಿಯು ಆಹಾರವೆಂಬ ಔಷಧಲೇಪದಿಂದ ಸ್ವಲ್ಪಕಾಲ ಶಮನವಾಗುವುದು.

೧೨೭. ಅಂತಹ ಕ್ಷುದ್ವ್ಯಾಧಿಯ ದುಃಖವೂ ಕೂಡ ತೀವ್ರತೆಯುಳ್ಳುದುದೂ, ಸಂಪೂರ್ಣ ಬಲನಾಶಕವಾದುದೂ ಆಗಿರುವುದು. ಅದರಿಂದ ಪೀಡಿತನಾದ ಮನುಷ್ಯನು ಇತರ ರೋಗಗಳನ್ನನುಭವಿಸುವವರಂತೆಯೇ ಮರಣವನ್ನೂ ಹೊಂದುವನು.

೧೨೮–೧೩೦. ರಾಜರ ಅಭಿಮಾನವೆಂತಿರುವುದೆಂಬುದನ್ನು ನನ್ನ ಮನೆಯಲ್ಲಿಯೇ ಕಾಣುತ್ತಿರುವೆನು. ಆಭರಣಗಳೆಲ್ಲವೂ ಕೇವಲ ಭಾರಗಳೇ ಸರಿ. ಗಂಧ ಚಂದನಾದಿಗಳ ಆಲೇಪನಗಳೂ, ಮಧುರ ಭಾಷಣಗಳೂ, ಸಂಗೀತಗಳೂ ನನ್ನ ಅಭಿಪ್ರಾಯದಲ್ಲಿ ಕೇವಲ ಉನ್ಮತ್ತಚೇಷ್ಟಿತಗಳೇ; ಪ್ರಲಾಪಗಳೇ! ಈ ವಿಧವಾಗಿ ವಿಚಾರಿಸಲು ಪರಸ್ಪರ ವಿಜಯಗಳಲ್ಲಿಯೇ ಸ್ವಸ್ಥಚಿತ್ತರಾದ ರಾಜರುಗಳ ರಾಜ್ಯಭೋಗಗಳಿಂದ ಸೌಖ್ಯವೆಂಬುದು ಹೇಗುಂಟಾಗುವುದು?

ಪ್ರಾಯೇಣ ಶ್ರೀಮದಾಲೇಪಾನ್ನಹುಷಾದ್ಯಾ ಮಹಾನೃಪಾಃ ।
ಸ್ವರ್ಗಂ ಪ್ರಾಪ್ಯಾಪಿ ಪತಿತಾಃ ಕಃ ಶ್ರಿಯೋ ವಿಂದತೇ ಸುಖಂ ॥ ೧೩೧ ॥
ಉಪರ್ಯುಪರಿ ದೇವಾನಾಮನ್ಯೋನ್ಯಾತಿಶಯೋ ಸ್ಥಿತಂ ।
ನರೈಃಪುಣ್ಯಫಲಂ ಸ್ವರ್ಗೇ ಮೂಲಚ್ಛೇದೇನ ಭುಜ್ಯತೇ ।
ನ ಚಾನ್ಯತ್ಕ್ರಿಯತೇ ಕರ್ಮ ಸೋಽತ್ರ ದೋಷಃ ಸುದಾರುಣಃ ॥ ೧೩೨ ॥
ಛಿನ್ನಮೂಲತರುರ್ಯದ್ವದವಶಃ ಪತತೇ ಕ್ಷಿತೌ ।
ಪುಣ್ಯಮೂಲಕ್ಷಯೇ ತದ್ವತ್ಪಾತಯಂತಿ ದಿವೌಕಸಃ ॥ ೧೩೩ ॥
ಇತಿ ಸ್ವರ್ಗೇಽಪಿ ದೇವಾನಾಂ ನಾಸ್ತಿ ಸೌಖ್ಯಂ ವಿಚಾರತಃ ।
ತಥಾ ನಾರಕಿಣಾಂ ದುಃಖಂ ಪ್ರಸಿದ್ಧಂ ಕಿಂ ಚ ವರ್ಣ್ಯತೇ ॥ ೧೩೪ ॥
ಸ್ಥಾವರೇಷ್ವಪಿ ದುಃಖಾನಿ ದಾವಾಗ್ನಿಹಿಮಶೋಷಣಂ ।
ಕುಠಾರೈಶ್ಛೇದನಂ ತೀವ್ರಂ ವಲ್ಕಲಾನಾಂ ಚ ತಕ್ಷಣಂ ॥ ೧೩೫ ॥
ಪರ್ಣಶಾಖಾಫಲಾನಾಂ ಚ ಪಾತನಂ ಚಂಡವಾಯುನಾ ।
ಅಪಮರ್ದಶ್ಚ ಸತತಂ ಗಜೈರ್ವನ್ಯೈಶ್ಚ ದೇಹಿಭಿಃ ॥ ೧೩೬ ॥

---

೧೩೧. ಪ್ರಾಯಿಕವಾಗಿ ಐಶ್ವರ್ಯಮದದಿಂದ ನಹುಷಾದಿ ಮಹಾರಾಜರು ಸ್ವರ್ಗವನ್ನು ಹೊಂದಿಯೂ ಕೂಡ ಮತ್ತೆ ಭೂಮಿಗೆ ಬಿದ್ದರು. ಐಶ್ವರ್ಯದಿಂದ ಯಾರಿಗೆತಾನೆ ಸೌಖ್ಯವೆಂಬುದು ಲಭಿಸುವುದು?

೧೩೨. ದೇವತೆಗಳಲ್ಲಿಯೂ ಕೂಡ ಪರಸ್ಪರ ಅತಿಶಯವನ್ನನುಸರಿಸಿ ಮೇಲು ಮೇಲಿನ ಸ್ಥಾನಗಳಿರುವುವು. ಸ್ವರ್ಗದ ಸೌಖ್ಯಗಳನ್ನು ಮನುಷ್ಯನು ತನ್ನ ಮೂಲಧನವಾದ ಪುಣ್ಯದ ವ್ಯಯದಿಂದಲೇ ಅನುಭವಿಸುವನು. ಅಲ್ಲಿ ಇತರ ಕರ್ಮಗಳನ್ನು ಮಾಡುವಂತಿಲ್ಲ. ಅದೇ ಆ ಲೋಕದ ಮಹತ್ತರವಾದ ದೋಷವು.

೧೩೩. ಬುಡವನ್ನು ಕತ್ತರಿಸಿದ ಮರವು ಹೇಗೆ ಖಂಡಿತವಾಗಿಯೂ ನೆಲಕ್ಕೆ ಬೀಳುವುದೊ, ಅಂತೆಯೇ ಮನುಷ್ಯನ ಪುಣ್ಯವು ಕ್ಷಯವಾಗುತ್ತಲೆ ದೇವತೆಗಳು ಅವನನ್ನು ಕೆಳಕ್ಕೆ ತಳ್ಳುವರು.

೧೩೪. ಇಂತು ಸ್ವರ್ಗದಲ್ಲಿ ದೇವತೆಗಳಿಗೂ ಕೂಡ ಸೌಖ್ಯವಿಲ್ಲವೆಂಬುದು ವಿಚಾರದಿಂದ ತಿಳಿಯುವುದು. ಹಾಗೆಯೇ ನರಕವಾಸಿಗಳ ದುಃಖವೂ ಪ್ರಸಿದ್ಧ ವಾಗಿರುವುದು. ಅದನ್ನು ಬೇರೆ ವರ್ಣಿಸಬೇಕೆ?

೧೩೫–೧೩೬. ಸ್ಥಾವರ ಜಂತುಗಳಲ್ಲಿಯೂ ಅನೇಕ ದುಃಖಗಳಿರುವುವು. ಕಾಳ್ಕಿಚ್ಚು, ಹಿಮಗಳಿಂದ ಶೋಷಣವು, ಕೊಡಲಿಗಳಿಂದ ತೀವ್ರವಾದ ಛೇದನ, ತೊಗಟೆಗಳ ಸುಲಿಯುವಿಕೆ, ಪ್ರಚಂಡ ಮಾರುತಗಳಿಂದ ಎಲೆ, ಹಣ್ಣುಗಳು, ಕೊಂಬೆಗಳ ಬೀಳುವಿಕೆ, ಆನೆಗಳಿಂದಲೂ ಇತರ ಕಾಡುಮೃಗಗಳಿಂದಲೂ ನಿತ್ಯ ದಲ್ಲಿಯೂ ತಿಕ್ಕಾಟ— ಇವು ಸ್ಥಾವರ ಜನ್ಮದ ಕಷ್ಟಗಳು.

**ತೃಡ್ಬುಭುಕ್ಷಾ ಚ ಸರ್ಪಾಣಾಂ ಕ್ರೋಧೋ ದುಃಖಂ ಚ ದಾರುಣಂ ॥೧೩೭॥**
**ದುಷ್ಟಾನಾಂ ಘಾತನಂ ಲೋಕೇ ಪಾಶೇನ ಚ ನಿಬಂಧನಂ ।**
**ಏವಂ ಸರೀಸೃಪಾಣಾಂ ಚ ದುಃಖಂ ಮಾತರ್ಮುಹುರ್ಮುಹುಃ ॥೧೩೮॥**
**ಅಕಸ್ಮಾಜ್ಜನ್ಮಮರಣಂ ಕೀಟಾದೀನಾಂ ತಥಾವಿಧಂ ।**
**ವರ್ಷಾಶೀತಾತಪೈರ್ದುಃಖಂ ಸುಕಷ್ಟಂ ಮೃಗಪಕ್ಷಿಣಾಂ ॥ ೧೩೯ ॥**
**ಕ್ಷುತ್ತೃಟ್ಕ್ಲೇಶೇನ ಮಹತಾ ಸಂತ್ರಸ್ತಾಶ್ಚ ಸದಾಮೃಗಾಃ ।**
**ಪಶುನಾಗನಿಕಾಯಾನಾಂ ಶೃಣು ದುಃಖಾನಿ ಯಾನಿ ಚ ॥ ೧೪೦ ॥**
**ಕ್ಷುತ್ತೃಟ್ಛೀತಾದಿದಮನಂ ವಧಬಂಧನತಾಡನಂ ।**
**ನಾಸಾಪ್ರವೇಧನಂ ತ್ರಾಸಃ ಪ್ರತೋದಾಂಕುಶತಾಡನಂ ॥ ೧೪೧ ॥**
**ವೇಣುಕುಂತಾದಿನಿಗಡಮುದ್ಗರಾಂಕುಶತಾಡನಂ ।**
**ಭಾರೋದ್ವಹನಸಂಕ್ಲೇಶಂ ಶಿಕ್ಷಾಯುದ್ಧಾದಿಪೀಡನಂ ।**
**ಆತ್ಮಯೂಥವಿಯೋಗಶ್ಚ ವನೇ ಚ ನಯನಾದಿಕಂ ॥ ೧೪೨ ॥**
**ದುರ್ಭಿಕ್ಷಂ ದುರ್ಭಗತ್ವಂ ಚ ಮೂರ್ಖತ್ವಂ ಚ ದರಿದ್ರತಾ ।**
**ಅಧರೋತ್ತರಭಾವಶ್ಚ ಮರಣಂ ರಾಷ್ಟ್ರವಿಭ್ರಮಃ ॥ ೧೪೩ ॥**

---

೧೩೭–೧೩೮. ಎಲೌ ತಾಯೆ! ನೆಲದಲ್ಲಿ ಹರಿದಾಡುವ ಸರ್ಪಾದಿಗಳ ಜನ್ಮವನ್ನು ಕುರಿತು ಯೋಚಿಸಿದರೆ, ಹಸಿವು, ನೀರಡಿಕೆಗಳು, ಕೋಪ, ಹೆಚ್ಚಾದ ದುಃಖ, ಲೋಕದಲ್ಲಿ ದುಷ್ಟರಿಂದ ಘಾತನ, ಪಾಶಗಳಿಂದ ಬಂಧನ ಮುಂತಾದು ವುಗಳಿಂದ ಮತ್ತೆ ಮತ್ತೆ ದುಃಖಗಳಿಗೆಡೆಯಾಗಿರುವುದು.

೧೩೯. ಭೃಂಗಗಳೇ ಮೊದಲಾದ ಕೀಟಗಳೂ ಅಕಸ್ಮಾತ್ತಾಗಿ ಸಂಭವಿಸುವ ಜನ್ಮಮರಣಗಳಿಂದ ದುಃಖಪಡುವುವು. ಮೃಗಪಕ್ಷಿಗಳಿಗೆ ಮಳೆ, ಚಳಿ, ಬಿಸಿಲು ಗಳಿಂದ ದುಃಖವೂ ಕಷ್ಟವೂ ಉಂಟಾಗುವುವು.

೧೪೦. ಮೃಗಗಳು ನಿತ್ಯವೂ ಹಸಿವು ಬಾಯಾರಿಕೆಗಳ ಕ್ಲೇಶಗಳಿಂದ ಬಹು ವಾಗಿ ಭಯಗೊಂಡಿರುವುವು. ಪಶುಗಳ ಮತ್ತು ಆನೆಗಳ ದುಃಖಗಳನ್ನು ಕೇಳುವವಳಾಗು.

೧೪೧–೧೪೫. ಹಸಿವು, ಬಾಯಾರಿಕೆ, ಚಳಿ ಮುಂತಾದುವುಗಳ ಸಹನೆ, ಮನುಷ್ಯರಿಂದ ವಧೆ, ಬಂಧನ, ತಾಡನ, ಮೂಗುದಾರದ ಕ್ಲೇಶ, ಭಯ, ಚಾವಟಿ ಅಂಕುಶಗಳಿಂದ ಪೆಟ್ಟುಗಳು, ಬಿದಿರಿನ ಭಲ್ಲೆಯಗಳಿಂದ ತಿವಿಯು ವುದು, ದೊಣ್ಣೆಗಳಿಂದಲೂ ಅಂಕುಶಗಳಿಂದಲೂ ತಾಡನ, ಭಾರಗಳನ್ನು ಹೊರುವ ಕಷ್ಟ, ಶಿಕ್ಷೆ, ಯುದ್ಧಗಳಲ್ಲಿ ಕಷ್ಟಗಳು, ತನ್ನ ಗುಂಪಿನಿಂದ ಬೇರಾಗುವಿಕೆ, ಕಾಡುಗಳಲ್ಲಿ ಓಡಾಡುವುದು—ಇವು ಮೃಗಜನ್ಮದ ಕಷ್ಟಗಳು. ಇಂತು ಸಕಲ ಚರಾಚರಪ್ರಾಣಿಗಳಿಗೂ ಕೂಡ ದುರ್ಭಿಕ್ಷ, ಹೀನತ್ವ,

ಅನ್ಯೋಽನ್ಯಾಭಿಭವಾದ್ದುಃಖಮನ್ಯೋಽನ್ಯಾತಿಶಯಾತ್ಮನಃ ।
ಅನಿತ್ಯತಾ ಪ್ರಭಾವಾಣಾಮುಚ್ಛ್ರಯಾಣಾಂಚ ಪಾತನಂ ॥ ೧೪೪ ॥
ಇತ್ಯೇವಮಾದಿಭಿರ್ದುಃಖೈರ್ಯಸ್ಮಾದ್ವ್ಯಾಪ್ತಂ ಚರಾಚರಂ ॥ ೧೪೫ ॥
ನಿರಯಾದಿ ಮನುಷ್ಯಾಂತಂ ತಸ್ಮಾತ್ಸರ್ವಂ ತ್ಯಜೇದ್ಬುಧಃ ।
ಸ್ಕಂಧಾತ್ಸ್ಕಂಧಂ ನಯೇದ್ಭಾರಂ ವಿಶ್ರಾಮಂ ಮನ್ಯತೇಽನ್ಯಥಾ
ತದ್ವತ್ಸರ್ವಮಿದಂ ಲೋಕೇ ದುಃಖಂ ದುಃಖೇನ ಶಾಮ್ಯತಿ ॥ ೧೪೬ ॥
ಏವಮೇತಜ್ಜಗತ್ಸರ್ವಮನ್ಯೋಽನ್ಯಾತಿಶಯೋಚ್ಛ್ರಿತಂ ।
ದುಃಖೈರಾಕುಲಿತಂ ಜ್ಞಾತ್ವಾ ನಿರ್ವೇದಂ ಪರಮಾಪ್ನುಯಾತ್ ॥ ೧೪೭ ॥
ನಿರ್ವೇದಾಚ್ಚ ವಿರಾಗಃ ಸ್ಯಾದ್ವಿರಾಗಾಜ್ಜ್ಞಾನ ಸಂಭವಃ ।
ಜ್ಞಾನೇನ ತಂ ಪರಂ ಜ್ಞಾತ್ವಾ ವಿಷ್ಣುಂ ಮುಕ್ತಿಮವಾಪ್ನುಯಾತ್ ॥೧೪೮॥
ನಾಹಮೇತಾದೃಶೇ ಲೋಕೇ ರಮೇಽಯಂ ಜನನಿ ಕ್ವಚಿತ್ ।
ರಾಜಹಂಸೋ ಯಥಾ ಶುದ್ಧಃ ಕಾಕಾಮೇಧ್ಯಪ್ರಹರ್ಷಕಃ ॥ ೧೪೯ ॥

---

ಮೂರ್ಖತನ, ದಾರಿದ್ರ್ಯ, ಉಚ್ಚ ನೀಚ ಭಾವ, ಮರಣ, ದೇಶಾಟನ, ಪರಸ್ಪರ ಜಯದಿಂದಲೂ, ಪರಸ್ಪರ ಅತಿಶಯದಿಂದಲೂ ದುಃಖ, ಸುಖಸಂಪತ್ತು ಗಳ ಅನಿತ್ಯತೆ, ಉನ್ನತಿಯಲ್ಲಿರುವವರ ಅಧಃಪತನ — ಇವೇ ಮುಂತಾದ ಅನೇಕ ಕ್ಲೇಶಗಳಿಂದ ಜನ್ಮವು ದುಃಖಮಯವಾಗಿರುವುದು.

೧೪೬. ಆದುದರಿಂದ ವಿವೇಕಿಯಾದವನು ನರಕವಾಸವನ್ನು ಮೊದಲು ಮಾಡಿ ಮನುಷ್ಯಜನ್ಮದವರೆಗೂ ಸಕಲವೂ ನಿಸ್ಸಾರವೆಂದು ತಿಳಿದು ತ್ಯಜಿಸ ಬೇಕು. ಭಾರವನ್ನು ಹೊರುವವನು ಭುಜದಿಂದ ಭುಜಕ್ಕೆ ಬದಲಾಯಿಸಿ ಕೊಂಡು ಹೇಗೆ ವಿಶ್ರಾಮವನ್ನು ಹೊಂದಿದಂತೆ ಕಾಣುವನೊ, ಹಾಗೆಯೇ ಲೋಕದಲ್ಲಿ ಪ್ರಾಣಿಜಾಲವೆಲ್ಲವೂ ಒಂದು ದುಃಖವನ್ನು ಮತ್ತೊಂದರಿಂದ ಕೊನೆ ಗಾಣುವುದು.

೧೪೭. ಇಂತು ಸಕಲ ಪ್ರಪಂಚವೂ ಪರಸ್ಪರಾತಿಶಯದಿಂದಲೂ, ದುಃಖ ದಿಂದಲೂ ತುಂಬಿದುದಾಗಿ ತಿಳಿದುಕೊಂಡು ಮನುಷ್ಯನು ತೀವ್ರವಾದ ವೈರಾಗ್ಯ ವನ್ನು ಹೊಂದಬೇಕು.

೧೪೮. ವೈರಾಗ್ಯದಿಂದ ಅಭಿಮಾನವೂ, ಅಭಿಮಾನದಿಂದ ಜ್ಞಾನವೂ ಉಂಟಾಗುವುವು. ಜ್ಞಾನದಿಂದ ಪರಾತ್ಪರನಾದ ಮಹಾವಿಷ್ಣುವನ್ನು ತಿಳಿದು ಕೊಂಡು ಮನುಷ್ಯನು ಮೋಕ್ಷವನ್ನು ಹೊಂದುವನು.

೧೪೯. ಎಲೌ ಜನನಿಯೆ! ನಾನು ಇಂತಹ ಲೋಕದಲ್ಲಿ ಸ್ವಲ್ಪವಾದರೂ ಮೆರೆಯಲಿಚ್ಛಿಸುವುದಿಲ್ಲ. ಪರಿಶುದ್ಧವಾದ ರಾಜಹಂಸವು ಎಂದಾದರೂ ಕಾಗೆಯು ಅಮೇಧ್ಯದಲ್ಲಿ ಸಂತೋಷಪಡಬಲ್ಲುದೆ?

**ಶೃಣು ಮಾತರ್ಯತ್ರ ಸಂಸ್ಥೋ ರಮೇಽಯಂ ನಿರುಪದ್ರವಃ ।**
**ಅವಿದ್ಯಾಯುನಮತ್ಯುಗ್ರಂ ನಾನಾಕರ್ಮಾತಿಶಾಖಿನಂ ॥ ೧೫೦ ॥**
**ಸಂಕಲ್ಪದಂಶಮಕರಂ ಶೋಕಹರ್ಷಹಿಮಾತಪಂ ।**
**ಮೋಹಾಂಧಕಾರತಿಮಿರಂ ಲೋಭವ್ಯಾಲಸರೀಸೃಪಂ ॥ ೧೫೧ ॥**
**ವಿಷಯಾನನ್ಯಥಾಧ್ವಾನಂ ಕಾಮಕ್ರೋಧವಿಮೋಕ್ಷಕಂ ।**
**ತದತೀತ್ಯ ಮಹಾದುರ್ಗಂ ಪ್ರವಿಷ್ಟೋಽಸ್ಮಿ ಮಹದ್ವನಂ ॥ ೧೫೨ ॥**
**ನ ತತ್ಪ್ರವಿಶ್ಯ ಶೋಚಂತಿ ನ ಪ್ರದುಷ್ಯಂತಿ ತದ್ವಿದಃ ॥ ೧೫೩ ॥**
**ನ ಚ ಬಿಭ್ಯತಿ ಕೇಷಾಂಚಿನ್ನಾನ್ಯ ಬಿಭ್ಯತಿ ಕೇಚನ ॥ ೧೫೪ ॥**
**ತಸ್ಮಿನ್ವನೇ ಸಪ್ತಮಹಾದ್ರುಮಾಸ್ತು**
**ಸಪ್ತೈವ ನದ್ಯಶ್ಚ ಫಲಾನಿ ಸಪ್ತ ।**
**ಸಪ್ತಾಶ್ರಮಾಃ ಸಪ್ತಸಮಾಧಯಶ್ಚ**
**ದೀಕ್ಷಾಶ್ಚ ಸಪ್ತೈತದರಣ್ಯರೂಪಂ ॥ ೧೫೫ ॥**
**ಪಂಚವರ್ಣಾನಿ ದಿವ್ಯಾನಿ ಚತುರ್ವರ್ಣಾನಿ ಕಾನಿಚಿತ್ ।**
**ತ್ರಿದ್ವಿವರ್ಣೈಕವರ್ಣಾನಿ ಪುಷ್ಪಾಣಿ ಚ ಫಲಾನಿ ಚ ॥ ೧೫೬ ॥**
**ಸೃಜಂತಃ ಪಾದಪಾಸ್ತತ್ರ ವ್ಯಾಪ್ಯ ತಿಷ್ಠಂತಿ ತದ್ವನಂ ॥ ೧೫೭ ॥**

---

೧೫೦–೧೫೪. ಮಾತೆಯೆ! ನಾನು ದುಃಖರಹಿತನಾಗಿ ಯಾವುದರಲ್ಲಿ ನೆಲಸಿ ಸುಖಿಸುತ್ತಿರುವೆನೆಂಬುದನ್ನು ತಿಳಿಸುವೆನು, ಕೇಳು. ಅವಿದ್ಯೆಯೆಂಬ ಭಯಂಕರವಾದ ದಾರಿಯಿಂದಲೂ, ಶುಭಾಶುಭ ಕರ್ಮಗಳೆಂಬ ಕೊಂಬೆಗಳಿಂದಲೂ, ಸಂಕಲ್ಪಗಳೆಂಬ ತೀಕ್ಷ್ಣದಂಷ್ಟ್ರಗಳುಳ್ಳ ಮೊಸಳೆಗಳಿಂದಲೂ, ಹರ್ಷ ಶೋಕಗಳೆಂಬ ಚಳಿ ಬಿಸಿಲುಗಳಿಂದಲೂ, ಮೋಹವೆಂಬ ಗಾಢಾಂಧಕಾರದಿಂದಲೂ, ಲೋಭಗಳೆಂಬ ಹಾವುಗಳಿಂದಲೂ, ವಿಷಯಾಭಿಲಾಷೆಯೆಂಬ ಒಂದೇ ಧ್ವನಿಯಿಂದಲೂ, ಕಾಮಕ್ರೋಧಗಳೆಂಬ ಮರಣೋಪಾಯಗಳಿಂದಲೂ ಅತ್ಯಂತ ದುರ್ಗಮವಾದ ಸಂಸಾರವೆಂಬ ಅರಣ್ಯವನ್ನು ದಾಟಿ ಮತ್ತೊಂದು ಮಹಾವನವನ್ನು ಪ್ರವೇಶಿಸಿರುವೆನು. ಅದನ್ನು ಪ್ರವೇಶಿಸಿದವರಿಗೆ ಶೋಕವೆಂಬುದಿಲ್ಲ. ಅದನ್ನು ತಿಳಿದವರು ದೋಷಭಾಗಿಗಳಾಗುವುದಿಲ್ಲ. ಆ ವನದ ನಿವಾಸಿಯು ಯಾರಿಗೂ ಭಯಪಡುವವನಲ್ಲ. ಆತನಿಂದ ಇತರರಿಗೂ ಭಯವೆಂಬುದಿಲ್ಲ.

೧೫೫. ಆ ವನದಲ್ಲಿ ಏಳು ಮಹಾ ವೃಕ್ಷಗಳೂ, ಏಳು ನದಿಗಳೂ, ಏಳು ಫಲಗಳೂ, ಏಳು ಆಶ್ರಮಗಳೂ, ಏಳು ಸಮಾಧಿಸ್ಥಾನಗಳೂ, ಏಳು ದೀಕ್ಷೆಗಳೂ ಇರುವುವು. ಇದೇ ಆ ವಿದ್ಯಾವನವೆಂಬುದರ ಸ್ವರೂಪವು.

೧೫೬–೧೫೭. ಐದು ಬಣ್ಣಗಳು, ನಾಲ್ಕು ಬಣ್ಣಗಳು, ಮೂರು ಎರಡು ಮತ್ತು ಒಂದು ಬಣ್ಣಗಳುಳ್ಳ ಪುಷ್ಪಗಳನ್ನೂ ಫಲಗಳನ್ನೂ ಕೊಡುವ ವೃಕ್ಷಗಳು ಆ ವನಪ್ರದೇಶವನ್ನೆಲ್ಲ ವ್ಯಾಪಿಸಿರುವುವು.

ಸಪ್ತಸ್ತ್ರಿಯಸ್ತತ್ರವಸಂತಿ ಸತ್ಯ
ಭಾನುಮತೋ ಭವಂತಿ ಸ್ತ್ವವಾಙ್ಮುಖ್ಯೋ ।
ಊರ್ಧ್ವಂ ರಸಾನಾದದತೇ ಪ್ರಜಾಭ್ಯಃ
ಸರ್ವಾಶ್ಚ ತಾಸ್ತತ್ತ್ವತಃ ಕೋಽಪಿ ವೇದ ॥ ೧೫೮ ॥
ಸಪ್ತೈವ ಗಿರಯಶ್ಚಾತ್ರ ಧೃತಂ ಯೈರ್ಭುವನತ್ರಯಂ ।
ನದ್ಯಶ್ಚ ಸರಿತಃ ಸಪ್ತ ಬ್ರಹ್ಮವಾರಿವಹಾಃ ಸದಾ ॥ ೧೫೯ ॥
ತೇಜಶ್ಚಾಭಯದಾನತ್ವಮುದ್ರೋಹಃ ಕೌಶಲಂ ತಥಾ ।
ಅಚಾಪಲ್ಯಮಥಾಕ್ರೋಧಃ ಪ್ರಿಯವಾದಶ್ಚ ಸಪ್ತಮಃ ॥ ೧೬೦ ॥
ಇತ್ಯೇತೇ ಗಿರಯೋ ಜ್ಞೇಯಾಸ್ತಸ್ಮಿನ್ವಿದ್ಯಾವನೇ ಸ್ಥಿತಾಃ ।
ದೃಢನಿಶ್ಚಯಸ್ತಥಾ ಭಾಸಾ ಸಮತಾ ನಿಗ್ರಹೋ ಗುಣಃ ॥ ೧೬೧ ॥
ನಿರ್ಮಮತ್ವಂ ತಪಶ್ಚಾತ್ರ ಸಂತೋಷಃ ಸಪ್ತಮೋ ಹ್ರದಃ ।
ಭಗವದ್ಗುಣವಿಜ್ಞಾನಾದ್ಭಕ್ತಿಸ್ಸ್ಯಾತ್ಪ್ರಥಮಾ ನದೀ ॥ ೧೬೨ ॥
ಪುಷ್ಪಾದಿ ಪೂಜಾ ದ್ವಿತೀಯಾ ತೃತೀಯಾ ಚ ಪ್ರದಕ್ಷಿಣಾ ।
ಚತುರ್ಥೀ ಸ್ತುತಿವಾಗ್ರೂಪಾ ಪಂಚಮೀ ಈಶ್ವರಾರ್ಪಣಾ ॥ ೧೬೩ ॥

---

೧೫೮. ಆ ವನದಲ್ಲಿ ಏಳು ಜನ ಸ್ತ್ರೀಯರು ವಾಸಮಾಡುತ್ತಿರುವರು. ಅವರೆಲ್ಲರೂ ತೇಜೋವಂತರಾಗಿಯೂ, ಬಾಗಿದ ಮುಖವುಳ್ಳವರೂ ಆಗಿರುವರು. ಸಕಲರಿಂದಲೂ ರಸಗಳನ್ನು ಮೇಲಕ್ಕೆ ಸೆಳೆದುಕೊಳ್ಳುವರು. ಅವರೆಲ್ಲರನ್ನೂ ವಾಸ್ತವವಾಗಿ ತಿಳಿದಿರುವವನು ದುರ್ಲಭನೇ ಸರಿ.

೧೫೯. ಆ ವನದಲ್ಲಿ ಮೂರು ಲೋಕಗಳನ್ನೆತ್ತಿ ಹಿಡಿದಿರುವಂತಹ ಏಳು ಪರ್ವತಗಳಿರುವುವು. ಬ್ರಹ್ಮವಸ್ತುವೆಂಬ ನೀರಿನಿಂದ ತುಂಬಿ ಹರಿಯುತ್ತಿರುವ ಏಳು ನದಿಗಳೂ ಅಲ್ಲಿರುವುವು.

೧೬೦–೧೬೧. ತೇಜಸ್ಸು, ಅಭಯಪ್ರದಾನ, ಋಜುತ್ವ, ಕೌಶಲ, ಸ್ಥಿರ ಚಿತ್ತತೆ, ನಿಷ್ಕೋಪ, ಪ್ರಿಯಭಾಷಣ, ಇವುಗಳೇ ಆ ವಿದ್ಯಾವನದಲ್ಲಿ ನೆಲಸಿರುವ ಏಳು ಪರ್ವತಗಳೆಂದು ತಿಳಿಯಬೇಕು. ದೃಢನಿಶ್ಚಯ, ಜ್ಞಾನ, ಸಮತೆ, ಶಮವೆಂಬ ಗುಣ, ಮಮತಾತ್ಯಾಗ, ತಪಸ್ಸು ಮತ್ತು ಸಂತೋಷಗಳೆಂಬುವೇ ಏಳು ಉತ್ತಮ ಸರೋವರಗಳು.

೧೬೨–೧೬೪. ಭಗವಂತನ ಸದ್ಗುಣಗಳ ಜ್ಞಾನದಿಂದ ಉಂಟಾದ ಭಕ್ತಿಯೆಂಬುದೇ ಮೊದಲನೆಯ ನದಿಯು. ಪುಷ್ಪಗಳೇ ಮೊದಲಾದ ದ್ರವ್ಯಗಳಿಂದ ಮಾಡುವ ಪೂಜೆಯು ಎರಡನೆಯದು. ಪ್ರದಕ್ಷಿಣೆಯು ಮೂರನೆಯದು. ಸ್ತೋತ್ರವನ್ನು ಮಾಡುವ ವಾಣಿಯೇ ನಾಲ್ಕನೆಯದು. ಸರ್ವಸ್ವವನ್ನೂ ಭಗವದರ್ಪಣಮಾಡುವುದೇ ಐದನೆಯದು. ಬ್ರಹ್ಮಾತ್ಮೈಕ್ಯವೇ ಆರನೆಯದು.

ಷಷ್ಠೀ ಬ್ರಹ್ಮೈಕ್ಯತಾ ಪ್ರೋಕ್ತಾ ಸಪ್ತಮೀ ಸಿದ್ಧಿರೇವಚ ।
ಸಪ್ತನದ್ಯೋಽತ್ರ ಕಥಿತಾ ಬ್ರಹ್ಮಣಾ ಪರಮೇಷ್ಠಿನಾ ॥ ೧೬೪ ॥
ಬ್ರಹ್ಮಾ ಧರ್ಮೋ ಯಮಶ್ಚಾಗ್ನಿರಿಂದ್ರೋ ವರುಣ ಏವ ಚ ।
ಧನದಶ್ಚ ಧ್ರುವಾದೀನಾಂ ಸಪ್ತಕಾನರ್ಚಯಂತ್ಯಮೀ ॥ ೧೬೫ ॥
ನದೀನಾಂ ಸಂಗಮಸ್ತತ್ರ ವೈಕುಂಠಸಮುಪಹ್ವರೇ ।
ಆತ್ಮತೃಪ್ತಾ ಯತೋ ಯಾಂತಿ ಶಾಂತಾ ದಾಂತಾಃ ಪರಾತ್ಪರಂ ॥ ೧೬೬ ॥
ಕೇಚಿದ್ದ್ರುಮಾಃ ಸ್ತ್ರಿಯಃ ಕೇಚಿತ್ಕೇಚಿತ್ತತ್ತ್ವವಿದೋಽಪರೇ ।
ಸರಿತಃ ಕೇಚಿದಾಹುಃ ಸ್ಮ ಸಪ್ತೈವ ಜ್ಞಾನವಿತ್ತಮಾಃ ॥ ೧೬೭ ॥
ಅನಪೇತವ್ರತಕಾಮೋಽತ್ರ ಬ್ರಹ್ಮಚರ್ಯಂ ಚರಾಮಿ ಚ ॥ ೧೬೮ ॥
ಬ್ರಹ್ಮೈವ ಸಮಿಧಸ್ತತ್ರ ಬ್ರಹ್ಮಾಗ್ನಿರ್ಬ್ರಹ್ಮ ಸಂಸ್ತರಃ ।
ಆಪೋ ಬ್ರಹ್ಮ ಗುರುರ್ಬ್ರಹ್ಮ ಬ್ರಹ್ಮಚರ್ಯಮಿದಂ ಮಮ ॥ ೧೬೯ ॥
ಏತದೇವೇದೃಶಂ ಸೂಕ್ಷ್ಮಂ ಬ್ರಹ್ಮಚರ್ಯಂ ವಿದುರ್ಬುಧಾಃ ।
ಗುರುಂ ಚ ಶೃಣು ಮೇ ಮಾತರ್ಯೋ ಮೇ ವಿದ್ಯಾಪ್ರದೋಽಭವತ್॥೧೭೦॥

---

ಮೋಕ್ಷವೇ ಏಳನೆಯದು. ಇಂತು ಪರಮೇಷ್ಠಿಯಾದ ಬ್ರಹ್ಮನಿಂದ ಏಳು ನದಿಗಳು ಹೇಳಲ್ಪಟ್ಟಿರುವುವು.

೧೬೫–೧೬೬. ಬ್ರಹ್ಮ, ಯಮ, ಧರ್ಮಪುರುಷ, ಅಗ್ನಿ, ಇಂದ್ರ, ವರುಣ, ಕುಬೇರ, ಇವರು ಧ್ರುವನೇ ಮೊದಲಾದ ಏಳು ಮಂದಿ ಭಕ್ತರನ್ನು ಪೂಜಿಸುವರು. ಮೇಲೆ ಹೇಳಿದ ಏಳು ನದಿಗಳ ಸಂಗಮಸ್ಥಾನವು ವೈಕುಂಠದ ಅತ್ಯಂತ ಸಮೀಪದಲ್ಲಿರುವುದು. ಅಲ್ಲಿಂದಲೇ ಅಂತರಿಂದ್ರಿಯ ಬಾಹ್ಯೇಂದ್ರಿಯಗಳನ್ನು ನಿಗ್ರಹಿಸಿ ಆತ್ಮಜ್ಞಾನದಿಂದಲೇ ತೃಪ್ತರಾದ ಭಕ್ತರು ಪರಾತ್ಪರನಾದ ಮಹಾವಿಷ್ಣುವನ್ನು ಪಡೆಯುವರು.

೧೬೭. ಜ್ಞಾನಿಗಳಲ್ಲಿ ಉತ್ತಮರಾದವರಲ್ಲಿ ಕೆಲವರು ಏಳು ವೃಕ್ಷಗಳೆಂದೂ, ಕೆಲವರು ಏಳು ಮಂದಿ ಸ್ತ್ರೀಯರೆಂದೂ, ಹಲವರು ಏಳು ತತ್ತ್ವಜ್ಞರೆಂದೂ, ಮತ್ತೆ ಕೆಲವರು ಏಳು ನದಿಗಳೆಂದೂ ವಿದ್ಯಾವನದಲ್ಲಿರುವವರನ್ನು ವಿವರಿಸುವರು.

೧೬೮–೧೭೦. ನಿರಂತರವಾದ ವ್ರತವನ್ನಿಚ್ಛಿಸಿ ನಾನು ಇಲ್ಲಿ ಬ್ರಹ್ಮಚರ್ಯವನ್ನು ನಡೆಸುತ್ತಿರುವೆನು. ಬ್ರಹ್ಮವೇ ಸಮಿತ್ತುಗಳು; ಬ್ರಹ್ಮವೇ ಅಗ್ನಿಯು; ಬ್ರಹ್ಮವೇ ದರ್ಭಾಸನವು; ಬ್ರಹ್ಮವೇ ಉದಕವು; ಬ್ರಹ್ಮವೇ ಆಚಾರ್ಯನು; ಇದೇ ನನ್ನ ಬ್ರಹ್ಮಚರ್ಯದ ಕ್ರಮವಾಗಿರುವುದು. ಇಂತಹುದನ್ನೇ ಸೂಕ್ಷ್ಮವಾದ ಬ್ರಹ್ಮಚರ್ಯವೆಂದು ಬಲ್ಲವರು ಹೇಳುವರು. ಇನ್ನು ನನಗೆ ವಿದ್ಯೆಯನ್ನು ಕಲಿಸಿದ ಗುರುವನ್ನು ತಿಳಿಸುವೆನು, ಕೇಳು.

ಏಕಃ ಶೌಸ್ತಾ ನ ದ್ವಿತೀಯೋಽಸ್ತಿ ಶಾಸ್ತಾ
ಹೃದ್ಯೇವ ತಿಷ್ಠನ್ಪುರುಷಂ ಪ್ರಶಾಸ್ತಿ ।
ತೇನಾಭಿಯುಕ್ತಂ ಪ್ರಣವಾದಿವೋದಕಂ
ಯಥಾ ನಿಯುಕ್ತೋಽಸ್ಮಿ ತಥಾ ಚರಾಮಿ ॥ ೧೭೧ ॥
ಯಂ ಚಾವಮನ್ಯೈವ ಗುರುಂ ಮುಕುಂದಂ
ಪರಾಭೂತಾ ದಾನವಾಃ ಸರ್ವ ಏವ ।
ಏಕೋ ಬಂಧುರ್ನಾಸ್ತಿ ತತೋ ದ್ವಿತೀಯೋ
ಹೃದಿಸ್ಥಿತಂ ತಮಹಮನುಬ್ರವೀಮಿ ॥ ೧೭೨ ॥
ಏಕೋ ಗುರುರ್ನಾಸ್ತಿ ತಥಾ ದ್ವಿತೀಯೋ
ಹೃದಿ ಸ್ಥಿತಂ ತಮಹಂ ನು ಬ್ರವೀಮಿ ।
ತೇನಾನುಶಿಷ್ಟಾ ಬಾಂಧವಾ ಬಂಧುಮಂತಃ
ಸಪ್ತರ್ಷಯಃ ಸಪ್ತ ದಿವಿ ಪ್ರಭಾಂತಿ ॥ ೧೭೩ ॥
ಬ್ರಹ್ಮಚರ್ಯಂ ಚ ಸಂಸೇವ್ಯ ಗಾರ್ಹಸ್ಥ್ಯಂ ಶ್ರುಣು ಯಾದೃಶಂ ।
ಪತ್ನೀ ಪ್ರಕೃತಿರೂಪಾಮೇ ತಚ್ಚಿತ್ತೋ ನಾಸ್ಮಿ ಕರ್ಹಿಚಿತ್ ॥ ೧೭೪ ॥

---

೧೭೧–೧೭೩. ಲೋಕಕ್ಕೆಲ್ಲ ಒಬ್ಬನೇ ನಿಯಾಮಕನಿರುವನು. ಎರಡನೆಯವನಿಲ್ಲ. ಆತನು ಪ್ರತಿ ಮನುಷ್ಯನ ಹೃದಯದಲ್ಲಿಯೂ ನಿಂತು ಶಾಸನ ಮಾಡುವನು. ಪ್ರಣವದಿಂದ ಅಭಿಮಂತ್ರಿತವಾದ ಉದಕದಂತೆ ಆತನಿಂದ ನಿಯಂತ್ರಿತನಾಗಿ ಹೇಗೆ ಪ್ರೇರಿತನಾಗುವೆನೊ ಹಾಗೆ ನಡೆದುಕೊಳ್ಳುತ್ತೇನೆ. ಲೋಕೈಕನಾಥನಾದ ಪರಮೇಶ್ವರನು ಸಮಸ್ತ ಜೀವಿಗಳ ಹೃದಯಕಮಲದಲ್ಲಿ ನೆಲಸಿ ಅವರವರ ಕರ್ಮಾನುಗುಣವಾಗಿ ಬುದ್ಧಿಯನ್ನಿತ್ತು ಪ್ರೇರಿಸಿ ಅವರಿಂದ ಸದಸತ್ಕಾರ್ಯಗಳನ್ನಾಗಗೊಳಿಸಿ ಅವುಗಳಿಗನುಸಾರವಾದ ಫಲಗಳನ್ನೀಯುವನು. ಸಕಲರಿಗೂ ಒಬ್ಬನೇ ಗುರುವು. ಬೇರೊಬ್ಬನಿಲ್ಲ. ಆತನು ಎಲ್ಲರ ಹೃದಯಗಳಲ್ಲಿರುವನೆಂದು ಹೇಳುವೆನು. ಆತನೇ ಲೋಕಗುರುವಾದ ಮುಕುಂದನು. ಆ ಮುಕುಂದನನ್ನು ಅವಮಾನಮಾಡಿಯೇ ಸಕಲ ರಾಕ್ಷಸರೂ ದೇವತೆಗಳಿಂದ ಪರಾಜಯವನ್ನು ಹೊಂದಿದರು. ಜೀವನಿಗೆ ಒಬ್ಬನೇ ಬಂಧುವು. ಎರಡನೆಯವನಿಲ್ಲ. ಆತನೇ ಹೃದಯನಿವಾಸಿಯಾದ ನಾರಾಯಣನೆಂದು ಹೇಳುವೆನು. ಆತನ ಆಜ್ಞಾನುವರ್ತಿಗಳಾಗಿಯೇ ಬಾಂಧವರೂ, ಇಷ್ಟಸಹಿತರೂ ಆದ ಸಪ್ತರ್ಷಿಗಳು ಆಕಾಶದಲ್ಲಿ ಪ್ರಕಾಶಿಸುತ್ತಿರುವರು.

೧೭೪. ಬ್ರಹ್ಮಚರ್ಯವನ್ನೇ ಮನುಷ್ಯನು ಅನುಸರಿಸಬೇಕು. ಅದೂ ಒಂದು ವಿಧವಾದ ಗಾರ್ಹಸ್ಥ್ಯವೇ. ಅದು ಹೇಗೆಂಬುದನ್ನು ತಿಳಿಸುವೆನು. ನನಗೆ ಪ್ರಕೃತಿರೂಪಳಾದ ಒಬ್ಬ ಪತ್ನಿಯಿರುವಳು. ಪುರುಷರೂಪನಾದ ನಾನು ಆಕೆಯಲ್ಲಿ ಯಾವಾಗಲೂ ಮನಸ್ಸನ್ನು ಮಾಡುವುದಿಲ್ಲ.

ಮಚ್ಚಿತ್ತಾ ಸಾ ಸದಾ ಮಾತರ್ಮಮ ಸರ್ವಾರ್ಥಸಾಧನೀ ।
ಘ್ರಾಣಂ ಜಿಹ್ವಾಚ ಚಕ್ಷುಶ್ಚ ತ್ವಕ್ಚ ಶ್ರೋತ್ರಂ ಚ ಪಂಚಮಂ ।
ಮನೋ ಬುದ್ಧಿಶ್ಚ ಸಪ್ತೈತೇ ದೀಪ್ಯಂತೇ ಪಾವಕಾ ಮಮ ॥ ೧೭೫ ॥
ಗಂಧೋ ರಸಶ್ಚ ರೂಪಂ ಚ ಶಬ್ದಃ ಸ್ಪರ್ಶಶ್ಚ ಪಂಚಮಂ ॥ ೧೭೬ ॥
ಮಂತವ್ಯಮಥ ಬೋದ್ಧವ್ಯಂ ಸಪ್ತೈತಾಃ ಸಮಿಧೋ ಮಮ ।
ಹುತಂ ನಾರಾಯಣಧ್ಯಾನಾದ್ಭುಙ್ಕ್ತೇ ನಾರಾಯಣಃ ಸ್ವಯಂ ॥ ೧೭೭ ॥
ಏವಂವಿಧೇನ ಯಜ್ಞೇನ ಯಜಾಮ್ಯಸ್ಮಿ ತಮೀಶ್ವರಂ ॥ ೧೭೮ ॥

ಅಕಾಮಯಾನಸ್ಯ ಚ ಸರ್ವಕಾಮೋ
ಭವೇದ್ದ್ವಿಷಣ್ಣಸ್ಯ ಚ ಸರ್ವದೋಷಃ ।
ನ ಮೇ ಸ್ವಭಾವೇಷು ಭವಂತಿ ಲೇಪಾಃ
ತೋಯಸ್ಯ ಬಿಂದೋರಿವ ಪುಷ್ಕರೇಷು ॥ ೧೭೯ ॥
ನಿತ್ಯಸ್ಯ ಮೇ ನೈವ ಭವಂತ್ಯನಿತ್ಯಾ
ನಿರೀಕ್ಷಮಾಣಸ್ಯ ಬಹುಸ್ವಭಾವಾತ್ ।
ನ ಸಜ್ಜತೇ ಕರ್ಮಸು ಭೋಗಜಾಲಂ
ದಿವೀವ ಸೂರ್ಯಸ್ಯ ಮಯೂಖಜಾಲಂ ॥ ೧೮೦ ॥

---

೧೭೫. ಎಲೌ ಮಾತೆಯೆ! ಆದರೆ ಆಕೆಯು ಮಾತ್ರ ಯಾವಾಗಲೂ ನನ್ನಲ್ಲಿಯೇ ಮನಸ್ಸಿಟ್ಟವಳಾಗಿ ನನ್ನ ಸಕಲ ಪುರುಷಾರ್ಥಗಳಿಗೂ ಸಹಾಯಕಳಾಗಿರುವಳು. ನನ್ನ ಮನೆಯಲ್ಲಿ ಘ್ರಾಣ, ಜಿಹ್ವೆ, ಚಕ್ಷುಸ್ಸುಗಳು, ಚರ್ಮ, ಶ್ರೋತ್ರ, ಮನಸ್ಸು, ಬುದ್ಧಿಗಳೆಂಬ ಏಳು ಗೃಹಾಗ್ನಿಗಳು ಯಾವಾಗಲೂ ಜ್ವಲಿಸುತ್ತಿರುವುವು.

೧೭೬–೧೭೯. ಗಂಧ, ರಸ, ರೂಪ, ಶಬ್ದ, ಸ್ಪರ್ಶ, ವಿಚಾರಿತ ವಿಷಯ ಮತ್ತು ನಿಶ್ಚಿತ ವಿಷಯಗಳೆಂಬ ಏಳೂ ಈ ಅಗ್ನಿಗಳಿಗೆ ಕೊಡುವ ಆಹುತಿಗಳು. ನಾರಾಯಣ ಧ್ಯಾನವೆಂಬ ಮಂತ್ರದ ಸಹಿತವಾಗಿ ಕೊಟ್ಟ ಆಹುತಿಯನ್ನು ನಾರಾಯಣನು ತಾನೇ ಸ್ವೀಕರಿಸುವನು. ಈ ವಿಧವಾದ ಯಜ್ಞದಿಂದ ನಾನು ಲೋಕೇಶ್ವರನಾದ ಶ್ರೀ ಮಹಾವಿಷ್ಣುವನ್ನು ಪೂಜಿಸುವೆನು. ಇಚ್ಛಾರಹಿತನಾದ ನನಗೆ ಸಕಲ ಇಷ್ಟಾರ್ಥಗಳೂ ದೊರೆತಿರುವುವು. ವಿಷಯಾಸಕ್ತನಾದವನಿಗೆ ಮಾತ್ರ ಸಕಲ ದೋಷಗಳೂ ಉಂಟಾಗುವುವು. ಹಲವು ಪಾತ್ರೆಗಳಲ್ಲಿರುವ ಜಲದ ಬಿಂದುಗಳಲ್ಲಿ ಹೇಗೆ ವ್ಯತ್ಯಾಸವಿರುವುದಿಲ್ಲವೊ, ಹಾಗೆಯೇ ಹಲವು ದೇಹಗಳ ಅಭಿಮಾನದಿಂದಲೂ ನನ್ನ ಸಹಜ ಗುಣಗಳಲ್ಲಿ ಲೋಪವುಂಟಾಗುವುದಿಲ್ಲ.

೧೮೦. ಶಾಶ್ವತನಾಗಿ ಪ್ರಕೃತಿಯ ಲೀಲೆಗಳನ್ನು ದೂರದಿಂದ ನೋಡುತ್ತಿರುವ ನನಗೆ ಅನೇಕ ಸ್ವಭಾವಗಳಿಂದ ಕೂಡಿದ ಅನಿತ್ಯ ರೂಪಗಳಲ್ಲಿ ಅಭಿಮಾನ

**ಏವಂವಿಧೇನ ಪುತ್ರೇಣ ಮಾ ಮಾತರ್ದುಃಖಿನೀ ಭವ ।**
**ತತ್ಪದಂ ತ್ವಾಂ ಚ ನೇಷ್ಯಾಮಿ ನ ಯತ್ಕ್ರತುಶತೈರಪಿ ॥ ೧೮೧ ॥**
**ಇತಿ ಪುತ್ರವಚಃ ಶ್ರುತ್ವಾ ವಿಸ್ಮಿತಾ ಇತರಾಭವತ್ ।**
**ಚಿಂತಯಾಮಾಸ ಯದ್ಯೇವಂ ವಿದ್ವಾನ್ಮಮ ಸುತೋ ಧ್ರುವಂ ।**
**ಲೋಕೇಷು ಖ್ಯಾತಿಮಾಯಾತಿ ತತೋ ಮೇ ಸ್ಯಾದ್ಯಶಃ ಪರಂ ॥ ೧೮೨ ॥**
**ಇತ್ಯಾದಿ ಚಿಂತಯಂತ್ಯಾಂ ಚ ರಜನ್ಯಾಂ ಭಗವಾನ್ಹರಿಃ ।**
**ಪ್ರಹೃಷ್ಟಸ್ತಸ್ಯ ತೈರ್ವಾಕ್ಯೈರ್ವಿಸ್ಮಿತಃ ಪ್ರಾದುರಾಸ ಹ ॥ ೧೮೩ ॥**
**ಮೂರ್ತೇಃ ಸ್ವಯಂ ವಿನಿಷ್ಕ್ರಮ್ಯ ಶಂಖಚಕ್ರಗದಾಧರಃ ।**
**ಜಗದುದ್ಭಾಸಯನ್ಭಾಸಾ ಕೋಟಿಸೂರ್ಯಸಮಪ್ರಭಃ ॥ ೧೮೪ ॥**
**ತತೋನಿಪತ್ಯ ಧರಣೀಂ ಹೃಷ್ಟರೋಮಾಶ್ರುಗದ್ಗದಃ ॥ ೧೮೫ ॥**

---

ವುಂಟಾಗುವುದಿಲ್ಲ. ಆಕಾಶದಲ್ಲಿ ಹರಿಯುವ ಸೂರ್ಯಕಿರಣಗಳ ಸಮೂಹವು ಆಕಾಶವನ್ನು ಹೇಗೆ ಗುಣವಂತವನ್ನಾಗಿ ಮಾಡಲಾರದೊ, ಹಾಗೆಯೇ ಕರ್ಮ ಫಲರೂಪವಾಗಿ ಪ್ರಾಪ್ತವಾಗುವ ಸುಖದುಃಖಭೋಗಗಳೂ ಕರ್ಮಗಳಲ್ಲಿ ಸಜ್ಜಿತ ವಾಗಲಾರವು.

೧೮೧. ಆದುದರಿಂದ ಎಲೌ ಮಾತೆಯೆ! ಇಂತಹ ಮಗನಾದ ನನ್ನ ವಿಷಯದಲ್ಲಿ ನೀನು ದುಃಖಗೊಳ್ಳಬೇಡ. ಯಾವುದು ನೂರು ಯಜ್ಞಗಳಿಂದಲೂ ಪಡೆಯಲಸಾಧ್ಯವಾದುದೊ, ಅಂತಹ ಶಾಶ್ವತ ಸ್ಥಾನಕ್ಕೆ ನಿನ್ನನ್ನೂ ಕರೆದು ಕೊಂಡು ಹೋಗುತ್ತೇನೆ. ಚಿಂತಿಸದಿರು.''

೧೮೨. ಇಂತೆಂದ ಐತರೇಯನ ವಚನವನ್ನು ಕೇಳಿ ಇತರಾದೇವಿಯು ಅತ್ಯಂತ ವಿಸ್ಮಯಗೊಂಡಳು. ''ನನ್ನ ಮಗನು ನಿಜವಾಗಿಯೂ ಇಂತಹ ಜ್ಞಾನಿಯಾಗಿದ್ದರೆ, ಲೋಕದಲ್ಲಿ ಪ್ರಖ್ಯಾತನಾಗುವುದರಲ್ಲಿ ಸಂಶಯವಿಲ್ಲ. ಆದರಿಂದ ನನಗೂ ಮಹತ್ತರವಾದ ಯಶಸ್ಸು ಲಭಿಸುವುದು.''

೧೮೩. ಇಂತು ಆಕೆಯು ಯೋಚಿಸುತ್ತಿರುವಂತೆಯೇ ಅದೇ ರಾತ್ರಿ ಯಲ್ಲಿಯೇ ಮಹಾವಿಷ್ಣುವು ಐತರೇಯನ ವಾಕ್ಯಗಳಿಂದ ವಿಸ್ಮಯಗೊಂಡು ಆತನ ಜ್ಞಾನಕ್ಕೆ ಸಂತೋಷಪಟ್ಟು ಅವನಿಗೆ ಪ್ರತ್ಯಕ್ಷನಾದನು.

೧೮೪. ವಿಗ್ರಹದಿಂದ ಹೊರಕ್ಕೆ ಬಂದು ಶಂಖ, ಚಕ್ರ, ಗದೆಗಳನ್ನು ಧರಿಸಿ ದವನಾಗಿ ತೇಜಸ್ಸಿನಿಂದ ಲೋಕವೆಲ್ಲವನ್ನೂ ಬೆಳಗಿಸುತ್ತ ಕೋಟಿಸೂರ್ಯರು ಏಕಕಾಲದಲ್ಲಿ ಉದಯಿಸಿದಂತೆ ಕಾಣುತ್ತಿದ್ದನು.

೧೮೫–೧೮೬. ಆಗ ಐತರೇಯನು ಭಕ್ತ್ಯುದ್ರೇಕದಿಂದ ಭೂಮಿಯಲ್ಲಿ ಹೊರಳುವವನಾಗಿ ಹರ್ಷದಿಂದ ಮೈನವಿರೇಳುತ್ತಿರಲು, ಕಣ್ಣುಗಳಲ್ಲಿ ಆನಂದ ಬಾಷ್ಪಗಳನ್ನು ಸುರಿಸುತ್ತ, ಗದ್ಗದದಿಂದ ಕೂಡಿದ ಧ್ವನಿಯುಳ್ಳವನಾಗಿ ತಲೆಯಲ್ಲಿ

**ಮೂರ್ಧ್ನಿ ಬದ್ಧ್ವಾಂಜಲಿಂ ಧೀಮಾನ್ನೈತರೇಯೋಽಥ ತುಷ್ಟುವೇ ॥೧೮೬॥**
**ನಮಸ್ತುಭ್ಯಂ ಭಗವತೇ ವಾಸುದೇವಾಯ ಧೀಮಹಿ ।**
**ಪ್ರದ್ಯುಮ್ನಾಯಾನಿರುದ್ಧಾಯ ನಮಃ ಸಂಕರ್ಷಣಾಯ ಚ ॥ ೧೮೭ ॥**
**ನಮೋ ವಿಜ್ಞಾನಮಾತ್ರಾಯ ಪರಮಾನಂದಮೂರ್ತಯೇ ।**
**ಆತ್ಮಾರಾಮಾಯ ಶಾಂತಾಯ ನಿವೃತ್ತದ್ವೈತದೃಷ್ಟಯೇ। ॥ ೧೮೮ ॥**
**ಆತ್ಮಾನಂದಾನುಭೂತ್ಯೈವ ಸಮ್ಯಕ್ತ್ಯಕ್ತೋರ್ಮಯೇ ನಮಃ ।**
**ಹೃಷೀಕೇಶಾಯ ಮಹತೇ ನಮಸ್ತೇಽನಂತಶಕ್ತಯೇ ॥ ೧೮೯ ॥**
**ವಚಸ್ಯುಪರತೇ ಪ್ರಾಪ್ಯೋ ಯ ಏಕೋ ಮನಸಾ ಸಹ ।**
**ಅನಾಮರೂಪಚಿನ್ಮಾತ್ರಃ ಸೋವ್ಯಾನ್ನಃ ಸದಸತ್ಪರಃ ॥ ೧೯೦ ॥**
**ಯಸ್ಮಿನ್ನಿದಂ ಯತಶ್ಚೇದಂ ತಿಷ್ಠತ್ಯಪ್ಯೇತಿ ಜಾಯತೇ ।**
**ಮೃಣ್ಮಯೇಷ್ವಿವ ಮೃಜ್ಜಾತಿಸ್ತಸ್ಮೈ ತೇ ಬ್ರಹ್ಮಣೇ ನಮಃ ॥ ೧೯೧ ॥**

---

ಅಂಜಲಿಬಂಧವನ್ನು ಮಾಡಿಕೊಂಡು ಬುದ್ಧಿಪೂರ್ವಕವಾಗಿ ಆ ಭಗವಂತನನ್ನು ಅನನ್ಯಭಾವದಿಂದ ಸ್ತೋತ್ರಮಾಡತೊಡಗಿದನು.

೧೮೭. "ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ ಎಂಬ ರೂಪಗಳನ್ನು ಹೊಂದಿರುವ ಷಡ್ಗುಣೈಶ್ವರ್ಯಭರಿತನಾದ ಓ ಜಗದೀಶ್ವರನೇ! ನಿನಗೆ ನಮಸ್ಕಾರವು.

೧೮೮. ಕೇವಲ ಚಿತ್ಸ್ವರೂಪನೂ, ನಿರತಿಶಯಾನಂದಮೂರ್ತಿಯೂ, ಸ್ವಾತ್ಮಾರಾಮನೂ, ಶಾಂತನೂ, ದ್ವೈತದೃಷ್ಟಿಯಿಲ್ಲದವನೂ ಆದ ನಿನಗೆ ನಮಸ್ಕಾರವು.

೧೮೯. ಆತ್ಮಾನಂದದ ಅನುಭವದಿಂದಲೇ ಶೋಕಮೋಹಾದಿ ಷಡೂರ್ಮಿಗಳನ್ನು ಜಯಿಸಿದವನಾದ ನಿನಗೆ ನಮಿಸುವೆನು. ಮಹಾಪುರುಷನೂ, ಇಂದ್ರಿಯಾಧ್ಯಕ್ಷನೂ, ಅಚಿಂತ್ಯ ಪರಾಕ್ರಮನೂ ಆದ ನಿನಗೆ ನಮಸ್ಕಾರವು.

೧೯೦. ಮನಸ್ಸಿನಿಂದ ಕೂಡಿದ ಸಕಲವಾಗಿಂದ್ರಿಯ ವ್ಯಾಪಾರವೂ ಉಪಶಮನವನ್ನು ಹೊಂದಲಾಗಿ ಯಾವನೊಬ್ಬನೇ ನಾಮರೂಪರಹಿತನೂ, ಚಿನ್ಮಾತ್ರನೂ, ಸದಸದ್ವಿಲಕ್ಷಣನೂ ಆಗಿರುವನೊ, ಆತನೇ ನಮ್ಮನ್ನು ಕಾಪಾಡಲಿ.

೧೯೧. ಯಾವನಲ್ಲಿ ಈ ಪ್ರಪಂಚವೆಲ್ಲವೂ ನೆಲಸಿ ಲಯವಾಗುವುದೊ, ಯಾವನಿಂದ ಉದ್ಭವಿಸುವುದೊ, ಮೃಣ್ಮಯಗಳಾದ ಘಟ, ಶರಾವಾದಿಗಳಲ್ಲಿ ಉಪಾದಾನ ಕಾರಣವಾಗಿ ಕಾಣುತ್ತಿರುವಂತಹ ಮಣ್ಣಿನಂತೆ ಯಾವನು ಸಕಲ ಚರಾಚರಗಳಲ್ಲಿಯೂ ಅಭಿವ್ಯಕ್ತನಾಗಿರುವನೊ, ಅಂತಹ ಬ್ರಹ್ಮವಸ್ತುವಾದ ನಿನಗೆ ನಮಸ್ಕಾರವು.

ಯಂ ನ ಸ್ಪೃಶಂತಿ ನ ವಿದುರ್ಮನೋಬುದ್ಧೀಂದ್ರಿಯಾಸವಃ ।
ಅಂತರ್ಬಹಿಶ್ಚ ವಿತತಂ ವ್ಯೋಮವತ್ತ್ವಾನತೋಽಸ್ಮ್ಯಹಂ ॥ ೧೯೨ ॥
ದೇಹೇಂದ್ರಿಯಪ್ರಾಣಮನೋಧಿಯೋಽಮೀ
ಯದಂಶಬದ್ಧಾಃ ಪ್ರಚರಂತಿ ಕರ್ಮಸು ।
ನೈವಾನ್ಯದಾಲೋಹಮಿವ ಪ್ರತಪ್ತಂ
ಸ್ಥಾನೇಷು ತದ್ದ್ರಷ್ಟಪದೇನ ಏತೇ ॥ ೧೯೩ ॥
ಚತುರ್ಭಿಶ್ಚ ತ್ರಿಭಿರ್ದ್ವಾಭ್ಯಾಮೇಕಧಾ ಪ್ರಣಮಾಮಿ ತಂ ।
ಪೂರ್ವಾಪರಾಪರಯುಗೇ ಶಾಸ್ತಾರಂ ಪರಮೇಶ್ವರಂ ॥ ೧೯೪ ॥
ಹಿತ್ವಾ ಗತೀರ್ಮೋಕ್ಷಕಾಮಾ ಯಂ ಭಜಂತಿ ದಶಾತ್ಮಕಂ ।
ತಂ ಪರಂ ಸತ್ಯಮಮಲಂ ತ್ವಾಂ ವಯಂ ಪರ್ಯುಪಾಸ್ಮಹೇ ॥ ೧೯೫ ॥
ಓಂ ನಮೋ ಭಗವತೇ ಮಹಾಪುರುಷಾಯ ಮಹಾನುಭಾವಾಯ ವಿಭೂತಿ ಪತಯೇ ಸಕಲಸಾತ್ವತಪರಿವೃಢನಿಕರಕಮಲೋತ್ಪಲ ಕುಟ್ಮಲೋಪ ಲಾಲಿತಚರಣಾರವಿಂದಯುಗಲ ಪರಮಪರಮೇಷ್ಠಿನ್ನಮಸ್ತೇ ॥ ೧೯೬ ॥

---

೧೯೨. ಮನುಷ್ಯನ ಮನಸ್ಸು, ಬುದ್ಧಿ, ಇಂದ್ರಿಯಗಳು ಮತ್ತು ಪ್ರಾಣಗಳು ಯಾವನನ್ನು ಸಮೀಪಿಸಲಾರವೊ ಮತ್ತು ತಿಳಿಯಲಾರವೊ, ಯಾವನು ಆಕಾಶ ದಂತೆ ಸಕಲ ಭೂತಭೌತಿಕಗಳಲ್ಲಿಯೂ ಒಳಗೂ ಹೊರಗೂ ವ್ಯಾಪ್ತನಾಗಿರು ವನೊ, ಆತನನ್ನು ನಾನು ಶರಣುಹೋಗುವೆನು.

೧೯೩–೧೯೫. ದೇಹವು, ಇಂದ್ರಿಯಗಳು, ಪ್ರಾಣವು, ಮನಸ್ಸು, ಬುದ್ಧಿಯು ಇವುಗಳು ಯಾವನ ಅಂಶದಿಂದ ಸಂಬದ್ಧವಾಗಿ ತಮ್ಮ ತಮ್ಮ ವಿಷಯಗಳಲ್ಲಿ ಪ್ರವರ್ತಿಸುವುವೊ, ಕಾದ ಕಬ್ಬಿಣದಲ್ಲಿ ಆಮೂಲಾಗ್ರವಾಗಿ ಅಗ್ನಿಯೇ ವ್ಯಾಪಿಸಿರು ವಂತೆ ಅಧಿಷ್ಠಾನನಾಗಿ ಕಾಣುತ್ತಿರುವ ಯಾವನಿಂದ ಇವುಗಳೆಲ್ಲವೂ ವ್ಯಾಪಿಸಿರು ವುವೊ, ಯಾವನು ಭೂತಭವಿಷ್ಯದ್ವರ್ತಮಾನಕಾಲಗಳಲ್ಲಿಯೂ, ಲೋಕಶಿಕ್ಷಕ ನಾಗಿದ್ದರೂ ಪರಾತ್ಪರನೂ ಸರ್ವೇಶ್ವರನೂ ಆಗಿರುವನೊ, ಅಂತಹ ಸ್ವಾಮಿ ಯನ್ನು ನಾಲ್ಕು ನಮಸ್ಕಾರಗಳಿಂದಲೂ, ಮೂರರಿಂದಲೂ, ಎರಡರಿಂದಲೂ, ಒಂದರಿಂದಲೂ, ಮತ್ತೆ ಮತ್ತೆ ನಮಸ್ಕರಿಸುವೆನು. ಸ್ವರ್ಗಾದಿ ಲೋಕಗಳ ಅಪೇಕ್ಷೆಯನ್ನು ಬಿಟ್ಟು ಪರಮಹಂಸರು ಮೋಕ್ಷವನ್ನೇ ಬಯಸಿ, ದಶಾವತಾರ ಗಳನ್ನೆತ್ತಿದ ಯಾವ ಪುರುಷೋತ್ತಮನನ್ನು ಭಜಿಸುವರೊ, ಅಂತಹ ಪರಾತ್ಪ ರನೂ, ಸತ್ಯಸ್ವರೂಪನೂ, ನಿತ್ಯಶುದ್ಧನೂ ಆದ ನಿನ್ನನ್ನು ಉಪಾಸಿಸುವೆವು.

೧೯೬. ಷಡ್ಗುಣೈಶ್ವರ್ಯಭರಿತನೂ, ಪುರುಷೋತ್ತಮನೂ, ಮಹಾನು ಭಾವನೂ, ಅಣಿಮಾದ್ಯಷ್ಟ ಸಿದ್ಧಿಗಳಿಗೆ ಒಡೆಯನೂ, ಸಮಸ್ತ ಸಜ್ಜನರ ಸಮೂಹದ ಕರಕಮಲಗಳ ಅಂಜಲಿಬಂಧವೆಂಬ ಕುಟ್ಮಲಗಳಿಂದ ಪೂಜಿತಗಳಾದ

ತವಾಗ್ನಿರಾಸ್ಯಂ ವಸುಧಾಂಘ್ರಿಯುಗ್ಮಂ
ನಭಶ್ಶಿರಶ್ಚಂದ್ರರವೀ ಚ ನೇತ್ರೇ ।
ಸಮಸ್ತಲೋಕಾ ಜಠರಂ ಭುಜಾಶ್ಚ
ದಿಶಶ್ಚತಸ್ರೋ ಭಗವನ್ನಮಸ್ತೇ ॥ ೧೯೭ ॥
ಜನ್ಮಾನಿ ತಾವಂತಿ ನ ಸಂತಿ ದೇವ
ನಿಷ್ಪೀಡ್ಯ ಸರ್ವಾಣಿ ಚ ಸರ್ವಕಾಲಂ ।
ಭೂತಾನಿ ಯಾವಂತಿ ಮಯಾತ್ರ ಭೀಮೇ
ಪೀತಾನಿ ಸಂಸಾರ ಮಹಾಸಮುದ್ರೇ ॥ ೧೯೮ ॥
ಸಂಪಚ್ಛಿಲಾನಾಂ ಹಿಮವನ್ಮಹೇಂದ್ರ
ಕೈಲಾಸಮೇರ್ವಾದಿಷು ನೈವ ತಾದೃಕ್ ।
ದೇಹಾನನೇಕಾನನುಗೃಹ್ಣತೋ ಮೇ
ಪ್ರಾಪ್ತಾಸ್ತಿ ಸಂಪನ್ಮಹತೀ ಯಥೇಶ ॥ ೧೯೯ ॥
ನ ಸಂತಿ ತೇ ದೇವ ಭುವಿ ಪ್ರದೇಶಾ
ನ ಯೇಷು ಜಾತೋಽಸ್ಮಿ ತಥಾ ವಿನಷ್ಟಃ ।
ಭೂತ್ವಾ ಮಯಾ ಯೇಷು ನ ಜಂತವಶ್ಚ
ಸಂಭಕ್ಷಿತೋ ವಾ ನ ಚ ಭೂತಸಂಘೈಃ ॥ ೨೦೦ ॥

---

ಪಾದಕಮಲಗಳುಳ್ಳವನೂ, ಪರಾತ್ಪರನೂ ಪರಮೇಷ್ಠಿಯೂ ಆದ ನಿನಗೆ ನಮಸ್ಕಾರವು.

೧೯೭. ಎಲೈ ಭಗವಂತನೆ! ನಿನ್ನ ಮುಖವೇ ಅಗ್ನಿಯು, ಭೂಮಿಯೇ ನಿನ್ನ ಪಾದಯುಗಳವು, ಆಕಾಶವೇ ತಲೆಯು, ಸೂರ್ಯಚಂದ್ರರೇ ನೇತ್ರಗಳು, ಹದಿನಾಲ್ಕು ಲೋಕಗಳು ನಿನ್ನ ಕುಕ್ಷಿಯು, ನಾಲ್ಕು ದಿಕ್ಕುಗಳೇ ನಾಲ್ಕು ಭುಜಗಳು, ಇಂತಹ ವಿಶ್ವರೂಪಿಯಾದ ನಿನಗೆ ನಮಸ್ಕಾರವು.

೧೯೮. ದೇವದೇವನೆ! ನಾನು ಸರ್ವಕಾಲದಲ್ಲಿಯೂ ಸಕಲ ಜಂತುಗಳನ್ನು ಹಿಂಸಿಸಿ ಭಯಂಕರವಾದ ಸಂಸಾರಸಾಗರದಲ್ಲಿ ಎಷ್ಟು ಜನ್ಮಗಳನ್ನು ತಾಳಿರುವೆನೊ, ಆ ಸಂಖ್ಯೆಯ ಜೀವರಾಶಿಗಳು ಸೃಷ್ಟಿಯಲ್ಲಿಯೇ ಇಲ್ಲವು.

೧೯೯. ಅಸಂಖ್ಯಾತಗಳಾದ ದೇಹಗಳಲ್ಲಿ ಅಭಿಮಾನವನ್ನಿಟ್ಟು ಎಷ್ಟು ಐಶ್ವರ್ಯವನ್ನು ಸಂಪಾದಿಸಿದೆನೊ, ಅದನ್ನೆಲ್ಲ ಶಿಲಾರೂಪದಿಂದ ಒಟ್ಟುಗೂಡಿಸಿದರೆ, ಹಿಮಾಲಯ, ಮಹೇಂದ್ರ, ಕೈಲಾಸ, ಮೇರುಪರ್ವತಗಳನ್ನೆಲ್ಲ ಪರಿಮಾಣದಲ್ಲಿ ಮೀರಿಸುವುದರಲ್ಲಿ ಸಂಶಯವಿಲ್ಲ.

೨೦೦. ದೇವೋತ್ತಮನೆ! ಯಾವ ಪ್ರದೇಶಗಳಲ್ಲಿ ನಾನು ಹುಟ್ಟಿ ಸಾಯಲಿಲ್ಲವೊ, ಎಲ್ಲಿ ಕ್ರಿಮಿಕೀಟಾದಿ ಜನ್ಮಗಳನ್ನು ಪಡೆಯಲಿಲ್ಲವೊ, ಎಲ್ಲಿ ನನ್ನ

ಶೋಕಾಭಿಭೂತಸ್ಯ ಮಮಾಶ್ರು ದೇವ
ಯಾವತ್ಪ್ರಮಾಣಂ ಪತಿತಂ ಭವೇಷು ।
ತಾವತ್ಪ್ರಮಾಣಂ ನ ಜಲಂ ಪಯೋದಾ
ಮುಂಚಂತಿ ದಿವ್ಯೈರಪಿ ವರ್ಷಲಕ್ಷೈಃ ॥ ೨೦೧ ॥
ಮನ್ಯೇ ಧರಿತ್ರೀ ಪರಮಾಣು ಸಂಖ್ಯಾ
ಮುಪೈತಿ ಪಿತ್ರೋರ್ಗಣನಾ ನ ಮಹ್ಯಂ ।
ಮಿತ್ರಾಣ್ಯಮಿತ್ರಾಣ್ಯನುಜೀವ್ಯಬಂಧೂ
ನ್ಸಂಖ್ಯಾತುಮೀಶೋಽಸ್ಮಿ ನ ದೇವದೇವ ॥ ೨೦೨ ॥
ತ್ವಯ್ಯರ್ಪಿತಂ ನಾಥ ಪುನಃ ಪುನರ್ಮೇ
ಮನಃ ಸಮಾಕ್ಷಿಪ್ಯ ಸದುರ್ಧರಾರಿಃ ।
ಕಾಮೋ ವಶಂ ಕ್ರೋಧಮುಖ್ಯೈಃ ಸಹಾಯೈಃ
ಕರೋತಿ ಕಿಂ ತದ್ಭಗವನ್ಕರೋಮಿ ॥ ೨೦೩ ॥
ಸೋಽಹಂ ಭೃಶಾರ್ತಃ ಕರುಣಾಕರಸ್ತ್ವಂ
ಸಂಸಾರಗರ್ತೇ ಪತಿತಸ್ಯ ವಿಷ್ಣೋ ।
ಮಹಾತ್ಮನಾಂ ಸಂಶ್ರಯಮಭ್ಯುಪೇತೋ
ನೈವಾವಸೀದತ್ಯಪಿ ದುರ್ಗತೋಽಪಿ ॥ ೨೦೪ ॥

---

ಶರೀರಗಳು ಭೂತಗಳಿಂದ ಲಯವನ್ನು ಹೊಂದಲಿಲ್ಲವೋ, ಅಂತಹ ಪ್ರದೇಶಗಳು ಭೂಮಂಡಲದಲ್ಲಿಯೇ ಸಿಕ್ಕಲಾರವು.

೨೦೧. ಓ ಜಗನ್ನಾಥ! ಅನೇಕ ಜನ್ಮಗಳಲ್ಲಿ ನಾನು ಶೋಕದಿಂದ ಎಷ್ಟು ಕಣ್ಣೀರುಗಳನ್ನು ಸುರಿಸಿರುವೆನೊ, ಅಷ್ಟು ಜಲವನ್ನು ಪ್ರಪಂಚದ ಮೇಘಗಳೆಲ್ಲವೂ ಕೂಡಿ ಒಂದು ಲಕ್ಷ ದಿವ್ಯವರ್ಷಗಳಲ್ಲಿಯೂ ಸುರಿಸಲಾರವು.

೨೦೨. ಎಲೈ ದೇವತಾಸಾರ್ವಭೌಮನೆ! ನನ್ನ ಅನೇಕ ಜನ್ಮಗಳಲ್ಲಿದ್ದ ತಂದೆಗಳನ್ನೆಣಿಸಿದರೆ ಭೂಮಿಯಲ್ಲಿರುವ ಪರಿಮಾಣುಗಳ ಸಂಖ್ಯೆಯಷ್ಟಾದೀತೆಂದು ತಿಳಿಯುತ್ತೇನೆ. ಇನ್ನು ಮಿತ್ರರನ್ನೂ, ಶತ್ರುಗಳನ್ನೂ, ಅನುಯಾಯಿಗಳನ್ನೂ ಬಂಧುಗಳನ್ನೂ ಗಣನೆಮಾಡಲು ನಾನು ಸರ್ವಥಾ ಶಕ್ಯನಲ್ಲ.

೨೦೩. ಓ ಭಗವಂತನೆ! ಲೋಕನಾಥನೆ! ಅಡಿಗಡಿಗೂ ನಿನ್ನಲ್ಲಿ ನೆಲೆಗೊಳಿಸಲು ಬಯಸುವ ನನ್ನ ಮನಸ್ಸನ್ನು ಅಜೇಯನಾದ ಕಾಮನೆಂಬ ಶತ್ರುವು ಕ್ರೋಧವೇ ಮೊದಲಾದ ಸಹಾಯಕರಿಂದೊಡಗೂಡಿ ವಶಪಡಿಸಿಕೊಳ್ಳುತ್ತಿರುವನು. ಇನ್ನು ನಾನು ಮಾಡುವುದು ತಾನೆ ಏನು ?

೨೦೪. ಇಂತು ನಾನು ಅತ್ಯಂತ ಆರ್ತನಾಗಿರುವೆನು. ಸಂಸಾರವೆಂಬ ಸುಳಿಯಲ್ಲಿ ಸಿಕ್ಕಿಕೊಂಡು ಬಳಲುತ್ತಿರುವ ನನಗೆ ಕರುಣಾಸಮುದ್ರನಾದ ನೀನೇ

ಪರಾಯಣಂ ರೋಗವತೋ ಹಿ ವೈದ್ಯೋ
ಮಹಾಬ್ಧಿಮಗ್ನಸ್ಯ ಚ ನೌರ್ನರಸ್ಯ ।
ಬಾಲಸ್ಯ ಮಾತಾಪಿತರೌ ಸುಘೋರ
ಸಂಸಾರ ಖಿನ್ನಸ್ಯ ಹರೇ ತ್ವಮೇವ ॥ ೨೦೫ ॥
ಪ್ರಸೀದ ಸರ್ವೇಶ್ವರ ಸರ್ವಭೂತ
ಸರ್ವಸ್ಯ ಹೇತೋ ಪರಮಾರ್ಥಸಾರ ।
ಮಾಮುದ್ಧರಾಸ್ಮಾದುರುದುಃಖಸಂಘಾ
ತ್ಸಂಸಾರಗರ್ತಾತ್ಸ್ವಪರಿಗ್ರಹೇಣ ॥ ೨೦೬ ॥
ಕ್ಷುತ್ತೃಟ್ತ್ರಿಧಾತುಭಿರಿಮಂ ಮುಹುರರ್ದ್ಯಮಾನಂ
ಶೀತೋಷ್ಣವಾತಸಲಿಲೈರಿತರೇತರಾಚ್ಚ ।
ಕಾಮಾಗ್ನಿನಾಚ್ಯುತ ರುಷಾ ಚ ಸುದುರ್ಭರೇಣ
ಸಂಪಶ್ಯತೋ ಮಮ ಉರುಕ್ರಮ ಸೀದತೋ ಹಿ ॥೨೦೭॥
ಭವಂತು ಭದ್ರಾಣಿ ಸಮಸ್ತದೋಷಾಃ
ಪ್ರಯಾಂತು ನಾಶಂ ಜಗತೋಽಖಿಲಸ್ಯ ।
ಮಯಾದ್ಯ ಭಕ್ತ್ಯಾ ಪರಮೇಶ್ವರೇ ಪ್ರಭೌ
ಸ್ತುತೇ ಜಗದ್ಧಾತರಿ ವಾಸುದೇವೇ ॥ ೨೦೮ ॥

---

ಗತಿಯು. ಎಲೈ! ಮಹಾವಿಷ್ಣುವೆ! ಮಹಾತ್ಮರ ಆಶ್ರಯವನ್ನು ಹೊಂದಿದವನು ಎಷ್ಟೇ ದುಃಖಿಯಾದರೂ ನಾಶವನ್ನು ಹೊಂದುವುದಿಲ್ಲವಷ್ಟೆ.

೨೦೫. ರೋಗಿಯಾದವನಿಗೆ ವೈದ್ಯನೇ ಗತಿಯು. ಮಹಾಸಮುದ್ರದಲ್ಲಿ ಮುಳುಗುತ್ತಿರುವವನಿಗೆ ನಾವೆಯೇ ಪರಾಯಣವು. ಶಿಶುವಿಗೆ ತಾಯಿತಂದೆಗಳೇ ಪೋಷಕರು. ಭಯಂಕರವಾದಂತಹ ಈ ಸಂಸಾರದಿಂದ ದುಃಖಗೊಂಡವನಿಗೆ ನೀನೇ ಮೋಕ್ಷಪ್ರದನು.

೨೦೬. ಎಲೈ ಸರ್ವೇಶ್ವರನೆ! ಸರ್ವಭೂತರೂಪನೆ! ಸಕಲ ಪ್ರಪಂಚಕ್ಕೂ ಕಾರಣನಾದವನೆ! ಪರಮ ತತ್ತ್ವದ ಸಾರರೂಪಿಯೆ! ನನ್ನಲ್ಲಿ ಪ್ರಸನ್ನನಾಗು. ಅಗಾಧವಾಗಿಯೂ, ದುಃಖಸಮೂಹಗಳಿಂದ ತುಂಬಿದುದಾಗಿಯೂ ಇರುವ ಈ ಸಂಸಾರವೆಂಬ ಸುಳಿಯ ಸೆಳೆತದಿಂದ ಕೈಹಿಡಿದು ಎತ್ತುವವನಾಗು.

೨೦೭–೨೦೮. ನಾಶರಹಿತನಾದ ಎಲೈ ತ್ರಿವಿಕ್ರಮನೆ! ಹಸಿವು ಬಾಯಾರಿಕೆಗಳಿಂದಲೂ, ವಾತ, ಪಿತ್ತ, ಶ್ಲೇಷ್ಮಗಳೆಂಬ ತ್ರಿಧಾತುಗಳಿಂದಲೂ, ಶೀತೋಷ್ಣಗಳಿಂದಲೂ, ಗಾಳಿ, ಮಳೆಗಳ ಸಂಘಾತಗಳಿಂದಲೂ, ಕಾಮಾಗ್ನಿಯಿಂದಲೂ, ಅಸಹ್ಯವಾದ ರೋಷದಿಂದಲೂ ಮತ್ತೆಮತ್ತೆ ದುಃಖಗೊಳ್ಳುತ್ತಿರುವ ಜೀವನನ್ನು ಕಂಡು ಕರಗುವ ಮನಸ್ಸುಳ್ಳವನಾದ ನನಗೆ ಮಂಗಳವುಂಟಾಗಲಿ. ಜಗತ್ಸೃಷ್ಟಿ

ಯೇ ಭೂತಲೇ ಯೇ ದಿವಿ ಚಾಂತರಿಕ್ಷೇ
ರಸಾತಲೇ ಪ್ರಾಣಿಗಣಾಶ್ಚ ಕೇಚಿತ್ ।
ಭವಂತು ತೇ ಸಿದ್ಧಿಯುಜೋ ಮಯಾದ್ಯ
ಸ್ತುತೇ ಜಗದ್ಧಾತರಿ ವಾಸುದೇವೇ ॥ ೨೦೯ ॥
ಅಜ್ಞಾನಿನೋ ಜ್ಞಾನವಿದೋ ಭವಂತು
ಪ್ರಶಾಂತಿಭಾಜಃ ಸತತೋಗ್ರಚಿತ್ತಾಃ ।
ಮಯಾ ಚ ವಿಶ್ವಂಭರಣೇ ಹ್ಯನಂತೇ
ಸ್ತುತೇಜಗದ್ಧಾತರಿ ವಾಸುದೇವೇ ॥ ೨೧೦ ॥
ಶೃಣ್ವಂತಿ ಯೇ ಮೇ ಸ್ತುವತಸ್ತಥಾನ್ಯೇ
ಪಶ್ಯಂತಿ ಯೇ ಮಾಮಿದಮೀರಯಂತಂ ।
ದೇವಾಸುರಾದ್ಯಾ ಮನುಜಾಸ್ತಿರಶ್ಚೋ
ಭವಂತು ತೇಽಪ್ಯಚ್ಯುತಯೋಗಭಾಜಃ ॥ ೨೧೧ ॥
ಯೇ ಚಾಪಿ ಮೂಕಾ ವಿಕಲೇಂದ್ರಿಯತ್ವಾ
ತ್ಪಠಂತಿ ನೋ ನೈವ ವಿಲೋಕಯಂತಿ ।
ಪಶ್ವಾದಯಃ ಕೀಟಪಿಪೀಲಿಕಾದ್ಯಾ
ಭವಂತು ತೇಽಪ್ಯಚ್ಯುತಯೋಗಭಾಜಃ ॥ ೨೧೨ ॥

---

ಕರ್ತನೂ, ಪರಮೇಶ್ವರನೂ, ಪ್ರಭುವೂ ಆದ ವಾಸುದೇವನನ್ನು ಕುರಿತು ನಾನು ಮಾಡುತ್ತಿರುವ ಸ್ತೋತ್ರದಿಂದ ಸಕಲ ಪ್ರಪಂಚದ ದೋಷಗಳೆಲ್ಲವೂ ನಾಶವನ್ನು ಹೊಂದಲಿ.

೨೦೯. ಜಗತ್ಪಿತೃವಾದ ವಾಸುದೇವನ ಸ್ತೋತ್ರದಿಂದ ಭೂಮಿಯಲ್ಲಿಯೂ, ಅಂತರಿಕ್ಷದಲ್ಲಿಯೂ, ಪಾತಾಲಗಳಲ್ಲಿಯೂ ಯಾವ ಯಾವ ಜೀವಕೋಟಿಗಳಿರುವುವೊ ಅವುಗಳೆಲ್ಲವೂ ಸಿದ್ಧಿಯನ್ನು ಹೊಂದಲಿ.

೨೧೦. ಜಗತ್ಪಾಲಕನೂ, ಆದ್ಯಂತರಹಿತನೂ, ಜಗತ್ತಿಗೆ ತಂದೆಯೂ ಆದ ವಾಸುದೇವನ ಈ ಸ್ತೋತ್ರದಿಂದ ಅಜ್ಞಾನಿಗಳೆಲ್ಲರೂ ಜ್ಞಾನಸಂಪನ್ನರಾಗಲಿ. ಯಾವಾಗಲೂ ಕ್ರೂರಚಿತ್ತವುಳ್ಳವರೂ ಸಹ ಪ್ರಶಾಂತಮನಸ್ಕರಾಗಲಿ.

೨೧೧. ನಾನು ಹೇಳುತ್ತಿರುವ ಈ ಸ್ತೋತ್ರವನ್ನು ಯಾರು ಕೇಳುತ್ತಿರುವರೊ, ಯಾರು ಈಗ ನನ್ನನ್ನು ನೋಡುತ್ತಿರುವರೊ, ಅವರು ದೇವತೆಗಳೊ, ರಾಕ್ಷಸರೋ, ಮನುಷ್ಯರೊ, ತಿರ್ಯಗ್ಜಂತುಗಳೊ, ಯಾರಾದರೂ ಸರಿಯೆ, ಎಲ್ಲರೂ ಅಚ್ಯುತ ಸಾನ್ನಿಧ್ಯವನ್ನು ಹೊಂದುವವರಾಗಲಿ.

೨೧೨. ಯಾರು ಮೂಗರಾಗಿ ಸ್ತೋತ್ರವನ್ನು ಪಠಿಸಲಶಕ್ತರಾಗಿರುವರೊ, ಚಕ್ಷುರಿಂದ್ರಿಯಾಭಾವದಿಂದ ಯಾರು ನಿನ್ನನ್ನು ನೋಡಲಾರರೊ, ಪಶ್ವಾದಿಗಳೂ

ನಶ್ಯಂತು ದುಃಖಾನಿ ಜಗತ್ಯಪೇತು
ಲೋಭಾದಿಕೋ ದೋಷಗಣಃ ಪ್ರಜಾಭ್ಯಃ ।
ಯಥಾತ್ಮನಿ ಭ್ರಾತರಿ ಚಾತ್ಮಜೇವಾ
ತಥಾ ನರಸ್ಯಾಸ್ತು ಜನೇಽಪಿ ಭಾವಃ ॥ ೨೧೩ ॥
ಸಂಸಾರವೈದ್ಯೇಽಖಿಲದೋಷಹಾನಿ
ವಿಚಕ್ಷಣೇ ನಿರ್ವೃತಿಹೇತುಭೂತೇ ।
ಸಂಸಾರಬಂಧಾಃ ಶಿಥಿಲೀಭವಂತು
ಹೃದಿ ಸ್ಥಿತೇ ಸರ್ವಜನಸ್ಯ ವಿಷ್ಣೌ ॥ ೨೧೪ ॥
ಪಾಪಂ ಪ್ರಣಾಶಂ ಮಮ ಚ ಪ್ರಯಾತು
ಯನ್ಮಾನಸಂ ಯಚ್ಚ ಕರೋಮಿ ವಾಚಾ ।
ಶಾರೀರಮಪ್ಯಾಚರಿತಂ ಚ ಯನ್ಮೇ
ಸ್ಮೃತೇ ಜಗದ್ಧಾತರಿ ವಾಸುದೇವೇ ॥ ೨೧೫ ॥
ಯಥಾ ಹಿ ವಾ ವಾಸುದೇವೇತಿ ಪ್ರೋಕ್ತೇ
ಸಂಕೀರ್ತನೇ ವಿಷ್ಣುಭಕ್ತಸ್ಯವಾಪಿ ।
ಸ್ಮೃತೇ ಹತೇವಾಪಿ ಪ್ರಯಾತಿ ಪಾಪಂ
ಸತ್ಯೇನ ಮೇ ನಶ್ಯತಾಂ ತೇನ ಪಾಪಂ ॥ ೨೧೬ ॥

---

ಕೀಟ ಪಿಪೀಲಿಕಾದಿ ಜನ್ಮಗಳನ್ನು ಯಾರು ಪಡೆದಿರುವರೊ, ಅವರೆಲ್ಲರೂ ಅಚ್ಯುತ ಯೋಗದಲ್ಲಿ ಭಾಗಿಗಳಾಗಲಿ.

೨೧೩. ಲೋಕದಲ್ಲಿರುವ ದುಃಖಗಳೆಲ್ಲವೂ ನಶಿಸಲಿ. ಜನರಲ್ಲಿ ಕಾಣುವ ಲೋಭಾದಿದೋಷಗಳ ಸಮೂಹವು ಕಳೆದುಹೋಗಲಿ. ಪ್ರತಿ ಮನುಷ್ಯನಿಗೂ ಮತ್ತೊಬ್ಬನನ್ನು ಕಂಡರೆ ತನ್ನಲ್ಲಿಯೂ, ಸಹೋದರನಲ್ಲಿಯೂ, ಮಗನಲ್ಲಿಯೂ ಇರುವಂತಹ ಪ್ರೀತಿಯುಂಟಾಗಲಿ.

೨೧೪. ಸರ್ವ ಜಂತುಗಳ ಹೃದಯದಲ್ಲಿಯೂ ಸಂಸಾರರೋಗದ ವೈದ್ಯನೂ, ಸಕಲದೋಷ ನಿವೃತ್ತಿಯ ಉಪಾಯಜ್ಞರಲ್ಲಿ ಮುಖಂಡನೂ, ಶಾಶ್ವತ ಸುಖಕ್ಕೆ ಕಾರಣನೂ ಆದ ಮಹಾವಿಷ್ಣುವು ನೆಲಸಿರುವುದರಿಂದ ಅವರ ಸಂಸಾರ ಬಂಧಗಳೆಲ್ಲವೂ ಸಡಿಲವಾಗಲಿ.

೨೧೫. ನಾನು ಮನಸ್ಸಿನಿಂದಲೂ, ಮಾತುಗಳಿಂದಲೂ, ಶರೀರದಿಂದಲೂ, ಮಾಡಿದ ಸಕಲ ಪಾಪಗಳೂ ಜಗಜ್ಜನಕನಾದ ವಾಸುದೇವನ ಸ್ಮರಣದ ಪ್ರಭಾವದಿಂದ ನಿಶ್ಶೇಷವಾಗಿ ನಾಶವನ್ನೈದಲಿ.

೨೧೬. ವಾಸುದೇವನ ನಾಮವನ್ನು ಜಪಿಸುವುದರಿಂದಲೂ, ವಿಷ್ಣುಭಕ್ತನಾದವನು ಮಾಡುವ ಪರಮಾತ್ಮನ ಲೀಲಾ ಸಂಕಥನದಿಂದಲೂ, ಹರಿಯನು

ಮೂಢೋಽಯಮಲ್ಪಮತಿರಲ್ಪವಿಚೇಷ್ಟಿತೋಽಯಂ
ಕ್ಲಿಷ್ಟಂ ಮನೋಽಪಿ ವಿಷಯೈರ್ಮಯಿ ನ ಪ್ರಸಂಗಿ ।
ಇತ್ಥಂ ಕೃಪಾಂ ಕುರು ಮಯಿ ಪ್ರಣತೇಽಖಿಲೇಶ
ತ್ವಾಂ ಸ್ತೋತುಮಂಬುಜಭವೋಽಪಿ ಹಿ ದೇವ ನೇಶಃ ॥೨೧೭॥
ಸ ತ್ವಂ ಪ್ರಸೀದ ಭಗವನ್ಕುರು ಮಯ್ಯನಾಥೇ
ವಿಷ್ಣೋ ಕೃಪಾಂ ಪರಮಕಾರುಣಿಕಃ ಕಿಲ ತ್ವಂ ।
ಸಂಸಾರಸಾಗರನಿಮಗ್ನಮನಂತದೀನ
ಮುದ್ಧರ್ತುಮರ್ಹಸಿ ಹರೇ ಪುರುಷೋತ್ತಮೋಽಸಿ ॥ ೨೧೮ ॥
ಇತ್ಥಂ ಸ್ತುತಃ ಸ ಭಗವಾನೈತರೇಯೇಣ ಭಾರತ ।
ವಾಸುದೇವೋ ವಿಶಾಲಾತ್ಮಾ ಸಾನಂದಮಿದಮಾಹ ತಂ ॥ ೨೧೯ ॥
ವತ್ಸೈತರೇಯ ತುಷ್ಟೋಽಸ್ಮಿ ಭಕ್ತ್ಯಾನೇನ ಸ್ತವೇನ ತೇ ।
ವರಂ ವೃಣುಷ್ವ ಮತ್ತಸ್ತ್ವಂ ದುರ್ಲಭಂ ಯದಭೀಪ್ಸಿತಂ ॥ ೨೨೦ ॥

---

ಸ್ಮರಿಸುವುದರಿಂದಲೂ, ಪಾಪಗಳು ನಾಶಹೊಂದುವುವಾದರೆ, ಆ ಸತ್ಯದ ಬಲದಿಂದಲೇ ನನ್ನ ಪಾಪವೂ ನಾಶವಾಗಲಿ.

೨೧೭. 'ಇವನು ಮೂಢನು; ಅಲ್ಪಜ್ಞನು; ಸ್ವಲ್ಪವಾದ ಸ್ವಾತಂತ್ರ್ಯವುಳ್ಳವನು; ಇವನ ಮನಸ್ಸೂ ಕೂಡ ವಿಷಯಗಳಲ್ಲಿ ಆಸಕ್ತವಾಗಿರುವುದರಿಂದ ನನ್ನಲ್ಲಿ ನೆಲಸಿರುವುದಿಲ್ಲ' ಎಂಬುದಾಗಿ ತಿಳಿದು ನಿನ್ನ ಪಾದಗಳಲ್ಲಿ ಬಿದ್ದಿರುವ ನನ್ನನ್ನು ಕೃಪೆಯಿಂದ ಕಾಪಾಡು. ಲೋಕೇಶ್ವರನಾದ ಸ್ವಾಮಿಯೆ! ನಿನ್ನನ್ನು ಸ್ತೋತ್ರಮಾಡಲು ಚತುರ್ಮುಖನಾದ ಬ್ರಹ್ಮನೂ ಸಮರ್ಥನಲ್ಲ.

೨೧೮. ಎಲೈ ಸಿದ್ಧಿಪ್ರದನಾದ ವಿಷ್ಣುವೆ! ಪ್ರಸನ್ನನಾಗು. ಅನಾಥನಾದ ನನ್ನಲ್ಲಿ ಕೃಪೆಯನ್ನು ತೋರುವವನಾಗು. ನೀನು ಪರಮ ಕರುಣಾನಿಧಿಯೆಂದು ಪ್ರಸಿದ್ಧನಾಗಿರುವೆಯಲ್ಲವೆ. ಹರಿಯೆ! ಸಂಸಾರಸಮುದ್ರದಲ್ಲಿ ಮುಳುಗಿ ಅತ್ಯಂತ ದೀನನಾಗಿರುವ ನನ್ನನ್ನು ಉದ್ಧರಿಸಲು ಪುರುಷೋತ್ತಮನಾದ ನೀನೊಬ್ಬನೇ ಶಕ್ತನಾಗಿರುವೆ."

೨೧೯. ಎಲೈ ಅರ್ಜುನನೆ! ಇಂತು ಐತರೇಯನು ಭಗವಂತನನ್ನು ಸ್ತುತಿಸಲು ಉದಾರಹೃದಯನಾದ ವಾಸುದೇವನು ಆನಂದದಿಂದ ಆತನನ್ನು ಕುರಿತು ಇಂತೆಂದನು.

೨೨೦. "ಪ್ರಿಯನಾದ ಐತರೇಯನೆ! ನಿನ್ನ ಉತ್ತಮ ಭಕ್ತಿಯಿಂದಲೂ, ಸ್ತೋತ್ರದಿಂದಲೂ ನಾನು ಸಂತೋಷಗೊಂಡಿರುವೆನು. ನಿನಗೆ ಅಪೇಕ್ಷೆಯಿರುವ ಎಂತಹ ದುರ್ಲಭವಾದ ವರವನ್ನಾದರೂ ನನ್ನಿಂದ ಬೇಡುವವನಾಗು."

ಐತರೇಯ ಉವಾಚ :—

ಏಷ ಏವ ವರೋ ನಾಥ ಮಮ ನಿತ್ಯಮಭೀಪ್ಸಿತಃ ।
ಮಜ್ಜತೋ ಘೋರಸಂಸಾರೇ ಕರ್ಣಧಾರೋ ಹರೇ ಭವ ॥ ೨೨೧ ॥

ಶ್ರೀ ಭಗವಾನುವಾಚ :—

ಮುಕ್ತ ಏವಾಸಿ ಸಂಸಾರಾದ್ಯಸ್ಯ ತೇ ಭಕ್ತಿರೀದೃಶೀ ।
ಗ್ರಹೈರ್ಮಹಾಗ್ರಹೈರ್ಬದ್ಧೋ ನೈವ ತೇ ದ್ವಿತ್ರಯೋದಶೀ ॥ ೨೨೨ ॥
ಯಶ್ಚ ಸ್ತೋತ್ರೇಣ ಸತತಂ ಗುಪ್ತಕ್ಷೇತ್ರಸಮಾಹಿತಂ ।
ಸ್ತೋಷ್ಯತೇ ವಾಸುದೇವಂ ಮಾಂ ಸ ಪಾಪಕ್ಷಯಮಾಪ್ಸ್ಯತಿ ॥ ೨೨೩ ॥
ಯಸ್ಮಾದೇತೇನ ಸ್ತೋತ್ರೇಣ ಪಾಪಂ ನಾಶಮವಾಪ್ಸ್ಯತಿ ।
ಅಘನಾಶನಮಿತ್ಯೇವ ತಸ್ಮಾತ್ಖ್ಯಾತಿಮವಾಪ್ಸ್ಯತಿ ॥ ೨೨೪ ॥
ಏಕಾದಶ್ಯಾಮುಪೋಷ್ಯೈಮ ಮಮಾಗ್ರೇ ಯಃ ಪಠಿಷ್ಯತಿ ।
ಸ್ತವಮೇನಂ ಸ ಪೂತಾತ್ಮಾ ಮಮ ಲೋಕಮವಾಪ್ಸ್ಯತಿ ॥ ೨೨೫ ॥

---

೨೨೧. ಐತರೇಯನು ಹೇಳುತ್ತಾನೆ:—"ಜಗನ್ನಾಥನಾದ ವಿಷ್ಣುವೆ! ನನಗೆ ಯಾವಾಗಲೂ ಅಭೀಪ್ಸಿತವಾದುದು ಒಂದೇ ವರವು. ಭಯಂಕರವಾದ ಸಂಸಾರದಲ್ಲಿ ಮುಳುಗುತ್ತಿರುವ ನನಗೆ ನೀನೇ ನಾವಿಕನಾಗಿ ದಡವನ್ನು ಮುಟ್ಟಿಸು."

೨೨೨. ನಾರಾಯಣನು ಹೇಳುತ್ತಾನೆ:—"ಎಲೈ ಐತರೇಯನೆ! ಇಂತಹ ಉತ್ತಮವಾದ ಭಕ್ತಿಯಿರುವುದರಿಂದ ನೀನು ಸಂಸಾರದಿಂದ ಮುಕ್ತನೇ ಆಗಿರುವೆ. ನಿನಗೆ ಪುನರ್ಜನ್ಮದ ಭಯವೇ ಇರುವುದಿಲ್ಲವೆಂದು ತಿಳಿ. ನೀನು ಹದಿಮೂರು ಗ್ರಹಗಳಿಂದಲೂ, ಹದಿಮೂರು ಮಹಾಗ್ರಹಗಳಿಂದಲೂ ಬದ್ಧನಾಗಿರುವುದಿಲ್ಲ. ಇದರಲ್ಲಿ ಸಂದೇಹವೇ ಬೇಡ.

೨೨೩. ಗುಪ್ತಕ್ಷೇತ್ರವಾದ ಈ ಮಹೀಸಾಗರಸಂಗಮದಲ್ಲಿ ನೆಲಸಿರುವ ವಾಸುದೇವನಾದ ನನ್ನನ್ನು ಯಾರು ಈ ಸ್ತೋತ್ರದಿಂದ ಸ್ತುತಿಸುವರೊ, ಅವರ ಪಾಪಗಳೆಲ್ಲವೂ ಕ್ಷಯವನ್ನು ಹೊಂದುವುವು. ಅವರೂ ಈ ಸಂಸಾರದಿಂದ ಬಿಡುಗಡೆಯನ್ನು ಹೊಂದುತ್ತಾರೆ.

೨೨೪. ಈ ಸ್ತೋತ್ರದಿಂದ ಭಕ್ತರ ಸಕಲ ಪಾಪಗಳೂ ನಾಶವನ್ನು ಹೊಂದುವುದರಿಂದ ಇದು ಅಘನಾಶನಸ್ತೋತ್ರವೆಂದೇ ಲೋಕದಲ್ಲಿ ಪ್ರಸಿದ್ಧಿಯನ್ನು ಪಡೆಯುವುದು.

೨೨೫. ಯಾವನು ಏಕಾದಶಿಯಲ್ಲಿ ಉಪವಾಸವನ್ನು ಮಾಡಿ ಈ ಸ್ತೋತ್ರವನ್ನು ನನ್ನ ಸನ್ನಿಧಿಯಲ್ಲಿ ಪಠಿಸುವನೊ, ಅವನು ಪವಿತ್ರನಾಗಿ ನನ್ನ ಲೋಕದಲ್ಲಿ ಶಾಶ್ವತವಾಗಿ ವಾಸಿಸುವನು.

ಸರ್ವೇಷಾಮೇವ ಕ್ಷೇತ್ರಾಣಾಂ ಗುಪ್ತಕ್ಷೇತ್ರಂ ಪ್ರಿಯಂ ಯಥಾ ।
ತಥಾ ಸರ್ವಸ್ತವಾನಾಂ ಚ ಸ್ತವೋಽಯಂ ಸುಪ್ರಿಯೋ ಮಮ ॥೨೨೬॥
ಯಾನಿ ಚೋದ್ದಿಶ್ಯ ಭೂತಾನಿ ಜಪ್ಯತೇಽಸೌ ಮಹಾತ್ಮಭಿಃ ।
ತಾನಿ ಶಾಂತಿಂ ಭಗಂ ಪ್ರಜ್ಞಾಂ ಪ್ರಾಪ್ಸ್ಯಂತಿ ಕೃಪಯಾ ಮಮ ॥೨೨೭॥
ತ್ವಂ ಚ ವತ್ಸ ಶ್ರೌತಧರ್ಮಾನ್ಸಮ್ಯಗಾಚರ ಶ್ರದ್ಧಯಾ ।
ನತೈರ್ಬಂಧಂ ಮಯಿ ನ್ಯಸ್ತೈರಾಪ್ಸ್ಯಸ್ಯನಭಿಸಂಧಿತೈಃ ॥ ೨೨೮ ॥
ಯಜ ಯಜ್ಞೈರವಾಪ್ಯೈವ ದಾರಾನ್ನಂದಯ ಮಾತರಂ ।
ಮಯಿ ಧ್ಯಾನೇನ ತೀವ್ರೇಣ ಮಾಮವಾಪ್ಸ್ಯಸಂಶಯಂ ॥ ೨೨೯ ॥
ಬುದ್ಧಿರ್ಮನೋಽಥ ಭೂತಾನಿ ಬುದ್ಧಿಕರ್ಮೇಂದ್ರಿಯಾಣಿ ಚ ।
ತ್ರಯೋದಶ ಗ್ರಹೈರ್ಯೇ ಸ್ಯುಸ್ತ್ರಯೋದಶ ಮಹಾಗ್ರಹಾಃ ॥ ೨೩೦ ॥
ಬೋದ್ಧವ್ಯಮಥ ಮಂತವ್ಯಮಹಂತಾ ಶಬ್ದ ಏವ ಚ ।
ಸ್ಪರ್ಶೋ ರಸೋ ರೂಪಗಂಧೌ ವಚನಾದಾನಮೇವ ಚ ।
ವಿಹೃತ್ಯುತ್ಸರ್ಗ ಆನಂದಸ್ತ್ರಯೋದಶ ಮಹಾಗ್ರಹಾಃ ॥ ೨೩೧ ॥

---

೨೨೬–೨೨೭. ಸಕಲ ಕ್ಷೇತ್ರಗಳಲ್ಲಿಯೂ ಗುಪ್ತಕ್ಷೇತ್ರವೆಂತು ನನಗೆ ಪರಮ ಪ್ರಿಯವಾಗಿರುವುದೊ, ಅಂತೆಯೇ ಸಕಲ ಸ್ತೋತ್ರಗಳಲ್ಲಿಯೂ ಈ ಸ್ತೋತ್ರವು ವಿಶೇಷ ಪ್ರಿಯವೆನಿಸುವುದು. ಮಹಾತ್ಮರು ಯಾವ ಪ್ರಾಣಿಗಳನ್ನುದ್ದೇಶಿಸಿ ಈ ಸ್ತೋತ್ರವನ್ನು ಪಠಿಸುವರೊ, ಆ ಪ್ರಾಣಿಗಳೆಲ್ಲವೂ ನನ್ನ ಕೃಪೆಯಿಂದ ಶಾಂತಿಯನ್ನೂ, ಐಶ್ವರ್ಯವನ್ನೂ, ಬುದ್ಧಿಕೌಶಲ್ಯವನ್ನೂ ಪಡೆಯುವುವು.

೨೨೮. ಎಲೈ ವತ್ಸನೆ! ನೀನೂ ಕೂಡ ಶ್ರುತಿವಿಹಿತಗಳಾದ ಧರ್ಮಗಳನ್ನು ಶ್ರದ್ಧೆಯಿಂದಲೂ, ಕ್ರಮದಿಂದಲೂ ಆಚರಿಸುವವನಾಗು. ಫಲಾಭಿಸಂಧಿಯಿಲ್ಲದೆ ನನ್ನಲ್ಲಿ ಅರ್ಪಣಮಾಡುವ ಬುದ್ಧಿಯಿಂದ ಮಾಡಿದ ಕರ್ಮಗಳಿಂದ ಬಂಧವನ್ನು ನೀನು ಹೊಂದಲಾರೆ.

೨೨೯. ಪತ್ನಿಯನ್ನು ಸ್ವೀಕರಿಸಿ ಯಜ್ಞಗಳನ್ನು ಮಾಡಿ ನಿನ್ನ ತಾಯಿಯನ್ನು ಸಂತೋಷಗೊಳಿಸು. ನನ್ನನ್ನೇ ಅನನ್ಯಭಾವದಿಂದ ಧ್ಯಾನಿಸಲು ನಿಸ್ಸಂಶಯವಾಗಿಯೂ ನನ್ನನ್ನೇ ಹೊಂದುವೆ.

೨೩೦. ಬುದ್ಧಿ, ಮನಸ್ಸು, ಪಂಚಭೂತಗಳ ಸಮೂಹ, ಪಂಚಜ್ಞಾನೇಂದ್ರಿಯಗಳು, ಪಂಚ ಕರ್ಮೇಂದ್ರಿಯಗಳು, ಇವುಗಳೇ ಗ್ರಹಗಳೆನಿಸುವುವು. ಇವುಗಳಿಂದಲೇ ಹದಿಮೂರು ಮಹಾಗ್ರಹಗಳು ಉತ್ಪನ್ನವಾಗುವುವು.

೨೩೧. ನಿಶ್ಚಯ ಜ್ಞಾನ, ಸಂಶಯ, ಅಹಂಕಾರ, ಶಬ್ದ, ಸ್ಪರ್ಶ, ರಸ, ರೂಪ, ಗಂಧ, ವಚನ, ಪರಿಗ್ರಹ, ವಿಹಾರ, ಪುರೀಷೋತ್ಸರ್ಜನೆ, ಆನಂದ— ಇವುಗಳೇ ಮಹಾಗ್ರಹಗಳೆನಿಸಿರುವುವು.

ಏತಾನ್ಮಹಾಗ್ರಹಾನ್ಪುತ್ರ ಶುದ್ಧಾನ್ಶುದ್ಧೈಃ ಸ್ವಕೈರ್ಗ್ರಹೈಃ ।
ಗೃಹಾಣ ಧ್ಯಾನಯೋಗೇನ ಮುಮ್ಯೈವಂ ಮೋಕ್ಷಮಾಪ್ಸ್ಯಸಿ ॥ ೨೩೨ ॥
ಏವಂ ತ್ವಂ ಕರ್ಮಭಿರ್ವೀರ ನೈಷ್ಕರ್ಮ್ಯಂ ಸಮವಾಪ್ಸ್ಯಸಿ ।
ತುಲ್ಬಂ ರಸೇನ ಸಂವಿದ್ಧಂ ದಕ್ಷೋ ಹೇಮ ಯಥಾಶ್ನುತೇ ॥ ೨೩೩ ॥
ವರ್ಣಾಶ್ರಮಾಚಾರವತಾ ಮಯಿ ಸನ್ಯಸ್ತಕರ್ಮಣಾ ।
ಮದನುಧ್ಯಾನಯುಕ್ತೇನ ಮೋಕ್ಷೋ ನಾಸ್ತೀಹ ದುರ್ಲಭಃ ॥ ೨೩೪ ॥
ತಸ್ಮಾದೇವಂ ವರ್ತಮಾನೋ ನಂದವ್ರತಪರಾಯಣಃ ।
ಉದ್ಧೃತ್ಯ ಸಪ್ತಪುರುಷಾನ್ಲಯಂ ಮಯಿ ಗಮಿಷ್ಯಸಿ ॥ ೨೩೫ ॥
ಸಾಂಪ್ರತಂ ಪ್ರತಿಭಾಸ್ಯಂತಿ ವೇದಾಶ್ಚಾಪಠಿತಾ ಅಪಿ ॥ ೨೩೬ ॥
ತತಸ್ತ್ವಂ ಕೋಟಿತೀರ್ಥೇ ಚ ಯಜ್ಞೇ ವೈ ಹರಿಮೇಧಸಃ ।
ಯಾಹಿ ತತ್ರ ಭವಿಷ್ಯಂತೇ ಸರ್ವಂ ಮಾತುರಭೀಪ್ಸಿತಂ ॥ ೨೩೭ ॥
ಇತ್ಯುಕ್ತ್ವಾ ಭಗವಾನ್ವಿಷ್ಣುರ್ಮೂರ್ತಿಮಧ್ಯೇ ವಿವೇಶ ಹ ।
ವಿಲೋಕ್ಯಮಾನೋ ನಿಮಿಷಂ ಮಾತ್ರಾಚೈವ ಸುತೇನ ಚ ॥ ೨೩೮ ॥

---

೨೩೨. ಪುತ್ರಪ್ರಾಯನಾದ ಐತರೇಯನೇ! ಶುದ್ಧಗಳಾದ ಈ ಮಹಾ ಗ್ರಹಗಳನ್ನು ನನ್ನ ಧ್ಯಾನಯೋಗದಿಂದ ಪರಿಶುದ್ಧಗಳಾದ ಗ್ರಹಗಳ ಸಹಾಯ ದಿಂದ ಅನುಭವಿಸುವನಾಗು. ಇದರಿಂದಲೇ ಮೋಕ್ಷವನ್ನು ಪಡೆಯುವೆ.

೨೩೩. ಎಲೈ ವೀರನೆ! ಈ ವಿಧವಾಗಿ ಮಾಡಿದ ಕರ್ಮದಿಂದಲೇ ನೈಷ್ಕರ್ಮ್ಯವನ್ನು ಸಂಪಾದಿಸುವೆ. ರಸದೊಡನೆ ಸಮ್ಮರ್ದಿತವಾದ ತಾಮ್ರದಿಂದ ದಕ್ಷನಾದವನು ಚಿನ್ನವನ್ನು ಹೊಂದುವನಲ್ಲವೆ.

೨೩೪. ವರ್ಣಾಶ್ರಮಧರ್ಮಗಳನ್ನು ಯಥಾವಿಧಿಯಾಗಿ ಅನುಸರಿಸುತ್ತ ಸಕಲ ಕರ್ಮಫಲಗಳನ್ನೂ ನನ್ನಲ್ಲಿಯೇ ಅರ್ಪಿಸಿದವನಾಗಿ ನನ್ನ ಧ್ಯಾನದಲ್ಲಿಯೇ ನಿರತನಾಗಿರುವ ಭಕ್ತನಿಗೆ ದುರ್ಲಭವಾದ ಮೋಕ್ಷವೆಂಬುದೇ ಇಲ್ಲವು.

೨೩೫. ಆದುದರಿಂದ ನೀನು ಇಂತು ನಡೆಯುವವನಾಗಿ ವ್ರತನಿಯಮ ಗಳನ್ನು ಪಾಲಿಸುತ್ತ ಸುಖಗೊಳ್ಳುತ್ತಿರು. ಏಳು ಮಂದಿ ಪಿತೃಗಳನ್ನೂ ಊರ್ಧ್ವ ಲೋಕಗಳಿಗೆ ಕಳುಹಿಸಿ, ಕಡೆಗೆ ನನ್ನಲ್ಲಿ ಲಯವನ್ನು ಹೊಂದುವೆ.

೨೩೬–೨೩೮. ನಿನಗೆ ಅಧ್ಯಯನವಿಲ್ಲದೆಯೇ ಸಕಲ ವೇದಗಳೂ ಮನಸ್ಸಿ ನಲ್ಲಿ ಸ್ಫುರಿಸುತ್ತವೆ. ಬಳಿಕ ನೀನು ಕೋಟಿತೀರ್ಥದಲ್ಲಿ ಯಜ್ಞವನ್ನು ಮಾಡು ತ್ತಿರುವ ಹರಿಮೇಧನೆಂಬ ಬ್ರಾಹ್ಮಣನನ್ನು ಸೇರುವವನಾಗು. ಅಲ್ಲಿ ನಿನ್ನ ತಾಯಿಯ ಸಕಲ ಅಭೀಷ್ಟವೂ ನೆರವೇರುವುದು.'' ಇಂತು ಹೇಳಿ ಮಹಾ ವಿಷ್ಣುವು ವಿಗ್ರಹದ ಮಧ್ಯದಲ್ಲಿಯೇ ಅಂತರ್ಧಾನವನ್ನೈದಿದನು. ಆ ಸ್ವಾಮಿಯು ತಾಯಿ ಮಕ್ಕಳಿಬ್ಬರಿಗೂ ನಿಮಿಷಮಾತ್ರ ಪ್ರತ್ಯಕ್ಷನಾಗಿ ಕಂಡನು.

**ತತೋ ಮೂರ್ತಿಂ ನಮಸ್ಕೃತ್ಯ ವಾಸುದೇವಸ್ಯ ವಿಸ್ಮಿತಃ ।**
**ಐತರೇಯಃ ಸ್ವಜನನೀಂ ಮುದಿತೋ ವಾಕ್ಯಮಬ್ರವೀತ್ ॥ ೨೩೯ ॥**
**ಪುರಾಹಮಭವಂ ಶೂದ್ರೋ ಭೀತಃ ಸಂಸಾರದೋಷತಃ ।**
**ಪರಿನಿಷ್ಠಾಗತಂ ಧರ್ಮಂ ಬ್ರಾಹ್ಮಣಂ ಶರಣಂ ಗತಃ ॥ ೨೪೦ ॥**
**ಸ ಕೃಪಾಲುರ್ಮಮ ಪ್ರಾಹ ಮಂತ್ರಂ ವೈ ದ್ವಾದಶಾಕ್ಷರಂ ।**
**ಸದೇಮಂ ಜಪ ಚೇತ್ಯುಕ್ತ್ವಾ ತಮಹಂ ಜಪ್ತವಾನ್ಸದಾ ॥ ೨೪೧ ॥**
**ತೇನ ಜಾಪ್ಯಪ್ರಭಾವೇನ ಮಮೋತ್ಪತ್ತಿಸ್ತವೋದರಾತ್ ।**
**ಜಾತಸ್ಮೃತಿರ್ವಿಷ್ಣುಭಕ್ತಿಃ ಸ್ಥಿತಿರತ್ರ ಚ ಸರ್ವದಾ ॥ ೨೪೨ ॥**
**ಇದಾನೀಂ ಚ ಪ್ರಯಾಮ್ಯೇಷ ಯಜ್ಞಂ ತಂ ಹರಿಮೇಧಸಃ ।**
**ತ್ವದ್ರೂಪಂ ವಿಷ್ಣುಪ್ರೀತ್ಯರ್ಥಂ ಪ್ರಣಮ್ಯ ತ್ವಾಂ ಪ್ರಸಾದಯೇ ॥ ೨೪೩ ॥**
**ತತೋ ಮಹೀನಗರಕಾಖ್ಯೇ ಕೋಟಿತೀರ್ಥತಲಸ್ಥಿತಂ ।**
**ಯಜಂತಂ ಸಂವೃತಂ ವಿಪ್ರೈಃ ಕೋಟಿಶಸ್ತಮುಪಾಗಮತ್ ।**
**ಗೇಹಾಯ ಮಾತರಂ ಪ್ರೋಚ್ಯ ಸ ಯಜ್ಞೇ ಪ್ರೋಕ್ತವಾನ್ದ್ವಿಜಃ ॥೨೪೪॥**

---

೨೩೯. ಬಳಿಕ ಐತರೇಯನು ವಿಸ್ಮಯಗೊಂಡು ವಾಸುದೇವನ ಮೂರ್ತಿಗೆ ನಮಸ್ಕರಿಸಿ ತನ್ನ ತಾಯಿಯೊಡನೆ ಇಂತೆಂದನು.

೨೪೦. "ಪೂರ್ವದಲ್ಲಿ ನಾನು ಶೂದ್ರನಾಗಿ ಜನ್ಮವನ್ನು ಪಡೆದು ಸಂಸಾರ ದೋಷದ ದೆಸೆಯಿಂದ ಭಯಗೊಂಡಿರುತ್ತಿದ್ದೆನು. ಬಳಿಕ ಆಚಾರನಿಷ್ಠನೂ ಧರ್ಮಜ್ಞನೂ ಆದ ಬ್ರಾಹ್ಮಣನೊಬ್ಬನನ್ನು ಶರಣುಹೊಕ್ಕೆನು.

೨೪೧. ಆತನು ಕೃಪಾಳುವಾಗಿ ಉತ್ತಮವಾದ ದ್ವಾದಶಾಕ್ಷರೀ ಮಂತ್ರವನ್ನು ನನಗೆ ಉಪದೇಶಿಸಿ ಅದನ್ನು ಯಾವಾಗಲೂ ಜಪಿಸುತ್ತಿರುವಂತೆ ಹೇಳಲು ಅಂತೆಯೇ ನಾನು ನಿರಂತರವಾಗಿ ಜಪಿಸುತ್ತಿದ್ದೆನು.

೨೪೨. ಆ ಜಪದ ಮಹಿಮೆಯಿಂದಲೇ ನನಗೆ ನಿನ್ನ ಜಠರದಲ್ಲಿ ಜನನವೂ, ಪೂರ್ವಜನ್ಮದ ಸ್ಮರಣೆಯೂ, ವಿಷ್ಣುಭಕ್ತಿಯೂ ಈ ಜನ್ಮದಲ್ಲಿ ಲಭಿಸಿರುವುವು.

೨೪೩. ಈಗ ನಾನು ಹರಿಮೇಧನ ಯಜ್ಞವನ್ನು ಕುರಿತು ಹೊರಡುವವನಾಗಿರುವೆನು. ಅಲ್ಲದೆ ವಿಷ್ಣುವಿನ ಪ್ರೀತಿಯ ಸಲುವಾಗಿ ನಿನಗೆ ನಮಸ್ಕಾರವನ್ನು ಮಾಡಿ ನಿನ್ನ ಆಶೀರ್ವಾದವನ್ನು ಬೇಡುತ್ತಿರುವೆನು."

೨೪೪. ಬಳಿಕ ಆ ಐತರೇಯನು ಮಹೀನಗರವೆಂಬ ಹೆಸರುಳ್ಳ ಕೋಟಿತೀರ್ಥಕ್ಕೆ ಹೊರಟು ಅಲ್ಲಿ ಅನೇಕ ಕೋಟಿ ಬ್ರಾಹ್ಮಣರಿಂದ ಕೂಡಿ ಯಜ್ಞವನ್ನು ಮಾಡುತ್ತಿರುವ ಹರಿಮೇಧನೆಂಬ ಬ್ರಾಹ್ಮಣೋತ್ತಮನನ್ನು ಕಂಡನು. ಮನೆಯ ಯಾಜಮಾನ್ಯಕ್ಕೆ ತಾಯಿಯನ್ನು ನೇಮಿಸಿದವನಾಗಿ ಬಂದು ಆ ಯಜ್ಞಶಾಲೆಯಲ್ಲಿ ಗಟ್ಟಿಯಾಗಿ ಇಂತೆಂದನು.

**ನಮಸ್ತಸ್ಮೈ ಭಗವತೇ ವಿಷ್ಣವೇಽಕುಂಠಮೇಧಸೇ ।**
**ಯನ್ಮಾಯಾಮೋಹಿತಧಿಯೋ ಭ್ರಮಾಮಃ ಕರ್ಮಸಾಗರೇ ॥ ೨೪೫ ॥**
**ಇತಿ ಶ್ಲೋಕಂ ಮಹಾರ್ಥಂ ತೇ ಹರಿಮೇಧಮುಖಾದ್ವಿಜಾಃ ।**
**ಆಕರ್ಣ್ಯಾಸನ ಪೂಜಾದ್ಯೈಃ ಪೂಜಯಾಮಾಸುರಂಗ ತಂ ॥ ೨೪೬ ॥**
**ತತೋ ವೇದಾರ್ಥನೈಪುಣ್ಯೈಸ್ತೇನ ತೇ ತೋಷಿತಾ ದ್ವಿಜಾಃ ।**
**ಪ್ರದದುರ್ದಕ್ಷಿಣಾಂ ಸರ್ವಾಂ ಹರಿಮೇಧಾಃ ಸುತಾಮಪಿ ॥ ೨೪೭ ॥**
**ದ್ರವ್ಯಂ ಕನ್ಯಾಂ ಚ ಸಂಗೃಹ್ಯ ಸ್ವಗೃಹಂ ಸಮುಪಾಗಮತ್ ।**
**ವಂದಯಿತ್ವಾ ಸ್ವಜನನೀಂ ಪುತ್ರಾನುತ್ಪಾದ್ಯ ಚಾಮಲಾನ್ ॥ ೨೪೮ ॥**
**ಇಷ್ಟ್ವಾ ಯಜ್ಞೈರೈತರೇಯೋ ದ್ವಾದಶೀವ್ರತತತ್ಪರಃ ।**
**ವಾಸುದೇವಾನುಧ್ಯಾನೇನ ಮೋಕ್ಷಂ ಪಶ್ಚಾದುಪಾಗತಃ ॥ ೨೪೯ ॥**
**ಏವಂ ವಿಧೋ ವಾಸುದೇವಃ ಸ್ವಯಮತ್ರಾಸ್ತಿ ಭಾರತ ।**
**ಯೋಽರ್ಚಯೇತ್ಪೂಜಯೇತ್ಸ್ತೌತಿ ಸರ್ವಂ ತಸ್ಯಾಕ್ಷಯಂ ವಿದುಃ ॥**

---

೨೪೫. "ಯಾವನ ಮಾಯೆಯಿಂದ ಮೋಹಗೊಂಡು ನಾವೆಲ್ಲರೂ ಈ ಲೌಕಿಕ ವೈದಿಕ ಕರ್ಮಗಳೆಂಬ ಸಮುದ್ರದಲ್ಲಿ ಭ್ರಮಿಸುತ್ತಿರುವೆವೋ, ಅಂತಹ ಅನಂತಜ್ಞಾನಸಂಪನ್ನನೂ,ಭಗವಂತನೂ ಆದ ಮಹಾವಿಷ್ಣುವಿಗೆ ನಮಸ್ಕಾರವು."

೨೪೬–೨೪೭. ಪ್ರಿಯನಾದ ಅರ್ಜುನನೆ! ಮಹತ್ತರವಾದ ಅರ್ಥದಿಂದ ಕೂಡಿದ ಈ ಶ್ಲೋಕವನ್ನು ಕೇಳಿ ಹರಿಮೇಧನೇ ಮೊದಲಾದ ಬ್ರಾಹ್ಮಣರೆಲ್ಲರೂ ಆತನನ್ನು ಇದಿರುಗೊಂಡು ಆಸನ, ಅರ್ಘ್ಯ, ಪಾದ್ಯಾದಿಗಳಿಂದ ಅತಿಥಿಪೂಜೆಯನ್ನು ಮಾಡಿದರು. ಬಳಿಕ ಆತನ ವೇದಾರ್ಥಗಳ ನೈಪುಣ್ಯದಿಂದ ಆ ಬ್ರಾಹ್ಮಣರೆಲ್ಲರೂ ಸಂತೋಷಗೊಂಡರು. ಅವರು ತಮ್ಮ ಸರ್ವಸ್ವವನ್ನೂ ದಕ್ಷಿಣೆಯನ್ನಾಗಿ ಆತನಿಗೆ ಒಪ್ಪಿಸಿದರು. ಯಜ್ಞದ ಯಜಮಾನನಾದ ಹರಿಮೇಧನು ತನ್ನ ಪುತ್ರಿಯನ್ನೂ ಅವನಿಗೆ ವಿವಾಹಮಾಡಿಕೊಟ್ಟನು.

೨೪೮–೨೪೯. ಆ ಐತರೇಯನು ದ್ರವ್ಯವನ್ನೂ, ಹೆಂಡತಿಯನ್ನೂ ತಂದು ತನ್ನ ಮನೆಯನ್ನು ಸೇರಿ, ತಾಯಿಗೆ ನಮಸ್ಕರಿಸಿ, ನಿಷ್ಕಲ್ಮಷರಾದ ಪುತ್ರರನ್ನು ಪಡೆದು, ಅನೇಕ ಯಜ್ಞಗಳಿಂದ ಪರಮಾತ್ಮನನ್ನು ತೃಪ್ತಿಪಡಿಸಿ ದ್ವಾದಶೀ ವ್ರತವನ್ನು ಮಾಡುತ್ತ ನಿರಂತರವಾದ ವಾಸುದೇವನ ಸ್ಮರಣದಿಂದ ದೇಹಾವಸಾನವಾದಮೇಲೆ ವೈಕುಂಠವನ್ನು ಪಡೆದನು.

೨೫೦. ಎಲೈ ಅರ್ಜುನನೆ! ಈ ವಿಧವಾಗಿ ಈ ವೃದ್ಧ ವಾಸುದೇವ ಮೂರ್ತಿಯು ಇಲ್ಲಿ ನೆಲಸುವುದಾಯಿತು. ಯಾವನು ಈ ಸ್ವಾಮಿಯನ್ನು ಪೂಜಿಸುವನೊ, ಸೇವಿಸುವನೊ, ಸ್ತೋತ್ರಮಾಡುವನೊ, ಅವನ ಸಕಲ ಕರ್ಮವೂ ಅಕ್ಷಯಫಲದಾಯಕವಾಗುವುದೆಂದು ಹೇಳುವರು.

**ಶಿವಧರ್ಮೇಷು ಯತ್ಪ್ರೋಕ್ತಂ ಫಲಂ ಪೂರ್ವಂ ಮಯಾ ತವ ।**
**ತಾದೃಶಂ ಲಭತೇ ಮರ್ತ್ಯೋ ವಾಸುದೇವಪ್ರಸಾದತಃ ॥ ೨೫೧ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ**
**ಪ್ರಥಮೇ ಮಾಹೇಶ್ವರಖಂಡೇ ಕೌಮಾರಿಕಾಖಂಡೇ**
**"ವೃದ್ಧವಾಸುದೇವ ಮಾಹಾತ್ಮ್ಯವರ್ಣನಂ–ಐತರೇಯಬ್ರಾಹ್ಮಣ**
**ಚರಿತ್ರವರ್ಣನಂ"ನಾಮ ದ್ವಿಚತ್ವಾರಿಂಶೋಧ್ಯಾಯಃ**

---

೨೫೧. ಪೂರ್ವದಲ್ಲಿ ಶಿವಧರ್ಮಗಳನ್ನು ನಿರೂಪಿಸುವಾಗ ನಿನಗೆ ಯಾವ ಫಲಗಳನ್ನು ಕುರಿತು ಹೇಳಿದೆನೊ, ಅಂತಹ ಫಲಗಳನ್ನೇ ಭಕ್ತನು ವಾಸುದೇವನ ಕೃಪೆಯಿಂದ ಹೊಂದುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಎರಡನೆಯ ಕೌಮಾರಿಕಾಖಂಡದಲ್ಲಿ
"ವೃದ್ಧವಾಸುದೇವ ಮಾಹಾತ್ಮ್ಯವರ್ಣನ– ಐತರೇಯ ಚರಿತ್ರವರ್ಣನ"ವೆಂಬ
ನಲವತ್ತೆರಡನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ತ್ರಿಚತ್ವಾರಿಂಶೋಽಧ್ಯಾಯಃ

### ಭಟ್ಟಾದಿತ್ಯ ಮಾಹಾತ್ಮ್ಯವರ್ಣನಂ

ಶ್ರೀ ನಾರದ ಉವಾಚ :—

**ತತೋಽಹಂ ಪಾರ್ಥ ಭೂಯೋಽಪಿ ಜನಾನುಗ್ರಹಕಾಮ್ಯಯಾ ।**
**ಪ್ರತ್ಯಕ್ಷದೇವಂ ಮಾರ್ತಾಂಡಮತ್ರಾನೇತುಮಿಯೇಷ ಹ ॥ ೧ ॥**
**ಸರ್ವೇಷಾಂ ಪ್ರಾಣಿನಾಂ ಯಸ್ಮಾದುಡುಪ್ಲೋ ಭಗವಾನ್ರವಿಃ ।**
**ಇಹಾಮುತ್ರ ಚ ಕೌಂತೇಯ ವಿಶ್ವೋದ್ಧಾರೀ ರವಿರ್ಮತಃ ॥ ೨ ॥**
**ಯೇ ಸ್ಮರಂತಿ ರವಿಂ ಭಕ್ತ್ಯಾ ಕೀರ್ತಯಂತಿ ಚ ಯೇ ನರಾಃ ।**
**ಪೂಜಯಂತಿ ಚ ಯೇ ನಿತ್ಯಂ ಕೃತಾರ್ಥಾಸ್ತೇ ನ ಸಂಶಯಃ ॥ ೩ ॥**
**ಸೂರ್ಯಭಕ್ತಿಪರಾ ಯೇ ಚ ನಿತ್ಯಂ ತದ್ಗತಮಾನಸಾಃ ।**
**ಯೇ ಸ್ಮರಂತಿ ಸದಾ ಸೂರ್ಯಂ ನತೇ ದುಃಖಸ್ಯ ಭಾಜನಂ ॥ ೪ ॥**
**ಭವನಾನಿ ಮನೋಜ್ಞಾನಿ ವಿವಿಧಾಭರಣಾಃ ಸ್ತ್ರಿಯಃ ।**
**ಧನಂ ಚಾದೃಷ್ಟಪರ್ಯಂತಂ ಸೂರ್ಯಪೂಜಾವಿಧೇಃ ಫಲಂ ॥ ೫ ॥**

---

### ಕನ್ನಡದ ಅನುವಾದ

#### ಭಟ್ಟಾದಿತ್ಯ ಮಾಹಾತ್ಮ್ಯವರ್ಣನ

೧. ನಾರದರು ಹೇಳುತ್ತಾರೆ:—ಎಲೈ ಅರ್ಜುನನೆ! ಬಳಿಕ ನಾನು ಜನರಿಗೆ ಅನುಗ್ರಹವನ್ನು ಮಾಡುವ ಅಭಿಲಾಷೆಯಿಂದ ಪ್ರತ್ಯಕ್ಷದೈವವಾದ ಸೂರ್ಯನನ್ನೂ ಕೂಡ ಇಲ್ಲಿ ಸ್ಥಾಪಿಸಲು ಬಯಸಿದೆನು.

೨. ಅಯ್ಯಾ ಕುಂತೀಕುಮಾರನೆ! ಸಕಲ ಜೀವರಿಗೂ ಸಂಸಾರಸಾಗರದಿಂದ ಕಡೆಹಾಯಿಸುವವನೇ ಭಗವಂತನಾದ ಸೂರ್ಯದೇವನು. ಇಲ್ಲಿಯೂ, ಲೋಕಾಂತರಗಳಲ್ಲಿಯೂ ಸಕಲರನ್ನೂ ಉದ್ಧರಿಸುವನೆಂದು ಬಲ್ಲವರು ಹೇಳುವರು.

೩. ಸೂರ್ಯದೇವನನ್ನು ಯಾರು ಭಕ್ತಿಯಿಂದ ಸ್ಮರಿಸುವರೊ, ಯಾರು ನಾಮಸಂಕೀರ್ತನೆಯನ್ನು ಮಾಡುವರೊ, ಯಾರು ನಿತ್ಯವೂ ಪೂಜಿಸುವರೊ, ಅವರು ನಿಸ್ಸಂದೇಹವಾಗಿಯೂ ಕೃತಾರ್ಥರಾಗುವರು.

೪. ಯಾರು ಸರ್ವಕಾಲದಲ್ಲಿಯೂ ಸೂರ್ಯಭಕ್ತರಾಗಿರುವರೊ, ಯಾರು ಆತನಲ್ಲಿಯೇ ಮನಸ್ಸನ್ನಿಟ್ಟಿರುವರೊ, ಯಾರು ಆತನ ನಾಮುಗಳನ್ನು ನಿತ್ಯವೂ ಸ್ಮರಿಸುವರೊ, ಅವರು ಎಂದಿಗೂ ದುಃಖಗಳನ್ನನುಭವಿಸುವುದಿಲ್ಲ.

೫. ಸೂರ್ಯಪೂಜೆಯ ಫಲವಾಗಿ ಮನೋಹರಗಳಾದ ಭವನಗಳನ್ನೂ, ವಿಧವಿಧಗಳಾದ ಆಭರಣಗಳನ್ನೂ, ಉತ್ತಮ ಸ್ತ್ರೀಯರ ಸಹವಾಸವನ್ನೂ, ಅನಿರೀಕ್ಷಿತವಾಗಿ ಅಪಾರವಾದ ಧನವನ್ನೂ ಜನರು ಹೊಂದುವರು.

**ದುರ್ಲಭಾ ಭಕ್ತಿಃ ಸೂರ್ಯೇ ವಾ ದುರ್ಲಭಂ ತಸ್ಯ ಚಾರ್ಚನಂ ।**
**ದಾನಂ ಚ ದುರ್ಲಭಂ ತಸ್ಮೈ ತತೋ ಹೋಮಶ್ಚ ದುರ್ಲಭಃ ॥ ೬ ॥**
**ನಮಸ್ಕಾರಾದಿ ಸಂಯುಕ್ತಂ ರವಿರಿತ್ಯಕ್ಷರದ್ವಯಂ ।**
**ಜಿಹ್ವಾಗ್ರೇ ವರ್ತತೇ ಯಸ್ಯ ಸಫಲಂ ತಸ್ಯ ಜೀವಿತಂ ॥ ೭ ॥**
**ಇತ್ಯಹಂ ಹೃದಿ ಸಂಚಿಂತ್ಯ ಮಾಹಾತ್ಮ್ಯಂ ರವಿಜಂ ಮಹತ್ ।**
**ಪೂರ್ಣಂ ವರ್ಷಶತಂ ಸಾರ್ಥ ರವಿಂ ಭಕ್ತ್ಯಾ ಹ್ಯತೋಷಯಂ ॥ ೮ ॥**
**ಜಪೇನ ಸುವಿಶುದ್ಧೇನ ಛಂದಸಾಂ ವಾಯುಭೋಜನಃ ।**
**ತತಃ ಖಾದ್ದ್ವಿತೀಯಾಂ ಮೂರ್ತಿಂ ಕೃತ್ವಾ ಯೋಗಬಲಾದ್ವಿಭುಃ ॥ ೯ ॥**
**ತೇಜಸಾ ದುರ್ದೃಶೋ ಭಾಸ್ವಾನ್ಪ್ರತ್ಯಕ್ಷಃ ಸಮಜಾಯತ ॥ ೧೦ ॥**
**ತಮಹಂ ಪ್ರಾಂಜಲಿರ್ಭೂತ್ವಾ ನಮಸ್ಕೃತ್ಯ ರವಿಂ ಪ್ರಭುಂ ।**
**ಸಾಮಭಿರ್ವಿವಿಧೈರ್ದೇವಂ ಪರ್ಯತೋಷಯಮೀಶ್ವರಂ ॥ ೧೧ ॥**
**ತುಷ್ಟೋ ಮಾಮಾಹ ವರದೋ ದೇವರ್ಷೇ ಸುಚಿರಂ ತ್ವಯಾ ।**
**ತಪಸಾರಾಧಿತೋಽಸ್ಮೀತಿ ವರಂ ವೃಣು ಯಥೇಪ್ಸಿತಂ ॥ ೧೨ ॥**

---

೬. ಸೂರ್ಯನಲ್ಲಿ ಭಕ್ತಿಯುಂಟಾಗುವುದೇ ದುರ್ಲಭವು. ಅದಕ್ಕಿಂತಲೂ ಆತನ ಪೂಜೆಯು ಲಭಿಸುವುದು ಕಷ್ಟವು. ಅದಕ್ಕಿಂತಲೂ ಆತನಿಗೆ ದಾನವು ದುರ್ಲಭವು. ಅದಕ್ಕೂ ಕೂಡ ಹೋಮವು ದುರ್ಲಭವಾಗಿರುವುದು.

೭. ನಮಸ್ಕಾರಾದಿಗಳಿಂದ ಕೂಡಿದ "ರವಿ" ಎಂಬ ಎರಡು ಅಕ್ಷರಗಳು ಯಾವನ ನಾಲಿಗೆಯ ಕೊನೆಯಲ್ಲಿ ನಲಿದಾಡುತ್ತಿರುವುವೊ, ಅವನ ಜನ್ಮವೇ ಸಾರ್ಥಕವೆಂದು ತಿಳಿಯಬೇಕು.

೮. ಇಂತು ನಾನು ಯೋಚಿಸಿ ಸೂರ್ಯನ ಅಪಾರವಾದ ಮಾಹಾತ್ಮ್ಯೆಯನ್ನು ತಿಳಿದು, ವಾಯುಭಕ್ಷಕನಾಗಿ, ಪರಿಶುದ್ಧಗಳಾದ ವೇದಮಂತ್ರಗಳ ಜಪಸಹಿತವಾಗಿ ಒಂದು ನೂರು ವರ್ಷಗಳ ಕಾಲ ತಪಸ್ಸನ್ನು ಮಾಡಿ ನನ್ನ ಭಕ್ತಿಯಿಂದ ಸೂರ್ಯದೇವನನ್ನು ಸಂತೋಷಗೊಳಿಸಿದೆನು.

೯–೧೧. ಆಗ ಸರ್ವಶಕ್ತನಾದ ಸೂರ್ಯದೇವನು ತನ್ನ ಯೋಗಬಲದಿಂದ ಎರಡನೆಯ ರೂಪವನ್ನು ಸ್ವೀಕರಿಸಿ, ಸಹಿಸಲಸಾಧ್ಯವಾದ ತೇಜಸ್ಸಿನಿಂದ ಕೂಡಿದವನಾಗಿ ನನ್ನ ಮುಂದೆ ಪ್ರತ್ಯಕ್ಷನಾದನು. ಲೋಕನಾಥನೂ, ದೇವೋತ್ತಮನೂ, ಸರ್ವಶಕ್ತನೂ ಆದ ಸೂರ್ಯನನ್ನು ಕೈಮುಗಿದು ನಮಸ್ಕರಿಸಿ ಬಹುವಿಧಗಳಾದ ಸಾಮವೇದಮಂತ್ರಗಳಿಂದ ಆತನನ್ನು ಪ್ರಸನ್ನಗೊಳಿಸಿದೆನು.

೧೨. ಆಗ ಸೂರ್ಯನು ನನ್ನಲ್ಲಿ ಸಂತೋಷಗೊಂಡು "ಎಲೈ ದೇವರ್ಷಿಯೆ ! ಬಹುಕಾಲ ನಿನ್ನಿಂದ ಪೂಜೆಯನ್ನು ಕೈಕೊಂಡಿರುವೆನು. ಆದುದರಿಂದ ನಿನಗೆ ಇಷ್ಟವಾದ ವರವನ್ನು ಕೇಳುವವನಾಗು" ಎಂದು ವರವನ್ನು ಕೊಟ್ಟನು.

ಇತ್ಯುಕ್ತೋಽಹಂ ಲೋಕನಾಥಂ ಪ್ರಾಂಜಲಿಃ ಪ್ರಾಸ್ತುವಂ ವಚಃ ।
ಯದಿ ತುಷ್ಟೋ ಭವಾನ್ಮಹ್ಯಂ ಯದಿ ದೇಯೋ ವರೋ ಮಮ ॥ ೧೩ ॥
ತತಸ್ತೇ ಕಾಮರೂಪೇ ಯಾ ಕಲಾ ನಾಥ ಪ್ರವರ್ತತೇ ।
ರಾಜವರ್ಧನರಾಜ್ಞಾ ಯಾರಾಧಿತಾ ಚ ಜನೈಃ ಪುರಾ ॥ ೧೪ ॥
ತಯಾ ಚ ಕಲಯಾ ಭಾನೋ ಸದಾತ್ರ ಸ್ಥಾತುಮರ್ಹಸಿ ।
ತತಸ್ತಥೇತಿ ದೇವೇನ ಪ್ರೋಕ್ತೇ ತುಷ್ಟೇನ ಭಾರತ ॥ ೧೫ ॥
ಅಸ್ಥಾಪಯಮಹಂ ಸೂರ್ಯಂ ಭಟ್ಟಾದಿತ್ಯಾಭಿದಾನಕಂ ।
ಭಟ್ಟೇನ ಸ್ಥಾಪಿತಂ ಯಸ್ಮಾನ್ಮಯಾ ತಸ್ಮಾದ್ರವಿರ್ಜಗೌ ॥ ೧೬ ॥
ತತಃ ಸಂಪೂಜ್ಯ ತಂ ಪುಷ್ಪೈಃ ಕೃತಾವೇಶಮಹಂ ರವಿಂ ।
ಭಕ್ತ್ಯುದ್ರೇಕಾಪ್ಲುತಾಂಗೋಽಥ ಸ್ತುತಿಮೇತಾಮಥಾಚರಂ ।
ಸರ್ವವೇದರಹಸ್ಯೈಶ್ಚ ನಾಮಭಿಶ್ಚ ಶತಾಷ್ಟಭಿಃ ॥ ೧೭ ॥
ಸಪ್ತ ಸಪ್ತಿರಚಿಂತ್ಯಾತ್ಮಾ ಮಹಾಕಾರುಣಿಕೋತ್ತಮಃ ।
ಸಂಜೀವನೋ ಜಯೋ ಜೀವೋ ಜೀವನಾಥೋ ಜಗತ್ಪತಿಃ ॥ ೧೮ ॥

---

೧೩–೧೪. ಈ ನುಡಿಗಳನ್ನು ಕೇಳಿ ಲೋಕನಾಥನಿಗೆ ಕೈಮುಗಿದು ನಾನು ಇಂತೆಂದೆನು:—"ನನ್ನಲ್ಲಿ ನೀನು ಸಂತುಷ್ಟನಾಗಿದ್ದರೆ, ನನಗೆ ವರವನ್ನು ಕೊಡುವವನಾಗಿದ್ದರೆ, ಕಾಮರೂಪದೇಶದಲ್ಲಿ ಯಾವ ನಿನ್ನ ಕಲೆಯು ನೆಲಸಿರುವುದೊ, ಯಾವುದು ಮುನ್ನು ರಾಜವರ್ಧನ ರಾಜನಿಂದಲೂ ಅವನ ಪ್ರಜೆಗಳಿಂದಲೂ ಪೂಜೆಗೊಳ್ಳುತ್ತಿದ್ದಿತೊ ಆ ಕಲೆಯಿಂದಲೇ ಈ ಕ್ಷೇತ್ರದಲ್ಲಿ ನನಗೋಸ್ಕರ ಸನ್ನಿಹಿತನಾಗಿರು."

೧೫–೧೬. ಎಲೈ ಪಾರ್ಥನೆ! ದೇವನು ಇದಕ್ಕೆ ಸಂತೋಷದಿಂದ ಒಡಂಬಡಲು ನಾನಿಲ್ಲಿ ಸೂರ್ಯಬಿಂಬವನ್ನು ಸ್ಥಾಪಿಸಿದೆನು. ಭಟ್ಟನಾದ ನನ್ನಿಂದ ಸ್ಥಾಪಿಸಲ್ಪಟ್ಟ ಈ ಮೂರ್ತಿಗೆ ಭಟ್ಟಾದಿತ್ಯನೆಂದೇ ನಾಮವುಂಟಾಗಲೆಂದು ಸೂರ್ಯನೇ ಅಪ್ಪಣೆ ಮಾಡಿದನು.

೧೭. ಬಳಿಕ ತನ್ನ ಕಲೆಯಿಂದ ನೆಲಸಿದ ಸೂರ್ಯನನ್ನು ಪುಷ್ಪಗಳಿಂದ ಪೂಜಿಸಿ ಭಕ್ತಿಯ ಉದ್ರೇಕದಿಂದ ಉಬ್ಬಿದಮೈಯುಳ್ಳವನಾಗಿ ಸಕಲ ವೇದಗಳ ರಹಸ್ಯಾರ್ಥಗಳನ್ನೊಳಕೊಂಡ ನೂರೆಂಟು ನಾಮಗಳುಳ್ಳ ಸ್ತೋತ್ರವನ್ನು ಮಾಡಿದೆನು.

೧೮–೩೦. ಓಂ ಸಪ್ತಸಪ್ತಯೇ ನಮಃ, ಅಚಿಂತ್ಯಾತ್ಮನೇ ನಮಃ, ಮಹಾಕಾರುಣಿಕೋತ್ತಮಾಯ ನಮಃ, ಸಂಜೀವನಾಯ ನಮಃ, ಜಯಾಯ ನಮಃ, ಜೀವಾಯ ನಮಃ, ಜೀವನಾಥಾಯ ನಮಃ, ಜಗತ್ಪತಯೇ ನಮಃ, ಕಾಲಾಶ್ರಯಾಯ ನಮಃ, ಕಾಲಕರ್ತ್ರೇ ನಮಃ, ಮಹಾಯೋಗಿನೇ ನಮಃ, ಮಹಾ

ಕಾಲಾಶ್ರಯಃ ಕಾಲಕರ್ತಾ ಮಹಾಯೋಗೀ ಮಹಾಮತಿಃ ॥ ೧೯ ॥
ಭೂತಾಂತಕರಣೋ ದೇವಃ ಕಮಲಾನಂದನಂದನಃ ।
ಸಹಸ್ರಪಾಚ್ಚ ವರದೋ ದಿವ್ಯಕುಂಡಲಮಂಡಿತಃ ॥ ೨೦ ॥
ಧರ್ಮಪ್ರಿಯೋಽಚಿತಾತ್ಮಾ ಚ ಸವಿತಾ ವಾಯುವಾಹನಃ ।
ಆದಿತ್ಯೋಽಕ್ರೋಧನಃ ಸೂರ್ಯೋ ರಶ್ಮಿಮಾಲೀ ವಿಭಾವಸುಃ ॥ ೨೧ ॥
ದಿನಕೃದ್ದಿನಹೃನ್ಮೌನೀ ಸುರಥೋ ರಥಿನಾಂ ವರಃ ।
ರಾಜ್ಞೀಪತಿಃ ಸ್ವರ್ಣರೇತಾಃ ಪೂಷಾ ತ್ವಷ್ಟಾ ದಿವಾಕರಃ ॥ ೨೨ ॥
ಆಕಾಶತಿಲಕೋ ಧಾತಾ ಸಂವಿಭಾಗೀ ಮನೋಹರಃ ।
ಪ್ರಾಜ್ಞಃ ಪ್ರಜಾಪತಿರ್ಧನ್ಯೋ ವಿಷ್ಣುಃ ಶ್ರೀಶೋ ಭಿಷಗ್ವರಃ ॥ ೨೩ ॥
ಆಲೋಕಕೃಲ್ಲೋಕನಾಥೋ ಲೋಕಪಾಲನಮಸ್ಕೃತಃ ।
ವಿದಿತಾಶಯಶ್ಚ ಸುನಯೋ ಮಹಾತ್ಮಾ ಭಕ್ತವತ್ಸಲಃ ॥ ೨೪ ॥
ಕೀರ್ತಿಕೀರ್ತಿಕರೋ ನಿತ್ಯೋ ರೋಚಿಷ್ಣುಃ ಕಲ್ಮಷಾಪಹಃ ।
ಜಿತಾನಂದೋ ಮಹಾವೀರ್ಯೋ ಹಂಸಃ ಸಂಹಾರಕಾರಕಃ ॥ ೨೫ ॥

---

ಮತಯೇ ನಮಃ, ಭೂತಾಂತಕರಣಾಯ ನಮಃ, ದೇವಾಯ ನಮಃ, ಕಮಲಾನಂದನಂದನಾಯ ನಮಃ, ಸಹಸ್ರಪಾದೇ ನಮಃ, ವರದಾಯ ನಮಃ, ದಿವ್ಯಕುಂಡಲಮಂಡಿತಾಯ ನಮಃ, ಧರ್ಮಪ್ರಿಯಾಯ ನಮಃ, ಉಚಿತಾತ್ಮನೇ ನಮಃ, ಸವಿತ್ರೇ ನಮಃ, ವಾಯುವಾಹನಾಯ ನಮಃ, ಆದಿತ್ಯಾಯ ನಮಃ, ಅಕ್ರೋಧನಾಯ ನಮಃ, ಸೂರ್ಯಾಯ ನಮಃ, ರಶ್ಮಿಮಾಲಿನೇ ನಮಃ, ವಿಭಾವಸವೇ ನಮಃ, ದಿನಕೃತೇ ನಮಃ, ದಿನಹೃತೇ ನಮಃ, ಮೌನಿನೇ ನಮಃ, ಸುರಥಾಯ ನಮಃ, ರಥಿನಾಂವರಾಯ ನಮಃ, ರಾಜ್ಞೀಪತಯೇ ನಮಃ, ಸ್ವರ್ಣರೇತಸೇ ನಮಃ, ಪೂಷ್ಣೇ ನಮಃ, ತ್ವಷ್ಟ್ರೇ ನಮಃ, ದಿವಾಕರಾಯ ನಮಃ, ಆಕಾಶತಿಲಕಾಯ ನಮಃ, ಧಾತ್ರೇ ನಮಃ, ಸಂವಿಭಾಗಿನೇ ನಮಃ, ಮನೋಹರಾಯ ನಮಃ, ಪ್ರಾಜ್ಞಾಯ ನಮಃ, ಪ್ರಜಾಪತಯೇ ನಮಃ, ಧನ್ಯಾಯ ನಮಃ, ವಿಷ್ಣವೇ ನಮಃ, ಶ್ರೀಶಾಯ ನಮಃ, ಭಿಷಗ್ವರಾಯ ನಮಃ, ಆಲೋಕಕೃತೇ ನಮಃ, ಲೋಕನಾಥಾಯ ನಮಃ, ಲೋಕಪಾಲನಮಸ್ಕೃತಾಯ ನಮಃ, ವಿದಿತಾಶಯಾಯ ನಮಃ, ಸುನಯಾಯ ನಮಃ, ಮಹಾತ್ಮನೇ ನಮಃ, ಭಕ್ತವತ್ಸಲಾಯ ನಮಃ, ಕೀರ್ತಿಕೀರ್ತಿಕರಾಯ ನಮಃ, ನಿತ್ಯಾಯ ನಮಃ, ರೋಚಿಷ್ಣವೇ ನಮಃ, ಕಲ್ಮಷಾಪಹಾಯ ನಮಃ, ಜಿತಾನಂದಾಯ ನಮಃ, ಮಹಾವೀರ್ಯಾಯ ನಮಃ, ಹಂಸಾಯ ನಮಃ, ಸಂಹಾರಕಾರಕಾಯ ನಮಃ, ಕೃತಕೃತ್ಯಾಯ ನಮಃ, ಸುಸಂಗಾಯ ನಮಃ, ಬಹುಜ್ಞಾಯ ನಮಃ, ವಚಸಾಂಪತಯೇ ನಮಃ, ವಿಶ್ವಪೂಜ್ಯಾಯ ನಮಃ,

**ಕೃತಕೃತ್ಯಃ ಸುಸಂಗಶ್ಚ ಬಹುಜ್ಞೋ ವಚಸಾಂಪತಿಃ ।**
**ವಿಶ್ವಪೂಜ್ಯೋ ಮೃತ್ಯುಹಾರೀ ಘೃಣೀ ಧರ್ಮಸ್ಯ ಕಾರಣಂ ॥ ೨೬ ॥**
**ಪ್ರಣತಾರ್ತಿಹರೋಽರೋಗ ಆಯುಷ್ಮಾನ್ಸುಖದಃ ಸುಖೀ ।**
**ಮಂಗಲಂ ಪುಂಡರೀಕಾಕ್ಷೋ ವ್ರತೀ ವ್ರತಫಲಪ್ರದಃ ॥ ೨೭ ॥**
**ಶುಚಿಃ ಪೂರ್ಣೋ ಮೋಕ್ಷಮಾರ್ಗದಾತಾ ಭೋಕ್ತಾ ಮಹೇಶ್ವರಃ ।**
**ಧನ್ವಂತರಿಃ ಪ್ರಿಯಾಭಾಷೀ ಧನುರ್ವೇದವಿದೇಕರಾಟ್ ॥ ೨೮ ॥**
**ಜಗತ್ಪಿತಾ ಧೂಮಕೇತುರ್ವಿಧೂತೋ ಧ್ವಾಂತಹಾ ಗುರುಃ ।**
**ಗೋಪತಿಶ್ಚ ಕೃತಾತಿಥ್ಯಃ ಶುಭಾಚಾರಃ ಶುಚಿಪ್ರಿಯಃ ॥ ೨೯ ॥**
**ಸಾಮಪ್ರಿಯೋ ಲೋಕಬಂಧುರ್ನೈಕರೂಪೋ ಯುಗಾದಿಕೃತ್ ।**
**ಧರ್ಮಸೇತುರ್ಲೋಕಸಾಕ್ಷೀ ಖೇಟಕಃ ಸರ್ವದಃ ಪ್ರಭುಃ ॥ ೩೦ ॥**
**ಮಯೈವಂ ಸಂಸ್ತುತೋ ಭಾನುರ್ನಾಮ್ನಾಮಷ್ಟಶತೇನ ಚ ।**
**ತುಷ್ಯತಾಂ ಸರ್ವಲೋಕಾನಾಂ ಸರ್ವಲೋಕಪ್ರಿಯೋ ವಿಭುಃ ॥ ೩೧ ॥**
**ಇತ್ಯೇವಂ ಸಂಸ್ತವಾತ್ಪ್ರೀತೋ ಭಾಸ್ಕರೋ ಮಾಮವೋಚತ ।**
**ಸದಾತ್ರ ಕಲಯಾ ಸ್ಥಾಸ್ಯೇ ದೇವರ್ಷೇ ತ್ವತ್ಪ್ರಿಯೇಪ್ಸಯಾ ॥ ೩೨ ॥**

---

ಮೃತ್ಯುಹಾರಿಣೇ ನಮಃ, ಘೃಣಿನೇ ನಮಃ, ಧರ್ಮಕಾರಣಾಯ ನಮಃ, ಪ್ರಣತಾರ್ತಿಹರಾಯ ನಮಃ, ಅರೋಗಾಯ ನಮಃ, ಆಯುಷ್ಮತೇ ನಮಃ, ಸುಖದಾಯ ನಮಃ, ಸುಖಿನೇ ನಮಃ, ಮಂಗಲಾಯ ನಮಃ, ಪುಂಡರೀ ಕಾಕ್ಷಾಯ ನಮಃ, ವ್ರತಿನೇ ನಮಃ, ವ್ರತಫಲಪ್ರದಾಯ ನಮಃ, ಶುಚಯೇ ನಮಃ, ಪೂರ್ಣಾಯ ನಮಃ, ಮೋಕ್ಷಮಾರ್ಗದಾತ್ರೇ ನಮಃ, ಭೋಕ್ತ್ರೇ ನಮಃ, ಮಹೇಶ್ವರಾಯ ನಮಃ, ಧನ್ವಂತರಯೇ ನಮಃ, ಪ್ರಿಯಾಭಾಷಿಣೇ ನಮಃ, ಧನುರ್ವೇದವಿದೇ ನಮಃ, ಏಕರಾಜೇ ನಮಃ, ಜಗತ್ಪಿತ್ರೇ ನಮಃ, ಧೂಮಕೇತವೇ ನಮಃ, ವಿಧೂತಾಯ ನಮಃ, ಧ್ವಾಂತಹಾಯ ನಮಃ, ಗುರವೇ ನಮಃ, ಗೋಪತಯೇ ನಮಃ, ಕೃತಾತಿಥ್ಯಾಯ ನಮಃ, ಶುಭಾಚಾ ರಾಯ ನಮಃ, ಶುಚಿಪ್ರಿಯಾಯ ನಮಃ, ಸಾಮಪ್ರಿಯಾಯ ನಮಃ, ಲೋಕ ಬಂಧವೇ ನಮಃ, ನೈಕರೂಪಾಯ ನಮಃ, ಯುಗಾದಿಕೃತೇ ನಮಃ, ಧರ್ಮ ಸೇತವೇ ನಮಃ, ಲೋಕಸಾಕ್ಷಿಣೇ ನಮಃ, ಖೇಟಕಾಯ ನಮಃ, ಸರ್ವದಾಯ ನಮಃ, ಪ್ರಭವೇ ನಮಃ (೧೦೮)

೩೧–೩೨. ಇಂತು ನನ್ನಿಂದ ಸ್ತೋತ್ರಮಾಡಿಸಿಕೊಂಡು ನೂರೆಂಟು ನಾಮ ಗಳಿಂದ ಸಕಲ ಲೋಕಗಳೂ, ಸಂತೋಷಗೊಳ್ಳುತ್ತಿರಲು, ಸರ್ವಲೋಕ ಪ್ರಿಯನೂ, ವಿಶ್ವವ್ಯಾಪಿಯೂ ಆದ ಭಾಸ್ಕರನು ಸುಪ್ರೀತನಾಗಿ ನನ್ನನ್ನು ಕುರಿತು ಇಂತೆಂದನು. "ಎಲೈ ದೇವರ್ಷಿಯಾದ ನಾರದನೆ! ನಿನಗೆ ಪ್ರಿಯವನ್ನೆಸಗುವನಾಗಿ

**ಯೋ ಮಾಮತ್ರ ಮಹಾಭಕ್ತ್ಯಾ ಭಟ್ಟಾದಿತ್ಯಂ ಪ್ರಪೂಜಯೇತ್ ।**
**ಸಹಸ್ರಶಃ ಕಾಮರೂಪೇ ಸಂಪೂಜ್ಯಾಪ್ನೋತಿ ತತ್ಫಲಂ ॥ ೩೩ ॥**
**ಮಾಮುದ್ದಿಶ್ಯ ಚ ಯೋ ವಿಪ್ರಃ ಸ್ವಲ್ಪಂ ವಾ ಯದಿ ವಾ ಬಹು ।**
**ದಾಸ್ಯತೇಽತ್ರಾಕ್ಷಯಂ ತಚ್ಚ ಗ್ರಹೀಷ್ಯೇ ಕರಜಂ ಯಥಾ ॥ ೩೪ ॥**
**ರಕ್ತೋತ್ಪಲೈಶ್ಚ ಕಲ್ಹಾರೈಃ ಕೇಸರೈಃ ಕರವೀರಕೈಃ ।**
**ಶತತ್ರಯೈರ್ಮಹಾಪದ್ಮೈ ರವಿವಾರೇಣ ಮಾನವಃ ॥ ೩೫ ॥**
**ಸಪ್ತಮ್ಯಾಮಥ ಷಷ್ಠ್ಯಾಂ ವಾ ಯೋಽರ್ಚಯಿಷ್ಯಂತಿ ಮಾಮಿಹ ।**
**ಯಾನ್ಯಾನ್ಪ್ರಾರ್ಥಯತೇ ಕಾಮಾಂಸ್ತಾನ್ಪ್ರಾಪ್ಸ್ಯತಿ ನಿಶ್ಚಿತಂ ॥ ೩೬ ॥**
**ದರ್ಶನಾನ್ಮಮ ಭಕ್ತ್ಯಾ ಚ ನಾಶೋ ವ್ಯಾಧಿದರಿದ್ರಯೋಃ ।**
**ಪ್ರಣಾಮಾತ್ಸ್ವರ್ಗಮಾಪ್ನೋತಿ ಶ್ರುತ್ವಾ ಮೋಕ್ಷಂ ಚ ನಿತ್ಯಶಃ ॥ ೩೭ ॥**
**ಅಭಕ್ತಿಂ ಯಶ್ಚ ಕರ್ತಾ ಮೇ ಸ ಗಚ್ಛೇನ್ನಿಶ್ಚಿತಂ ಕ್ಷಯಂ ।**
**ಅಷ್ಟೋತ್ತರಶತಂ ನಾಮ ಮಮಾಗ್ರೇ ಯತ್ತ್ವಯೇರಿತಂ ॥ ೩೮ ॥**

---

ನಾನು ಯಾವಾಗಲೂ ಇಲ್ಲಿ ಕಲೆಯಿಂದ ನೆಲಸಿರುವೆನು. ಯಾವನು ವಿಶೇಷ ಭಕ್ತಿಯಿಂದ ಇಲ್ಲಿ ಭಟ್ಟಾದಿತ್ಯಮೂರ್ತಿಯನ್ನು ಪೂಜಿಸುವನೊ, ಆತನಿಗೆ ಕಾಮ ರೂಪದಲ್ಲಿ ನನಗೆ ಮಾಡಿದ ಒಂದು ಸಾವಿರ ಪೂಜೆಗಳ ಫಲವು ಲಭಿಸುವುದು.

೩೪. ಬ್ರಾಹ್ಮಣನಾದವನು ನನ್ನನ್ನು ಕುರಿತು ಇಲ್ಲಿ ನಿವೇದಿಸುವ ಸ್ವಲ್ಪ ವಾಗಲಿ, ಹೆಚ್ಚಾಗಲಿ ಇರುವುದನ್ನೆಲ್ಲ ಅಕ್ಷಯಗೊಳಿಸಿ ನಾನು ಭೂಲೋಕದಲ್ಲಿನ ಜಲಗಳನ್ನೆಲ್ಲ ಸೆಳೆದುಕೊಳ್ಳುವಂತೆ ಅವುಗಳನ್ನು ಸ್ವೀಕರಿಸುವೆನು.

೩೫–೩೭. ಕೆಂದಾವರೆಗಳು, ಕಲ್ಹಾರಗಳು, ಕೇಸರ ಪುಷ್ಪಗಳು, ಕರವೀರ ಗಳು, ಸಾವಿರದೆಲೆಯ ಮಹಾಪದ್ಮಗಳು—ಇವುಗಳಲ್ಲಿ ಯಾವುದನ್ನಾದರೂ ಮುನ್ನೂರು ಪುಷ್ಪಗಳನ್ನು ತಂದು ವಿಶೇಷತಃ ಷಷ್ಠಿ ಅಥವ ಸಪ್ತಮಿಯಿಂದ ಕೂಡಿದ ಭಾನುವಾರದ ದಿವಸ ಇಲ್ಲಿ ನನ್ನನ್ನು ಯಾವ ಮನುಷ್ಯನು ಪೂಜಿ ಸುವನೊ, ಅವನು ಯಾವ ಯಾವ ವರಗಳನ್ನು ಕೇಳಿಕೊಂಡರೂ ಅವುಗಳೆಲ್ಲವೂ ಸಿದ್ಧಿಸುವುವೆಂಬುದು ನಿಶ್ಚಯವು. ನನ್ನ ದರ್ಶನದಿಂದಲೂ, ಭಕ್ತಿಯಿಂದಲೂ ಭಕ್ತನ ವ್ಯಾಧಿ ದಾರಿದ್ರ್ಯಗಳು ನಾಶವನ್ನು ಹೊಂದುವುವು. ನಮಸ್ಕಾರದಿಂದ ಮಾನವನು ಸ್ವರ್ಗವನ್ನು ಹೊಂದುವನು. ನಿತ್ಯವೂ ನನ್ನ ವಿಷಯವನ್ನು ಕೇಳುವ ವನಿಗೂ ಸಹ ಮೋಕ್ಷವು ಲಭಿಸುವುದು.

೩೮–೪೩. ನನ್ನಲ್ಲಿ ಯಾವನು ದ್ವೇಷವನ್ನು ಮಾಡುತ್ತಾನೆಯೊ, ಅವನು ನಿಶ್ಚಯವಾಗಿಯೂ ನಾಶವನ್ನು ಹೊಂದುವನು. ನನ್ನ ಸನ್ನಿಧಿಯಲ್ಲಿ ನೀನು ನಿರೂಪಿಸಿದ ಅಷ್ಟೋತ್ತರ ಶತನಾಮಗಳನ್ನು ನಿತ್ಯವೂ ತ್ರಿಸಂಧ್ಯೆಗಳಲ್ಲಾಗಲಿ, ದಿನಕ್ಕೊಮ್ಮೆಯಾಗಲಿ ಪಠಿಸುವವನಿಗೆ ಲಭಿಸುವ ಫಲವನ್ನು ಕೇಳು. . ಅಂತಹ

ತ್ರಿಕಾಲಮೇಕಕಾಲಂ ವಾ ಪಠತಃ ಶ್ರುಣು ಯತ್ಫಲಂ ।
ಕೀರ್ತಿಮಾನ್ಸುಭಗೋ ವಿದ್ವಾನ್ಸುಸುಖೀ ಪ್ರಿಯದರ್ಶನಃ ।
ಭವೇದ್ವರ್ಷಶತಾಯುಶ್ಚ ಸರ್ವರೋಗವಿವರ್ಜಿತಃ ॥ ೩೯ ॥
ಯಸ್ತ್ವಿದಂ ಶ್ರುಣುಯಾನ್ನಿತ್ಯಂ ಪಠೇದ್ವಾ ಪ್ರಯತಃ ಶುಚಿಃ ॥ ೪೦ ॥
ಅಕ್ಷಯಂ ಸ್ವಲ್ಪಮಪ್ಯನ್ನಂ ಭವೇತ್ತಸ್ಯೋಪಸಾಧಿತಂ ।
ವಿಜಯೀ ಚ ಭವೇನ್ನಿತ್ಯಂ ತಥಾ ಜಾತಿಸ್ಮರೋ ಭವೇತ್ ।
ತಸ್ಮಾದೇತತ್ತ್ವಯಾ ಜಾಪ್ಯಂ ಪರಂ ಸ್ವಸ್ತ್ಯಯನಂ ಮಹತ್ ॥ ೪೧ ॥
ತಥಾ ಮಮಾಗ್ರೇ ಕುಂಡಂ ಚ ಕುರು ಸ್ನಾನಾರ್ಥಮುತ್ತಮಂ ॥ ೪೨ ॥
ಕಾಮರೂಪಕಲಾ ಯತ್ರ ತತ್ರ ಕುಂಡಂ ವನೇ ಭವೇತ್ ।
ಏವಂ ದತ್ವಾ ವರಾನ್ಭಾನುಸ್ತತ್ರೈವಾಂತರಧೀಯತ ॥ ೪೩ ॥
ತತೋ ಭಾಸ್ಕರವಾಕ್ಯೇನ ಸಿದ್ಧೇಶಸ್ಯ ಚ ಸಖ್ಯತಃ ।
ವನಮಧ್ಯೇ ಮಯಾ ಕುಂಡಂ ಕೃತಂ ದರ್ಭಶಲಾಕಯಾ ॥ ೪೪ ॥
ಕಾಮರೂಪಭವಂ ಕುಂಡಂ ವೃಕ್ಷಾಸ್ತೇ ಚಾಪಿ ಭಾರತ ।
ಸಂಲೀನಾಸ್ತನ್ಮಹಾಶ್ಚರ್ಯಂ ಮಮ ಜಾಯತ ಚೇತಸಿ ॥ ೪೫ ॥

---

ಭಕ್ತನು, ಕೀರ್ತಿವಂತನೂ, ಐಶ್ವರ್ಯವಂತನೂ, ವಿದ್ವಾಂಸನೂ, ಐಹಿಕ ಆಮುಷ್ಮಿಕ ಸುಖಗಳುಳ್ಳವನೂ, ಸುಂದರರೂಪವುಳ್ಳವನೂ, ನೂರು ವರ್ಷಗಳ ಸಂಪೂರ್ಣಾಯುಸ್ಸುಳ್ಳವನೂ, ಸಕಲ ರೋಗಗಳಿಂದಲೂ ರಹಿತವಾದ ವಜ್ರ ಕಾಯವುಳ್ಳವನೂ ಆಗಿ ಬಾಳುವನು. ಯಾವನು ಇದನ್ನು ನಿತ್ಯವೂ ಶುಚಿರ್ಭೂತ ನಾಗಿ ಪ್ರಯತ್ನಪೂರ್ವಕವಾಗಿ ಕೇಳುವನೊ ಅಥವಾ ಜಪಿಸುವನೊ, ಅವನು ಸಂಪಾದಿಸಿದ ಅನ್ನವು ಸ್ವಲ್ಪವಾದರೂ ಅಕ್ಷಯವಾಗುವುದು. ಆತನು ವಿಜಯ ಶಾಲಿಯೂ, ಪೂರ್ವಜನ್ಮ ಸ್ಮರಣೆಯುಳ್ಳವನೂ ಆಗುವನು. ಆದುದರಿಂದ ಉತ್ತಮವೂ ಶುಭಫಲದಾಯಕವೂ ಮಾಹಾತ್ಮ್ಯಯುಕ್ತವೂ ಆದ ಈ ಸ್ತೋತ್ರ ವನ್ನು ನೀನು ಜಪಿಸು. ಮತ್ತು ನನ್ನ ಸನ್ನಿಧಿಯಲ್ಲಿ ಭಕ್ತರ ಸ್ನಾನಕ್ಕೆ ಉಪಯೋಗ ವಾಗುವಂತೆ ಒಂದು ಕುಂಡವನ್ನು ನಿರ್ಮಿಸು. ವನದಲ್ಲಿರುವ ಆ ಕುಂಡದಲ್ಲಿ ಕಾಮರೂಪ ದೇಶದ ಕಲೆಯು ಇರುವುದು.” ಇಂತು ಸೂರ್ಯಭಗವಾನನು ವರವನ್ನು ದಯೆಪಾಲಿಸಿ ಅಲ್ಲಿಯೇ ಅಂತರ್ಧಾನವನ್ನು ಹೊಂದಿದನು.

೪೪. ಬಳಿಕ ಸೂರ್ಯನ ವಾಕ್ಯವನ್ನನುಸರಿಸಿ ನಾನು ಸಿದ್ಧೇಶ್ವರನಲ್ಲಿನ ಭಕ್ತಿಯಿಂದ ಒಂದು ದರ್ಭೆಯ ಹುಲ್ಲಿನಿಂದಲೇ ವನಮಧ್ಯದಲ್ಲಿ ಕುಂಡವನ್ನು ಸ್ಥಾಪಿಸಿದೆನು.

೪೫-೪೭. ಎಲೈ ಅರ್ಜುನನೆ! ಈ ಕುಂಡವು ಕಾಮರೂಪಭವವಾದುದ ರಿಂದ ಸುತ್ತುಮುತ್ತಿನ ವೃಕ್ಷಗಳೂ ಕೂಡ ಆ ಪ್ರದೇಶದಿಂದ ಬಂದಂತೆಯೇ

ಮಾಘಮಾಸಸ್ಯ ಶುಕ್ಲಾಯಾಂ ಸಪ್ತಮ್ಯಾಂ ಸ್ತ್ರೀ ನರೋಽಥವಾ ।
ಸ್ನಾನಂ ಕುಂಡೇ ಶುಭಂ ಕೃತ್ವಾ ಭಟ್ಟಾದಿತ್ಯಂ ಪ್ರಪಶ್ಯತಿ ॥ ೪೬ ॥
ತಸ್ಯಾನಂತಂ ಭವೇತ್ಪುಣ್ಯಂ ರಥಂ ಯಶ್ಚ ಪ್ರಪೂಜಯೇತ್ ।
ರಥಯಾತ್ರಾಂ ಚ ಕುರುತೇ ಯಸ್ಮಿನ್ಯಸ್ಮಿನ್ನಸೌ ಪಥಿ ।
ಯೇ ಚ ಪಶ್ಯಂತಿ ಲೋಕಾಸ್ತೇ ಧನ್ಯಾಸ್ಸರ್ವೇ ನ ಸಂಶಯಃ ॥ ೪೭ ॥
ಪುತ್ರಧಾನ್ಯಧನೈರ್ಯುಕ್ತಾ ನೀರುಜಸ್ತೇಜಸಾನ್ವಿತಾಃ ।
ಭವಿಷ್ಯಂತಿ ನರಾಸ್ತೇ ಯೇ ಕಾರಯಂತಿ ರಥೋತ್ಸವಂ ॥ ೪೮ ॥
ಗಂಗಾದಿ ಸರ್ವತೀರ್ಥೇಷು ಯತ್ಫಲಂ ಕೀರ್ತಿತಂ ಬುಧೈಃ ।
ಭಟ್ಟಾದಿತ್ಯಸ್ಯ ಕುಂಡೇ ಚ ತತ್ಫಲಂ ಸಪ್ತಮೀದಿನೇ ॥ ೪೯ ॥
ತತ್ರ ಕುಂಡೇ ಚ ಯಃ ಸ್ನಾತ್ವಾ ಸೂರ್ಯಾಯಾರ್ಘ್ಯಂ ಪ್ರಯಚ್ಛತಿ ॥
ಕಪಿಲಾಗೋಶತಸ್ಯಾಸೌ ದತ್ತಸ್ಯ ಫಲಮಶ್ನುತೇ ॥ ೫೦ ॥

ಅರ್ಜುನ ಉವಾಚ :—

ವಾಸುದೇವಾದಯಃ ಸರ್ವೇ ವದಂತ್ಯೇನಂ ಮಹಾಮುನೇ ॥ ೫೧ ॥

---

ಕಾಣತೊಡಗಿದುವು. ಇದನ್ನು ಕಂಡು ನನ್ನ ಮನಸ್ಸಿನಲ್ಲಿ ಮಹತ್ತಾದ ಆಶ್ಚರ್ಯ ವುಂಟಾಯಿತು. ಮಾಘಮಾಸದ ಶುದ್ಧ ಸಪ್ತಮಿಯ ದಿವಸ ಯಾವ ಸ್ತ್ರೀಯ ರಾಗಲಿ, ಪುರುಷರಾಗಲಿ ಈ ಕುಂಡದಲ್ಲಿ ಮಂಗಳಸ್ನಾನವನ್ನು ಮಾಡಿ ಭಟ್ಟಾದಿತ್ಯ ನನ್ನು ಸಂದರ್ಶಿಸುವರೊ, ಅವರಿಗೆ ಅನಂತಪುಣ್ಯವು ಲಭಿಸುವುದು. ಯಾವನು ಸೂರ್ಯರಥವನ್ನು ಪೂಜಿಸುವನೊ, ರಥಯಾತ್ರೆಯನ್ನು ಯಾವ ಯಾವ ಬೀದಿಗಳಲ್ಲಿ ಮಾಡುವಾಗ ಯಾವ ಯಾವ ಜನರು ನೋಡುವರೊ, ಅವರೆಲ್ಲರೂ ಧನ್ಯರೆಂಬುದರಲ್ಲಿ ಸಂಶಯವಿಲ್ಲವು.

೪೮. ಯಾರು ಸೂರ್ಯದೇವನಿಗೆ ರಥೋತ್ಸವವನ್ನು ಮಾಡಿಸುವರೊ, ಆ ಭಕ್ತರು ಪುತ್ರ, ಧಾನ್ಯ, ಧನಗಳನ್ನು ಹೊಂದಿ, ಅರೋಗದೃಢಕಾಯ ರಾಗಿಯೂ, ತೇಜೋವಂತರಾಗಿಯೂ ಇರುತ್ತಾರೆ.

೪೯. ಪ್ರಾಜ್ಞರು ಗಂಗಾದಿ ಸಮಸ್ತ ತೀರ್ಥಗಳಲ್ಲಿಯೂ ಎಷ್ಟು ಫಲ ವುಂಟೆಂದು ಹೇಳುವರೊ, ಈ ಕುಂಡದಲ್ಲಿ ಸಪ್ತಮಿಯ ದಿನದ ಸ್ನಾನದಿಂದಲೇ ಆ ಸಮಸ್ತ ಫಲವೂ ಲಭಿಸುವುದು.

೫೦. ಭಟ್ಟಾದಿತ್ಯಕುಂಡದಲ್ಲಿ ಸ್ನಾನಮಾಡಿ ಯಾವನು ಸೂರ್ಯದೇವನಿಗೆ ಅರ್ಘ್ಯವನ್ನು ಕೊಡುವನೊ, ಅವನು ಒಂದು ನೂರು ಕಪಿಲೆಗೋವುಗಳನ್ನು ದಾನಮಾಡಿದ ಫಲವನ್ನು ಹೊಂದುವನು.

೫೧–೫೨. ಅರ್ಜುನನು ಕೇಳುತ್ತಾನೆ :— "ಎಲೈ ಮುನಿಶ್ರೇಷ್ಠನೆ! ವಾಸುದೇವಾದಿಗಳೆಲ್ಲರೂ "ಸೂರ್ಯನಿಗೆ ಪ್ರಾತಃಕಾಲದಲ್ಲಿ ಅರ್ಘ್ಯವನ್ನು

**ಭಾಸ್ಕರಾರ್ಘ್ಯಂ ವಿನಾ ಪ್ರಾತಃ ಕೃತಂ ಸರ್ವಂ ಚ ನಿಷ್ಫಲಂ ।**
**ತಸ್ಯಾಹಂ ಶ್ರೋತುಮಿಚ್ಛಾಮಿ ವಿಧಿಂ ವಿಧಿವದಾಂ ವರ ॥ ೫೨ ॥**

ನಾರದ ಉವಾಚ:—

**ಯಥಾ ಬ್ರಹ್ಮಾದಯೋ ದೇವಾ ಯಚ್ಛಂತ್ಯರ್ಘ್ಯಂ ಮಹಾತ್ಮನೇ ।**
**ಭಾಸ್ಕರಾಯ ಶೃಣು ತ್ವಂ ತಂ ವಿಧಿಂ ಸರ್ವಾಘನಾಶನಂ ॥ ೫೩ ॥**

**ಪ್ರಥಮಂ ತಾವತ್ಪ್ರತ್ಯೂಷೇ ಉದಿತೇ ಸೂರ್ಯೇ ಶುಚಿರ್ಭೂತ್ವಾ, ಗೋಮಯಕೃತಮಂಡಲಸ್ಯೋಪರಿ ರಕ್ತಚಂದನೇನ ಮಂಡಲಕಂಕೃತ್ವಾ, ತತಸ್ತಾಮ್ರಪಾತ್ರೇ ರಕ್ತಚಂದನೋದಕ ಶ್ವೇತಚಂದನಾದಿದ್ರವ್ಯೈಃ ಪ್ರಪೂರಣಂ ಕೃತ್ವಾ, ತನ್ಮಧ್ಯೇ ಹೇಮಾಕ್ಷತದೂರ್ವಾನ್ ದಧಿಸರ್ಷಿಂಷಿ ಪರಿಕ್ಷಿಪ್ಯ ಸ್ಥಾಪಯೇತ್ ॥ ೫೪ ॥**

**ಸ್ವಶರೀರಮೂಲಭೇದನೇನ ಮಂತ್ರೇಣ "ಓಂ ಖಲೋಲ್ಕಾಯ ನಮಃ" ಸಪ್ತವಾರಾನುಚ್ಚಾರ್ಯ ಸ್ಥಾತವ್ಯಂ ತೇನ ಶುದ್ಧಿರುಪಸಂಜಾಯತೇ ದೇಹಸ್ಯಾರ್ಚಾರ್ಹತಾ ಭವತಿ । ಪಶ್ಚಾದಾಸನಸ್ಥಂ ದೇವಂ ಸವಿತಾರಂ ಮಂಡಲಮಧ್ಯೇ ದ್ವಾದಶಾತ್ಮಕಂ ಸುರಾದಿಭಿಃ ಸಂಪೂಜ್ಯಮಾನಂ ಧ್ಯಾತ್ವಾ ಪೂರ್ವೋಕ್ತಮರ್ಘ್ಯಪಾತ್ರಂ ಶಿರಸಿಕೃತ್ವಾ ಭೂಮೌ ಜಾನುನೀ ನಿಪಾತ್ಯ ಸೂರ್ಯಾಭಿ ಮುಖಸ್ತದ್ಗತಮನಾ ಭೂತ್ವಾರ್ಘ್ಯಮಂತ್ರಮುದಾಹರೇತ್ ತದುಚ್ಯತೇ ಸೂರ್ಯವಕ್ತ್ರಾದ್ವಿನಿರ್ಗತಮಿತಿ ॥ ೫೫ ॥**

---

ಕೊಡದೆ ಮಾಡಿದ ಕಾರ್ಯಗಳೆಲ್ಲವೂ ನಿಷ್ಫಲಗಳು" ಎಂದು ಹೇಳುವರಲ್ಲವೆ. ಆದುದರಿಂದ ಸಕಲ ವಿಧಿಗಳನ್ನೂ ಅರಿತ ನಿನ್ನಿಂದ ಈ ಅರ್ಘ್ಯಪ್ರದಾನದ ವಿಧಿಯನ್ನು ಕೇಳಬಯಸುತ್ತೇನೆ.

೫೩. ನಾರದನು ಹೇಳುತ್ತಾನೆ:— ಬ್ರಹ್ಮಾದಿ ಸಕಲ ದೇವತೆಗಳೂ ಮಹಾತ್ಮನಾದ ಸೂರ್ಯನಿಗೆ ಅರ್ಘ್ಯವನ್ನು ಕೊಡುವ ವಿಧಾನವನ್ನು ಕೇಳು. ಈ ವಿಧಿಯು ಸಮಸ್ತ ಪಾಪಗಳನ್ನೂ ನಿರ್ಮೂಲಗೊಳಿಸುವುದು.

೫೪. ಮೊದಲು ಪ್ರಾತಃಕಾಲದಲ್ಲಿ ಸೂರ್ಯೋದಯವಾಗಲು ಶುಚಿರ್ಭೂತನಾಗಿ ನೆಲದಲ್ಲಿ ಗೋಮಯದಿಂದ ಮಂಡಲವನ್ನು ರಚಿಸಿ, ಅದರಮೇಲೆ ಚಂದನದಿಂದ ಇನ್ನೊಂದು ಮಂಡಲವನ್ನು ಮಾಡಿ, ಮಧ್ಯದಲ್ಲಿ ಹಳದಿ ಅಕ್ಷತೆ, ದೂರ್ವಾದಳಗಳು, ಮೊಸರು, ಸಾಸುವೆಗಳನ್ನು ಹರಡಿ, ಅದರ ಮೇಲೆ ಚಂದನೋದಕ, ಶ್ರೀಗಂಧಾದಿ ದ್ರವ್ಯಗಳಿಂದ ತುಂಬಿದ ತಾಮ್ರದ ಪಾತ್ರೆಯನ್ನು ಸ್ಥಾಪಿಸಬೇಕು.

೫೫. ಬಳಿಕ "ಓಂ-ಖಲೋಲ್ಕಾಯ ನಮಃ" ಎಂಬ ಮಂತ್ರದಿಂದ ತನ್ನ ಶರೀರವನ್ನು ಶುದ್ಧಿಗೊಳಿಸಬೇಕು. ಈ ಮಂತ್ರವನ್ನು ಏಳು ಸಲ ಜಪಿಸುವುದರಿಂದ ಶುದ್ಧಿಯೆಂಬುದುಂಟಾಗಿ ದೇಹವು ಪೂಜೆಗೆ ಅರ್ಹವಾದುದಾಗುತ್ತದೆ.

ಯಸ್ಯೋಚ್ಚಾರಣಶಬ್ದೇನ ರಥಂ ಸಂಸ್ಥಾಪ್ಯ ಭಾಸ್ಕರಃ ।
ಪ್ರತಿಗೃಹ್ಣಾತಿ ಚೈವಾರ್ಘ್ಯಂ ವರಮಿಷ್ಟಂ ಚ ಯಚ್ಛತಿ ॥ ೫೬ ॥
ಓಂ ಯಸ್ಯಾಹುಃ ಸಪ್ತಛಂದಾಂಸಿ ರಥೇ ತಿಷ್ಠಂತಿ ವಾಜಿನಃ ।
ಅರುಣಃ ಸಾರಥಿರ್ಯಸ್ಯ ರಥವಾಹೋಽಗ್ರತಃ ಸ್ಥಿತಃ ॥ ೫೭ ॥
ಜಯಾ ಚ ವಿಜಯಾ ಚೈವ ಜಯಂತೀ ಪಾಪನಾಶನೀ ।
ಇಡಾ ಚ ಪಿಂಗಲಾ ಚೈವ ವಹಂತೋಽಶ್ವಮುಖಾಸ್ತಥಾ ॥ ೫೮ ॥
ಡಿಂಡಿಶ್ಚ ಶೇಷನಾಗಶ್ಚ ಗಣಾಧ್ಯಕ್ಷಸ್ತಥೈವ ಚ ।
ಸ್ಕಂದ ರೇವಂತತಾರ್ಕ್ಷ್ಯಶ್ಚ ತಥಾ ಕಲ್ಮಾಷಪಕ್ಷಿಣಾ ॥ ೫೯ ॥
ರಾಜ್ಞೀ ಚ ನಿಕ್ಷುಭಾದೇವೀ ಲಲಿತಾಚೈವ ಸಂಜ್ಞಿಕಾ ।
ತಥಾ ಯಜ್ಞಭುಜೋ ದೇವಾ ಯೇ ಚಾನ್ಯೇ ಪರಿಕೀರ್ತಿತಾಃ ॥ ೬೦ ॥
ಏಭಿಃ ಪರಿವೃತೋ ಯೋಸಾವಧರೋತ್ತರವಾಸಿಭಿಃ ।
ತಮಹಂ ಲೋಕಕರ್ತಾರಮಾಹ್ವಯಾಮಿ ತಮೋಽಪಹಂ ॥ ೬೧ ॥
ಅಮ್ಮಯೋ ಭಗವಾನ್ಭಾನುರಮುಂ ಯಜ್ಞಂ ಪ್ರವರ್ತಯನ್ ।
ಇದಮರ್ಘ್ಯಂ ಚ ಪಾದ್ಯಂ ಚ ಪ್ರಗೃಹಾಣ ನಮೋನಮಃ ॥ ೬೨ ॥

---

ಬಳಿಕ ಮಂಡಲ ಮಧ್ಯದಲ್ಲಿ ದ್ವಾದಶಾದಿತ್ಯರೂಪಿಯೂ, ದೇವಾದಿಗಳಿಂದ ಪೂಜ್ಯನೂ ಆದ ಸೂರ್ಯದೇವನನ್ನು ಧ್ಯಾನಿಸಿ ಮೇಲೆ ಹೇಳಿದ ಅರ್ಘ್ಯಪಾತ್ರೆಯನ್ನು ತಲೆಯಲ್ಲಿ ಹೊತ್ತು ಮೊಣಕಾಲುಗಳು ನೆಲದಲ್ಲಿ ಮುಟ್ಟುವಂತೆ ಸೂರ್ಯನಿಗೆದುರಾಗಿ ಕುಳಿತು ಆತನನ್ನೇ ಧ್ಯಾನಿಸುತ್ತ ಅರ್ಘ್ಯ ಮಂತ್ರವನ್ನು ಜಪಿಸಬೇಕು. ಈ ಮಂತ್ರವು ಸೂರ್ಯನಮುಖದಿಂದಲೆ ಬಂದುದೆಂದು ಬಲ್ಲವರು ಹೇಳುವರು.

೫೬. ಈ ಮಂತ್ರವನ್ನು ಜಪಿಸುವ ಮಾತ್ರದಿಂದಲೇ ಸೂರ್ಯನು ತನ್ನ ರಥವನ್ನು ನಿಲ್ಲಿಸಿ ಭಕ್ತನ ಅರ್ಘ್ಯವನ್ನು ಸ್ವೀಕರಿಸಿ ಇಷ್ಟವಾದ ವರವನ್ನು ದಯೆಪಾಲಿಸುವನು.

೫೭–೬೨. "ಯಾವನ ರಥದಲ್ಲಿ ಸಪ್ತಛಂದಸ್ಸುಗಳೂ, ಸಪ್ತಾಶ್ವಗಳೂ ಇರುವುವೋ, ಯಾವನಿಗೆ ಅರುಣದೇವನೇ ಸಾರಥಿಯಾಗಿ ರಥದ ಮುಂಭಾಗದಲ್ಲಿರುವನೋ, ಜಯೆ, ವಿಜಯೆ, ಜಯಂತಿ, ಪಾಪನಾಶಿನಿ, ಇಡಾ, ಪಿಂಗಲಾ, ಅಶ್ವಮುಖರೂ ಆ ರಥವನ್ನು ಎಳೆಯುತ್ತಿರುವರೋ, ಡಿಂಡಿ, ಶೇಷ, ಗಣಾಧ್ಯಕ್ಷ, ಸ್ಕಂದ, ರೇವಂತ, ತಾರ್ಕ್ಷ್ಯ, ಕಲ್ಮಾಷಪಕ್ಷಿ, ರಾಣಿಯಾದ ನಿಕ್ಷುಭಾದೇವಿ, ಲಲಿತೆ, ಸಂಜ್ಞಾ, ಯಜ್ಞಭುಜರಾದ ಇತರ ದೇವತೆಗಳು — ಇವರೆಲ್ಲರೂ ರಥದ ಮೇಲ್ಭಾಗ ಕೆಳಭಾಗಗಳಲ್ಲಿ ನೆಲಸಿರುವರೋ ಅಂತಹ ಲೋಕಕರ್ತೃವೂ, ತಮಸ್ಸನ್ನು ಕಳೆಯುವವನೂ, ಅಮ್ಮಯ (ಜಲಮಯ)ನೂ ಆದ ಭಾನುವೇ!

**(ಆವಾಹನಂ) ಸಹಸ್ರಕಿರಣ ವರದ ಜೀವನರೂಪ ತೇ ನಮಃ (ಇತಿ ಸಾನ್ನಿಧ್ಯ ಕರಣಂ) ಓಂ ವಷಡಿತ್ಯುಚ್ಚಾರ್ಯ ಸೂರ್ಯಸ್ಯ ಚರಣಯುಗಲಂ ಪಶ್ಯನ್ ಭುವಿ ಪದ್ಭ್ಯಾಂ ಪಾತ್ರೀಂ ನಿರ್ವಾಪಯೇತ್, ಪಾದ್ಯಂ ತದುಚ್ಯತೇ। ಏವಂ ಪಾದ್ಯಂ ದತ್ತ್ವಾ ಬದ್ಧಾಂಜಲಿಃ ಸುಖಾಗತಮಿತಿ ಕುರ್ಯಾತ್ ಸ್ವಾಗತಂ ಭಗವನ್ನೇಹಿ ಮಮ ಪ್ರಸಾದಂ ವಿಧಾಯ ಆಸ್ಯತಾಂ ॥**
**ಇಹ ಗೃಹಾಣ ಪೂಜಾಂ ಚ ಪ್ರಸಾದಂ ಚ ಧಿಯಾ ಕುರು ।**
**ತಿಷ್ಠ ತ್ವಂ ತಾವದತ್ರೈವ ಯಾವತ್ಪೂಜಾಂ ಕರೋಮ್ಯಹಂ ॥ ೬೩ ॥**
**ಏವಂ ವಿಜ್ಞಾಪನಂ ದದ್ಯಾದನೇನ ಮಂತ್ರೇಣ, ಕಮಲಾಸನಂ ತತ್ಕಮಲಾ ಸನಂ ಕಮಲನಂದನ ಉಪವಿಶತಿ ಆಸನ ಉಪವಿಷ್ಟಸ್ಯ ಶೇಷಾಂ ಪೂಜಾಂ ನಿಯೋಜಯೇತ್ ಅನೇನ ವಿಧಾನೇನ॥ ಓಂ ಸೋಮಮೂರ್ತಿಕ್ಷೀರೋದ ಪತಯೇ ನಮಃ (ಇತಿ ಕ್ಷೀರಾದಿ ಸ್ನಾಪನಂ) ಓಂ ಭಾಸ್ಕರಾಯ ನೀರ ವಾಸಿನೇ ನಮಃ (ಇತಿ ಜಲಸ್ನಾನಂ) ತತೋ ವಾಸೋಯುಗಂ ಶುಭ್ರಂ ದದ್ಯಾತ್ ಅನೇನ ಮಂತ್ರೇಣ ॥**
**ಇದಂ ವಾಸೋಯುಗಂ ಸೂರ್ಯ ಗೃಹಾಣ ಕೃಪಯಾ ಮಮ ।**
**ಕಟಿಭೂಷಣಮೇಕಂ ತೇ ದ್ವಿತೀಯಂ ಚಾಂಗಪ್ರಾವರಣಂ ॥ ೬೪ ॥**

---

ಈ ಪೂಜೆಯನ್ನು ನಡೆಸಿ ಈ ಅರ್ಘ್ಯವನ್ನೂ, ಪಾದ್ಯವನ್ನೂ ಸ್ವೀಕರಿಸು. ನಿನಗೆ ನಮೋ ನಮಃ'' ಎಂಬ ಮಂತ್ರಗಳಿಂದ ಸೂರ್ಯದೇವನ ಆವಾಹನೆಯನ್ನು ಮಾಡಬೇಕು.

೬೩–೬೪. ''ಸಹಸ್ರಕಿರಣ ವರದ ಜೀವನರೂಪತೇ ನಮಃ'' ಎಂಬ ಮಂತ್ರ ದಿಂದ ಸನ್ನಿಹಿತನನ್ನಾಗಿ ಮಾಡಿಕೊಳ್ಳಬೇಕು. ಬಳಿಕ ''ಓಂ-ವಷಟ್'' ಎಂದು ಉಚ್ಚರಿಸುತ್ತ, ಸೂರ್ಯನ ಪಾದಯುಗಗಳನ್ನು ನೋಡುತ್ತ ಭೂಮಿಯಲ್ಲಿರುವ ದೇವನ ಪಾದಗಳಲ್ಲಿ ತಲೆಯಮೇಲಿನ ಅರ್ಘ್ಯಪಾತ್ರೆಯನ್ನು ಸಮರ್ಪಿಸಬೇಕು. ಇದಕ್ಕೆ ಪಾದ್ಯವೆಂದು ಹೆಸರು. ಇಂತು ಪಾದ್ಯವನ್ನು ಕೊಟ್ಟು ಕೈಗಳನ್ನು ಜೋಡಿಸಿಕೊಂಡು ''ಸ್ವಾಗತಂ........ಆಸ್ಯತಾಂ'' ಎಂಬ ವಾಕ್ಯದಿಂದ ಸೂರ್ಯನಿಗೆ ಸುಖಾಗಮನವನ್ನು ಬಯಸಬೇಕು. ಬಳಿಕ ''ಇಹ.... .. ಕರೋಮ್ಯಹಂ'' ಎಂಬ ಮಂತ್ರದಿಂದ ವಿಜ್ಞಾಪಿಸಿಕೊಂಡು ಪದ್ಮಾಸನವನ್ನು ನಿವೇದಿಸಬೇಕು. ಅದರಲ್ಲಿ ಸೂರ್ಯನು ಆಸೀನನಾಗುವನು. ಇಂತು ಆಸನಾ ಸೀನನಾದ ದೇವನಿಗೆ ಮುಂದೆ ಹೇಳುವ ಕ್ರಮದಿಂದ ಮಿಕ್ಕ ಪೂಜೆಯನ್ನು ನೆರವೇರಿಸಬೇಕು. ''ಓಂ–ಸೋಮಮೂರ್ತಿ ಕ್ಷೀರೋದ ಪತಯೇ ನಮಃ'' ಎಂಬ ಮಂತ್ರದಿಂದ ಪಂಚಾಮೃತಸ್ನಾನವನ್ನು ಮಾಡಿಸಬೇಕು. ''ಓಂ– ಭಾಸ್ಕರಾಯ ನೀರವಾಸಿನೇ ನಮಃ'' ಎಂದು ಶುದ್ಧೋದಕ ಸ್ನಾನವನ್ನು

ತತೋ ಯಜ್ಞೋಪವೀತಂ ದದ್ಯಾತ್ ಅನೇನ ಮಂತ್ರೇಣ ॥
ಸೂತ್ರತಂತುಮಯಂ ಶುದ್ಧಂ ಪವಿತ್ರಮಿದಮುತ್ತಮಂ ।
ಯಜ್ಞೋಪವೀತಂ ದೇವೇಶ ಪ್ರಗೃಹಾಣ ನಮೋಽಸ್ತು ತೇ ॥ ೬೫ ॥
ತತೋ ಯಥಾಶಕ್ತಿ ಶ್ವೇತಮುಕುಟಮುದ್ರಿಕಾದಿಭೂಷಣಾನಿ ದದ್ಯಾತ್ ಅನೇನ ಮಂತ್ರೇಣ ॥
ಮುಕುಟೋ ರತ್ನನದ್ಧೋಽಯಂ ಮುದ್ರಿಕಾಂ ಭೂಷಣಾನಿ ಚ ।
ಅಲಂಕಾರಂ ಗೃಹಾಣೇಮಂ ಮಯಾ ಭಕ್ತ್ಯಾ ಸಮರ್ಪಿತಂ ॥ ೬೬ ॥
ಏವಮಲಂಕಾರಂ ನಿವೇದ್ಯ ಪಶ್ಚಾತ್ಕೇಶರಕುಂಕುಮ ಕರ್ಪೂರ ರಕ್ತ ಚಂದನಮಿಶ್ರಿತಮನುಲೇಪನಂ ದದ್ಯಾತ್ ॥ ೬೭ ॥
ಓಂ ತವಾತಿಪ್ರಿಯವೃಕ್ಷಾಣಾಂ ರಸೋಽಯಂ ತಿಗ್ಮದೀಧಿತೇ ।
ಸ ತವೈವೋಚಿತಃ ಸ್ವಾಮಿನ್ಗೃಹಾಣ ಕೃಪಯಾ ಮಮ ॥ ೬೮ ॥
ತತಶ್ಚಂಪಕ ಜಪಾಕರವೀರಕರ್ಣಿಕಕೇಸರ ಕೋಕನದಾದಿಭಿಃ ಪೂಜಾಂ ಕುರ್ಯಾತ್ ॥ ೬೯ ॥
ಓಂ ವನಸ್ಪತಿರಸೋ ದಿವ್ಯೋ ಗಂಧಾಢ್ಯೋ ಗಂಧ ಉತ್ತಮಃ ।
ಆಹಾರಃ ಸರ್ವದೇವಾನಾಂ ಧೂಪೋಽಯಂ ಪ್ರತಿಗೃಹ್ಯತಾಂ ॥ ೭೦ ॥
(ಶಲ್ಲಕೀಧೂಪಮಂತ್ರಃ)

---

ಮಾಡಿಸಬೇಕು. ಬಳಿಕ "ಇದಂ........ಪ್ರಾವರಣಂ" ಎಂಬ ಮಂತ್ರದಿಂದ ಶುಭ್ರವಾದ ವಸ್ತ್ರಯುಗ್ಮವನ್ನು ಸಮರ್ಪಿಸಬೇಕು.

೬೫. ಆಮೇಲೆ "ಸೂತ್ರಂ....ನಮೋಽಸ್ತುತೇ" ಎಂಬ ಮಂತ್ರದಿಂದ ಯಜ್ಞೋಪವೀತವನ್ನು ಕೊಡಬೇಕು.

೬೬. ಬಳಿಕ "ಮುಕುಟೋ......ಸಮರ್ಪಿತಂ" ಎಂಬ ಮಂತ್ರದಿಂದ ತನ್ನ ಶಕ್ತ್ಯನುಸಾರವಾಗಿ ಶ್ವೇತಮುಕುಟ, ಅಂಗುಳೀಯಕ ಮುಂತಾದ ಆಭರಣಗಳನ್ನು ಅರ್ಪಿಸಬೇಕು.

೬೭–೬೮. ಇಂತು ಅಲಂಕಾರಗಳನ್ನು ನಿವೇದನೆ ಮಾಡಿ ಬಳಿಕ ಕೇಸರಿ, ಕುಂಕುಮ, ಕರ್ಪೂರ, ಚಂದನಗಳಿಂದ ಮಿಶ್ರಿತವಾದ ಅಂಗಲೇಪನವನ್ನು "ಓಂ ತವಾತಿಪ್ರಿಯ..........ಮಮ" ಎಂಬ ಮಂತ್ರದೊಡನೆ ಒಪ್ಪಿಸಬೇಕು.

೬೯. ಬಳಿಕ ಸಂಪಗೆ, ದಾಸವಾಳ, ಕರವೀರ, ಕರ್ಣಿಕ, ಕೇಸರ, ಕೋಕನದ ಮುಂತಾದ ಪುಷ್ಪಗಳಿಂದ ಪೂಜೆಯನ್ನು ಮಾಡಬೇಕು.

೭೦. "ಓಂ–ವನಸ್ಪತಿರಸೋ... .ಪ್ರತಿಗೃಹ್ಯತಾಂ" ಎಂಬ ಮಂತ್ರವು ಶಲ್ಲಕ ವೃಕ್ಷದ ಧೂಪವನ್ನರ್ಪಿಸುವುದಕ್ಕೆ ಮಂತ್ರವು.

ತತಃ ಪಾಯಸಾದಿನಿಷ್ಪನ್ನಂ । ನೈವೇದ್ಯಂ ನಿವೇದಯೇದನೇನ ಮಂತ್ರೇಣ ॥
ನೈವೇದ್ಯಮಮೃತಂ ಸರ್ವಭೂತಾನಾಂ ಪ್ರಾಣವರ್ಧನಂ ।
ಪೂರ್ಣಪಾತ್ರೇ ಮಯಾ ದತ್ತಂ ಪ್ರತಿಗೃಹ್ಣ ಪ್ರಸೀದ ಮೇ ॥ ೭೧ ॥
ತತಃ ಶೌಚೋದಕತಾಂಬೂಲದೀಪಾರಾರ್ತಿಕಶೀತಲಿಕಾಪುನಃ ಪೂಜಾದಿ ನಿವೇದ್ಯ ಯಥಾಶಕ್ತ್ಯಾ ಸ್ತುತ್ವಾ ಸುಕೃತಂ ದುಷ್ಕೃತಂವಾ ಕ್ಷಮಸ್ವೇತಿ ಪ್ರೋಚ್ಯ ವಿಸರ್ಜಯೇತ್ । ತತೋ ಭೂಯೋ ನಮಸ್ಯ ಹೇಮವಸ್ತ್ರೋಪವೀತಾಲಂಕಾರಾನ್ ಬ್ರಾಹ್ಮಣಾಯ ನಿವೇದ್ಯ ನಿರ್ಮಾಲ್ಯಂ ಸಂಹೃತ್ಯಾಂಭಸಿ ನಿಕ್ಷಿಪೇತ್ (ಇತ್ಯರ್ಘ್ಯದಾನವಿಧಿಃ) ॥ ೭೨ ॥
ಯ ಏವಂ ಭಾಸ್ಕರಾಯಾರ್ಘ್ಯಂ ಮೂರ್ತೌ ಮಂಡಲಕೇಽಪಿವಾ ।
ನಿತ್ಯಂ ನಿವೇದಯೇತ್ಪ್ರಾತಃ ಸ್ಯಾದ್ರವೇರಾತ್ಮವತ್ಪ್ರಿಯಃ ॥ ೭೩ ॥
ಅನೇನ ವಿಧಿನಾ ಕರ್ಣೋ ಭಾಸ್ಕರಾರ್ಘ್ಯಂ ಪ್ರಯಚ್ಛತಿ ।
ತತಃ ಸೂರ್ಯಸ್ಯ ಪಾರ್ಥಾಸಾವಾತ್ಮವದ್ವಲ್ಲಭೋ ಮತಃ ॥ ೭೪ ॥
ಅಶಕ್ತಶ್ಚೇನ್ನಿತ್ಯಮೇಕಮರ್ಘ್ಯಂ ದದ್ಯಾದ್ದಿವಾಕೃತೇ ।
ತತೋಽತ್ರ ರಥಸಪ್ತಮ್ಯಾಂ ಕುಂಡೇ ದೇಯಃ ಪ್ರಯತ್ನತಃ ॥ ೭೫ ॥

---

೭೧. ಬಳಿಕ "ನೈವೇದ್ಯ......ಪ್ರಸೀದ ಮೇ" ಎಂಬ ಮಂತ್ರದಿಂದ ಪಾಯಸಾದಿಗಳಿಂದ ಕೂಡಿದ ನೈವೇದ್ಯವನ್ನು ಸಮರ್ಪಿಸಬೇಕು.

೭೨. ಹಸ್ತ ಪಾದ ಪ್ರಕ್ಷಾಲನೋದಕವನ್ನು ಕೊಟ್ಟು ತಾಂಬೂಲ, ದೀಪ, ಆರತಿ, ಶೀತಲದ್ರವ್ಯಗಳು, ಪುನಃಪೂಜೆಗಳನ್ನು ನಿವೇದಿಸಿ, ಶಕ್ತ್ಯನುಸಾರವಾಗಿ ಸ್ತೋತ್ರವನ್ನು ಮಾಡಿ ತಾನು ಮಾಡಿದ ಸುಕೃತ ದುಷ್ಕೃತಗಳೆಲ್ಲವನ್ನೂ ಕ್ಷಮಿಸುವಂತೆ ವಿಜ್ಞಾಪಿಸಿಕೊಂಡು ಆವಾಹಿತನಾದ ಸೂರ್ಯದೇವನನ್ನು ವಿಸರ್ಜಿಸಬೇಕು. ಬಳಿಕ ಮತ್ತೆ ನಮಸ್ಕರಿಸಿ ವಸ್ತ್ರಯುಗ್ಮ, ಉಪವೀತ, ಅಲಂಕಾರಗಳನ್ನು ಬ್ರಾಹ್ಮಣೋತ್ತಮನಿಗೆ ದಾನಮಾಡಿ ನಿರ್ಮಾಲ್ಯವೆಲ್ಲವನ್ನೂ ಒಟ್ಟುಗೂಡಿಸಿ ಜಲದಲ್ಲಿ ವಿಸರ್ಜಿಸಬೇಕು. ಇದೇ ಸೂರ್ಯನ ಅರ್ಘ್ಯಪ್ರದಾನದ ವಿಧಿಯು.

೭೩. ಯಾವನು ಪ್ರತಿನಿತ್ಯವೂ ಪ್ರಾತಃಕಾಲದಲ್ಲಿ ಮಂಡಲದಲ್ಲಾಗಲಿ, ಪ್ರತಿಮೆಯಲ್ಲಾಗಲಿ ಸೂರ್ಯನನ್ನು ಆವಾಹನೆಮಾಡಿ ಅರ್ಘ್ಯವನ್ನು ಕೊಡುವನೊ ಅವನು ಸೂರ್ಯನಿಗೆ ಆತ್ಮನಂತೆ ಪ್ರೀತಿಪಾತ್ರನಾಗುವನು.

೭೪-೭೫. ಈ ವಿಧಿಯಿಂದಲೇ ಕರ್ಣನು ತನ್ನ ತಂದೆಯಾದ ಸೂರ್ಯನಿಗೆ ಅರ್ಘ್ಯವನ್ನು ಕೊಡುವನು. ಎಲೈ ಅರ್ಜುನನೆ! ಆದುದರಿಂದ ಸೂರ್ಯನಿಗೆ ಕರ್ಣನು ಪ್ರಾಣದಂತೆ ಅತ್ಯಂತ ಪ್ರಿಯನಾಗಿರುವನೆಂದು ಹೇಳುವರು. ಇಂತು ಸಾಂಗವಾದ ಪೂಜೆಯನ್ನು ಮಾಡಲು ಅಶಕ್ತನಾದಲ್ಲಿ ಪ್ರತಿನಿತ್ಯವೂ ಕೇವಲ

ಅಶ್ವಮೇಧಫಲಂ ಪ್ರಾಪ್ಯ ಸೂರ್ಯಲೋಕಮವಾಪ್ನುಯಾತ್ ।
ತಸ್ಮಾತ್ಸರ್ವಪ್ರಯತ್ನೇನ ದಾತವ್ಯೋಽರ್ಘ್ಯೋಽತ್ರ ಭಾರತ ॥ ೭೬ ॥
ಏವಂ ವಿಧಸ್ತ್ವಸೌ ದೇವೋ ಭಟ್ಟಾದಿತ್ಯೋಽತ್ರ ತಿಷ್ಠತಿ ।
ಭೂಯಾನತೋಽಪಿ ಬಹುಶಃ ಪಾಪಹಾ ಧರ್ಮವರ್ಧನಃ ॥ ೭೭ ॥
ದಿವ್ಯಮಷ್ಟವಿಧಂ ಚಾತ್ರ ಸದ್ಯಃ ಪ್ರತ್ಯಯಕಾರಕಂ ।
ಪಾಪಾನಾಂ ಚೋಪಭುಕ್ತಂ ಹಿ ಯಥಾ ಪಾರ್ಥ ಹಲಾಹಲಂ ॥ ೭೮ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪ್ರಥಮೇ ಮಾಹೇಶ್ವರಖಂಡೇ ಕೌಮಾರಿಕಾಖಂಡೇ
" ಮಹೀಸಾಗರಸಂಗಮೇ ಭಟ್ಟಾದಿತ್ಯಮಾಹಾತ್ಮ್ಯವರ್ಣನಂ " ನಾಮ
ತ್ರಿಚತ್ವಾರಿಂಶೋಽಧ್ಯಾಯಃ

---

ಅರ್ಘ್ಯವನ್ನಾದರೂ ಕೊಡಬೇಕು. ಅಲ್ಲದೆ ಇಲ್ಲಿ ರಥಸಪ್ತಮಿಯ ದಿನ ಖಂಡಿತ ವಾಗಿಯೂ ಭಟ್ಟಾದಿತ್ಯಕುಂಡದಲ್ಲಿ ವಿಧ್ಯುಕ್ತರೀತಿಯಿಂದ ಅರ್ಘ್ಯವನ್ನು ಕೊಡಬೇಕು.

೭೬. ಅಂತಹ ಭಕ್ತನು ಅಶ್ವಮೇಧಯಜ್ಞವನ್ನು ಮಾಡಿದ ಫಲವನ್ನು ಹೊಂದಿ ಸೂರ್ಯಲೋಕವನ್ನು ಸೇರುವನು. ಆದುದರಿಂದ ಸರ್ವಪ್ರಯತ್ನ ದಿಂದಲೂ ಈ ಕ್ಷೇತ್ರದಲ್ಲಿ ಅರ್ಘ್ಯವನ್ನು ಕೊಡಬೇಕು.

೭೭. ಈರೀತಿಯಾಗಿ ಸೂರ್ಯದೇವನು ಭಟ್ಟಾದಿತ್ಯನೆಂಬ ನಾಮದಿಂದ ಇಲ್ಲಿ ನೆಲಸಿ ಇದಕ್ಕೂ ಹೆಚ್ಚಾಗಿ ಭಕ್ತರ ಹಿರಿದಾದ ಪಾಪಗಳನ್ನು ನಾಶಗೊಳಿಸಿ ಧರ್ಮವನ್ನು ವೃದ್ಧಿಗೊಳಿಸುವನು.

೭೮. ಎಲೈ ಪಾರ್ಥನೆ! ವಿಷಸೇವನೆಯು ಮನುಷ್ಯನ ಪಾಪಪುಣ್ಯಗಳನ್ನು ಪರೀಕ್ಷಿಸಲು ಹೇಗೆ ಸಾಧಕವಾಗಿರುವುದೊ, ಹಾಗೆಯೇ ಇಲ್ಲಿಯೂ ಮನುಷ್ಯನ ಪುಣ್ಯಪಾಪಗಳಲ್ಲಿ ನಿಶ್ಚಯವನ್ನು ತಿಳಿಯಲು ಎಂಟು ದೈವಿಕ ವಿಧಗಳಿರುವುವು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಎರಡನೆಯ ಕೌಮಾರಿಕಾ ಖಂಡದಲ್ಲಿ
" ಮಹೀಸಾಗರಸಂಗಮ — ಭಟ್ಟಾದಿತ್ಯಮಾಹಾತ್ಮ್ಯವರ್ಣನ "ವೆಂಬ
ನಲವತ್ತು ಮೂರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಚತುಶ್ಚತ್ವಾರಿಂಶೋಽಧ್ಯಾಯಃ

### ಭಟ್ಟಾದಿತ್ಯಮಾಹಾತ್ಮ್ಯೇ ದಿವ್ಯವರ್ಣನಂ

**ಅರ್ಜುನ ಉವಾಚ:—**

**ದಿವ್ಯಪ್ರಕಾರಮಿಚ್ಛಾಮಿ ಶ್ರೋತುಂ ಚಾಹಂ ಮುನೀಶ್ವರ ।**
**ಕಥಂ ಕಾರ್ಯಾಣಿ ಕಾನೀಹ ಸ್ಫುಟಂ ಯೈಃ ಪುಣ್ಯಪಾತಕಂ ॥ ೧ ॥**

**ನಾರದ ಉವಾಚ:—**

**ಶಪಥಾಃ ಕೋಶಘಟಿಕೌ ವಿಷಾಗ್ನೀ ತಪ್ತಮಾಷಕೌ ।**
**ಫಾಲಂ ಚ ತಂದುಲಂ ಚೈವ ದಿವ್ಯಾನ್ಯಷ್ಟೌ ವಿದುರ್ಬುಧಾಃ ॥ ೨ ॥**
**ಅಸಾಕ್ಷಿಕೇಷು ಚಾರ್ಥೇಷು ಮಿಥೋ ವಿವದಮಾನಯೋಃ ।**
**ರಾಜದ್ರೋಹಾಭಿಶಾಪೇಷು ಸಾಹಸೇಷು ತಥೈವ ಚ ॥ ೩ ॥**
**ಅವಿದಸ್ತತ್ತ್ವತಃ ಸತ್ಯಂ ಶಪಥೇನಾಭಿಲಂಘಯೇತ್ ।**
**ಮಹರ್ಷಿಭಿಶ್ಚ ದೇವೈಶ್ಚ ಸತ್ಯಾರ್ಥಾಃ ಶಪಥಾಃ ಕೃತಾಃ ॥ ೪ ॥**

---

### ಕನ್ನಡದ ಅನುವಾದ

#### ಭಟ್ಟಾದಿತ್ಯಮಾಹಾತ್ಮ್ಯ — ದಿವ್ಯವರ್ಣನ

೧. ಅರ್ಜುನನು ಕೇಳುತ್ತಾನೆ:—ಎಲೈ ಮುನೀಶ್ವರನೆ! ನಾನು ಈ ದಿವ್ಯ ವಿಧಾನಗಳನ್ನು ಕೇಳಲು ಕುತೂಹಲವುಳ್ಳವನಾಗಿರುವೆನು. ಮನುಷ್ಯರ ಪುಣ್ಯ ಪಾಪಗಳು ಸ್ಫುಟವಾಗಿ ತಿಳಿಯುವಂತೆ ಯಾವ ಯಾವ ಕಾರ್ಯಗಳನ್ನು ಯಾವ ಯಾವ ವಿಧಾನಗಳಲ್ಲಿ ಮಾಡಬೇಕು?

೨. ನಾರದರು ಹೇಳುತ್ತಾರೆ:—ಶಪಥ, ಕೋಶ, ಘಟ, ವಿಷ, ಅಗ್ನಿ, ತಪ್ತಮಾಷ, ಫಾಲ ಮತ್ತು ತಂದುಲಗಳೆಂಬ ಎಂಟು ದಿವ್ಯಪರೀಕ್ಷಾ ವಿಧಾನ ಗಳನ್ನು ಪ್ರಾಜ್ಞರು ಹೇಳಿರುವರು.

೩–೪. ಸಾಕ್ಷ್ಯವಿಲ್ಲದ ವಿಷಯಗಳಲ್ಲಿ ಇಬ್ಬರು ವಿವಾದವನ್ನು ಮಾಡು ವಾಗಲೂ, ರಾಜದ್ರೋಹದ ಆಪಾದನೆಯಿರುವಾಗಲೂ, ಅತ್ಯಾಚಾರದ ಆಪಾದನೆ ಯಿರುವಾಗಲೂ ವಸ್ತುಸ್ಥಿತಿಯನ್ನರಿಯದ ಸಮಯಗಳಲ್ಲಿ ಶಪಥಾದಿಗಳಿಂದ ನಿಶ್ಚಯವನ್ನು ತಿಳಿಸಬೇಕು. ಮಹರ್ಷಿಗಳೂ, ದೇವತೆಗಳೂ ಕೂಡ ತಮ್ಮ ಸತ್ಯಸಂಧತೆಯನ್ನು ಸ್ಥಿರಪಡಿಸಲು ಶಪಥಗಳನ್ನು ಮಾಡಿರುವರು.

ಜವನೋ ನೃಪತಿಃ ಕ್ಷೀಣೋ ಮಿಥ್ಯಾಶಪಥಮಾಚರೇತ್ ।
ವಸಿಷ್ಠಾಗ್ರೇ ವರ್ಷಮಧ್ಯೇ ಸಾನ್ವಯಃ ಕಿಲ ಭಾರತ ॥ ೫ ॥
ಅಂಧಃ ಶತ್ರುಗೃಹಂ ಗಚ್ಛೇದ್ಯೋ ಮಿಥ್ಯಾಶಪಥಾಂಶ್ಚರೇತ್ ।
ರೌರವಸ್ಯ ಸ್ವಯಂ ದ್ವಾರಮುದ್ಘಾಟಯತಿ ದುರ್ಮತಿಃ ॥ ೬ ॥
ಮನ್ಯಂತೇ ವೈ ಪಾಪಕೃತೋ ನ ಕಶ್ಚಿತ್ಪಶ್ಯತೀತಿ ನಃ ।
ತಾಂಶ್ಚ ದೇವಾಃ ಪ್ರಪಶ್ಯಂತಿ ಸ್ವಸ್ಯೈವಾಂತರಪೌರುಷಾಃ ॥ ೭ ॥

ಆದಿತ್ಯಚಂದ್ರಾವನಿಲೋಽನಲಶ್ಚ
ದ್ಯೌರ್ಭೂಮಿರಾಪೋ ಹೃದಯಂ ಯಮಶ್ಚ ।
ಅಹಶ್ಚ ರಾತ್ರಿಶ್ಚ ಉಭೇ ಚ ಸಂಧ್ಯೇ
ಧರ್ಮೋ ಹಿ ಜಾನಾತಿ ನರಸ್ಯ ವೃತ್ತಂ ॥ ೮ ॥

ಏವಂ ತಸ್ಮಾದಭಿಜ್ಞಾಯ ಸತ್ಯಾರ್ಥಶಪಥಾಂಶ್ಚರೇತ್ ।
ವೃಥಾ ಹಿ ಶಪಥಾನ್ಕುರ್ವನ್ಪ್ರೇತ್ಯ ಚೇಹ ವಿನಶ್ಯತಿ ॥ ೯ ॥

---

೫. ಅಸಂಪ್ರೇಕ್ಷ್ಯಕಾರಿಯಾದ ರಾಜನು ತನ್ನ ರಾಜ್ಯಮಧ್ಯದಲ್ಲಿ ನಿಂತು ಮಿಥ್ಯಾಶಪಥವನ್ನು ಮಾಡಲು ತನ್ನ ಬಂಧುಬಾಂಧವರೊಡನೆ ಕ್ಷೀಣದಶೆಯನ್ನು ಹೊಂದುವನು.

೬. ಯಾವನು ಸುಳ್ಳಾದ ವಿಷಯವನ್ನು ಸಮರ್ಥಿಸಲು ಶಪಥವನ್ನು ಮಾಡುವನೊ, ಅವನು ಅಂಧನಾಗಿ ಶತ್ರುವಿನ ವಶವರ್ತಿಯೆನಿಸುವನು. ಆ ಬುದ್ಧಿಹೀನನು ತಾನೇ ರೌರವ ನರಕದ ದ್ವಾರವನ್ನು ತನಗಾಗಿ ತೆರೆದಿಡುವನು.

೭. ಪಾಪಗಳನ್ನು ಮಾಡುವವರು 'ನಾವು ಮಾಡುವ ಕರ್ಮಗಳನ್ನು ಯಾವನೂ ನೋಡುವುದಿಲ್ಲ' ಎಂದು ತಿಳಿಯುವರು. ಆದರೆ ಅವುಗಳನ್ನು ಲೋಕಪಾಲಕರೂ ದೇಹದಲ್ಲಿ ಅಂತರ್ಯಾಮಿಗಳಾಗಿರುವ ಅಭಿಮಾನಿದೇವತೆಗಳೂ ನೋಡುತ್ತಲೇ ಇರುವರು.

೮. ಸೂರ್ಯ, ಚಂದ್ರ, ವಾಯು, ಅಗ್ನಿ, ಅಂತರಿಕ್ಷ, ಭೂದೇವಿ, ಜಲದೇವತೆಗಳು, ಹೃದಯ, ಯಮ, ಅಹಸ್ಸು, ರಾತ್ರಿ, ಪ್ರಾತಃಸಂಧ್ಯೆ ಸಾಯಂಸಂಧ್ಯೆಗಳು, ಧರ್ಮದೇವತೆ— ಇವರೆಲ್ಲರೂ ಮನುಷ್ಯನ ಯುಕ್ತಾಯುಕ್ತ ವ್ಯವಹಾರಗಳಿಗೆ ಸಾಕ್ಷಿಗಳಾಗಿರುವರು.

೯. ಆದುದರಿಂದ ಇದನ್ನು ತಿಳಿದುಕೊಂಡು ಮನುಷ್ಯನು ನಿಜದ ವಿಷಯದಲ್ಲಿಯೇ ಶಪಥವನ್ನು ಮಾಡಬೇಕು. ಸುಳ್ಳಿಗಾಗಿ ಪ್ರಮಾಣವಚನವನ್ನು ನುಡಿಯಲು ಇಹದಲ್ಲಿಯೂ ಪರದಲ್ಲಿಯೂ ನಾಶವನ್ನು ಹೊಂದುವರು.

॥ ಶ್ರೀಃ ॥

## ಅಥ ಚತುಶ್ಚತ್ವಾರಿಂಶೋಽಧ್ಯಾಯಃ

### ಭಟ್ಟಾದಿತ್ಯಮಾಹಾತ್ಮ್ಯೇ ದಿವ್ಯವರ್ಣನಂ

ಅರ್ಜುನ ಉವಾಚ :—

ದಿವ್ಯಪ್ರಕಾರಮಿಚ್ಛಾಮಿ ಶ್ರೋತುಂ ಚಾಹಂ ಮುನೀಶ್ವರ ।
ಕಥಂ ಕಾರ್ಯಾಣಿ ಕಾನೀಹ ಸ್ಫುಟಂ ಯೈಃ ಪುಣ್ಯಪಾತಕಂ ॥ ೧ ॥

ನಾರದ ಉವಾಚ :—

ಶಪಥಾಃ ಕೋಶಘಟಕೌ ವಿಷಾಗ್ನೀ ತಪ್ತಮಾಷಕೌ ।
ಫಾಲಂ ಚ ತಂದುಲಂ ಚೈವ ವಿದ್ಯಾನ್ಯಷ್ಟೌ ವಿದುರ್ಬುಧಾಃ ॥ ೨ ॥
ಅಸಾಕ್ಷಿಕೇಷು ಚಾರ್ಥೇಷು ಮಿಥೋ ವಿವದಮಾನಯೋಃ ।
ರಾಜದ್ರೋಹಾಭಿಶಾಪೇಷು ಸಾಹಸೇಷು ತಥೈವ ಚ ॥ ೩ ॥
ಅವಿದಸ್ತತ್ತ್ವತಃ ಸತ್ಯಂ ಶಪಥೇನಾಭಿಲಂಘಯೇತ್ ।
ಮಹರ್ಷಿಭಿಶ್ಚ ದೇವೈಶ್ಚ ಸತ್ಯಾರ್ಥಾಃ ಶಪಥಾಃ ಕೃತಾಃ ॥ ೪ ॥

---

## ಕನ್ನಡದ ಅನುವಾದ

### ಭಟ್ಟಾದಿತ್ಯಮಾಹಾತ್ಮ್ಯ — ದಿವ್ಯವರ್ಣನ

೧. ಅರ್ಜುನನು ಕೇಳುತ್ತಾನೆ:—ಎಲೈ ಮುನೀಶ್ವರನೆ! ನಾನು ಈ ದಿವ್ಯ ವಿಧಾನಗಳನ್ನು ಕೇಳಲು ಕುತೂಹಲವುಳ್ಳವನಾಗಿರುವೆನು. ಮನುಷ್ಯರ ಪುಣ್ಯ ಪಾಪಗಳು ಸ್ಫುಟವಾಗಿ ತಿಳಿಯುವಂತೆ ಯಾವ ಯಾವ ಕಾರ್ಯಗಳನ್ನು ಯಾವ ಯಾವ ವಿಧಾನಗಳಲ್ಲಿ ಮಾಡಬೇಕು?

೨. ನಾರದರು ಹೇಳುತ್ತಾರೆ:—ಶಪಥ, ಕೋಶ, ಘಟ, ವಿಷ, ಅಗ್ನಿ, ತಪ್ತಮಾಷ, ಫಾಲ ಮತ್ತು ತಂದುಲಗಳೆಂಬ ಎಂಟು ದಿವ್ಯಪರೀಕ್ಷಾ ವಿಧಾನಗಳನ್ನು ಪ್ರಾಜ್ಞರು ಹೇಳಿರುವರು.

೩–೪. ಸಾಕ್ಷ್ಯವಿಲ್ಲದ ವಿಷಯಗಳಲ್ಲಿ ಇಬ್ಬರು ವಿವಾದವನ್ನು ಮಾಡುವಾಗಲೂ, ರಾಜದ್ರೋಹದ ಆಪಾದನೆಯಿರುವಾಗಲೂ, ಅತ್ಯಾಚಾರದ ಆಪಾದನೆಯಿರುವಾಗಲೂ ವಸ್ತುಸ್ಥಿತಿಯನ್ನರಿಯದ ಸಮಯಗಳಲ್ಲಿ ಶಪಥಾದಿಗಳಿಂದ ನಿಶ್ಚಯವನ್ನು ತೀಲಿಸಬೇಕು. ಮಹರ್ಷಿಗಳೂ, ದೇವತೆಗಳೂ ಕೂಡ ತಮ್ಮ ಸತ್ಯಸಂಧತೆಯನ್ನು ಸ್ಥಿರಪಡಿಸಲು ಶಪಥಗಳನ್ನು ಮಾಡಿರುವರು.

ಜನನೋ ನೃಪತಿಃ ಕ್ಷೀಣೋ ಮಿಥ್ಯಾಶಪಥಮಾಚರೇತ್ ।
ವಸಿಷ್ಠಾಗ್ರೇ ವರ್ಷಮಧ್ಯೇ ಸಾನ್ವಯಃ ಕಿಲ ಭಾರತ ॥ ೫ ॥
ಅಂಧಃ ಶತ್ರುಗೃಹಂ ಗಚ್ಛೇದ್ಯೋ ಮಿಥ್ಯಾಶಪಥಾಂಶ್ಚರೇತ್ ।
ರೌರವಸ್ಯ ಸ್ವಯಂ ದ್ವಾರಮುದ್ಘಾಟಯತಿ ದುರ್ಮತಿಃ ॥ ೬ ॥
ಮನ್ಯಂತೇ ವೈ ಪಾಪಕೃತೋ ನ ಕಶ್ಚಿತ್ಪಶ್ಯತೀತಿ ನಃ ।
ತಾಂಶ್ಚ ದೇವಾಃ ಪ್ರಪಶ್ಯಂತಿ ಸ್ವಸ್ಯೈವಾಂತರಪೌರುಷಾಃ ॥ ೭ ॥

ಆದಿತ್ಯಚಂದ್ರಾವನಿಲೋಽನಲಶ್ಚ
ದ್ಯೌರ್ಭೂಮಿರಾಪೋ ಹೃದಯಂ ಯಮಶ್ಚ ।
ಅಹಶ್ಚ ರಾತ್ರಿಶ್ಚ ಉಭೇ ಚ ಸಂಧ್ಯೇ
ಧರ್ಮೋ ಹಿ ಜಾನಾತಿ ನರಸ್ಯ ವೃತ್ತಂ ॥ ೮ ॥

ಏವಂ ತಸ್ಮಾದಭಿಜ್ಞಾಯ ಸತ್ಯಾರ್ಥಶಪಥಾಂಶ್ಚರೇತ್ ।
ವೃಥಾ ಹಿ ಶಪಥಾನ್ಕುರ್ವನ್ಪ್ರೇತ್ಯ ಚೇಹ ವಿನಶ್ಯತಿ ॥ ೯ ॥

---

೫. ಅಸಂಪ್ರೇಕ್ಷ್ಯಕಾರಿಯಾದ ರಾಜನು ತನ್ನ ರಾಜ್ಯಮಧ್ಯದಲ್ಲಿ ನಿಂತು ಮಿಥ್ಯಾಶಪಥವನ್ನು ಮಾಡಲು ತನ್ನ ಬಂಧುಬಾಂಧವರೊಡನೆ ಕ್ಷೀಣದಶೆಯನ್ನು ಹೊಂದುವನು.

೬. ಯಾವನು ಸುಳ್ಳಾದ ವಿಷಯವನ್ನು ಸಮರ್ಥಿಸಲು ಶಪಥವನ್ನು ಮಾಡುವನೊ, ಅವನು ಅಂಧನಾಗಿ ಶತ್ರುವಿನ ವಶವರ್ತಿಯೆನಿಸುವನು. ಆ ಬುದ್ಧಿಹೀನನು ತಾನೇ ರೌರವ ನರಕದ ದ್ವಾರವನ್ನು ತನಗಾಗಿ ತೆರೆದಿಡುವನು.

೭. ಪಾಪಗಳನ್ನು ಮಾಡುವವರು 'ನಾವು ಮಾಡುವ ಕರ್ಮಗಳನ್ನು ಯಾವನೂ ನೋಡುವುದಿಲ್ಲ' ಎಂದು ತಿಳಿಯುವರು. ಆದರೆ ಅವುಗಳನ್ನು ಲೋಕಪಾಲಕರೂ ದೇಹದಲ್ಲಿ ಅಂತರ್ಯಾಮಿಗಳಾಗಿರುವ ಅಭಿಮಾನಿದೇವತೆಗಳೂ ನೋಡುತ್ತಲೇ ಇರುವರು.

೮. ಸೂರ್ಯ, ಚಂದ್ರ, ವಾಯು, ಅಗ್ನಿ, ಅಂತರಿಕ್ಷ, ಭೂದೇವಿ, ಜಲದೇವತೆಗಳು, ಹೃದಯ, ಯಮ, ಅಹಸ್ಸು, ರಾತ್ರಿ, ಪ್ರಾತಃಸಂಧ್ಯೆ ಸಾಯಂಸಂಧ್ಯೆಗಳು, ಧರ್ಮದೇವತೆ— ಇವರೆಲ್ಲರೂ ಮನುಷ್ಯನ ಯುಕ್ತಾಯುಕ್ತ ವ್ಯವಹಾರಗಳಿಗೆ ಸಾಕ್ಷಿಗಳಾಗಿರುವರು.

೯. ಆದುದರಿಂದ ಇವನ್ನು ತಿಳಿದುಕೊಂಡು ಮನುಷ್ಯನು ನಿಜದ ವಿಷಯದಲ್ಲಿಯೇ ಶಪಥವನ್ನು ಮಾಡಬೇಕು. ಸುಳ್ಳಿಗಾಗಿ ಪ್ರಮಾಣವಚನವನ್ನು ನುಡಿಯಲು ಇಹದಲ್ಲಿಯೂ ಪರದಲ್ಲಿಯೂ ನಾಶವನ್ನು ಹೊಂದುವರು.

ಇದಂ ಸತ್ಯಂ ವದಾಮೀತಿ ಬ್ರುವನ್ಸಾಕ್ಷೀ ಭವಾನ್ಯತಃ ।
ಶುಭಾಶುಭಫಲಂ ದೇಹೀ ಶುಚಿಃ ಪಾದೌ ರವೇಃ ಸ್ಪೃಶೇತ್ ॥ ೧೦ ॥
ಅಥ ಶಾಸ್ತ್ರಸ್ಯ ವಿಪ್ರೋಽಪಿ ಶಸ್ತ್ರಸ್ಯಾಪಿ ಚ ಕ್ಷತ್ರಿಯಃ ।
ಮಾಂ ಸಂಸ್ಪೃಶಂಸ್ತಥಾ ವೈಶ್ಯಃ ಶೂದ್ರಃ ಸ್ವಗುರುಮೇವ ಚ ॥ ೧೧ ॥
ಮಾತರಂ ಪಿತರಂ ಪೂಜ್ಯಂ ಸ್ಪೃಶೇತ್ಸಾಧಾರಣಂ ತ್ವಿದಂ ।
ಕೋಶಸ್ಯ ರೂಪಂ ಪೂರ್ವಂ ತೇ ವ್ಯಾಖ್ಯಾತಂ ಪಾಂಡುನಂದನ ॥ ೧೨ ॥
ವಿಪ್ರವರ್ಜ್ಯಂ ತಥಾ ಕೋಶಂ ವರ್ಣಿನಾಂ ದಾಪಯೇನ್ನೃಪಃ ।
ಯೋ ಯೋ ಯದ್ದೇವತಾಭಕ್ತಃ ಪಾಯಯೇತ್ತಸ್ಯ ತಂ ನರಂ ॥ ೧೩ ॥
ಸಮಭಕ್ತಂ ಚ ದೇವಾನಾಮಾದಿತ್ಯಸ್ಯೈವ ಪಾಯಯೇತ್ ।
ಸರ್ವೇಷಾಂ ಚೋಗ್ರದೇವಾನಾಂ ಸ್ನಾಪಯೇದಾಯುಧಾಸ್ತ್ರಕಂ ॥ ೧೪ ॥
ಸ್ನಾನೋದಕಂ ವಾ ಸಂಕಲ್ಪಂ ಗೃಹೀತ್ವಾಪಾಯಯೇನ್ನವಂ ।
ತ್ರಿಸಪ್ತರಾತ್ರಮಧ್ಯೇ ಚ ಫಲಂ ಕೋಶಸ್ಯ ನಿರ್ದಿಶೇತ್ ॥ ೧೫ ॥

---

೧೦. "ಸತ್ಯವನ್ನು ಹೇಳುವೆನು. ನೀನು ಕರ್ಮಸಾಕ್ಷಿಯಾಗಿರುವುದರಿಂದ ನನ್ನ ನಡತೆಗನುಗುಣವಾಗಿ ಶುಭಾಶುಭ ಫಲಗಳನ್ನು ಕೊಡು" ಎಂದು ಹೇಳಿ ಭಟ್ಟಾದಿತ್ಯಮೂರ್ತಿಯ ಪಾದಗಳನ್ನು ಶುಚಿರ್ಭೂತನಾಗಿ ಮುಟ್ಟಬೇಕು.

೧೧. ಬ್ರಾಹ್ಮಣನು ಶಾಸ್ತ್ರಗಳ ಮೇಲೂ, ಕ್ಷತ್ರಿಯನು ಆಯುಧಗಳ ಮೇಲೂ, ವೈಶ್ಯನು ಐಶ್ವರ್ಯದ ಮೇಲೂ, ಶೂದ್ರನು ತನ್ನ ಗುರುವಿನಮೇಲೂ ಆಣೆಯನ್ನಿಡಬೇಕು.

೧೨. ತಾಯಿತಂದೆಯರು, ಪೂಜ್ಯರು ಮುಂತಾದವರ ಹೆಸರಿನಲ್ಲಿ ಆಣೆಯನ್ನಿಡುವುದು ಎಲ್ಲ ವರ್ಣದವರಿಗೂ ಸಾಧಾರಣವಾಗಿರುವುದು. ಎಲೈ ಅರ್ಜುನನೆ! ಕೋಶದ ಸ್ವರೂಪವನ್ನು ಮೊದಲೇ ನಿನಗೆ ತಿಳಿಸಿರುವೆನು.

೧೩. ರಾಜನಾದವನು ತ್ರೈವರ್ಣಿಕರಿಗೂ ಬ್ರಾಹ್ಮಣವರ್ಜ್ಯವಾದ ಕೋಶವನ್ನು ಕುಡಿಸಬೇಕು. ಯಾವ ಮಾನವನು ಯಾವ ದೇವತೆಯ ಭಕ್ತನೊ, ಅವನಿಗೆ ಆ ಕೋಶವನ್ನೇ ಕುಡಿಸಬೇಕು.

೧೪. ಆಪಾದಿತನು ಎಲ್ಲ ದೈವಗಳಲ್ಲಿಯೂ ಸಮಭಕ್ತಿಯನ್ನಿಟ್ಟದ್ದರೆ ಅವನಿಗೆ ಸೂರ್ಯಕೋಶವನ್ನೇ ಕುಡಿಸಬೇಕು. ಸಕಲ ಉಗ್ರದೇವತೆಗಳ ವಿಷಯದಲ್ಲಿಯೂ ಆಯಾ ದೇವತೆಯ ಆಯುಧಾಸ್ತ್ರಗಳನ್ನು ಸ್ನಾನಮಾಡಿಸಬೇಕು.

೧೫. ಅಲ್ಲದೆ ಸಂಕಲ್ಪಪೂರ್ವಕವಾದ ನೂತನ ಸ್ನಾನೋದಕವನ್ನಾದರೂ ಆಪಾದಿತನಿಗೆ ಕುಡಿಸಬೇಕು. ಈ ಕೋಶಪರೀಕ್ಷೆಯ ಫಲವು ಇಪ್ಪತ್ತೊಂದು ರಾತ್ರಿಗಳೊಳಗಾಗಿ ಸ್ಫುಟವಾಗುವುದು.

ಅತಃ ಪರಂ ಮಹಾದಿವ್ಯವಿಧಾನಂ ಶ್ರುಣು ಯದ್ಭವೇತ್ ।
ಸಂಶಯಚ್ಛೇದಿ ಸರ್ವೇಷಾಂ ಧಾಷ್ಟ್ಯಾತ್ತದ್ದಿವ್ಯಮೇವ ಚ ॥ ೧೬ ॥
ಸಶಿರಸ್ಕಂ ಪ್ರದಾತವ್ಯಮಿತಿ ಬ್ರಹ್ಮಾ ಪುರಾಬ್ರವೀತ್ ।
ಮಹೋಗ್ರಾಣಾಂ ಚ ದಾತವ್ಯಮಶಿರಸ್ಕಮಪಿ ಸ್ಫುಟಂ ॥ ೧೭ ॥
ಸಾಧೂನಾಂ ವರ್ಣಿನಾಂ ರಾಜಾ ನ ಶಿರಸ್ಕಂ ಪ್ರದಾಪಯೇತ್ ।
ನ ಪ್ರವಾತೇ ಘಟಂ ದೇಯಂ ನೋಷ್ಣಕಾಲೇ ಹುತಾಶನಂ ॥ ೧೮ ॥
ವರ್ಣಿನಾಂ ಚ ತಥಾ ಕಾಲಂ ತಂದುಲಂ ಮುಖರೋಗಿಣಾಂ ॥ ೧೯ ॥
ಕುಷ್ಠಪಿತ್ತಾರ್ದಿತಾನಾಂ ಚ ಬ್ರಾಹ್ಮಣಾನಾಂ ಚ ನೋ ವಿಷಂ ।
ತಪ್ತಮಾಷಕಮರ್ಹಂತಿ ಸರ್ವೇ ಧರ್ಮ್ಯಂ ನಿರತ್ಯಯಂ ॥ ೨೦ ॥
ನ ವ್ಯಾಧಿಮರಕೇ ದೇಶೇ ಶಪಥಾನ್ಕೋಶಮೇವ ಚ ।
ದಿವ್ಯಾನ್ಯಾಸುರಕೈರ್ಮಂತ್ರೈಃ ಸ್ತಂಭಯಂತೀಹ ಕೇಚನ ।
ಪ್ರತಿಘಾತವಿದಸ್ತೇಷಾಂ ಯೋಜಯೇದ್ಧರ್ಮವತ್ಸಲಾನ್ ॥ ೨೧ ॥
ದಿವ್ಯಾನಾಂ ಸ್ತಂಭಕಾನ್‌ಜ್ಞಾತ್ವಾ ಪಾಪಾನ್ನಿತ್ಯಂ ಮಹೀಪತಿಃ ।
ವಿವಾಸಯೇತ್ಸ್ವಕಾದ್ರಾಷ್ಟ್ರಾತ್ತೇ ಹಿ ಲೋಕಸ್ಯ ಕಂಟಕಾಃ ॥ ೨೨ ॥

---

೧೬–೨೦. ಇನ್ನು ಸಕಲ ವಿಧಗಳಲ್ಲಿಯೂ ಉತ್ತಮವಾದುದೂ, ಸಂಶಯಭೇದಕವೂ ಆದ ಮಹಾದಿವ್ಯದ ವಿಧಾನವನ್ನು ತಿಳಿಸುವೆನು. ಕೇಳುವವನಾಗು. ಪೂರ್ವದಲ್ಲಿ ಬ್ರಹ್ಮನು ಸಶಿರಸ್ಕವನ್ನೇ ಕೊಡಬೇಕೆಂದು ಹೇಳಿದನು. ಅತ್ಯಂತ ಉಗ್ರವಿಷಯಗಳಲ್ಲಿ ಅಶಿರಸ್ಕವನ್ನೂ ಕೊಟ್ಟು, ನಿಶ್ಚಯವನ್ನು ತಿಳಿಯಬಹುದು. ರಾಜನಾದವನು ಸಾಧುಗಳಿಗೂ, ತ್ರೈವರ್ಣಿಕರಿಗೂ ಸಶಿರಸ್ಕವನ್ನು ಕೊಡಿಸಬಾರದು. ಬಿರುಗಾಳಿಯಿರುವ ದೇಶದಲ್ಲಿ ಘಟವನ್ನೂ, ಬೇಸಿಗೆಯಲ್ಲಿ ಅಗ್ನಿಯನ್ನೂ, ಬ್ರಹ್ಮ ಕ್ಷತ್ರಿಯ ವೈಶ್ಯರಿಗೆ ಕಾಲವನ್ನೂ, ಮುಖರೋಗವುಳ್ಳವರಿಗೆ ತಂದುಲವನ್ನೂ ಕೊಡಿಸಬಾರದು. ಕುಷ್ಠ, ಪಿತ್ತರೋಗಗಳುಳ್ಳವರಿಗೂ, ಬ್ರಾಹ್ಮಣರಿಗೂ ವಿಷಪರೀಕ್ಷೆಯನ್ನು ಕೊಡಲಾಗದು. ಧರ್ಮ್ಯವೂ ಅನುಲ್ಲಂಘ್ಯವೂ ಆದ ತಪ್ತಮಾಷಕವೆಂಬುದು ಎಲ್ಲರಿಗೂ ವಿಹಿತವಾಗಿರುವುದು.

೨೧. ವ್ಯಾಧಿಗಳಿಂದ ಉಪಹತವಾದ ದೇಶದಲ್ಲಿ ಶಪಥವನ್ನಾಗಲಿ, ಕೋಶವನ್ನಾಗಲಿ ಉಪಯೋಗಿಸಬಾರದು. ಕೆಲವರು ಈ ದಿವ್ಯಪ್ರಕಾರಗಳನ್ನು ಆಸುರೀಮಾರ್ಗಗಳಿಂದ ಸ್ತಂಭನಗೊಳಿಸಬಲ್ಲರು. ಆದುದರಿಂದ ಧರ್ಮಜ್ಞರೂ ಧರ್ಮದಲ್ಲಿ ಪ್ರೀತಿಯುಳ್ಳವರೂ, ಸ್ತಂಭನಗಳಿಗೆ ಪ್ರತೀಕಾರಗಳನ್ನು ಬಲ್ಲವರೂ ಆದವರನ್ನು ಈ ಕಾರ್ಯಗಳಲ್ಲಿ ನಿಯೋಗಿಸಬೇಕು.

೨೨. ರಾಜನಾದವನು ನಿತ್ಯವೂ ಇಂತಹ ದಿವ್ಯ ಸ್ತಂಭಕರನ್ನು ಹುಡುಕಿಸಿ ತನ್ನ ರಾಷ್ಟ್ರದಿಂದ ಓಡಿಸಬೇಕು. ಅವರು ಲೋಕಕಂಟಕರೇ ಸರಿ.

**ತೇಷಾಮನ್ವೇಷಣೇ ಯತ್ನಂ ರಾಜಾ ನಿತ್ಯಂ ಸಮಾಚರೇತ್ ।**
**ತೇಹಿ ಪಾಪಸಮಾಚಾರಾಸ್ತಸ್ಕರೇಭ್ಯೋಽಪಿ ತಸ್ಕರಾಃ ॥ ೨೩ ॥**
**ಪ್ರಾಗ್ದೃಷ್ಟದೋಷಾನ್ಸ್ವಲ್ಪೇಷು ದಿವ್ಯೇಷು ವಿನಿಯೋಜಯೇತ್ ।**
**ಮಹತ್ಸ್ವಪಿ ನಚಾರ್ಥೇಷು ಧರ್ಮಜ್ಞಾನ್ಧರ್ಮವತ್ಸಲಾನ್ ॥ ೨೪ ॥**
**ನ ಮಿಥ್ಯಾವಚನಂ ಯೇಷಾಂ ಜನ್ಮಪ್ರಭೃತಿ ವಿದ್ಯತೇ ।**
**ಶ್ರದ್ಧಧ್ಯಾತ್ಪಾರ್ಥಿವಸ್ತೇಷಾಂ ವಚನಾದೇವ ಭಾರತ ॥ ೨೫ ॥**
**ಜ್ಞಾತ್ವಾ ಧರ್ಮಿಷ್ಠತಾಂ ರಾಜಾ ಪುರುಷಸ್ಯ ವಿಚಕ್ಷಣಃ ।**
**ಕ್ರೋಧಾಲ್ಲೋಭಾತ್ಕಾರಯಂಶ್ಚ ಸ್ವಯಮೇವ ಪ್ರದುಷ್ಯತಿ ॥ ೨೬ ॥**
**ತಸ್ಮಾತ್ಪಾಪಿಷು ದಿವ್ಯಂ ಸ್ಯಾತ್ತತ್ರಾದೌ ಪ್ರೋಚ್ಯತೇ ಘಟೇ ॥ ೨೭ ॥**
**ಸುಸಮಾಯಾಂ ಪೃಥಿವ್ಯಾಂ ಚ ದಿಗ್ಭಾಗೇ ಪೂರ್ವದಕ್ಷಿಣೇ ।**
**ಯಜ್ಞೀಯಸ್ಯ ತು ವೃಕ್ಷಸ್ಯ ಸ್ಥಾಪ್ಯಂ ಸ್ಯಾನ್ಮುಂಡಕದ್ವಯಂ ॥ ೨೮ ॥**
**ಸ್ತಂಭಕಸ್ಯ ಪ್ರಮಾಣಂ ಚ ಸಪ್ತಹಸ್ತಂ ಪ್ರಕೀರ್ತಿತಂ ।**
**ದ್ವೌ ಹಸ್ತೌ ನಿಖನೇತ್ಕಾಷ್ಠಂ ದೃಶ್ಯಂ ಸ್ಯಾದ್ಧಸ್ತಪಂಚಕಂ ॥ ೨೯ ॥**

---

೨೩. ರಾಜನು ಸತತವೂ ಅಂತಹ ಅಭಿಚಾರಜ್ಞರ ಅನ್ವೇಷಣೆಯಲ್ಲಿ ವಿಶೇಷ ಯತ್ನವನ್ನು ಮಾಡಬೇಕು. ಅವರೆಲ್ಲರೂ ಪಾಪವೃತ್ತಿಯುಳ್ಳವರು. ಕಳ್ಳರಿಗಿಂತಲೂ ಕಳ್ಳರೆಂದು ಕರೆಯಲ್ಪಡುವರು.

೨೪. ಮೊದಲು ದೋಷಯುಕ್ತರಾಗಿದ್ದವರನ್ನು ಅಲ್ಪಗಳಾದ ಪರೀಕ್ಷೆಗಳಲ್ಲಿ ನಿಯೋಜಿಸಬೇಕು. ಮಹಾಪರಾಧಗಳಲ್ಲಿ ಅವರನ್ನು ಅಧಿಕೃತರನ್ನಾಗಿ ಮಾಡಬಾರದು. ಅಂತಹವುಗಳಲ್ಲಿ ಧರ್ಮಜ್ಞರೂ ಧರ್ಮಾಭಿಲಾಷೆಯುಳ್ಳವರೂ ಮಾತ್ರ ತಕ್ಕವರಾಗುವರು.

೨೫. ಯಾರಲ್ಲಿ ಸುಳ್ಳೆಂಬುದು ಜನ್ಮಕಾಲದಿಂದಲೂ ಕಾಣುವುದಿಲ್ಲವೊ ಅಂತಹವರ ಮಾತುಗಳಲ್ಲಿಯೇ ರಾಜನಾದವನು ನಂಬಿಕೆಯನ್ನಿಡಬೇಕು.

೨೬. ಒಬ್ಬ ಮನುಷ್ಯನ ಧರ್ಮಜೀವನವನ್ನು ತಿಳಿದೂ ಕೂಡ ರಾಜನು ಕ್ರೋಧದಿಂದಾಗಲಿ, ಲೋಭದಿಂದಾಗಲಿ ಆತನನ್ನು ಹಿಂಸಿಸಲು, ಆ ರಾಜನು ಎಷ್ಟು ವಿಚಕ್ಷಣನಾದರೂ ತಾನೇ ಪಾಪಿಯಾಗುವನು.

೨೭–೨೯. ಆದುದರಿಂದ ಪಾಪಿಗಳಲ್ಲಿಯೇ ಈ ದಿವ್ಯಗಳನ್ನು ಪ್ರಯೋಗಿಸಬೇಕು. ಅವುಗಳಲ್ಲಿ ಮೊದಲನೆಯದೇ ಘಟವು. ಹಳ್ಳದಿಣ್ಣೆಗಳಿಲ್ಲದೆ ಸಮನಾದ ನೆಲದ ಆಗ್ನೇಯ ಭಾಗದಲ್ಲಿ ಅತ್ತಿಯ ಮರದ ಎರಡು ತುಂಡುಗಳನ್ನು ಹೂಳಬೇಕು. ಈ ಸ್ತಂಭಗಳ ಉದ್ದವು ಏಳು ಹಸ್ತಗಳೆಂದು ಹೇಳಲ್ಪಟ್ಟಿರುವುದು. ಅವುಗಳಲ್ಲಿ ಎರಡು ಹಸ್ತಗಳಷ್ಟು ಭೂಮಿಯಲ್ಲಿಯೂ, ಐದು ಹಸ್ತಗಳು ಮೇಲೆ ಕಾಣುವಂತೆಯೂ ಇರಬೇಕು.

ಅಂತರಂ ತು ತಯೋಃ ಕಾರ್ಯಂ ತಥಾ ಹಸ್ತಚತುಷ್ಟಯಂ ।
ಮುಂಡಕೋಪರಿ ಕಾಷ್ಠಂ ಚ ದೃಢಂ ಕುರ್ಯಾದ್ವಿಚಕ್ಷಣಃ ॥ ೩೦ ॥
ಚತುರ್ಹಸ್ತಂ ತುಲಾಕಾಷ್ಠಮವ್ರಣಂ ಕಾರಯೇತ್ಸ್ಥಿರಂ ।
ಖಧಿರಾರ್ಜುನವೃಕ್ಷಾಣಾಂ ಶಿಂಶಪಾಶಾಲಜಂ ತಥಾ ॥ ೩೧ ॥
ತುಲಾಕಾಷ್ಠೇ ತು ಕರ್ತವ್ಯಂ ತಥಾನ್ಯೈ ಶಿಕ್ಯಕದ್ವಯಂ ।
ಪ್ರಾಙ್ಮುಖೋ ನಿಶ್ಚಲಃ ಕಾರ್ಯಃ ಶುಚೌ ದೇಶೇ ಘಟಸ್ತಥಾ ॥ ೩೨ ॥
ಪಾಷಾಣಸ್ಯಾಪಿ ಜಾಯೇತ ಸ್ತಂಭೇಷು ಚ ಘಟಸ್ತಥಾ ।
ವಣಿಕ್ಸುವರ್ಣಕಾರೋ ವಾ ಕುಶಲಃ ಕಾಂಸ್ಯಕಾರಕಃ ॥ ೩೩ ॥
ತುಲಾಧಾರಧರಃ ಕಾರ್ಯೋ ರಿಪೌ ಮಿತ್ರೇ ಚ ಯಃ ಸಮಃ ।
ಶ್ರಾವಯೇತ್ಪ್ರಾಗ್ವಿವೇಕೋಽಪಿ ತುಲಾಧರಂ ವಿಚಕ್ಷಣಃ ॥ ೩೪ ॥
ಬ್ರಹ್ಮಘ್ನೇ ಯೇ ಸ್ಮೃತಾ ಲೋಕಾ ಯೇ ಚ ಸ್ತ್ರೀಬಾಲಘಾತಕೇ ।
ತುಲಾಧಾರಸ್ಯ ತೇ ಲೋಕಾಸ್ತುಲಾಂ ಧಾರಯತೋ ಮೃಷಾ ॥ ೩೫ ॥

---

೩೦. ಇವುಗಳ ಮಧ್ಯೆ ನಾಲ್ಕು ಹಸ್ತಗಳ ಅಂತರವನ್ನಿರಿಸಬೇಕು. ಮತ್ತು ಬುದ್ಧಿವಂತನಾದ ಅಧಿಕಾರಿಯು ಇವುಗಳ ಮೇಲೆ ದೃಢವಾದ ಕಾಷ್ಠವೊಂದನ್ನು ಬಲಪಡಿಸಬೇಕು.

೩೧. ಇದರ ಮಧ್ಯದಲ್ಲಿ ನಾಲ್ಕು ಹಸ್ತಗಳ ಅಳತೆಯುಳ್ಳ ದಂಡೆಯನ್ನು ತೂಗಹಾಕಬೇಕು. ಇದನ್ನು ಖದಿರ, ಅರ್ಜುನ, ಶಿಂಶಪ ಅಥವ ಸಾಲದ ಮರದಿಂದ ಮಾಡಿರಬೇಕು.

೩೨. ಇದರ ಎರಡು ಕೊನೆಗಳಿಂದಲೂ ಎರಡು ಹಗ್ಗಗಳನ್ನು ಬಿಟ್ಟು ಶುಚಿಯಾದ ದೇಶದಲ್ಲಿ ಪೂರ್ವಾಭಿಮುಖವಾಗಿ ಕುಳಿತು ನಿಶ್ಚಲಮನಸ್ಕನಾಗಿ ಕಲಶಸ್ಥಾಪನೆಯನ್ನು ಆಪಾದಿತನ ಕೈಯಲ್ಲಿ ಮಾಡಿಸಬೇಕು.

೩೩–೩೪. ಈ ಸ್ತಂಭಗಳ ವಿಷಯದಲ್ಲಿ ಕಲಶವು ಕಲ್ಲಿನದಾದರೂ ಆಗಿರಬಹುದು. ಮತ್ತು ಈ ತುಲಾಧಾರಣ ಕಾರ್ಯದಲ್ಲಿ ನಿಪುಣರಾದ ವರ್ತಕ, ಅಕ್ಕಸಾಲಿಗ ಅಥವ ಕಂಚು, ಹಿತ್ತಾಳೆಯ ವ್ಯಾಪಾರದವರನ್ನು ನಿಯೋಜಿಸಬೇಕು. ಅವರು ಆಪಾದಿತ, ಆಪಾದಕ ಪಕ್ಷಗಳೆರಡರಲ್ಲೂ ಸಮವರ್ತನೆಯುಳ್ಳವರಾಗಬೇಕು. ಅಲ್ಲದೆ ತನ್ನ ಕಾರ್ಯದಲ್ಲಿ ಶಕ್ತನಾದ ತುಲಾಧಾರನಿಗೂ ಕೂಡ ನ್ಯಾಯಾಧಿಪತಿಯಾದವನು ತನ್ನ ಕಾರ್ಯವನ್ನು ತಿಳಿಸಬೇಕು.

೩೫. ಬ್ರಾಹ್ಮಣರನ್ನು ಕೊಂದುದರಿಂದಲೂ, ಸ್ತ್ರೀ ಬಾಲಕರ ವಧೆಯಿಂದಲೂ ಯಾವ ಪಾಪವು ಸಂಘಟಿಸುವುದೆಂದು ಸ್ಮೃತಿಗಳಲ್ಲಿ ಹೇಳಲ್ಪಟ್ಟಿರುವುದೊ, ಆ ಪಾಪವನ್ನೇ ತೂಗುವುದರಲ್ಲಿ ಮೋಸಮಾಡುವವನೂ ಪಡೆದು ಅಧೋಲೋಕಗಳಿಗೆ ಹೋಗುವನು.

ಏಕಸ್ಮಿಂಸ್ತೋಲಯೇಚ್ಛಿಕ್ಯೇ ಜ್ಞಾತಂ ಸಂಪ್ರೋಕ್ಷಿತಂ ನರಂ ।
ದ್ವಿತೀಯೇ ಮೃತ್ತಿಕಾಂ ಶುಭ್ರಾಂ ಗೌರಾಂತು ತುಲಯೇದ್ಬುಧಃ ॥ ೩೬ ॥
ಇಷ್ಟಿಕಾಭಸ್ಮ ಪಾಷಾಣಕಪಾಲಾಸ್ಥೀನಿ ವರ್ಜಯೇತ್ ।
ತೋಲಯಿತ್ವಾ ತತಃ ಪೂರ್ವಂ ತಸ್ಮಾತ್ತಮುವತಾರಯೇತ್ ॥ ೩೭ ॥
ಮೂರ್ಧ್ನಿ ಪತ್ರಂ ತತೋ ನ್ಯಸ್ಯ ನ್ಯಸ್ತಪತ್ರಂ ನಿವೇಶಯೇತ್ ।
ಪತ್ರೇ ಮಂತ್ರಸ್ತ್ವಯಂ ಲೇಖ್ಯೋ ಯಃ ಪುರೋಕ್ತಃ ಸ್ವಯಂಭುವಾ ॥
ಬ್ರಹ್ಮಣಸ್ತ್ವಂ ಸುತಾ ದೇವಿ ತುಲಾನಾಮ್ನೇತಿ ಕಥ್ಯತೇ ।
ತುಕಾರೋ ಗೌರವೇ ನಿತ್ಯಂ ಲಕಾರೋ ಲಘುನಿ ಸ್ಮೃತಃ ॥ ೩೯ ॥
ಗುರುಲಾಘವಸಂಯೋಗಾತ್ತುಲಾ ತೇನ ನಿಗದ್ಯಸೇ ।
ಸಂಶಯಾನ್ಮೋಚಯಸ್ವೈನಮಭಿಶಸ್ತಂ ನರಂ ಶುಭೇ ॥ ೪೦ ॥
ಭೂಯ ಆರೋಪಯೇತ್ತಂ ತು ನರಂ ತಸ್ಮಿನ್ಸಪತ್ರಕಂ ।
ತುಲಿತೋ ಯದಿ ವರ್ಧೇತ ಶುದ್ಧೋ ಭವತಿ ಧರ್ಮತಃ ॥ ೪೧ ॥

---

೩೬. ಅಪಾದಿತನಿಗೆ ತನ್ನ ಮೇಲಿರುವ ಅನುಮಾನವನ್ನು ತಿಳಿಸಿ ಉಪವಾಸ ನಿಯಮದಿಂದೊಡಗೂಡಿದ ಆತನನ್ನು ಒಂದು ತಟ್ಟೆಯಲ್ಲಿ ಕೂಡಿಸಬೇಕು. ಎರಡನೆಯದರಲ್ಲಿ ಅವನ ತೂಕಕ್ಕೆ ಸಮನಾದ ಶುಭ್ರವೂ, ಕೆಂಪುಬಣ್ಣದ್ದೂ ಆದ ಮಣ್ಣನ್ನು ತುಂಬಬೇಕು.

೩೭. ಇಟ್ಟಿಗೆಗಳು, ಬೂದಿ, ಕಲ್ಲುಗಳು, ಮಡಿಕೆಯ ಚೂರುಗಳು, ಮೂಳೆಗಳು— ಇವುಗಳನ್ನುಪಯೋಗಿಸಬಾರದು. ಇಂತು ಅವನನ್ನು ತೂಕಮಾಡಿ ಬಳಿಕ ಕೆಳಕ್ಕೆ ಇಳಿಸಬೇಕು.

೩೮–೪೦. ಬಳಿಕ ಅವನ ತಲೆಯ ಮೇಲೆ ಒಂದು ಚೀಟಿಯನ್ನು ಇಟ್ಟು ಮತ್ತೆ ತ್ರಾಸಿನ ತಟ್ಟೆಯಲ್ಲಿ ಕೂಡಿಸಬೇಕು. ಆ ಪತ್ರದಲ್ಲಿ ಮುನ್ನು ಬ್ರಹ್ಮದೇವನಿಂದ ಹೇಳಲ್ಪಟ್ಟ "ಬ್ರಹ್ಮಣಸ್ತ್ವಂ.........ಶುಭೇ— ಎಲೌ ತುಲಾದೇವಿಯೇ! (ತಕ್ಕಡಿಯೇ) ನೀನು ಬ್ರಹ್ಮಪುತ್ರಿಯು. 'ತು'ಕಾರವು ಭಾರದಲ್ಲಿಯೂ, 'ಲ'ಕಾರವು ಲಘುತ್ವದಲ್ಲಿಯೂ ಹೇಳಲ್ಪಡುತ್ತದೆ. ಎಲೌ ಮಂಗಳಾಂಗಿಯೇ! ಅಪರಾಧಿಯಾಗಿರುವ ಈ ಮನುಷ್ಯನನ್ನು ಸಂಶಯದಿಂದ ವಿಮೋಚನಗೊಳಿಸು" ಎಂಬ ಎರಡು ಶ್ಲೋಕಗಳ ಮಂತ್ರವನ್ನು ಬರೆಯಬೇಕು.

೪೧. ಪತ್ರಸಹಿತನನ್ನಾಗಿ ಆಪಾದಿತನನ್ನು ಮತ್ತೆ ತಟ್ಟೆಯಲ್ಲಿ ಕೂಡಿಸಬೇಕು. ಇಂತು ತೂಕಮಾಡಲು ಮೊದಲಿಗಿಂತ ಅವನು ಭಾರವಾಗಿ ಕಂಡುಬಂದರೆ ಧರ್ಮಶಾಸ್ತ್ರಾನುಸಾರವಾಗಿ ಅವನನ್ನು ಶುದ್ಧನನ್ನಾಗಿ ತಿಳಿಯಬೇಕು.

ಹೀಯಮಾನೋ ನ ಶುದ್ಧಃ ಸ್ಯಾದಿತಿ ಧರ್ಮವಿದೋ ವಿದುಃ ।
ಶಿಕ್ಯಚ್ಛೇದೇ ತುಲಾಭಂಗೇ ಪುನರಾರೋಪಯೇನ್ನರಂ ॥ ೪೨ ॥
ಏವಂ ನಿಸ್ಸಂಶಯಂ ಜ್ಞಾನಂ ಯಚ್ಚಾನ್ಯಾಯಂ ನ ಲೋಪಯೇತ್ ।
ಏತತ್ಸರ್ವಂ ರವೌ ವಾರೇ ಕಾರ್ಯಂ ಸಂಪೂಜ್ಯ ಭಾಸ್ಕರಂ ॥ ೪೩ ॥
ಅಥಾತಃ ಸಂಪ್ರವಕ್ಷ್ಯಾಮಿ ವಿಷದಿವ್ಯಂ ಶೃಣುಷ್ವ ಮೇ ॥ ೪೪ ॥
ದ್ವಿಪ್ರಕಾರಂ ಚ ತತ್ಪ್ರೋಕ್ತಂ ಘಟಸರ್ಪವಿಷಂ ತಥಾ ।
ಶೃಂಗಿಣೋ ವತ್ಸನಾಭಸ್ಯ ಹಿಮಶೈಲಭವಸ್ಯವಾ ॥ ೪೫ ॥
ಯವಾಃ ಸಪ್ತಪ್ರದಾತವ್ಯಾ ಅಥವಾ ಷಡ್ಘೃತಪ್ಲುತಾಃ ।
ಮೂರ್ಧ್ನಿ ದಿವ್ಯಸ್ತುಪತ್ರಸ್ಯ ಪತ್ರೇ ಚೈವಂ ನಿವೇಶಯೇತ್ ॥ ೪೬ ॥
ತ್ವಂ ವಿಷ ಬ್ರಹ್ಮಣಃ ಪುತ್ರ ಸತ್ಯಧರ್ಮೇ ವ್ಯವಸ್ಥಿತಃ ।
ತ್ರಾಯಸ್ವೈನಂ ನರಂ ಪಾಪಾತ್ಸತ್ಯೇನಾಸ್ಯ ಭವಾಮೃತಂ ॥ ೪೭ ॥
ಯೇನ ವೇಗೈರ್ವಿನಾ ಜೀರ್ಣಂ ಛರ್ದಿಮೂರ್ಛಾವಿವರ್ಜಿತಂ ।
ತಂ ತು ಶುದ್ಧಂ ವಿಜಾನೀಯಾದಿತಿ ಧರ್ಮವಿದೋ ವಿದುಃ ॥ ೪೮ ॥

---

೪೨–೪೪. ಅವನ ತೂಕವು ಮೊದಲಿಗಿಂತಲೂ ಕಡಿಮೆಯಾದಲ್ಲಿ ಅವನೇ ಅಪರಾಧಿಯೆಂದು ಧರ್ಮವನ್ನು ತಿಳಿದವರು ನಿಶ್ಚಯಿಸಿರುವರು. ತ್ರಾಸಿನ ಹಗ್ಗಗಳು ಕಿತ್ತುಹೋದರಾಗಲಿ, ಮರವು ಮುರಿದರಾಗಲಿ ಮತ್ತೆ ಆಪಾದಿತನ ಪರೀಕ್ಷೆಯನ್ನು ಮಾಡಬೇಕು. ಇಂತು ನಿಸ್ಸಂಶಯವಾದ ನಿಜವನ್ನು ತಿಳಿಯಬಹುದು. ಅನ್ಯಾಯವನ್ನು ಮುಚ್ಚಿಡಲಾಗುವುದಿಲ್ಲ. ಈ ಕಾರ್ಯವೆಲ್ಲವನ್ನೂ ಭಾನುವಾರದ ದಿನದಲ್ಲಿ ಮೊದಲು ಸೂರ್ಯನನ್ನು ಪೂಜಿಸಿದ ಬಳಿಕ ಕೈಕೊಳ್ಳಬೇಕು. ಇನ್ನು ವಿಷಪರೀಕ್ಷೆಯನ್ನು ತಿಳಿಸುವೆನು ಕೇಳುವವನಾಗು.

೪೫. ಇದು ಎರಡು ವಿಧಗಳಾದುದೆಂದು ಹೇಳಲ್ಪಟ್ಟಿರುವುದು. ಮೊದಲನೆಯದು ಕಾಲಸರ್ಪಗಳ ವಿಷವುಳ್ಳುದು. ಎರಡನೆಯದು ಹಿಮಾಲಯದಲ್ಲಿರುವ ಶೃಂಗಿ ಅಥವ ವತ್ಸನಾಭಿಯೆಂಬ ಮೂಲಿಕೆಗಳುಳ್ಳುದು.

೪೬–೪೮. ಎರಡನೆಯ ಪರೀಕ್ಷೆಯಲ್ಲಿ ಮೂಲಿಕೆಯ ವಿಷವನ್ನು ಆರು ಅಥವಾ ಏಳು ಯವಗಳ ತೂಕದಷ್ಟು ತುಪ್ಪದಲ್ಲಿ ಬೆರಸಿಕೊಡಬೇಕು. ಆಪಾದಿತನ ತಲೆಯ ಮೇಲೆ "ತ್ವಂ........ಭವಾಮೃತಂ— ಎಲೈ ಸತ್ಯಧರ್ಮಗಳನ್ನು ನಿರ್ಣಯಮಾಡುವುದರಲ್ಲಿ ಪ್ರಸಿದ್ಧವಾದ ವಿಷವೇ! ನೀನು ಬ್ರಹ್ಮಪುತ್ರನಾಗಿರುವೆ. ಈ ಮನುಷ್ಯನನ್ನು ಪಾಪಗಳಿಂದ ದೂರಮಾಡಿ ಇವನ ಸತ್ಯದಿಂದಿವನಿಗೆ ಅಮೃತಪ್ರಾಯನಾಗು" ಎಂಬ ಶ್ಲೋಕವನ್ನು ಬರೆದಿರುವ ಚೀಟಿಯೊಂದನ್ನು ಇಡಬೇಕು. ದೇಹದಲ್ಲಿ ವಿಷವೇಗವೇ ಕಾಣದೆ ವಾಂತಿ, ಮೂರ್ಛೆಗಳಿಲ್ಲದೆ ಆ ವಿಷವು ಯಾವನಿಗೆ ಜೀರ್ಣವಾಗುವುದೊ, ಅವನು ಪರಿಶುದ್ಧನೆಂದು ತಿಳಿಯಬೇಕೆಂಬುದಾಗಿ ಧರ್ಮಜ್ಞರು ನಿಶ್ಚಯಿಸಿರುವರು.

ಕ್ಷುಧಿತಂ ಕ್ಷುಧಿತಃ ಸರ್ಪಂ ಘಟಸ್ಥಂ ಪ್ರೋಚ್ಯ ಪೂರ್ವವತ್ ।
ಸಂಸ್ಪೃಶೇತ್ತಾಲಿಕಾಃ ಸಪ್ತ ನ ದಶೇಚ್ಛುಧ್ಯತೀತಿ ಸಃ ॥ ೪೯ ॥
ಅಗ್ನಿದಿವ್ಯಂ ಯಥಾಪ್ರಾಹ ವಿರಂಚಿಸ್ತಚ್ಛೃಣುಷ್ವ ಮೇ ।
ಸಪ್ತ ಮಂಡಲಕಾನ್ಕುರ್ಯಾದ್ದೇವಸ್ಯಾಗ್ರೇ ರವೇಸ್ತಥಾ ।
ಮಂಡಲಾನ್ಮಂಡಲಂ ಕಾರ್ಯಂ ಪೂರ್ವೇಣೇತಿ ವಿನಿಶ್ಚಯಃ ॥ ೫೦ ॥
ಷೋಡಶಾಂಗುಲಕಂ ಕಾರ್ಯಂ ಮಂಡಲಾತ್ತಾವದಂತರಂ ॥ ೫೧ ॥
ಆರ್ದ್ರವಾಸಸಮಾಹೂಯ ತಥಾ ಚೈವಾಪ್ಯುಪೋಷಿತಂ ।
ಕಾರಯೇತ್ಸರ್ವದಿವ್ಯಾನಿ ದೇವಬ್ರಾಹ್ಮಣಸನ್ನಿಧೌ ॥ ೫೨ ॥
ಪ್ರತ್ಯಕ್ಷಂ ಕಾರಯೇದ್ದಿವ್ಯಂ ರಾಜ್ಞೋ ವಾಽಧಿಕೃತಸ್ಯ ವಾ ।
ಬ್ರಾಹ್ಮಣಾನಾಂ ಶ್ರುತವತಾಂ ಪ್ರಕೃತೀನಾಂ ತಥೈವ ಚ ॥ ೫೩ ॥
ಪಶ್ಚಿಮೇ ದಿನಕಾಲೇ ಹಿ ಪ್ರಾಙ್ಮುಖಃ ಪ್ರಾಂಜಲಿಃ ಶುಚಿಃ ।
ಚತುರಸ್ರೇ ಮಂಡಲೇಽನ್ಯೇ ಕೃತ್ವಾ ಚೈವ ಕರೌ ಸಮೌ ॥ ೫೪ ॥

---

೪೯. ಮೊದಲನೆಯ ಘಟಸರ್ಪ ವಿಷ ಪರೀಕ್ಷೆಯಲ್ಲಿ ನಿರಾಹಾರಿಯಾದ ಸರ್ಪವನ್ನು ಒಂದು ಘಟದಲ್ಲಿರಿಸಿ ಆಪಾದಿತನೂ ಉಪವಾಸವನ್ನು ಮಾಡಿದವನಾಗಿ ಮೇಲೆ ಹೇಳಿದ ಮಂತ್ರವನ್ನು ಜಪಿಸುತ್ತ ಏಳು ಸಲ ತನ್ನ ಅಂಗೈಗಳಿಂದ ಆ ಸರ್ಪವನ್ನು ಮುಟ್ಟಬೇಕು. ಅದು ಕಚ್ಚದಿದ್ದಲ್ಲಿ ಅವನನ್ನು ಶುದ್ಧನೆಂದು ತಿಳಿದು ಬಿಟ್ಟುಬಿಡಬೇಕು.

೫೦-೫೧. ಇನ್ನು ಪೂರ್ವದಲ್ಲಿ ಬ್ರಹ್ಮನು ನಿರೂಪಿಸಿದ ಅಗ್ನಿಪರೀಕ್ಷೆಯನ್ನು ತಿಳಿಸುವೆನು. ಮೊದಲು ಸೂರ್ಯನ ಸನ್ನಿಧಿಯಲ್ಲಿ ಏಳು ಸುತ್ತುಗಳುಳ್ಳ ಮಂಡಲವೊಂದನ್ನು ರಚಿಸಬೇಕು. ಒಂದೊಂದನ್ನು ಸುತ್ತುವರಿಯುವಂತೆ ಮತ್ತೊಂದು ಮಂಡಲವನ್ನು ರಚಿಸಬೇಕು. ಒಂದೊಂದಕ್ಕೂ ಮಧ್ಯೆ ಹದಿನಾರಂಗುಲದ ಅಂತರವನ್ನು ಇಡಬೇಕು.

೫೨. ಉಪವಾಸವನ್ನು ಮಾಡಿ ಒದ್ದೆಯನ್ನುಟ್ಟ ಆಪಾದಿತನನ್ನು ಕರೆತರಿಸಿ ಸಕಲ ಪರೀಕ್ಷೆಗಳನ್ನೂ ದೇವತೆಗಳ ಮತ್ತು ಬ್ರಾಹ್ಮಣರ ಸನ್ನಿಧಿಯಲ್ಲಿ ಮಾಡಬೇಕು.

೫೩. ರಾಜನೂ, ಆತನಿಂದ ಅಧಿಕಾರವನ್ನು ಪಡೆದ ಭೃತ್ಯನೂ ವೇದಜ್ಞರಾದ ಬ್ರಾಹ್ಮಣರು, ಪಂಚಭೂತಗಳು,—ಈ ಸಾಕ್ಷಿಗಳ ಸಮ್ಮುಖದಲ್ಲಿ ಈ ಪರೀಕ್ಷೆಯನ್ನು ನಡೆಸಬೇಕು.

೫೪. ದಿವಸದ ಅಪರಭಾಗದಲ್ಲಿ ಆಪಾದಿತನು ಪೂರ್ವಾಭಿಮುಖನಾಗಿ ಅಂಜಲಿಬಂಧವನ್ನು ಮಾಡಿ ಶುಚಿರ್ಭೂತನಾಗಿ ಮತ್ತೊಂದು ನಾಲ್ಕು ಮೂಲೆಯ ಮಂಡಲದಲ್ಲಿ ಕುಳಿತುಕೊಂಡು ಎರಡು ಕೈಗಳನ್ನೂ ಸಮನಾಗಿ ನೀಡಬೇಕು.

ಲಕ್ಷಯೇಯುಃ ಕೃತಾದೀನಿ ಹಸ್ತಯೋಸ್ತಸ್ಯ ಹಾರಿಣಃ ।
ಸಪ್ತಾಶ್ವತ್ಥಸ್ಯ ಪತ್ರಾಣಿ ಬಧ್ನೀಯುಃ ಕರಯೋಸ್ತತಃ ।
ನವೇನ ಕೃತಸೂತ್ರೇಣ ಕಾರ್ಪಾಸೇನ ದೃಢಂ ತಥಾ ॥ ೫೫ ॥
ತತಸ್ತು ಸುಸಮಂ ಕೃತ್ವಾ ಅಷ್ಟಾಂಗುಲಮಥಾಯಸಂ ।
ಪಿಂಡಂ ಹುತಾಶಸಂತಪ್ತಂ ಪಂಚಾಶತ್ಪಲಿಕಂ ದೃಢಂ ॥ ೫೬ ॥
ಆದೌ ಪೂಜಾಂ ರವೇಃ ಕೃತ್ವಾ ಹುತಾಶಸ್ಯಾಥ ಕಾರಯೇತ್ ॥ ೫೭ ॥
ರಕ್ತಚಂದನ ಧೂಪಾಭ್ಯಾಂ ರಕ್ತಪುಷ್ಪೈಸ್ತಥೈವ ಚ ।
ಅಭಿಶಸ್ತಸ್ಯ ಪತ್ರಂಚ ಬಧ್ನೀಯಾಚ್ಚೈವಮೂರ್ಧನಿ ।
ಮಂತ್ರೇಣಾನೇನ ಸಂಯುಕ್ತಂ ಬ್ರಾಹ್ಮಣಾಭಿಹಿತೇನ ಚ ॥ ೫೮ ॥
ತ್ವಮಗ್ನೇ ವೇದಾಶ್ಚತ್ವಾರಸ್ತ್ವಂ ಚ ಯಜ್ಞೇಷು ಹೂಯಸೇ ।
ಪಾಪಂ ಪುನಾಸಿ ವೈ ಯಸ್ಮಾತ್ತಸ್ಮಾತ್ಪಾವಕ ಉಚ್ಯಸೇ ॥ ೫೯ ॥
ತ್ವಂ ಮುಖಂ ಸರ್ವದೇವಾನಾಂ ತ್ವಂ ಮುಖಂ ಬ್ರಹ್ಮವಾದಿನಾಂ ।
ಜಠರಸ್ಥೋಽಸಿ ಭೂತಾನಾಂ ತತೋ ವೇತ್ಸಿ ಶುಭಾಶುಭಂ ॥ ೬೦ ॥
ಪಾಪೇಷು ಧರ್ಷಯಾತ್ಮಾನಮರ್ಚಿಷ್ಮಾನ್ಭವ ಪಾವಕ ।
ಅಥವಾ ಶುದ್ಧಭಾವೇಷು ಶೀತೋ ಭವ ಮಹಾಬಲ ॥ ೬೧ ॥

---

೫೫. ಆಹಾರವನ್ನು ಮಾಡಿದವನ ಹಸ್ತಗಳಿಂದ ಕೃತಾಕೃತಗಳನ್ನು ಪ್ರಾಜ್ಞರು ತಿಳಿಯುವರು. ಆಪಾದಿತನ ಎರಡು ಕೈಗಳಿಗೂ ಏಳು ಅಶ್ವತ್ಥದ ಎಲೆಗಳನ್ನು ಹೊಸದಾಗಿ ಮಾಡಿದ ಹತ್ತಿಯ ದಾರದಿಂದ ಭದ್ರವಾಗಿ ಬಿಗಿಯಬೇಕು.

೫೬–೫೭. ಬಳಿಕ ಎಂಟು ಅಂಗುಲದ ವ್ಯಾಸವುಳ್ಳದ್ದೂ, ಐವತ್ತು ಪಲಗಳ ತೂಕವುಳ್ಳದ್ದೂ ಆದ ಕಬ್ಬಿಣದ ಗುಂಡನ್ನು ನುಣ್ಣಗೆ ಮಾಡಿಸಿ, ಅದನ್ನು ಬೆಂಕಿಯಲ್ಲಿ ಕಾಯಿಸಿ, ಮೊದಲು ಸೂರ್ಯನ ಅರ್ಚನೆಯನ್ನು ಮಾಡಿ ಬಳಿಕ ಅಗ್ನಿಯನ್ನು ಪೂಜಿಸಬೇಕು.

೫೮–೬೧. ರಕ್ತ ಚಂದನದಿಂದಲೂ, ಧೂಪಗಳಿಂದಲೂ, ರಕ್ತಪುಷ್ಪಗಳಿಂದಲೂ ಪೂಜೆಗಳನ್ನು ಮಾಡಬೇಕು. ಆಪಾದಿತನ ತಲೆಯಲ್ಲಿ ಬ್ರಹ್ಮನಿಂದ ಮುನ್ನು ಹೇಳಲ್ಪಟ್ಟ '' ತ್ವಂ ಮುಖಂ......ಮಹಾಬಲ—ಎಲೈ ಅಗ್ನಿಯೇ! ನೀನು ಚತುರ್ವೇದಸ್ವರೂಪನಾದವನು. ನೀನು ಸಮಸ್ತ ಯಜ್ಞಗಳಲ್ಲಿಯೂ ಕರೆಯಲಾಗುವೆ. ಮಾನವರ ಪಾಪಗಳನ್ನು ನೀಗುವೆಯಾಗಿ ನೀನು ಪಾವಕನೆನಿಸಿರುವೆ. ನೀನು ದೇವತೆಗಳಿಗೂ, ಬ್ರಹ್ಮವಾದಿಗಳಿಗೂ ಮುಖವೆನಿಸಿರುವೆ. ನನ್ನಲ್ಲಿ ಪಾಪಗಳಿದ್ದಲ್ಲಿ ನನ್ನನ್ನು ಸುಟ್ಟು ಅರ್ಚಿಷ್ಮಂತನೆನಿಸು. ಶುದ್ಧ ಮನಸ್ಕ

ತತೋಽಭಿಶಸ್ತಃ ಶನಕೈರ್ಮಂಡಲಾನಿ ಪರಿಕ್ರಮೇತ್ ।
ಪರಿಕ್ರಮ್ಯ ಶನೈರ್ಜಹ್ಯಾಲ್ಲೋಹಪಿಂಡಂ ತತಃ ಕ್ಷಿತೌ ।
ವಿಪತ್ರಹಸ್ತಂ ತಂ ಪಶ್ಚಾತ್ಕಾರಯೇದ್ವ್ರೀಹಿಮರ್ದನಂ ॥ ೬೨ ॥
ನಿರ್ವಿಕಾರೌ ಕರೌ ದೃಷ್ಟ್ವಾ ಶುದ್ಧೋ ಭವತಿ ಧರ್ಮತಃ ॥ ೬೩ ॥
ಭಯಾದ್ವಾ ಪಾತಯೇದ್ಯಸ್ತು ತದಧೋ ವಾ ವಿಭಾವ್ಯತೇ ।
ಪುನಸ್ತ್ವಾಹಾರಯೇಲ್ಲೋಹಂ ವಿಧಿರೇಷ ಪ್ರಕೀರ್ತಿತಃ ॥ ೬೪ ॥
ಅಥಾತಃ ಸಂಪ್ರವಕ್ಷ್ಯಾಮಿ ತಪ್ತಮಾಷವಿಧಿಂ ಶ್ರುಣು ॥ ೬೫ ॥
ಕಾರಯೇದಾಯಸಂ ಪಾತ್ರಂ ತಾಮ್ರಂವಾ ಷೋಡಶಾಂಗುಲಂ ।
ಚತುರಂಗುಲಖಾತಂತು ಮೃಣ್ಮಯಂ ವಾಪಿ ಕಾರಯೇತ್ ॥ ೬೬ ॥
ಪೂರಯೇದ್ಘೃತತೈಲಾಭ್ಯಾಂ ಪಲೈರ್ವಿಂಶತಿಭಿಸ್ತತಃ ।
ಸುತಪ್ತೇ ನಿಕ್ಷಿಪೇತ್ತತ್ರ ಸುವರ್ಣಸ್ಯ ತು ಮಾಷಕಂ ॥ ೬೭ ॥

---

ನಾಗಿದ್ದರೆ ನನ್ನ ಭಾಗಕ್ಕೆ ತಣ್ಣಗಾಗು. ಎಲೈ ಅಗ್ನಿಯೇ ನೀನು ಮಹಾಬಲನು" ಎಂಬ ಶ್ಲೋಕಗಳನ್ನು ಬರೆದಿರುವ ಒಂದು ಪತ್ರವನ್ನು ಕಟ್ಟಿರಬೇಕು. ಬಳಿಕ ಆಪಾದಿತನು ಆ ಗುಂಡನ್ನು ಕೈಗಳಲ್ಲಿ ಹಿಡಿದು ಮೆಲ್ಲಗೆ ಆ ಮಂಡಲಗಳೆಲ್ಲವನ್ನೂ ಸುತ್ತಬೇಕು. ಸುತ್ತಿದ ಮೇಲೆ ಆ ಲೋಹಪಿಂಡವನ್ನು ಮೆಲ್ಲಗೆ ಭೂಮಿಯಲ್ಲಿಡಬೇಕು. ಬಳಿಕ ಆಪಾದಿತನ ಕೈಗಳ ಎಲೆಗಳನ್ನು ಬಿಚ್ಚಿ ಆತನಿಂದ ವ್ರೀಹಿಯಮಾದಿ ಧಾನ್ಯಗಳನ್ನು ಕುಟ್ಟಿಸಬೇಕು.

೬೩–೬೫. ಆತನ ಕರಗಳು ಅಗ್ನಿಯಿಂದ ತಪ್ತಗಳಾಗದಿದ್ದರೆ, ಧರ್ಮಶಾಸ್ತ್ರಕ್ಕೆ ಅನುಸಾರವಾಗಿ ಅವನನ್ನು ನಿರ್ದೋಷಿಯೆಂದು ನಿಶ್ಚಯಿಸಬೇಕು. ಯಾವನು ಭಯದಿಂದ ಅಯಃಪಿಂಡವನ್ನು ಕೆಳಕ್ಕೆ ಬಿಡುವನೊ, ಯಾವನು ಈ ದಿವ್ಯವನ್ನು ತನ್ನ ಗೌರವಕ್ಕೆ ತಕ್ಕುದಲ್ಲವೆಂದು ತಿಳಿಯುವನೊ, ಅವರ ಕೈಯಲ್ಲಿ ಮತ್ತೆ ಈ ಕೆಲಸವನ್ನು ಮಾಡಿಸಬೇಕು. ಇದೇ ವಿಧಾನವೆಂದು ಹೇಳಲ್ಪಟ್ಟಿರುವುದು. ಇನ್ನು ತಪ್ತಮಾಷವೆಂಬ ಪರೀಕ್ಷಾಕ್ರಮವನ್ನು ಹೇಳುತ್ತೇನೆ, ಕೇಳುವವನಾಗು.

೬೬. ಹದಿನಾರು ಅಂಗುಲದ ವ್ಯಾಸವೂ, ನಾಲ್ಕು ಅಂಗುಲ ಆಳವೂ ಉಳ್ಳ ಪಾತ್ರೆಯನ್ನು ಕಬ್ಬಿಣದಲ್ಲಾಗಲಿ, ತಾಮ್ರದಲ್ಲಾಗಲಿ, ಮಣ್ಣಿನಲ್ಲಾಗಲಿ ಮಾಡಿಸಬೇಕು.

೬೭. ಅದನ್ನು ಇಪ್ಪತ್ತು ಪಲಗಳ ತೂಕದ ತುಪ್ಪ ಅಥವ ಎಣ್ಣೆಯಿಂದ ತುಂಬಬೇಕು. ಚೆನ್ನಾಗಿ ಕಾಯಿಸಿದ ಮೇಲೆ ಅದರಲ್ಲಿ ಚಿನ್ನದಿಂದ ಮಾಡಿದ ಮಾಷದ (ಉದ್ದಿನ) ಕಾಳುಗಳನ್ನು ಹಾಕಬೇಕು.

ವಹ್ನ್ಯುಕ್ತಂ ವಿನ್ಯಸೇನ್ಮಂತ್ರಮಭಿಶಸ್ತಸ್ಯ ಮೂರ್ಧನಿ ।
ಅಂಗುಷ್ಠಾಂಗುಲಿಯೋಗೇನ ತಪ್ತಮಾಷಂ ಸಮುದ್ಧರೇತ್ ॥ ೬೮ ॥
ಶುದ್ಧಂ ಜ್ಞೇಯಮಸಂದಿಗ್ಧಂ ವಿಸ್ಫೋಟಾದಿವಿವರ್ಜಿತಂ ।
ಫಾಲಶುದ್ಧಿಂ ಪ್ರವಕ್ಷ್ಯಾಮಿ ತಾಂ ಶೃಣು ತ್ವಂ ಧನಂಜಯ ॥ ೬೯ ॥
ಆಯಸಂ ದ್ವಾದಶಪಲಂ ಘಟಿತಂ ಫಾಲಮುಚ್ಯತೇ ।
ಅಷ್ಟಾಂಗುಲಮದೀರ್ಘಂ ಚ ಚತುರಂಗುಲವಿಸ್ತೃತಂ ॥ ೭೦ ॥
ವಹ್ನ್ಯುಕ್ತಂ ವಿನ್ಯಸೇನ್ಮಂತ್ರಮಭಿಶಸ್ತಸ್ಯ ಮೂರ್ಧನಿ ।
ತ್ರಿಃ ಪರಾವರ್ತಯೇಜ್ಜಿಹ್ವಾಂ ಲಿಹನ್ನಸ್ಮಾತ್ ಷಡಂಗುಲಂ ॥ ೭೧ ॥
ಗವಾಂ ಕ್ಷೀರಂ ಪ್ರದಾತವ್ಯಂ ಜಿಹ್ವಾಶೋಧನಮುತ್ತಮಂ ।
ಜಿಹ್ವಾಪರೀಕ್ಷಣಂ ಕುರ್ಯಾದ್ದಗ್ಧಾ ಚೇನ್ನ ವಿಮೋಕ್ಷ್ಯತೇ ॥ ೭೨ ॥
ತಂ ವಿಶುದ್ಧಂ ವಿಜಾನೀಯಾದ್ವಿಶುದ್ಧಾ ಚೇತ್ತು ಜಾಯತೇ ।
ತಂದುಲಸ್ಯಾಥ ವಕ್ಷ್ಯಾಮಿ ವಿಧಿಧರ್ಮಂ ಸನಾತನಂ ॥ ೭೩ ॥

---

೬೮. ಅಗ್ನಿಯಿಂದ ಹೇಳಲ್ಪಟ್ಟ ಮಂತ್ರವನ್ನು ಬರೆದಿರುವ ಒಂದು ಚೀಟಿಯನ್ನು ಆಪಾದಿತನ ತಲೆಯಲ್ಲಿರಿಸಲು, ಆತನ ಹೆಬ್ಬೆರಳು ಮೊದಲನೆಯ ಬೆರಳುಗಳಿಂದ ಆ ಕಾಳುಗಳನ್ನು ಈಚೆಗೆ ತೆಗೆಯಬೇಕು.

೬೯. ಕೈಗಳಲ್ಲಿ ಬೊಬ್ಬೆಗಳೇ ಮೊದಲಾದ ವಿಕಾರಗಳು ಕಾಣದಿದ್ದರೆ ಆಪಾದಿತನು ನಿಸ್ಸಂಶಯವಾಗಿಯೂ ಪರಿಶುದ್ಧನೆಂದು ತಿಳಿಯಬೇಕು. ಎಲೈ ಧನಂಜಯನೆ! ಇನ್ನು ಫಾಲಶುದ್ಧಿಯ ವಿಧಾನವನ್ನು ಕೇಳು.

೭೦. ಹನ್ನೆರಡು ಪಲದ ಭಾರವುಳ್ಳ ಕಬ್ಬಿಣವನ್ನು ಹಲಗೆಯನ್ನಾಗಿಮಾಡಲು ಅದಕ್ಕೆ ಫಾಲವೆಂದು ಹೆಸರು. ಇದು ಇದಕ್ಕಿಂತಲೂ ಹೆಚ್ಚು ಪ್ರಮಾಣವಿಲ್ಲದೆ ಎಂಟು ಅಂಗುಲ ಉದ್ದವೂ ನಾಲ್ಕು ಅಂಗುಲ ಅಗಲವೂ ಉಳ್ಳದ್ದಾಗಿರಬೇಕು.

೭೧. ಮೊದಲಿನಂತೆಯೇ ಅಗ್ನಿಯ ಮಂತ್ರವನ್ನು ಆಪಾದಿತನ ಹಣೆಯಲ್ಲಿ ಕಟ್ಟಿರಲು, ಅವನು ಆ ಫಾಲದ ಉದ್ದದಲ್ಲಿ ಆರು ಅಂಗುಲಗಳಷ್ಟನ್ನು ನಾಲಿಗೆ ಯಿಂದ ನೆಕ್ಕಬೇಕು. ಇಂತು ಮೂರು ಸಲ ಮಾಡಬೇಕು.

೭೨. ಬಳಿಕ ನಾಲಿಗೆಯ ಶುದ್ಧಿಗಾಗಿ ಉತ್ತಮವಾದ ಹಸುವಿನ ಹಾಲನ್ನು ಕುಡಿಸಬೇಕು. ನಾಲಿಗೆಯನ್ನು ಪರೀಕ್ಷಿಸಿ ಅದು ಸುಟ್ಟಿರುವುದನ್ನು ಕಂಡರೆ, ಆಪಾದಿತನು ತಪ್ಪಿತಸ್ಥನೆಂದು ತಿಳಿದು ಬಂಧಿಸಬೇಕು.

೭೩. ಆದರೆ ನಾಲಿಗೆಯು ವಿಶುದ್ಧವಾಗಿದ್ದಲ್ಲಿ ಆಪಾದಿತನು ನಿರ್ದೋಷಿ ಯೆಂದು ತಿಳಿಯಬೇಕು. ಇನ್ನು ಪುರಾತನವಾದ ತಂದುಲಪರೀಕ್ಷೆಯ ಕ್ರಮ ವನ್ನು ಹೇಳುವೆನು.

**ಚೌರ್ಯೇ ತು ತಂದುಲಾ ದೇಯಾ ನ ಚಾನ್ಯತ್ರ ಕಥಂಚನ ।**
**ತಂದುಲಾನುದಕೇ ಸಿಕ್ತ್ವಾ ರಾತ್ರೌ ತತ್ರೈವ ಸ್ಥಾಪಯೇತ್ ॥ ೭೪ ॥**
**ಪ್ರಭಾತೇ ಕಾರಿಣೇ ದೇಯಾ ಭಕ್ಷಣಾಯ ನ ಸಂಶಯಃ ।**
**ತ್ರಿಃಕೃತ್ವಃ ಪ್ರಾಙ್ಮುಖಶ್ಚೈವ ಪತ್ರೇ ನಿಷ್ಠೀವಯೇತ್ತತಃ ॥ ೭೫ ॥**
**ಪಿಪ್ಪಲಸ್ಥಾಯ ಭೂರ್ಜಸ್ಯ ನ ತ್ವನ್ಯಸ್ಯ ಕಥಂಚನ ।**
**ತಾಂಸ್ತು ವೈ ಕಾರಯೇಚ್ಛುದ್ಧಾಂಸ್ತಂದುಲಾನ್ಶಾಲಿಸಂಭವಾನ್ ॥ ೭೬ ॥**
**ಮೃಣ್ಮಯೇ ಭಾಜನೇ ಕೃತ್ವಾ ಸವಿತುಃ ಪುರತಃ ಸ್ಥಿತಃ ।**
**ತಂದುಲಾನ್ಮಂತ್ರಯೇಚ್ಛುದ್ಧಾನ್ಮಂತ್ರೇಣಾನೇನ ಧರ್ಮತಃ ॥ ೭೭ ॥**
**ದೀಯಸೇ ಧರ್ಮತತ್ತ್ವಜ್ಞೈರ್ಮಾನುಷಾಣಾಂ ವಿಶೋಧನಂ ।**
**ಸ್ತುತಸ್ತಂಡುಲ ಸತ್ಯೇನಾ ಧರ್ಮತಸ್ತ್ರಾತು ಮರ್ಹಸಿ ॥ ೭೮ ॥**
**ನಿಷ್ಠೀವನೇ ಕೃತೇ ತೇಷಾಂ ಸವಿತುಃ ಪುರತಃ ಸ್ಥಿತೇ ।**
**ಶೋಣಿತಂ ದೃಶ್ಯತೇ ಯಸ್ಯ ತಮಶುದ್ಧಂ ವಿನಿರ್ದಿಶೇತ್ ॥ ೭೯ ॥**

---

೭೪. ಈ ಪರೀಕ್ಷೆಯನ್ನು ಚೌರ್ಯದ ಆಪಾದನೆಯಲ್ಲಿ ಮಾತ್ರ ಮಾಡಬೇಕು. ಇತರ ದೋಷಗಳಲ್ಲಿ ಮಾಡಬಾರದು. ಅಕ್ಕಿಯ ಕಾಳುಗಳನ್ನು ನೀರಿನಲ್ಲಿ ಹಾಕಿ ಒಂದು ರಾತ್ರಿ ಅಲ್ಲಿಯೇ ನೆನೆಯಿಸಬೇಕು.

೭೫. ಮಾರನೆಯ ದಿನದ ಪ್ರಾತಃಕಾಲದಲ್ಲಿ ಅದನ್ನು ಆಪಾದಿತನಿಗೆ ತಿನ್ನಲು ಕೊಡಬೇಕು. ಈ ದಿವ್ಯದಲ್ಲಿ ಸಂಶಯವಿಲ್ಲವು. ಆಪಾದಿತನು ಪೂರ್ವಾಭಿಮುಖನಾಗಿ ಮೂರು ಸಲ ಬಾಯಿಂದ ಅಕ್ಕಿಯನ್ನು ಎಲೆಗಳ ದೊನ್ನೆಯೊಳಕ್ಕೆ ಉಗುಳಬೇಕು.

೭೬. ಅವನು ಅಶ್ವತ್ಥದ ಆಸನದಲ್ಲಿ ಕುಳಿತಿರಬೇಕು. ದೊನ್ನೆಗಳು ಭೂರ್ಜಪತ್ರಗಳಿಂದ ಮಾಡಲ್ಪಡಬೇಕು. ಇವುಗಳನ್ನು ಅನ್ಯಥಾ ಮಾಡಲಾಗದು. ಅಕ್ಕಿಯನ್ನೂ ಭತ್ತದಿಂದ ಕುಟ್ಟಿ ತೆಗೆದು ಪರಿಶುದ್ಧವನ್ನಾಗಿ ಮಾಡಬೇಕು.

೭೭–೭೮. ಈ ಅಕ್ಕಿಯ ಕಾಳುಗಳನ್ನು ಒಂದು ಮಣ್ಣಿನ ಪಾತ್ರೆಯೊಳಗೆ ಹಾಕಿ ಆಪಾದಿತನು ಭಟ್ಟಾದಿತ್ಯನ ಎದುರಿನಲ್ಲಿ ನಿಂತು ಆ ಕಾಳುಗಳನ್ನು "ದೀಯಸೇ..........ತ್ರಾತುಮರ್ಹಸಿ— ಎಲೈ ತಂಡುಲವೇ! ನಾನು ನಿನ್ನನ್ನು ಸತ್ಯವಾಗಿಯೂ ಸ್ತುತಿಸುವೆನು. ನೀನು ನನ್ನನ್ನು ಅಧರ್ಮದಿಂದ ಕಾಪಾಡು" ಎಂಬ ಮಂತ್ರದಿಂದ ಅಭಿಮಂತ್ರಿಸಿ ಪರಿಶುದ್ಧಗಳನ್ನಾಗಿ ಮಾಡಬೇಕು.

೭೯. ಇಂತು ಸೂರ್ಯದೇವನ ಸನ್ನಿಧಿಯಲ್ಲಿ ನಿಂತು ಅಕ್ಕಿಯ ಕಾಳುಗಳನ್ನು ದೊನ್ನೆಯೊಳಕ್ಕೆ ಉಗುಳಲು, ಯಾವನ ಉಗುಳಿನಲ್ಲಿ ರಕ್ತವು ಕಾಣಿಸುವುದೊ, ಅವನು ಅಪರಾಧಿಯೆಂದು ನಿಶ್ಚಯಮಾಡಬೇಕು.

ಏವಮಷ್ಟವಿಧಂ ದಿವ್ಯಂ ಪಾಪಸಂಶಯಭೇದನಂ ।
ಭಟ್ಟಾದಿತ್ಯಸ್ಯ ಪುರತೋ ಜಾಯತೇ ಕುರುನಂದನ ॥ ೮೦ ॥
ಜಲದಿವ್ಯಂ ತಥಾ ಪ್ರಾಹುರ್ದ್ವಿಪ್ರಕಾರಂ ಪುರಾವಿದಃ ।
ಜಲಹಸ್ತಂ ಸ್ಮೃತಂ ಚೈಕಂ ಮಜ್ಜನಂ ಚಾಪರಂ ವಿದುಃ ॥ ೮೧ ॥
ಬಾಣಕ್ಷೇಪಸ್ತಥಾ ದಾನಂ ಯಾವದ್ವೀರ್ಯವತಾ ಕೃತಂ ।
ತಾವತ್ತಂ ಮಜ್ಜಯೇಜ್ಜೀವೇತ್ತಥಾ ತಚ್ಛುದ್ಧಿಮಾದಿಶೇತ್ ॥ ೮೨ ॥
ಏವಂವಿಧಮಿದಂ ಸ್ಥಾನಂ ಭಟ್ಟಾದಿತ್ಯಸ್ಯ ಭಾರತ ।
ಮಮೈವ ಕೃಪಯಾ ಭಾನೋರ್ಜಾತಮೇತನ್ಮಹೀತಲೇ ॥ ೮೩ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪ್ರಥಮೇ ಮಾಹೇಶ್ವರಖಂಡೇ ಕೌಮಾರಿಕಾಖಂಡೇ
"ಭಟ್ಟಾದಿತ್ಯ ಮಾಹಾತ್ಮ್ಯೇ ದಿವ್ಯವರ್ಣನಂ" ನಾಮ
ಚತುಶ್ಚತ್ವಾರಿಂಶೋಽಧ್ಯಾಯಃ

---

೮೦. ಎಲೈ ಅರ್ಜುನನೆ! ಈ ಎಂಟು ದಿವ್ಯವಿಧಗಳಿಂದ ಕೃತ್ಯಾಕೃತ್ಯಗಳ ಸಂಶಯದ ಪರೀಕ್ಷೆಯು ಭಟ್ಟಾದಿತ್ಯನ ಸಮ್ಮುಖದಲ್ಲಿ ಮಾಡಿದಲ್ಲಿ ನಿಜವು ತಿಳಿಯುವುದು.

೮೧. ಪೂರ್ವಜರು ಜಲಪರೀಕ್ಷೆಯೆಂಬುದನ್ನೂ ಎರಡು ಪ್ರಕಾರವುಳ್ಳದ್ದನ್ನಾಗಿ ಹೇಳಿರುವರು. ಮೊದಲನೆಯದು ಜಲಹಸ್ತವೆಂಬುದು. ಎರಡನೆಯದನ್ನು ಮಜ್ಜನ ಕ್ರಮವೆಂಬುದಾಗಿ ತಿಳಿಯುವರು.

೮೨. ಬಲಿಷ್ಠನಾದ ಕ್ಷತ್ರಿಯನು ಬಾಣವನ್ನು ಬತ್ತಳಿಕೆಯಿಂದ ತೆಗೆದು ಬಿಲ್ಲಿನಲ್ಲಿ ಹೂಡಿ ಬಿಡುವಷ್ಟು ಕಾಲ ಆಪಾದಿತನನ್ನು ನೀರಿನಲ್ಲಿ ಮುಳುಗಿಸಬೇಕು. ಬಳಿಕ ಮೇಲಕ್ಕೆತ್ತಲು ಅವನು ಜೀವಿಸಿರುವಲ್ಲಿ ಶುದ್ಧನೆಂದು ನಿಶ್ಚಯಿಸಬೇಕು.

೮೩. ಎಲೈ ಅರ್ಜುನನೆ! ಈ ಭಟ್ಟಾದಿತ್ಯನ ಸನ್ನಿಧಿಯು ಇಂತಹ ಮಹಿಮೆಯುಳ್ಳುದು. ನನ್ನಲ್ಲಿ ಸೂರ್ಯನು ಮಾಡಿದ ಕೃಪೆಯಿಂದಲೇ ಈ ಕ್ಷೇತ್ರವು ಭೂಲೋಕದಲ್ಲಿ ಉಂಟಾಯಿತು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಎರಡನೆಯ ಕೌಮಾರಿಕಾಖಂಡದಲ್ಲಿ
"ಭಟ್ಟಾದಿತ್ಯಮಾಹಾತ್ಮ್ಯ – ದಿವ್ಯವರ್ಣನ"
ಎಂಬ ನಲವತ್ತನಾಲ್ಕನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಪಂಚಚತ್ವಾರಿಂಶೋಽಧ್ಯಾಯಃ

### ಕಪಿಲೇಶ್ವರತೀರ್ಥ ಮಾಹಾತ್ಮ್ಯೇ ನಂದಭದ್ರವಣಿಗ್ವೃತ್ತಾಂತವರ್ಣನಂ

**ನಾರದ ಉವಾಚ :—**

**ತಥಾ ಬಹೂದಕಸ್ಥಾನೇ ಕಥಾಮಾಕರ್ಣಯಾದ್ಭುತಂ ।**
**ಯಸ್ಮಾದ್ಬಹೂದಕಂ ಕುಂಡಂ ಕಾಮರೂಪೇ ಯದಸ್ತಿ ಚ ॥ ೧ ॥**
**ತದಸ್ತಿ ಚಾತ್ರ ಸಂಕ್ರಾಂತಂ ತಸ್ಮಾತ್ಪ್ರೋಕ್ತಂ ಬಹೂದಕಂ ।**
**ಕಪಿಲೇನಾತ್ರ ತಪ್ತ್ವಾಚ ವರ್ಷಾಣಿ ಸುಬಹೂನ್ಯಪಿ ॥ ೨ ॥**
**ಸ್ಥಾಪಿತಂ ಶೋಭನಂ ಲಿಂಗಂ ಕಪಿಲೇಶ್ವರಸಂಜ್ಞಿತಂ ।**
**ತಚ್ಚ ಲಿಂಗಂ ಸದಾ ಪಾರ್ಥ ನಂದಭದ್ರ ಇತಿಸ್ಮೃತಃ ॥ ೩ ॥**
**ವಣಿಕ್ಸಂಪೂಜಯಾಮಾಸ ತ್ರಿಕಾಲಂ ಚ ಕೃತಾದರಃ ।**
**ಸರ್ವಧರ್ಮವಿಶೇಷಜ್ಞಃ ಸಾಕ್ಷಾದ್ಧರ್ಮ ಇವಾಪರಃ ॥ ೪ ॥**
**ನಾಜ್ಞಾತಂ ತಸ್ಯ ಕಿಂಚಿಚ್ಚ ಯದ್ಧರ್ಮೇಷು ಪ್ರಕೀರ್ತ್ಯತೇ ।**
**ಸರ್ವೇಷಾಂ ಚ ಸುಹೃನ್ನಿತ್ಯಂ ಸರ್ವೇಷಾಂ ಚ ಹಿತೇ ರತಃ ॥ ೫ ॥**

---

### ಕನ್ನಡದ ಅನುವಾದ

#### ಕಪಿಲೇಶ್ವರತೀರ್ಥ ಮಾಹಾತ್ಮ್ಯ — ನಂದಭದ್ರವಣಿಗ್ವೃತ್ತಾಂತವರ್ಣನ

೧. ನಾರದನು ಹೇಳುತ್ತಾನೆ:— ಹಾಗೆಯೇ ಬಹೂದಕ ಕ್ಷೇತ್ರವನ್ನು ಕುರಿತು ಅದ್ಭುತವಾದ ಒಂದು ಕಥೆಯುಂಟು. ಅದನ್ನು ಕೇಳು. ಕಾಮರೂಪದಲ್ಲಿರುವ ಬಹೂದಕವೆಂಬ ಕುಂಡವು ಯಾವುದಿರುವುದೊ, ಅದೇ ಸರ್ವಾತ್ಮನಾ ಇಲ್ಲಿ ನೆಲಸಿರುವುದರಿಂದ ಇದಕ್ಕೂ ಬಹೂದಕವೆಂದೇ ಹೆಸರಾಯಿತು.

೨. ಪೂರ್ವದಲ್ಲಿ ಅನೇಕ ವರ್ಷಗಳ ಕಾಲ ತಪಸ್ಸುಮಾಡಿದ ಕಪಿಲ ಮಹರ್ಷಿಯಿಂದ ಕಪಿಲೇಶ್ವರನೆಂದು ಪ್ರಸಿದ್ಧವಾದ ಮಂಗಳಕರವಾದ ಶಿವ ಲಿಂಗವು ಇಲ್ಲಿ ಸ್ಥಾಪಿಸಲ್ಪಟ್ಟಿತು.

೩–೪. ಎಲೈ ಪಾರ್ಥನೆ! ಪೂರ್ವದಲ್ಲಿ ನಂದಭದ್ರನೆಂಬ ವ್ಯಾಪಾರಿಯೊಬ್ಬನು ತ್ರಿಸಂಧ್ಯೆಗಳಲ್ಲಿಯೂ ಅತ್ಯಂತ ಭಕ್ತ್ಯಾದರಗಳಿಂದ ಆ ಲಿಂಗವನ್ನು ನಿತ್ಯವೂ ಪೂಜಿಸುತ್ತಿದ್ದನು. ಆತನು ಸಕಲ ಧರ್ಮಗಳ ಸೂಕ್ಷ್ಮಗಳನ್ನೂ ತಿಳಿದವನು; ಧರ್ಮವೇ ಮೂರ್ತಿಗೊಂಡಂತೆ ಕಾಣುತ್ತಿದ್ದನು. ಧರ್ಮಶಾಸ್ತ್ರಗಳಲ್ಲಿ ನಿರೂಪಿಸಿರುವ ವಿಶೇಷಗಳಲ್ಲಿ ಅವನಿಗೆ ತಿಳಿಯದ ವಿಷಯವೆಂಬುದೇ ಇಲ್ಲವು.

೫. ಯಾವಾಗಲೂ ಆವನು ಸಕಲ ಭೂತಗಳಲ್ಲೂ ಸ್ನೇಹದಿಂದಿರುವನು. ಸಕಲರ ಹಿತವನ್ನೇ ಕೋರುತ್ತಿರುವನು. ಕಾರ್ಯದಿಂದಲೂ, ಮನಸ್ಸಿನಿಂದಲೂ ಮಾತುಗಳಿಂದಲೂ ಈ ಧರ್ಮವನ್ನೇ ನಡೆಸಿಕೊಂಡುಬರುತ್ತಿದ್ದನು.

ಕರ್ಮಣಾ ಮನಸಾ ವಾಚಾ ಧರ್ಮಮೇನಮುಪಾಶ್ರಿತಃ ।
ನ ಭೂತೋ ನ ಭವಿಷ್ಯಚ್ಚ ನ ಸ ಧರ್ಮೋಽಸ್ತಿ ಕಿಂಚನ ॥ ೬ ॥
ವಿದೋಷೋ ಯೋ ಹಿ ಸರ್ವತ್ರ ನಿಶ್ಚಿತ್ಯೈವಂ ವ್ಯವಸ್ಥಿತಃ ।
ಅಸ್ಯ ಧರ್ಮಸಮುದ್ರಸ್ಯ ಸಂಪ್ರವೃದ್ಧಸ್ಯ ಸರ್ವತಃ ।
ನಿರ್ಮಥ್ಯ ನಂದಭದ್ರೇಣ ಆಹೃತಂ ತನ್ನಿಶಾಮಯ ॥ ೭ ॥
ವಾಣಿಜ್ಯಂ ಮನ್ಯತೇ ಶ್ರೇಷ್ಠಂ ಜೀವನಾಯ ತದಾ ಸ್ಥಿತಃ ।
ಪರಿಚ್ಛಿನ್ನೈಃ ಕಾಷ್ಠತೃಣೈಃ ಶರಣಂ ತೇನ ಕಾರಿತಂ ॥ ೮ ॥
ಮದ್ಯವರ್ಜಂ ಭೇದವರ್ಜಂ ಕೂಟವರ್ಜಂ ಸಮಂ ತಥಾ ।
ಸರ್ವಭೂತೇಷು ವಾಣಿಜ್ಯಮಲ್ಪಲಾಭೇನ ಸೋಽಚರತ್ ॥ ೯ ॥
ಅಮಾಯಯಾ ಪರೇಭ್ಯೋಽಸೌ ಗೃಹೀತ್ವೈವ ಕ್ರಯಾಣಕಂ ।
ಅಮಾಯಯೈವ ಭೂತೇಭ್ಯೋ ವಿಕ್ರೇಣಾತ್ಯಸ್ಯ ಸದ್ವ್ರತಂ ॥ ೧೦ ॥
ಕೇಚಿದ್ಯಜ್ಞಂ ಪ್ರಶಂಸಂತಿ ನಂದಭದ್ರೋ ನ ಮನ್ಯತೇ ।
ದೋಷಮೇನಂ ವಿನಿಶ್ಚಿತ್ಯ ಶೃಣು ತಂ ಪಾಂಡುನಂದನ ॥ ೧೧ ॥

---

೬. ಸಕಲ ವಿಧಗಳಿಂದಲೂ ಪಾಪರಹಿತವಾದ ಧರ್ಮವೆಂಬುದು ಯಾವುದೊಂದೂ ಇಲ್ಲವು; ಹಿಂದೆ ಇರಲಿಲ್ಲ ಮತ್ತೆ ಮುಂದೆಯೂ ಇರಲಾರದು. ಇಂತೆಂದು ತಿಳಿದು ನಂದಭದ್ರನು ನಿಶ್ಚಿತಮನಸ್ಕನಾಗಿದ್ದನು.

೭. ನಾನಾ ವಿಧವಾಗಿ ವಿಸ್ತರಿಸಿರುವ ಈ ಧರ್ಮವೆಂಬ ಸಮುದ್ರವನ್ನು ಮಥಿಸಿ ನಂದಭದ್ರನು ಸಂಪಾದಿಸಿದುದನ್ನು ಹೇಳುವೆನು, ಕೇಳು.

೮. ಅವನು ತನ್ನ ಜೀವನೋಪಾಯಕ್ಕೆ ವ್ಯಾಪಾರವೇ ಉತ್ತಮೋಪಾಯವೆಂದು ತಿಳಿದು ಅದರಲ್ಲಿಯೇ ಆಸಕ್ತನಾಗಿದ್ದನು. ಒಣಗಿ ಬಿದ್ದ ಕಡ್ಡಿ ಹುಲ್ಲುಗಳಿಂದ ಅವನು ಒಂದು ಗುಡಿಸಿಲನ್ನು ಕಟ್ಟಿಕೊಂಡಿದ್ದನು.

೯. ಅವನ ವ್ಯಾಪಾರದ ಪದಾರ್ಥಗಳಲ್ಲಿ ಮದ್ಯವಿರಲಿಲ್ಲ; ಬಂದವರಲ್ಲಿ ಅವನು ಭೇದವನ್ನೆಣಿಸುತ್ತಿರಲಿಲ್ಲ; ಯಾರನ್ನೂ ಮೋಸಗೊಳಿಸುತ್ತಿರಲಿಲ್ಲ. ಇಂತು ಸರ್ವಭೂತಗಳಲ್ಲಿಯೂ ಒಂದೇ ಸಮನಾಗಿ ನಡೆದುಕೊಳ್ಳುತ್ತ ಸ್ವಲ್ಪ ಲಾಭವನ್ನೇ ಇಟ್ಟುಕೊಂಡು ವ್ಯಾಪಾರವನ್ನು ಧರ್ಮದಿಂದ ಮಾಡುತ್ತಿದ್ದನು.

೧೦. ಮಾಯೆ, ಮೋಸಗಳಿಲ್ಲದೆ ಇತರರಿಂದ ನಿಗದಿಯಾದ ಕ್ರಯವನ್ನೇ ತೆಗೆದುಕೊಳ್ಳುತ್ತ ಸಕಲರಿಗೂ ಒಂದೇ ಸಮನಾಗಿ ಪದಾರ್ಥಗಳನ್ನು ಮಾರುತ್ತಿದ್ದನು. ಇದೇ ಅವನ ಉತ್ತಮವ್ರತವಾಗಿದ್ದಿತು.

೧೧. ಕೆಲವರು ಯಜ್ಞಯಾಗಾದಿಗಳನ್ನು ಹೊಗಳುತ್ತಾರೆ. ನಂದಭದ್ರನಿಗೆ ಅದು ಸಮ್ಮತವಲ್ಲ. ಎಲೈ ಪಾಂಡವಶ್ರೇಷ್ಠನೆ! ಅದರಲ್ಲಿ ಒಂದು ದೊಡ್ಡ ದೋಷವಿರುವುದೆಂದು ಅವನು ನಿಶ್ಚಯಿಸಿದ್ದನು.

ಲುಬ್ಧೋಽನೃತೀ ದಾಂಭಿಕಶ್ಚ ಸ್ವಪ್ರಶಂಸಾಪರಾಯಣಃ ।
ಯಜ್ಞನ್ಯೈರ್ಜಗದ್ಧಂತಿ ಸ್ವಂ ಚಾಂಧತಮಸಂ ನಯೇತ್ ॥ ೧೨ ॥
ಅಗ್ನೌಪ್ರಾಸ್ತಾಹುತಿಃ ಸಮ್ಯಗಾದಿತ್ಯಮುಪತಿಷ್ಠತೇ ।
ಆದಿತ್ಯಾಜ್ಜಾಯತೇ ವೃಷ್ಟಿರ್ವೃಷ್ಟೇರನ್ನಂ ತತಃ ಪ್ರಜಾಃ ॥ ೧೩ ॥
ಯದ್ಯದಾ ಯಜಮಾನಸ್ಯ ಋತ್ವಿಜೋ ದ್ರವ್ಯಮೇವ ಚ ।
ಚೌರಪ್ರಾಯಸ್ಯ ಕಲುಷಾಜ್ಜನ್ಮ ಜಾಯೇಜ್ಜನಸ್ಯ ಹಿ ॥ ೧೪ ॥
ಅದಕ್ಷಿಣೇ ವೃಥಾ ಯಜ್ಞೇ ಕೃತೇ ಚಾಪ್ಯವಿಧಾನತಃ ।
ಪಶವೋ ಲಕುಟೈರ್ಹನ್ಯುರ್ಯಜಮಾನಂ ಮೃತಂ ಹತಾಃ ॥ ೧೫ ॥
ತಸ್ಮಾಚ್ಛುದ್ಧೈರ್ಯವದ್ರವ್ಯೈರ್ಯಜಮಾನಃ ಶುಭಃ ಸ್ಮೃತಃ ।
ಯಜ್ಞ ಏವಂ ವಿಚಾರ್ಯಾಸೌ ಯಜ್ಞಸಾರಂ ಸಮಾಸ್ಥಿತಃ ॥ ೧೬ ॥
ಶ್ರದ್ಧಯಾ ದೇವಪೂಜಾ ಯಾ ನಮಸ್ಕಾರಃ ಸ್ತುತಿಃ ಶುಭಾ ।
ನೈವೇದ್ಯಂ ಹವಿಷಶ್ಚೈವ ಯಜ್ಞೋಽಯಂ ಹಿ ವಿಕಲ್ಮಷಃ ॥ ೧೭ ॥

---

೧೨. ಲೋಭಿಯಾದವನೂ, ಸುಳ್ಳು ಹೇಳುವವನೂ, ದಾಂಭಿಕನೂ, ತನ್ನ ಪ್ರಶಂಸೆಯನ್ನು ಮಾಡಿಕೊಳ್ಳುವವನೂ, ಯಜ್ಞವನ್ನು ಮಾಡುವುದರಿಂದ ಲೋಕವನ್ನು ನಾಶಗೊಳಿಸುವವರು. ತಾವೂ ಅಂಧತಮಸ್ಸಿನಲ್ಲಿ ಬೀಳುವರು.

೧೩. ನಂದಭದ್ರನಾದರೊ ಅಗ್ನಿಯಲ್ಲಿ ಯಥಾವಿಧಿಯಾಗಿ ಆಹುತಿಗಳನ್ನಿತ್ತು ಪ್ರಾತಃಕಾಲದಲ್ಲಿ ಸೂರ್ಯನನ್ನು ಚೆನ್ನಾಗಿ ಉಪಾಸಿಸುತ್ತಿದ್ದನು. ಸೂರ್ಯನಿಂದಲೇ ಮಳೆಯು ಬೀಳುವುದು. ಮಳೆಯಿಂದ ಆಹಾರಪದಾರ್ಥಗಳು ಬೆಳೆಯುವುವು. ಅವುಗಳಿಂದ ಮನುಷ್ಯರು ಜೀವಿಸುವರು.

೧೪–೧೫. ಚೋರಪ್ರಾಯನಾದ ಯಜಮಾನನ ಕೈಯಲ್ಲಿ ಯಜ್ಞವನ್ನು ಮಾಡಿಸಿ ಋತ್ವಿಜರು ಅವನ ದ್ರವ್ಯವನ್ನು ತೆಗೆದುಕೊಂಡರೆ ಆ ಪಾಪದಿಂದ ಜನರಿಗೆ ಪುನರ್ಜನ್ಮವು ತಪ್ಪುವುದಿಲ್ಲ. ಯಜ್ಞವನ್ನು ದಕ್ಷಿಣೆಯಿಲ್ಲದೆಯಾಗಲಿ, ವಿಧಿಯನ್ನನುಸರಿಸದೆಯಾಗಲಿ ಮಾಡಿದಲ್ಲಿ ಅದು ಕೇವಲ ವ್ಯರ್ಥವಾಗುವುದು. ಅಂತಹ ಯಜ್ಞಗಳಲ್ಲಿ ಕೊಲ್ಲಲ್ಪಟ್ಟ ಪಶುಗಳು ಲೋಕಾಂತರಗಳಲ್ಲಿ ಯಜಮಾನನನ್ನು ದೊಣ್ಣೆಗಳಿಂದ ಹೊಡೆಯುವುವು.

೧೬–೧೭. ಆದುದರಿಂದ ಪರಿಶುದ್ಧಗಳಾದ ದ್ರವ್ಯಗಳಿಂದ ಯಜ್ಞವನ್ನು ಮಾಡಿದವನೇ ಶುದ್ಧನೆಂದು ಹೇಳಲ್ಪಟ್ಟಿರುವನು. ಇಂತು ಯಜ್ಞದ ವಿಷಯವಾಗಿ ಚೆನ್ನಾಗಿ ವಿಚಾರಮಾಡಿ ನಂದಭದ್ರನು ಯಜ್ಞಗಳ ತತ್ತ್ವವನ್ನು ಮಾತ್ರ ಅನುಸರಿಸುತ್ತಿದ್ದನು. ಶ್ರದ್ಧೆಯಿಂದ ದೇವತೆಗಳ ಪೂಜೆಯನ್ನು ಮಾಡುವುದು, ನಮಸ್ಕರಿಸುವುದು, ಉತ್ತಮ ಸ್ತೋತ್ರಗಳನ್ನು ಹೇಳುವುದು, ನೈವೇದ್ಯ, ಅಗ್ನಿಯಲ್ಲಿ ಹೋಮ— ಇವುಗಳೇ ನಿಷ್ಕಲ್ಮಷವಾದ ಯಜ್ಞವೆನಿಸುವುವು.

ಸ ಏವ ಯಜ್ಞಃ ಪ್ರೋಕ್ತೋ ವೈ ಯೇನ ತುಷ್ಯಂತಿ ದೇವತಾಃ ।
ಕೇಚಿಚ್ಛಂಸಂತಿ ಸನ್ನ್ಯಾಸಂ ನಂದಭದ್ರೋ ನ ಮನ್ಯತೇ ॥ ೧೮ ॥
ಯೋ ಹಿ ಸನ್ನ್ಯಸ್ಯ ವಿಷಯಾನ್ಮನಸಾ ಗೃಹ್ಯತೇ ಪುನಃ ।
ಉಭಯಭ್ರಷ್ಟ ಏವಾಸೌ ಭಿನ್ನಾ ಭೂಮಿರ್ವಿನಶ್ಯತಿ ॥ ೧೯ ॥
ಸನ್ನ್ಯಾಸಸ್ಯ ತು ಯತ್ಸಾರಂ ತತ್ತೇನಾಮೃತಮುತ್ತಮಂ ।
ಕಸ್ಯಚಿನ್ನೈವ ಕರ್ಮಾಣಿ ಶಪತೇ ವಾ ಪ್ರಶಂಸತಿ ॥ ೨೦ ॥
ನಾನಾಮಾರ್ಗಸ್ಥಿತಾಂಲ್ಲೋಕಾಂಶ್ಚಂದ್ರವಲ್ಲೀಯತೇ ಕ್ಷಿತೌ ।
ನ ದ್ವೇಷ್ಟಿ ನೋ ಕಾಮಯತೇ ನ ವಿರುದ್ಧೋಽನುರುಧ್ಯತೇ ॥ ೨೧ ॥
ಸಮಾಶ್ಮಕಾಂಚನೋ ಧೀರಸ್ತುಲ್ಯನಿಂದಾತ್ಮಸಂಸ್ತುತಿಃ ।
ಅಭಯಃ ಸರ್ವಭೂತೇಭ್ಯೋ ಯಥಾಂಧಬಧಿರಾಕೃತಿಃ ॥ ೨೨ ॥
ನ ಕರ್ಮಣಾಂ ಫಲಾಕಾಂಕ್ಷಾ ಶಿವಸ್ಯಾರಾಧನಂ ಹಿ ತತ್ ॥ ೨೩ ॥

---

೧೮. ಯಾವುದರಿಂದ ದೇವತೆಗಳು ಸಂತೋಷಗೊಳ್ಳುವರೊ, ಅದನ್ನೇ ಯಜ್ಞವೆಂದು ಕರೆಯುವರು. ಕೆಲವರು ಸನ್ಯಾಸವನ್ನು ಉಪದೇಶಿಸುವರು. ಆದರೆ ನಂದಭದ್ರನು ಅದರಲ್ಲಿ ಆಸಕ್ತಿಯುಳ್ಳವನಲ್ಲ.

೧೯. ಯಾವನು ಸನ್ಯಾಸಿಯಾದರೂ ವಿಷಯಾಭಿಲಾಷೆಯನ್ನು ಮನಸ್ಸಿನಲ್ಲಿ ಇಟ್ಟಿರುವನೊ, ಅವನು ಐಹಿಕಾಮುಷ್ಮಿಕಗಳೆರಡರಿಂದಲೂ ಭ್ರಷ್ಟನಾಗುವನು. ಸಮಭೂಮಿಯನ್ನು ಉಪಯೋಗಿಸಬಹುದೇ ಹೊರತು, ಭಿನ್ನವಾದ ಭೂಮಿಯಿಂದ ಏನೂ ಪ್ರಯೋಜನವಾಗಲಾರದು.

೨೦. ಆದರೆ ಸನ್ಯಾಸಾಶ್ರಮದ ಸಾರವು ಯಾವುದಿರುವುದೊ, ಉತ್ತಮವಾದ ಆ ಧರ್ಮವನ್ನೇ ನಂದಭದ್ರನು ಅನುಸರಿಸುತ್ತಿದ್ದನು. ಯಾರಾದರೂ ಮಾಡಿದ ಕಾರ್ಯಗಳನ್ನು ಅಲ್ಲಗಳೆಯುವುದಾಗಲಿ, ಪ್ರಶಂಸಿಸುವುದಾಗಲಿ ಅವನ ಸ್ವಭಾವವಲ್ಲ.

೨೧. ಭೂಲೋಕದಲ್ಲಿ ಅನೇಕ ಮಾರ್ಗಗಳಲ್ಲಿರುವ ಜನರೊಡನೆ ಚಂದ್ರನಂತೆ ಸೌಮ್ಯವಾಗಿ ವರ್ತಿಸುವನು. ಯಾವುದನ್ನೂ ದ್ವೇಷಿಸನು. ಯಾವುದನ್ನೂ ಆಶಿಸನು. ವಿರುದ್ಧವಾಗಿ ನಿಂತು ಯಾವ ಕಾರ್ಯವನ್ನೂ ತಡೆಗಟ್ಟುವುದಿಲ್ಲ.

೨೨. ಕಲ್ಲು ಭಂಗಾರಗಳಲ್ಲಿ ಸಮದೃಷ್ಟಿಯುಳ್ಳವನು. ಇಂದ್ರಿಯಗಳನ್ನು ಜಯಿಸಿದವನು. ತನ್ನನ್ನು ಇತರರು ಸ್ತುತಿಸಿದರೂ, ನಿಂದಿಸಿದರೂ ಸಮಾಧಾನದಿಂದಿರುವನು. ಸಕಲ ಭೂತಗಳಿಗೂ ಅಭಯವನ್ನಿತ್ತಿರುವನು. ಪರದ್ರವ್ಯ ಪರಾಪವಾದಗಳಲ್ಲಿ ಕುರುಡ ಕಿವುಡರಂತೆ ವರ್ತಿಸುವನು.

೨೩–೨೪. ತಾನು ಮಾಡುವ ಸಕಲ ಕರ್ಮಗಳೂ ಶಿವಾರಾಧನೆಯೆಂದು ತಿಳಿದಿದ್ದುದರಿಂದ ಅವನು ಅವುಗಳಿಗೆ ಬೇರೆ ಫಲಗಳನ್ನು ಅಪೇಕ್ಷಿಸುತ್ತಿರಲಿಲ್ಲ.

**ಕಾರಣಾದ್ಧರ್ಮಮನ್ವಿಚ್ಛನ್ನ ಲೋಭಂ ಚ ತತಶ್ಚರನ್ ।**
**ವಿವಿಚ್ಯ ನಂದಭದ್ರಸ್ತತ್ಸಾರಂ ಮೋಕ್ಷೇಷು ಜಾಗೃತೇ ॥ ೨೪ ॥**
**ಕೃಷಿಂ ಕೇಚಿತ್ಪ್ರಶಂಸಂತಿ ನಂದಭದ್ರೋ ನ ಮನ್ಯತೇ ।**
**ಯಸ್ಯಾಂ ಛಿಂದಂತಿ ವೃಷಣೌ ವೃಷಾಣಾಂ ಚೈವ ನಾಸಿಕಾಂ ॥ ೨೫ ॥**
**ಕರ್ಷಯಂತಿ ಮಹಾಭಾರಾನ್ಬಧ್ನಂತಿ ದಮಯಂತಿ ಚ ।**
**ಬಹುದಂಶಮಯಾನ್ದೇಶಾನ್ನಯಂತಿ ಬಹುಕರ್ದಮಾನ್ ॥ ೨೬ ॥**
**ವಾಹಸಂಪೀಡಿತಾ ಧುರ್ಯಾಃ ಸೀದಂತ್ಯವಿಧಿನಾ ಪರೇ ।**
**ಮನ್ಯಂತೇ ಭ್ರೂಣಹತ್ಯಾಪಿ ವಿಶಿಷ್ಟಾ ನಾಸ್ಯ ಕರ್ಮಣಃ ॥ ೨೭ ॥**
**ಅಘ್ನ್ಯಾ ಇತಿ ಗವಾಂ ನಾಮ ಶ್ರುತೌ ತಾಃ ಪೀಡಯೇತ್ಕಥಂ ।**
**ಭೂಮಿಂ ಭೂಮಿಶಯಾಂಶ್ಚೈವ ಹಂತಿ ಕಾಷ್ಠಮಯೋಮುಖಂ ॥ ೨೮ ॥**
**ಪಂಚೇಂದ್ರಿಯೇಷು ಜೀವೇಷು ಸರ್ವಂ ವಸತಿ ದೈವತಂ ॥ ೨೯ ॥**
**ಆದಿತ್ಯಶ್ಚಂದ್ರಮಾ ವಾಯುಃ ಪ್ರಭೂತ್ಯೈವ ಚ ತಾಂಸ್ತು ಯಃ ।**
**ವಿಕ್ರೀಣಾತಿ ಸುಮೂಢಸ್ಯ ತಸ್ಯ ಕಾನು ವಿಚಾರಣಾ ॥ ೩೦ ॥**

---

ಜಗತ್ತಿನ ರಕ್ಷಣೆಗೆ ಧರ್ಮವೇ ಕಾರಣವಾದುದರಿಂದ ಅದನ್ನೇ ನಡೆಸುತ್ತ, ಲೋಭವನ್ನು ತ್ಯಜಿಸಿದವನಾಗಿ, ಸನ್ನ್ಯಾಸದ ಸಾರವನ್ನು ವಿವೇಕದಿಂದ ತಿಳಿದುಕೊಂಡು ಮೋಕ್ಷವನ್ನೇ ಸಾಧಿಸುತ್ತಿದ್ದನು.

೨೫. ಕೆಲವರು ಕೃಷಿಯ ಉದ್ಯೋಗವನ್ನು ಹೊಗಳುವರು. ನಂದಭದ್ರನಿಗೆ ಅದೂ ಸರಿಬೀಳಲಿಲ್ಲ. ಆ ವೃತ್ತಿಯಲ್ಲಿ ಎತ್ತುಗಳ ವೃಷಣಗಳನ್ನೂ, ನಾಸಿಕೆಯನ್ನೂ ಛೇದಿಸುವರು.

೨೬. ಬಹುವಾದ ಭಾರಗಳನ್ನು ಎಳೆಸುವರು. ನೇಗಿಲು, ಗಾಡಿಗಳಿಗೆ ಕಟ್ಟುವರು. ಚಾವಟಿ, ಕೋಲುಗಳಿಂದ ದಂಡಿಸುವರು. ಬಹಳವಾಗಿ ಕ್ರಿಮಿದಂಶಗಳಿರುವಲ್ಲಿಯೂ, ಕೆಸರಿರುವಲ್ಲಿಯೂ ನಡೆಸುವರು.

೨೭. ಕೆಲವು ಎತ್ತುಗಳು ಮಿತಿಯಿಲ್ಲದೆ ಗಾಡಿಯನ್ನೆಳೆಯುವುದರಿಂದಲೂ, ಭಾರಗಳನ್ನು ಹೊರುವುದರಿಂದಲೂ ಸಂಕಟಪಡುವುವು. ಬಲ್ಲವರು ಈ ವೃತ್ತಿಗಿಂತಲೂ ಭ್ರೂಣಹತ್ಯೆಯು ಹೆಚ್ಚಿನದಲ್ಲವೆಂದು ತಿಳಿದಿರುವರು.

೨೮. ವೇದಗಳಲ್ಲಿ ಗೋವುಗಳಿಗೆ "ಅಘ್ನ್ಯ" ಎಂದರೆ ಹಿಂಸಾನರ್ಹಗಳೆಂಬ ನಾಮವಿರುವುದು. ಅವುಗಳನ್ನು ಹೇಗೆ ಪೀಡಿಸುವುದು? ಕಬ್ಬಿಣದ ಕೊನೆಯುಳ್ಳ ಕಾಷ್ಠವು (ನೇಗಿಲು) ಭೂಮಿಯನ್ನೂ, ಭೂಮಿಯಲ್ಲಿರುವ ಜಂತುಗಳನ್ನೂ ಹಿಂಸಿಸುವುದು.

೨೯-೩೦. ಸಮಸ್ತ ಪ್ರಾಣಿಗಳ ಪಂಚೇಂದ್ರಿಯಗಳಲ್ಲಿಯೂ ಪೂರ್ತಿಯಾಗಿ ದೈವವು ನೆಲಸಿರುವುದು. ಸೂರ್ಯ, ಚಂದ್ರರೂ, ವಾಯುವೂ ಅವುಗಳಲ್ಲಿ

ಅಜೋಽಗ್ನಿರ್ವರುಣೋ ಮೇಷಃ ಸೂರ್ಯಶ್ಚ ಪೃಥಿವೀ ವಿರಾಟ್ ।
ಧೇನುರ್ವತ್ಸಶ್ಚ ಸೋಮೋ ವೈ ವಿಕ್ರೇಯ್ಯೈತಾನ್ನ ಸಿದ್ಧ್ಯತಿ ॥ ೩೧ ॥
ಏವಂ ವಿಧ ಸಹಸ್ರೈಶ್ಚ ಯುತೋ ದೋಷೈಃ ಕೃಷಿಃ ಸದಾ ।
ಅಷ್ಟಾಗವಂ ಸ್ಯಾದ್ಧಿ ಹಲಂ ತ್ರಿಂಶದ್ಭಾಗಂ ತ್ಯಜೇತ್ಕೃಷೇಃ ॥ ೩೨ ॥
ಧರ್ಮೇ ದದ್ಯಾತ್ಪಶೂನ್ಸ್ವೃದ್ಧಾನ್ಸುಷ್ಯಾದೇಷಾ ಕೃಷಿಃ ಕುತಃ
ಸಾರಮೇತತ್ಕೃಷೇಸ್ತೇನ ನಂದಭದ್ರೇಣ ಚಾದೃತಂ ॥ ೩೩ ॥
ವಿಸಾಧಿತವ್ಯಾನ್ನನ್ನಾದಿ ಸ್ವಶಕ್ತ್ಯಾ ದೇವಪಿತೃಷು ।
ಮನುಷ್ಯ ದ್ವಿಜಭೂತೇಷು ನಿಯುಜ್ಯಾಶ್ನೀತ ಸರ್ವದಾ ॥ ೩೪ ॥
ಕೇಚಿಚ್ಛಂಸಂತಿ ಚೈಶ್ವರ್ಯಂ ನಂದಭದ್ರೋ ನ ಮನ್ಯತೇ ।
ಮಾನುಷಾ ಮಾನುಷಾನ್ನೇನ ದಾಸಭಾವೇನ ಭುಂಜತೇ ।
ವಧಬಂಧನಿರೋಧೇನ ಪೀಡಯಂತಿ ದಿವಾನಿಶಂ ॥ ೩೫ ॥

---

ವಿಶೇಷ ವಿಭೂತಿಗಳಿಂದಿರುವರು. ಆದುದರಿಂದ ಅವುಗಳನ್ನು ಯಾವ ಮೂಢನು ಕ್ರಯ ವಿಕ್ರಯ ಮಾಡುವನೊ, ಅವನ ವಿಚಾರವನ್ನು ಏನೆಂದು ಹೇಳಬೇಕು?

೩೧. ಕುರಿಯು ಅಗ್ನಿಯು; ಮೇಕೆಯು ವರುಣನು; ಭೂಮಿಯೇ ಸೂರ್ಯನು; ಹಸುವು ಬ್ರಹ್ಮಾಂಡವು; ಕರುವು ಚಂದ್ರನು. ಇವುಗಳನ್ನು ಮಾರುವುದರಿಂದ ಮನುಷ್ಯನಿಗೆ ಉತ್ತಮಗತಿಯಾಗುವುದಿಲ್ಲ.

೩೨. ಕೃಷೀವಲನ ವೃತ್ತಿಯು ಈ ವಿಧವಾದ ಸಾವಿರಾರು ದೋಷಗಳಿಂದ ಯಾವಾಗಲೂ ತುಂಬಿರುವುದು. ಒಂದು ನೇಗಿಲು ಎಂಟು ಎತ್ತುಗಳುಳ್ಳದ್ದು. ಆದುದರಿಂದ ಅವುಗಳಿಗಾಗಿ ಬೆಳೆದ ಧಾನ್ಯದಲ್ಲಿ ಮುವ್ವತ್ತರಲ್ಲಿ ಒಂದು ಭಾಗವನ್ನು ಬಿಟ್ಟುಬಿಡಬೇಕು.

೩೩. ಹಸುಗಳನ್ನು ಧರ್ಮಕಾರ್ಯಗಳಲ್ಲಿ ಮಾತ್ರ ದಾನಮಾಡಬೇಕು. ಉಳಿದವುಗಳನ್ನು ಮುದಿಯಾದಾಗಲೂ ಸಾಕಬೇಕು. ಇಂತಹ ಕೃಷಿಯನ್ನು ಹೇಗೆ ನಡೆಸಬೇಕು? ಆದುದರಿಂದ ಈ ವೃತ್ತಿಯ ಸಾರಾಂಶವು ಮಾತ್ರ ನಂದಭದ್ರನಿಂದ ಅಂಗೀಕರಿಸಲ್ಪಟ್ಟಿತು.

೩೪. ತನ್ನ ಸಾಮರ್ಥ್ಯದಿಂದ ಸಂಪಾದಿಸಿದ ಆಹಾರವನ್ನು ಮನುಷ್ಯನು ದೇವತೆಗಳು, ಪಿತೃಗಳು, ಮನುಷ್ಯರು, ಮಹರ್ಷಿಗಳು ಮತ್ತು ಭೂತಗಳಿಗೆ ಅರ್ಪಿಸಿ ಮಿಕ್ಕುದುದನ್ನು ಸೇವಿಸಬೇಕು.

೩೫. ಕೆಲವರು ಐಶ್ವರ್ಯವನ್ನಪೇಕ್ಷಿಸುವರು. ಅದೂ ನಂದಭದ್ರನಿಗೆ ಸರಿತೋರದು. ಇದರಿಂದಲೇ ಮನುಷ್ಯರು ಇತರ ಮನುಷ್ಯರನ್ನು ದಾಸ್ಯಭಾವದಲ್ಲಿರಿಸಿ ಭೋಗಪಡುವರು. ಅವರನ್ನು ಕೊಲ್ಲುವುದು, ಕಟ್ಟಿಹಾಕುವುದು, ನಿರ್ಬಂಧದಲ್ಲಿರಿಸುವುದು—ಇವುಗಳಿಂದ ಹಗಲು ರಾತ್ರಿಗಳೆನ್ನದೆ ಪೀಡಿಸುವರು.

**ದೇಹಂ ಕಿಮೇತದ್ಧಾತುಃ ಸ್ವಂ ಮಾತುರ್ವಾ ಜನಕಸ್ಯ ವಾ ।**
**ಮಾತುಃ ಪಿತುರ್ವಾ ಬಲಿನಃ ಕ್ರೇತುರಗ್ನೇಃ ಶನೋಽಪಿವಾ ॥ ೩೬ ॥**
**ಇತಿ ಸಂಚಿಂತ್ಯ ವ್ಯಹರನ್ನಮರಾ ಇವ ಈಶ್ವರಾಃ ।**
**ಐಶ್ವರ್ಯಮದಪಾಪಿಷ್ಠಾ ಮಹಾಮದ್ಯಮದಾದಯಃ ॥ ೩೭ ॥**
**ಐಶ್ವರ್ಯಮದಮತ್ತೋ ಹಿ ನಾ ಪತಿತ್ವಾ ಹಿ ಮಾದ್ಯತಿ ॥ ೩೮ ॥**
**ಆತ್ಮವತ್ಸರ್ವಭೃತ್ಯೇಷು ಶ್ರಿಯಾ ನೈವ ಚ ಮಾದ್ಯತಿ ॥ ೩೯ ॥**
**ಆತ್ಮಪ್ರತ್ಯಯವಾನ್ದೇಹೀ ಕ್ವೇಶ್ವರಶ್ಚೇದೃಶೋಽಸ್ತಿ ಹಿ ।**
**ಐಶ್ವರ್ಯಸ್ಯಾಪಿ ಸಾರಂ ಸ ಜಗ್ರಾಹೈತನ್ನಿಶಾಮಯ ॥ ೪೦ ॥**
**ಸ್ವಶಕ್ತ್ಯಾ ಸರ್ವಭೂತೇಷು ಯದಸೌ ನ ಪರಾಙ್ಮುಖಃ ।**
**ತೀರ್ಥಾನ್ ಯೇಕೇ ಪ್ರಶಂಸಂತಿ ನಂದಭದ್ರೋ ನ ಮನ್ಯತೇ ॥ ೪೧ ॥**

---

೩೬. ಈ ಶರೀರವು ಯಾರ ಒಡವೆ? ಸೃಷ್ಟಿಸಿದ ಬ್ರಹ್ಮನದೊ? ಹೆತ್ತ ತಾಯಿಯದೊ? ಅನ್ನಪಾನಗಳನ್ನಿತ್ತ ತಂದೆಯದೊ? ಅಥವಾ ತಾಯಿಯ ತಂದೆಯದೊ? ಬಲಿಷ್ಠನಾದ ರಾಜನದೊ? ಕೊಂಡುಕೊಂಡ ಯಜಮಾನನದೊ? ಜೀವನು ಹೊರಟುಹೋದ ಮೇಲೆ ಆಹುತಿಗೊಳ್ಳುವ ಅಗ್ನಿಯದೊ? ಸಂಸ್ಕಾರವಿಲ್ಲದೆ ಇದ್ದಲ್ಲಿ ಕಿತ್ತು ತಿನ್ನುವ ನಾಯಿಗಳದೊ?

೩೭. ಇದನ್ನು ನಿಶ್ಚಯಿಸಿಕೊಂಡೇ ಐಶ್ವರ್ಯವಂತರು ದೇವತೆಗಳಂತೆ ವಿಹರಿಸುತ್ತಿರುವರು. ಮಹಾಮದ್ಯವು ಮತ್ತು ಗರ್ವವು ಐಶ್ವರ್ಯಮದವನ್ನನುಸರಿಸಿ ಮನುಷ್ಯನನ್ನು ಪಾಪದಲ್ಲಿ ನೂಕುವುವು.

೩೮–೩೯. ಐಶ್ವರ್ಯಮದದಿಂದ ಮತ್ತನಾದ ಮನುಷ್ಯನು ಪತಿತನಾಗಿ ಪ್ರಮಾದದಲ್ಲಿ ಬೀಳುವನು. ಆದರೆ ತನ್ನ ಸಕಲ ಭೃತ್ಯರಲ್ಲಿಯೂ ಆತ್ಮನಲ್ಲಿಟ್ಟುಕೊಂಡಿರುವ ಅಭಿಮಾನವನ್ನೇ ಇಟ್ಟಿರುವ ಯಜಮಾನನು ಐಶ್ವರ್ಯವಂತನಾದರೂ ಪ್ರಮಾದಗಳಿಗೆ ಸಿಕ್ಕುವುದಿಲ್ಲ.

೪೦. ದೇಹಾಭಿಮಾನವುಳ್ಳ ಜೀವನಿಗೆ ಆತ್ಮವೆಂಬ ನಾಮವಿರುವುದು. ಈ ರೀತಿಯಾದ ಈಶ್ವರನು ತಾನೆ ಎಲ್ಲಿರುವನು? ಆದುದರಿಂದ ನಂದಭದ್ರನು ಐಶ್ವರ್ಯದ ಸಾರವನ್ನೂ ಗ್ರಹಿಸಿಕೊಂಡಿದ್ದನು. ಅದನ್ನೂ ಸಹ ನಿನಗೆ ಹೇಳುತ್ತೇನೆ, ಕೇಳು.

೪೧. ತನ್ನ ಶಕ್ತ್ಯನುಸಾರವಾಗಿ ಸಕಲ ಭೂತಗಳಿಗೂ ಸಹಾಯಕನಾಗಿ ಯಾವಾಗಲೂ ಅವನು ಮುಖವನ್ನು ತಿರುಗಿಸಿದವನಲ್ಲ. ಕೆಲವರು ತೀರ್ಥಯಾತ್ರೆಯನ್ನು ಪ್ರಶಂಸೆಮಾಡುವರು. ನಂದಭದ್ರನಿಗೆ ಅದರಲ್ಲಿಯೂ ಮನಸ್ಸಾಗಲಿಲ್ಲವು.

ಶ್ರಮೇಣ ಸಂಕರಾತ್ತ್ರಾಪ ಶೀತವಾತಕ್ಷುಧಾ ತೃಷಾ ।
ಕ್ರೋಧೇನ ಧರ್ಮಗೇಹಸ್ಯ ನಾಪಿ ನಾಶಮವಾಪ್ನುಯಾತ್ ।
ಸೌಖ್ಯೇನ ವಾ ಧನಸ್ಯಾಪಿ ಶ್ರದ್ಧಯಾ ಸ್ವಲ್ಪಗೋರ್ಥವಾನ್ ॥ ೪೨ ॥
ಸಮರ್ಥೋಹಿ ಮಹತ್ಪುಣ್ಯಂ ಶಕ್ತ ಆಪ್ತುಂ ಕ್ವ ನಾಸ್ತಿ ಸಃ ।
ಸದಾ ಶುಚಿರ್ದೇವಯಾಜೀ ತೀರ್ಥಸಾರಂ ಗೃಹೇ ಗೃಹೇ ॥ ೪೩ ॥
ನಾಪಃ ಪುನಂತಿ ಪಾಪಾನಿ ನ ಶೈಲಾ ನ ಮಹಾಶ್ರಮಾಃ ।
ಆತ್ಮಾ ಪುನಾತಿ ಪಾಪಾನಿ ಯದಿ ಪಾಪಾನ್ನಿವರ್ತತೇ ॥ ೪೪ ॥
ಏವಮೇಷ ಸಮಾಚಾರಂ ಪ್ರಾದುರ್ಭೂತಂ ತತಸ್ತತಃ ।
ಏಕೀಕೃತ್ಯ ಸದಾ ಧೀಮಾನ್ನಂದಭದ್ರಃ ಸಮಾಸ್ಥಿತಃ ॥ ೪೫ ॥
ಸತ್ಯೇವಂ ವರ್ತತಃ ಸಾಧೋಃ ಸ್ಪೃಹಯಂತ್ಯಪಿ ದೇವತಾಃ ।
ವಾಸವಪ್ರಮುಖಾಃ ಸರ್ವೇ ವಿಸ್ಮಯಂ ಚ ಪರಂ ಯಯುಃ ॥ ೪೬ ॥

---

೪೨. ದೇಹಶ್ರಮದಿಂದಲೂ, ಬಿಸಿಲು, ಚಳಿ, ಗಾಳಿ, ಹಸಿವು, ಬಾಯಾರಿಕೆಗಳಿಂದಲೂ ಪ್ರಯಾಣವು ಕೂಡಿರುವುದು. ಅಲ್ಲದೆ ಕಷ್ಟದಿಂದ ಸಂಪಾದಿಸಿದ ಧರ್ಮವೆಂಬ ಗೃಹವೂ ಕೂಡ ಕೋಪದಿಂದ ನಾಶವನ್ನು ಹೊಂದುವುದು.

೪೩. ಸೌಖ್ಯಕ್ಕಾಗಲಿ, ಧನದಾಶೆಯಿಂದಾಗಲಿ ಸ್ವಲ್ಪವಾದ ಪಶುಧನವನ್ನು ಹೊಂದಿರುವವನೂ ಕೂಡ ಸಮರ್ಥನಾದಲ್ಲಿ ಹೆಚ್ಚಾದ ಪುಣ್ಯವನ್ನು ಸಂಪಾದಿಸಲು ಶಕ್ತನಾಗುವನು. ಆದರೆ ಅಂತಹ ಮನುಷ್ಯನು ದೊರೆಯುವುದೆಲ್ಲಿ?

೪೪. ಯಾವಾಗಲೂ ತ್ರಿಕರಣಶುದ್ಧಿಯುಳ್ಳವನೂ, ದೇವತೆಗಳಿಗೆ ಯಜ್ಞಯಾಗಾದಿಗಳಿಂದ ತೃಪ್ತಿಪಡಿಸುವನೂ ಆದವನು ಇರುವ ಪ್ರತಿಯೊಂದು ಮನೆಯಲ್ಲಿಯೂ ಸಕಲ ತೀರ್ಥಗಳ ಸಾರವಿರುವುದೆಂದು ತಿಳಿಯಬೇಕು. ಮನುಷ್ಯನ ಪಾಪಗಳನ್ನು ತೀರ್ಥೋದಕಗಳಾಗಲಿ, ಪರ್ವತಗಳಾಗಲಿ, ಮಹಾತ್ಮರ ಆಶ್ರಮಗಳಾಗಲಿ ಹೋಗಲಾಡಿಸಲಾರವು. ಆದರೆ ಮನುಷ್ಯನು ನಿಜವಾಗಿಯೂ ಪಾಪಗಳಿಂದ ಬಿಡುಗಡೆಯನ್ನು ಹೊಂದಬೇಕೆಂದಿಚ್ಛಿಸಿದಲ್ಲಿ ಅವನ ಆತ್ಮವೇ ಅವನ ಪಾಪಗಳನ್ನು ಕಳೆಯುವುದು.

೪೫. ಈ ನಂದಭದ್ರನು ಇಂತು ಅನೇಕಕಡೆಗಳಿಂದ ಸದಾಚಾರಗಳನ್ನು ಸಂಗ್ರಹಿಸಿ ತನ್ನ ಅನುಷ್ಠಾನದಲ್ಲಿ ಒಂದುಮಾಡಿಕೊಂಡು ಬುದ್ಧಿವಂತನಾಗಿಯೂ ಸಮಾಹಿತಚಿತ್ತನಾಗಿಯೂ ಇರುತ್ತಿದ್ದನು.

೪೬. ಇಂತು ಜೀವನವನ್ನು ಸಾಗಿಸುತ್ತಿರುವ ಸಾಧುವಾದ ನಂದಭದ್ರನ ಸ್ಥಿತಿಯನ್ನು ದೇವತೆಗಳೂ ಆಶಿಸುತ್ತಿದ್ದರು. ಇಂದ್ರಾದಿಗಳೆಲ್ಲರೂ ಇವನನ್ನು ಕಂಡು ವಿಸ್ಮಯವನ್ನು ಹೊಂದಿದ್ದರು.

ಅತ್ರೈವ ಸ್ಥಾನಕೇ ಚಾಪಿ ಶೂದ್ರೋಽಭೂತ್ಪ್ರತಿವೇಶ್ಮಕಃ ।
ಸ ನಂದಭದ್ರಂ ಧರ್ಮಿಷ್ಠಂ ಪುನಃ ಪುನರಸೂಯತ ॥ ೪೭ ॥
ನಾಸ್ತಿಕಃ ಸ ದುರಾಚಾರಃ ಸತ್ಯವ್ರತ ಇತಿ ಶ್ರುತಃ ।
ಸ ಸದಾ ನಂದಭದ್ರಸ್ಯ ವಿಲೋಕಯತಿ ಚಾಂತರಂ ॥ ೪೮ ॥
ಛಿದ್ರಂ ಚೇದಸ್ಯ ಪಶ್ಯಾಮಿ ತತೋ ಧರ್ಮಾನ್ನಿವರ್ತಯೇ ।
ಸ್ವಭಾವ ಏವ ಕ್ರೂರಾಣಾಂ ನಾಸ್ತಿಕಾನಾಂ ದುರಾತ್ಮನಾಂ ॥ ೪೯ ॥
ಆತ್ಮಾನಂ ಪಾತಯಂತ್ಯೇವ ಪಾತಯಂತ್ಯಪರಂ ಚ ಯತ್ ॥ ೫೦ ॥
ತತಸ್ತ್ವೇವಂ ವರ್ತತೋಽಸ್ಯ ನಂದಭದ್ರಸ್ಯ ಧೀಮತಃ ।
ಏಕೋಽಭೂತ್ತನಯಃ ಕಷ್ಟಾದ್ವಾರ್ಧಕೇ ಸೋಽಪ್ಯನಶ್ಯತ ॥ ೫೧ ॥
ತಚ್ಚ ದೈವಕೃತಂ ಮತ್ವಾ ನ ಶುಶೋಚ ಮಹಾಮತಿಃ ।
ದೇವೋ ವಾ ಮಾನವೋ ವಾಪಿ ಕೋ ಹಿ ದೈವಾದ್ವಿಮುಚ್ಯತೇ ॥ ೫೨ ॥
ತತೋಽಸ್ಯ ಸುಪ್ರಿಯಾ ಭಾರ್ಯಾ ಸರ್ವೈಃ ಸಾಧ್ವೀಗುಣೈರ್ಯುತಾ ।
ಗೃಹಧರ್ಮಸ್ಯ ಮೂರ್ತಿರ್ಯಾ ಸಾಕ್ಷಾದಿವ ಅರುಂಧತೀ ।
ವಿನಾಶ ಮಾಗತಾಪಾರ್ಥ ಕನಕಾ ನಾಮ ನಾಮತಃ ॥ ೫೩ ॥

---

೪೭–೪೮. ಈ ಸ್ಥಳದಲ್ಲಿಯೇ ಈತನ ಮನೆಗೆದುರು ಮನೆಯಲ್ಲಿ ಒಬ್ಬ ಶೂದ್ರನಿದ್ದನು. ಅವನು ಧರ್ಮಿಷ್ಠನಾದ ನಂದಭದ್ರನನ್ನು ಕಂಡು ದಿನದಿನಕ್ಕೂ ಹೆಚ್ಚು ಅಸೂಯೆಯನ್ನು ಹೊಂದುತ್ತಿದ್ದನು. ಅವನು ನಾಸ್ತಿಕನು. ದುರಾಚಾರಿ. ಹೆಸರು ಮಾತ್ರ ಸತ್ಯವ್ರತನೆಂಬುದಾಗಿದ್ದಿತು. ಅವನು ಯಾವಾಗಲೂ ನಂದಭದ್ರನ ಸಮಯಾಸಮಯಗಳನ್ನೇ ಪರೀಕ್ಷಿಸುತ್ತಿದ್ದನು.

೪೯–೫೦. 'ಇವನಲ್ಲಿ ಏನಾದರೂ ಲೋಪವನ್ನು ಕಂಡಾಗ ಧರ್ಮದಿಂದ ಹಿಂದಿರುಗಿಸುವೆನು' ಎಂದು ಯೋಚಿಸುತ್ತಿದ್ದನು. ಕ್ರೂರಕರ್ಮಿಗಳೂ, ನಾಸ್ತಿಕರೂ, ದುರಾತ್ಮರೂ ಆದವರ ಸ್ವಭಾವವೇ ಈ ವಿಧವಾದುದು. ಅವರು ತಾವೂ ನರಕಕ್ಕೆ ಹೋಗುವುದಲ್ಲದೆ ಮತ್ತೊಬ್ಬರನ್ನೂ ಸೆಳೆಯುವರು.

೫೧. ಬುದ್ಧಿಶಾಲಿಯಾದ ನಂದಭದ್ರನು ಇಂತು ಜೀವನವನ್ನು ನಡೆಸುತ್ತಿರಲು ಅವನಿಗೊಬ್ಬ ಮಗನಿದ್ದನು. ಅತ್ಯಂತ ಕಷ್ಟವೆನಿಸುವಂತೆ ಆ ಏಕಮಾತ್ರ ಪುತ್ರನೂ ತಂದೆಯ ಮುದಿತನದಲ್ಲಿ ಸತ್ತುಹೋದನು.

೫೨. ಅದನ್ನು ದೈವಕೃತವೆಂದೆಣಿಸಿ ಆ ಬುದ್ಧಿಶಾಲಿಯು ಶೋಕವನ್ನು ಮಾಡಲಿಲ್ಲ. ದೇವತೆಗಳಲ್ಲಾಗಲಿ, ಮಾನವರಲ್ಲಾಗಲಿ ಯಾರು ತಾನೆ ಅದೃಷ್ಟದ ಹಿಡಿತದಿಂದ ಮುಕ್ತರಾಗಿರುವರು ?

೫೩. ಬಳಿಕ ಅವನಿಗೆ ಅತ್ಯಂತ ಪ್ರಿಯಳೂ, ಸಕಲ ಪತಿವ್ರತಾಗುಣ ಯುಕ್ತೆಯೂ, ಅರುಂಧತಿಯೇ ಸಾಕ್ಷಾತ್ತಾಗಿ ಬಂದಂತೆ ಇದ್ದು ತನ್ನ ಗಾರ್ಹಸ್ಥ್ಯ

**ತತೋ ಯತೇಂದ್ರಿಯೋಽಪ್ಯೇಷ ಗೃಹಧರ್ಮವಿನಾಶತಃ ।**
**ಶುಶೋಚ ಹಾ ಕಷ್ಟಮಿತಿ ಪಾಪೋಽಹಮಿತಿಚಾಸಕೃತ್ ॥ ೫೪ ॥**
**ತತ್ರಾಸ್ಯ ಚಾಂತರಂ ದೃಷ್ಟ್ವಾ ಹೃಷ್ಟಸ್ಸತ್ಯವ್ರತಶ್ಶಿರಾತ್ ।**
**ಉಪಾವ್ರಜ್ಯ ಚ ಹಾ ಕಷ್ಟಂ ಬ್ರುವಂಸ್ತಂ ನಂದಭದ್ರಕಂ ॥ ೫೫ ॥**
**ದಧಿಕರ್ಣ ಇವಾಸಾದ್ಯ ನಂದಭದ್ರಮುವಾಚ ಸಃ ॥ ೫೬ ॥**
**ಹಾ ನಂದಭದ್ರ ಯದ್ಯೇವಂ ತವಾಪ್ಯೇವಂ ವಿಧಂ ಫಲಂ ।**
**ಏತೇನ ಮನ್ಯೇ ಮನಸಿ ಧರ್ಮೋಽಪ್ಯೇಷ ವೃಥೈವ ಯತ್ ॥ ೫೭ ॥**
**ಇತ್ಯಾದಿ ಬಹುಧಾ ಪ್ರೋಚ್ಯ ತತ್ತದ್ವಾಕ್ಯಂ ತತಸ್ತತಃ ।**
**ಸತ್ಯವ್ರತಸ್ತತಃ ಪ್ರಾಹ ನಂದಭದ್ರಂ ಕೃಪಾನ್ವಿತಃ ॥ ೫೮ ॥**
**ನಂದಭದ್ರ ಸದಾ ತುಭ್ಯಂ ವಕ್ತುಕಾಮೋಽಸ್ಮಿ ಕಿಂಚನ ।**
**ಪ್ರಸ್ತಾವಸ್ಯಾಪ್ಯಭಾವಾಚ್ಚ ನೋದಿತಂ ಚ ಮಯಾ ಕ್ವಚಿತ್ ॥ ೫೯ ॥**

---

ಧರ್ಮಾಚರಣೆಯಲ್ಲಿ ತನಗೆ ಸಹಚರಿಯಾಗಿ ಧರ್ಮಸ್ವರೂಪಿಣಿಯೆನಿಸಿದ್ದ ಕನಕೆಯೆಂಬ ಹೆಸರುಳ್ಳ ಅವನ ಪತ್ನಿಯೂ ಸಹ ಸ್ವರ್ಗಸ್ಥಳಾದಳು.

೫೪. ಆಗ ನಂದಭದ್ರನು ಇಂದ್ರಿಯ ಸಂಯಮವುಳ್ಳವನಾದರೂ, ತನ್ನ ಗಾರ್ಹಸ್ಥ್ಯಧರ್ಮವು ಕೆಟ್ಟುಹೋದುದರಿಂದ 'ಅಯ್ಯೋ! ಮಹಾ ಕಷ್ಟವು!! ನಾನು ಮಹಾ ಪಾಪಿ!' ಎಂಬುದಾಗಿ ಅಡಿಗಡಿಗೂ ಹೇಳಿಕೊಂಡು ದುಃಖ ಗೊಳ್ಳುತ್ತಿದ್ದನು.

೫೫-೫೬. ಈ ಸಮಯವನ್ನೇ ಸರಿಯಾದುದಾಗಿ ಭಾವಿಸಿ ಸತ್ಯವ್ರತನು ಸಂತೋಷದಿಂದ ಮೆಲ್ಲಗೆ ಅವನ ಸಮೀಪಕ್ಕೆ ಬಂದು "ಅಯ್ಯೋ ಪಾಪ! ನಂದ ಭದ್ರ! ನಿನಗೆ ಬಹಳ ಕಷ್ಟವಾಯಿತು" ಎಂದು ಸಂತಾಪವನ್ನು ಸೂಚಿಸುತ್ತ ದಧಿಕರ್ಣನಂತೆ ಛಿದ್ರವನ್ನೇ ಹುಡುಕುತ್ತ ನಂದಭದ್ರನನ್ನು ಕುರಿತು ಇಂತೆಂದನು.

೫೭. "ಎಲೈ ನಂದಭದ್ರನೆ! ನಿನಗೂ ಕೂಡ ಈ ವಿಧವಾದ ಕಷ್ಟಗಳು ಸಂಭವಿಸುವುದೇ ಆದರೆ, ನೀನು ಆಚರಿಸಿದ ಈ ಧರ್ಮವೆಲ್ಲವೂ ವ್ಯರ್ಥವೆಂದೇ ಮನಸ್ಸಿನಲ್ಲಿ ನಾನು ಯೋಚಿಸುತ್ತಿರುವೆನು."

೫೮. ಈ ಪ್ರಕಾರವಾಗಿ ಬಹು ವಿಧದಿಂದ ಆಯಾ ಕಾಲಕ್ಕನುಸಾರವಾದ ಮಾತನ್ನಾಡುತ್ತ ಸತ್ಯವ್ರತನು ಕೊನೆಯಲ್ಲಿ ಕೃಪೆಯಿಂದ ಕೂಡಿದವನಂತೆ ನಟಿಸುತ್ತ ನಂದಭದ್ರನನ್ನು ಕುರಿತು ಇಂತೆಂದನು.

೫೯. "ಎಲೈ ನಂದಭದ್ರನೆ! ನಿನಗೊಂದು ವಿಷಯವನ್ನು ಹೇಳಬೇಕೆಂದು ಬಹಳ ಕಾಲದಿಂದಲೂ ನನಗೆ ಕುತೂಹಲವಿರುವುದು. ಆದರೆ ಇದಕ್ಕೆ ಮುಂಚೆ ಸಮಯವು ಸರಿಯಾಗಿ ದೊರೆಯಲಿಲ್ಲವಾದುದರಿಂದ ಏನನ್ನೂ ಹೇಳಲಾಗಲಿಲ್ಲ.

ಅಪ್ರಸ್ತಾನಂ ಬ್ರುವನ್ವಾಕ್ಯಂ ಬೃಹಸ್ಪತಿರಪಿ ಧ್ರುವಂ ।
ಲಭತೇ ಬುದ್ಧ್ಯವಜ್ಞಾನಮವಮಾನಂ ಚ ಹೀನವತ್ ॥ ೬೦ ॥
ನಂದಭದ್ರ ಉವಾಚ:—
ಬ್ರೂಹಿ ಬ್ರೂಹಿ ನ ಮೇ ಕಿಂಚಿತ್ಸಾಧು ಗೋಪ್ಯಂ ಪ್ರಿಯಂ ಪರಂ ।
ವಚೋಭಿಃ ಶುದ್ಧಸತ್ತ್ವಾನಾಂ ವಿಮೋಕ್ಷೋಽಪ್ಯುಪನಿಸಾಯತೇ ॥ ೬೧ ॥
ಸತ್ಯವ್ರತ ಉವಾಚ:—
ನವಭಿರ್ನವಭಿಶ್ಚೈವ ವಿಮುಕ್ತಂ ವಾಗ್ವಿದೂಷಣೈಃ ।
ನವಭಿರ್ಬುದ್ಧಿದೋಷೈಶ್ಚ ವಾಕ್ಯಂ ವಕ್ಷ್ಯಾಮ್ಯದೋಷವತ್ ॥ ೬೨ ॥
ಸೌಕ್ಷ್ಮ್ಯಂ ಸಂಖ್ಯಾಕ್ರಮಶ್ಚಾಪಿ ನಿರ್ಣಯಃ ಸಪ್ರಯೋಜನಃ ।
ಪಂಚೈತಾನ್ಯರ್ಥಜಾತಾನಿ ಯತ್ರ ತದ್ವಾಕ್ಯಮುಚ್ಯತೇ ॥ ೬೩ ॥
ಧರ್ಮಮರ್ಥಂ ಚ ಕಾಮಂ ಚ ಮೋಕ್ಷಂ ಚೋದ್ದಿಶ್ಯ ಚೋಚ್ಯತೇ ।
ಪ್ರಯೋಜನಮಿತಿ ಪ್ರೋಕ್ತಂ ಪ್ರಥಮಂ ವಾಕ್ಯಲಕ್ಷಣಂ ॥ ೬೪ ॥
ಧರ್ಮಾರ್ಥಕಾಮಮೋಕ್ಷೇಷು ಪ್ರತಿಜ್ಞಾಯ ವಿಶೇಷತಃ ।
ಇದಂ ತದಿತಿ ವಾಕ್ಯಾಂತೇ ಪ್ರೋಚ್ಯತೇ ಸ ವಿನಿರ್ಣಯಃ ॥ ೬೫ ॥

---

೬೦. ಪ್ರಸ್ತಾವಸದೃಶವಲ್ಲದ ಸಮಯೋಚಿತವೆನಿಸಿದ ಮಾತುಗಳನ್ನು ಆಡಿದರೆ ಬೃಹಸ್ಪತಿಸಮನಾದರೂ ಹೀನಮನುಷ್ಯನಂತೆಯೇ ಬುದ್ಧಿಯ ಅವಮತಿಯನ್ನೂ, ಅವಮಾನವನ್ನೂ ಹೊಂದುವುದು ನಿಶ್ಚಯವು.''

೬೧. ನಂದಭದ್ರನು ಕೇಳುತ್ತಾನೆ:—''ನಿನ್ನ ಮನಸ್ಸಿನಲ್ಲಿರುವುದನ್ನು ಹೇಳು. ಧರ್ಮಸಹಿತವೂ, ಪ್ರಿಯವೂ, ಉತ್ತಮವೂ ಆದ ಯಾವುದನ್ನೂ ನನ್ನಲ್ಲಿ ಮರೆಮಾಚಬೇಡ. ಶುದ್ಧಾಂತಃಕರಣರಾದ ಮಹರ್ಷಿಗಳ ಮಾತುಗಳಿಂದ ಮೋಕ್ಷವೂ ಕೂಡ ಹೊಂದಲರ್ಹವಾಗುವುದಿಲ್ಲವೆ?''

೬೨–೬೩. ಸತ್ಯವ್ರತನು ಹೇಳುತ್ತಾನೆ:—''ಹದಿನೆಂಟು ವಚನದೋಷಗಳಿಂದಲೂ, ಒಂಬತ್ತು ಬುದ್ಧಿ ದೋಷಗಳಿಂದಲೂ ರಹಿತವಾಗಿ ಪರಿಶುದ್ಧವಾದ ಮಾತುಗಳನ್ನೇ ನಾನು ಹೇಳುವೆನು. ಸೌಕ್ಷ್ಮ್ಯ, ಸಂಖ್ಯೆ, ಕ್ರಮ, ನಿರ್ಣಯ, ಪ್ರಯೋಜನ ಈ ಐದು ಪ್ರಯೋಜನಗಳು ಯಾವ ಮಾತುಗಳಲ್ಲಿರುವುವೊ, ಅವನ್ನೇ ವಾಕ್ಯವೆಂದು ಹೇಳುವರು.

೬೪–೬೫. ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ಚತುರ್ವಿಧ ಪುರುಷಾರ್ಥಗಳಲ್ಲಿ ಯಾವುದನ್ನಾದರೂ ಕುರಿತು ಹೇಳುವುದೇ ವಾಕ್ಯದ ಪ್ರಯೋಜನ. ಇದೇ ವಾಕ್ಯದ ಮೊದಲನೆಯ ಲಕ್ಷಣವು. ಈ ಪುರುಷಾರ್ಥಗಳಲ್ಲಿ ವಿಶೇಷವಾದ ಪ್ರತಿಜ್ಞೆಯನ್ನು ಮಾಡಿ ಭಾಷಣದ ಕೊನೆಯಲ್ಲಿ 'ಇಂತಹುದೇ ಭಾಷಣದ ಪ್ರಯೋಜನ'ವೆಂದು ನಿರ್ದೇಶಿಸುವುದೇ ನಿರ್ಣಯವೆನಿಸುವುದು.

ಇದಂ ಪೂರ್ವಮಿದಂ ಪಶ್ಚಾದ್ವಕ್ತವ್ಯಂ ಯತ್ಕ್ರಮೇಣ ಹಿ ।
ಕ್ರಮಯೋಗಂ ತಮಪ್ಯಾಹುರ್ವಾಕ್ಯತತ್ತ್ವವಿದೋ ಬುಧಾಃ ॥ ೬೬ ॥
ದೋಷಾಣಾಂ ಚ ಗುಣಾನಾಂ ಚ ಪ್ರಮಾಣಂ ಪ್ರವಿಭಾಗತಃ ।
ಉಭಯಾರ್ಥಮಪಿ ಪ್ರೇಕ್ಷ್ಯ ಸಾ ಸಂಖ್ಯೇತ್ಯುಪಧಾರ್ಯತಾಮ್ ॥ ೬೭ ॥
ವಾಕ್ಯಜ್ಞೇಯೇಷು ಭಿನ್ನೇಷು ಯತ್ರಾಭೇದಃ ಪ್ರದೃಶ್ಯತೇ ।
ತತ್ರಾತಿಶಯಹೇತುತ್ವಂ ತತ್ಸೌಕ್ಷ್ಮ್ಯಮಿತಿ ನಿರ್ದಿಶೇತ್ ॥ ೬೮ ॥
ಇತಿ ವಾಕ್ಯಗುಣಾನಾಂ ಚ ವಾಗ್ದೋಷಾನ್ದ್ವಿನವ ಶೃಣು ।
ಅಪೇತಾರ್ಥಮಭಿನ್ನಾರ್ಥಮಪವೃತ್ತಂ ತಥಾಧಿಕಮ್ ॥ ೬೯ ॥
ಅಶ್ಲಕ್ಷ್ಣಂ ಚಾಪಿ ಸಂದಿಗ್ಧಂ ಪದಾಂತೇ ಗುರು ಚಾಕ್ಷರಮ್ ।
ಪರಾಙ್ಮುಖಮುಖಂ ಯಚ್ಚ ಅನೃತಂ ಚಾಪ್ಯಸಂಸ್ಕೃತಮ್ ॥ ೭೦ ॥
ವಿರುದ್ಧಂ ಯತ್ತ್ರಿವರ್ಗೇಣ ನ್ಯೂನಂ ಕಷ್ಟಾತಿಶಬ್ದಕಮ್ ।
ವ್ಯುತ್ಕ್ರಮಾಭಿಹೃತಂ ಯಚ್ಚ ಸಶೇಷಂ ಚಾಪ್ಯಹೇತುಕಮ್ ।
ನಿಷ್ಕಾರಣಂ ಚ ವಾಗ್ದೋಷಾನ್ಬುದ್ಧಿಜಾನ್ಶೃಣು ತ್ವಂ ಚ ಯಾನ್ ॥ ೭೧ ॥

---

೬೬. 'ಇದನ್ನು ಮೊದಲು ಹೇಳಬೇಕು; ಇದನ್ನು ಆಮೇಲೆ ಹೇಳಬೇಕು' ಎಂಬುದಾಗಿ ವಿಷಯಗಳನ್ನು ಕ್ರಮವಾಗಿ ಹೇಳುವುದಕ್ಕೆ ಕ್ರಮಸಂದರ್ಭವೆಂದು ವಾಕ್ಯತತ್ತ್ವವನ್ನರಿತವರು ಹೇಳುವರು.

೬೭. ಭಾಷಣದ ಪೂರ್ವಾಪರಗಳನ್ನೆಲ್ಲ ಯೋಚಿಸಿ ಅದರ ಗುಣದೋಷ ಗಳನ್ನು ವಿಭಾಗಿಸಿ ಯಾವುದು ಎಷ್ಟುಭಾಗವಿರುವುದೆಂದು ನಿಶ್ಚಯಿಸುವುದೇ ಸಂಖ್ಯೆಯೆಂದು ತಿಳಿಯಬೇಕು.

೬೮. ವಾಕ್ಯಕ್ಕೆ ಅನೇಕಾರ್ಥಗಳುಂಟಾಗುವ ಸಂದರ್ಭದಲ್ಲಿ ಪ್ರಥಮತಃ ಎಲ್ಲವೂ ಸಮಾನವಾಗಿ ಕಂಡುಬಂದರೂ, ಒಂದೇ ಅರ್ಥವನ್ನು ನಿರ್ಧರಿಸುವ ವಿಶೇಷ ಕಾರಣಕ್ಕೆ ಸೂಕ್ಷ್ಮವೆಂದು ಹೇಳಬೇಕು.

೬೯–೭೧. ಇವು ವಾಕ್ಯಗುಣಗಳು. ಇನ್ನು ಹದಿನೆಂಟು ವಾಕ್ಯದೋಷ ಗಳನ್ನು ಕೇಳು. ಅರ್ಥವಿಲ್ಲದ್ದು, ಪುನರುಕ್ತಿ, ಅಪ್ರಕೃತ, ಅಧಿಕಭಾಷಣ, ಮಧುರವಲ್ಲದುದು, ಸಂದೇಹಕ್ಕೆಡೆಗೊಡುವಂತಹುದು, ಪದಗಳ ಕೊನೆಯಲ್ಲಿ ದೀರ್ಘಗಳುಳ್ಳುದುದು, ಶ್ರೋತೃವಿನ ಮುಖವನ್ನು ನೋಡದಿರುವುದು, ಸುಳ್ಳನ್ನು ಹೇಳುವುದು, ವ್ಯಾಕರಣ ಶುದ್ಧವಲ್ಲದುದು, ಪೂರ್ವಾಪರ ವಿರೋಧವುಳ್ಳದ್ದು, ಧರ್ಮಾರ್ಥಕಾಮಗಳೆಂಬ ಪ್ರಯೋಜನಗಳಿಲ್ಲದುದು, ಅನೇಕ ಕಷ್ಟವಾದ ಶಬ್ದ ಗಳುಳ್ಳುದು, ಕ್ರಮವನ್ನು ತಪ್ಪಿಸಿ ಮಾತನಾಡುವುದು, ಹೇಳಬೇಕಾದುದನ್ನು ನಿಲ್ಲಿಸಿಕೊಳ್ಳುವುದು, ನಿಷ್ಕಾರಣವಾದ ಮಾತುಗಳು, ಅಹೇತುಕವಾದುದು— ಇವುಗಳೇ ವಾಕ್ಯದೋಷಗಳು. ಇನ್ನು ಬುದ್ಧಿದೋಷಗಳನ್ನು ತಿಳಿಸುವೆನು ಕೇಳು.

ಕಾಮಾತ್ಕ್ರೋಧಾದ್ಭಯಾಚ್ಚೈವ ಲೋಭಾದ್ದೈನ್ಯಾದನಾರ್ಯಕಾತ್ ।
ಹೀನಾನುಕ್ರೋಶತೋ ಮಾನಾನ್ನ ಚ ವಕ್ಷ್ಯಾಮಿ ಕಿಂಚನ ॥ ೭೨ ॥
ವಕ್ತಾ ಶ್ರೋತಾ ಚ ವಾಕ್ಯಂ ಚ ಯದಾತ್ವವಿಕಲಂ ಭವೇತ್ ।
ಸಮುಮೇತಿ ವಿವಕ್ಷಾಯಾಂ ತದಾ ಸೋಽರ್ಥಃ ಪ್ರಕಾಶತೇ ॥ ೭೩ ॥
ವಕ್ತನ್ಯೇ ತು ಯದಾ ವಕ್ತಾ ಶ್ರೋತಾರಮುವಮನ್ಯತೇ ।
ಶ್ರೋತಾ ಚಾಪ್ಯಥ ವಕ್ತಾರಂ ತದಾ ವಾಕ್ಯಂ ನ ರೋಹತಿ ॥ ೭೪ ॥
ಅಥ ಯಃ ಸ್ವಪ್ರಿಯಂ ಬ್ರೂಯಾಚ್ಛ್ರೋತುರ್ವೋತ್ಸೃಜ್ಯ ಯದ್ಧೃತಂ ।
ವಿಶಂಕಾ ಜಾಯತೇ ತಸ್ಮಿನ್ವಾಕ್ಯಂ ತದಪಿ ದೋಷವತ್ ॥ ೭೫ ॥
ತಸ್ಮಾದ್ಯಃ ಸ್ವಪ್ರಿಯಂ ತ್ಯಕ್ತ್ವಾ ಶ್ರೋತುಶ್ಚಾಪ್ಯಥ ಯತ್ಪ್ರಿಯಂ ।
ಸತ್ಯಮೇವ ಪ್ರಭಾಷೇತ ಸ ವಕ್ತಾ ನೇತರೋ ಭುವಿ ॥ ೭೬ ॥
ಮಿಥ್ಯಾವಾದಾನ್ನಾಪಸ್ತ್ರಜಾಲ ಸಂಭವಾನ್ಯದ್ವಿಹಾಯ ಚ ।
ಸತ್ಯಮೇವ ವ್ರತಂ ಯಸ್ಮಾತ್ತಸ್ಮಾತ್ಸತ್ಯವ್ರತಸ್ತ್ವಹಂ ॥ ೭೭ ॥

---

೭೨–೭೩. ಕಾಮದಿಂದಲಾಗಲಿ, ಕ್ರೋಧದಿಂದಾಗಲಿ, ಭಯದಿಂದಾಗಲಿ, ಲೋಭದಿಂದಾಗಲಿ, ದೈನ್ಯದಿಂದಾಗಲಿ, ನೀಚತನದಿಂದಾಗಲಿ, ಹೀನವೆಂಬ ಅನುತಾಪದಿಂದಾಗಲಿ, ನಾನು ದೊಡ್ಡವನೆಂಬ ಅಭಿಮಾನದಿಂದಾಗಲಿ ಏನನ್ನೂ ಹೇಳುವುದಿಲ್ಲ. ಯಾವಾಗ ವಾಕ್ಯವು ವೈಕಲ್ಯವಿಲ್ಲದುದಾಗುವುದೊ, ಆಗ ಹೇಳುವವನೂ, ಕೇಳುವವನೂ ವಾಕ್ಯದ ವಿಷಯದಲ್ಲಿ ಒಂದೇ ವಿಧವಾದ ಅಭಿಪ್ರಾಯವುಳ್ಳವರಾಗುವರು. ಆಗಲೇ ಅರ್ಥವು ಶೋಭಿಸುವುದು.

೭೪. ಮಾತನಾಡುವಾಗ ಹೇಳುವವನು ಶೋತೃವನ್ನಾಗಲಿ, ಕೇಳುವವನು ವಕ್ತೃವನ್ನಾಗಲಿ ಅಗೌರವದಿಂದ ಕಂಡರೆ, ಆಗ ವಾಕ್ಯದ ಅರ್ಥವು ನಿಷ್ಪ್ರಯೋಜನವಾಗುವುದು.

೭೫. ಭಾಷಣಕಾರನು ಶ್ರೋತೃವಿನ ಮನಸ್ಸನ್ನೇ ತಿಳಿಯದೆ ತನ್ನ ಪ್ರಿಯವನ್ನೇ ಕುರಿತು ಮಾತನಾಡುತ್ತಿದ್ದರೆ ಅವನ ಮಾತಿನಲ್ಲಿ ಸಂಶಯವುಂಟಾಗುವುದು. ಅದೂ ವಾಕ್ಯದ ಒಂದು ದೋಷವೇ ಸರಿ.

೭೬. ಆದುದರಿಂದ ಯಾವನು ತನ್ನ ಪ್ರಿಯವನ್ನೂ ಕೇಳುವವನ ಹಿತವನ್ನೂ ಎಣಿಸದೆ ಕೇವಲ ಸತ್ಯವನ್ನೇ ಮುಂದಿಟ್ಟುಕೊಂಡು ಮಾತನಾಡುವನೊ, ಅವನನ್ನು ವಕ್ತೃವೆನ್ನಬೇಕಲ್ಲದೆ ಮತ್ತೊಬ್ಬನನ್ನಲ್ಲ.

೭೭. ಶಾಸ್ತ್ರಸಮೂಹದಿಂದುಂಟಾದ ಮಿಥ್ಯಾವಾದವನ್ನೆಲ್ಲ ದೂರಮಾಡಿ ಸತ್ಯವಚನವನ್ನೇ ವ್ರತವನ್ನಾಗಿ ಸ್ವೀಕರಿಸಿರುವುದರಿಂದ ನಾನು ಸತ್ಯವ್ರತನೆಂಬ ಸಾರ್ಥಕವಾದ ಹೆಸರನ್ನು ಹೊಂದಿರುವೆನು.

**ಸತ್ಯಂ ತೇ ಸಂಪ್ರವಕ್ಷ್ಯಾಮಿ ಮಂತುಮರ್ಹಸಿ ತತ್ತಥಾ ॥ ೭೮ ॥**
**ಯದಾಪ್ರಭೃತಿ ಭದ್ರತ್ವಂ ಪಾಷಾಣಸ್ಯಾರ್ಚನೇ ರತಃ ।**
**ತದಾ ಪ್ರಭೃತಿ ಕಿಂಚಿಚ್ಚ ನ ಹಿ ಪಶ್ಯಾಮಿ ಶೋಭನಂ ॥ ೭೯ ॥**
**ಏಕಃ ಸೋಽಪಿ ಸುತೋ ನಷ್ಟೋ ಭಾರ್ಯಾ ಚಾರ್ಯಾಪ್ಯನಶ್ಯತ ।**
**ಕೂಟಾನಾಂ ಕರ್ಮಣಾಂ ಸಾಧೋ ಫಲಮೇವಂ ವಿಧಂ ಭವೇತ್ ॥ ೮೦ ॥**
**ಕ್ವ ದೇವಾಃ ಸಂತಿ ಮಿಥ್ಯೈತದ್ದೃಶ್ಯಂತೇ ಚೇದ್ಭವಂತ್ಯಪಿ ।**
**ಸರ್ವಾ ಚ ಕೂಟವಿಪ್ರಾಣಾಂ ದ್ರವ್ಯಾಯೈಷಾ ವಿಕಲ್ಪನಾ ॥ ೮೧ ॥**
**ಪಿತ್ರೂನುದ್ದಿಶ್ಯ ಯಚ್ಛಂತಿ ಮಮ ಹಾಸಃ ಪ್ರಜಾಯತೇ ।**
**ಅನ್ನಸ್ಯೋಪದ್ರವಂ ಯಚ್ಚ ಮೃತೋ ಹಿ ಕಿಮಶಿಷ್ಯತೇ ॥ ೮೨ ॥**
**ಯತ್ತ್ವಿದಂ ಬಹುಧಾ ಮೂಢಾ ವರ್ಣಯಂತಿ ದ್ವಿಜಾಧಮಾಃ ।**
**ವಿಶ್ವನಿರ್ಮಾಣಮಖಿಲಂ ತಥಾಪಿ ಶೃಣು ತತ್ತ್ವತಃ ॥ ೮೩ ॥**

---

೭೮–೭೯. ಈಗ ನಾನು ಸತ್ಯವನ್ನೇ ಹೇಳುವೆನು. ನೀನು ಅದನ್ನು ಮನಸ್ಸಿಟ್ಟು ಕೇಳುವವನಾಗು. ಯಾವ ದಿನದಿಂದ ನೀನು ಈ ಕಲ್ಲನ್ನು ಪೂಜಿಸಲು ಮೊದಲುಮಾಡಿದೆಯೊ. ಅಂದಿನಿಂದಲೂ ನಿನ್ನ ಜೀವನದಲ್ಲಿ ಒಂದಾದರೂ ಸೌಖ್ಯವುಂಟಾದುದನ್ನು ನಾನು ಕಾಣಲಿಲ್ಲ.

೮೦. ಇದ್ದ ಒಬ್ಬನೇ ಒಬ್ಬ ಮಗನೂ ಸತ್ತನು. ಯೋಗ್ಯಳಾಗಿದ್ದ ಪತ್ನಿಯೂ ನಾಶವನ್ನೈದಿದಳು. ಸಾಧುವಾದ ನಂದಭದ್ರನೆ! ಮಿಥ್ಯಾಶಾಸ್ತ್ರಗಳನ್ನನುಸರಿಸಿ ಮಾಡಿದ ಸಕಲ ಕರ್ಮಗಳ ಫಲವೂ ಈ ವಿಧವಾದುದೇ ಆಗಿರುವುದು.

೮೧. ದೇವತೆಗಳೆಂಬುವರೆಲ್ಲಿರುವರು? ಇದೆಲ್ಲವೂ ಕೇವಲ ಮಿಥ್ಯೆ. ಇದ್ದಲ್ಲಿ ಕಣ್ಣುಗಳಿಗೆ ಕಾಣಬೇಕಲ್ಲ. ಆದುದರಿಂದ ಸ್ವರ್ಗ, ದೇವತೆಗಳು ಇವೇ ಮೊದಲಾದ ಈ ಸಮಸ್ತ ಕಲ್ಪನೆಯೂ ಮೋಸಗಾರರಾದ ಬ್ರಾಹ್ಮಣರು ದ್ರವ್ಯಾರ್ಜನೆಗಾಗಿ ಮಾಡಿಕೊಂಡಿರುವ ಒಂದು ಉಪಾಯವಾಗಿರುವುದು.

೮೨. ಕೆಲವರು ಪಿತೃಗಳನ್ನುದ್ದೇಶಿಸಿ ಶ್ರಾದ್ಧಾದಿಗಳನ್ನು ಮಾಡುವರು. ಅದನ್ನು ಕಂಡು ನನಗೆ ನಗೆ ಬರುವುದು. ಅದು ಕೇವಲ ಅನ್ನಾದಿ ದ್ರವ್ಯಗಳ ವ್ಯರ್ಥವಾದ ವ್ಯಯವೇ ಹೊರತು ಸತ್ತವನು ಯಾವಾಗಲಾದರೂ ಏನನ್ನಾದರೂ ತಿಂದುದುಂಟೆ?

೮೩. ಮೂಢರಾದ ಬ್ರಾಹ್ಮಣಾಧಮರು ಅನೇಕ ಪ್ರಕಾರವಾಗಿ ಸಮಸ್ತ ಲೋಕಗಳ ಸೃಷ್ಟಿಯನ್ನೂ ವರ್ಣಿಸುವರಲ್ಲವೆ? ಆ ವಿಚಾರದಲ್ಲಿ ವಸ್ತುಸ್ಥಿತಿಯನ್ನು ಕೇಳು.

ಉತ್ಪತ್ತಿಶ್ಚಾಪಿ ಭಂಗಶ್ಚ ವಿಶ್ವಸ್ಯೈತದ್ದ್ವಯಂ ಮೃಷಾ ।
ಏವಮೇವ ಹಿ ಸರ್ವಂ ಚ ಸದಿದಂ ವರ್ತತೇ ಜಗತ್ ॥ ೮೪ ॥

ಸ್ವಭಾವತೋ ವಿಶ್ವಮಿದಂ ಹಿ ವರ್ತತೇ
ಸ್ವಭಾವತಃ ಸೂರ್ಯಮುಖಾ ಭ್ರಮಂತ್ಯಮೀ ।
ಸ್ವಭಾವತೋ ವಾಯವೋ ವಾಂತಿ ನಿತ್ಯಂ
ಸ್ವಭಾವತೋ ವರ್ಷತಿ ಚಾಂಬುದೋಽಯಂ ॥ ೮೫ ॥

ಸ್ವಭಾವತೋ ರೋಹತಿ ಧಾನ್ಯಜಾತಂ
ಸ್ವಭಾವತೋ ವರ್ಷಶೀತಾತಪತ್ರಂ ।
ಸ್ವಭಾವತಃ ಸಂಸ್ಥಿತಾ ಮೇದಿನೀ ಚ
ಸ್ವಭಾವತಃ ಸರಿತಃ ಸಂಸ್ರವಂತಿ ॥ ೮೬ ॥

ಸ್ವಭಾವತಃ ಪರ್ವತಾ ಭಾಂತಿ ನಿತ್ಯಂ
ಸ್ವಭಾವತೋ ವಾರಿಧಿರೇಷ ಸಂಸ್ಥಿತಃ ।
ಸ್ವಭಾವತೋ ಗರ್ಭಿಣೀ ಸಂಪ್ರಸೂತೇ
ಸ್ವಭಾವತೋಽಮೀ ಬಹವಶ್ಚ ಜೀವಾಃ ॥ ೮೭ ॥

ಯಥಾ ಸ್ವಭಾವೇನ ಭವಂತಿ ವಕ್ರಾ
ಋತುಸ್ವಭಾವಾದ್ಬದರೀಷು ಕಂಟಕಾಃ ।
ತಥಾ ಸ್ವಭಾವೇನ ಹಿ ಸರ್ವಮೇತ
ತ್ಪ್ರಕಾಶತೇ ಕೋಽಪಿ ಕರ್ತಾ ನ ದೃಶ್ಯಃ ॥ ೮೮ ॥

---

೮೪–೮೫. ಬ್ರಹ್ಮಾಂಡದ ಉತ್ಪತ್ತಿನಾಶಗಳೆಂಬುವುಗಳೆರಡೂ ಕೇವಲ ಮಿಥ್ಯೆಯಾಗಿರುವುವು. ಈಗಿರುವಂತೆಯೇ ಸಕಲ ಪ್ರಪಂಚವೂ ಯಾವಾಗಲೂ ಇದ್ದೇ ಇರುವುದು. ಲೋಕವೆಲ್ಲವೂ ಸ್ವಭಾವದಿಂದಲೆ ವರ್ತಿಸುವುದು. ಸೂರ್ಯಾದಿ ಗ್ರಹಗಳು ಸ್ವಭಾವದಿಂದಲೇ ಆಕಾಶದಲ್ಲಿ ತಿರುಗುತ್ತಿರುವುವು. ಸ್ವಭಾವದಿಂದಲೇ ವಾಯುಗಳು ಸದಾ ಚಲಿಸುತ್ತಿರುವುವು. ಮೇಘವು ಸ್ವಭಾವದಿಂದಲೇ ಮಳೆಯನ್ನು ಕರೆಯುವುದು.

೮೬. ಸ್ವಭಾವದಿಂದಲೇ ಧಾನ್ಯದ ಬೀಜಗಳು ಮೊಳೆಯುವುವು. ಕಾಲದ ಸ್ವಭಾವದಿಂದ ಮಳೆ, ಚಳಿ, ಬಿಸಿಲುಗಳುಂಟಾಗುವುವು. ಸ್ವಭಾವದಿಂದಲೇ ಭೂಮಿಯು ಸ್ಥಿರವಾಗಿ ನಿಂತಿರುವುದು. ಸ್ವಭಾವದಿಂದ ನದಿಗಳು ಹರಿಯುವುವು.

೮೭. ಸ್ವಭಾವದಿಂದ ಪರ್ವತಗಳು ಕಾಣಿಸುತ್ತಿರುವುವು. ಸ್ವಭಾವದಿಂದ ಈ ಸಮುದ್ರವು ನಿಂತಿರುವುದು. ಸ್ವಭಾವದಿಂದಲೇ ಗರ್ಭಿಣಿಯು ಮಗುವನ್ನು ಹೆರುವಳು. ಸ್ವಭಾವದಿಂದಲೇ ಈ ಅನೇಕ ಪ್ರಾಣಿಗಳೂ ಹುಟ್ಟುತ್ತಿರುವುವು.

೮೮. ಋತು ಸ್ವಭಾವದಿಂದಲೇ ಬದರೀ ವೃಕ್ಷಗಳಲ್ಲಿ ಹೇಗೆ ವಕ್ರಗಳಾದ ಕಂಟಕಗಳುಂಟಾಗುವುವೊ, ಹಾಗೆಯೇ ಈ ಸಕಲ ಪ್ರಪಂಚವೂ ಸ್ವಭಾವ

**ತದೇವಂ ಸಂಸ್ಥಿತೇ ಲೋಕೇ ಮೂಢೋ ಮುಹ್ಯತಿ ಮತ್ತವತ್ ।**
**ಮಾನುಷ್ಯಮಪಿ ಯದ್ಧೂರ್ತಾ ವದಂತ್ಯಗ್ರ್ಯಂ ಶೃಣುಷ್ವ ತತ್ ॥ ೮೯ ॥**
**ಮಾನುಷ್ಯಾನ್ನ ಪರಂ ಕಷ್ಟಂ ವೈರಿಣಾಂ ನೋ ಭವೇದ್ದ್ವಿ ತತ್ ।**
**ಶೋಕಸ್ಥಾನಸಹಸ್ರಾಣಿ ಮನುಷ್ಯಸ್ಯ ಕ್ಷಣೇಕ್ಷಣೇ ॥ ೯೦ ॥**
**ಮಾನುಷ್ಯಂ ಹಿ ಸ್ಮೃತಾಕಾರಂ ಸಭಾಗ್ಯೋಽಸ್ಮಾದ್ವಿಮುಚ್ಯತೇ ।**
**ಪಶವಃ ಪಕ್ಷಿಣಃ ಕೀಟಾಃ ಕ್ರಿಮಯಶ್ಚ ಯಥಾಸುಖಂ ॥ ೯೧ ॥**
**ಅಬದ್ಧಾ ವಿಹರಂತ್ಯೇತೇ ಯೋನಿರೇಷಾಂ ಸುದುರ್ಲಭಾ ।**
**ನಿಶ್ಚಿಂತಾಃ ಸ್ಥಾವರಾಹ್ಯೇತೇ ಸೌಖ್ಯಮೇಷಾಂ ಮಹದ್ಭುವಿ ॥ ೯೨ ॥**
**ಬಹುನಾ ಕಿಂ ಮನುಷ್ಯೇಭ್ಯಃ ಸರ್ವೋ ಧನ್ಯೋಽನ್ಯಯೋನಿಜಃ ।**
**ಸ್ವಭಾವಮೇವ ಜಾನೀಹಿ ಪುಣ್ಯಾಪುಣ್ಯಾದಿಕಲ್ಪನಾ ॥ ೯೩ ॥**

---

ದಿಂದಲೇ ನಡೆದುಬರುತ್ತಿರುವುದಾಗಿದೆ. ಇದನ್ನು ಮಾಡಿದ ಕರ್ತೃವು ಯಾವನೂ ಯಾವಾಗಲೂ ಕಾಣಲಿಲ್ಲ.

೮೯. ಈ ರೀತಿಯಾಗಿ ಲೋಕದ ನಿಜವಾದ ಸ್ಥಿತಿಯಿರುತ್ತಿರಲು ಲೋಕ ಕರ್ತೃವೊಬ್ಬನಿರುವನೆಂದು ಹೇಳುವಂತಹ ಮನುಷ್ಯನು ಮತ್ತನಂತೆ ಕೇವಲ ಬುದ್ಧಿಭ್ರಮೆಯುಳ್ಳವನು. ಇನ್ನು ಮನುಷ್ಯಜನ್ಮವನ್ನು ಉತ್ತಮವೆಂದು ಧೂರ್ತರು ಹೇಳುವರಲ್ಲವೆ. ನಿಜವನ್ನು ಕೇಳು.

೯೦. ನಮ್ಮ ಪರಮ ವೈರಿಗಳಿಗೂ ಮನುಷ್ಯ ಜನ್ಮಕ್ಕಿಂತ ಹೆಚ್ಚಿನ ಕಷ್ಟ ವೆಂಬುದು ಎಂದಿಗೂ ಬರದಿರಲಿ. ಮನುಷ್ಯನಾದವನಿಗೆ ಪ್ರತಿಕ್ಷಣಕ್ಕೂ ಸಾವಿರಾರು ದುಃಖ ಕಾರಣಗಳು ಸಂಭವಿಸುತ್ತಿರುವುವು.

೯೧–೯೩. ಮನುಷ್ಯನಿಗೆ ಯಾವಾಗಲೂ ತನ್ನ ಶರೀರದ ಸ್ಮೃತಿಯೇ ಇರುವುದು. ಈ ಬಂಧದಿಂದ ಮುಕ್ತನಾದವನು ಭಾಗ್ಯವಂತನೇ ಸರಿ. ಪಶುಗಳು, ಪಕ್ಷಿಗಳು, ಕೀಟಗಳು, ಕ್ರಿಮಿಗಳು—ಇವುಗಳೆಲ್ಲವೂ ದೇಹಾಭಿಮಾನ ವಿಲ್ಲದೆ ತಮ್ಮ ಜನ್ಮಗಳಿಗನುಗುಣಗಳಾದ ಸುಖಗಳನ್ನನುಭವಿಸುತ್ತ ವಿಹರಿ ಸುತ್ತಿರುವುವು. ಇವುಗಳ ಜನ್ಮಗಳೇ ಅತ್ಯಂತ ದುರ್ಲಭಗಳೆಂದು ಹೇಳಬೇಕು. ಈ ಸ್ಥಾವರಗಳಂತೂ ನಿಶ್ಚಿಂತೆಯಾಗಿರುವುವು. ಭೂಲೋಕದಲ್ಲಿ ಇವುಗಳ ಸೌಖ್ಯವೇ ಮಹತ್ತರವಾದುದು. ಹೆಚ್ಚು ಹೇಳುವುದೇನು? ಮನುಷ್ಯರಿಗಿಂತ ಇತರ ಸಕಲ ಪ್ರಾಣಿಗಳೂ ಧನ್ಯಗಳೆಂದೇ ಹೇಳಬೇಕು. ಪುಣ್ಯ ಪಾಪಗಳ ಫಲ ವೆಂದು ಇತರರು ಹೇಳುವುದೆಲ್ಲವೂ ಕೇವಲ ಸ್ವಭಾವಚೇಷ್ಟಿತವೇ ಆಗಿರುವುದು. ಕೇವಲ ಸ್ವಭಾವದಿಂದಲೇ ಉಂಟಾಗುವ ಸುಖದುಃಖಗಳು ದೈವಿಕವಾಗಿ ದೊರೆತು ವೆಂದು ತಿಳಿಯುವುದು ಶುದ್ಧ ಭ್ರಾಂತಿಯೇ ಹೊರತು ಮತ್ತೆ ಬೇರೆಯಲ್ಲವು. ಪುಣ್ಯವೂ ಇಲ್ಲ; ಪಾಪವು ಮೊದಲೇ ಇಲ್ಲ. ಎಲ್ಲವೂ ಮಿಥ್ಯೆಯೇ!

**ಯದೇಕೇ ಸ್ಥಾವರಾಃ ಕೀಟಾಃ ಪತಂಗಾ ಮಾನುಷಾದಿಕಾಃ ।**
**ತಸ್ಮಾನ್ಮಿಥ್ಯಾಂ ಪರಿತ್ಯಜ್ಯ ನಂದಭದ್ರ ಯಥಾಸುಖಂ ।**
**ಪಿಬ ಕ್ರೀಡನಕ್ಕೈಃ ಸಾರ್ಧಂ ಭೋಗಾನ್ಸತ್ಯಮಿದಂ ಭುವಿ ॥ ೯೪ ॥**

**ನಾರದ ಉವಾಚ:—**

**ಇತ್ಯೇತೈರಮುಖೈರ್ವಾಕ್ಯೈರಯುಕ್ತೈರಸಮಂಜಸೈಃ ।**
**ಸತ್ಯವ್ರತಸ್ಯ ನಾಕಂಪನ್ನಂದಭದ್ರೋ ಮಹಾಮನಾಃ ॥ ೯೫ ॥**
**ಪ್ರಹಸನ್ನಿವ ತಂ ಪ್ರಾಹ ಸ್ವಕ್ಷೋಭ್ಯಃ ಸಾಗರೋ ಯಥಾ ॥ ೯೬ ॥**
**ಯದ್ಭವಾನಾಹ ಧರ್ಮಿಷ್ಠಾಃ ಸದಾ ದುಃಖಸ್ಯ ಭಾಗಿನಃ ।**
**ತನ್ಮಿಥ್ಯಾ ದುಃಖಜಾಲಾನಿ ಪಶ್ಯಾಮಃ ಪಾಪಿನಾಮಪಿ ॥ ೯೭॥**
**ವಧಬಂಧಪರಿಕ್ಲೇಶಾಃ ಪುತ್ರದಾರಾದಿ ಪಂಚತಾ ।**
**ಪಾಪಿನಾಮಪಿದೃಶ್ಯಂತೇ ತಸ್ಮಾದ್ಧರ್ಮೋ ಗುರುರ್ಮತಃ ॥೯೮॥**
**ಅಯಂ ಸಾಧುರಹೋ ಕಷ್ಟಂ ಕಷ್ಟಮಸ್ಯ ಮಹಾಜನಾಃ ।**
**ಸಾಧೋರ್ವದಂತ್ಯೇತದಪಿ ಪಾಪಿನಾಂ ದುರ್ಲಭಂ ತ್ವಿದಂ ॥ ೯೯॥**

---

೯೪. ಸ್ವಭಾವದಿಂದಲೇ ಸ್ಥಾವರಗಳು, ಕೀಟಗಳು, ಪತಂಗಗಳು, ಮನುಷ್ಯರು ಹುಟ್ಟುವರು. ಆದುದರಿಂದ ನಿನ್ನ ಮಿಥ್ಯಾಜ್ಞಾನದಿಂದ ಕೂಡಿರುವ ಈ ವರ್ತನೆಯನ್ನೆಲ್ಲ ತ್ಯಜಿಸಿ, ಅಪ್ರಯತ್ನವಾಗಿ ಸಿಕ್ಕುವ ಭೋಗಸಾಮಗ್ರಿಗಳೊಡನೆ ಸುಖಪಡುವುದೇ ನಿಜವಾದ ಭೂಲೋಕದ ಜೀವನವೆನಿಸುವುದು.''

೯೫–೯೬. ನಾರದರು ಹೇಳುತ್ತಾರೆ:—ಇಂತು ತತ್ತ್ವಹೀನವಾದುವೂ, ಅಯುಕ್ತಗಳೂ, ಪೂರ್ವಾಪರ ವಿರುದ್ಧಗಳೂ ಆದ ಸತ್ಯವ್ರತನ ವಾಕ್ಯಗಳನ್ನು ಕೇಳಿ ವಿಶಾಲಬುದ್ಧಿಯಾದ ನಂದಭದ್ರನ ಮನಸ್ಸು ಚಲಿಸಲಿಲ್ಲ. ಅವನು ಸಮುದ್ರದಂತೆ ಅಕ್ಷೋಭ್ಯನಾಗಿ ನಗುತ್ತ ಇಂತೆಂದು ಉತ್ತರವನ್ನು ಹೇಳಿದನು.

೯೭. ''ನೀನು ಮೊದಲು ಹೇಳಿದ 'ಧರ್ಮಿಷ್ಠರೆಲ್ಲರೂ ಯಾವಾಗಲೂ ದುಃಖವನ್ನನುಭವಿಸುವರು' ಎಂಬ ಮಾತುಗಳು ನಿಜವಲ್ಲ. ಪಾಪಿಗಳಿಗೂ ಕೂಡ ದುಃಖಗಳೊದಗುವುದನ್ನು ಇದೇ ಕಣ್ಣುಗಳಿಂದಲೇ ನೋಡುತ್ತಿರುವೆವಲ್ಲವೆ.

೯೮. ಅವರಿಗೂ ಕೂಡ ವಧೆ, ಬಂಧ, ರೋಗಾದಿ ಕ್ಲೇಶಗಳು, ಹೆಂಡತಿ ಮಕ್ಕಳ ಸಾವುನೋವುಗಳೂ ಉಂಟಾಗುವುವು. ಆದುದರಿಂದಲೇ ಧರ್ಮವು ಹೆಚ್ಚೆಂದು ಹೇಳಲ್ಪಟ್ಟಿರುವುದು.

೯೯. 'ಇವನು ಸಾಧುವು; ಇವನಿಗೆ ಕಷ್ಟವುಂಟಾಯಿತು; ಅಯ್ಯೋ! ಕಷ್ಟ!' ಎಂದು ಸಾಧುವಿನ ವಿಷಯದಲ್ಲಿ ಇತರ ಮಹಾಜನರು ಸಂತಾಪವನ್ನಾದರೂ ಸೂಚಿಸುವರು. ಪಾಪಿಗಳಿಗೆ ಈ ಅನುತಾಪವೂ ಕೂಡ ಲಭಿಸುವುದಿಲ್ಲ.

**ದಾರಾದಿದ್ರವ್ಯಲೋಭಾರ್ಥಂ ವಿಶತಃ ಪಾಪಿನೋ ಗೃಹೇ ।**
**ಭವಾನಪಿ ಬಿಭೇತ್ಯಸ್ಮಾದ್ದ್ವೇಷ್ಟಿ ಕುಪ್ಯತಿ ತದ್ವೃಥಾ ॥ ೧೦೦ ॥**
**ಯಥಾಸ್ಯ ಜಗತೋ ಬ್ರೂಷೇ ನಾಸ್ತಿ ಹೇತುರ್ಮಹೇಶ್ವರಃ ।**
**ತದ್ಬಾಲಭಾಷಿತಂ ತುಭ್ಯಂ ಕಿಂ ರಾಜಾನಂ ವಿನಾ ಪ್ರಜಾ ॥ ೧೦೧ ॥**
**ಯಚ್ಚ ಬ್ರವೀಷಿ ಪಾಷಾಣಂ ಮಿಥ್ಯಾ ಲಿಂಗಂ ಸಮರ್ಚಸಿ ।**
**ತದ್ಭವಾಂಲ್ಲಿಂಗಮಾಹಾತ್ಮ್ಯಂ ವೇತ್ತಿ ನಾಂಧೋ ಯಥಾ ರವಿಂ ॥೧೦೨॥**
**ಬ್ರಹ್ಮಾದಯಃ ಸುರಾಃ ಸರ್ವೇ ರಾಜಾನಶ್ಚ ಮಹರ್ಧಿಕಾಃ ।**
**ಮಾನವಾ ಮುನಯಶ್ಚೈವ ಸರ್ವೇ ಲಿಂಗಂ ಯಜಂತಿ ಚ ॥ ೧೦೩ ॥**
**ಸ್ವನಾಮಕಾನಿ ಚಿಹ್ನಾನಿ ತೇಷಾಂ ಲಿಂಗಾನಿ ಸಂತಿ ಚ ।**
**ಏತೇ ಕಿಂ ತ್ವಭವನ್ಮೂರ್ಖಾಸ್ತ್ವಂ ತು ಸತ್ಯವ್ರತಃ ಸುಧೀಃ ॥ ೧೦೪ ॥**
**ಪ್ರತಿಷ್ಠಾಪ್ಯ ಪುರಾ ಬ್ರಹ್ಮಾ ಪುಷ್ಕರೇ ನೀಲಲೋಹಿತಂ ।**
**ಪ್ರಾಪ್ತವಾನ್ಪರಮಾಂ ಸಿದ್ಧಿಂ ಸಸರ್ಜೇಮಾಃ ಪ್ರಜಾಃ ಪ್ರಭುಃ ॥ ೧೦೫ ॥**

---

೧೦೦. ಹೆಂಡತಿಯೇ ಮೊದಲಾದವರಿಗಾಗಿ ದ್ರವ್ಯವನ್ನು ಸಂಪಾದಿಸಲು ಪಾಪಿಯಾದವನ ಮನೆಯನ್ನು ಸೇರಿದರೆ ನೀನೂ ಕೂಡ ಅವನಿಂದ ಭಯ ಗೊಳ್ಳುವೆ. ಅವರನ್ನು ದ್ವೇಷಿಸುವೆ. ಕೋಪಗೊಳ್ಳುವೆ. ನಿನ್ನ ಮತದ ಪ್ರಕಾರವೇ ಇವುಗಳೆಲ್ಲವೂ ವ್ಯರ್ಥವಲ್ಲವೆ?

೧೦೧. ಅಲ್ಲದೆ ಈ ಜಗತ್ತಿಗೆಲ್ಲ ಕಾರಣನೂ, ಒಡೆಯನೂ ಆದ ಮಹೇಶ್ವರ ನಿಲ್ಲವೆಂದು ನೀನು ಹೇಳುತ್ತಿರುವುದೂ ಬಾಲಭಾಷಿತವೇ ಆಗಿರುವುದು. ರಾಜನಿಲ್ಲದೆ ಪ್ರಜೆಗಳು ಎಲ್ಲಿಯಾದರೂ ಇರುವುದುಂಟೆ?

೧೦೨. ಲಿಂಗವು ಬರಿಯ ಕಲ್ಲೆಂದೂ ಅದರ ಪೂಜೆಯು ನಿರರ್ಥಕವೆಂದೂ ನೀನು ಹೇಳಿದೆಯಲ್ಲವೆ. ಅದರಿಂದ ನಿನಗೆ ಲಿಂಗದ ಮಹಾತ್ಮ್ಯವೇ ತಿಳಿಯ ದೆಂಬುದು ಸಿದ್ಧಾಂತವಾಯಿತು. ಈ ಸರಣಿಯನ್ನೇ ಅನುಸರಿಸಿ ಜಾತ್ಯಂಧನೂ ಸೂರ್ಯನೆಂಬುವನಿಲ್ಲವೆಂದೇ ವಾದಮಾಡಬಹುದಲ್ಲವೆ!

೧೦೩. ಬ್ರಹ್ಮಾದಿ ಸಕಲ ದೇವತೆಗಳೂ, ರಾಜರೂ, ಐಶ್ವರ್ಯಸಂಪನ್ನರೂ ಮನುಷ್ಯರೂ, ಮಹರ್ಷಿಗಳೂ ಎಲ್ಲರೂ ಲಿಂಗವನ್ನು ಪೂಜಿಸುವರು.

೧೦೪–೧೦೫. ಅವರು ಪೂಜಿಸಿದುದರಿಂದ ಅವರ ಹೆಸರುಗಳಿಂದಲೇ ಪ್ರಸಿದ್ಧ ಗಳಾಗಿರತಕ್ಕ ಲಿಂಗಗಳು ಇಂದಿಗೂ ಸ್ಥಿರವಾಗಿರುವುವಲ್ಲವೆ. ಇವರೆಲ್ಲರೂ ಮೂರ್ಖರಾದರೆ? ನೀನೊಬ್ಬನು ಮಾತ್ರ ಸತ್ಯವ್ರತನೂ ಬುದ್ಧಿಶಾಲಿಯೂ ಆಗಿ ಹುಟ್ಟಿರುವೆಯೇನು? ಪೂರ್ವದಲ್ಲಿ ಬ್ರಹ್ಮನು ಪುಷ್ಕರಕ್ಷೇತ್ರದಲ್ಲಿ ಶಿವಲಿಂಗವನ್ನು ಪ್ರತಿಷ್ಠೆ ಮಾಡಿ ಮಹತ್ತಾದ ಸಿದ್ಧಿಯನ್ನು ಹೊಂದಿದನು. ಇಷ್ಟೆಯಲ್ಲದೆ ಅವನು ಜಗತ್ಸ್ರಷ್ಟೃವೆನಿಸಿಕೊಂಡು ಈ ಚರಾಚರಗಳೆಲ್ಲವನ್ನೂ ಸೃಷ್ಟಿಸಿದನು.

**ವಿಷ್ಣುನಾಪಿ ನಿಹತ್ಯಾಜೌ ರಾವಣಂ ಪಯಸಾಂ ನಿಧೇಃ ।**
**ತೀರೇ ರಾಮೇಶ್ವರಂ ಲಿಂಗಂ ಸ್ಥಾಪಿತಂ ಚಾಸ್ತಿ ಕಿಂ ಮುಧಾ ॥ ೧೦೬ ॥**
**ವೃತ್ರಂ ಹತ್ವಾ ಪುರಾ ಶಕ್ರೋ ಮಹೇಂದ್ರೇ ಸ್ಥಾಪ್ಯ ಶಂಕರಂ ।**
**ಲಿಂಗಂ ವಿಮುಕ್ತಪಾಪೋಽಥ ತ್ರಿದಿವೇಽದ್ಯಾಪಿ ಮೋದತೇ ॥ ೧೦೭ ॥**
**ಸ್ಥಾಪಯಿತ್ವಾ ಶಿವಂ ಸೂರ್ಯೋ ಗಂಗಾಸಾಗರಸಂಗಮೇ ।**
**ನಿರಾಮಯೋಽಭೂತ್ಸೋಮಶ್ಚ ಪ್ರಭಾಸೇ ಪಶ್ಚಿಮೋದಧೌ ॥ ೧೦೮ ॥**
**ಕಾಶ್ಯಾಂ ಯಮಶ್ಚ ಧನದಃ ಸಹ್ಯೇ ಗರುಡಕಶ್ಯಪೌ ।**
**ನೈಮಿಷೇ ವಾಯುವರುಣೌ ಸ್ಥಾಪ್ಯ ಲಿಂಗಂ ಪ್ರಮೋದಿತಾಃ ॥ ೧೦೯ ॥**
**ಅಸ್ಮಿನ್ನೇವ ಸ್ತಂಭತೀರ್ಥೇ ಕುಮಾರೇಶಂ ಗುಹೋ ವಿಭುಃ ।**
**ಲಿಂಗಂ ಸಂಸ್ಥಾಪಯಾಮಾಸ ಸರ್ವಪಾಪಹರಂ ನ ಕಿಂ ॥ ೧೧೦ ॥**
**ಏವಮನ್ಯೈಃ ಸುರೈರ್ಯಾನಿ ಪಾರ್ಥಿವೈರ್ಮುನಿಭಿಸ್ತಥಾ ।**
**ಸಂಸ್ಥಾಪಿತಾನಿ ಲಿಂಗಾನಿ ತನ್ನ ಸಂಖ್ಯಾತುಮುತ್ಸಹೇ ॥ ೧೧೧ ॥**

---

೧೦೬. ಮಹಾವಿಷ್ಣುವೂ ರಾಮಾವತಾರದಲ್ಲಿ ರಾವಣನನ್ನು ಕೊಂದು ಸಮುದ್ರದ ತೀರದಲ್ಲಿ ರಾಮೇಶ್ವರ ಲಿಂಗವನ್ನು ಸ್ಥಾಪನೆ ಮಾಡಿದುದು ಸುಳ್ಳಾಯಿತೆ?

೧೦೭. ಪೂರ್ವದಲ್ಲಿ ಮಹೇಂದ್ರನು ವೃತ್ರಾಸುರನನ್ನು ಸಂಹರಿಸಿ ಮಹೇಂದ್ರ ಪರ್ವತದಲ್ಲಿ ಶಿವಲಿಂಗವನ್ನು ಸ್ಥಾಪಿಸಿದುದರಿಂದ ತನ್ನ ಪಾಪವನ್ನು ಕಳೆದು ಕೊಂಡು ಇಂದಿಗೂ ಸ್ವರ್ಗದಲ್ಲಿ ಸುಖಿಸುತ್ತಿರುವನು.

೧೦೮. ಸೂರ್ಯನು ಗಂಗಾಸಾಗರದಲ್ಲಿಯೂ, ಚಂದ್ರನು ಪಶ್ಚಿಮ ಸಮುದ್ರದ ತೀರದಲ್ಲಿರುವ ಪ್ರಭಾಸ ಕ್ಷೇತ್ರದಲ್ಲಿಯೂ, ಶಿವಲಿಂಗಗಳನ್ನು ಸ್ಥಾಪಿಸಿ ನಿರೋಗಿಗಳಾದರು.

೧೦೯. ಕಾಶೀ ಕ್ಷೇತ್ರದಲ್ಲಿ ಯಮ ಕುಬೇರರೂ, ಸಹ್ಯಪರ್ವತದಲ್ಲಿ ಗರುಡ ಕಶ್ಯಪರೂ, ನೈಮಿಷಕ್ಷೇತ್ರದಲ್ಲಿ ವಾಯು ವರುಣರೂ ಶಿವಲಿಂಗಗಳನ್ನು ಪ್ರತಿಷ್ಠೆಮಾಡಿ ಸಂತೋಷವನ್ನೈದಿದರು.

೧೧೦. ಈಸ್ತಂಭತೀರ್ಥದಲ್ಲಿಯೇ ಪೂರ್ವದಲ್ಲಿ ಸ್ವಾಮಿಯಾದ ಷಣ್ಮುಖನು ಸಕಲ ಪಾಪಗಳನ್ನೂ ಪರಿಹರಿಸುವಂತಹ ಕುಮಾರೇಶ್ವರ ಲಿಂಗವನ್ನು ಸ್ಥಾಪಿಸ ಲಿಲ್ಲವೆ?

೧೧೧. ಇಂತು ಇತರ ದೇವತೆಗಳಿಂದಲೂ, ಕ್ಷತ್ರಿಯರಿಂದಲೂ, ಮಹರ್ಷಿ ಗಳಿಂದಲೂ ಅನೇಕ ಲಿಂಗಗಳು ಸ್ಥಾಪಿತಗಳಾಗಿರುವುವು. ಅವುಗಳನ್ನು ಕೀರ್ತಿಸಲು ನನಗೆ ಸಮಯವಿಲ್ಲ.

ಪೃಥಿವೀವಾಸಿನಃ ಸರ್ವೇ ಯೇ ಚ ಸ್ವರ್ಗನಿವಾಸಿನಃ ।
ಪಾತಾಲವಾಸಿನಸ್ತೃಪ್ತಾ ಜಾಯಂತೇ ಲಿಂಗಪೂಜಯಾ ॥ ೧೧೨ ॥
ಯಚ್ಚ ಬ್ರವೀಷಿ ಗೀರ್ವಾಣಾ ನ ಸಂತಿ ಸಂತಿ ಚೇತ್ಕುತಃ
ಕುತ್ರಾಪಿ ನೈವ ದೃಶ್ಯಂತೇ ತೇನ ಮೇ ವಿಸ್ಮಯೋ ಮಹಾನ್ ॥ ೧೧೩ ॥
ರಂಕವತ್ಕಿಂ ಸ್ಮ ತೇ ದೇವಾ ಯಾಚಂತಾಂ ತ್ವಾಂ ಕುಲತ್ಥವತ್ ।
ಯಮಿಚ್ಛಸಿ ಮಹಾಪ್ರಾಜ್ಞ ಸಾಧಕೋ ಹಿ ಗುರುಸ್ತವ ॥ ೧೧೪ ॥
ಸ್ವಭಾವಾದೇವ ಸರ್ವಾರ್ಥಾಃ ಸಂಸಿದ್ಧಾ ಯದಿ ತೇ ಮತೇ ।
ಭೋಜನಾದಿ ಕಥಂ ಸಿದ್ಧ್ಯೇದ್ವದ ಕರ್ತಾರಮಂತರಾ ॥ ೧೧೫ ॥
ಬದರೀಮಂತರೇಣಾಪಿ ದೃಶ್ಯಂತೇ ಕಂಟಕಾ ನ ಹಿ ।
ತಸ್ಮಾತ್ಕಸ್ಯಾಸ್ತಿ ನಿರ್ಮಾಣಂ ಯಸ್ಯ ಯಾವತ್ತಥೈವ ತತ್ ॥ ೧೧೬ ॥
ಯಚ್ಚ ಬ್ರವೀಷಿ ಪಶ್ವಾದ್ಯಾಃ ಸುಖಿನೋ ಧನ್ಯಕಾಸ್ತ್ವಮೀ ।
ತ್ವದೃತೇ ನೇದಮುಕ್ತಂ ಚ ಕೇನಾಪಿ ಶ್ರುತಮೇವ ವಾ ॥ ೧೧೭ ॥

---

೧೧೨ ಭೂಲೋಕವಾಸಿಗಳೂ, ಸ್ವರ್ಗ ನಿವಾಸಿಗಳೂ, ಪಾತಾಳ ನಿವಾಸಿಗಳೂ ಎಲ್ಲರೂ ಲಿಂಗ ಪೂಜೆಯಿಂದ ತಮ್ಮ ಇಷ್ಟಾರ್ಥಗಳನ್ನು ಪಡೆಯುವರು.

೧೧೩. 'ದೇವತೆಗಳೇ ಮೊದಲಾದವರು ಇಲ್ಲವೇ ಇಲ್ಲ; ಇದ್ದರೆ ಕಾಣುವುದಿಲ್ಲವೇಕೆ? ಎಲ್ಲಿಯೂ ಕಾಣುವುದಿಲ್ಲವಲ್ಲ?' ಎಂದು ನೀನು ಹೇಳಿದ ವಾಕ್ಯಗಳಿಂದ ನನಗೆ ಅತಿಯಾದ ವಿಸ್ಮಯವುಂಟಾಗುತ್ತಿರುವುದು.

೧೧೪. ದೇವತೆಗಳು ಭಿಕ್ಷುಕರಂತೆ ನಿನ್ನ ಬಳಿಗೆ ಬಂದು ವ್ರೀಹಿಯವಾದಿ ಆಹಾರಗಳನ್ನು ಯಾಚಿಸಬೇಕೆಂಬುದು ನಿನ್ನ ಅಭಿಪ್ರಾಯವೆ? ಅತಿಬುದ್ಧಿಯುಳ್ಳವನೆ! ನೀನು ಯಾವ ದೇವತೆಯನ್ನು ನೋಡಬೇಕೆಂದರೂ ಗುರುವೇ ನಿನಗೆ ಮಾರ್ಗವನ್ನು ತೋರಿಸಬೇಕು.

೧೧೫. ನಿನ್ನ ಮತದಲ್ಲಿ ಸ್ವಭಾವದಿಂದಲೇ ಸಕಲ ಪದಾರ್ಥಗಳೂ ಸಂಸಿದ್ಧಗಳಾಗಿರುವುವೆಂದರೆ, ಕರ್ತೃವೆಂಬವನಿಲ್ಲದೆ ಭೋಜನಾದಿ ಕಾರ್ಯಗಳು ಹೇಗೆ ಸಮಂಜಸವಾಗುವುವು?

೧೧೬. ಬದರೀವೃಕ್ಷವಿಲ್ಲದೆ ಕಂಟಕಗಳು ಎಲ್ಲಿಯೂ ಕಾಣುವುದಿಲ್ಲವಷ್ಟೆ! ಆದುದರಿಂದ ಈ ಪ್ರಪಂಚವು ಯಾರಿಂದ ನಿರ್ಮಿತವಾಗಿರುವುದು? ಯಾವನಿಂದ ಎಷ್ಟು ಉಂಟಾಗಿರುವುದೊ, ಅದು ಅವನ ಕಾರ್ಯವೇ ಆಗಿರುವುದು.

೧೧೭. ನೀನು ಪಶ್ವಾದಿಗಳು ಸುಖಿಗಳೆಂದೂ ಅವುಗಳ ಜನ್ಮವೇ ಧನ್ಯವೆಂದೂ ಹೇಳಿದೆ. ನಿನ್ನನ್ನು ಬಿಟ್ಟರೆ ಮತ್ತೆ ಯಾರಿಂದಲೂ ಈ ವಿಚಿತ್ರವು ಹೇಳಲ್ಪಡಲಿಲ್ಲ; ನಾನು ಕೇಳಿದುದೂ ಇಲ್ಲ.

ತಾಮಸಾ ವಿಕಲಾ ಯೇಚ ಕಷ್ಟಂ ತೇಷಾಂ ಚ ಶ್ಲಾಘ್ಯತಾ ।
ಸರ್ವೇಂದ್ರಿಯಯುತಾಃ ಶ್ರೇಷ್ಠಾಃ ಕುತೋ ಧನ್ಯಾ ನ ಮಾನುಷಾಃ ॥
ಸತ್ಯಂ ತವ ವ್ರತಂ ಮನ್ಯೇ ನರಕಾಯ ತ್ವಯಾದೃತಂ ।
ಅತ್ಯನರ್ಥೇ ನ ಭೀಃ ಕಾರ್ಯಾ ಕಾಮೋಽಯಂ ಭವಿತಾ ಚಿರಾತ್ ॥೧೧೯॥
ಆದಾವಾಡಂಬರೇಣೈವ ಧ್ರುವತೋಽಜ್ಞಾನಮೇವ ಮೇ ।
ಇತ್ಥಂ ನಿಸ್ಸಾರತಾ ವ್ಯಕ್ತಮಾದಾವಾಡಂಬರಾತ್ತು ಯತ್ ॥ ೧೨೦ ॥
ಮಾಯಾವಿನಾಂ ಹಿ ಬ್ರುವತಾಂ ವಾಕ್ಯಂ ಚಾಡಂಬರಾನ್ವಿತಂ ।
ಕುನಾಣ್ಯಕಮಿವೋದ್ದೀಪ್ತಂ ಪರೀಕ್ಷೇಯಂ ಸದಾ ಸತಾಂ ॥ ೧೨೧ ॥
ಆದೌ ಮಧ್ಯೇ ತಥಾ ಚಾಂತೇ ಯೇಷಾಂ ವಾಕ್ಯಮದೋಷವತ್ ।
ಕಷದಾಹೈಃ ಸ್ವರ್ಣಮಿವ ಚ್ಛೇದೇಽಪಿ ಸ್ಯಾಚ್ಛುಭಂ ಶುಭಂ ॥ ೧೨೨ ॥
ತ್ವಯಾನ್ಯಥಾ ಪ್ರತಿಜ್ಞಾತಮುಕ್ತಂ ಚೈವಾನ್ಯಥಾ ಪುನಃ ।
ತ್ವದ್ದೋಷೋ ನಾಯಮಸ್ಮಾಕಂ ತ್ವದ್ವಚಃ ಶೃಣುಮೋ ಹಿ ಯೇ ॥೧೨೩॥

---

೧೧೮. ಯಾವ ಪ್ರಾಣಿಗಳು ತಮೋಗುಣ ಸಹಿತಗಳೊ, ವಿಕಲೇಂದ್ರಿಯ ಗಳುಳ್ಳವೊ, ಅವುಗಳನ್ನು ಹೊಗಳುವುದು ಅನಿಷ್ಟವೇ ಸರಿ. ಅವುಗಳಿಗಿಂತ ಸಕಲೇಂದ್ರಿಯಗಳನ್ನೂ ಹೊಂದಿರುವ ಮನುಷ್ಯನು ಹೇಗೆ ಧನ್ಯನಲ್ಲವೆನ್ನಬಹುದು?

೧೧೯. ಸತ್ಯವಾಗಿಯೂ ಈ ನಿನ್ನ ವ್ರತವು ನರಕಪ್ರಾಪ್ತಿಗಾಗಿಯೇ ಅನುಸರಿಸಲ್ಪಡುತ್ತಿರುವುದೆಂದು ತಿಳಿಯುವೆನು. ಮಹತ್ತಾದ ಅನರ್ಥವು ಪ್ರಾಪ್ತವಾಗುವಲ್ಲಿ ಭಯವನ್ನು ಹೊಂದಬಾರದು. ನಿನ್ನ ಇಷ್ಟಾರ್ಥವಾದ ನರಕವು ನಿನಗೆ ಕ್ಷಿಪ್ರದಲ್ಲಿಯೇ ಉಂಟಾಗುತ್ತದೆ.

೧೨೦. ಮೊದಮೊದಲು ನಿನ್ನ ಮಾತುಗಳ ಆಡಂಬರವನ್ನು ಕೇಳಿ ನಿಜ ವಾಗಿಯೂ ನನಗೆ ಅಜ್ಞಾನವೇ ಉಂಟಾಯಿತು. ಇಂತು ಮೊದಲು ಆಡಂಬರ ವುಳ್ಳ ಮಾತುಗಳಿಂದ ನಿಷ್ಪ್ರಯೋಜನವೆಂಬುದು ವ್ಯಕ್ತವಾಯಿತು.

೧೨೧. ಮೋಸಗಾರರು ನುಡಿಯುವ ಆಡಂಬರಸಹಿತವಾದ ಮಾತೆಂಬುದು ಕೆಟ್ಟ ನಾಣ್ಯದಂತೆ ವಿಶೇಷ ಕಾಂತಿಯುಕ್ತವಾಗಿರುವುದು. ಸತ್ಪುರುಷರಿಗೆ ಇದೇ ಯಾವಾಗಲೂ ಪರೀಕ್ಷೆಯಾಗಿರಲಿ.

೧೨೨–೧೨೩. ಆರಂಭದಲ್ಲಿಯೂ, ಮಧ್ಯದಲ್ಲಿಯೂ, ಕೊನೆಯಲ್ಲಿಯೂ ಯಾರ ಮಾತುಗಳು ಉಜ್ಜಿ ಪುಟವಿಟ್ಟ ಚಿನ್ನದಂತೆ ದೋಷರಹಿತಗಳಾಗಿರುವುವೊ, ಅವರ ಮಾತುಗಳನ್ನು ಬಿಡಿಸಿ ಬಿಡಿಸಿ ವಿಚಾರಮಾಡಿದಷ್ಟೂ ಶುಭ ಭಾವನೆಗಳೇ ಕಾಣುತ್ತಿರುವುವು. ನೀನು ಮೊದಲು ಪ್ರತಿಜ್ಞೆ ಮಾಡಿದುದೇ ಒಂದು. ಬಳಿಕ ಹೇಳಿದುದೇ ಒಂದು ವಿಪರೀತ. ಇದು ನಿನ್ನ ದೋಷವಲ್ಲ. ನಿನ್ನ ಮಾತುಗಳನ್ನು ಕೇಳುವಂತಹ ನಮ್ಮ ದೋಷವೇ ಸರಿ.

ನಾಸ್ತಿಕಾಣಾಂ ಚ ಸರ್ಪಾಣಾಂ ವಿಷಸ್ಯ ಚ ಗುಣಸ್ತ್ವಯಂ ।
ಮೋಹಯಂತಿ ಪರಂ ಯಚ್ಚ ದೋಷೋ ನೈಷ ಪರಸ್ಯ ತು ॥ ೧೨೪ ॥
ಆಪೋ ವಸ್ತ್ರಂ ತಿಲಾಸ್ತೈಲಂ ಗಂಧೋ ವಾ ಸ ಯಥಾ ತಥಾ ।
ಪುಷ್ಪಾಣಾಮಧಿವಾಸೇನ ತಥಾ ಸಂಸರ್ಗಜಾ ಗುಣಾಃ ॥ ೧೨೫ ॥
ಮೋಹಜಾಲಸ್ಯ ಯೋ ಯೋ ನಿರ್ಮೂಢೈರಿಹ ಸಮಾಗಮಃ ।
ಅಹನ್ಯಹನಿ ಧರ್ಮಸ್ಯ ಯೋನಿಃ ಸಾಧು ಸಮಾಗಮಃ ॥ ೧೨೬ ॥
ತಸ್ಮಾತ್ಪ್ರಾಜ್ಞೈಶ್ಚ ವೃದ್ಧೈಶ್ಚ ಶುದ್ಧಭಾವೈಸ್ತಪಸ್ವಿಭಿಃ ।
ಸದ್ಭಿಶ್ಚ ಸಹ ಸಂಸರ್ಗಃ ಕಾರ್ಯಃ ಶಮಪರಾಯಣೈಃ ॥ ೧೨೭ ॥
ನ ನೀಚೈರ್ನಾಪ್ಯವಿದ್ವದ್ಭಿರ್ನಾನಾತ್ಮಜ್ಞೈರ್ವಿಶೇಷತಃ ।
ಯೇಷಾಂ ತ್ರೀಣ್ಯವದಾತಾನಿ ಯೋನಿರ್ವಿದ್ಯಾ ಚ ಕರ್ಮ ಚ ।
ತಾಂಶ್ಚ ಸೇವೇದ್ವಿಶೇಷೇಣ ಶಾಸ್ತ್ರಂ ಯೇಷಾಂ ಹಿ ವಿದ್ಯತೇ ॥ ೧೨೮ ॥
ಅಸತಾಂ ದರ್ಶನಸ್ಪರ್ಶಸಂಜಲ್ಪಾಸನಭೋಜನೈಃ ।
ಧರ್ಮಾಚಾರಾತ್ಪ್ರಹೀಯಂತೇ ನ ಚ ಸಿದ್ಧ್ಯಂತಿ ಮಾನವಾಃ ॥ ೧೨೯ ॥

---

೧೨೪-೧೨೫. ನಾಸ್ತಿಕವಾದಕ್ಕೂ ಸರ್ಪಗಳ ವಿಷಕ್ಕೂ ಒಂದು ಸಾಮಾನ್ಯ ಗುಣವಿರುವುದು. ಇವುಗಳು ಇತರರನ್ನು ಮೋಹಗೊಳಿಸುವುದು ತಮ್ಮ ದೋಷ ದಿಂದಲ್ಲ. ದೋಷವೆಲ್ಲವೂ ಪರರದೇ. ನೀರಿನಿಂದ ವಸ್ತ್ರವು ಒದ್ದೆಯಾಗು ವಂತೆಯೂ, ತಿಲದ ಸಹವಾಸದಿಂದ ಪದಾರ್ಥಗಳು ಎಣ್ಣೆಯನ್ನು ಹೊಂದು ವಂತೆಯೂ, ಪುಷ್ಪಗಳ ಸಹವಾಸದಿಂದ ಅವುಗಳ ಗಂಧವು ಇತರ ವಸ್ತುಗಳಿಗೆ ಹತ್ತುವಂತೆಯೂ, ಸಕಲ ಗುಣಗಳೂ ಸಹವಾಸದಿಂದಲೇ ವೃದ್ಧಿಯನ್ನೈದುವುವು.

೧೨೬. ಭೂಲೋಕದಲ್ಲಿ ಮೂಢರೊಡನೆ ಸಹವಾಸವನ್ನು ಮಾಡುವುದು ಮೋಹಜಾಲದ ಮೂಲಕಾರಣವು. ಸರ್ವಕಾಲಗಳಲ್ಲಿಯೂ ಸಾಧುಗಳೊಡನೆ ಸಹವಾಸವನ್ನು ಬೆಳೆಸುವುದು ಧರ್ಮವೃದ್ಧಿಗೆ ಕಾರಣವು.

೧೨೭. ಆದುದರಿಂದ ಶಮಾದಿ ಸದ್ಗುಣಗಳನ್ನು ಪಡೆಯಲೆಳಸುವರು ಪ್ರಾಜ್ಞರೂ, ವೃದ್ಧರೂ, ನಿರ್ಮಲವಾದ ಅಂತಃಕರಣವುಳ್ಳವರೂ, ತಪಸ್ಸಂಪ ನ್ನರೂ, ಸಾಧುಗಳೂ ಆದವರ ಸಹವಾಸವನ್ನು ಮಾಡಬೇಕು.

೧೨೮-೧೨೯. ನೀಚರು, ವಿದ್ಯಾವಿಹೀನರು, ಆತ್ಮಜ್ಞಾನವಿಲ್ಲದವರು ಇವ ರೊಡನೆ ಖಂಡಿತವಾಗಿಯೂ ಸೇರಬಾರದು. ಯಾರ ಜನ್ಮವೂ, ವಿದ್ಯೆಯೂ ಮತ್ತು ಆಚಾರವೂ ಪರಿಶುದ್ಧವಾಗಿರುವುವೊ, ಯಾರು ಶಾಸ್ತ್ರಗಳನ್ನು ತಿಳಿದವರೊ, ಅವರನ್ನೇ ವಿಶೇಷವಾಗಿ ಸೇವಿಸಬೇಕು. ಅಸತ್ಪುರುಷರೊಡನೆ ದರ್ಶನ, ಸ್ಪರ್ಶ, ಮಾತುಗಳು, ಕೂಡುವುದು, ಭೋಜನ ಮುಂತಾದವುಗಳಿಂದ ಮನುಷ್ಯರು ಧರ್ಮಾಚಾರಗಳಿಂದ ಚ್ಯುತರಾಗುವರು. ಅವರಿಗೆಂದಿಗೂ ಮೋಕ್ಷವಾಗುವುದಿಲ್ಲ.

ತಾಮಸಾ ವಿಕಲಾ ಯೇಚ ಕಷ್ಟಂ ತೇಷಾಂ ಚ ಶ್ಲಾಘ್ಯತಾ ।
ಸರ್ವೇಂದ್ರಿಯಯುತಾಃ ಶ್ರೇಷ್ಠಾಃ ಕುತೋ ಧನ್ಯಾ ನ ಮಾನುಷಾಃ ॥
ಸತ್ಯಂ ತವ ವ್ರತಂ ಮನ್ಯೇ ನರಕಾಯ ತ್ವಯಾದೃತಂ ।
ಅತ್ಯನರ್ಥೇ ನ ಭೀಃ ಕಾರ್ಯಾ ಕಾಮೋಽಯಂ ಭವಿತಾ ಚಿರಾತ್ ॥೧೧೯॥
ಆದಾವಾಡಂಬರೇಣೈವ ಧ್ರುವತೋಽಜ್ಞಾನಮೇವ ಮೇ ।
ಇತ್ಥಂ ನಿಸ್ಸಾರತಾ ವ್ಯಕ್ತಮಾದಾವಾಡಂಬರಾತ್ತು ಯತ್ ॥ ೧೨೦ ॥
ಮಾಯಾವಿನಾಂ ಹಿ ಬ್ರುವತಾಂ ವಾಕ್ಯಂ ಚಾಡಂಬರಾವೃತಂ ।
ಕುನಾಣ್ಯಕಮಿವೋದ್ದೀಪ್ತಂ ಪರೀಕ್ಷ್ಯೇಯಂ ಸದಾ ಸತಾಂ ॥ ೧೨೧ ॥
ಆದೌ ಮಧ್ಯೇ ತಥಾ ಚಾಂತೇ ಯೇಷಾಂ ವಾಕ್ಯಮದೋಷವತ್ ।
ಕಷದಾಹೈಃ ಸ್ವರ್ಣಮಿವ ಚ್ಛೇದೇಽಪಿ ಸ್ಯಾಚ್ಛುಭಂ ಶುಭಂ ॥ ೧೨೨ ॥
ತ್ವಯಾನ್ಯಥಾ ಪ್ರತಿಜ್ಞಾತಮುಕ್ತಂ ಚೈವಾನ್ಯಥಾ ಪುನಃ ।
ತ್ವದ್ದೋಷೋ ನಾಯಮಸ್ಮಾಕಂ ತ್ವದ್ವಚಃ ಶ್ರುಣುಮೋ ಹಿ ಯೇ ॥೧೨೩॥

---

೧೧೮. ಯಾವ ಪ್ರಾಣಿಗಳು ತಮೋಗುಣ ಸಹಿತಗಳೊ, ವಿಕಲೇಂದ್ರಿಯ ಗಳುಳ್ಳವೊ, ಅವುಗಳನ್ನು ಹೊಗಳುವುದು ಅನಿಷ್ಟವೇ ಸರಿ. ಅವುಗಳಿಗಿಂತ ಸಕಲೇಂದ್ರಿಯಗಳನ್ನೂ ಹೊಂದಿರುವ ಮನುಷ್ಯನು ಹೇಗೆ ಧನ್ಯನಲ್ಲವೆನ್ನಬಹುದು?

೧೧೯. ಸತ್ಯವಾಗಿಯೂ ಈ ನಿನ್ನ ವ್ರತವು ನರಕಪ್ರಾಪ್ತಿಗಾಗಿಯೇ ಅನುಸರಿಸಲ್ಪಡುತ್ತಿರುವುದೆಂದು ತಿಳಿಯುವೆನು. ಮಹತ್ತಾದ ಅನರ್ಥವು ಪ್ರಾಪ್ತವಾಗುವಲ್ಲಿ ಭಯವನ್ನು ಹೊಂದಬಾರದು. ನಿನ್ನ ಇಷ್ಟಾರ್ಥವಾದ ನರಕವು ನಿನಗೆ ಕ್ಷಿಪ್ರದಲ್ಲಿಯೇ ಉಂಟಾಗುತ್ತದೆ.

೧೨೦. ಮೊದಮೊದಲು ನಿನ್ನ ಮಾತುಗಳ ಆಡಂಬರವನ್ನು ಕೇಳಿ ನಿಜ ವಾಗಿಯೂ ನನಗೆ ಅಜ್ಞಾನವೇ ಉಂಟಾಯಿತು. ಇಂತು ಮೊದಲು ಆಡಂಬರ ವುಳ್ಳ ಮಾತುಗಳಿಂದ ನಿಷ್ಪ್ರಯೋಜನವೆಂಬುದು ವ್ಯಕ್ತವಾಯಿತು.

೧೨೧. ಮೋಸಗಾರರು ನುಡಿಯುವ ಆಡಂಬರಸಹಿತವಾದ ಮಾತೆಂಬುದು ಕೆಟ್ಟ ನಾಣ್ಯದಂತೆ ವಿಶೇಷ ಕಾಂತಿಯುಕ್ತವಾಗಿರುವುದು. ಸತ್ಪುರುಷರಿಗೆ ಇದೇ ಯಾವಾಗಲೂ ಪರೀಕ್ಷೆಯಾಗಿರಲಿ.

೧೨೨–೧೨೩. ಆರಂಭದಲ್ಲಿಯೂ, ಮಧ್ಯದಲ್ಲಿಯೂ, ಕೊನೆಯಲ್ಲಿಯೂ ಯಾರ ಮಾತುಗಳು ಉಜ್ಜಿ ಪುಟವಿಟ್ಟ ಚಿನ್ನದಂತೆ ದೋಷರಹಿತಗಳಾಗಿರುವುವೊ, ಅವರ ಮಾತುಗಳನ್ನು ಬಿಡಿಸಿ ಬಿಡಿಸಿ ವಿಚಾರಮಾಡಿದಷ್ಟೂ ಶುಭ ಭಾವನೆಗಳೇ ಕಾಣುತ್ತಿರುವುವು. ನೀನು ಮೊದಲು ಪ್ರತಿಜ್ಞೆ ಮಾಡಿದುದೇ ಒಂದು. ಬಳಿಕ ಹೇಳಿದುದೇ ಒಂದು ವಿಪರೀತ. ಇದು ನಿನ್ನ ದೋಷವಲ್ಲ. ನಿನ್ನ ಮಾತುಗಳನ್ನು ಕೇಳುವಂತಹ ನಮ್ಮ ದೋಷವೇ ಸರಿ.

ನಾಸ್ತಿಕಾಣಾಂ ಚ ಸರ್ಪಾಣಾಂ ವಿಷಸ್ಯ ಚ ಗುಣಸ್ತ್ರಯಂ ।
ಮೋಹಯಂತಿ ಪರಂ ಯಚ್ಚ ದೋಷೋ ನೈಷ ಪರಸ್ಯ ತು ॥ ೧೨೪ ॥
ಆಪೋ ವಸ್ತ್ರಂ ತಿಲಾಸ್ತೈಲಂ ಗಂಧೋ ವಾ ಸ ಯಥಾ ತಥಾ ।
ಪುಷ್ಪಾಣಾಮಧಿವಾಸೇನ ತಥಾ ಸಂಸರ್ಗಜಾ ಗುಣಾಃ ॥ ೧೨೫ ॥
ಮೋಹಜಾಲಸ್ಯ ಯೋ ಯೋ ನಿರ್ಮೂಢೈರಿಹ ಸಮಾಗಮಃ ।
ಅಹನ್ಯಹನಿ ಧರ್ಮಸ್ಯ ಯೋನಿಃ ಸಾಧು ಸಮಾಗಮಃ ॥ ೧೨೬ ॥
ತಸ್ಮಾತ್ಪ್ರಾಜ್ಞೈಶ್ಚ ವೃದ್ಧೈಶ್ಚ ಶುದ್ಧಭಾವೈಸ್ತಪಸ್ವಿಭಿಃ ।
ಸದ್ಭಿಶ್ಚ ಸಹ ಸಂಸರ್ಗಃ ಕಾರ್ಯಃ ಶಮಪರಾಯಣೈಃ ॥ ೧೨೭ ॥
ನ ನೀಚೈರ್ನಾಪ್ಯವಿದ್ವದ್ಭಿರ್ನಾನಾತ್ಮಜ್ಞೈರ್ವಿಶೇಷತಃ ।
ಯೇಷಾಂ ತ್ರೀಣ್ಯವದಾತಾನಿ ಯೋನಿರ್ವಿದ್ಯಾ ಚ ಕರ್ಮ ಚ ।
ತಾಂಶ್ಚ ಸೇವೇದ್ವಿಶೇಷೇಣ ಶಾಸ್ತ್ರಂ ಯೇಷಾಂ ಹಿ ವಿದ್ಯತೇ ॥ ೧೨೮ ॥
ಅಸತಾಂ ದರ್ಶನಸ್ಪರ್ಶಸಂಜಲ್ಪಾಸನಭೋಜನೈಃ ।
ಧರ್ಮಾಚಾರಾತ್ಪ್ರಹೀಯಂತೇ ನ ಚ ಸಿದ್ಧ್ಯಂತಿ ಮಾನವಾಃ ॥ ೧೨೯ ॥

---

೧೨೪–೧೨೫. ನಾಸ್ತಿಕವಾದಕ್ಕೂ ಸರ್ಪಗಳ ವಿಷಕ್ಕೂ ಒಂದು ಸಾಮಾನ್ಯ ಗುಣವಿರುವುದು. ಇವುಗಳು ಇತರರನ್ನು ಮೋಹಗೊಳಿಸುವುದು ತಮ್ಮ ದೋಷದಿಂದಲ್ಲ. ದೋಷವೆಲ್ಲವೂ ಪರರದೇ. ನೀರಿನಿಂದ ವಸ್ತ್ರವು ಒದ್ದೆಯಾಗುವಂತೆಯೂ, ತಿಲದ ಸಹವಾಸದಿಂದ ಪದಾರ್ಥಗಳು ಎಣ್ಣೆಯನ್ನು ಹೊಂದುವಂತೆಯೂ, ಪುಷ್ಪಗಳ ಸಹವಾಸದಿಂದ ಅವುಗಳ ಗಂಧವು ಇತರ ವಸ್ತುಗಳಿಗೆ ಹತ್ತುವಂತೆಯೂ, ಸಕಲ ಗುಣಗಳೂ ಸಹವಾಸದಿಂದಲೇ ವೃದ್ಧಿಯನ್ನೈದುವುವು.

೧೨೬. ಭೂಲೋಕದಲ್ಲಿ ಮೂಢರೊಡನೆ ಸಹವಾಸವನ್ನು ಮಾಡುವುದು ಮೋಹಜಾಲದ ಮೂಲಕಾರಣವು. ಸರ್ವಕಾಲಗಳಲ್ಲಿಯೂ ಸಾಧುಗಳೊಡನೆ ಸಹವಾಸವನ್ನು ಬೆಳೆಸುವುದು ಧರ್ಮವೃದ್ಧಿಗೆ ಕಾರಣವು.

೧೨೭. ಆದುದರಿಂದ ಶಮಾದಿ ಸದ್ಗುಣಗಳನ್ನು ಪಡೆಯಲೆಳಸುವರು ಪ್ರಾಜ್ಞರೂ, ವೃದ್ಧರೂ, ನಿರ್ಮಲವಾದ ಅಂತಃಕರಣವುಳ್ಳವರೂ, ತಪಸ್ಸಂಪನ್ನರೂ, ಸಾಧುಗಳೂ ಆದವರ ಸಹವಾಸವನ್ನು ಮಾಡಬೇಕು.

೧೨೮–೧೨೯. ನೀಚರು, ವಿದ್ಯಾವಿಹೀನರು, ಆತ್ಮಜ್ಞಾನವಿಲ್ಲದವರು ಇವರೊಡನೆ ಖಂಡಿತವಾಗಿಯೂ ಸೇರಬಾರದು. ಯಾರ ಜನ್ಮವೂ, ವಿದ್ಯೆಯೂ ಮತ್ತು ಆಚಾರವೂ ಪರಿಶುದ್ಧವಾಗಿರುವುವೊ, ಯಾರು ಶಾಸ್ತ್ರಗಳನ್ನು ತಿಳಿದವರೊ, ಅವರನ್ನೇ ವಿಶೇಷವಾಗಿ ಸೇವಿಸಬೇಕು. ಅಸತ್ಪುರುಷರೊಡನೆ ದರ್ಶನ, ಸ್ಪರ್ಶ, ಮಾತುಗಳು, ಕೂಡುವುದು, ಭೋಜನ ಮುಂತಾದವುಗಳಿಂದ ಮನುಷ್ಯರು ಧರ್ಮಾಚಾರಗಳಿಂದ ಚ್ಯುತರಾಗುವರು. ಅವರಿಗೆಂದಿಗೂ ಮೋಕ್ಷವಾಗುವುದಿಲ್ಲ.

ಬುದ್ಧಿಶ್ಚ ಹೀಯತೇ ಪುಂಸಾಂ ನೀಚೈಃ ಸಹ ಸಮಾಗಮಾತ್ ।
ಮಧ್ಯೈಶ್ಚ ಮಧ್ಯತಾಂ ಯಾತಿ ಶ್ರೇಷ್ಠತಾಂ ಯಾತಿ ಚೋತ್ತಮೈಃ ॥
ಇತಿ ಧರ್ಮಂ ಸ್ಮರನ್ನಾಹಂ ಸಂಗಮಾರ್ಹೀ ಪುನಸ್ತವ ।
ಯನ್ನಿಂದಸಿ ದ್ವಿಜಾನೇವ ಯೈರಪೇಯೋಽರ್ಣವಃ ಕೃತಃ ॥ ೧೩೧ ॥

ವೇದಾಃ ಪ್ರಮಾಣಂ ಸ್ಮೃತಯಃ ಪ್ರಮಾಣಂ
ಧರ್ಮಾರ್ಥಯುಕ್ತಂ ವಚನಂ ಪ್ರಮಾಣಂ ।
ನೈತತ್ತ್ರಯಂ ಯಸ್ಯ ಭವೇತ್ಪ್ರಮಾಣಂ
ಕಸ್ತಸ್ಯ ಕುರ್ಯಾದ್ವಚನಂ ಪ್ರಮಾಣಂ ॥ ೧೩೨ ॥

ಇತೀರಯಿತ್ವಾ ವಚನಂ ಮಹಾತ್ಮಾ
ಸ ನಂದಭದ್ರಃ ಸಹಸಾ ತದೈವ ।
ಗೃಹಾದ್ವಿನಿಃಸೃತ್ಯ ಜಗಾಮ ಪುಣ್ಯಂ
ಬಹೂದಕಂ ಭಟ್ಟರವೇಸ್ತು ಕುಂಡಂ ॥ ೧೩೩ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪ್ರಥಮೇ ಮಾಹೇಶ್ವರಖಂಡೇ ಕೌಮಾರಿಕಾಖಂಡೇ "ಕಪಿಲೇಶ್ವರತೀರ್ಥಮಾಹಾತ್ಮ್ಯೇ ನಂದಭದ್ರವಣಿಗ್ವೃತ್ತಾಂತವರ್ಣನಂ" ನಾಮ ಪಂಚಚತ್ವಾರಿಂಶತ್ತಮೋಽಧ್ಯಾಯಃ

---

೧೩೦–೧೩೨. ಮನುಷ್ಯರಿಗೆ ನೀಚರಸಹವಾಸದಿಂದ ಬುದ್ಧಿಯು ಕೆಡುವುದು. ಮಧ್ಯಮರೊಡನೆ ಮಧ್ಯಭಾವವನ್ನೂ, ಉತ್ತಮರೊಡನೆ ಶ್ರೇಷ್ಠತೆಯನ್ನೂ ಹೊಂದುವುದು. ಈ ಧರ್ಮವನ್ನು ಮನಸ್ಸಿನಲ್ಲಿ ತಂದುಕೊಂಡು ಸಮುದ್ರೋದಕವನ್ನೂ ಕ್ಷಾರವನ್ನಾಗಿ ಮಾಡಿದ ಬ್ರಾಹ್ಮಣರನ್ನೇ ನೀನು ನಿಂದಿಸುತ್ತಿರುವುದರಿಂದ ಮತ್ತೆ ನಾನು ನಿನ್ನ ಸಹವಾಸವನ್ನಿಚ್ಛಿಸುವುದಿಲ್ಲ. ವೇದಗಳು ಪ್ರಮಾಣಗಳು. ಸ್ಮೃತಿಗಳು ಪ್ರಮಾಣಗಳು. ಧರ್ಮಶಾಸ್ತ್ರಗಳಿಗನುಗುಣವಾದ ವಚನವು ಪ್ರಮಾಣವು. ಯಾವನಿಗೆ ಈ ಮೂರೂ ಪ್ರಮಾಣಗಳಾಗಲಾರವೋ, ಅವರ ಮಾತುಗಳನ್ನು ಮಾತ್ರ ಪ್ರಮಾಣವೆಂದು ಯಾರು ನಂಬಬೇಕು?"

೧೩೩. ಇಂತು, ಮಹಾತ್ಮನಾದ ನಂದಭದ್ರನು ಸತ್ಯವ್ರತನಿಗೆ ಹೇಳಿ ಸಂಭ್ರಮದಿಂದ ಆಕ್ಷಣವೇ ಮನೆಯಿಂದ ಹೊರಟು ಪಾವನವಾದುದೂ ಬಹುಜಲ ಭರಿತವಾದುದೂ ಆದ ಭಟ್ಟಾದಿತ್ಯ ಕುಂಡವನ್ನು ಸೇರುವವನಾದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಎರಡನೆಯ ಕೌಮಾರಿಕಾಖಂಡದಲ್ಲಿ "ಕಪಿಲೇಶ್ವರ ತೀರ್ಥಮಾಹಾತ್ಮ್ಯ— ನಂದಭದ್ರವಣಿಗ್ವೃತ್ತಾಂತವರ್ಣನ"ವೆಂಬ ನಲವತ್ತೈದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಷಟ್ಚತ್ವಾರಿಂಶತ್ತಮೋಽಧ್ಯಾಯಃ

### ಬಹೂದಕಮಾಹಾತ್ಮ್ಯೇ ಬಾಲಾದಿತ್ಯವೃತ್ತಾಂತವರ್ಣನಂ

ನಾರದ ಉವಾಚ :—

**ಬಹೂದಕಸ್ಯ ಕುಂಡಸ್ಯ ತೀರಸ್ಥಂ ಲಿಂಗಮುತ್ತಮಂ ।**
**ಕಪಿಲೇಶ್ವರಮಭ್ಯರ್ಚ್ಯ ನಂದಭದ್ರಸ್ತತಃ ಸುಧೀಃ ॥ ೧ ॥**
**ಪ್ರಣಮ್ಯ ಚಾಗ್ರತಸ್ತಸ್ಥೌ ಪ್ರಬದ್ಧಕರಸಂಪುಟಃ ।**
**ಸಂಸಾರಚರಿತೈಃ ಕಿಂಚಿದ್ದುಃಖೀ ಗಾಥಾ ವ್ಯಗಾಯತ ॥ ೨ ॥**
**ಸ್ರಷ್ಟಾರಮಸ್ಯ ಜಗತಶ್ಚೇತ್ಪಶ್ಯಾಮಿ ಸದಾಶಿವಂ ।**
**ನಾನಾಪೃಚ್ಛಾಭಿರಥ ತಂ ಕುರ್ಯಾಂ ನಾಥಂ ವಿಲಜ್ಜಿತಂ ॥ ೩ ॥**
**ಅಪೂರ್ಯಮಾಣಂ ತವ ಕಿಂ ಜಗತ್ಸಂಸೃಜನಂ ವಿನಾ ।**
**ನಿರೀಹ ಬಹುಧಾ ಯತ್ತೇ ಸೃಷ್ಟಂ ಭಾರ್ಗವಜ್ಜಗತ್ ॥ ೪ ॥**
**ಸಚೇತನೇನ ಶುದ್ಧೇನ ರಾಗಾದಿರಹಿತೇನ ಚ ।**
**ಅಥ ಕಸ್ಮಾದಾತ್ಮಸದೃಶಂ ನ ಸೃಷ್ಟಂ ನಿರ್ಮಿತಂ ಜಡಂ ॥ ೫ ॥**

---

### ಕನ್ನಡದ ಅನುವಾದ

#### ಬಹೂದಕಮಾಹಾತ್ಮ್ಯ—ಬಾಲಾದಿತ್ಯವೃತ್ತಾಂತವರ್ಣನ

೧—೨. ನಾರದರು ಹೇಳುತ್ತಾರೆ:—ಬಳಿಕ ನಂದಭದ್ರನು ಬುದ್ಧಿವಂತನಾದುದರಿಂದ ಬಹೂದಕಕುಂಡದ ದಡದಲ್ಲಿರುವ ಕಪಿಲೇಶ್ವರಲಿಂಗವನ್ನು ಪೂಜಿಸಿ, ನಮಸ್ಕರಿಸಿ ಅದರ ಮುಂದೆ ಕೈಗಳನ್ನು ಮುಗಿದು ನಿಂತುಕೊಂಡನು. ಅವನು ತನಗೆ ಸಂಸಾರದಲ್ಲಿ ಒದಗಿದ ಕಷ್ಟಗಳಿಂದ ಸ್ವಲ್ಪಮಟ್ಟಿಗೆ ದುಃಖಗೊಂಡವನಾಗಿ ಮುಂದೆ ಹೇಳುವಂತೆ ಹೇಳಿಕೊಳ್ಳತೊಡಗಿದನು.

೩. "ಈ ಪ್ರಪಂಚದ ಸೃಷ್ಟಿಕರ್ತನನ್ನು ನಾನು ನೋಡಿದುದೇ ಆದರೆ, ಒಡೆಯನಾದ ಆ ಸದಾಶಿವನನ್ನು ಬಹು ವಿಧಗಳಾದ ಪ್ರಶ್ನೆಗಳಿಂದ ನಾಚಿಕೆಗೊಳ್ಳುವಂತೆ ಮಾಡುವೆನು.

೪. 'ಎಲೈ ಸ್ವಾಮಿಯೆ! ನೀನು ಅಪೇಕ್ಷಾರಹಿತನಲ್ಲವೆ! ಹಾಗಾದರೂ ಭಾರ್ಗವನಂತೆ ನೀನು ಚಿತ್ರವಿಚಿತ್ರವಾದ ಈ ಜಗತ್ತನ್ನು ಸೃಷ್ಟಿಸಿರುವೆ. ಈ ಬ್ರಹ್ಮಾಂಡವನ್ನು ಮಾಡದಿದ್ದಿದ್ದರೆ ನಿನಗೆ ಯಾವುದರಲ್ಲಿ ಕೊರತೆಯಾಗಿರುತ್ತಿತ್ತು?

೫. ಚೇತನಸ್ವರೂಪನೂ, ನಿತ್ಯಶುದ್ಧನೂ, ರಾಗದ್ವೇಷರಹಿತನೂ ಆದ ನಿನ್ನಿಂದ ನಿನ್ನ ಗುಣಗಳುಳ್ಳ ಪ್ರಪಂಚವೇ ಏಕೆ ಸೃಷ್ಟಿಯಾಗಲಿಲ್ಲ? ಈ ಜಡ ಪ್ರಪಂಚವನ್ನೇಕೆ ಸೃಷ್ಟಿಸಿದೆ?

ನಿರ್ವೈರೇಣ ಸಮೇನಾಥ ಸುಖದುಃಖಭವಾಭವೈಃ ।
ಬ್ರಹ್ಮಾದಿಕೀಟಪರ್ಯಂತಂ ಕಿಮೇವಂ ಕ್ಲಿಶ್ಯತೇ ಜಗತ್ ॥ ೬ ॥
ಕಾಂಶ್ಚಿತ್ಸ್ವರ್ಗೇಽಥ ನರಕೇ ಪಾತಯಂಸ್ತ್ವಂ ಸದಾಶಿವ ।
ಕಿಂ ಫಲಂ ಸಮವಾಪ್ನೋಷಿ ಕಿಮೇವಂ ಕುರುಷೇ ವದ ॥ ೭ ॥
ಇಷ್ಟೈಃ ಪುತ್ರಾದಿಭಿರ್ನಾಥ ವಿಯುಕ್ತಾ ಮಾನವಾ ಹ್ಯಮೀ ।
ಕ್ರಂದಂತಿ ಕರುಣಾಸಾರ ಕಿಂ ಘೃಣಾಪಿ ಭವೇನ್ನ ತೇ ॥ ೮ ॥
ಅತೀವ ನೋಚಿತಂ ಸರ್ವಮೇತದೀಶ್ವರ ಸರ್ವಥಾ ।
ಯತ್ತೇ ಭಕ್ತಾಃ ಸಮಂ ಪಾಪೈರ್ಮಜ್ಜಂತೇ ದುಃಖಸಾಗರೇ ॥ ೯ ॥
ಏವಂ ವಿಧೇನ ಸಂಸಾರಚಾರಿತ್ರೇಣ ವಿಮೋಹಿತಾಃ ।
ಸ್ಥಾನಂತರಂ ನ ಯಾಸ್ಯಾಮಿ ಭೋಕ್ಷ್ಯೇ ಪಾಸ್ಯಾಮಿ ನೋದಕಂ ॥ ೧೦ ॥
ಮರಣಾಂತಮೇವ ಯಾಸ್ಯಾಮಿ ಸ್ಥಾಸ್ಯೇ ಸಂಚಿಂತಯಂಸ್ತ್ವದಃ ।
ಸ ಏವಂ ವಿಮೃಶನ್ನೇವ ನಂದಭದ್ರಃ ಸ್ವಯಂ ಸ್ಥಿತಃ ॥ ೧೧ ॥

---

೬. ನಿರ್ವೈರನೂ, ಸರ್ವಸಮನೂ ಆದ ನಿನ್ನಿಂದ ಸುಖದುಃಖಗಳಿಗೂ, ಹುಟ್ಟುಸಾವುಗಳಿಗೂ ಅಧೀನವಾದ ಬ್ರಹ್ಮನಿಂದ ಕೀಟದವರೆಗಿನ ಜೀವರನ್ನೊಳಕೊಂಡ ಈ ಪ್ರಪಂಚವೂ ಹೀಗೇಕೆ ಕಷ್ಟಪಡುತ್ತಿರುವುದು ?

೭. ಕೆಲವರನ್ನು ಸ್ವರ್ಗದಲ್ಲಿಯೂ, ಕೆಲವರನ್ನು ನರಕದಲ್ಲಿಯೂ ಹಾಕುವುದರಿಂದ ನೀನು ಯಾವ ಪ್ರಯೋಜನವನ್ನು ಹೊಂದಲೆಳಸುವೆ? ಎಲೈ! ಸದಾಶಿವನೆ! ಏಕಿಂತು ಮಾಡುತ್ತಿರುವೆಯೆಂಬುದನ್ನು ತಿಳಿಸು.

೮. ಎಲೈ ಸ್ವಾಮಿಯೆ! ಪ್ರೀತಿಪಾತ್ರರಾದ ಮಕ್ಕಳೇ ಮೊದಲಾದವರಿಂದ ವಿಯೋಗವನ್ನು ಹೊಂದಿ ಈ ಮನುಷ್ಯರೆಲ್ಲರೂ ಗೋಳಾಡುತ್ತಿರುವರು. ಆದರೂ ದಯಾಸಾಗರನೆಂಬ ಹೆಸರುಳ್ಳ ನಿನಗೆ ಇವರಲ್ಲಿ ಅನುತಾಪವೇಕೆ ಉಂಟಾಗಲಿಲ್ಲ?

೯. ಲೋಕೇಶ್ವರನೆ! ಪಾಪಿಗಳಂತೆ ನಿನ್ನ ಭಕ್ತರೂ ಕೂಡ ದುಃಖಸಮುದ್ರದಲ್ಲಿ ಮುಳುಗುತ್ತಿರುವುದನ್ನು ನೋಡಿದರೆ ಇದೆಲ್ಲವೂ ಸರ್ವವಿಧದಿಂದಲೂ ಅತ್ಯಂತ ಅನುಚಿತವೆಂದೇ ತೋರುವುದು.

೧೦. ಇವರೂ ಕೂಡ ಈ ವಿಧವಾದ, ಸಂಸಾರ ದುಃಖಗಳಿಂದ ಮೋಹಗೊಂಡವರಾಗುವರು. ನಾನು ಬೇರೆ ಸ್ಥಳಕ್ಕೆ ಹೋಗುವುದಿಲ್ಲ. ಊಟ ಮಾಡುವುದಿಲ್ಲ. ನೀರನ್ನೂ ಕುಡಿಯುವುದಿಲ್ಲ.

೧೧. ಸಾವೆಂಬ ಜೀವಿತಾಂತವನ್ನೇ ಹೊಂದಿದರೂ ಈ ವಿಷಯವನ್ನೇ ಕುರಿತು ಯೋಚಿಸುತ್ತ ಇಲ್ಲಿಯೇ ಕುಳಿತಿರುವೆನು.” ಇಂತು ನಿಶ್ಚಯವನ್ನು ಮಾಡಿ ಆ ನಂದಭದ್ರನು ಅಲ್ಲಿಯೇ ಕುಳಿತನು.

ತತಶ್ಚತುರ್ಥೇ ದಿವಸೇ ಬಹೂದಕತಟೇ ಶುಭೇ ।
ಕಶ್ಚಿದ್ಬಾಲಃ ಸಪ್ತವರ್ಷಃ ಪೀಡಾಪೀಡಿತ ಆಯಯೌ ॥ ೧೨ ॥
ಕೃಶೋತೀವ ಗಲತ್ಕುಷ್ಠೀ ಪ್ರಮುಹ್ಯಂಶ್ಚ ಪದೇಪದೇ ।
ನಂದಭದ್ರಮುವಾಚೇದಂ ಕೃಚ್ಛ್ರಾತ್ಸಂಸ್ತಭ್ಯ ಬಾಲಕಃ ॥ ೧೩ ॥
ಅಹೋ ಸುರೂಪಸರ್ವಾಂಗ ಕಸ್ಮಾದ್ದುಃಖೀ ಭವಾನಪಿ ।
ತತೋಽಸ್ಯ ಕಾರಣಂ ಸರ್ವಂ ವ್ಯಾಚಷ್ಟ ನಂದಭದ್ರಕಃ ॥ ೧೪ ॥
ಶ್ರುತ್ವಾ ತತ್ಕಾರಣಂ ಸರ್ವಂ ಬಾಲೋ ದೀನಮನಾಬ್ರವೀತ್ ।
ಅಹೋ ಹಾ ಕಷ್ಟಮತ್ಯುಗ್ರಂ ಬುಧಾನಾಂ ಯದಬುದ್ಧಿತಾ ॥ ೧೫ ॥
ಸಂಪೂರ್ಣೇಂದ್ರಿಯಗಾತ್ರಾ ಯನ್ಮರ್ತುಮಿಚ್ಛಂತಿ ವೈ ವೃಥಾ ।
ಮುಹೂರ್ತಾದ್ಧ್ಯತ್ರ ಖಟ್ವಾಂಗೋ ಮೋಕ್ಷಮಾರ್ಗಮುಪಾಗತಃ ॥೧೬॥
ತದಹೋ ಭಾರತಂ ಖಂಡಂ ಸತ್ಯಾಯುಷಿ ತ್ಯಜೇದ್ಧಿಕಃ ।
ಅಹಮೇವ ದೃಢೋ ಮನ್ಯೇ ಪಿತೃಭ್ಯಾಂ ಯೋ ವಿವರ್ಜಿತಃ ।
ಅಶಕ್ತಶ್ಚಲಿತುಂ ವಾಪಿ ಮರ್ತುಮಿಚ್ಛಾಮಿ ನಾಪಿ ಚ ॥ ೧೭ ॥

---

೧೨–೧೩. ಬಳಿಕ ನಾಲ್ಕನೆಯ ದಿವಸದಲ್ಲಿ ಪವಿತ್ರವಾದ ಆ ಬಹೂದಕ ಕುಂಡದ ಸಮೀಪಕ್ಕೆ ರೋಗಿಷ್ಠನಾದ ಏಳು ವರ್ಷದ ವಯಸ್ಸುಳ್ಳ ಒಬ್ಬಾನೊಬ್ಬ ಬಾಲಕನು ಬಂದನು. ಆವನು ಬಹಳ ಕೃಶನಾಗಿದ್ದನು. ಅವನ ಶರೀರದಲ್ಲಿ ಕುಷ್ಠರೋಗದ ವ್ರಣಗಳಿಂದ ನೀರು ಸುರಿಯುತ್ತಿದ್ದಿತು. ಹೆಜ್ಜೆ ಹೆಜ್ಜೆಗೂ ಮೂರ್ಛೆಗೊಳ್ಳುತ್ತಿದ್ದನು. ಆ ಬಾಲಕನು ಬಹಳ ಕಷ್ಟದಿಂದ ಚೇತರಿಸಿಕೊಂಡು ನಂದಭದ್ರನನ್ನು ಕುರಿತು ಇಂತೆಂದನು.

೧೪. "ಆಹಾ! ಸುಂದರವಾದ ಶರೀರವುಳ್ಳ ಮಹಾತ್ಮನೆ! ನೀನೂ ಸಹ ದುಃಖಪಡುತ್ತಿರುವ ಕಾರಣವೇನು?" ಆಗ ನಂದಭದ್ರನು ತನ್ನ ದುಃಖದ ಕಾರಣವನ್ನೆಲ್ಲ ಕೂಲಂಕಷವಾಗಿ ಹೇಳಿದನು.

೧೫. ಅವನ ಮಾತುಗಳನ್ನೆಲ್ಲ ಕೇಳಿ ಖಿನ್ನಮನಸ್ಕನಾದ ಬಾಲಕ ನಿಂತೆಂದನು. "ಅಯ್ಯೋ! ಬುದ್ಧಿಶಾಲಿಗಳೂ ಸಹ ಮೂಢರಂತೆ ವ್ಯವಹರಿಸು ವುದಕ್ಕಿಂತ ಹೆಚ್ಚಿನ ದುಃಖಕರವಾದುದಾವುದು ?

೧೬. ಸಮಸ್ತ ಇಂದ್ರಿಯಗಳಿಂದಲೂ ಕೂಡಿದ ಸುಂದರ ದೇಹವುಳ್ಳವ ರಾದರೂ ನಿಷ್ಪ್ರಯೋಜನವಾಗಿಯೇ ಸಾಯಲೆಳಸುವರು. ಇಲ್ಲಿ ಹಿಂದೆ ಖಟ್ವಾಂಗನು ಒಂದು ಮುಹೂರ್ತಕಾಲದಲ್ಲಿಯೇ ತನ್ನ ಮೋಕ್ಷದ ಸಾಧನೆ ಯನ್ನು ಮಾಡಿಕೊಂಡನು.

೧೭. ಇಂತಹ ಪರಮ ಪವಿತ್ರವಾದ ಭಾರತಖಂಡವಿರುತ್ತಿರಲು ಪ್ರಾಣ ವನ್ನು ಕಳೆದುಕೊಳ್ಳುವವನೆಂತಹವನು? ಇವರಿಗಿಂತ ನಾನೇ ದೃಢಮನಸ್ಕ

**ನಿರ್ವೈರೇಣ ಸಮೇನಾಥ ಸುಖದುಃಖಭವಾಭವೈಃ ।**
**ಬ್ರಹ್ಮಾದಿಕೀಟಪರ್ಯಂತಂ ಕಿಮೇವಂ ಕ್ಲಿಶ್ಯತೇ ಜಗತ್ ॥ ೬ ॥**
**ಕಾಂಶ್ಚಿತ್ಸ್ವರ್ಗೇಽಥ ನರಕೇ ಪಾತಯಂಸ್ತ್ವಂ ಸದಾಶಿವ ।**
**ಕಿಂ ಫಲಂ ಸಮವಾಪ್ನೋಷಿ ಕಿಮೇವಂ ಕುರುಷೇ ವದ ॥ ೭ ॥**
**ಇಷ್ಟೈಃ ಪುತ್ರಾದಿಭಿರ್ನಾಥ ವಿಯುಕ್ತಾ ಮಾನವಾ ಹ್ಯಮೀ ।**
**ಕ್ರಂದಂತಿ ಕರುಣಾಸಾರ ಕಿಂ ಘೃಣಾಪಿ ಭವೇನ್ನ ತೇ ॥ ೮ ॥**
**ಅತೀವ ನೋಚಿತಂ ಸರ್ವಮೇತದೀಶ್ವರ ಸರ್ವಥಾ ।**
**ಯತ್ತೇ ಭಕ್ತಾಃ ಸಮಂ ಪಾಪೈರ್ಮಜ್ಜಂತೇ ದುಃಖಸಾಗರೇ ॥ ೯ ॥**
**ಏವಂ ವಿಧೇನ ಸಂಸಾರಚಾರಿತ್ರೇಣ ವಿಮೋಹಿತಾಃ ।**
**ಸ್ಥಾನಂತರಂ ನ ಯಾಸ್ಯಾಮಿ ಭೋಕ್ಷ್ಯೇ ಪಾಸ್ಯಾಮಿ ನೋದಕಂ ॥ ೧೦ ॥**
**ಮರಣಾಂತಮೇವ ಯಾಸ್ಯಾಮಿ ಸ್ಥಾಸ್ಯೇ ಸಂಚಿಂತಯಂನ್ನದಃ ।**
**ಸ ಏವಂ ವಿಮೃಶನ್ನೇವ ನಂದಭದ್ರಃ ಸ್ವಯಂ ಸ್ಥಿತಃ ॥ ೧೧ ॥**

---

೬. ನಿರ್ವೈರನೂ, ಸರ್ವಸಮನೂ ಆದ ನಿನ್ನಿಂದ ಸುಖದುಃಖಗಳಿಗೂ, ಹುಟ್ಟುಸಾವುಗಳಿಗೂ ಅಧೀನವಾದ ಬ್ರಹ್ಮನಿಂದ ಕೀಟದವರೆಗಿನ ಜೀವರನ್ನೊಳಕೊಂಡ ಈ ಪ್ರಪಂಚವೂ ಹೀಗೇಕೆ ಕಷ್ಟಪಡುತ್ತಿರುವುದು ?

೭. ಕೆಲವರನ್ನು ಸ್ವರ್ಗದಲ್ಲಿಯೂ, ಕೆಲವರನ್ನು ನರಕದಲ್ಲಿಯೂ ಹಾಕುವುದರಿಂದ ನೀನು ಯಾವ ಪ್ರಯೋಜನವನ್ನು ಹೊಂದಲೆಳಸುವೆ? ಎಲೈ! ಸದಾಶಿವನೆ! ಏಕಿಂತು ಮಾಡುತ್ತಿರುವೆಯೆಂಬುದನ್ನು ತಿಳಿಸು.

೮. ಎಲೈ ಸ್ವಾಮಿಯೆ! ಪ್ರೀತಿಪಾತ್ರರಾದ ಮಕ್ಕಳೇ ಮೊದಲಾದವರಿಂದ ವಿಯೋಗವನ್ನು ಹೊಂದಿ ಈ ಮನುಷ್ಯರೆಲ್ಲರೂ ಗೋಳಾಡುತ್ತಿರುವರು. ಆದರೂ ದಯಾಸಾಗರನೆಂಬ ಹೆಸರುಳ್ಳ ನಿನಗೆ ಇವರಲ್ಲಿ ಅನುತಾಪವೇಕೆ ಉಂಟಾಗಲಿಲ್ಲ ?

೯. ಲೋಕೇಶ್ವರನೆ! ಪಾಪಿಗಳಂತೆ ನಿನ್ನ ಭಕ್ತರೂ ಕೂಡ ದುಃಖಸಮುದ್ರದಲ್ಲಿ ಮುಳುಗುತ್ತಿರುವುದನ್ನು ನೋಡಿದರೆ ಇದೆಲ್ಲವೂ ಸರ್ವವಿಧದಿಂದಲೂ ಅತ್ಯಂತ ಅನುಚಿತವೆಂದೇ ತೋರುವುದು.

೧೦. ಇವರೂ ಕೂಡ ಈ ವಿಧವಾದ , ಸಂಸಾರ ದುಃಖಗಳಿಂದ ಮೋಹಗೊಂಡವರಾಗುವರು. ನಾನು ಬೇರೆ ಸ್ಥಳಕ್ಕೆ ಹೋಗುವುದಿಲ್ಲ. ಊಟ ಮಾಡುವುದಿಲ್ಲ. ನೀರನ್ನೂ ಕುಡಿಯುವುದಿಲ್ಲ.

೧೧. ಸಾವೆಂಬ ಜೀವಿತಾಂತವನ್ನೇ ಹೊಂದಿದರೂ ಈ ವಿಷಯವನ್ನೇ ಕುರಿತು ಯೋಚಿಸುತ್ತ ಇಲ್ಲಿಯೇ ಕುಳಿತಿರುವೆನು.” ಇಂತು ನಿಶ್ಚಯವನ್ನು ಮಾಡಿ ಆ ನಂದಭದ್ರನು ಅಲ್ಲಿಯೇ ಕುಳಿತನು.

ತತಶ್ಚತುರ್ಥೇ ದಿವಸೇ ಬಹೂದಕತಟೇ ಶುಭೇ ।
ಕಶ್ಚಿದ್ಬಾಲಃ ಸಪ್ತವರ್ಷಃ ಪೀಡಾಪೀಡಿತ ಆಯಯೌ ॥ ೧೨ ॥
ಕೃಶೋಽತೀವ ಗಲತ್ಕುಷ್ಠೀ ಪ್ರಮುಹ್ಯಂಶ್ಚ ಪದೇಪದೇ ।
ನಂದಭದ್ರಮುವಾಚೇದಂ ಕೃಚ್ಛ್ರಾತ್ಸಂಸ್ತಭ್ಯ ಬಾಲಕಃ ॥ ೧೩ ॥
ಅಹೋ ಸುರೂಪಸರ್ವಾಂಗ ಕಸ್ಮಾದ್ದುಃಖೀ ಭವಾನಪಿ ।
ತತೋಽಸ್ಯ ಕಾರಣಂ ಸರ್ವಂ ವ್ಯಾಚಷ್ಟ ನಂದಭದ್ರಕಃ ॥ ೧೪ ॥
ಶ್ರುತ್ವಾ ತತ್ಕಾರಣಂ ಸರ್ವಂ ಬಾಲೋ ದೀನಮನಾಬ್ರವೀತ್ ।
ಅಹೋ ಹಾ ಕಷ್ಟಮತ್ಯುಗ್ರಂ ಬುಧಾನಾಂ ಯದಬುದ್ಧಿತಾ ॥ ೧೫ ॥
ಸಂಪೂರ್ಣೇಂದ್ರಿಯಗಾತ್ರಾ ಯನ್ಮರ್ತುಮಿಚ್ಛಂತಿ ವೈ ವೃಥಾ ।
ಮುಹೂರ್ತಾದ್ಯತ್ರ ಖಟ್ವಾಂಗೋ ಮೋಕ್ಷಮಾರ್ಗಮುಪಾಗತಃ ॥ ೧೬ ॥
ತದಹೋ ಭಾರತಂ ಖಂಡಂ ಸತ್ಯಾಯುಷಿ ತ್ಯಜೇದ್ಧಿ ಕಃ ।
ಅಹಮೇವ ದೃಢೋ ಮನ್ಯೇ ಪಿತೃಭ್ಯಾಂ ಯೋ ವಿವರ್ಜಿತಃ ।
ಅಶಕ್ತಶ್ಚಲಿತುಂ ವಾಪಿ ಮರ್ತುಮಿಚ್ಛಾಮಿ ನಾಪಿ ಚ ॥ ೧೭ ॥

---

೧೨–೧೩. ಬಳಿಕ ನಾಲ್ಕನೆಯ ದಿವಸದಲ್ಲಿ ಪವಿತ್ರವಾದ ಆ ಬಹೂದಕ ಕುಂಡದ ಸಮೀಪಕ್ಕೆ ರೋಗಿಷ್ಠನಾದ ಏಳು ವರ್ಷದ ವಯಸ್ಸುಳ್ಳ ಒಬ್ಬಾನೊಬ್ಬ ಬಾಲಕನು ಬಂದನು. ಅವನು ಬಹಳ ಕೃಶನಾಗಿದ್ದನು. ಅವನ ಶರೀರದಲ್ಲಿ ಕುಷ್ಠರೋಗದ ವ್ರಣಗಳಿಂದ ನೀರು ಸುರಿಯುತ್ತಿದ್ದಿತು. ಹೆಜ್ಜೆ ಹೆಜ್ಜೆಗೂ ಮೂರ್ಛೆಗೊಳ್ಳುತ್ತಿದ್ದನು. ಆ ಬಾಲಕನು ಬಹಳ ಕಷ್ಟದಿಂದ ಚೇತರಿಸಿಕೊಂಡು ನಂದಭದ್ರನನ್ನು ಕುರಿತು ಇಂತೆಂದನು.

೧೪. "ಆಹಾ! ಸುಂದರವಾದ ಶರೀರವುಳ್ಳ ಮಹಾತ್ಮನೆ! ನೀನೂ ಸಹ ದುಃಖಪಡುತ್ತಿರುವ ಕಾರಣವೇನು?" ಆಗ ನಂದಭದ್ರನು ತನ್ನ ದುಃಖದ ಕಾರಣವನ್ನೆಲ್ಲ ಕೂಲಂಕಷವಾಗಿ ಹೇಳಿದನು.

೧೫. ಅವನ ಮಾತುಗಳನ್ನೆಲ್ಲ ಕೇಳಿ ಖಿನ್ನಮನಸ್ಕನಾದ ಬಾಲಕ ನಿಂತೆಂದನು. "ಅಯ್ಯೋ! ಬುದ್ಧಿಶಾಲಿಗಳೂ ಸಹ ಮೂಢರಂತೆ ವ್ಯವಹರಿಸುವುದಕ್ಕಿಂತ ಹೆಚ್ಚಿನ ದುಃಖಕರವಾದುದಾವುದು ?

೧೬. ಸಮಸ್ತ ಇಂದ್ರಿಯಗಳಿಂದಲೂ ಕೂಡಿದ ಸುಂದರ ದೇಹವುಳ್ಳವರಾದರೂ ನಿಷ್ಪ್ರಯೋಜನವಾಗಿಯೇ ಸಾಯಲೆಳಸುವರು. ಇಲ್ಲಿ ಹಿಂದೆ ಖಟ್ವಾಂಗನು ಒಂದು ಮುಹೂರ್ತಕಾಲದಲ್ಲಿಯೇ ತನ್ನ ಮೋಕ್ಷದ ಸಾಧನೆಯನ್ನು ಮಾಡಿಕೊಂಡನು.

೧೭. ಇಂತಹ ಪರಮ ಪವಿತ್ರವಾದ ಭಾರತಖಂಡವಿರುತ್ತಿರಲು ಪ್ರಾಣವನ್ನು ಕಳೆದುಕೊಳ್ಳುವವನೆಂತಹವನು? ಇವರಿಗಿಂತ ನಾನೇ ದೃಢಮನಸ್ಕ

**ಸರ್ವೇ ಲಾಭಾಃ ಸಾತಿಮಾನಾ ಇತಿ ಸತ್ಯಾ ಬತ ಶ್ರುತಿಃ ।**
**ಸಂತೋಷೋಽಪ್ಯುಚಿತಸ್ತುಭ್ಯಂ ದೇಹಂ ಯಸ್ಯ ದೃಢಂ ತ್ವಿದಂ ॥ ೧೮ ॥**
**ಶರೀರಂ ನೀರುಜಂ ಚೇನ್ಮೇ ಭವೇದಪಿ ಕಥಂಚನ ।**
**ಕ್ಷಣೇಕ್ಷಣೇ ಚ ತತ್ಕುರ್ಯಾಂ ಭುಜ್ಯತೇ ಯದ್ಯುಗೇ ಯುಗೇ ॥ ೧೯ ॥**
**ಇಂದ್ರಿಯಾಣಿ ವಶೇ ಯಸ್ಯ ಶರೀರಂ ಚ ದೃಢಂ ಭವೇತ್ ।**
**ಸೋಽಪ್ಯನ್ಯದಿಚ್ಛತೇ ಚೇಚ್ಚ ಕೋಽನ್ಯಸ್ತಸ್ಮಾದಚೇತನಃ ॥ ೨೦ ॥**
**ಶೋಕಸ್ಥಾನಸಹಸ್ರಾಣಿ ಹರ್ಷಸ್ಥಾನಶತಾನಿ ಚ ।**
**ದಿವಸೇ ದಿವಸೇ ಮೂಢಮಾವಿಶಂತಿ ನ ಪಂಡಿತಂ ॥ ೨೧ ॥**
**ನ ಹಿ ಜ್ಞಾನವಿರುದ್ಧೇಷು ಬಹ್ವಪಾಯೇಷು ಕರ್ಮಸು ।**
**ಮೂಲಘಾತಿಷು ಸಜ್ಜಂತೇ ಬುದ್ಧಿಮಂತೋ ಭವದ್ವಿಧಾಃ ॥ ೨೨ ॥**
**ಅಷ್ಟಾಂಗಾಂ ಬುದ್ಧಿಮಾಹುರ್ಯಾಂ ಸರ್ವಾಶ್ರೇಯೋವಿಘಾತಿನೀಂ ।**
**ಶ್ರುತಿಸ್ಮೃತ್ಯವಿರುದ್ಧಾ ಸಾ ಬುದ್ಧಿ ಸ್ತ್ವಯ್ಯಸ್ತಿ ನಿರ್ಮಲಾ ॥ ೨೩ ॥**

---

ನೆಂದೆಣಿಸುವೆನು. ರೋಗದ ದೆಸೆಯಿಂದ ತಂದೆತಾಯಿಯರಿಂದ ಬಿಡಲ್ಪಟ್ಟರೂ ಓಡಾಡುವುದಕ್ಕೂ ಅಶಕ್ತನಾಗಿದ್ದರೂ ಸಹ ನಾನು ಸಾಯಲೆಳಸುವುದಿಲ್ಲ.

೧೮. ಸಕಲ ದ್ರವ್ಯಗಳೂ ಹೊಂದುವುದರಿಂದ ತಮ್ಮ ಬೆಲೆಯನ್ನು ಕಳೆದು ಕೊಳ್ಳುವುವೆಂದು ಗಾದೆಯು ಹೇಳುವುದು ಸತ್ಯವು. ಇಂತಹ ದೃಢವಾದ ದೇಹವುಳ್ಳ ನಿನಗೆ ಸಂತೋಷದಿಂದಿರುವುದೇ ಉಚಿತವೆನಿಸುವುದು.

೧೯. ನನಗೆ ಯಾವ ವಿಧದಿಂದಲಾದರೂ ರೋಗವಿಲ್ಲದ ಶರೀರವು ಸಂಭವಿಸುವುದಾದರೆ ನಾನು ಯುಗಯುಗಾಂತರಗಳಲ್ಲಿಯೂ ಭೋಗಿಸುವಂತಹ ಸುಕೃತವನ್ನು ಕ್ಷಣಕ್ಷಣದಲ್ಲಿಯೂ ಮಾಡುವೆನು.

೨೦-೨೧. ಯಾವನಿಗೆ ಇಂದ್ರಿಯಗಳು ಸ್ವಾಧೀನದಲ್ಲಿರುವುವೊ, ದೇಹವು ದೃಢವಾಗಿರುವುದೊ, ಅವನೂ ಕೂಡ ಇತರರ ಸಹಾಯಗಳನ್ನಪೇಕ್ಷಿಸಿದರೆ ಅವನಿಗಿಂತ ಮೂಢನು ಯಾರು? ದಿನದಿನದಲ್ಲಿಯೂ ದುಃಖವನ್ನು ಪಡುವಂತಹ ಸಾವಿರಾರು ಸನ್ನಿವೇಶಗಳೂ, ಸಂತೋಷಪಡುವಂತಹ ನೂರಾರು ಸಂದರ್ಭ ಗಳೂ ಮೂಢರಿಗೆ ಉಂಟಾಗುವುದೇ ಹೊರತು ಪಂಡಿತನಿಗಲ್ಲ.

೨೨. ಜ್ಞಾನಮಾರ್ಗಕ್ಕೆ ವಿರುದ್ಧಗಳಾಗಿಯೂ, ಅನೇಕ ಕಷ್ಟಗಳಿಂದ ಕೂಡಿದುದಾಗಿಯೂ, ಮನುಷ್ಯನ ಶ್ರೇಯಸ್ಸಿನ ಮೂಲವನ್ನೇ ಕಡಿಯುವಂತ ಹವೂ ಆದ ಕರ್ಮಗಳಲ್ಲಿ ನಿನ್ನಂತಹ ಬುದ್ಧಿವಂತರು ಪ್ರವರ್ತಿಸುವುದಿಲ್ಲ.

೨೩. ಅಷ್ಟಾಂಗಸಹಿತವಾದ ಯಾವ ಬುದ್ಧಿಯನ್ನು ಸಕಲ ಪಾಪನಿವಾರಕ ವೆನ್ನುವರೊ, ಯಾವುದು ಶ್ರುತಿ ಸ್ಮೃತಿಗಳಿಗೆ ಅನುಸರಿಸುತ್ತಿರುವುದೊ, ಅಂತಹ ನಿರ್ಮಲವಾದ ಬುದ್ಧಿಯು ನಿನ್ನಲ್ಲಿ ತುಂಬಿರುವುದು.

ಅಥ ಕೃಚ್ಛ್ರೇಷು ದುರ್ಗೇಷು ಹ್ಯಾಪತ್ಸು ಸ್ವಜನಸ್ಯ ಚ ।
ಶಾರೀರಮಾನಸೈರ್ದುಃಖೈರ್ನ ಸೀದಂತಿ ಭವದ್ವಿಧಾಃ ॥ ೨೪ ॥
ನಾಪ್ರಾಪ್ಯಮಭಿವಾಂಛಂತಿ ನಷ್ಟಂ ನೇಚ್ಛಂತಿ ಶೋಚಿತುಂ ।
ಆಪತ್ಸು ಚ ನ ಮುಹ್ಯಂತಿ ನರಾಃ ಪಂಡಿತಬುದ್ಧಯಃ ॥ ೨೫ ॥
ಮನೋದೇಹಸಮುತ್ಥಾಭ್ಯಾಂ ದುಃಖಾಭ್ಯಾಮರ್ಪಿತಂ ಜಗತ್ ।
ತಯೋರ್ವ್ಯಾಸ ಸಮಾಸಾಭ್ಯಾಂ ಶಮೋಪಾಯಮಿಮಂ ಶೃಣು ॥ ೨೬ ॥
ವ್ಯಾಧೇರನಿಷ್ಟಸಂಸ್ಪರ್ಶಾಚ್ಛ್ರಮಾದಿಷ್ಟವಿಸರ್ಜನಾತ್ ।
ಚತುರ್ಭಿಃ ಕಾರಣೈರ್ದುಃಖಂ ಶಾರೀರಂ ಮಾನಸಂ ಚ ಯತ್ ॥ ೨೭ ॥
ಮಾನಸಂ ಚಾಪ್ಯಪ್ರಿಯಸ್ಯ ಸಂಯೋಗಃ ಪ್ರಿಯವರ್ಜನಂ ।
ದ್ವಿಪ್ರಕಾರಂ ಮಹಾಕಷ್ಟಂ ದ್ವಯೋರೇತದುದಾಹೃತಂ ॥ ೨೮ ॥
ಮಾನಸೇನ ಹಿ ದುಃಖೇನ ಶರೀರಮುಪತಪ್ಯತೇ ।
ಅಯಃ ಪಿಂಡೇನ ತಪ್ತೇನ ಕುಂಭಸಂಸ್ಥಮಿವೋದಕಂ ॥ ೨೯ ॥
ತದಾಶು ಪ್ರತಿಕಾರಾಚ್ಚ ಸತತಂ ಚ ವಿವರ್ಜನಾತ್ ।
ವ್ಯಾಧೇರಾಧೇಶ್ಚ ಪ್ರಶಮಃ ಕ್ರಿಯಾಯೋಗದ್ವಯೇನ ತು ॥ ೩೦ ॥

---

೨೪–೨೫. ನಿನ್ನಂತಹ ಧೀರರು ಜಯಿಸಲಸಾಧ್ಯವಾದ ಕಷ್ಟಗಳಲ್ಲಿಯೂ ಬಂಧು ಬಳಗಗಳ ಆಪತ್ತುಗಳಲ್ಲಿಯೂ ಸಹ ಶಾರೀರಕ ಮಾನಸಿಕ ದುಃಖಗಳಿಂದ ಕೊರಗುವುದಿಲ್ಲ. ನಿತ್ಯಾನಿತ್ಯ ವಿವೇಕವುಳ್ಳ ಮನುಷ್ಯರು ಸಿಕ್ಕಲಾರದುದನ್ನು ಬಯಸುವುದಿಲ್ಲ. ಕಳೆದುಹೋದುದನ್ನು ಕುರಿತು ಶೋಕಮಾಡಲೆಳಸುವುದಿಲ್ಲ. ಆಪತ್ತುಗಳಲ್ಲಿ ಮೋಹಗೊಳ್ಳುವುದಿಲ್ಲ.

೨೬. ಮನಸ್ಸು ಮತ್ತು ದೇಹಗಳಿಂದ ಹುಟ್ಟಿದ ದುಃಖಗಳಲ್ಲಿಯೇ ಪ್ರಪಂಚವು ಮುಳುಗಿರುವುದು. ಅವುಗಳನ್ನು ಒಟ್ಟಿಗೂ ಬೇರೆಯಾಗಿಯೂ ಶಮನಮಾಡುವ ಉಪಾಯವನ್ನು ಕೇಳು.

೨೭. ರೋಗ, ಅನಿಷ್ಟಪ್ರಾಪ್ತಿ, ಆಯಾಸ ಮತ್ತು ಇಷ್ಟವಿಯೋಗ— ಈ ನಾಲ್ಕು ಕಾರಣಗಳಿಂದ ದೈಹಿಕ ದುಃಖಗಳುಂಟಾಗುವುವು.

೨೮. ಅಪ್ರಿಯದ ಪ್ರಾಪ್ತಿ ಮತ್ತು ಪ್ರಿಯವಿಸರ್ಜನೆ ಎಂದು ಮಾನಸಿಕ ದುಃಖವು ಎರಡು ವಿಧವಾಗಿರುವುದು. ಇಂತು ಎರಡು ವಿಧಗಳಾದ ದುಃಖಗಳು ನಿರೂಪಿತಗಳಾಗಿರುವುವು.

೨೯. ಕಾದಕಬ್ಬಿಣದ ತುಂಡಿನಿಂದ ಪಾತ್ರೆಯೊಳಗಿನ ನೀರು ತಾನೂ ಬಿಸಿಯಾಗುವಂತೆ ಮಾನಸಿಕವಾದ ದುಃಖದಿಂದ ಶರೀರವೂ ಕಷ್ಟಪಡುವುದು.

೩೦. ಆದುದರಿಂದ ಕರ್ಮ ಮತ್ತು ಜ್ಞಾನಗಳೆಂಬ ಎರಡು ಮಾರ್ಗಗಳನ್ನೂ ಅನುಸರಿಸಿ ತಕ್ಷಣ ಪ್ರತೀಕಾರವನ್ನು ಮಾಡುವುದರಿಂದಲೂ,

ಮಾನಸಂ ಶಮಯೇತ್ತಸ್ಮಾಜ್ಞಾನೇನಾಗ್ನಿಮಿವಾಂಬುನಾ ।
ಪ್ರಶಾಂತೇ ಮಾನಸೇಹ್ಯಸ್ಯ ಶಾರೀರಮುಪಶಾಮ್ಯತಿ ॥ ೩೧ ॥
ಮನಸೋ ದುಃಖಮೂಲಂ ತು ಸ್ನೇಹ ಇತ್ಯುಪಲಭ್ಯತೇ ।
ಸ್ನೇಹಾಚ್ಚ ಸಜ್ಜನೋ ನಿತ್ಯಂ ಜಂತುರ್ದುಃಖಮುಪೈತಿ ಚ ॥ ೩೨ ॥
ಸ್ನೇಹಮೂಲಾನಿ ದುಃಖಾನಿ ಸ್ನೇಹಜಾನಿ ಭಯಾನಿ ಚ ॥ ೩೩ ॥
ಶೋಕಹರ್ಷೌ ತಥಾಯಾಸಃ ಸರ್ವಂ ಸ್ನೇಹಾತ್ಪ್ರವರ್ತತೇ ॥ ೩೪ ॥
ಸ್ನೇಹಾತ್ಕರಣರಾಗಶ್ಚ ಪ್ರಜಜ್ಞೇ ವೈಷಯಸ್ತಥಾ ।
ಅಶ್ರೇಯಸ್ಕಾವುಭಾವೇತೌ ಪೂರ್ವಸ್ತತ್ರ ಗುರುಃ ಸ್ಮೃತಃ ॥ ೩೫ ॥
ತ್ಯಾಗೀ ತಸ್ಮಾನ್ನ ದುಃಖೀ ಸ್ಯಾನ್ನಿರ್ವೈರೋ ನಿರವಗ್ರಹಃ ।
ಅತ್ಯಾಗೀ ಜನ್ಮಮರಣೇ ಪ್ರಾಪ್ನೋತೀಹ ಪುನಃ ಪುನಃ ॥ ೩೬ ॥
ತಸ್ಮಾತ್ಸ್ನೇಹಂ ನ ಲಿಪ್ಸೇತ ಮಿತ್ರೇಭ್ಯೋ ಧನಸಂಚಯಾತ್ ।
ಸ್ವಶರೀರಸಮುತ್ಥಂ ಚ ಜ್ಞಾನೇನ ವಿನಿವರ್ತಯೇತ್ ॥ ೩೭ ॥

---

ಯಾವಾಗಲೂ ತ್ಯಾಗಮಾಡುವುದರಿಂದಲೂ ಶಾರೀರಕ ಮಾನಸಿಕ ದುಃಖಗಳು ಶಮನವಾಗುವುವು.

೩೧–೩೨. ಆದುದರಿಂದ ಬೆಂಕಿಯನ್ನು ನೀರಿನಿಂದ ಆರಿಸುವಂತೆ ಮೊದಲು ಮಾನಸದುಃಖವನ್ನು ಜ್ಞಾನದಿಂದ ಶಮನ ಮಾಡಬೇಕು. ಮನಸ್ಸು ಶಾಂತ ವಾಗಲು ಶಾರೀರಕ ಕ್ಲೇಶವೂ ತಾನಾಗಿಯೇ ಕಳೆಯುವುದು. ಮಾನಸಿಕ ದುಃಖದ ಕಾರಣವನ್ನು ಹುಡುಕಲು ಸ್ನೇಹವೊಂದೇ ಕಾಣಿಸುವುದು. ಸಜ್ಜನ ನಾದ ಮನುಷ್ಯನು ಯಾವಾಗಲೂ ಸ್ನೇಹದಿಂದಲೇ ದುಃಖವನ್ನು ಹೊಂದುವನು.

೩೩–೩೪. ಸ್ನೇಹಮೂಲಗಳಾಗಿಯೇ ದುಃಖಗಳಿರುವುವು. ಭಯಗಳೂ ಸ್ನೇಹದಿಂದಲೇ ಉಂಟಾಗುವುವು. ಶೋಕ, ಸಂತೋಷ, ಕಷ್ಟ, ಎಲ್ಲವೂ ಸ್ನೇಹದಿಂದಲೇ ಹುಟ್ಟುವುವು.

೩೫–೩೬. ಸ್ನೇಹದಿಂದಲೇ ವಿಷಯಗಳ ಅನುಭವಕ್ಕೆ ಸಾಧನವಾದ ಇಂದ್ರಿಯಸಮೂಹದಲ್ಲಿ ಅನುರಾಗವುಂಟಾಗುತ್ತದೆ. ಸ್ನೇಹವೂ, ವಿಷಯಾನು ಭವವೂ ನರಕಸಾಧನಗಳೆಂದು ಹೇಳಲ್ಪಟ್ಟಿರುವುವು. ಅವುಗಳಲ್ಲಿ ಮೊದಲನೆಯದು ಹೆಚ್ಚಿನ ಶಕ್ತಿಯುಳ್ಳುದು. ಆದುದರಿಂದ ವೈರವಿಲ್ಲದವನೂ, ಮಿಥ್ಯಾಜ್ಞಾನವಿಲ್ಲ ದವನೂ ಆದ ತ್ಯಾಗಿಯೇ ದುಃಖವಿಲ್ಲದವನು. ಸನ್ಯಾಸಿಯಲ್ಲದವನು ಇಹಲೋಕ ದಲ್ಲಿ ಮತ್ತೆ ಮತ್ತೆ ಜನನಮರಣಗಳನ್ನು ಅನುಭವಿಸುವನು.

೩೭. ಆದುದರಿಂದ ಸ್ನೇಹಿತರಲ್ಲಿಯಾಗಲಿ, ದ್ರವ್ಯದ ಸಂಚಯದಲ್ಲಿ ಯಾಗಲಿ ಅನುರಾಗವನ್ನು ಮಾಡಬಾರದು. ತನ್ನ ದೇಹೇಂದ್ರಿಯಾದಿಗಳಲ್ಲಿರುವ ಅಭಿಮಾನವನ್ನೂ ತತ್ತ್ವಜ್ಞಾನದಿಂದ ದೂರಮಾಡಬೇಕು.

ಜ್ಞಾನಾನ್ವಿತೇಷು ಸಿದ್ಧೇಷು ಶಾಸ್ತ್ರಜ್ಞೇಷು ಕೃತಾತ್ಮಸು ।
ನ ತೇಷು ಸಜ್ಜತೇ ಸ್ನೇಹಃ ಪದ್ಮಪತ್ರೇಷ್ವಿವೋದಕಂ ॥ ೩೮ ॥
ರಾಗಾಭಿಭೂತಃ ಪುರುಷಃ ಕಾಮೇನ ಪರಿಕೃಷ್ಯತೇ ।
ಇಚ್ಛಾ ಸಂಜಾಯತೇ ಚಾಸ್ಯ ತತಸ್ತೃಷ್ಣಾ ಪ್ರವರ್ಧತೇ ॥ ೩೯ ॥
ತೃಷ್ಣಾ ಹಿ ಸರ್ವಪಾಪಿಷ್ಠಾ ನಿತ್ಯೋದ್ವೇಗಕರೀ ಮತಾ ।
ಅಧರ್ಮಬಹುಲಾ ಚೈವ ಘೋರರೂಪಾನುಬಂಧಿನೀ ॥ ೪೦ ॥
ಯಾ ದುಸ್ತ್ಯಜಾ ದುರ್ಮತಿಭಿರ್ಯಾ ನ ಜೀರ್ಯತಿ ಜೀರ್ಯತಃ ।
ಯಾಸೌ ಪ್ರಾಣಾಂತಿಕೋ ರೋಗಸ್ತಾಂ ತೃಷ್ಣಾಂ ತ್ಯಜತಃ ಸುಖಂ ॥ ೪೧ ॥
ಅನಾದ್ಯಂತಾ ತು ಸಾ ತೃಷ್ಣಾ ಹ್ಯಂತರ್ದೇಹಗತಾ ನೃಣಾಂ ।
ವಿನಾಶಯತಿ ಸಂಭೂತಾ ಲೋಹಂ ಲೋಹಮಲೋ ಯಥಾ ॥ ೪೨ ॥
ಯಥೈಧಃ ಸಮುತ್ಥೇನ ವಹ್ನಿನಾ ನಾಶಮೃಚ್ಛತಿ ।
ತಥಾಕೃತಾತ್ಮಾ ಲೋಭೇನ ಸ್ವೋತ್ಪನ್ನೇನ ವಿನಶ್ಯತಿ ॥ ೪೩ ॥

---

೩೮–೩೯. ಜ್ಞಾನನಿಷ್ಠರೂ, ತಪಸ್ಸಿದ್ಧರೂ, ಶಾಸ್ತ್ರವಿಚಾರವುಳ್ಳವರೂ, ಆತ್ಮವಿದರೂ ಆದವರಲ್ಲಿ ಅಭಿಮಾನವು ತಾವರೆಯೆಲೆಯೊಳಗಿನ ಜಲಬಿಂದುವಿನಂತೆ ಅಸಂಗತವಾಗಿರುವುದು. ಅನುರಾಗದಿಂದ ಆವೃತನಾದ ಮನುಷ್ಯನು ಕಾಮದಿಂದ ಸೆಳೆಯಲ್ಪಡುವನು. ಅದರಿಂದ ಅವನಲ್ಲಿ ಇಚ್ಛೆಯುಂಟಾಗುವುದು. ಇಚ್ಛೆಯಿಂದ ತೃಷ್ಣೆಯು ಬಲಗೊಳ್ಳುವುದು.

೪೦. ತೃಷ್ಣೆಯೆಂಬುದೇ ಸಮಸ್ತ ಪಾಪಗಳ ಮೂಲವೂ, ಸದಾ ದುಃಖವನ್ನುಂಟುಮಾಡುವುದೂ ಆಗಿರುವುದೆಂದು ಹೇಳಲ್ಪಟ್ಟಿರುವುದು. ಅದೇ ಅಧರ್ಮದಿಂದ ತುಂಬಿರುವುದೂ ಭಯಂಕರಗಳಾದ ಅನೇಕ ಅನುಬಂಧಗಳಿಂದ ಕೂಡಿರುವುದೂ ಆಗಿರುವುದು.

೪೧. ಯಾವುದು ದುರ್ಬುದ್ಧಿಗಳಿಂದ ತ್ಯಜಿಸಲಾಗದೊ, ಯಾವುದು ಶರೀರದ ವಾರ್ಧಕ್ಯದೊಡನೆ ಮುದಿಯಾಗಲಾರದೊ, ಯಾವುದು ಪ್ರಾಣಾಪಾಯವನ್ನುಂಟುಮಾಡುವ ರೋಗವೆನಿಸಿರುವುದೊ, ಅಂತಹ ತೃಷ್ಣೆಯನ್ನು ತ್ಯಜಿಸಿದವನಿಗೇ ಸೌಖ್ಯವು ಲಭಿಸುವುದು.

೪೨. ಆ ಆಶೆಯು ಕೊನೆಮೊದಲಿಲ್ಲದುದು. ಮನುಷ್ಯರ ಹೃದಯಾಂತವನ್ನು ಆವರಿಸಿರುವುದು. ಲೋಹದ ಕಲ್ಮಷವು ಲೋಹವನ್ನೇ ಕೆಡಿಸುವಂತೆ ಅದು ತನ್ನ ನಿವಾಸವನ್ನೇ ನಾಶಮಾಡುತ್ತದೆ.

೪೩. ಕಾಷ್ಠವು ತನ್ನಿಂದಲೇ ಹುಟ್ಟಿದ ಅಗ್ನಿಯಿಂದ ಹೇಗೆ ನಾಶವನ್ನು ಹೊಂದುವುದೊ, ಹಾಗೆಯೇ ಆತ್ಮನಿಶ್ಚಯವಿಲ್ಲದ ಮನುಷ್ಯನು ತನ್ನಲ್ಲಿಯೇ ಹುಟ್ಟಿದ ಲೋಭದಿಂದ ನಶಿಸುವನು.

ತಸ್ಮಾಲ್ಲೋಭೋ ನಕರ್ತವ್ಯಃ ಶರೀರೇ ಚಾತ್ಮಬಂಧುಷು ।
ಪ್ರಾಪ್ತೇಷು ವಾ ನ ಹೃಷ್ಯೇತ ನಾಶೇ ವಾಪಿ ನಶೋಚಯೇತ್ ॥ ೪೪ ॥
ನಂಧಭದ್ರ ಉವಾಚ:—
ಅಹೋ ಬಾಲ ನ ಬಾಲಸ್ತ್ವಂ ಮತೋ ಮೇ ತ್ವಾಂ ನಮಾಮ್ಯಹಂ ।
ತ್ವದ್ವಾಕ್ಯೈರತಿತೃಪ್ತೋಽಹಂ ತ್ವಾಂ ತು ಪ್ರಕ್ಷ್ಯಾಮಿ ಕಿಂಚನ ॥ ೪೫ ॥
ಕಾಮಕ್ರೋಧಾವಹಂಕಾರಮಿಂದ್ರಿಯಾಣಿ ಚ ಮಾನವಾಃ ।
ನಿಂದಂತಿ ತತ್ರ ಮೇ ನಿತ್ಯಂ ವಿವಕ್ಷೇಯಂ ಪ್ರಜಾಯತೇ ॥ ೪೬ ॥
ಅಹಮೇವ ಮಮೇದಂ ಚ ಕಾರ್ಯಮಿದೃಶಕಸ್ತ್ವಹಂ ।
ಇತ್ಯಾದಿ ಚಾತ್ಮವಿಜ್ಞಾನಮಹಂಕಾರ ಇತಿ ಸ್ಮೃತಃ ॥ ೪೭ ॥
ಪರಿಹಾರ್ಯಃ ಸ ಚೇತ್ತಂ ಚ ವಿನೋನ್ಮತ್ತಃ ಪ್ರಕೀರ್ತ್ಯತೇ ।
ಕಾಮೋಽಭಿಲಾಷ ಇತ್ಯುಕ್ತಃ ಸ ಚೇತ್ಪುಂಸಾ ವಿವರ್ಜ್ಯತೇ ।
ಕಸ್ತಂ ಸ್ವರ್ಗೋ ಮುಮುಕ್ಷಾ ವಾ ಸಾಧ್ಯತೇ ದೃಷದಾ ಯಥಾ ॥ ೪೮ ॥
ಕ್ರೋಧೋ ವಾ ಯದಿ ಸಂತ್ಯಾಜ್ಯಸ್ತತಃ ಶತ್ರುಕ್ಷಯಃ ಕಥಂ ।
ಬಾಹ್ಯಾನಾಮಾಂತರಾಣಾಂ ವಾ ವಿನಾ ತಂ ತೃಣವದ್ವಿದುಃ ॥ ೪೯ ॥

---

೪೪. ಆದುದರಿಂದ ಪ್ರಾಜ್ಞನಾದವನು ದೇಹದಲ್ಲಿಯಾಗಲಿ ಬಂಧುಗಳಲ್ಲಿಯಾಗಲಿ ಲೋಭವನ್ನು ಮಾಡಬಾರದು. ಅವುಗಳು ಸಂಭವಿಸಿದಲ್ಲಿ ಸಂತೋಷವನ್ನೂ ನಷ್ಟವಾದಲ್ಲಿ ಶೋಕವನ್ನೂ ಅನುಭವಿಸಲಾಗದು.''

೪೫. ನಂದಭದ್ರನು ಕೇಳುತ್ತಾನೆ:—"ಆಹಾ! ಬಾಲಕನೆ! ನೀನು ನಿಜವಾಗಿಯೂ ಹುಡುಗನಲ್ಲವೆಂದು ನನ್ನ ಮನಸ್ಸಿಗೆ ತೋರುತ್ತಿರುವುದು. ನಿನ್ನನ್ನು ನಮಸ್ಕರಿಸುವೆನು. ನಿನ್ನ ಮಾತುಗಳಿಂದ ನನಗೆ ಅತ್ಯಂತ ಸಂತೋಷವುಂಟಾಗಿರುವುದು. ಆದುದರಿಂದ ನಿನ್ನನ್ನು ಕೆಲವು ವಿಷಯಗಳನ್ನು ಕೇಳುವೆನು.

೪೬. ಕಾಮ, ಕ್ರೋಧ, ಅಹಂಕಾರ, ಇಂದ್ರಿಯಗಳು—ಇವುಗಳನ್ನು ಜನರು ಸಾಮಾನ್ಯವಾಗಿ ನಿಂದಿಸುವರು. ಈ ವಿಷಯದಲ್ಲಿ ನನಗೆ ಒಂದು ಸಂಶಯವು ತೋರುತ್ತಿರುವುದು.

೪೭. 'ನಾನಿರುವೆನು; ಇದು ನನ್ನ ಕಾರ್ಯವು; ನಾನು ಇಂತಹವನು' ಇಂತು ಮೊದಲಾದ ಆತ್ಮದ ಅಸ್ತಿತ್ವ ಜ್ಞಾನಕ್ಕೆ ಅಹಂಕಾರವೆಂದು ಹೇಳುವರು.

೪೮–೪೯. ಅದನ್ನೇ ಕಳೆಯಬೇಕೆಂದರೆ, ಅದಿಲ್ಲದೆ ವ್ಯವಹರಿಸುವವನಿಗೆ ಹುಚ್ಚನೆಂದೇ ಹೇಳಬೇಕಾಗುವುದು. ಆಶೆಯೆಂಬುದೇ ಕಾಮವೆಂದು ಕರೆಯಲ್ಪಡುವುದು. ಅದೇ ಮನುಷ್ಯನಿಂದ ತ್ಯಜಿಸಲ್ಪಟ್ಟರೆ ಸ್ವರ್ಗವಾಗಲಿ, ಮೋಕ್ಷವಾಗಲಿ ಹೇಗೆ ಸಾಧನಾರ್ಹಗಳಾಗುವುವು? ಮನುಷ್ಯನು ಕೇವಲ ಪಾಷಾಣ ಸದೃಶನಾಗುವನು. ಕ್ರೋಧವೆಂಬುದನ್ನು ತ್ಯಜಿಸಬೇಕೆಂದರೆ ಶತ್ರುಗಳ ನಾಶವು ಹೇಗೆ

ಇಂದ್ರಿಯಾಣಿ ನಿಗೃಹ್ಯೈವ ದುಷ್ಟಾನೀತಿ ನಿಪೀಡಯೇತ್ ।
ಕಥಂ ಸ್ಯಾದ್ಧರ್ಮಶ್ರವಣಂ ಕಥಂ ವಾ ಜೀವನಂ ಭವೇತ್ ॥ ೫೦ ॥
ಏತಸ್ಮಿನ್ಮೇ ಮನೋ ದ್ವಿಧಾ ಛಿದ್ಯತೇಽಜ್ಞಾನಸಂಕಟೇ ।
ತಥಾ ಕಸ್ಮಾದಿದಂ ಸೃಷ್ಟಂ ಜಡಂ ವಿಶ್ವಂ ಚಿದಾತ್ಮನಾ ॥ ೫೧ ॥
ಏವಂ ಯದ್ಬಹುಧಾ ಕ್ಲೇಶೈಃ ಪೀಡ್ಯತೇ ಹಾ ಕುತಸ್ತ್ವಿದಂ ॥ ೫೨ ॥

ಬಾಲ ಉವಾಚ:—

ಸಮ್ಯಗೇತದ್ಯಥಾ ಪೃಷ್ಟಂ ಯತ್ರ ಮುಹ್ಯಂತಿ ಜಂತವಃ ।
ಶೃಣ್ವೇಕಾಗ್ರಮನಾ ಭೂತ್ವಾ ಜ್ಞಾತಂ ದ್ವೈಪಾಯನಾನ್ಮಯಾ ॥ ೫೩ ॥
ಪ್ರಕೃತಿಃ ಪುರುಷಶ್ಚೈವ ಅನಾದೀ ಶೃಣುಮಃ ಪುರಾ ।
ಸಾಧರ್ಮ್ಯೇಣಾವತಿಷ್ಠೇತೇ ಸೃಷ್ಟೇಃ ಪ್ರಾಗಜರಾಮರೌ ॥ ೫೪ ॥
ತತಃ ಕಾಲ ಸ್ವಭಾವಾಭ್ಯಾಂ ಪ್ರೇರಿತಾ ಪ್ರಕೃತಿಃ ಪುರಾ ।
ಪುಂಸಃ ಸಂಯೋಗಮಿಚ್ಛಂತ್ಯಾಸ ತದಭಾವಾತ್ಪ್ರಕುಪ್ಯತ ॥ ೫೫ ॥

---

ಸಂಭವಿಸುವುದು? ಬಾಹ್ಯಗಳು ಅಥವ ಅಂತರಗಳು ಎನ್ನುವ ರಾಗದ್ವೇಷಾದಿಗಳಿಲ್ಲದವನನ್ನು ತೃಣಸಮಾನನೆಂದು ಜನರು ತಿಳಿಯುವರು.

೫೦. ಇಂದ್ರಿಯಗಳು ದುಷ್ಟಗಳೆಂದು ಅವುಗಳನ್ನು ನಿಗ್ರಹಿಸಿ ಕೃಶಗೊಳಿಸುವುದೇ ಸರಿಯೆಂದರೆ ಧರ್ಮವೇ ಮುಂತಾದ ಮೋಕ್ಷಸಾಧನಗಳನ್ನು ಕೇಳುವುದು ಹೇಗೆ? ದೈನಂದಿನ ಜೀವನವನ್ನು ನಡೆಸುವುದು ಹೇಗೆ?

೫೧–೫೨. ಈ ವಿಷಯದಲ್ಲಿ ನನ್ನ ಮನಸ್ಸು ಇಬ್ಬಗೆಯಾಗಿ ಅಜ್ಞಾನದ ಇಕ್ಕಟ್ಟಿನಲ್ಲಿ ಸಿಕ್ಕಿ ಒದ್ದಾಡುತ್ತಿರುವುದು. ಅಲ್ಲದೆಯೇ ಚಿದ್ರೂಪನಾದ ಪರಮಾತ್ಮನಿಂದ ಈ ಜಡವಾದ ಪ್ರಪಂಚವು ಏಕೆ ಸೃಜಿಸಲ್ಪಟ್ಟಿತು? ಈ ಜಗತ್ತು ಏತಕ್ಕಾಗಿ ಅನೇಕ ವಿಧಗಳಾದ ದುಃಖಗಳಿಂದ ಪೀಡಿಸಲ್ಪಡುತ್ತಿರುವುದು?"

೫೩. ಬಾಲಕನು ಹೇಳುತ್ತಾನೆ:—ನೀನು ಕೇಳಿದ ಪ್ರಶ್ನೆಯು ಬಹಳ ಒಳ್ಳೆಯದು. ಈ ವಿಷಯದಲ್ಲಿ ಎಲ್ಲಾ ಪ್ರಾಣಿಗಳೂ ಮೋಹಗೊಳ್ಳುವುವು. ವ್ಯಾಸಮಹರ್ಷಿಗಳಿಂದ ನನಗೆ ತಿಳಿದು ಬಂದ ವಿಷಯವನ್ನು ಹೇಳುವೆನು. ಏಕಾಗ್ರಚಿತ್ತನಾಗಿ ಕೇಳು.

೫೪. ಸೃಷ್ಟ್ಯಾದಿಯಲ್ಲಿ ಪ್ರಕೃತಿ ಮತ್ತು ಪುರುಷರಿಬ್ಬರೂ ಅನಾದಿಯಾಗಿದ್ದರೆಂದು ಕೇಳಿರುವೆವು. ಜರಾಮರಣವಿಲ್ಲದವರಾಗಿ ಅವರಿಬ್ಬರೂ ಜಗತ್ತಿನ ಸೃಷ್ಟಿಗೆ ಮೊದಲೇ ಸಹಧರ್ಮದಿಂದ ಕೂಡಿದವರಾಗಿದ್ದರು.

೫೫. ಬಳಿಕ ಮೊದಲು ಕಾಲ ಮತ್ತು ಸ್ವಭಾಗಳಿಂದ ಪ್ರೇರೇಪಿಸಲ್ಪಟ್ಟ ಪ್ರಕೃತಿಯು ಪುರುಷನ ಸಂಯೋಗವನ್ನಪೇಕ್ಷಿಸಿ ಪಡೆಯಲಾರದೆ ಕೋಪಗೊಂಡಿತು.

**ತತಸ್ತಮೋಮಯೀ ಸಾಚ ಲೀಲಯಾ ದೇವವೀಕ್ಷಿತಾ ।**
**ರಾಜಸೀ ಸಮಭೂದ್ದೃಷ್ಟ್ವಾ ಸಾತ್ತ್ವಿಕೀ ಸಮಜಾಯತ ॥ ೫೬ ॥**
**ಏವಂ ತ್ರಿಗುಣತಾಂ ಯಾತಾ ಪ್ರಕೃತಿರ್ದೇವದರ್ಶನಾತ್ ।**
**ತಾಂ ಸಮಾಸ್ಥಾಯ ಪರಮಸ್ತ್ರಿಮೂರ್ತಿಃ ಸಮಜಾಯತ ॥ ೫೭ ॥**
**ತಸ್ಯಾಃ ಪ್ರೇರಣಾರ್ಥಂ ಚ ಪ್ರವೃತ್ತಃ ಸ್ವಾಂಶತಸ್ತತಃ ।**
**ಅಸೂಯತ ಮಹತ್ತತ್ತ್ವಂ ತ್ರಿಗುಣಂ ತದ್ವಿದುರ್ಬುಧಾಃ ॥ ೫೮ ॥**
**ಅಹಂಕಾರಸ್ತತೋ ಜಾತಃ ಸತ್ತ್ವರಾಜಸ ತಾಮಸಃ ।**
**ತಮೋ ರಜಸ್ತ್ವಮಾಪದ್ಯ ರಜಃ ಸತ್ತ್ವಗುಣಂ ನಯೇತ್ ॥ ೫೯ ॥**
**ಶುದ್ಧಸತ್ತ್ವೇ ತತೋ ಮೋಕ್ಷಂ ಪ್ರವದಂತಿ ಮನೀಷಿಣಃ ।**
**ತಮಸೋ ರಜಸಸ್ತಸ್ಮಾತ್ಸಂಶುದ್ಧ್ಯರ್ಥಂ ಚ ಸರ್ವಶಃ ।**
**ಜೀವಾತ್ಮಸಂಜ್ಞಾನ್ಸ್ವೀಯಾಂಶಾನ್ವ್ಯಭಜತ್ಪರಮೇಶ್ವರಃ ॥ ೬೦ ॥**
**ತಾವಂತಸ್ತೇ ಚ ಕ್ಷೇತ್ರಜ್ಞಾ ದೇಹಾ ಯಾವಂತ ಏವ ಹಿ ।**
**ನಿಃಸರಂತಿ ಯಥಾ ಲೋಹಾತ್ತಪ್ತಾಲ್ಲಿಂಗಾತ್ಸ್ಫುಲಿಂಗಕಾಃ ॥ ೬೧ ॥**

---

೫೬. ಪುರುಷನ ಲೀಲಾದೃಷ್ಟಿಯ ಪ್ರಭಾವದಿಂದ ಆ ಪ್ರಕೃತಿಯೇ ದೋಷಸಹಿತನಾಗಿ ಸಾತ್ತ್ವಿಕೀ, ರಾಜಸೀ ಮತ್ತು ತಾಮಸೀ ಎಂಬುದಾಗಿ ಮೂರು ವಿಭಾಗವಾಯಿತು.

೫೭. ಇಂತು ಪುರುಷನ ವೀಕ್ಷಣದಿಂದ ಪ್ರಕೃತಿಯಲ್ಲಿ ತ್ರಿಗುಣಗಳ ಸಾಮ್ಯಾವಸ್ಥೆಯು ಕೆಟ್ಟಿತು. ಅದನ್ನೇ ಶರೀರವಾಗಿ ಸ್ವೀಕರಿಸಿ ಪುರುಷನು ತ್ರಿಮೂರ್ತಿಗಳಾಗಿ ಅವತರಿಸಿದನು.

೫೮. ಆಗ ಪುರುಷನು ಪ್ರಕೃತಿಯ ಅಭಿವ್ಯಕ್ತಿಯ ಸಲುವಾಗಿ ತನ್ನ ಅಂಶದಿಂದ ಪ್ರವರ್ತಿಸಿದನು. ಅದರಿಂದ ಮಹತ್ತತ್ತ್ವವುಂಟಾಯಿತು. ಅದೂ ಕೂಡ ತ್ರಿಗುಣಮಯವೆಂದು ತಿಳಿದವರು ಹೇಳುವರು.

೫೯. ಅದರಿಂದ ಸಾತ್ತ್ವಿಕ, ರಾಜಸ, ತಾಮಸ ಗುಣಗಳಿಂದೊಡಗೂಡಿದ ಅಹಂಕಾರ ತತ್ತ್ವವುಂಟಾಯಿತು. ತಮಸ್ಸು ರಜೋಗುಣದಲ್ಲಿ ಸೇರುವುದು. ರಜೋಗುಣವು ಸತ್ತ್ವಗುಣದಲ್ಲಿ ಸೇರುವುದು.

೬೦–೬೧. ಕೇವಲ ಶುದ್ಧ ಸತ್ತ್ವಗುಣದ ಪ್ರಭಾವದಿಂದ ಮೋಕ್ಷವುಂಟಾಗುವುದೆಂದು ಶಾಸ್ತ್ರಜ್ಞರು ಹೇಳುವರು. ಆದುದರಿಂದ ಈ ತಮೋಗುಣ, ರಜೋಗುಣಗಳ ಪರಿಶುದ್ಧಿಗಾಗಿ ಪರಮೇಶ್ವರನು ಎಲ್ಲೆಡೆಯಲ್ಲಿಯೂ ತನ್ನ ಅಂಶಭೂತರಾದ ಜೀವಾತ್ಮರೆಂಬವರನ್ನು ವಿಭಾಗಮಾಡಿದನು. ಎಷ್ಟು ದೇಹಗಳಿರುವುವೊ ಅಷ್ಟು ಜೀವರೆಂದು ತಿಳಿಯಬೇಕು. ಕಾದ ಕಬ್ಬಿಣದ ಪಿಂಡದಿಂದ ಕಿಡಿಗಳು ಹಾರುವಂತೆ ಈ ಜೀವರೆಲ್ಲರೂ ಪುರುಷರಿಂದಲೇ ಬಂದಿರುವರು.

ತನ್ಮಾತ್ರಭೂತಸರ್ಗೋಽಯಮಹಂಕಾರಾತ್ತು ತಾಮಸಾತ್ ।
ಇಂದ್ರಿಯಾಣಾಂ ಸಾತ್ತ್ವಿಕಾಚ್ಚ ತ್ರಿಗುಣಾನಿ ಚ ತಾನ್ಯಪಿ ॥ ೬೨ ॥
ಏತೈಃ ಸಂಸಿದ್ಧಮಾತ್ರೇಣ ಸಚ್ಚಿದಾನಂದವೀಕ್ಷಣಾತ್ ।
ರಜಸ್ತಮಶ್ಚ ಶೋಧ್ಯಂತೇ ಸತ್ತ್ವೇನೈವ ಮುಮುಕ್ಷುಭಿಃ ॥ ೬೩ ॥
ತಸ್ಮಾತ್ಕಾಮಂ ಚ ಕ್ರೋಧಂ ಚ ಇಂದ್ರಿಯಾಣಾಂ ಪ್ರವರ್ತನಂ ।
ಅಹಂಕಾರಂ ಚ ಸಂಸೇವ್ಯ ಸಾತ್ತ್ವಿಕೀಂ ಸಿದ್ಧಿಮಶ್ನುತೇ ॥ ೬೪ ॥
ರಾಜಸಾಸ್ತಾಮಸಾಶ್ಚೈವ ತ್ಯಾಜ್ಯಾಃ ಕಾಮಾದಯಸ್ತ್ವಮೀ ।
ಸಾತ್ತ್ವಿಕಾಃ ಸರ್ವದಾ ಸೇವ್ಯಾಃ ಸಂಸಾರವಿಜಿಗೀಷುಭಿಃ ॥ ೬೫ ॥
ಗುಣತ್ರಯಸ್ಯ ವಕ್ಷ್ಯಾಮಿ ಸಂಕ್ಷೇಪಾಲ್ಲಕ್ಷಣಂ ತವ ॥ ೬೬ ॥
ಶಾಸ್ತ್ರಾಭ್ಯಾಸಸ್ತತೋ ಜ್ಞಾನಂ ಶೌಚಮಿಂದ್ರಿಯನಿಗ್ರಹಃ ।
ಧರ್ಮಕ್ರಿಯಾತ್ಮಚಿಂತಾ ಚ ಸಾತ್ತ್ವಿಕಂ ಗುಣಲಕ್ಷಣಂ ॥ ೬೭ ॥
ಅನ್ಯಾಯೇನ ಧನಾದಾನಂ ತಂದ್ರೀ ನಾಸ್ತಿಕ್ಯಮೇವ ಚ ।
ಕ್ರೌರ್ಯಂ ಚ ಯಾಚಕಾದ್ಯಂ ಚ ತಾಮಸಂ ಗುಣಲಕ್ಷಣಂ ॥ ೬೮ ॥

---

೬೨. ತಮೋಗುಣ ಪ್ರಧಾನವಾದ ಅಹಂಕಾರದಿಂದ ಪಂಚತನ್ಮಾತ್ರಗಳೂ ಪಂಚಭೂತಗಳೂ ಉಂಟಾದವು. ಪಂಚಭೂತಗಳ ಸಾತ್ತ್ವಿಕಾಂಶಗಳಿಂದ ಜ್ಞಾನೇಂದ್ರಿಯಗಳುದ್ಭವಿಸಿದವು. ಅವೂ ಕೂಡ ತ್ರಿಗುಣಮಯಗಳಾಗಿರುವುವು.

೬೩. ಇವುಗಳಿಂದ ಮಾಡಿದ ದೇಹದೊಡನೆಯೂ ಸಚ್ಚಿದಾನಂದರೂಪನಾದ ಪರಮಾತ್ಮನ ದೃಷ್ಟಿಯಿಂದಲೂ, ಮುಮುಕ್ಷುಗಳಾದವರು ಸತ್ತ್ವಗುಣದಿಂದ ರಾಜಸ ತಾಮಸ ಗುಣಗಳನ್ನು ಶೋಧಿಸುವರು.

೬೪. ಆದುದರಿಂದ ಸತ್ತ್ವಗುಣ ಪ್ರಧಾನಗಳಾದ ಕಾಮ, ಕ್ರೋಧ, ಇಂದ್ರಿಯ ವೃತ್ತಿಗಳು, ಅಹಂಕಾರ, ಮುಂತಾದುವುಗಳನ್ನು ಅನುಸರಿಸುವುದರಿಂದ ಮನುಷ್ಯನು ಮೋಕ್ಷವನ್ನು ಪಡೆಯುವನು.

೬೫. ರಾಜಸ ಮತ್ತು ತಾಮಸಗಳಿಂದ ಕಾಮಕ್ರೋಧಾದಿ ಮನೋವೃತ್ತಿಗಳನ್ನು ಮಾತ್ರ ತ್ಯಜಿಸಬೇಕು. ಸಂಸಾರಸಾಗರವನ್ನು ದಾಟಲೆಳಸುವವರು ಯಾವಾಗಲೂ ಸಾತ್ತ್ವಿಕವೃತ್ತಿಗಳನ್ನೇ ಅವಲಂಬಿಸಬೇಕು.

೬೬–೬೮. ಇನ್ನು ತ್ರಿಗುಣಗಳ ಲಕ್ಷಣಗಳನ್ನು ಸೂಕ್ಷ್ಮವಾಗಿ ನಿರೂಪಿಸುವೆನು. ಶಾಸ್ತ್ರಪಠನ, ಅದರಿಂದುಂಟಾದ ನಿತ್ಯಾನಿತ್ಯವಿವೇಕ, ಶೌಚ, ಇಂದ್ರಿಯನಿಗ್ರಹ, ಧರ್ಮಮಾರ್ಗದಲ್ಲಿ ಪ್ರವೃತ್ತಿ, ತನ್ನ ಸ್ವರೂಪದ ಅನುಸಂಧಾನ— ಇವೆಲ್ಲ ಸಾತ್ತ್ವಿಕಗುಣದ ಲಕ್ಷಣಗಳಾಗಿರುವುವು. ಅನ್ಯಾಯದಿಂದ ದ್ರವ್ಯಾರ್ಜನೆ, ಆಲಸ್ಯ, ನಾಸ್ತಿಕವಾದ, ಕ್ರೂರವರ್ತನೆ, ಯಾಚನೆ— ಇವೇ ಮುಂತಾದುವು ತಾಮಸಗುಣದ ಲಕ್ಷಣಗಳೆನಿಸುವುವು.

ತಸ್ಮಾದ್ಬುದ್ಧಿಮುಖ್ಯೈಸ್ತ್ವೇತೈಃ ಸಾತ್ತ್ವಿಕೈರ್ದೇವತಾಂ ಭಜೇತ್ ।
ರಾಜಸೈರ್ಮಾನವತ್ವಂ ಚ ತಾಮಸೈಃ ಸ್ಥಾಣುಯೋನಿತಾ ॥ ೬೯ ॥
ಬುದ್ಧ್ಯಾದ್ಯೈರೇವ ಮುಕ್ತಿಃ ಸ್ಯಾದೇತೈರೇವ ಚ ಯಾತನಾ ॥ ೭೦ ॥
ಅಮೀಷಾಂ ಚಾಪ್ಯಭಾವೇ ವೈ ನ ಕಿಂಚಿದುಪಪದ್ಯತೇ ।
ಕಲಾದೋ ಹಿ ಕಲಾದೀನಾಂ ಸುವರ್ಣಂ ಶೋಧಯೇದ್ಯಥಾ ।
ತಥಾ ರಜಸ್ತಮಶ್ಚೈವ ಸಂಶೋಧ್ಯೇ ಸಾತ್ತ್ವಿಕೈರ್ಗುಣೈಃ ॥ ೭೧ ॥
ಅಸ್ಮಾದೇವ ಗುಣಾನಾಂ ಚ ಸಮವಾಯಾದನಾದಿಜಾತ್ ।
ಸುಖಿನೋ ದುಃಖಿನಶ್ಚೈವ ಪ್ರಾಣಿನಃ ಶಾಸ್ತ್ರದರ್ಶಿನಃ ॥ ೭೨ ॥
ಅಷ್ಟಾವಿಂಶತಿಲಕ್ಷೈಶ್ಚ ಗುಣಮೇಕೈಕಮೀಶ್ವರಃ ।
ವ್ಯಭಜಚ್ಚತುರಾಶೀತಿಲಕ್ಷಾಸ್ತಾ ಜೀವಯೋನಯಃ ॥ ೭೩ ॥
ಸಕಾಶಾನ್ಮನಸಸ್ತದ್ವದಾತ್ಮನಃ ಪ್ರಭವಂತಿ ಹಿ ।
ಈಶ್ವರಾಂಶಾಶ್ಚ ತೇ ಸರ್ವೇ ಮೋಹಿತಾಃ ಪ್ರಾಕೃತೈರ್ಗುಣೈಃ ॥ ೭೪ ॥

---

೬೯. ಆದುದರಿಂದ ಸಾತ್ತ್ವಿಕಗಳಾದ ಬುದ್ಧಿ ಮೊದಲಾದುವುಗಳಿಂದ ದೇವಲೋಕಗಳು ಪ್ರಾಪ್ತವಾಗುವುವು. ರಾಜಸ ಕ್ರಿಯೆಗಳ ಪರಿಣಾಮವಾಗಿ ಮನುಷ್ಯ ಜನ್ಮವೂ, ತಾಮಸ ಗುಣದಿಂದ ಸ್ಥಾವರಾದಿ ನೀಚ ಜನ್ಮವೂ ಲಭಿಸುವುವು.

೭೦. ಮನುಷ್ಯನಿಗೆ ಮೋಕ್ಷವನ್ನು ಕೊಡುವುದಕ್ಕೂ ನರಕಾದಿಗಳಿಗೂ ಬುದ್ಧಿಯೇ ಮುಖ್ಯ ಕಾರಣವಾಗಿರುವುದು.

೭೧. ಬುದ್ಧೀಂದ್ರಿಯಾದಿಗಳೇ ಇಲ್ಲದಿದ್ದಲ್ಲಿ ಯಾವುದನ್ನೂ ಹೊಂದಬೇಕೆಂಬ ವ್ಯವಹಾರವೇ ಇರುವುದಿಲ್ಲವು. ಅಕ್ಕಸಾಲಿಗನು ಚಿನ್ನವನ್ನು ಪುಟವಿಟ್ಟು ಶುದ್ಧಿಮಾಡುವಂತೆ ಮನುಷ್ಯನು ತನ್ನ ಸಾತ್ತ್ವಿಕಗುಣದಿಂದ ರಾಜಸ ತಾಮಸ ಗುಣಗಳನ್ನು ಶೋಧನೆ ಮಾಡಬೇಕು.

೭೨. ಅನಾದಿಕಾಲದಿಂದ ನಡೆದುಬರುತ್ತಿರುವ ಈ ತ್ರಿಗುಣಗಳ ಸಮವಾಯದ ಪರಿಣಾಮವಾಗಿ ಶಾಸ್ತ್ರಜ್ಞರಾದ ಮನುಷ್ಯರೂ ಕೂಡ ಸುಖದುಃಖಗಳನ್ನನುಭವಿಸುವರು.

೭೩. ಪರಮೇಶ್ವರನು ಒಂದೊಂದು ಗುಣವನ್ನೂ ಇಪ್ಪತ್ತೆಂಟು ಲಕ್ಷ ಭಾಗಗಳನ್ನಾಗಿ ವಿಭಜಿಸಿ ಎಂಬತ್ತುನಾಲ್ಕು ಲಕ್ಷ ಜೀವರಾಶಿಗಳನ್ನು ಸೃಷ್ಟಿ ಮಾಡಿರುವನು.

೭೪. ಆದುದರಿಂದ ಪರಮಾತ್ಮನ ಮನಸ್ಸಿನ ದೆಸೆಯಿಂದಲೇ ಹುಟ್ಟಿದವರಾಗಿ ಜೀವಾತ್ಮರು ಎಲ್ಲರೂ ಪರಮೇಶ್ವರನ ಅಂಶಭೂತರೇ ಆದರೂ, ಪ್ರಕೃತಿಗೆ ಸಂಬಂಧಪಟ್ಟ ತ್ರಿಗುಣಗಳಿಂದ ಮೋಹಕ್ಕೊಳಗಾಗಿರುವರು.

ಕ್ಲೇಶಾನಾಸಾದಯಂತ್ಯೇವ ಯಥೈವಾಧಿಕೃತಾ ವಿಭೋಃ ॥ ೭೫ ॥
ಅನ್ನಾನಾಂ ಪಯಸಾಂ ಚಾಪಿ ಜೀವಾನಾಂ ಚಾಥ ಶ್ರೇಯಸೇ ।
ಮಾನುಷ್ಯಮಾಹುಸ್ತತ್ತ್ವಜ್ಞಾಃ ಶಿವಭಾವೇನ ಭಾವಿತಂ ॥ ೭೬ ॥

ನಂದಭದ್ರ ಉವಾಚ:—

ಏವಮೇತತ್ಕಿಂ ತು ಭೂಯಃ ಪ್ರಕ್ಷ್ಯಾಮ್ಯೇತನ್ಮಹಾಮತೇ ।
ಈಶ್ವರಾಃ ಸರ್ವದಾತಾರಃ ಪೂಜ್ಯಂತೇ ಯೈಶ್ಚ ದೇವತಾಃ ।
ಸ್ವಭಕ್ತಾಂಸ್ತಾನ್ನ ದುಃಖೇಭ್ಯಃ ಕಸ್ಮಾದ್ರಕ್ಷಂತಿ ಮಾನವಾನ್ ॥ ೭೭ ॥
ವಿಶೇಷಾತ್ಕೇಽಪಿ ದೃಶ್ಯಂತೇ ದುಃಖಮಗ್ನಾಃ ಸುರಾನ್ರತಾಃ ॥ ೭೮ ॥
ಇತಿ ಮೇ ಮುಹ್ಯತೇ ಬುದ್ಧಿಸ್ತ್ವಂ ವಾ ಕಿಂ ಬಾಲ ಮನ್ಯಸೇ ॥ ೭೯ ॥

ಬಾಲ ಉವಾಚ:—

ಅಶುಚಿಶ್ಚ ಶುಚಿಶ್ಚಾಪಿ ದೇವಭಕ್ತೋ ದ್ವಿಧಾ ಸ್ಮೃತಃ ।
ಕರ್ಮಣಾ ಮನಸಾ ವಾಚಾ ತದ್ರತೋ ಭಕ್ತ ಉಚ್ಯತೇ ॥ ೮೦ ॥

---

೭೫–೭೬. ಹೇಗೆ ಸ್ವಾಮಿಯ ಅಧೀನದಲ್ಲಿರುವ ಅಧಿಕಾರಿಗಳು ಕಷ್ಟ ಪಡುವರೊ, ಹಾಗೆಯೇ ಜೀವರೂ ಅನ್ನಾಹಾರಗಳಿಗಾಗಿಯೂ, ಮೋಕ್ಷಸಾಧನೆಗಾಗಿಯೂ ಕ್ಲೇಶಪಡುವರು. ತತ್ತ್ವಜ್ಞರಾದವರು ಸಕಲ ಜೀವರಾಶಿಗಳಲ್ಲಿಯೂ ಉತ್ತಮರಾದ ಮನುಷ್ಯರನ್ನೇ ಶಿವಭಾವವನ್ನು ಹೊಂದಿದವರನ್ನಾಗಿ ಹೇಳುವರು.''

೭೭. ನಂದಭದ್ರನು ಹೇಳುತ್ತಾನೆ:—'' ಎಲೈ ಮಹಾಪ್ರಾಜ್ಞನೆ! ನೀನು ಈವರೆಗೆ ಹೇಳಿದುದೆಲ್ಲವೂ ಯಥಾರ್ಥವಾದುದು. ಆದರೆ ಮತ್ತೊಂದು ವಿಷಯವನ್ನು ಕೇಳುವೆನು. ದೇವತೆಗಳು ಸರ್ವಶಕ್ತರೂ, ಈ ಲೋಕದಲ್ಲಿ ಮಾನವರು ಮಾಡಿದ ಸುಕೃತ ದುಷ್ಕೃತಗಳಿಗೆ ಫಲದಾಯಕರೂ ಆಗಿರುವುದರಿಂದ ಎಲ್ಲರಿಂದಲೂ ಪೂಜಿಸಲ್ಪಡುವರಲ್ಲವೆ! ಹಾಗಾದರೂ ಕೂಡ ಆ ದೇವತೆಗಳು ತಮ್ಮ ಭಕ್ತರಾದ ಮನುಷ್ಯರನ್ನು ದುಃಖಗಳಿಂದೇಕೆ ಕಾಪಾಡುವುದಿಲ್ಲ ?

೭೮–೭೯. ಕೆಲವರು ದೇವತಾಪೂಜಾದಿಗಳನ್ನು ವಿಶೇಷವಾಗಿ ಮಾಡುತ್ತಿದ್ದರೂ ಕೂಡ ದುಃಖದಲ್ಲಿ ಮುಳುಗಿರುವುದನ್ನು ನಾವೇ ಕಣ್ಣಾರ ಕಾಣುತ್ತಿರುವೆವು. ಇದರಿಂದ ನನ್ನ ಮನಸ್ಸೂ ಸತ್ಯಾಂಶವನ್ನರಿಯದೆ ಮೋಹಗೊಂಡಿರುವುದು. ಎಲೈ ಬಾಲಕನೆ! ಈ ವಿಷಯದಲ್ಲಿ ನಿನ್ನ ಅಭಿಪ್ರಾಯವೇನು ?''

೮೦. ಬಾಲಕನು ಹೇಳುತ್ತಾನೆ:— ಅಶುಚಿಯೆಂದೂ, ಶುಚಿಯೆಂದೂ ದೈವಭಕ್ತರು ಎರಡು ಬಗೆ. ಕಾಯದಿಂದಲೂ, ಮನಸ್ಸಿನಿಂದಲೂ, ಮಾತುಗಳಿಂದಲೂ ಶಿವನನ್ನೇ ನಂಬಿರುವವನು ಭಕ್ತನೆನಿಸುವನು.

**ಅಶುಚಿರ್ದೇವತಾಶ್ಚೈವ ಯದಾ ಪೂಜಯತೇ ನರಃ ।**
**ತದಾ ಭೂತಾನ್ಯಾವಿಶಂತಿ ಸ ಚ ಮುಹ್ಯತಿ ತತ್ಕ್ಷಣಾತ್ ॥ ೮೧ ॥**
**ವಿಮೂಢಶ್ಚಾಪ್ಯಕಾರ್ಯಾಣಿ ತಾನಿ ತಾನಿ ನಿಷೇವತೇ ।**
**ತತೋ ವಿನಶ್ಯತಿ ಕ್ಷಿಪ್ರಂ ನಾಶುಚಿಃ ಪೂಜಯೇತ್ತತಃ ॥**
**ಶುಚಿರ್ವಾಭ್ಯರ್ಚಯೇದ್ಯಶ್ಚ ತಸ್ಯ ಚೇದಶುಭಂ ಭವೇತ್ ।**
**ತಸ್ಯ ಪೂರ್ವಕೃತಂ ವ್ಯಕ್ತಂ ಕರ್ಮಣಾಂ ಕೋಟಿಮುಚ್ಯತೇ ॥ ೮೨ ॥**
**ಮಹೇಶ್ವರೋ ಬ್ರಹ್ಮಹತ್ಯಾ ಭಯಾದ್ಯತ್ರ ತತಸ್ತತಃ ।**
**ಸಸ್ನೌ ತೀರ್ಥೇಷು ಕಸ್ಮಾಚ್ಚ ಇತರೋ ಮುಚ್ಯತೇ ಕಥಂ ॥ ೮೩ ॥**
**ಅಂಬರೀಷಸುತಾಂ ಹೃತ್ವಾ ಪರ್ವತಾನ್ನಾರದಾತ್ತಥಾ ।**
**ಸೀತಾಪಹಾರಮಾಪೇದೇ ರಾಮೋಽನ್ಯೋ ಮುಚ್ಯತೇ ಕಥಂ ॥ ೮೪ ॥**
**ಬ್ರಹ್ಮಾಪಿ ಶಿರಸಶ್ಛೇದಂ ಕಾಮಯಿತ್ವಾ ಸುತಾಮಗಾತ್ ।**
**ಇಂದ್ರಚಂದ್ರ ರವಿ ವಿಷ್ಣುಪ್ರಮುಖಾಃ ಪ್ರಾಪ್ನುಯುಃ ಕೃತಂ ॥ ೮೫ ॥**

---

೮೧-೮೨. ಅಶುಚಿಯಾದ ಮನುಷ್ಯನು ಯಾವಾಗ ದೇವತೆಗಳನ್ನು ಪೂಜಿಸುವನೊ, ಆಗ ಅವನಲ್ಲಿ ಭೂತಗಳ ಆವೇಶವುಂಟಾಗಿ ಅವನು ತಕ್ಷಣವೇ ಮೋಹಗೊಳ್ಳುವನು. ಇಂತು ಮೋಹಗೊಂಡವನಾಗಿ ಪದೇ ಪದೇ ಅಕಾರ್ಯಗಳಲ್ಲಿಯೇ ನಿರತನಾಗಿರುವನು. ಅದರಿಂದ ಶೀಘ್ರದಲ್ಲಿಯೇ ನಾಶವನ್ನೂ ಹೊಂದುವನು. ಆದುದರಿಂದ ಅಶುಚಿಯಾದವನು ಎಂದಿಗೂ ಶಿವಪೂಜೆಯನ್ನು ಮಾಡಬಾರದು. ಶುಚಿಯಾದವನು ಭಕ್ತಿಯಿಂದ ಪೂಜೆಯನ್ನು ಮಾಡಲು ಅವನು ಪೂರ್ವದಲ್ಲಿ ಮಾಡಿದ ಕೋಟಿ ಪಾಪಕರ್ಮಗಳಿದ್ದರೂ ಸಹ ಖಂಡಿತವಾಗಿಯೂ ಮೋಕ್ಷವನ್ನು ಪಡೆಯುವನು.

೮೩. ಮಹೇಶ್ವರನೂ ಕೂಡ ಬ್ರಹ್ಮಹತ್ಯೆಯ ಭಯದಿಂದ ಲೋಕವನ್ನೆಲ್ಲ ಸುತ್ತಿ ಈ ಕ್ಷೇತ್ರದ ತೀರ್ಥಗಳಲ್ಲಿ ಸ್ನಾನಮಾಡಿದನು. ಹೀಗಿರುವಲ್ಲಿ ಇತರರು ಹೇಗೆ ಮತ್ತು ಏತಕ್ಕೆ ಕರ್ಮಫಲಗಳಿಂದ ಮುಕ್ತರಾಗುವರು ?

೮೪. ವಿಷ್ಣುವು ಪರ್ವತ ಮತ್ತು ನಾರದರ ವ್ಯಾಜ್ಯದ ಇತ್ಯರ್ಥವನ್ನು ಮಾಡಬಂದು ಅಂಬರೀಷನ ಮಗಳಾದ ಶ್ರೀಮತಿಯನ್ನು ತಾನೇ ಸ್ವೀಕರಿಸಿದುದರಿಂದ ರಾಮಾವತಾರದಲ್ಲಿ ಸೀತಾಪಹರಣದ ದುಃಖವನ್ನನುಭವಿಸಬೇಕಾಯಿತು. ಮಿಕ್ಕ ನರರು ದುಃಖದಿಂದ ಹೇಗೆತಾನೇ ತಪ್ಪಿಸಿಕೊಳ್ಳಲು ಶಕ್ತರಾಗುವರು ?

೮೫. ಬ್ರಹ್ಮನೂ ಕೂಡ ಮಗಳಾದ ಸರಸ್ವತಿಯನ್ನು ಕಾಮಿಸಿದ ದುಷ್ಕರ್ಮದ ಫಲವಾಗಿ ಶಿರಶ್ಛೇದವನ್ನನುಭವಿಸಬೇಕಾಯಿತು. ಮಹೇಂದ್ರ, ಚಂದ್ರ, ಸೂರ್ಯ, ಮಹಾವಿಷ್ಣು ಇವರೇ ಮೊದಲಾದವರೂ ಕೂಡ ತಮ್ಮ ಕರ್ಮಗಳ ಫಲವನ್ನನುಭವಿಸಿಯೇ ಇರುವರು.

ತಸ್ಮಾದವಶ್ಯಂ ಚ ಕೃತಂ ಭೋಜ್ಯಮೇವ ನರೈಃ ಸದಾ ।
ಮುಚ್ಯತೇ ಕೋಽಪಿ ಸ್ವಕೃತಾನ್ನೈವೇತಿ ಶ್ರುತಿನಿರ್ಣಯಃ ॥ ೮೬ ॥
ಕಿಂತು ದೇವಪ್ರಸಾದೇನ ಲಭ್ಯಮೇಕಂ ಸುರವ್ರತೈಃ ।
ಬಹುಭಿರ್ಜನ್ಮಭಿರ್ಭೋಜ್ಯಂ ಭುಜ್ಯೇತೈಕೇನ ಜನ್ಮನಾ ॥ ೮೭ ॥
ತಚ್ಚ ಭುಕ್ತ್ವಾ ತತಸ್ತತ್ತ್ವಬೋಧೋ ಭವೇದಿತಿ ವಿನಿಶ್ಚಯಃ ॥ ೮೮ ॥
ಯೇ ತಪ್ಯಂತೇ ಗತೈಃ ಪಾಪೈಃ ಶುಚಯೋ ದೇವತಾವ್ರತಾಃ ।
ಇಹ ತೇ ಪುತ್ರಪೌತ್ರೈಶ್ಚ ಮೋದಂತೇಽಮುತ್ರ ಚೇಹ ಚ ॥ ೮೯ ॥
ತಸ್ಮಾದ್ದೇವಾಃ ಸದಾ ಪೂಜ್ಯಾಃ ಶುಚಿಭಿಃ ಶ್ರದ್ಧಯಾನ್ವಿತೈಃ ।
ಪ್ರಕೃತಿಃ ಶೋಧನೀಯಾ ಚ ಸ್ವವರ್ಣೋದಿತಕರ್ಮಭಿಃ ॥ ೯೦ ॥
ಸ್ವನುಷ್ಠಿತೋಽಪಿ ಧರ್ಮಃ ಸ್ಯಾತ್ಕ್ಲೇಶಾಯೈವ ವಿನಾ ಶಿವಂ ।
ದುರಾಚಾರಸ್ಯ ದೇವೋಽಪಿ ಪ್ರಾಹೇತಿ ಭಗವಾನ್ ಹರಃ ॥ ೯೧ ॥

---

೮೬–೮೭. ಆದುದರಿಂದ ಮನುಷ್ಯರಾದವರೂ ಅವಶ್ಯಕವಾಗಿಯೇ ತಮ್ಮ ಪ್ರಾರಬ್ಧ ಕರ್ಮದ ಫಲವನ್ನನುಭವಿಸಲೇ ಬೇಕು ಯಾವನೂ ತನ್ನ ಕರ್ಮದ ಫಲವನ್ನನುಭವಿಸದೆ ಮುಕ್ತನಾಗಲಾರನೆಂಬುದು ವೇದಗಳ ನಿಶ್ಚಯವಾಗಿರುವುದು. ಹಾಗಾದರೆ ದೇವತಾರ್ಚನೆ ಮೊದಲಾದುವುಗಳನ್ನು ಏಕೆ ಮಾಡಬೇಕೆನ್ನುವೆಯೊ? ಇವುಗಳನ್ನು ಮಾಡಿ ದೇವತೆಗಳ ಅನುಗ್ರಹವನ್ನು ಸಂಪಾದಿಸುವುದರಿಂದ ಒಂದು ಅನುಕೂಲವುಂಟಾಗುವುದು. ಅನೇಕ ಜನ್ಮಗಳಲ್ಲಿ ಅನುಭವಿಸಬೇಕಾದ ಕರ್ಮಫಲಗಳನ್ನು ಒಂದೇ ಜನ್ಮದಲ್ಲಿ ಅನುಭವಿಸಿ ಮುಗಿಸಬಹುದು.

೮೮–೮೯. ಫಲಾನುಭವವಾದ ಮೇಲೆ ತತ್ತ್ವಜ್ಞಾನವುಂಟಾಗುವುದೆಂಬುದೇ ಶಾಸ್ತ್ರನಿಶ್ಚಯವಾಗಿರುವುದು. ಯಾರು ಶುಚಿಯಾಗಿ ದೇವಪೂಜಾದಿಗಳನ್ನು ಮಾಡುತ್ತ ತಮ್ಮ ಪೂರ್ವಕರ್ಮಗಳಿಗೆ ಪಶ್ಚಾತ್ತಾಪಪಡುವರೊ, ಅವರು ಇರುವಲ್ಲಿಯೇ ಪುತ್ರ ಪೌತ್ರಾದಿಗಳಿಂದಲೂ, ಪರದಲ್ಲಿ ಸ್ವರ್ಗಲೋಕಾದಿಗಳಿಂದಲೂ ಸುಖಪಡುವರು.

೯೦. ಆದುದರಿಂದ ಶುಚಿಯಾಗಿ ಶ್ರದ್ಧೆಯಿಂದ ದೇವತೆಗಳನ್ನು ಯಾವಾಗಲೂ ಪೂಜಿಸಬೇಕು. ತಮ್ಮ ತಮ್ಮ ವರ್ಣಾಶ್ರಮಗಳಿಗನುಗುಣವಾದ ಕರ್ಮವನ್ನು ಮಾಡುತ್ತ ತಮ್ಮ ನಿಜಸ್ವರೂಪವನ್ನು ವಿಚಾರಿಸಿ ತಿಳಿಯಬೇಕು.

೯೧. ಧರ್ಮವನ್ನು ಎಷ್ಟೇ ಶ್ರದ್ಧೆಯಿಂದ ಅನುಷ್ಠಾನಮಾಡಿದರೂ ಶಿವಭಕ್ತಿ ರಹಿತವಾದುದಾದರೆ ಕೇವಲ ಶರೀರಕ್ಲೇಶವೆನಿಸುವುದು. ದುರಾಚಾರಸಹಿತನಿಗೆ ದೈವ ಪೂಜೆಯೂ ಕೂಡ ಕೇವಲ ಕಷ್ಟವೆನಿಸುವುದೇ ಹೊರತು ಸತ್ಫಲದಾಯಕವಲ್ಲವೆಂದು ಸರ್ವೇಶ್ವರನಾದ ಶಿವನೇ ಹೇಳಿರುವನು.

ಭೋಕ್ತವ್ಯಂ ಸ್ವಕೃತಂ ತಸ್ಮಾತ್ಪೂಜನೀಯಃ ಸದಾಶಿವಃ ।
ಸ್ವಾಚಾರೇಣ ಪರಿತ್ಯಾಜ್ಯೌ ರಾಗದ್ವೇಷಾವಿದಂ ಪರಂ ॥ ೯೨ ॥

ನಂದಭದ್ರ ಉವಾಚ :—

ಶುದ್ಧಪ್ರಜ್ಞ ಕಿಮೇತಚ್ಚ ಪಾಪಿನೋಽಪಿ ನರಾ ಯದಾ ।
ಮೋದಮಾನಾ ಪ್ರದೃಶ್ಯಂತೇ ದಾರೈರಪಿ ಧನೈರಪಿ ॥ ೯೩ ॥

ಬಾಲ ಉವಾಚ :—

ವ್ಯಕ್ತಂ ತೈಸ್ತಮಸಾ ದತ್ತಂ ದಾನಂ ಪೂರ್ವೇಷು ಜನ್ಮಸು ।
ರಜಸಾ ಪೂಜಿತಃ ಶಂಭುಸ್ತತ್ಪ್ರಾಪ್ತಂ ಸ್ವಕೃತಂ ಚ ತೈಃ ॥ ೯೪ ॥
ಕಿಂತು ಯತ್ತಮಸಾ ಕರ್ಮ ಕೃತಂ ತಸ್ಯ ಪ್ರಭಾವತಃ ।
ಧರ್ಮಾಯ ನ ರತಿರ್ಭೂಯಾತ್ತತಸ್ತೇಷಾಂ ವಿದಾಂವರ ॥ ೯೫ ॥
ಭುಕ್ತ್ವಾ ಪುಣ್ಯಫಲಂ ಯಾತಿ ನರಕಂ ನಾತ್ರ ಸಂಶಯಃ ।
ಅಸ್ಮಿಂಶ್ಚ ಸಂಶಯೇ ಪ್ರೋಕ್ತಂ ಮಾರ್ಕಂಡೇಯೇನ ಶ್ರೂಯತೇ ॥ ೯೬ ॥

---

೯೨. ಆದುದರಿಂದ ಪ್ರತಿಯೊಬ್ಬನೂ ತನ್ನ ಕರ್ಮದ ಫಲವನ್ನು ಅನುಭವಿಸಲೇಬೇಕು. ಸದಾಶಿವನನ್ನು ಪೂಜಿಸಲೇಬೇಕು. ತನ್ನ ಆಚಾರಗಳನ್ನು ನಡೆಸುತ್ತ ರಾಗದ್ವೇಷಗಳನ್ನು ದೂರಮಾಡಬೇಕು. ಇದೇ ಪರಮ ಧರ್ಮವು.''

೯೩. ನಂದಭದ್ರನು ಕೇಳುತ್ತಾನೆ:—''ವಿಶುದ್ಧಜ್ಞಾನವುಳ್ಳ ಬಾಲಕನೆ! ಪಾಪಿಗಳೂ ಕೂಡ ಪತ್ನೀ ಧನಾದಿಗಳನ್ನು ಹೊಂದಿ ಇಲ್ಲಿ ಸುಖಪಡುತ್ತಿರುವುದು ಕಾಣುತ್ತಿರುವುದಲ್ಲ. ಇದಕ್ಕೆ ಕಾರಣವೇನೆಂಬುದನ್ನು ತಿಳಿಸು.''

೯೪. ಬಾಲಕನು ಹೇಳುತ್ತಾನೆ:—''ಕಾರಣವು ಸ್ಪಷ್ಟವಾಗಿಯೇ ಇರುವುದು. ಅವರೆಲ್ಲರೂ ಪೂರ್ವಜನ್ಮಗಳಲ್ಲಿ ತಾಮಸ ದಾನಗಳನ್ನು ಮಾಡಿರುವರು. ಅಲ್ಲದೆ ಪರಶಿವನಿಗೆ ರಾಜಸ ಪೂಜೆಯನ್ನು ಮಾಡಿರುವರು. ಆ ಕರ್ಮಗಳ ಅಲ್ಪ ಭೋಗಗಳನ್ನು ಈ ಜನ್ಮದಲ್ಲಿ ಪಡೆದಿರುವರು.

೯೫. ಆದರೆ ಅವರು ಮಾಡಿದ ಕರ್ಮವು ಕೇವಲ ತಾಮಸವಾದುದರಿಂದ ಅದರ ಫಲವಾಗಿ ಅವರಿಗೆ ಧರ್ಮದಲ್ಲಿ ಆಸಕ್ತಿಯುಂಟಾಗುವುದಿಲ್ಲವೆಂಬುದನ್ನು ಪಂಡಿತೋತ್ತಮನಾದ ನೀನು ತಿಳಿಯಬೇಕು.

೯೬. ಅವರೆಲ್ಲರೂ ತಮ್ಮ ತಮ್ಮ ಯತ್ಕಿಂಚಿತ್ಪುಣ್ಯದ ಫಲವನ್ನೆಲ್ಲ ಇಲ್ಲಿಯೇ ಅನುಭವಿಸಿ ಬಳಿಕ ನರಕವನ್ನು ಹೊಂದುವರೆಂಬುದರಲ್ಲಿ ಸಂಶಯವಿಲ್ಲ. ಈ ವಿಷಯದಲ್ಲಿ ಹಿಂದೆ ಮಾರ್ಕಂಡೇಯ ಮಹಾಮುನಿಯು ಹೀಗೆಂದನೆಂಬುದನ್ನು ಕೇಳಿರುವೆವು.

ಇಹೈವೈಕಸ್ಯ ನಾಮುತ್ರ ಅಮುತ್ರೈಕಸ್ಯ ನೋ ಇಹ ।
ಇಹ ಚಾಮುತ್ರ ಚೈಕಸ್ಯ ನಾಮುತ್ರೈಕಸ್ಯ ನೋ ಇಹ ॥ ೯೭ ॥
ಪೂರ್ವೋಪಾತ್ತಂ ಭವೇತ್ಪುಣ್ಯಂ ಭುಕ್ತಿರ್ನೈವಾರ್ಜಯಂತ್ಯಪಿ ।
ಇಹ ಭೋಗಃ ಸ ವೈ ಪ್ರೋಕ್ತೋ ದುರ್ಭಗಸ್ಯಾಲ್ಪಮೇಧಸಃ ॥ ೯೮ ॥
ಪೂರ್ವೋಪಾತ್ತಂ ಯಸ್ಯ ನಾಸ್ತಿ ತಪೋಭಿಶ್ಚಾರ್ಜಯತ್ಯಪಿ ।
ಪರಲೋಕೇ ತಸ್ಯ ಭೋಗೋ ಧೀಮತಃ ಸ ಕ್ರಿಯಾತ್ಸ್ಫುಟಂ ॥ ೯೯ ॥
ಪೂರ್ವೋಪಾತ್ತಂ ಯಸ್ಯ ನಾಸ್ತಿ ಪುಣ್ಯಂ ಚೇಹಾಪಿ ನಾರ್ಜಯೇತ್ ।
ತತಶ್ಚೇಹಾಮುತ್ರ ವಾಪಿ ಭೋ ಧಿಕ್ತಂ ಚ ನರಾಧಮಂ ॥ ೧೦೦ ॥
ಇತಿ ಜ್ಞಾತ್ವಾ ಮಹಾಭಾಗ ತ್ಯಕ್ತ್ವಾ ಶಲ್ಯಾನಿ ಕೃತ್ಸ್ನಶಃ ।
ಭಜ ರುದ್ರಂ ವರ್ಣಧರ್ಮಂ ಪಾಲಯಾಸ್ಮಾತ್ಪರಂ ನ ಹಿ ॥ ೧೦೧ ॥
ಯೋ ಹಿ ನಷ್ಟೇಷ್ವಭೀಷ್ಟೇಷು ಪ್ರಾಪ್ತೇಷ್ವಪಿ ಚ ಶೋಚತಿ ।
ತೃಪ್ಯೇತ ವಾ ಭವೇದ್ಬಂಧೋ ನಿಶ್ಚಿತಂ ಸೋಽನ್ಯಜನ್ಮನಃ ॥ ೧೦೨ ॥

---

೯೭. 'ಒಬ್ಬನಿಗೆ ಇಹದಲ್ಲಿಯೇ ಹೊರತು ಪರದಲ್ಲಿಲ್ಲ; ಮತ್ತೊಬ್ಬನಿಗೆ ಪರದಲ್ಲಿಯೇ ಹೊರತು ಇಹದಲ್ಲಿಲ್ಲ. ಮಗದೊಬ್ಬನಿಗೆ ಇಹದಲ್ಲಿಯೂ ಪರದಲ್ಲಿಯೂ ಉಂಟು; ಬೇರೊಬ್ಬನಿಗೆ ಇಹದಲ್ಲಿಯೂ ಇಲ್ಲ; ಪರದಲ್ಲಿಯೂ ಇಲ್ಲ.'

೯೮. ಪಾಪಿಯೂ, ಬುದ್ಧಿಹೀನನೂ ಆದ ಯಾವನಿಗೆ ಪೂರ್ವದಲ್ಲಿ ಸಂಪಾದಿಸಿದ ಪುಣ್ಯವು ಇಲ್ಲಿ ಫಲವನ್ನೀಯುವುದೊ, ಯಾವನು ಹೊಸದಾಗಿ ತಪಸ್ಸಿನಿಂದ ಪುಣ್ಯವನ್ನು ಗಳಿಸುವುದಿಲ್ಲವೊ, ಅವನೇ ಮೊದಲನೆಯವನು.

೯೯. ಯಾವನಿಗೆ ಪೂರ್ವೋಪಾರ್ಜಿತ ಪುಣ್ಯವಿಲ್ಲದೆ ಈ ಜನ್ಮದಲ್ಲಿ ಮಾತ್ರ ತಪಸ್ಸಿನಿಂದ ಪುಣ್ಯವನ್ನು ಶೇಖರಿಸುವನೊ, ಅವನಿಗೆ ತನ್ನ ಬುದ್ಧಿಯ ಫಲವಾಗಿ ಪರಲೋಕದಲ್ಲಿ ತನ್ನ ಶುಭಕರ್ಮದ ಫಲವು ಲಭಿಸುವುದೆಂಬುದು ಸ್ಪಷ್ಟವಾಗಿಯೇ ಇರುವುದು.

೧೦೦. ಯಾವನಿಗೆ ಪೂರ್ವಾರ್ಜಿತ ಪುಣ್ಯವೂ ಇಲ್ಲವೊ, ಯಾವನು ಇಲ್ಲಿಯೂ ಸಾಧನೆಯನ್ನು ಮಾಡಲೆಳಸುವುದಿಲ್ಲವೊ, ಅವನಿಗೆ ಇಹದಲ್ಲಿಯೂ ಸುಖವಿಲ್ಲ; ಪರದಲ್ಲಿಯೂ ಇಲ್ಲ. ಆ ಮನುಷ್ಯಾಧಮನಿಗೆ ಧಿಕ್ಕಾರವಿರಲಿ.

೧೦೧–೧೦೨. ಎಲೈ ಮಹಾತ್ಮನೆ! ಇಂತು ತತ್ತ್ವವನ್ನು ತಿಳಿದುಕೊಂಡು ಮನಸ್ಸಿನ ಶಲ್ಯರೂಪಗಳಾದ ಸಂಶಯಗಳನ್ನೆಲ್ಲ ದೂರಕ್ಕೆ ತಳ್ಳಿ ಶಿವನನ್ನು ಭಜಿಸುತ್ತ ವರ್ಣಾಶ್ರಮ ಧರ್ಮಗಳನ್ನು ನಡೆಸುವವನಾಗು. ಇದಕ್ಕಿಂತ ಉತ್ತಮವಾದುದು ಬೇರೊಂದಿಲ್ಲವು. ಯಾವನು ನಷ್ಟಪದಾರ್ಥಗಳಿಗಾಗಿ ದುಃಖಿಸುವನೊ, ಲಭಿಸಿದವುಗಳಲ್ಲಿ ಸಂತೋಷಗೊಳ್ಳುವನೊ, ಅವನಿಗೆ ಆ ರಾಗ ದ್ವೇಷಗಳೇ ಮತ್ತೊಂದು ಜನ್ಮಕ್ಕೆ ಬಂಧಕಗಳಾಗುವುವೆಂಬುದು ನಿಶ್ಚಯವು.''

ನಂದಭದ್ರ ಉವಾಚ:—

**ನಮಸ್ತುಭ್ಯಮಬಾಲಾಯ ಬಾಲರೂಪಾಯ ಧೀಮತೇ ।**
**ಕೋ ಭವಾಂಸ್ತತ್ತ್ವತೋ ವೇತ್ತುಮಿಚ್ಛಾಮಿ ತ್ವಾಂ ಶುಭಸ್ಮಿತಮ್ ॥೧೦೩॥**
**ಬಹವೋಽಪಿ ಮಯಾ ವೃದ್ಧಾ ದೃಷ್ಟಾಶ್ಚೋಪಾಸಿತಾಃ ಸದಾ ।**
**ತೇಷಾಮೀದೃಶಕಾ ಬುದ್ಧಿರ್ನ ದೃಷ್ಟಾ ನ ಶ್ರುತಾ ಮಯಾ ॥ ೧೦೪ ॥**
**ಯೇನ ಮೇ ಜನ್ಮಸಂದೇಹಾ ನಾಶಿತಾ ಲೀಲಯೈವ ಚ ।**
**ತಸ್ಮಾತ್ಸಾಮಾನ್ಯರೂಪಸ್ತ್ವಂ ನಿಶ್ಚಿತಂ ನ ಮತಂ ಮಮ ॥ ೧೦೫ ॥**

ಬಾಲ ಉವಾಚ:—

**ಮಹದೇತತ್ಸಮಾಖ್ಯೇಯಮೇಕಾಗ್ರಃ ಶೃಣು ತತ್ತ್ವತಃ ।**
**ಇತಃ ಸಪ್ತಾಧಿಕೇ ಚಾಪಿ ಸಪ್ತಮೇ ಜನ್ಮನಿ ತ್ವಹಮ್ ।**
**ವೈದಿಶೇ ನಗರೇ ವಿಪ್ರೋ ನಾಮ್ನಾಸಂ ಧರ್ಮಜಾಲಿಕಃ ॥ ೧೦೬ ॥**
**ವೇದವೇದಾಂಗತತ್ತ್ವಜ್ಞಃ ಸ್ಮೃತಿಶಾಸ್ತ್ರಾರ್ಥವಿದ್ವರಃ ।**
**ವ್ಯಾಖ್ಯಾತಾ ಧರ್ಮಶಾಸ್ತ್ರಾಣಾಂ ಯಥಾ ಸಾಕ್ಷಾದ್ಬೃಹಸ್ಪತಿಃ ॥ ೧೦೭ ॥**

---

೧೦೩. ನಂದಭದ್ರನು ಕೇಳುತ್ತಾನೆ:—"ಅಯ್ಯಾ! ಬಾಲರೂಪನಾದರೂ ಜ್ಞಾನವೃದ್ಧನಾದ ನಿನಗೆ ಇದೋ ನಮಸ್ಕರಿಸುವೆನು. ನೀನು ಯಾರು? ಶುಭ ದರ್ಶನನಾದ ನೀನಾರೆಂಬುದನ್ನು ನಿಜವಾಗಿ ತಿಳಿಯಲು ನನಗೆ ಬಹಳ ಕುತೂಹಲ ವಾಗಿರುವುದು.

೧೦೪. ಬಹಳ ಕಾಲದಿಂದಲೂ ಅನೇಕ ವೃದ್ಧರನ್ನು ನಾನು ನೋಡಿರು ವೆನು; ಸೇವಿಸಿರುವೆನು. ಯಾರಲ್ಲಿಯೂ ಇಂತಹ ಅಸಾಧಾರಣವಾದ ಬುದ್ಧಿ ಯನ್ನು ನಾನು ಕಂಡುದಾಗಲಿ ಕೇಳಿದುದಾಗಲಿ ಇಲ್ಲವು.

೧೦೫. ನಿನ್ನಿಂದ ಬಹು ಸುಲಭವಾಗಿ ಆಜನ್ಮಪ್ರಭೃತಿ ನನಗಿದ್ದ ಸಂಶಯ ಗಳೆಲ್ಲವೂ ನಾಶಗೊಳಿಸಲ್ಪಟ್ಟವು. ಆದುದರಿಂದ ನೀನು ಸಾಧಾರಣ ಮನುಷ್ಯ ನಲ್ಲವೆಂದು ನನ್ನ ಮನಸ್ಸಿಗೆ ತೋರುತ್ತಿರುವುದು."

೧೦೬. ಬಾಲಕನು ಹೇಳುತ್ತಾನೆ:—"ನನ್ನ ಚರಿತ್ರೆಯಲ್ಲಿ ಹೇಳಬೇಕಾದ ಮಹತ್ತರವಾದ ವಿಷಯವಿರುವುದು. ಏಕಾಗ್ರಚಿತ್ತನಾಗಿ ಕೇಳುವವನಾಗು. ಯಥಾರ್ಥವನ್ನು ಹೇಳುವೆನು. ಇದಕ್ಕೆ ಹಿಂದಿನ ಹದಿನಾಲ್ಕನೆಯ ಜನ್ಮದಲ್ಲಿ ನಾನು ವಿದಿಶಾನಗರಿಯಲ್ಲಿ ಧರ್ಮಜಾಲಿಕನೆಂಬ ಬ್ರಾಹ್ಮಣನಾಗಿ ಹುಟ್ಟಿದ್ದೆನು.

೧೦೭. ನಾಲ್ಕು ವೇದಗಳ ಮತ್ತು ಆರು ವೇದಾಂಗಗಳ ರಹಸ್ಯವನ್ನರಿತವ ನಾಗಿ, ಸಕಲ ಸ್ಮೃತಿಗಳು ಮತ್ತು ಶಾಸ್ತ್ರಗಳಲ್ಲಿ ನಿಪುಣನೆನಿಸಿಕೊಂಡು, ಸಾಕ್ಷಾ ತ್ತಾಗಿ ಬೃಹಸ್ಪತಿಗೆ ಸಮನೆನಿಸಿ ಸಕಲ ಧರ್ಮಶಾಸ್ತ್ರಗಳಿಗೂ ವ್ಯಾಖ್ಯಾನಗಳನ್ನು ರಚಿಸಿದೆನು.

ಕಿಂ ತ್ವಹಂ ವಿವಿಧಾನ್ಧರ್ಮಾಂಲ್ಲೋಕಾನಾಂ ವರ್ಣಯೇ ಭೃಶಂ ।
ಸ್ವಯಂ ಚಾತಿದುರಾಚಾರಃ ಪಾಪಿನಾಮಪಿ ಪಾಪಿರಾಟ್ ॥ ೧೦೮ ॥
ಮಾಂಸಾಶೀ ಮದ್ಯಸೇವೀ ಚ ಪರದಾರರತಃ ಸದಾ ॥ ೧೦೯ ॥
ಅಸತ್ಯಭಾಷೀ ದಂಭೀ ಚ ಸದಾಧರ್ಮಧ್ವಜೀ ಖಲಃ ।
ಲೋಭೀ ದುರಾತ್ಮಾ ಕಥಕೋ ನ ಕರ್ತಾ ಕರ್ಹಿಚಿತ್ಕ್ವಚಿತ್ ॥ ೧೧೦ ॥
ಯಸ್ಮಾಜ್ಜಾಲಿಕವಜ್ಜಾಲಂ ಲೋಕೇಭ್ಯೋಽಹಂ ಕ್ಷಿಪಾಮಿ ಚ ।
ತತ್ತ್ವಜ್ಞಾ ಮಾಂ ತತಃ ಪ್ರಾಹುರ್ಧರ್ಮಜಾಲಿಕಮಿತ್ಯುತ ॥ ೧೧೧ ॥
ಸೋಽಹಂ ತೈರ್ಬಹುಭಿಶ್ಚೀರ್ಣೈಃ ಪಾತಕೈರಂತ ಆಗತೇ ।
ಮೃತೋ ಗತೋ ಯಮಸ್ಥಾನಂ ಪಾತಿತಃ ಕೂಟಶಾಲ್ಮಲೀಂ ॥ ೧೧೨ ॥
ಯಮದೂತೈಃ ತತಃ ಕೃಷ್ಟಃ ಸ್ಮಾರ್ಯಮಾಣಃ ಸ್ವಚೇಷ್ಟಿತಂ ।
ಖಡ್ಗೈಶ್ಚ ಕೃತ್ಯಮಾನೋಽಹಂ ಜೀವಾಮಿ ಪ್ರಮ್ರಿಯಾಮಿ ಚ ।
ಆತ್ಮಾನಂ ಬಹುಧಾ ನಿಂದನ್ ಶಾಶ್ವತೀರ್ನ್ಯವಸಂ ಸಮಾಃ ॥ ೧೧೩ ॥

---

೧೦೮. ಆದರೆ ನಾನು ಜನರಿಗೆ ಮಾತ್ರ ವಿಧವಿಧಗಳಾದ ಧರ್ಮಗಳನ್ನು ವಿಸ್ತರಿಸಿ ತಿಳಿಸುತ್ತಿದ್ದೇನೇ ಹೊರತು, ನಾನು ಮಾತ್ರ ಅತ್ಯಂತ ದುರಾಚಾರಿಯೂ ಪಾಪಿಗಳಲ್ಲೆಲ್ಲ ಅಗ್ರೇಸರನೂ ಆಗಿದ್ದೆನು.

೧೦೯–೧೧೦. ಯಾವಾಗಲೂ ಮಾಂಸವನ್ನು ತಿನ್ನುವುದು, ಮದ್ಯವನ್ನು ಕುಡಿಯುವುದು, ಪರಸ್ತ್ರೀಯರನ್ನು ಬಲಾತ್ಕರಿಸುವುದು, ಸುಳ್ಳನ್ನು ಹೇಳುವುದು, ಅಹಂಕಾರದಿಂದಿರುವುದು, ಧರ್ಮಿಷ್ಠನಂತೆ ನಟಿಸುವುದು, ಕ್ರೂರನಾಗಿರುವುದು, ಧನದ ಲೋಭ, ದೌರಾತ್ಮ್ಯ, ಪ್ರತಿಯೊಂದು ಧರ್ಮವನ್ನೂ ಹೇಳುವುದೇ ಹೊರತು ಅನುಷ್ಠಾನಮಾಡದಿರುವುದು–ಇವುಗಳೇ ನನಗೆ ಸ್ವಭಾವಗಳಾಗಿದ್ದುವು.

೧೧೧. ಬೇಡರಂತೆ ನಾನು ಜನರನ್ನು ಮೋಹಗೊಳಿಸುವುದಕ್ಕಾಗಿ ಧರ್ಮವೆಂಬ ಬಲೆಯನ್ನು ಬೀಸುತ್ತಿದ್ದೆನಾದುದರಿಂದ ಶಾಸ್ತ್ರಜ್ಞರು ನನ್ನನ್ನು ಧರ್ಮಜಾಲಿಕನೆಂದು ಕರೆಯುತ್ತಿದ್ದರು.

೧೧೨. ಇಂತು ನಾನು ಅಪರಿಮಿತಗಳಾದ ಪಾಪಗಳನ್ನು ಸಂಗ್ರಹಿಸಿದವನಾಗಿ ಅವಸಾನಕಾಲವೊದಗಲು ದೇಹವನ್ನು ಬಿಟ್ಟು ಯಮಲೋಕಕ್ಕೆ ಹೋಗಿ ಅಲ್ಲಿ ಕೂಟಶಾಲ್ಮಲಿಯೆಂಬ ನರಕದಲ್ಲಿ ಹಾಕಲ್ಪಟ್ಟೆನು.

೧೧೩. ಅಲ್ಲಿ ಯಮದೂತರಿಂದ ಸೆಳೆಯಲ್ಪಟ್ಟು, ನನ್ನ ನಡತೆಯನ್ನು ಪದೇಪದೇ ಸ್ಮರಣೆಗೆ ತರಿಸಿಕೊಳ್ಳುತ್ತ, ಖಡ್ಗಗಳಿಂದ ಕತ್ತರಿಸಲ್ಪಟ್ಟು ಅನೇಕ ಸಲ ಸತ್ತು ಮತ್ತೆ ಹುಟ್ಟುತ್ತಿದ್ದೆನು. ಇಂತು ಅನೇಕ ವರ್ಷಗಳ ಕಾಲ ಆತ್ಮನಿಂದೆಯನ್ನೇ ಮಾಡಿಕೊಳ್ಳುತ್ತ ನರಕದಲ್ಲಿದ್ದೆನು.

ನರಕೇ ಯಾ ಮತಿರ್ಭೂಯಾದ್ಧರ್ಮಂ ಪ್ರತಿ ಪ್ರಪೀಡಿತಃ ।
ಸಾ ಚೇನ್ಮುಹೂರ್ತಮಾತ್ರಂ ಸ್ಯಾದಪಿ ಧನ್ಯಸ್ತತಃ ಪುಮಾನ್ ॥ ೧೧೪ ॥
ನಮೋ ನಮಃ ಕರ್ಮಭೂಮ್ಯೈ ಸುಕೃತಂ ದುಷ್ಕೃತಂ ಚ ವಾ ।
ಯಸ್ಯಾಂ ಮುಹೂರ್ತಮಾತ್ರೇಣ ಯುಗೈರಪಿ ನ ನಶ್ಯತಿ ॥ ೧೧೫ ॥
ತತೋ ವಿಪಶ್ಚಿಜ್ಜನಕೋ ಮೋಕ್ಷಯಾಮಾಸ ನಾರಕಾತ್ ।
ತೈಸ್ಸಹಾಹಂ ಪ್ರಮುಕ್ತಶ್ಚ ಕಥಂಚಿದವಪೀಡಿತಃ ॥ ೧೧೬ ॥
ಸ್ಥಾಣುತ್ವಮನುಭೂಯಾಥ ಕ್ಲೇಶಾನಾಸಾದ್ಯ ಭೂರಿಶಃ ।
ಕೀಟೋಽಹಮಭವಂ ಪಶ್ಚಾತ್ತೀರೇ ಸಾರಸ್ವತೇ ಶುಭೇ ॥ ೧೧೭ ॥
ತತ್ರ ಮಾರ್ಗೇ ಸುಖಮಿವ ಸಂಸುಪ್ತೋಽಹಂ ಯದೃಚ್ಛಯಾ ।
ಆಗಚ್ಛತೋ ರಥಸ್ಯಾಸ್ಯ ಶಬ್ದಮಶ್ರೌಷಮುನ್ನತಂ ॥ ೧೧೮ ॥
ತಂ ಮೇಘನಿನದಂ ಶ್ರುತ್ವಾ ಭೀತೋಽಹಂ ಸಹಸಾ ಜವಾತ್ ।
ಮಾರ್ಗಮುತ್ಸೃಜ್ಯ ದೂರೇಣ ಪ್ರಪಲಾಯನಮಾಚರಂ ॥ ೧೧೯ ॥

---

೧೧೪. ನರಕದಲ್ಲಿ ನರಳುವ ಮನುಷ್ಯನಿಗೆ ಧರ್ಮದಲ್ಲಿ ಯಾವ ಶ್ರದ್ಧೆ ಯುಂಟಾಗುವುದೊ, ಅದೇ ಭೂಲೋಕದ ಜನರಿಗೆ ಒಂದು ಮುಹೂರ್ತಕಾಲ ವಾದರೂ ಉಂಟಾಗುವುದಾದರೆ, ಪ್ರತಿಯೊಬ್ಬನೂ ಅಷ್ಟರಿಂದಲೇ ಧನ್ಯನಾಗ ಬಹುದು.

೧೧೫. ಯಾವುದರಲ್ಲಿ ಮುಹೂರ್ತಮಾತ್ರದಲ್ಲಿಯೇ ಮಾಡಿದ ಪುಣ್ಯಪಾಪ ಗಳು ಯುಗಾಂತರಗಳಲ್ಲಿಯೂ ಫಲಗಳನ್ನು ಕೊಡುವುವೊ, ಅಂತಹ ಕರ್ಮ ಭೂಮಿಯಾದ ಭರತಖಂಡಕ್ಕೆ ನಮಸ್ಕಾರವು.

೧೧೬-೧೧೭. ಆಗ ಜ್ಞಾನಿಯಾದ ತಂದೆಯು ನನ್ನನ್ನು ಆ ನರಕದಿಂದ ಬಿಡಿಸಿದನು. ಇಂತು ಪಿತೃಗಳ ಜೊತೆಯಲ್ಲಿ ನಾನೂ ಬಿಡುಗಡೆಯನ್ನು ಹೊಂದಿ ಅನೇಕ ದುಃಖಗಳನ್ನನುಭವಿಸಿ, ಸ್ಥಾವರ ಜನ್ಮಗಳನ್ನು ಪಡೆದು ಶೀತವಾತಾದಿ ಅನೇಕ ಕ್ಲೇಶಗಳನ್ನು ಸಹಿಸುತ್ತ, ಕಡೆಯಲ್ಲಿ ಸರಸ್ವತೀನದಿಯ ತೀರದ ಪ್ರದೇಶ ದಲ್ಲಿ ಒಂದು ಕೀಟವಾಗಿ ಜನಿಸಿದೆನು.

೧೧೮. ಅಲ್ಲಿ ರಾಜಮಾರ್ಗದಲ್ಲಿ ಸ್ವೇಚ್ಛೆಯಾಗಿ ಒಂದು ದಿನ ಸುಖದಿಂದ ನಿದ್ರಿಸುತ್ತಿರಲು ನನ್ನ ಕಡೆಗೆ ಬರುತ್ತಿರುವ ರಥದ ದೊಡ್ಡ ಧ್ವನಿಯನ್ನು ಕೇಳಿದೆನು.

೧೧೯. ಮೇಘದ ಘರ್ಜನೆಯಂತೆ ಗಂಭೀರವಾದ ಆ ಧ್ವನಿಯನ್ನು ಕೇಳು ತ್ತಲೆ ನಾನು ಭಯಗೊಂಡು ತಕ್ಷಣದಲ್ಲಿಯೇ ವೇಗದಿಂದ ಮಾರ್ಗವನ್ನು ಬಿಟ್ಟು ದೂರಕ್ಕೆ ಪಲಾಯನಮಾಡತೊಡಗಿದೆನು.

ಏತಸ್ಮಿನ್ನಂತರೇ ವ್ಯಾಸಸ್ತತ್ರ ಪ್ರಾಪ್ತೋ ಯದೃಚ್ಛಯಾ ।
ಸ ಮಾಮಪಶ್ಯತ್ತ್ರಸ್ತಂ ಚ ಕೃಪಯಾ ಸಂಯುತೋ ಮುನಿಃ ॥ ೧೨೦ ॥
ಯನ್ಮಯಾ ಸರ್ವಲೋಕಾನಾಂ ನಾನಾಧರ್ಮಾಃ ಪ್ರಕೀರ್ತಿತಾಃ ।
ವಿಪ್ರಜನ್ಮನಿ ತಸ್ಯೈವ ಪ್ರಭಾವಾದ್ಧ್ಯಾನಿಸಂಗಮಃ ॥ ೧೨೧ ॥
ತತಃ ಸರ್ವರುತಜ್ಞೋ ಮಾಂ ಪ್ರಾಹಾರ್ಚ್ಯಃ ಕೀಟಭಾಷಯಾ ॥ ೧೨೨ ॥
ಕಿಮೇವಂ ನಶ್ಯಸೇ ಕೀಟ ಕಸ್ಮಾನ್ಮೃತ್ಯೋರ್ಬಿಭೇಷಿ ಚ ।
ಅಹೋ ಸಮುಚಿತಾ ಭೀತಿರ್ಮನುಷ್ಯಸ್ಯ ಕುತಸ್ತವ ॥ ೧೨೩ ॥
ಇತ್ಯುಕ್ತೋ ಮತಿಮಾನ್ಪೂರ್ವಪುಣ್ಯಾದ್ವ್ಯಾಸಂ ತದೋಚಿವಾನ್ ।
ನ ಮೇ ಭಯಂ ಜಗದ್ವಂದ್ಯ ಮೃತ್ಯೋರಸ್ಮಾತ್ಕಥಂಚನ ॥ ೧೨೪ ॥
ಏತದೇವ ಭಯಂ ಮಾನ್ಯ ಗಚ್ಛೇಯಮಧಮಾಂ ಗತಿಂ ।
ಅಸ್ಯಾ ಅಪಿ ಕುಯೋನೇಶ್ಚ ಸಂತ್ಯನ್ಯಾಃ ಕೋಟಿಶೋಽಧಮಾಃ ॥ ೧೨೫ ॥

---

೧೨೦. ಇಷ್ಟರಲ್ಲಿಯೇ ಅಲ್ಲಿಗೆ ವ್ಯಾಸಮಹರ್ಷಿಯು ಆಕಸ್ಮಿಕವಾಗಿ ದಯ ಮಾಡಿಸಿದನು. ಭಯಗೊಂಡಿರುವ ನನ್ನನ್ನು ಕೃಪೆಯಿಂದ ಕೂಡಿದ ಆ ಮಹರ್ಷಿಯು ಕಂಡನು.

೧೨೧. ಪೂರ್ವದಲ್ಲಿ ಸಕಲರಿಗೂ ಅನೇಕ ಧರ್ಮಗಳನ್ನು ಬೋಧಿಸಿದ ಬ್ರಾಹ್ಮಣ ಜನ್ಮದ ಪುಣ್ಯದ ಪ್ರಭಾವದಿಂದಲೇ ನನಗೆ ಕೀಟಪ ಜನ್ಮದಲ್ಲಿಯೂ ಮಹಾತ್ಮರ ಸಂದರ್ಶನವು ಲಭಿಸಿತು.

೧೨೨. ಆಗ ಸಕಲ ಜೀವಕೋಟಿಗಳ ಭಾಷೆಗಳನ್ನು ತಿಳಿದವನೂ ಪರಮ ಪೂಜ್ಯನೂ ಆದ ಮಹರ್ಷಿಯು ನನ್ನನ್ನು ಕೀಟಭಾಷೆಯಲ್ಲಿಯೇ ಮಾತನಾಡಿ ಸಿದನು.

೧೨೩. 'ಎಲೈ ಕೀಟವೆ! ನೀನೇತಕ್ಕೆ ಇಂತು ನಶಿಸುವೆ? ಆ ರಥದ ಮೃತ್ಯುವಿನಿಂದೇಕೆ ಭಯಗೊಳ್ಳುವೆ? ಮನುಷ್ಯನಿಗೆ ಮರಣಭಯವು ಉಚಿತ ವಾದೀತಲ್ಲದೆ ನಿನಗಲ್ಲ?'

೧೨೪. ಇಂತೆಂದ ವ್ಯಾಸನನ್ನು ಕುರಿತು ಪೂರ್ವಪುಣ್ಯದಿಂದ ಜ್ಞಾನವನ್ನು ಪಡೆದಿದ್ದ ನಾನು ಇಂತೆಂದು ಹೇಳಿದೆನು. 'ಎಲೈ ಲೋಕಪೂಜ್ಯನೆ! ಯಾವ ವಿಧದ ಮರಣದಿಂದಲೂ ನನಗೆ ಭಯವೆಂಬುದಿಲ್ಲವು.

೧೨೫. ಮಹರ್ಷಿಯೆ! ಈ ಜನ್ಮದಿಂದ ಇನ್ನೂ ಅಧಮವಾದ ಜನ್ಮವನ್ನು ಹೊಂದುವೆನೆಂಬ ಒಂದೇ ಒಂದು ಭಯವು ನನ್ನನ್ನು ಬಾಧಿಸುತ್ತಿರುವುದು. ಈ ನನ್ನ ನಿಕೃಷ್ಟ ಜನ್ಮಕ್ಕಿಂತಲೂ ಅಧಮಗಳಾದ ಅನೇಕ ಕೋಟಿ ಜನ್ಮಗಳಿರುವು ವಲ್ಲವೆ.

**ತಾಸು ಗರ್ಭಾದಿಕಕ್ಲೇಶಭೀತಸ್ತ್ರಸ್ತೋಽಸ್ಮಿ ನಾನ್ಯಥಾ ॥ ೧೨೬ ॥**

**ವ್ಯಾಸ ಉವಾಚ :—**

**ಮಾ ಭಯಂ ಕುರು ಸರ್ವಾಭ್ಯೋ ಯೋನಿಭ್ಯಶ್ಚ ಚಿರಾದಿವ ।**
**ಮೋಕ್ಷಯಿಷ್ಯಾಮಿ ಬ್ರಾಹ್ಮಣ್ಯಂ ಪ್ರಾಪಯಿಷ್ಯಾಮಿ ನಿಶ್ಚಿತಂ ॥ ೧೨೭ ॥**
**ಇತ್ಯುಕ್ತೋಽಹಂ ಕಾಲಿಯೇನ ತಂ ಪ್ರಣಮ್ಯ ಜಗದ್ಗುರುಂ ।**
**ಮಾರ್ಗಮಾಗತ್ಯ ಚಕ್ರೇಣ ಪೀಡಿತೋ ಮೃತ್ಯುಮಾಗಮಂ ॥ ೧೨೮ ॥**
**ತತಃ ಕಾಕಶೃಗಾಲಾದಿಯೋನಿಷ್ವಸ್ಮಿ ಯದಾಭವಂ ।**
**ತದಾ ತದಾ ಸಮಾಗಮ್ಯ ವ್ಯಾಸೋ ಮಾಂ ಸ್ಮಾರಯಚ್ಚ ತತ್ ॥ ೧೨೯ ॥**
**ತತೋ ಬಹುವಿಧಾ ಯೋನೀಃ ಪರಿಕ್ರಮ್ಯಾಸ್ಮಿ ಕರ್ಷಿತಃ ।**
**ಬ್ರಾಹ್ಮಣಸ್ಯ ಚ ಗೇಹೇಽಸ್ಯಾಂ ಯೋನೌ ಜಾತೋಽತಿದುಃಖಿತಃ ॥೧೩೦॥**
**ತತೋ ಜನ್ಮಪ್ರಭೃತ್ಯಸ್ಮಿ ಪಿತೃಭ್ಯಾಂ ಪರಿವರ್ಜಿತಃ ।**
**ಗಲತ್ಕುಷ್ಠೀ ಮಹಾಪೀಡಾಮೇತಾಂ ಯೋಽನುಭವಾಮಿ ಚ ॥ ೧೩೧ ॥**

---

೧೨೬. ಅವುಗಳಲ್ಲಿ ಜನ್ಮವನ್ನು ತಾಳಬೇಕೆಂಬ ಭಯದಿಂದ ನಡುಗುತ್ತಿರುವೆನಲ್ಲದೆ ಬೇರೆಯಿಲ್ಲವು.'

೧೨೭. ವ್ಯಾಸರು ನನ್ನನ್ನು ಕುರಿತು ಇಂತೆಂದರು. 'ಎಲೈ ಕೀಟವೆ! ನೀನು ಭಯಪಡಬೇಡ. ಸ್ವಲ್ಪಕಾಲದಲ್ಲಿಯೇ ನಿನ್ನ ಅನೇಕ ಜನ್ಮಗಳನ್ನು ಕಳೆಯುವಂತೆ ಮಾಡಿ ಉತ್ತಮವಾದ ಬ್ರಾಹ್ಮಣ ಜನ್ಮವು ಲಭಿಸುವಂತೆ ಅನುಗ್ರಹಿಸುವೆನು. ಇದು ನಿಶ್ಚಯವು.'

೧೨೮. ಈ ಮಾತುಗಳನ್ನು ಕೇಳಿ ನಾನು ಆತನಿಗೆ ನಮಸ್ಕರಿಸಿ ಮತ್ತೆ ಮಾರ್ಗಮಧ್ಯದಲ್ಲಿ ಬರಲು ಒಂದಾನೊಂದು ರಥದ ಗಾಲಿಯಿಂದ ಪೀಡಿತನಾಗಿ ಮರಣವನ್ನು ಹೊಂದಿದೆನು.

೧೨೯. ಬಳಿಕ ನಾನು ಕಾಗೆ, ನರಿ ಮುಂತಾದ ಅನೇಕ ಯೋನಿಗಳಲ್ಲಿ ಜನ್ಮವನ್ನು ಪಡೆದನು. ಪ್ರತಿ ಜನ್ಮದಲ್ಲಿಯೂ ವ್ಯಾಸಮಹರ್ಷಿಯು ನನ್ನ ಬಳಿಗೆ ಬಂದು ನನಗೆ ಜ್ಞಾಪಕವನ್ನು ಕೊಡುತ್ತಿದ್ದನು.

೧೩೦. ಇಂತು ಅನೇಕ ವಿಧಗಳಾದ ಯೋನಿಗಳಲ್ಲಿ ಸೆಳೆಯಲ್ಪಟ್ಟು ಬಳಲುತ್ತ ಕಡೆಗೆ ಒಬ್ಬ ಬ್ರಾಹ್ಮಣನ ಮನೆಯಲ್ಲಿ ಈ ಜನ್ಮವನ್ನು ಪಡೆದು ಅತಿ ದುಃಖಕ್ಕೊಳಗಾದೆನು.

೧೩೧. ಈಗಲಾದರೊ ಹುಟ್ಟಿದಂದಿನಿಂದ ತಂದೆತಾಯಿಗಳಿಂದ ಪರಿತ್ಯಕ್ತನಾಗಿ ನೀರು ಸೋರುತ್ತಿರುವ ಈ ಕುಷ್ಠರೋಗದ ದೆಸೆಯಿಂದ ಮಹತ್ತರವಾದ ಯಾತನೆಯನ್ನನುಭವಿಸುತ್ತಿರುವೆನು.

ತತೋ ಮಾಂ ಪಂಚಮೇ ವರ್ಷೇ ವ್ಯಾಸ ಆಗತ್ಯ ಜಪ್ತವಾನ್ ।
ಕರ್ಣೇ ಸಾರಸ್ವತಂ ಮಂತ್ರಂ ತೇನಾಹಂ ಸಂಸ್ಮರಾಮಿ ಚ ।
ಅನಧೀತಾನಿ ಶಾಸ್ತ್ರಾಣಿ ವೇದಾನ್ಧರ್ಮಾಂಶ್ಚ ಕೃತ್ಸ್ನಶಃ ॥ ೧೩೨ ॥
ಉಕ್ತಂ ವ್ಯಾಸೇನ ಚೇದಂ ಮೇ ಗಚ್ಛ ಕ್ಷೇತ್ರಂ ಗುಹಸ್ಯ ಚ ।
ತತ್ರ ತ್ವಂ ನಂದಭದ್ರಂ ಚ ಆಶ್ವಾಸಯ ಮಹಾಮತಿಂ ॥ ೧೩೩ ॥
ತ್ಯಕ್ತ್ವಾ ಬಹೂದಕೇ ಪ್ರಾಣಾನಸ್ಥಿಕ್ಷೇಪಂ ಮಹೀಜಲೇ ।
ಕಾರಾಯ್ಯ ತ್ವಂ ತತೋ ಭಾವೀ ಮೈತ್ರೇಯ ಇತಿ ಸನ್ಮುನಿಃ ॥ ೧೩೪ ॥
ಗಮಿಷ್ಯಸಿ ತತೋ ಮೋಕ್ಷಮಿತಿ ಮಾಂ ವ್ಯಾಸ ಉಕ್ತವಾನ್ ।
ಆಗತಶ್ಚ ತತಶ್ಚಾತ್ರ ವಾಹೀಕೇಭ್ಯೋಽತಿಕ್ಲೇಶತಃ ॥ ೧೩೫ ॥
ಇತಿ ತೇ ಕಥಿತಂ ಸರ್ವಮಾತ್ಮನಶ್ಚರಿತಂ ಮಯಾ ।
ಪಾಪಮೇವಂ ವಿಧಂ ಕಷ್ಟಂ ನಂದಭದ್ರ ಸದಾ ತ್ಯಜ ॥ ೧೩೬ ॥

ನಂದಭದ್ರ ಉವಾಚ :—

ಅಹೋ ಮಹಾದ್ಭುತಂ ತುಭ್ಯಂ ಚರಿತಂ ಯೇನ ಮೇ ಹೃದಿ ।
ಭೂಯಃ ಶತಗುಣಂ ಜಾತಂ ಧರ್ಮಾಯ ದೃಢಮಾನಸಂ ॥ ೧೩೭ ॥

---

೧೩೨. ನನ್ನ ಐದನೆಯ ವರ್ಷದಲ್ಲಿ ವ್ಯಾಸಮಹರ್ಷಿಯು ತನ್ನ ಮಾತಿನಂತೆ ಬಂದು ನನ್ನ ಕಿವಿಗಳಲ್ಲಿ ಸಾರಸ್ವತ ಮಂತ್ರವನ್ನು ಜಪಿಸಿದನು. ಅದರ ಪರಿಣಾಮವಾಗಿ ನನಗೆ ಓದದಿರುವ ಶಾಸ್ತ್ರಗಳೂ, ವೇದಗಳೂ, ತಿಳಿಯದಿರುವ ಧರ್ಮಗಳೂ, ಸಂಪೂರ್ಣವಾಗಿ ಸ್ಮರಣೆಗೆ ಬರತೊಡಗಿದುವು.

೧೩೩. ಆಗ ವ್ಯಾಸರು ನನಗೆ ಅಪ್ಪಣೆ ಮಾಡಿದರು. 'ನೀನು ನನಗೆ ಪ್ರಿಯವಾದ ಕುಮಾರೇಶ್ವರ ಕ್ಷೇತ್ರಕ್ಕೆ ಹೋಗಿ ಅಲ್ಲಿ ಮಹಾಪ್ರಾಜ್ಞನಾದ ನಂದಭದ್ರನ ಮನಸ್ಸನ್ನು ಸಮಾಧಾನಗೊಳಿಸು.

೧೩೪. ಬಹೂದಕಕ್ಷೇತ್ರದಲ್ಲಿ ದೇಹವನ್ನು ತ್ಯಜಿಸಿ ನಿನ್ನ ಅಸ್ಥಿಗಳನ್ನು ಸಮುದ್ರದಲ್ಲಿ ಬಿಡುವಂತೆ ಮಾಡಿಸಿಕೊಂಡು ಮುಂದಿನ ಜನ್ಮದಲ್ಲಿ ಮೈತ್ರೇಯ ನೆಂಬ ಹೆಸರಿನಿಂದ ಮಹಾಮುನಿಯಾಗಿ ಜನಿಸುವೆ.

೧೩೫–೧೩೬. ಬಳಿಕ ಶಾಶ್ವತವಾದ ಮೋಕ್ಷವನ್ನು ಹೊಂದುವೆ.' ಇಂತು ವ್ಯಾಸರು ನನಗೆ ಹೇಳಿದರು. ಆದುದರಿಂದ ಎತ್ತುಗಳ ಗಾಡಿಗಳಲ್ಲಿ ಬಹು ಕಷ್ಟದಿಂದ ಪ್ರಯಾಣಮಾಡುತ್ತ ನಾನು ಇಲ್ಲಿಗೆ ಬಂದೆನು. ಇಂತು ನನ್ನ ಸಕಲ ವೃತ್ತಾಂತವನ್ನೂ ನಿನಗೆ ತಿಳಿಸಿದೆನು. ಎಲೈ ನಂದಭದ್ರನೆ! ಇಂತಹ ಕಷ್ಟಗಳಿಗೆ ಮೂಲವಾದ ಪಾಪವನ್ನು ಮಾತ್ರ ಎಂದೆಂದಿಗೂ ತ್ಯಜಿಸುವನಾಗು."

೧೩೭. ನಂದಭದ್ರನು ಹೇಳುತ್ತಾನೆ:—"ಆಹಾ! ನಿನ್ನ ಜೀವನ ಚರಿತ್ರೆಯು ಬಹಳ ಅದ್ಭುತವಾಗಿರುವುದು. ಇದರಿಂದ ನನ್ನ ಹೃದಯದಲ್ಲಿ

**ಕಿಂ ತು ತ್ವಯೋಕ್ತಧರ್ಮಸ್ಯ ಕರ್ತುಕಾಮೋಽಸ್ಮಿ ನಿಷ್ಕೃತಿಂ ।**
**ಧರ್ಮಂ ಸ್ಮರ ಭವಾಂಸ್ತಸ್ಮಾತ್ಕಿಂಚಿದಾದಿಶ ನಿಶ್ಚಿತಂ ॥ ೧೩೮ ॥**

**ಬಾಲ ಉವಾಚ:—**

**ಅತ್ರ ತೀರ್ಥೇ ಚ ಸಪ್ತಾಹಂ ನಿರಾಹಾರಸ್ತ್ವಹಂ ಸ್ಥಿತಃ ।**
**ಸೂರ್ಯಮಂತ್ರಾನ್ಜಪಿಷ್ಯಾಮಿ ತ್ಯಕ್ಷ್ಯಾಮಿ ಚ ತತಸ್ತ್ವಸೂನ್ ॥ ೧೩೯ ॥**
**ತತೋ ಬರ್ಕರಿಕಾತೀರ್ಥೇ ದಗ್ಧವ್ಯೋಽಹಂ ತ್ವಯಾ ತಟೇ ।**
**ಅಸ್ಥೀನಿ ಸಾಗರೇ ಚಾಪಿ ಮಮ ಕ್ಷೇಪ್ಯಾಣಿ ಚಾತ್ರ ಹಿ ॥ ೧೪೦ ॥**
**ಯದಿ ಸಾಪಹ್ನವಂ ಚಿತ್ತಂ ಮಯ್ಯತೀವ ತವಾಸ್ತಿ ಚೇತ್ ।**
**ತತಸ್ತ್ವಾಂ ಗುರುಕಾರ್ಯಾರ್ಥಮಾದೇಕ್ಷ್ಯಾಮಿ ಶೃಣುಷ್ವ ತತ್ ॥೧೪೧॥**
**ಅಸ್ಮಿನ್ಬಹೂದಕೇ ತೀರ್ಥೇ ಯತ್ರ ಪ್ರಾಣಾಂಸ್ತ್ಯಜಾಮ್ಯಹಂ ।**
**ತತ್ರ ಮನ್ನಾಮಚಿಹ್ನಸ್ತೇ ಸಂಸ್ಥಾಪ್ಯೋ ಭಾಸ್ಕರೋ ವಿಭುಃ ॥ ೧೪೨ ॥**
**ಆರೋಗ್ಯಂ ಧನಧಾನ್ಯಂ ಚ ಪುತ್ರದಾರಾದಿಸಂಪದಃ ।**
**ಭಾಸ್ಕರೋ ಭಗವಾಂಸ್ತುಷ್ಟೋ ದದ್ಯಾದೇತಚ್ಛ್ರುತೇರ್ವಚಃ ॥ ೧೪೩ ॥**

---

ಧರ್ಮಜೀವನವನ್ನೇ ನಡೆಸಬೇಕೆಂಬ ದೃಢಸಂಕಲ್ಪವು ನೂರರಷ್ಟು ಹೆಚ್ಚು ತ್ತಿರುವುದು.

೧೩೮. ಆದುದರಿಂದ ಇಷ್ಟು ಧರ್ಮಸೂಕ್ಷ್ಮಗಳನ್ನು ನಿನ್ನಲ್ಲಿ ತಿಳಿದು ಕೊಂಡು ನಿನಗೆ ದಕ್ಷಿಣಾರೂಪವಾಗಿ ಏನನ್ನಾದರೂ ಮಾಡಬಯಸುತ್ತಿರುವೆನು. ಈ ಧರ್ಮವನ್ನೂ ನೀನು ಸ್ಮರಣೆಗೆ ತಂದುಕೊಂಡು ನಿನ್ನ ಮನಸ್ಸಿನಲ್ಲಿರುವ ಯಾವುದಾದರೂ ಒಂದು ಕೋರಿಕೆಯನ್ನು ತಿಳಿಸು.''

೧೩೯. ಬಾಲಕನು ಹೇಳುತ್ತಾನೆ:—'' ಈ ತೀರ್ಥದಲ್ಲಿಯೇ ನಾನು ಏಳು ದಿನಗಳ ಪರ್ಯಂತ ಉಪವಾಸವನ್ನು ಮಾಡುತ್ತ ಸೂರ್ಯಮಂತ್ರಗಳನ್ನು ಜಪಿಸಿ ಬಳಿಕ ಪ್ರಾಣಗಳನ್ನು ಬಿಡುವೆನು.

೧೪೦. ಬಳಿಕ ನೀನು ಬರ್ಕರಿಕಾತೀರ್ಥದ ತಟದಲ್ಲಿ ನನ್ನ ಶರೀರವನ್ನು ದಹನ ಮಾಡಬೇಕು. ಅಲ್ಲಿಯೇ ಸಮುದ್ರದಲ್ಲಿ ನನ್ನ ಅಸ್ಥಿಗಳನ್ನು ಸಂಚಯನ ಮಾಡಬೇಕು.

೧೪೧. ಇದಕ್ಕಿಂತಲೂ ಹೆಚ್ಚಿನದಾದ, ಪ್ರೀತಿಯು ನಿನಗೆ ನನ್ನಲ್ಲಿರುವು ದಾದರೆ ಒಂದು ಗೌರವವಾದ ಕಾರ್ಯಭಾರವನ್ನು ನಿನಗೆ ಒಪ್ಪಿಸುವೆನು. ಶ್ರದ್ಧೆಯಿಂದ ಕೇಳುವವನಾಗು.

೧೪೨–೧೪೩. ಈ ಬಹೂದಕ ಕ್ಷೇತ್ರದಲ್ಲಿ ನಾನು ಪ್ರಾಣಗಳನ್ನು ಬಿಡುವ ಸ್ಥಳದಲ್ಲಿ ನನ್ನ ಹೆಸರಿನಿಂದ ಸರ್ವವ್ಯಾಪಕನಾದ ಸೂರ್ಯನ ಮೂರ್ತಿಯೊಂದನ್ನು ಸ್ಥಾಪಿಸುವವನಾಗು. ಭಗವಂತನಾದ ಸೂರ್ಯನು ಸಂತುಷ್ಟನಾದರೆ ದೇಹಾ

**ಸವಿತಾ ಪರಮೋ ದೇವಃ ಸರ್ವಸ್ವಂ ವಾ ದ್ವಿಜನ್ಮನಾಂ ।**
**ವೇದವೇದಾಂಗಗೀತಶ್ಚ ತ್ವಮುಪ್ಯೇನಂ ಸದಾ ಭಜ ॥ ೧೪೪ ॥**
**ಬಹೂದಕಮಿದಂ ಕುಂಡಂ ಸಂಸೇವ್ಯಂ ಚ ಸದಾ ತ್ವಯಾ ।**
**ಮಾಹಾತ್ಮ್ಯಮಸ್ಯ ವಕ್ಷ್ಯಾಮಿ ಸಂಕ್ಷೇಪಾದ್ವ್ಯಾಸಸೂಚಿತಂ ॥ ೧೪೫ ॥**
**ಬಹೂದಕೇ ಕುಂಡವರೇ ಸ್ನಾತಿ ಯೋ ವಿಧಿವನ್ನರಃ ।**
**ಆರೋಗ್ಯಂ ಧನಧಾನ್ಯಾದ್ಯಂ ತಸ್ಯ ಸ್ಯಾತ್ಸರ್ವಜನ್ಮಸು ॥ ೧೪೬ ॥**
**ಬಹೂದಕೇ ಚ ಯಃ ಸ್ನಾತ್ವಾ ಸಪ್ತಮ್ಯಾಂ ಮಾಘಮಾಸಕೇ ।**
**ದದ್ಯಾತ್ಪಿಂಡಂ ಪಿತೄಣಾಂ ಚ ತೇಽಕ್ಷಯಾಂ ತೃಪ್ತಿಮಾಪ್ನುಯುಃ ॥**
**ಬಹೂದಕಸ್ಯ ತೀರೇ ಯಃ ಶುಚಿರ್ಯಜತಿ ವೈ ಕ್ರತುಂ ।**
**ಶತಕ್ರತುಫಲಂ ತಸ್ಯ ನಾಸ್ತಿ ಕಾಚಿದ್ವಿಚಾರಣಾ ॥ ೧೪೮ ॥**
**ಅತ್ರ ಯಸ್ತ್ಯಜತಿ ಪ್ರಾಣಾನ್ಬಹೂದಕತಟೇ ನರಃ ।**
**ಮೋದತೇ ಸೂರ್ಯಲೋಕೇಽಸೌ ಧರ್ಮಿಣಾಂ ಚ ಸುತೋ ಭವೇತ್ ॥**

---

ರೋಗ್ಯವನ್ನೂ ಧನಧಾನ್ಯ ಸಮೃದ್ಧಿಯನ್ನೂ ಪತ್ನೀಪುತ್ರಾದಿ ಭಾಗ್ಯಗಳನ್ನೂ ಕೊಡುವನೆಂದು ವೇದವಾಕ್ಯಗಳ ಪ್ರಮಾಣವಿರುವುದು.

೧೪೪. ಬ್ರಾಹ್ಮಣರಿಗೆ ಸೂರ್ಯನೇ ಸರ್ವೋತ್ತಮವಾದ ದೇವತೆಯು. ಅವನೇ ಅವರ ಸರ್ವಸ್ವವು. ಹೀಗೆಂದು ವೇದ ವೇದಾಂಗಗಳಲ್ಲಿ ಹೇಳಲ್ಪಟ್ಟಿರುವುದು. ಆದುದರಿಂದ ನೀನೂ ಆತನನ್ನೇ ಯಾವಾಗಲೂ ಪೂಜಿಸುತ್ತಿರು.

೧೪೫–೧೪೬. ಅಲ್ಲದೆ ಈ ಬಹೂದಕ ಕ್ಷೇತ್ರವು ನಿನ್ನಿಂದ ಯಾವಾಗಲೂ ಸೇವಿಸಲ್ಪಡುವುದಾಗಲಿ. ಇದರ ಮಾಹಾತ್ಮ್ಯೆಯನ್ನು ಕುರಿತು ವ್ಯಾಸರು ಹೇಳಿರುವುದನ್ನು ಸಂಕ್ಷೇಪವಾಗಿ ಹೇಳುವೆನು. ಯಾವನು ವಿಧ್ಯುಕ್ತರೀತಿಯಿಂದ ಬಹೂದಕ ಕುಂಡದಲ್ಲಿ ಸ್ನಾನಮಾಡುವನೊ ಅವನಿಗೆ ಮುಂದಿನ ಜನ್ಮಗಳಲ್ಲೆಲ್ಲ ಆರೋಗ್ಯವೂ, ಧನಧಾನ್ಯಾದಿ ಸಕಲ ಸಮೃದ್ಧಿಯೂ ಉಂಟಾಗುವುವು.

೧೪೭. ಮಾಘಮಾಸದ ಸಪ್ತಮಿಯ ದಿನದಲ್ಲಿ ಈ ತೀರ್ಥದಲ್ಲಿ ಯಾವನು ಸ್ನಾನಮಾಡಿ ಶ್ರದ್ಧೆಯಿಂದ ಪಿತೃಗಳಿಗೆ ಪಿಂಡಗಳನ್ನು ಕೊಡುವನೊ, ಅವನ ಪಿತೃಗಳು ಆದರಿಂದ ಅಕ್ಷಯ್ಯತೃಪ್ತಿಯನ್ನು ಹೊಂದುವರು.

೧೪೮. ಈ ಪ್ರದೇಶದಲ್ಲ ಯಾವನು ಶುಚಿಯಾಗಿ ಯಜ್ಞವನ್ನು ಮಾಡುವನೊ, ಅವನಿಗೆ ನೂರು ಯಜ್ಞಗಳನ್ನು ಮಾಡಿದ ಸುಕೃತವು ಲಭಿಸುವುದೆಂಬುದರಲ್ಲಿ ಸ್ವಲ್ಪವೂ ಸಂದೇಹವಿಲ್ಲ.

೧೪೯. ಯಾವನು ಈ ಬಹೂದಕಕುಂಡದ ದಡದಲ್ಲಿ ಪ್ರಾಣಗಳನ್ನು ಬಿಡುವನೊ, ಅವನು ಬಹುಕಾಲ ಸೂರ್ಯಲೋಕದಲ್ಲಿ ಸುಖಗಳನ್ನನುಭವಿಸಿ ಧರ್ಮೈಕತತ್ಪರರಾದವರ ಮನೆಯಲ್ಲಿ ಜನ್ಮವನ್ನು ಪಡೆಯುವನು.

**ಬಹೂದಕಸ್ಯ ತೀರೇ ಚ ಯಃ ಕುರ್ಯಾಜ್ಜಪಸಾಧನಂ ।**
**ಸರ್ವಂ ಲಕ್ಷಗುಣಂ ಪ್ರೋಕ್ತಂ ಜಪೋ ಹೋಮಶ್ಚ ಪೂಜನಂ ॥ ೧೫೦ ॥**
**ಬಹೂದಕಸ್ಯ ತೀರೇ ಚ ದ್ವಿಜಮೇಕಂ ಚ ಭೋಜಯೇತ್ ।**
**ಯೋ ಮಿಷ್ಟಾನ್ನೇನ ತಸ್ಯ ಸ್ಯಾದ್ವಿಪ್ರಕೋಟಿಶ್ಚ ಭೋಜಿತಾ ॥ ೧೫೧ ॥**
**ಬಹೂದಕಸ್ಯ ತೀರೇ ಯಾ ನಾರೀ ಗೌರಿಣಿಕಾಃ ಶುಭಾಃ ।**
**ಸಂಭೋಜಯತಿ ತಸ್ಯಾಶ್ಚ ಕುರ್ಯಾತ್ಸ್ವಾಗತಂ ಹ್ಯುಮಾ ॥ ೧೫೨ ॥**
**ಬಹೂದಕಸ್ಯ ತೀರೇ ಚ ಯಃ ಕುರ್ಯಾದ್ಯೋಗಸಾಧನಂ ।**
**ಷಣ್ಮಾಸಾಭ್ಯಂತರೇ ಸಿದ್ಧಿರ್ಭವೇತ್ತಸ್ಯ ನ ಸಂಶಯಃ ॥ ೧೫೩ ॥**
**ಬಹೂದಕಸ್ಯ ತೀರೇ ಚ ಪ್ರೇತಾನುದ್ದಿಶ್ಯ ದೀಯತೇ ।**
**ಯತ್ಕಿಂಚಿದಕ್ಷಯಂ ತೇಷಾಮುಪತಿಷ್ಠೇನ್ನ ಚಾನ್ಯಥಾ ॥ ೧೫೪ ॥**
**ಸ್ನಾನಂ ದಾನಂ ಜಪೋ ಹೋಮಃ ಸ್ವಾಧ್ಯಾಯಃ ಪಿತೃತರ್ಪಣಂ ।**
**ಕೃತಂ ಬಹೂದಕತಟೇ ಸರ್ವಂ ಸ್ಯಾತ್ಸುಮಹತ್ಫಲಂ ॥ ೧೫೫ ॥**

---

೧೫೦. ಇಲ್ಲಿ ಯಾರು ಜಪಸಾಧನೆಯನ್ನು ಮಾಡುವರೊ, ಅವರು ಮಾಡುವ ಜಪ, ಹೋಮ, ಆರಾಧನೆಗಳೆಲ್ಲವೂ ಲಕ್ಷಗುಣಿತವಾದ ಫಲಗಳನ್ನು ಕೊಡುವುವೆಂದು ಹೇಳಲ್ಪಟ್ಟಿರುವುದು.

೧೫೧. ಯಾವನು ಒಬ್ಬ ಬ್ರಾಹ್ಮಣನಿಗಾದರೂ ಮೃಷ್ಟಾನ್ನದಿಂದ ಭೋಜನ ಮಾಡಿಸುವನೊ, ಅವನಿಗೆ ಕೋಟಿ ಬ್ರಾಹ್ಮಣರನ್ನು ಭೋಜನ ಮಾಡಿಸಿದ ಪುಣ್ಯವು ಲಭಿಸುವುದು.

೧೫೨. ಯಾವ ಸಾಧ್ವಿಯು ಇಲ್ಲಿ ಮಂಗಳವತಿಯರಾದ ಕನ್ಯೆಯರಿಗೆ ಷಡ್ರಸೋಪೇತವಾದ ಭೋಜನವನ್ನು ಮಾಡಿಸುವಳೊ, ಆಕೆಯನ್ನು ಕೈಲಾಸ ದಲ್ಲಿ ಪಾರ್ವತಿಯು ಆದರದಿಂದ ಬರಮಾಡಿಕೊಳ್ಳುವಳು.

೧೫೩. ಯಾವನು ಈ ಬಹೂದಕ ಕ್ಷೇತ್ರದಲ್ಲಿ ಯೋಗಾಭ್ಯಾಸವನ್ನು ಮಾಡುವನೊ, ಅವನಿಗೆ ಆರು ತಿಂಗಳುಗಳೊಳಗಾಗಿ ತಪಸ್ಸಿದ್ಧಿಯಾಗುವುದರಲ್ಲಿ ಸಂಶಯವಿಲ್ಲವು.

೧೫೪. ಇಲ್ಲಿ ಪ್ರೇತಗಳನ್ನುದ್ದೇಶಿಸಿ ಕೊಡುವ ತಿಲೋದಕ, ಪಿಂಡ ಪ್ರದಾನಾದಿಗಳೆಲ್ಲವೂ ಅವರಿಗೆ ಅಕ್ಷಯವಾಗಿ ತೃಪ್ತಿಯನ್ನುಂಟುಮಾಡುತ್ತ ನಿಲ್ಲುವುದು. ಇದು ಸುಳ್ಳಲ್ಲ.

೧೫೫. ಬಹೂದಕ ಕ್ಷೇತ್ರದಲ್ಲಿ ಮಾಡಿದ ಸ್ನಾನ, ದಾನ, ಜಪ, ಹೋಮ, ವೇದಾಧ್ಯಯನ, ಪಿತೃತರ್ಪಣ ಮುಂತಾದ ಕಾರ್ಯಗಳೆಲ್ಲವೂ ಅಪಾರವಾದ ಫಲವನ್ನು ಕೊಡುವುವು.

ತ್ವಯೈತದ್ಧೃದಿ ಸಂಧಾರ್ಯಂ ಫಲಂ ವ್ಯಾಸೇನ ಸೂಚಿತಂ ।
ಬಹೂದಕಸ್ಯ ಕುಂಡಸ್ಯ ನಂದಭದ್ರ ಮಹಾಮತೇ ॥ ೧೫೬ ॥

ಶ್ರೀ ನಾರದ ಉವಾಚ:—

ಇತ್ಯುಕ್ತ್ವಾ ಸೋಽಭವನ್ಮೌನೀ ಸ್ನಾತ್ವಾ ಕುಂಡೇ ತತಃ ಶುಚಿಃ ।
ತೀರೇ ಪ್ರಸ್ತರಮಾಶ್ರಿತ್ಯ ಸ್ವಯಂ ಮಂತ್ರಾನ್ಜಜಾಪಹ ॥ ೧೫೭ ॥
ತತಃ ಸ ಸಪ್ತರಾತ್ರಾಂತೇ ಜಹೌ ಬಾಲೋ ನಿಜಾನಸೂನ್ ।
ಸಂಸ್ಕಾರಿತೋ ಯಥೋಕ್ತಂ ಚ ನಂದಭದ್ರೇಣ ಬ್ರಾಹ್ಮಣೈಃ ॥ ೧೫೮ ॥
ಯತ್ರ ಬಾಲಃ ಸ ಚ ಪ್ರಾಣಾನ್ಜಹೌ ಜಪಪರಾಯಣಃ ।
ಬಾಲಾದಿತ್ಯಮಿತಿ ಖ್ಯಾತಂ ತತ್ರಾಸ್ಥಾಪಯತ ಪ್ರಭುಂ ॥ ೧೫೯ ॥
ಬಹೂದಕೇ ಚ ಯಃ ಸ್ನಾತ್ವಾ ಬಾಲಾದಿತ್ಯಂ ಪ್ರಪೂಜಯೇತ್ ।
ತಸ್ಯ ಸ್ಯಾದ್ಭಾಸ್ಕರಸ್ತುಷ್ಟೋ ಮೋಕ್ಷೋಪಾಯಂ ಚ ವಿಂದತಿ ॥ ೧೬೦ ॥
ನಂದಭದ್ರೋಽಪ್ಯಥಾನ್ಯಸ್ಯಾಂ ಭಾರ್ಯಾಯಾಮುಪರಾನ್ಸುತಾನ್ ।
ಉತ್ಪಾದ್ಯಾತ್ಮಸಮಾನ್ಧೀಮಾನ್ ಶಿವಸೂರ್ಯಪರಾಯಣಃ ॥ ೧೬೧ ॥

---

೧೫೬. ಎಲೈ ಮಹಾಪ್ರಾಜ್ಞನಾದ ನಂದಭದ್ರನೆ! ವ್ಯಾಸಮಹರ್ಷಿಗಳಿಂದ ನಿರೂಪಿಸಲ್ಪಟ್ಟಿರುವ ಈ ಬಹೂದಕ ಕುಂಡದ ಫಲದಾತೃತ್ವವನ್ನು ನೀನು ಚೆನ್ನಾಗಿ ಹೃದಯದಲ್ಲಿ ಧರಿಸು.''

೧೫೭. ನಾರದನು ಹೇಳುತ್ತಾನೆ:— ಇಂತೆಂದು ಹೇಳಿ ಆ ಬಾಲಕನು ಮೌನವನ್ನವಲಂಬಿಸಿದನು. ಬಳಿಕ ಕುಂಡದಲ್ಲಿ ಸ್ನಾನವನ್ನು ಮಾಡಿ ಶುಚಿಯಾಗಿ ತೀರದಲ್ಲಿ ದರ್ಭಾಸನವನ್ನು ಹಾಕಿಕೊಂಡು ಕುಳಿತು ಮಂತ್ರಗಳನ್ನು ಜಪಿಸ ತೊಡಗಿದನು.

೧೫೮. ಅಂದಿನಿಂದ ಏಳನೆಯ ದಿನದ ರಾತ್ರಿಯ ಕೊನೆಯಲ್ಲಿ ಅವನು ತನ್ನ ಪ್ರಾಣಗಳನ್ನು ಬಿಟ್ಟನು. ತರುವಾಯ ಅವನು ಬ್ರಾಹ್ಮಣರ ಸಹಾಯವನ್ನು ಹೊಂದಿದ ನಂದಭದ್ರನಿಂದ ಶಾಸ್ತ್ರೋಕ್ತವಾದ ಸಂಸ್ಕಾರಗಳನ್ನು ಪಡೆದನು.

೧೫೯. ಆ ಬಾಲಕನು ಜಪದಲ್ಲಿ ಮಗ್ನನಾಗಿ ಯಾವ ಸ್ಥಳದಲ್ಲಿ ಪ್ರಾಣ ಗಳನ್ನು ತ್ಯಜಿಸಿದನೊ, ಅಲ್ಲಿ ನಂದಭದ್ರನು ಬಾಲಾದಿತ್ಯನೆಂಬ ಸ್ವಾಮಿಯನ್ನು ಪ್ರತಿಷ್ಠೆ ಮಾಡಿದನು.

೧೬೦. ಯಾವನು ಬಹೂದಕ ಕುಂಡದಲ್ಲಿ ಸ್ನಾನಮಾಡಿ ಬಾಲಾದಿತ್ಯನನ್ನು ಪೂಜಿಸುವನೊ, ಅವನಲ್ಲಿ ಸೂರ್ಯನು ಸಂತುಷ್ಟನಾಗಿ ಮೋಕ್ಷೋಪಾಯವನ್ನು ತೋರಿಸಿಕೊಡುವನು.

೧೬೧–೧೬೨. ಬಳಿಕ ನಂದಭದ್ರನೂ ಕೂಡ ಬೇರೆ ಹೆಂಡತಿಯಲ್ಲಿ ತನಗೆ ಸಮಾನರಾದ ಮಕ್ಕಳನ್ನು ಪಡೆದು ವಿವೇಕಿಯೂ, ಶಿವಪೂಜೆ, ಸೂರ್ಯಪೂಜೆ

ರುದ್ರದೇಹಂ ಯಯೌ ಪಾರ್ಥ ಪುನರಾವೃತ್ತಿದುರ್ಲಭಂ ।
ಏವಮೇತನ್ಮಹಾಕುಂಡಂ ಬಹೂದಕಮಿತಿ ಸ್ಮೃತಂ ॥ ೧೬೨ ॥
ಅಸ್ಯ ತೀರೇ ಸ್ವಮಂಶಂ ಚ ವಲ್ಲೀನಾಥಃ ಪ್ರಮೋಕ್ಷ್ಯತಿ ।
ದತ್ತಾತ್ರೇಯುಸ್ಯ ಯೋ ಯೋಗೀ ಹ್ಯವತಾರೋ ಭವಿಷ್ಯತಿ ॥ ೧೬೩ ॥
ಅರ್ಚಯಿತ್ವಾ ಚ ತಂ ದೇವಂ ಯೋಗಸಿದ್ಧಿಮವಾಪ್ನುಯಾತ್ ।
ಪಶೂನಾಮೃದ್ಧಿಮಾಪ್ನೋತಿ ಗೋಶರಣ್ಯೋ ಹ್ಯಸೌ ಪ್ರಭುಃ ॥ ೧೬೪ ॥
ಪಶ್ಚಿಮಾಯಾಂ ಬುಧಸುತಸ್ತಥಾ ಕ್ಷೇತ್ರಂ ಸ ಭಾರತ ।
ಪುರೂರವಾದಿತ್ಯಮಿತಿ ಸ್ಥಾಪಯಾಮಾಸ ಪಾರ್ಥಿವಃ ॥ ೧೬೫ ॥
ಸರ್ವಕಾಮಪ್ರದಶ್ಚಾಸೌ ಭಟ್ಟಾದಿತ್ಯಸಮೋ ರವಿಃ ।
ಬಹೂದಕಕ್ಷೇತ್ರಸಮಂ ತಸ್ಯ ಕ್ಷೇತ್ರಂ ಚ ಭಾರತ ॥ ೧೬೬ ॥
ಅಸ್ಯ ತೀರ್ಥಸ್ಯ ಮಾಹಾತ್ಮ್ಯಂ ಜಪ್ತವ್ಯಂ ಕರ್ಣಮೂಲಕೇ ।
ಪುತ್ರಸ್ಯ ವಾಪಿ ಶಿಷ್ಯಸ್ಯ ನ ಕಥಂಚನ ನಾಸ್ತಿಕೇ ॥ ೧೬೭ ॥

---

ಗಳಲ್ಲಿ ನಿರತನಾಗಿದ್ದು ಪುನರಾವೃತ್ತಿರಹಿತವಾದಂತಹ ರುದ್ರಶರೀರೈಕ್ಯವನ್ನು ಹೊಂದಿದನು. ಎಲೈ ಪಾರ್ಥನೆ! ಇಂತು ಈ ಕುಂಡವು ಬಹೂದಕವೆಂಬುದಾಗಿ ಪ್ರಖ್ಯಾತಿಯನ್ನು ಹೊಂದಿತು.

೧೬೩. ಈ ಕ್ಷೇತ್ರದಲ್ಲಿಯೇ ಷಣ್ಮುಖಸ್ವಾಮಿಯು ತನ್ನ ಅಂಶವನ್ನು ಬಿಡುವನು. ಆ ಅವತಾರವೇ ದತ್ತಾತ್ರೇಯನೆಂಬ ಹೆಸರಿನಿಂದ ಯೋಗಿಯಾಗುವನು.

೧೬೪. ಆ ದೇವನನ್ನು ಪೂಜಿಸಲು ಭಕ್ತನು ಯೋಗಸಿದ್ಧಿಯನ್ನು ಹೊಂದುವನು. ಮತ್ತು ಸ್ವಾಮಿಯು ಗೋಪ್ರಿಯನಾದುದರಿಂದ ಭಕ್ತನಿಗೆ ಪಶುಸಂಪತ್ತಿನ ಸಮೃದ್ಧಿಯುಂಟಾಗುವುದು.

೧೬೫. ಈ ಕ್ಷೇತ್ರದ ಪಶ್ಚಿಮದಲ್ಲಿಯೇ ಪುರೂರವನೆಂಬ ಮಹಾರಾಜನು ಪುರೂರವಾದಿತ್ಯನೆಂಬ ಮೂರ್ತಿಯನ್ನು ಸ್ಥಾಪಿಸಿ ಮತ್ತೊಂದು ಕ್ಷೇತ್ರವನ್ನುಂಟು ಮಾಡಿದನು.

೧೬೬. ಆ ಮೂರ್ತಿಯು ಸಕಲ ಇಷ್ಟಾರ್ಥಗಳನ್ನೂ ನೆರವೇರಿಸುವವನಾಗಿ ಭಟ್ಟಾದಿತ್ಯನಿಗೆ ಸಮಾನನೆನಿಸಿರುವನು. ಆ ಕ್ಷೇತ್ರವೂ ಕೂಡ ಬಹೂದಕ ಕ್ಷೇತ್ರದ ಸಮಾನವಾಗಿರುವುದು.

೧೬೭. ಈ ತೀರ್ಥದ ಮಾಹಾತ್ಮ್ಯೆಯನ್ನು ಪುತ್ರನ ಅಥವ ಶಿಷ್ಯನ ಕಿವಿಗಳಲ್ಲಿ ಏಕಾಂತವಾಗಿ ಹೇಳಬೇಕು. ನಾಸ್ತಿಕನಾದವನ ಸಮ್ಮುಖದಲ್ಲಿ ಖಂಡಿತವಾಗಿಯೂ ಹೇಳಬಾರದು.

**ಶ್ರುಣೋತೀದಂ ಶ್ರದ್ಧಯಾ ಯಸ್ತಸ್ಯ ತುಷ್ಯೇಚ್ಚ ಭಾಸ್ಕರಃ ।**
**ಧಾರಯನ್ ಹೃದಯೇ ಮೋಕ್ಷಂ ಮುಚ್ಯತೇ ಭವಸಾಗರಾತ್ ॥ ೧೬೮ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿ ಸಾಹಸ್ರ್ಯಾಂ ಸಂಹಿತಾಯಾಂ**
**ಪ್ರಥಮೇ ಮಾಹೇಶ್ವರಖಂಡೇ ಕೌಮಾರಿಕಾಖಂಡೇ**
**"ಬಹೂದಕಮಾಹಾತ್ಮ್ಯೇ ಬಾಲಾದಿತ್ಯವೃತ್ತಾಂತವರ್ಣನಂ"ನಾಮ**
**ಷಟ್ಚತ್ವಾರಿಂಶೋಽಧ್ಯಾಯಃ**

---

೧೬೮. ಯಾವನು ಈ ಮಾಹಾತ್ಮ್ಯೆಯನ್ನು ಶ್ರದ್ಧಾಭಕ್ತಿಗಳಿಂದ ಕೇಳುವನೊ, ಅವನು ಸೂರ್ಯನ ಪ್ರೀತಿಗೆ ಪಾತ್ರನಾಗುವನು. ಯಾವನು ಇದನ್ನು ಹೃದಯದಲ್ಲಿ ಧಾರಣ ಮಾಡಿರುವನೊ ಅವನು ಈ ಸಂಸಾರಸಮುದ್ರದಿಂದ ಬಿಡುಗಡೆಯನ್ನು ಪಡೆಯುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಎರಡನೆಯ ಕೌಮಾರಿಕಾ ಖಂಡದಲ್ಲಿ
"ಬಹೂದಕಮಾಹಾತ್ಮ್ಯ — ಬಾಲಾದಿತ್ಯ ವೃತ್ತಾಂತವರ್ಣನ"ವೆಂಬ
ನಲವತ್ತಾರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಸಪ್ತಚತ್ವಾರಿಂಶೋಽಧ್ಯಾಯಃ

### ಶ್ರೀ ದೇವ್ಯಾಖ್ಯಾನ ವರ್ಣನಂ

**ನಾರದ ಉವಾಚ :—**

**ತತೋ ಮಯಾಽಸ್ಯ ತೀರ್ಥಸ್ಯ ರಕ್ಷಣಾಯ ಪುನರ್ಜಯ ।**
**ಸಮಾರಾಧ್ಯ ಯಥಾ ದೇವ್ಯಃ ಸ್ಥಾಪಿತಾಸ್ತಚ್ಛೃಣುಷ್ವ ಭೋ ॥ ೧ ॥**
**ಯಥಾತ್ಮಾ ಸರ್ವಭೂತೇಷು ವ್ಯಾಪಕಃ ಪರಮೇಶ್ವರಃ ।**
**ತಥೈವ ಪ್ರಕೃತಿರ್ನಿತ್ಯಾ ವ್ಯಾಪಕಾ ಪರಮೇಶ್ವರೀ ॥ ೨ ॥**
**ಶಕ್ತಿಪ್ರಸಾದಾದಾಪ್ನೋತಿ ವೀರ್ಯಂ ಸರ್ವಾಶ್ಚ ಸಂಪದಃ ।**
**ಈಶ್ವರೀ ಸರ್ವಭೂತೇಷು ಸಾ ಚೈವಂ ಪಾರ್ಥ ಸಂಸ್ಥಿತಾ ॥ ೩ ॥**
**ಬುದ್ಧಿಹ್ರೀಪುಷ್ಟಿಲಜ್ಜೇತಿ ತುಷ್ಟಿಃ ಶಾಂತಿಃ ಕ್ಷಮಾ ಸ್ಪೃಹಾ ।**
**ಶ್ರದ್ಧಾ ಚ ಚೇತನಾ ಶಕ್ತಿರ್ಮಂತ್ರೋತ್ಸಾಹಪ್ರಭೂದ್ಭವಾ. ॥ ೪ ॥**
**ಇಯಮೇವ ಚ ಬಂಧಾಯ ಮೋಕ್ಷಾಯೇಯಂ ಚ ಸರ್ವದಾ ।**
**ಏನಾಮಾರಾಧ್ಯ ಚೈಶ್ವರ್ಯಮಿಂದ್ರಾದ್ಯಾಃ ಸಮವಾಪ್ನುಯುಃ ॥ ೫ ॥**

---

### ಕನ್ನಡದ ಅನುವಾದ

#### ಶ್ರೀ ದೇವ್ಯಾಖ್ಯಾನ ವರ್ಣನ

೧. ನಾರದನು ಹೇಳುತ್ತಾನೆ :— ಎಲೈ ಅರ್ಜುನನೆ! ಬಳಿಕ ಈ ಕ್ಷೇತ್ರದ ರಕ್ಷಣೆಗಾಗಿ ಯಾವ ಯಾವ ದೇವತೆಗಳನ್ನು ಪ್ರಸನ್ನಗೊಳಿಸಿ ಇಲ್ಲಿ ಸ್ಥಾಪಿಸಿರುವೆನೆಂಬುದನ್ನು ತಿಳಿಸುವೆನು ಕೇಳು.

೨. ಪರಮೇಶ್ವರನು ಆತ್ಮನಾಗಿ ಸಕಲ ಪ್ರಾಣಿಗಳಲ್ಲಿಯೂ ಹೇಗೆ ಅಂತರ್ಯಾಮಿಯಾಗಿರುವನೊ, ಹಾಗೆಯೇ ಪರಮ ಶಿವನ ಅನಪಾಯಿನಿಯೂ ಶಾಶ್ವತಳೂ ಆದ ಪ್ರಕೃತಿದೇವಿಯೂ ಸರ್ವವ್ಯಾಪಕಿಯಾಗಿರುವಳು.

೩. ಶಕ್ತಿಯ ಪ್ರಸಾದದಿಂದ ಮನುಷ್ಯನು ದೇಹದಾರ್ಢ್ಯವನ್ನೂ ಸಕಲೈಶ್ವರ್ಯಗಳನ್ನೂ ಪಡೆಯುವನು. ಎಲೈ ಪಾರ್ಥನೆ! ಇಂತು ಜಗನ್ನಾಯಕಿಯು ಸಕಲ ಭೂತಗಳಲ್ಲಿಯೂ ನೆಲಸಿರುವಳು.

೪. ಬುದ್ಧಿ, ಹ್ರೀ, ದೇಹಪುಷ್ಟಿ, ಲಜ್ಜೆ, ಸಂತೋಷ, ಶಾಂತಿ, ಮನ್ನಣೆ, ಅಭಿಲಾಷೆ, ಶ್ರದ್ಧೆ, ಚೈತನ್ಯ, ಬಲ—ಇವುಗಳೆಲ್ಲವೂ ಪ್ರಕೃತಿದೇವಿಯ ಮಂತ್ರವನ್ನು ಉತ್ಸಾಹದಿಂದ ಪುನಶ್ಚರಣೆ ಮಾಡುವುದರ ಫಲಗಳು.

೫. ಶಕ್ತಿಯೇ ಮನುಷ್ಯನ ಬಂಧಕ್ಕೂ ಮೋಕ್ಷಕ್ಕೂ ಯಾವಾಗಲೂ ಸಾಧಕಳಾಗಿರುವಳು. ಈಕೆಯನ್ನು ಪೂಜಿಸಿದುದರಿಂದಲೇ ಇಂದ್ರಾದಿ ದೇವತೆಗಳು ಐಶ್ವರ್ಯವನ್ನು ಹೊಂದುವರು.

ಯೇ ಚ ಶಕ್ತಿಂ ನ ಮನ್ಯಂತೇ ತಿರಸ್ಕುರ್ವಂತಿ ಚಾಧಮಾಃ ।
ಯೋಗೀಂದ್ರಾ ಅಪಿ ತೇ ವ್ಯಕ್ತಂ ಭ್ರಶ್ಯಂತೇ ಕಾಶಿಜಾ ಯಥಾ ॥ ೬ ॥
ವಾರಾಣಸ್ಯಾಂ ಕಿಲ ಪುರಾ ಸಿದ್ಧಯೋಗೀಶ್ವರಾಃ ಪುನಃ ।
ಅವಮನ್ಯ ಚ ತೇ ಶಕ್ತಿಂ ಪುನರ್ಭ್ರಂಶಮುಪಾಗತಾಃ ॥ ೭ ॥
ತಸ್ಮಾತ್ಸದಾ ದೇಹಿನೇಯಂ ಶಕ್ತಿಃ ಪೂಜ್ಯೈವ ನಿತ್ಯದಾ ।
ತುಷ್ಟಾ ದದಾತಿ ಸಾ ಕಾಮಾನ್ರುಷ್ಟಾ ಸಂಹರತೇ ಕ್ಷಣಾತ್ ॥ ೮ ॥
ಪರಮಾ ಪ್ರಕೃತಿಃ ಸಾ ಚ ಬಹುಭೇದೈರ್ವ್ಯವಸ್ಥಿತಾ ।
ತಾಸಾಂ ಮಧ್ಯೇ ಮಹಾದೇವ್ಯೋ ಹ್ಯತ್ರ ಸಂಸ್ಥಾಪಿತಾಃ ಶೃಣು ॥ ೯ ॥
ಚತಸ್ರಸ್ತು ಮಹಾಶಕ್ತ್ಯಶ್ಚತುರ್ದಿಕ್ಷು ವ್ಯವಸ್ಥಿತಾಃ ।
ಸಿದ್ಧಾಂಬಿಕಾ ತು ಪೂರ್ವಸ್ಯಾಂ ಸ್ಥಾಪಿತಾ ಸಾ ಗುಹೇನ ಚ ॥ ೧೦ ॥
ಜಗದಾದೌ ಮೂಲಪ್ರಕೃತೇರುತ್ಪನ್ನಾ ಸಾ ಪ್ರಕೀರ್ತ್ಯತೇ ।
ಆರಾಧಿತಾ ಯತಸ್ಸಿದ್ಧೈಸ್ತಸ್ಮಾತ್ಸಿದ್ಧಾಂಬಿಕಾ ಚ ಸಾ ॥ ೧೧ ॥

---

೬. ಯಾವ ನೀಚರು ಶಕ್ತಿಯನ್ನು ಸ್ವೀಕರಿಸದೆ ಆಕೆಯ ಪ್ರಭಾವವನ್ನು ತಿರಸ್ಕರಿಸುವರೊ, ಅವರು ಎಂತಹ ಯೋಗನಿಷ್ಠರಾದರೂ ಕೂಡ, ಎಲ್ಲರೂ ಕಾಶೀನಿವಾಸಿಗಳಂತೆ ಖಂಡಿತವಾಗಿಯೂ ಭ್ರಷ್ಟರಾಗುವರು.

೭. ಪೂರ್ವದಲ್ಲಿ ಕಾಶೀಕ್ಷೇತ್ರದಲ್ಲಿದ್ದು ಸಿದ್ಧರಾಗಿದ್ದ ಕೆಲವು ಯೋಗೀಶ್ವರರು ಶಕ್ತಿಯನ್ನು ಕಡೆಗಣಿಸಿದುದರ ಪರಿಣಾಮವಾಗಿ ಮತ್ತೆ ಭ್ರಷ್ಟತ್ವವನ್ನು ಹೊಂದಿದರೆಂದು ಕೇಳಿರುವೆನು.

೮. ಆದುದರಿಂದ ದೇಹಧಾರಿಗಳಾದವರೆಲ್ಲರೂ ಪ್ರತಿ ನಿತ್ಯವೂ ಶಕ್ತಿ ಪೂಜೆಯನ್ನು ಮಾಡಬೇಕು. ಆಕೆಯು ಸಂತುಷ್ಟಳಾದರೆ ಸಕಲ ಇಷ್ಟಾರ್ಥಗಳನ್ನೂ ಕೊಡುವಳು. ಕೋಪಗೊಂಡಲ್ಲಿ ನಿಮಿಷಮಾತ್ರದಲ್ಲಿಯೆ ಎಲ್ಲವನ್ನೂ ನಾಶಗೊಳಿಸಬಲ್ಲಳು.

೯. ಪರಾಶಕ್ತಿಯಾದ ಆ ಪ್ರಕೃತಿಯು ಅನೇಕ ವಿಧಗಳಾಗಿ ನೆಲಸಿರುವಳು. ಅವುಗಳಲ್ಲೆಲ್ಲ ನಾನು ಇಲ್ಲಿ ಸ್ಥಾಪಿಸಿರುವ ಮಹಾದೇವಿಯರ ವಿಷಯವನ್ನು ಕೇಳು.

೧೦. ಕ್ಷೇತ್ರದ ನಾಲ್ಕು ದಿಕ್ಕುಗಳಲ್ಲಿಯೂ ನಾಲ್ಕು ಮಹಾ ಶಕ್ತಿಗಳು ನೆಲಸಿರುವರು. ಪೂರ್ವದಲ್ಲಿ ಸಿದ್ಧಾಂಬಿಕೆಯು ಷಣ್ಮುಖಸ್ವಾಮಿಯಿಂದಲೇ ಸ್ಥಾಪಿಸಲ್ಪಟ್ಟಿರುವಳು.

೧೧. ಆಕೆಯು ಪ್ರಪಂಚದ ಆದಿಯಲ್ಲಿ ಮೂಲಪ್ರಕೃತಿಯಿಂದ ಉದ್ಭವಿಸಿದಳೆಂದು ಹೇಳುವರು. ಆಗ ಸಿದ್ಧರು ಆಕೆಯನ್ನು ಪೂಜಿಸಿದುದರಿಂದ ಆಕೆಗೆ ಸಿದ್ಧಾಂಬಿಕೆಯೆಂದೇ ಹೆಸರಾಯಿತು.

ದಕ್ಷಿಣಸ್ಯಾಂ ತಥಾ ತಾರಾ ಸಂಸ್ಥಿತಾ ಸ್ಥಾಪಿತಾ ಮಯಾ ।
ತಾರಣಾರ್ಥಾಯ ದೇವಾನಾಂ ಯಸ್ಮಾತ್ಕೂರ್ಮಂ ಸಮಾಶ್ರಿತಾ ॥ ೧೨ ॥
ಯಥಾವಿಷ್ಟಃ ಸಮುಜ್ಜಹ್ರೇ ವೇದಾನ್ಕೂರ್ಮೋ ಜಗದ್ಗುರುಃ ।
ಅನಯಾವಿಷ್ಟದೇಹಶ್ಚ ಬುಧೋ ಬೌದ್ಧಾನ್ನಿಷ್ಯತಿ ।
ಕೋಟಿಶೋ ವೇದಮಾರ್ಗಸ್ಯ ಧ್ವಂಸಕಾನ್ಪಾಪಕರ್ಮಿಣಃ ॥ ೧೩ ॥
ಇಯಂ ಮಯಾ ಸಮಾರಾಧ್ಯ ಸಮಾನೀತಾ ಗಿರೇಃ ಸುತಾ ।
ಕೋಟಿಸಂಖ್ಯಾಭಿರತ್ಯುಗ್ರದೇವೀಭಿಃ ಸಂವೃತಾ ಚ ಸಾ ॥ ೧೪ ॥
ದಕ್ಷಿಣಾಂ ದಿಶಮಾಶ್ರಿತ್ಯ ಸಂಸ್ಥಿತಾ ಮಮ ಗೌರವಾತ್ ॥ ೧೫ ॥
ಪಶ್ಚಿಮಾಯಾಂ ತಥಾ ದೇವೀ ಸಂಸ್ಥಿತಾ ಭಾಸ್ವರಾ ಶುಭಾ ।
ಯಯಾವಿಷ್ಟಾನಿ ಭಾಸಂತೇ ಭಾಸ್ಕರಪ್ರಮುಖಾನಿ ಚ ॥ ೧೬ ॥
ಬಿಂಬಾನಿ ಸರ್ವತಾರಾಣಾಂ ಗಚ್ಛಂತ್ಯಾಯಾಂತಿ ಚ ದ್ರುತಂ ।
ಸೈಷಾ ಮಹಾಬಲಾ ಶಕ್ತಿರ್ಭಾಸ್ವರಾ ಕುರುನಂದನ ॥ ೧೭ ॥

---

೧೨. ದಕ್ಷಿಣದಿಕ್ಕಿನಲ್ಲಿ ನನ್ನಿಂದ ಸ್ಥಾಪಿತಳಾದ ತಾರೆಯೆಂಬ ದೇವತೆಯು ನೆಲಸಿರುವಳು. ಪೂರ್ವದಲ್ಲಿ ದೇವತೆಗಳ ಕಾರ್ಯವನ್ನು ಸಫಲಗೊಳಿಸುವುದಕ್ಕಾಗಿ ಈ ಶಕ್ತಿಯೇ ಆದಿಕೂರ್ಮನಲ್ಲಿ ಪ್ರವೇಶಮಾಡಿದ್ದಳು.

೧೩. ಈ ಆವೇಶದ ಬಲದಿಂದಲೇ ಜಗದ್ಗುರುವಾದ ಮಹಾವಿಷ್ಣುವು ಕೂರ್ಮಾವತಾರದಲ್ಲಿ ವೇದಗಳನ್ನುದ್ಧರಿಸಿದನು. ಈಕೆಯಿಂದ ಆವಿಷ್ಟವಾದ ದೇಹವುಳ್ಳವನಾಗಿಯೆ ಬುಧನು ವೇದಮಾರ್ಗಧ್ವಂಸಕರೂ, ಪಾಪಿಗಳೂ ಆದ ಬೌದ್ಧರನ್ನು ಕೋಟಿಗಟ್ಟಲೆಯಾಗಿ ನಿಗ್ರಹಿಸುವನು.

೧೪. ಪರ್ವತರಾಜನ ಮಗಳಾದ ಈಕೆಯು ನನ್ನಿಂದ ಪೂಜಿಸಲ್ಪಟ್ಟವಳಾಗಿ ಇಲ್ಲಿಗೆ ತರಲ್ಪಟ್ಟಳು. ಈಕೆಯು ಅನೇಕ ಕೋಟಿ ಸಂಖ್ಯೆಯುಳ್ಳ ಭಯಂಕರದೇವಿಯರ ಸಮೂಹದಿಂದ ಪರಿವೃತಳಾಗಿರುವಳು.

೧೫. ನನ್ನಲ್ಲಿ ಆಕೆಯು ಅಭಿಮಾನವನ್ನಿಟ್ಟವಳಾಗಿ ದಕ್ಷಿಣ ದಿಕ್ಕಿನಲ್ಲಿ ನೆಲಸಿರುವಳು.

೧೬. ಪಶ್ಚಿಮದಲ್ಲಿ ಭಾಸ್ವರಾನಾಮಕಳಾದ ದೇವಿಯು ನೆಲಸಿ ಮಂಗಳವನ್ನುಂಟುಮಾಡುತ್ತಿರುವಳು. ಆಕೆಯ ಆವೇಶದಿಂದಲೇ ಸೂರ್ಯನೇ ಮೊದಲಾದವರು ಪ್ರಕಾಶಿಸುತ್ತಿರುವರು.

೧೭. ಸಮಸ್ತ ನಕ್ಷತ್ರಗಳ ಬೆಳಕೂ ಪ್ರತಿ ನಿಮಿಷದಲ್ಲಿಯೂ ಮಿಣುಗುಟ್ಟುತ್ತಿರುವುದಕ್ಕೆ ಆಕೆಯೇ ಕಾರಣವು. ಎಲೈ ಕೌರವನೆ! ಈ ಭಾಸ್ವರೆಯೆಂಬ ಶಕ್ತಿಯು ಇಂತಹ ಮಹಾ ಪರಾಕ್ರಮವುಳ್ಳವಳಾಗಿರುವಳು.

ಮಯಾರಾಧ್ಯ ಸಮಾನೀತಾ ಕಟಾಹಾದತ್ರ ಸಂಸ್ಥಿತಾ ।
ಕೋಟಿಕೋಟಿವೃತಾ ನಿತ್ಯಂ ತ್ರಾಯತೇ ಪಶ್ಚಿಮಾಂ ದಿಶಂ ॥ ೧೮ ॥
ಉತ್ತರಸ್ಯಾಂ ತಥಾ ದೇವೀ ಸಂಸ್ಥಿತಾ ಯೋಗನಂದಿನೀ ।
ಪರಮಪ್ರಕೃತೇರ್ದೇಹಾತ್ಪೂರ್ವಂ ನಿಃಸೃತಯಾ ಯಯಾ ॥ ೧೯ ॥
ದೃಷ್ಟ್ವಾ ದೃಷ್ಟ್ವಾ ನಿರ್ಮಲಯಾ ಯೋಗಮಾಪುಶ್ಚತುಸ್ಸನಾಃ ।
ಯೋಗೀಶ್ವರೀ ಚ ಸಾ ದೇವೀ ಸನಕಾದ್ಯೈಃ ಸುತೋಷಿತಾ ॥ ೨೦ ॥
ಸೈವ ಚಾಂಡಕಟಾಹಾನ್ಮೇ ಸಮಾರಾಧ್ಯಾತ್ರ ಸ್ಥಾಪಿತಾ ।
ಯೋಗಿನೀಭಿಃ ಪರಿವೃತಾ ಸಂಸ್ಥಿತಾ ಚೋತ್ತರಾಂ ದಿಶಂ ॥ ೨೧ ॥
ಏವಮೇತಾ ಮಹಾಶಕ್ತ್ಯಶ್ಚತಸ್ರಃ ಸಂಸ್ಥಿತಾ ಸದಾ ।
ಪೂಜಿತಾಃ ಕಾಮದಾ ನಿತ್ಯಂ ರುಷ್ಟಾಃ ಸಂಹರಣಕ್ಷಮಾಃ ॥ ೨೨ ॥
ತತಶ್ಚ ನವಮೇ ದುರ್ಗಾಃ ಸಮಾನೀತಾಃ ಶೃಣುಷ್ವ ತಾಃ ॥ ೨೩ ॥

---

೧೮. ಬ್ರಹ್ಮಾಂಡದ ಕಟಾಹದಲ್ಲಿದ್ದ ಈಕೆಯು ನನ್ನಿಂದ ಪೂಜೆಯನ್ನು ಸ್ವೀಕರಿಸಿ ಇಲ್ಲಿಗೆ ತರಲ್ಪಟ್ಟು ಸ್ಥಾಪಿತಳಾಗಿರುವಳು. ಅನೇಕ ಕೋಟಿ ಪರಿಚಾರಿಕೆಯರಿಂದ ಕೂಡಿದವಳಾಗಿ ಈ ಕ್ಷೇತ್ರದ ಪಶ್ಚಿಮ ದಿಕ್ಕನ್ನು ಕಾಪಾಡು ತ್ತಿರುವಳು.

೧೯-೨೦. ಉತ್ತರ ದಿಕ್ಕಿನಲ್ಲಿ ಯೋಗನಂದಿನಿಯೆಂಬ ದೇವಿಯು ನೆಲಸಿರು ವಳು. ಮೊದಲು ಈಕೆಯು ಮೂಲಪ್ರಕೃತಿಯ ದೇಹದಿಂದ ಹೊರಟವಳು, ಇವಳ ಕರುಣಾಪೂರಿತವಾದ ಕಟಾಕ್ಷದಿಂದಲೇ ವೀಕ್ಷಿತರಾದ ಸನಕ, ಸನಂದನ. ಸನತ್ಕುಮಾರ, ಸನತ್ಸುಜಾತರೆಂಬ ಬ್ರಹ್ಮಪುತ್ರರು ಯೋಗಸಿದ್ಧಿಯನ್ನು ಪಡೆದರು. ಯೋಗೀಶ್ವರಿಯಾದ ಈ ದೇವಿಯೇ ಸನಕಾದಿ ಮಹರ್ಷಿಗಳಿಂದ ಸಂತೋಷ ಗೊಳಿಸಲ್ಪಟ್ಟಳು.

೨೧. ಈಕೆಯೇ ಬ್ರಹ್ಮಾಂಡದ ಕಟಾಹದಿಂದ ಇಲ್ಲಿಗೆ ತರಲ್ಪಟ್ಟು, ನನ್ನಿಂದ ಪೂಜಿತಳಾಗಿ ನೆಲಸಿರುವಳು. ಈಕೆಯು ಅನೇಕ ಯೋಗಿನಿಯರಿಂದ ಕೂಡಿದ ವಳಾಗಿ ಉತ್ತರದಿಕ್ಕನ್ನು ಕಾಪಾಡುತ್ತಿರುವಳು.

೨೨. ಇಂತು ಇಲ್ಲಿ ಯಾವಾಗಲೂ ನಾಲ್ಕು ಮಹಾಶಕ್ತಿಯರು ನೆಲಸಿರು ವರು. ಇವರು ಪೂಜೆಗಳಿಂದ ಸಂತೋಷಗೊಂಡರೆ ಸಕಲ ಕಾಮಗಳನ್ನೂ ಪೂರ್ತಿಗೊಳಿಸುವರು ; ಕೋಪಗೊಂಡರೆ ಲೋಕವನ್ನೆಲ್ಲ ಸಂಹರಿಸುವುದಕ್ಕೂ ಸಮರ್ಥರಾಗಿರುವರು.

೨೩. ಇವರಲ್ಲದೆ ಒಂಬತ್ತು ದುರ್ಗಿಯರನ್ನು ಇಲ್ಲಿಗೆ ಕರೆದು ತಂದಿರು ವೆನು. ಅವರ ವಿಷಯವನ್ನು ಕೇಳು.

ತ್ರಿಪುರಾನಾಮ ಪರಮಾ ದೇವೀ ಸ್ಥಾಣುರ್ಯಯಾ ಪುರಾ ।
ಆವಿಷ್ಟಸ್ತ್ರಿಪುರಂ ನಿನ್ಯೇ ಭಸ್ಮತ್ವಂ ಜಗದೀಶ್ವರಃ ॥ ೨೪ ॥
ತ್ರಿಪುರೇತಿ ತತಸ್ತಾಂ ತು ಪ್ರೋಕ್ತವಾನ್ಭಗವಾನ್ ಹರಃ ।
ತುಷ್ಟಾವ ಚ ಸ್ವಯಂ ತಸ್ಮಾತ್ಪೂಜ್ಯಾ ಸಾ ಜಗತಾಮಪಿ ॥ ೨೫ ॥
ಸಾ ಚಾರಾಧ್ಯ ಸಮಾನೀತಾ ಮಯಾಮರೇಶ್ವರಪರ್ವತಾತ್ ।
ಭಕ್ತಾನಾಂ ಕಾಮದಾ ಸಾಸ್ತಿ ಭಟ್ಟಾದಿತ್ಯಸಮೀಪತಃ ॥ ೨೬ ॥
ಅಪರಾ ಚಾಪಿ ಕೋಲಾಂಬಾ ಮಹಾಶಕ್ತಿಃ ಸನಾತನೀ ।
ಕೋಲರೂಪೀ ಯಥಾವಿಷ್ಟಃ ಕೇಶವಶ್ಚೋಜ್ಜಹಾರ ಗಾಂ ॥ ೨೭ ॥
ತಸ್ಮಾತ್ಸಾ ವಿಷ್ಣುನಾ ಚೋಕ್ತಾ ಕೋಲಾಂಬೇತಿ ಸ್ತುತಾರ್ಚಿತಾ ।
ಸಾ ಚ ದೇವೀ ಮಯಾ ಪಾರ್ಥ ಭಕ್ತಿಯೋಗೇನ ತೋಷಿತಾ ॥ ೨೮ ॥
ವಾರಾಹಗಿರಿಸಂಸ್ಥಾ ಮಾಂ ಸಮಾನೀತಾ ಚ ಸಾಬ್ರವೀತ್ ।
ಯತ್ರಾಹಂ ನಾರದ ಸದಾ ತಿಷ್ಠಾಮಿ ಕೃಪಯಾರ್ಥಿನಾಂ ।
ತತ್ರ ಕೂಪೇನ ಸಂಸ್ಥೇಯಂ ರುದ್ರಾಣೀ ಸಂಸ್ಥಿತೇನ ವೈ ॥ ೨೯ ॥

---

೨೪-೨೫. ಮೊದಲನೆಯವಳೇ ಉತ್ತಮೆಯಾದ ತ್ರಿಪುರಾಂಬೆಯು. ಈಕೆಯ ಆವೇಶದ ಬಲದಿಂದಲೇ ಮಹಾದೇವನು ಲೋಕರಕ್ಷಣಾರ್ಥವಾಗಿ ತ್ರಿಪುರಗಳನ್ನು ಭಸ್ಮೀಕರಿಸಿದನು. ಆದುದರಿಂದ ಪರಮೇಶ್ವರನೇ ಈಕೆಗೆ ತ್ರಿಪುರೆ ಯೆಂಬ ಹೆಸರನ್ನು ಕೊಟ್ಟನು. ಆತನು ತಾನೇ ಆಕೆಯನ್ನು ಸ್ತೋತ್ರಮಾಡಿದನು. ಈ ಕಾರಣದಿಂದಲೇ ಆಕೆಯು ಸಕಲ ಜಗತ್ತಿಗೂ ಪೂಜಾರ್ಹಳಾಗಿರುವಳು.

೨೬. ಆಕೆಯು ಮಹೇಂದ್ರಪರ್ವತದಲ್ಲಿದ್ದಳು. ಆಕೆಯನ್ನು ಪೂಜಿಸಿ ನಾನು ಇಲ್ಲಿಗೆ ಕರೆದುತಂದೆನು. ಭಟ್ಟಾದಿತ್ಯನ ಸಮೀಪದಲ್ಲಿ ಆಕೆಯು ಸಕಲ ಭಕ್ತರಿಗೂ ಇಷ್ಟಾರ್ಥಗಳನ್ನು ನೆರವೇರಿಸುತ್ತ ನೆಲಸಿರುವಳು.

೨೭. ಎರಡನೆಯವಳು ಅನಾದಿಯೂ ಮಹಾಶಕ್ತಿವಂತೆಯೂ ಆದ ಕೋಲಾಂಬೆಯು. ಈಕೆಯ ಆವೇಶವೇ ವರಾಹರೂಪಿಯಾದ ಮಹಾವಿಷ್ಣುವಿನಲ್ಲಿ ಹೊಕ್ಕು ಭೂಮಿಯ ಉದ್ಧಾರಕ್ಕೆ ಸಹಾಯಕವಾಯಿತು.

೨೮. ಆದುದರಿಂದ ನಾರಾಯಣನು ಆಕೆಗೆ ಕೋಲಾಂಬೆಯೆಂಬ ನಾಮ ವನ್ನು ಕೊಟ್ಟು ಸ್ತೋತ್ರಮಾಡಿ ಪೂಜಿಸಿದನು. ಎಲೈ ಅರ್ಜುನನೆ! ಆಕೆಯನ್ನೇ ನಾನು ನನ್ನ ಭಕ್ತಿಯೋಗದಿಂದ ಸಂತೋಷಗೊಳಿಸಿದೆನು.

೨೯. ವರಾಹಗಿರಿಯಲ್ಲಿದ್ದ ಆಕೆಯನ್ನು ಇಲ್ಲಿಗೆ ಕರೆತಂದೊಡನೆಯೆ ಆಕೆಯು ಇಂತೆಂದಳು. "ಎಲೈ ನಾರದನೆ! ನಾನು ಬೇಡಿದವರಿಗೆ ಬೇಕಾದ ಅಭೀಷ್ಟಗಳನ್ನು ಕೊಡುತ್ತ ಎಲ್ಲಿ ನಿಂತಿರುವೆನೊ, ಅಲ್ಲಿ ದುರ್ಗಾದೇವಿಯಿಂದ ಅಭಿರಕ್ಷಿತವಾದ ಒಂದು ಕೂಪವೂ ಇರಬೇಕು.

ತಂ ಹಿ ಕೂಪಂ ವಿನಾ ಮಹ್ಯಂ ನ ರತಿರ್ಜಾಯತೇ ಕ್ವಚಿತ್ ।
ತಸ್ಮಾದ್ಭವಾನ್ಕೂಪವರಂ ಸ್ವಯಮತ್ರ ಖನ ದ್ವಿಜ ॥೩೦॥
ಏವಮುಕ್ತೋ ಪಾರ್ಥ ದೇವ್ಯಾ ದರ್ಭಮೂಲೇನ ಮೇ ತದಾ ।
ಕೂಪೋಽಖನಿ ಯತ್ರ ಸಾಕ್ಷಾದ್ರುದ್ರಾಣೀ ಕೂಪ ಆಬಭೌ ॥ ೩೧ ॥
ತತೋ ಮಯಾ ತತ್ರ ದೇವಾಃ ಸ್ನಾತ್ವಾ ಜಪ್ತ್ವಾ ಚ ತರ್ಪಿತಾಃ ॥ ೩೨ ॥
ಪೂಜಿತಾ ಚ ತತೋ ದೇವೀ ಕೋಲಾಂಬಾ ಜಗದೀಶ್ವರೀ ।
ಪರಿತುಷ್ಟಾ ತದಾ ದೇವೀ ಪ್ರಣತಂ ಮಾಂ ತತೋಽಬ್ರವೀತ್ ॥ ೩೩ ॥
ಸದಾತ್ರ ಚಾಹಂ ಸ್ಥಾಸ್ಯಾಮಿ ಪ್ರಸಾದಂ ಪ್ರಾಪಿತಾ ತ್ವಯಾ ।
ಯೇ ಚ ಕೂಪೇಽತ್ರ ಸಂಸ್ನಾತ್ವಾ ಮಾಘಾಷ್ಟಮ್ಯಾಂ ವಿಶೇಷತಃ ।
ಪೂಜಯಿಷ್ಯಂತಿ ಮಾಂ ಮರ್ತ್ಯಾಸ್ತೇಷಾಂ ಛೇತ್ಸ್ಯಾಮಿ ದುಷ್ಕೃತಂ ॥೩೪॥
ಸರ್ವತೀರ್ಥಮಯೋ ಯಚ್ಚ ಸರ್ವರ್ತುಕವನೇ ಸ್ಥಿತಃ ॥ ೩೫ ॥
ಮೇರೋಃ ಸಮೀಪೇ ರುದ್ರಾಣ್ಯಾಃ ಕೂಪ ಏಷ ಸ ಏವ ಚ ॥ ೩೬ ॥

---

೩೦. ಆ ಕೂಪವಿದ್ದಲ್ಲದೆ ನನಗೆ ನಿಲ್ಲಲು ಅಪೇಕ್ಷೆಯುಂಟಾಗುವುದಿಲ್ಲ. ಆದುದರಿಂದ ಬ್ರಾಹ್ಮಣೋತ್ತಮನಾದ ನೀನೇ ಇಲ್ಲಿ ಒಂದು ಭಾವಿಯನ್ನು ನಿರ್ಮಾಣಮಾಡು."

೩೧. ಎಲೈ ಪಾರ್ಥನೆ! ದೇವಿಯಿಂದ ಇಂತು ಆಜ್ಞಪ್ತನಾಗಿ ನಾನು ಒಂದು ಕೂಪವನ್ನು ದರ್ಭೆಯ ಮೂಲದಿಂದ ಅಗೆದೆನು. ಆ ಕೂಪದಲ್ಲಿಯೇ ರುದ್ರಾಣಿಯೂ ಸನ್ನಿಹಿತಳಾದಳು.

೩೨–೩೩. ಬಳಿಕ ಅಲ್ಲಿ ನಾನು ಸ್ನಾನವನ್ನೂ, ಜಪವನ್ನೂ ಮಾಡಿ ದೇವತೆಗಳನ್ನು ತೃಪ್ತಿಗೊಳಿಸಿದೆನು. ಇಷ್ಟೆಯಲ್ಲದೆ ಲೋಕನಾಯಕಿಯಾದ ಕೋಲಾಂಬೆಯು ಅದೇ ಸಮಯದಲ್ಲಿಯೇ ನನ್ನಿಂದ ಪೂಜೆಯನ್ನು ಸ್ವೀಕರಿಸಿ ನನ್ನ ಭಕ್ತಿ ಶ್ರದ್ಧೆಗಳಿಗಾಗಿ ಸಂತೋಷಗೊಂಡು ನಮಸ್ಕಾರಮಾಡಿದ ನನ್ನನ್ನು ಕುರಿತು ಈ ರೀತಿ ಅಪ್ಪಣೆಕೊಡಿಸಿದಳು.

೩೪. "ಎಲೈ ನಾರದಮುನೀಂದ್ರನೆ! ನಿನ್ನಿಂದ ಪ್ರಸನ್ನಗೊಳಿಸಲ್ಪಟ್ಟ ನಾನು ಯಾವಾಗಲೂ ಇಲ್ಲಿ ನೆಲಸಿರುವೆನು. ಯಾವ ಮನುಷ್ಯರು ಈ ರುದ್ರಾಣೀ ಕೂಪದಲ್ಲಿ ಸ್ನಾನಮಾಡಿ ಮಾಘಮಾಸದಲ್ಲಿ ಅಷ್ಟಮಿಯ ದಿನ ನನ್ನನ್ನು ವಿಶೇಷ ವಿಧಿಯಿಂದ ಪೂಜಿಸುವರೊ, ಅವರ ಪಾಪಗಳೆಲ್ಲವನ್ನೂ ನಿರ್ಮೂಲಗೊಳಿಸುವೆನು. ಪಾಪವಿಮುಕ್ತರಾಗಿ ಅವರು ಮೋಕ್ಷವನ್ನು ಪಡೆಯುತ್ತಾರೆ.

೩೫–೩೬. ಮೇರುಪರ್ವತದ ಸಮೀಪದಲ್ಲಿ ಸಕಲ ಋತುಗಳ ಫಲಪುಷ್ಪಗಳಿಂದಲೂ ಭರಿತವಾದ ವನದಲ್ಲಿರುವ ಸಕಲ ತೀರ್ಥಮಯವಾದ ರುದ್ರಾಣಿಯ ಕೂಪವೇ ಇಲ್ಲಿ ಸಾಕ್ಷಾತ್ಕರಿಸಿರುವುದು.

ಪ್ರಯಾಗಾದಪಿ ಗಂಗಾಯಾ ಗಯಾಯಾಶ್ಚ ವಿಶೇಷತಃ
ಕೂಪೇಽಸ್ಮಿನ್ನಧಿಕಂ ಸ್ನಾನಂ ಮಯಾ ನಾರದ ಕೀರ್ತಿತಂ ॥ ೩೭ ॥
ತದಹಂ ತವ ವಾಕ್ಯೇನ ಸಂಸ್ಥಿತಾತ್ರ ತಪೋಧನ ।
ಗುಹೇನಾಥ ಸರಃ ಪುಣ್ಯಂ ಪಾಲಯಿಷ್ಯಾಮ್ಯತಂದ್ರಿತಾ ॥ ೩೮ ॥
ಕುಮಾರೇಶಂ ಪೂಜಯಿತ್ವಾ ಪೂಜಯಿಷ್ಯಂತಿ ಯೇ ಚ ಮಾಂ ।
ದೇವೀಭಿಃ ಷಷ್ಟಿಕೋಟೀಭಿರ್ಯುತಾ ತೇಷಾಮಭೀಷ್ಟದಾ ॥ ೩೯ ॥

ನಾರದ ಉವಾಚ:—

ಇತ್ಯುಕ್ತೋಽಹಂ ಪಾರ್ಥ ದೇವ್ಯಾ ತದಾನೀಂ ಪ್ರೀಯಮಾಣಯಾ ।
ಪ್ರತ್ಯಬ್ರವಂ ಪ್ರಮುದಿತಃ ಕೋಲಾಂಬಾಂ ವಿಶ್ವಮಾತರಂ ॥ ೪೦ ॥
ಅತ್ರಾಸ್ಯ ಮಾತಾ ತ್ವಂ ದೇವಿ ಗುಪ್ತಕ್ಷೇತ್ರಸ್ಯ ಕಾರಣಂ ।
ತೀರ್ಥಯಾತ್ರಾ ವೃಥಾ ತೇಷಾಂ ನಾರ್ಚಯಂತೀಹ ತ್ವಾಂ ಚ ಯೇ ॥ ೪೧ ॥
ಇದಂ ಚ ಯತ್ಸರಃ ಪುಣ್ಯಂ ತ್ವನ್ನಾಮ್ನಾ ಖ್ಯಾತಿಮೇಷ್ಯತಿ ।
ಈಶ್ವರೀ ಸರಸೋಽಸ್ಯ ತ್ವಂ ತೀರ್ಥಸ್ಯಾಸ್ಯ ತಥೇಶ್ವರೀ ॥ ೪೨ ॥

---

೩೭. ಎಲೈ ನಾರದನೆ! ಪ್ರಯಾಗ ಮತ್ತು ಗಯಾಕ್ಷೇತ್ರಗಳಲ್ಲಿ ಗಂಗಾಸ್ನಾನವನ್ನು ಮಾಡುವುದಕ್ಕಿಂತಲೂ ಈ ಕೂಪದ ಸ್ನಾನವು ಅಧಿಕಫಲಪ್ರದವೆಂದು ನಾನು ಹೇಳಿರುವೆನು.

೩೮. ತಪಸ್ಸಂಪನ್ನನೆ! ನಿನ್ನ ಕೋರಿಕೆಯನ್ನನುಸರಿಸಿ ನಾನು ಇಲ್ಲಿ ನೆಲಸಿರುವೆನು. ಗುಹೇಶ್ವರನ ಸಹಿತವಾಗಿ ಪಾವನವಾದ ಈ ಸರೋವರನ್ನು ಜಾಗರೂಕತೆಯಿಂದ ಪಾಲಿಸುತ್ತಿರುವೆನು.

೩೯. ಯಾವ ಭಕ್ತರು ಕುಮಾರೇಶ್ವರನನ್ನು ಪೂಜಿಸಿ ಬಳಿಕ ನನ್ನನ್ನರ್ಚಿಸುವರೊ, ಅವರಿಗೆ ಅರವತ್ತು ಕೋಟಿ ದೇವಿಯರಿಂದೊಡಗೂಡಿದ ನಾನು ಸಕಲಾಭೀಷ್ಟಗಳನ್ನೂ ಕೊಡುವೆನು.''

೪೦. ನಾರದರು ಹೇಳುತ್ತಾರೆ:—ಎಲೈ ಪಾರ್ಥನೆ! ಇಂತು ಹೇಳಲ್ಪಟ್ಟು ಆಗ ಸಂತೋಷಗೊಂಡು ಸುಪ್ರಸನ್ನಳೂ, ಜಗನ್ಮಾತೆಯೂ ಆದ ಕೋಲಂಬಾದೇವಿಯನ್ನು ಕುರಿತು ನಾನು ಉತ್ತರವನ್ನು ಹೇಳತೊಡಗಿದೆನು.

೪೧. ''ತಾಯೆ! ಇಲ್ಲಿ ಗುಪ್ತಕ್ಷೇತ್ರವಿರುವುದಕ್ಕೆ ನೀನೇ ಕಾರಣಳಾಗಿರು. ಇಲ್ಲಿಗೆ ಬಂದು ಯಾರು ನಿನ್ನನ್ನು ಪೂಜಿಸುವುದಿಲ್ಲವೋ, ಅವರ ತೀರ್ಥಯಾತ್ರೆಯು ನಿಷ್ಫಲವಾಗಲಿ.

೪೨. ಪುಣ್ಯಪ್ರದವಾದ ಈ ಸರೋವರವೂ ನಿನ್ನ ಹೆಸರಿನಿಂದಲೇ ಪ್ರಖ್ಯಾತಿಯನ್ನು ಪಡೆಯುವುದು. ನೀನೇ ಈ ಸರೋವರಕ್ಕೂ ತೀರ್ಥಕ್ಕೂ ಅಧೀಶ್ವರಿಯಾಗಿರುವೆ.''

ಏವಂ ದೀರ್ಘಂ ತಪಸ್ತಪ್ತ್ವಾ ಸ್ಥಾಪಿತಾ ಮಯಕಾ ಶುಭಾ ।
ಮಹಾದುರ್ಗಾ ನರೈಸ್ತಸ್ಮಾತ್ಪೂಜ್ಯೇಯಂ ಸತತಂ ಬುಧೈಃ ॥ ೪೩ ॥
ತೃತೀಯಾ ಚ ದಿಶಿ ತಸ್ಯಾಂ ಸ್ಥಿತಾ ಸಂಸ್ಥಾಪಿತಾ ಮಯಾ ।
ಗುಹೇನ ಚ ಕಪಾಲೇಶ್ಯಾಃ ಪ್ರಭಾವೋಽಸ್ಯಾಃ ಪುರೇರಿತಃ ॥ ೪೪ ॥
ಧನ್ಯಾಸ್ತೇ ಯೇ ಪ್ರಪಶ್ಯಂತಿ ನಿತ್ಯಮೇನಾಂ ನರೋತ್ತಮಾಃ ।
ಕಪಾಲೇಶ್ವರಮಭ್ಯರ್ಚ್ಯ ವಿಶ್ವಶಕ್ತಿರಿಯಂ ಯತಃ ॥ ೪೫ ॥
ಏವಮೇತಾಸ್ತಿಸ್ರೋ ದುರ್ಗಾಃ ಪೂರ್ವಸ್ಯಾಂ ದಿಶಿ ಸಂಸ್ಥಿತಾಃ ।
ಪಶ್ಚಿಮಾಯಾಂ ಪ್ರವಕ್ಷ್ಯಾಮಿ ತಿಸ್ರೋ ದುರ್ಗಾ ಮಹೋತ್ತಮಾಃ ॥
ಸುವರ್ಣಾಕ್ಷೀ ತು ಯಾ ದೇವೀ ಬ್ರಹ್ಮಾಂಡಪರಿಪಾಲಿನೀ ।
ಸಾ ಮಯಾತ್ರ ಸಮಾರಾಧ್ಯ ತೀರ್ಥೇ ದೇವೀ ನಿವೇಶಿತಾ ॥ ೪೭ ॥
ಯೇ ಚೈನಾಂ ಪ್ರಣಮಿಷ್ಯಂತಿ ಪೂಜಯಿಷ್ಯಂತಿ ಭಕ್ತಿತಃ ।
ತ್ರಯಸ್ತ್ರಿಂಶದ್ಭಿಃ ಕೋಟೀಭಿರ್ದೇವೀಭಿಃ ಪೂಜಿತಾ ಚ ತೈಃ ॥ ೪೮ ॥

---

೪೩. ಎಲೈ ಅರ್ಜುನನೇ! ನಾನಿಂತು ಬಹಳಕಾಲ ತಪಸ್ಸನ್ನು ಮಾಡಿದ ಫಲವಾಗಿ ಮಹಾದುರ್ಗಿಯು ಇಲ್ಲಿ ಸ್ಥಾಪಿಸಲ್ಪಟ್ಟಿರುವಳು. ಆದುದರಿಂದ ಜ್ಞಾನಿಗಳಾದ ಮಾನವರು ಯಾವಾಗಲೂ ಈಕೆಯನ್ನು ಶ್ರದ್ಧಾನ್ವಿತರಾಗಿ ಭಕ್ತಿಯಿಂದ ಪೂಜಿಸಬೇಕು.

೪೪. ಅದೇ ದಿಕ್ಕಿನಲ್ಲಿಯೇ ಮೂರನೆಯವಳಾದ ಕಪಾಲೇಶ್ವರಿಯನ್ನೂ ನಾನೇ ಸ್ಥಾಪಿಸಿರುವೆನು. ಆಕೆಯ ಮಾಹಾತ್ಮ್ಯೆಯನ್ನು ಷಣ್ಮುಖಸ್ವಾಮಿಯೇ ಹಿಂದೆ ನಿರೂಪಿಸಿರುವನು.

೪೫. ಯಾವ ಮನುಷ್ಯೋತ್ತಮರು ನಿತ್ಯದಲ್ಲಿಯೂ ಕಪಾಲೇಶ್ವರನನ್ನು ಪೂಜಿಸಿ ಬಳಿಕ ಈಕೆಯ ದರ್ಶನವನ್ನು ಮಾಡುವರೊ, ಅವರೇ ಧನ್ಯರು. ಈಕೆಯೇ ವಿಶ್ವಶಕ್ತಿಯೆನಿಸಿರುವಳು.

೪೬. ಇಂತು ಪೂರ್ವ ದಿಕ್ಕಿನಲ್ಲಿ ಮೂವರು ದುರ್ಗಿಯರು ಸ್ಥಾಪಿಸಲ್ಪಟ್ಟಿರುವರು. ಇನ್ನು ಪಶ್ಚಿಮದಲ್ಲಿರುವ ಮಹಾಫಲದಾಯಕಿಯರಾದ ಮೂವರು ದುರ್ಗಿಯರನ್ನು ತಿಳಿಸುವೆನು.

೪೭. ಓ ಪಾರ್ಥ! ಆ ತರುವಾಯ ಸಮಸ್ತ ಬ್ರಹ್ಮಾಂಡವನ್ನೂ ಪಾಲಿಸುತ್ತಿರುವ ಸುವರ್ಣಾಕ್ಷಿಯೆಂಬ ದೇವಿಯನ್ನು ಪೂಜಿಸಿ ಇಲ್ಲಿಗೆ ಕರೆತಂದು ಈ ತೀರ್ಥದಲ್ಲಿ ಸ್ಥಾಪನೆ ಮಾಡಿರುವೆನು.

೪೮. ಯಾರು ಈಕೆಗೆ ನಮಸ್ಕಾರವನ್ನು ಮಾಡಿ ಭಕ್ತಿಯಿಂದ ಪೂಜಿಸುವರೊ, ಅವರು ಮೂವ್ವತ್ತುಮೂರು ಕೋಟಿ ದೇವಿಯರಿಂದ ಕೂಡಿದ ಈಕೆಯನ್ನು ಪೂಜಿಸಿದ ಫಲವನ್ನು ಹೊಂದುವರು.

**ಅಪರಾ ಚ ಮಹಾದುರ್ಗಾ ಚರ್ಚಿತಾ ಚೇತಿ ಸಂಸ್ಥಿತಾ ।**
**ರಸಾತಲತಲಾತ್ತತ್ರ ಮಯಾ ನೀತಾ ಸುಭಕ್ತಿತಃ ॥ ೪೯ ॥**
**ಇಯಮರ್ಚ್ಯಾ ಚ ಚಿಂತ್ಯಾ ಚ ವೀರತ್ವಂ ಸಮಭೀಪ್ಸುಭಿಃ ।**
**ಬಹುಭಿರ್ದೇವದೈತೇಯೈರ್ದದೌ ತೇಭ್ಯಶ್ಚ ವೀರತಾಂ ॥ ೫೦ ॥**
**ಇಯಮೇವ ಮಹಾದುರ್ಗಾ ಶೂದ್ರಕಂ ವೀರಸತ್ತಮಂ ।**
**ಚೌರ್ಯೈರ್ಬದ್ಧಂ ಕಲೌ ಚಾಗ್ರೇ ಮೋಕ್ಷಯಿಷ್ಯತಿ ವಿಕ್ರಮಾತ್ ॥ ೫೧ ॥**
**ತತಸ್ತ್ವೇತಾಂ ಸ ಚಾರಾಧ್ಯ ವೀರೇಂದ್ರತ್ವಮವಾಪ್ಸ್ಯತಿ ।**
**ನಿಹನಿಷ್ಯತಿ ಚಾಕ್ರಮ್ಯ ಕಾಲಸೇನಮುಖಾನ್ರಿಪೂನ್ ॥ ೫೨ ॥**
**ತಸ್ಮಾದಿಯಂ ಸಮಾರಾಧ್ಯಾ ವೀರ್ಯಕಾಮೈರ್ನರೈಃ ಸದಾ ।**
**ಚರ್ಚಿತಾ ಯಾ ಮಹಾದುರ್ಗಾ ಪಶ್ಚಿಮಾಯಾಂ ದಿಶಿ ಸ್ಥಿತಾ ॥ ೫೩ ॥**
**ತಥಾ ತ್ರೈಲೋಕ್ಯವಿಜಯಾ ತೃತೀಯಸ್ಯಾಂ ದಿಶಿ ಸ್ಥಿತಾ ।**
**ಯಾಮಾರಾಧ್ಯ ಜಯಂ ಪ್ರಾಪ್ತಸ್ತ್ರಿಲೋಕ್ಯಾಂ ರೋಹಿಣೀಪತಿಃ ।**
**ಸೋಮಲೋಕಾನ್ಮಯಾ ನೀತಾ ಪೂಜಿತಾ ಜಯದಾ ಸದಾ ॥ ೫೪ ॥**

---

೪೯. ಎರಡನೆಯವಳೇ ಚರ್ಚಿತೆಯೆಂಬ ಮಹಾದುರ್ಗಿಯು. ಆಕೆಯನ್ನು ರಸಾತಲಲೋಕದ ಅಧೋಭಾಗದಿಂದ ಅತ್ಯಂತ ಭಕ್ತಿಪೂರ್ವಕವಾಗಿ ಕರೆದು ತಂದು ಇಲ್ಲಿ ಸ್ಥಾಪಿಸಿರುವೆನು.

೫೦. ಪರಾಕ್ರಮವನ್ನಪೇಕ್ಷಿಸುವವರೆಲ್ಲರೂ ಈಕೆಯನ್ನೇ ಪೂಜಿಸಿ ಚಿಂತಿಸ ಬೇಕು. ಪೂರ್ವದಲ್ಲಿ ಅನೇಕ ದೇವತೆಗಳಿಂದಲೂ ದಾನವರಿಂದಲೂ ಪೂಜೆ ಯನ್ನು ಕೈಕೊಂಡು ಅವರಿಗೆ ವೀರತ್ವವನ್ನು ಕೊಟ್ಟಿರುವಳು ಈಕೆಯೆ !

೫೧. ಈ ಮಹಾದುರ್ಗಿಯೇ ಮುಂದೆ ಕಲಿಯುಗದಲ್ಲಿ ಚೋರರಿಂದ ಬಂಧಿತನಾದ ವೀರಾಗ್ರಣಿಯಾದ ಶೂದ್ರಕನನ್ನು ತನ್ನ ಶಕ್ತಿಯಿಂದ ಬಿಡಿಸುವಳು.

೫೨. ಬಳಿಕ ಅವನು ಈಕೆಯನ್ನು ಆರಾಧಿಸಿ ಪರಾಕ್ರಮಿಗಳಲ್ಲಿ ಅಗ್ರೇಸರ ನಾಗುವನು. ಅವನೇ ವೀರೇಂದ್ರನಾಗುವುದು. ಅವನು ಕಾಲಸೇನನೇ ಮೊದಲಾದ ಶತ್ರುಗಳನ್ನೆಲ್ಲ ಮುತ್ತಿ ಸಂಹರಿಸುವನು.

೫೩. ಆದುದರಿಂದ ವೀರ್ಯವನ್ನಪೇಕ್ಷಿಸುವ ಮನುಷ್ಯರು ಈ ಕ್ಷೇತ್ರದ ಪಶ್ಚಿಮದಿಕ್ಕಿನಲ್ಲಿ ನೆಲಸಿರುವ ಚರ್ಚಿತೆಯೆಂಬ ಮಹಾದುರ್ಗಿಯನ್ನು ಯಾವಾ ಗಲೂ ಪೂಜಿಸಬೇಕು.

೫೪. ಹಾಗೆಯೇ ಮೂರನೆಯವಳಾದ ತ್ರೈಲೋಕ್ಯವಿಜಯೆಯೆಂಬುವಳೂ ಈ ದಿಕ್ಕಿನಲ್ಲಿಯೇ ನೆಲಸಿರುವಳು. ಈಕೆಯ ಪೂಜೆಯಿಂದಲೇ ಚಂದ್ರನು ಮೂರು ಲೋಕಗಳಲ್ಲಿಯೂ ವಿಜಯವನ್ನು ಪಡೆದನು. ಈಕೆಯು ಚಂದ್ರಲೋಕದಿಂದ ಕರೆತರಲ್ಪಟ್ಟವಳು ; ಯಾವಾಗಲೂ ಭಕ್ತರಿಗೆ ಜಯವನ್ನುಂಟುಮಾಡುವಳು.

ಏವಮೇತಾಃ ಪಶ್ಚಿಮಾಯಾಮುತ್ತರಸ್ಯಾಮತಃ ಶ್ರುಣು ।
ತಿಸ್ರೋ ದೇವ್ಯಶ್ಚೋತ್ತರಸ್ಯಾಮೇಕವೀರಾಮುಖಾಃ ಸ್ಥಿತಾಃ ॥ ೫೫ ॥
ಏಕವೀರೇತಿ ಯಾ ದೇವೀ ಸಾಕ್ಷಾತ್ಸಾ ಶಿವಪೂಜಿತಾ ।
ಯಯಾವಿಷ್ಟೋ ಜಗತ್ಸರ್ವಂ ಸಂಹರತ್ಯೇಷ ಭೂತರಾಟ್ ॥ ೫೬ ॥
ವೀರ್ಯೇಣಾದ್ಯೇಕವೀರಾಯಾಃ ಕೃತ್ವಾ ಲೋಕಾಂಶ್ಚ ಭಸ್ಮಸಾತ್ ।
ಯುಗೈಕಾದಶಪೂರ್ಣತ್ವೇ ವಿಲಕ್ಷೋಽಭೂತ್ಸ ಭಸ್ಮನಿ ॥ ೫೭ ॥
ಏವಂವಿಧಾ ತ್ವೇಕವೀರಾ ಶಕ್ತಿರೇಷಾ ಸನಾತನೀ ।
ಪೂಜಿತಾರಾಧಿತಾ ಚೈವ ಸರ್ವಾಭೀಪ್ಸಿತದಾ ನೃಣಾಂ ॥ ೫೮ ॥
ಬ್ರಹ್ಮಲೋಕಾತ್ಸಮಾನೀತಾ ಮಯಾರಾಧ್ಯಾತ್ರ ಭಾರತ ।
ನಾಮಕೀರ್ತನಮಪ್ಯಸ್ಯಾ ದುಷ್ಟಾನಾಂ ಘಾತನಂ ವಿದುಃ ॥ ೫೯ ॥
ದ್ವಿತೀಯಾ ಹರಸಿದ್ಧಾಖ್ಯಾ ದೇವೀ ದುರ್ಗಾ ಮಹಾಬಲಾ ।
ಶೀತೋತ್ತರಾತ್ಸಮಾರಾಧ್ಯ ಮಯಾನೀತಾತ್ರ ಪಾಂಡವ ॥ ೬೦ ॥

---

೫೫. ಇಂತು ಪಶ್ಚಿಮದಲ್ಲಿ ಮೂವರು ದೇವಿಯರು ನೆಲಸಿರುವರು. ಇನ್ನು ಉತ್ತರ ದಿಕ್ಕಿನಲ್ಲಿರುವವರನ್ನು ಹೇಳುವೆನು. ಉತ್ತರದಿಕ್ಕಿನಲ್ಲಿ ಏಕವೀರೆಯೇ ಮೊದಲಾದ ಮೂವರು ದೇವಿಯರಿರುವರು.

೫೬. ಏಕವೀರೆಯೆಂಬ ದೇವಿಯು ಸಾಕ್ಷಾತ್ತಾಗಿ ಪರಮೇಶ್ವರನಿಂದಲೇ ಪೂಜಿಸಲ್ಪಟ್ಟಿರುವಳು. ಆಕೆಯಿಂದ ಆವಿಷ್ಟನಾಗಿಯೇ ಭೂತಪತಿಯಾದ ಆ ಮಹಾದೇವನು ಪ್ರಳಯದಲ್ಲಿ ಸಮಸ್ತ ಪ್ರಪಂಚವನ್ನೂ ಲಯಗೊಳಿಸುವನು.

೫೭. ಹನ್ನೊಂದು ಮಹಾಯುಗಗಳು ಕಳೆಯಲು ಮಹೇಶ್ವರನು ಮೊದಲನೆಯ ಏಕವೀರೆಯ ಬಲದಿಂದ ಆವಿಷ್ಟನಾಗಿ ಲೋಕಗಳನ್ನೆಲ್ಲ ಭಸ್ಮಮಾಡಿ ಆ ಭಸ್ಮದಿಂದ ಲೇಪಿತನಾಗಿ ವಿಲಕ್ಷಣವಾಗಿ ಕಾಣುತ್ತಿದ್ದನು.

೫೮. ಈ ವಿಧವಾದ ಏಕವೀರೆಯೆಂಬ ದುರ್ಗಿಯು ಶಕ್ತಿರೂಪಳೂ ಸನಾತನಿಯೂ ಆಗಿರುವಳು. ಪೂಜೆ, ಆರಾಧನೆಗಳನ್ನು ಮಾಡಲು ಜನರಿಗೆ ಸಕಲ ಇಷ್ಟಾರ್ಥಗಳನ್ನೂ ಕೊಡುವಳು.

೫೯. ಈಕೆಯನ್ನು ಪೂಜೆಯಿಂದ ತೃಪ್ತಿಪಡಿಸಿ ಬ್ರಹ್ಮಲೋಕದಿಂದ ಇಲ್ಲಿಗೆ ಕರೆದು ತಂದಿರುವೆನು. ಈಕೆಯ ಹೆಸರನ್ನು ಸಂಕೀರ್ತನ ಮಾಡುವುದರಿಂದಲೇ ದುಷ್ಟರ ನಿಗ್ರಹವಾಗುವುದೆಂದು ಹೇಳುವರು.

೬೦. ಎರಡನೆಯವಳೇ ಮಹಾಬಲಶಾಲಿನಿಯಾದ ಹರಸಿದ್ಧಿಯೆಂಬ ದುರ್ಗಿಯು. ಎಲೈ ಅರ್ಜುನನೆ! ಶೀತೋತ್ತರ ಪ್ರದೇಶದಲ್ಲಿದ್ದ ಆಕೆಯನ್ನು ಪೂಜಿಸಿ ಇಲ್ಲಿಗೆ ಕರೆದು ತಂದಿರುವೆನು.

ಯದಾ ಶೀತೋತ್ತರಸ್ಥೇನ ಪಾರ್ವತ್ಯಾ ಪ್ರಾರ್ಥಿತೇನ ಚ ।
ರುದ್ರೇಣ ಡಾಕಿನೀಮಂತ್ರಃ ಪ್ರೋಕ್ತೋ ದೇವ್ಯಾಃ ಕೃಪಾಲುನಾ ॥ ೬೧ ॥
ತದಾ ಮಂತ್ರಪ್ರಭಾವೇಣ ಮೋಹಿತಾ ಗಿರಿಜಾ ಸತೀ
ತಮೇವಾಕ್ರಮ್ಯ ಮಾಂಸಂ ಚ ಶೋಣಿತಂ ಚ ಭವಂ ಪಪೌ ॥ ೬೨ ॥
ತತೋ ರುದ್ರಶರೀರಾತ್ತು ವಿನಿಷ್ಕ್ರಾಂತಾರ್ತಿನಾಶಿನೀ ।
ಹರಸಿದ್ಧಿರ್ಮಹಾದುರ್ಗಾ ಮಹಾಮಂತ್ರವಿಶಾರದಾ ॥ ೬೩ ॥
ಸಾ ಸಹಸ್ರಭುಜಾ ದೇವೀ ಸಮಾಕ್ರಮ್ಯಾಭಿಪೀಡ್ಯ ಚ ।
ಮೋಕ್ಷಯಾಮಾಸ ಗಿರಿಶಮಶಾಪಯತ ತಾಂ ತಥಾ ॥ ೬೪ ॥
ತತಃ ಪ್ರಭೃತಿ ಸಾ ಲೋಕೇ ಹರಸಿದ್ಧಿಃ ಪ್ರಕೀರ್ತ್ಯತೇ ।
ದೇವೀನಾಂ ಷಷ್ಟಿಕೋಟೀಭಿರಾವೃತಾ ಪೂಜ್ಯತೇ ಸುರೈಃ ॥ ೬೫ ॥
ಏತಾಮಾರಾಧ್ಯ ಸುಗ್ರೀವಪ್ರಮುಖಾ ದೋಷನಾಶಿನೀಂ ।
ಅಭೂವನ್ಸುಮಹಾವೀರ್ಯಾ ಡಾಕಿನೀಸಂಘನಾಶನಾಃ ॥ ೬೬ ॥
ತಸ್ಮಾದೇತಾಂ ಪೂಜಯೇತ್ತು ಮನೋವಾಕ್ಕಾಯಕರ್ಮಭಿಃ ।
ಡಾಕಿನ್ಯಾದ್ಯಾ ನ ಸರ್ಪಂತಿ ಹರಸಿದ್ಧೇರನಂತರಂ ॥ ೬೭ ॥

---

೬೧–೬೨. ಪೂರ್ವದಲ್ಲಿ ಮಹಾದೇವನು ಶೀತೋತ್ತರಪ್ರದೇಶದಲ್ಲಿ ಕುಳಿತಿರಲು ಪಾರ್ವತಿಯ ಪ್ರಾರ್ಥನೆಯನ್ನನುಸರಿಸಿ ಕೃಪಾಲುವಾಗಿ ಆಕೆಗೆ ಡಾಕಿನೀ ಮಹಾಮಂತ್ರವನ್ನುಪದೇಶಿಸಿದನು. ಗಿರಿಜೆಯು ಆ ಮಂತ್ರದ ಶಕ್ತಿಯಿಂದ ಮೋಹಿತಳಾಗಿ ಆ ರುದ್ರನನ್ನೇ ಆಕ್ರಮಿಸಿಕೊಂಡು ಆತನ ಶರೀರದ ರಕ್ತಮಾಂಸಗಳನ್ನು ಸೇವಿಸಲು ಮೊದಲುಮಾಡಿದಳು.

೬೩. ಆ ಸಮಯದಲ್ಲಿ ದುಃಖನಾಶಿನಿಯೂ, ಸಕಲಮಂತ್ರವಿಶಾರದೆಯೂ ಆದ ಹರಸಿದ್ಧಿಯೆಂಬ ದುರ್ಗಿಯು ಪರಮೇಶ್ವರನ ಶರೀರದಿಂದ ಹೊರಟಳು.

೬೪. ಆಕೆಯು ಸಾವಿರಭುಜಗಳುಳ್ಳವಳಾಗಿ ಗಿರಿಜೆಯನ್ನಾಕ್ರಮಿಸಿ ಪೀಡಿಸಿ ಮಹೇಶ್ವರನನ್ನು ಬಿಡಿಸಿಕೊಂಡಳು. ಗಿರಿಜೆಯೂ ಆಕೆಯನ್ನು ಶಪಿಸಿದಳು.

೬೫. ಅಂದು ಮೊದಲ್ಗೊಂಡು ಆಕೆಯು ಲೋಕದಲ್ಲಿ ಹರಸಿದ್ಧಿಯೆಂದು ಪ್ರಸಿದ್ಧಳಾಗಿರುವಳು. ಅರುವತ್ತು ಕೋಟಿ ದೇವಿಯರ ಪರಿವಾರವುಳ್ಳವಳಾಗಿ ನಿತ್ಯವೂ ದೇವತೆಗಳಿಂದ ಪೂಜೆಯನ್ನು ಕೈಕೊಳ್ಳುತ್ತಿರುವಳು.

೬೬. ಪೂರ್ವದಲ್ಲಿ ಈಕೆಯನ್ನು ಆರಾಧಿಸಿದ್ದರಿಂದಲೇ ಸುಗ್ರೀವನೇ ಮೊದಲಾದ ಕಪಿವೀರರು ಮಹಾಪರಾಕ್ರಮಿಗಳಾಗಿ ರಾವಣಾಸುರನ ಸೈನ್ಯದಲ್ಲಿದ್ದ ಡಾಕಿನಿಯರ ಸಮೂಹವನ್ನು ನಾಶಗೊಳಿಸಿದರು.

೬೭–೬೮. ಆದುದರಿಂದ ಈಕೆಯನ್ನು ಮನಸ್ಸು, ವಾಕ್ಕು, ಶರೀರಗಳೆಂಬ ತ್ರಿಕರಣಗಳ ಶುದ್ಧಿಯಿಂದ ಪೂಜಿಸುವವರ ಸಮೀಪದಲ್ಲಿ ಡಾಕಿನಿಯರೇ ಮೊದ

ತೃತೀಯೇಶಾನಕೋಣಸ್ಥಾ ಚಂಡಿಕಾ ನವಮೀ ಸ್ಥಿತಾ ।
ವಾಗೀಶೋಽಪಿ ಲಭೇತ್ಪಾರಂ ನೈವ ಯಸ್ಯಾಃ ಪ್ರವರ್ಣನೇ ॥ ೭೮ ॥
ಯಾ ಪುರಾ ಪಾರ್ವತೀದೇಹಾದ್ವಿನಿಃಸೃತ್ಯ ಮಹಾಸುರೌ ।
ಚಂಡಮುಂಡೌ ನಿಹತ್ಯೈವ ಭಕ್ಷಯಾಮಾಸ ಕ್ರೋಧತಃ ॥ ೭೯ ॥
ಅಕ್ಷೌಹಿಣೀಶತಂ ತ್ವೇಕಂ ಚಂಡಮುಂಡೌ ಚ ತಾವುಭೌ ।
ನಾಪೂರಯನ್ಕೈಕಗ್ರಾಸೋಽಸ್ಯಾಃ ಕಿಂ ಲಕ್ಷ್ಯಾ ಯಾ ತ್ವಿಯಂ ಹಿ ಸಾ ॥
ಇಯಮೇವಾಂಧಕಾನಾಂ ಚ ತೃಷಿತಾ ಶೋಣಿತಂ ಪುನಃ ।
ಪಪೌ ತತೋ ನಿಜಗ್ರಾಹ ಚಾಂಧಕಂ ಭಗವಾನ್ಭವಃ ॥ ೭೧ ॥
ಇಯಂ ಚ ರಕ್ತಬೀಜಾನಾಂ ಕೃತ್ವಾ ಪಾನಂ ಚ ರಕ್ತಜಂ ।
ಅರ್ಪಯಾಮಾಸ ತಂ ದೇವ್ಯೈ ಚಾಮುಂಡಾಪೀತ ಶೋಣಿತಂ ॥ ೭೨ ॥
ಏಷಾ ತೃಪ್ಯತಿ ಭಕ್ತಾನಾಂ ಪ್ರಣಾಮೇನಾಪಿ ಭಾರತ ।
ಅರ್ಬುದಾನಾಂ ಚ ಕೋಟೀಭಿರ್ದೈತ್ಯಾನಾಂ ಪಾಪಕರ್ಮಿಣಾಂ ॥ ೭೩ ॥

---

ಲಾದವರು ಸುಳಿದಾಡುವುದಿಲ್ಲ. ಹರಸಿದ್ಧಿಯಾದಮೇಲೆ ಈ ಕ್ಷೇತ್ರದ ಈಶಾನ್ಯ ಮೂಲೆಯಲ್ಲಿ ಮೂರನೆಯ ದುರ್ಗೆಯಾದ ಚಂಡಿಕೆಯಿರುವಳು. ಈಕೆಯೇ ಇಲ್ಲಿಯ ದುರ್ಗೆಯರಲ್ಲಿ ಒಂಭತ್ತನೆಯವಳು. ಈಕೆಯ ಮಹಿಮೆಯನ್ನು ವರ್ಣಿಸುವುದರಲ್ಲಿ ಬೃಹಸ್ಪತಿಯೂ ಕೂಡ ಕೊನೆಯನ್ನು ಮುಟ್ಟಲಾರನು.

೬೯. ಈಕೆಯು ಮುನ್ನು ಪಾರ್ವತಿಯ ದೇಹದಿಂದ ಉದ್ಭವಿಸಿ ಕ್ರೋಧದಿಂದ ಮಹಾರಾಕ್ಷಸರಾದ ಚಂಡ ಮುಂಡರನ್ನು ನಿಗ್ರಹಿಸಿ ಭಕ್ಷಿಸಿದಳು.

೭೦. ಅವರು ಎಷ್ಟುಮಾತ್ರದವರೆಂದು ತಿಳಿದ ಈಕೆಗೆ ಅವರೂ, ಅವರ ಒಂದು ನೂರು ಅಕ್ಷೌಹಿಣೀ ಸೈನ್ಯವೂ ಒಂದು ತುತ್ತಿಗೂ ಪೂರ್ತಿಯಾಗಲಿಲ್ಲ. ಈಕೆಯು ಅಂತಹವಳು.

೭೧. ಈಕೆಯೇ ಬಾಯಾರಿಕೆಯಿಂದ ಅಂಧಕನೆಂಬ ದೈತ್ಯರಾಜನ ದೇಹದ ರಕ್ತವನ್ನು ಕುಡಿದಳು. ಬಳಿಕ ಮಹೇಶ್ವರನು ಆ ರಾಕ್ಷಸನನ್ನು ಸುಲಭವಾಗಿ ನಿಗ್ರಹಿಸಿದನು.

೭೨. ಈಕೆಯೇ ರಕ್ತಬೀಜಾಸುರನ ಸಂತಾನದ ರಕ್ತವೆಲ್ಲವನ್ನೂ ಪಾನ ಮಾಡಿ ದೇವಿಯಾದ ಚಾಮುಂಡಿಯು ಅಸುರನ ರಕ್ತವನ್ನು ಕುಡಿದು ನಿಗ್ರಹಿಸುವುದಕ್ಕೆ ಅನುಕೂಲಳಾದಳು.

೭೩. ಅರ್ಬುದ ಮತ್ತು ಕೋಟಿಗಟ್ಟಲೆ ದೈತ್ಯರು ಪಾಪಕೃತ್ಯಗಳಲ್ಲಿ ನಿರತರಾಗಿದ್ದರೂ ಕೂಡ ಭಕ್ತರೆನಿಸಿಕೊಂಡು ಪ್ರಣಾಮವನ್ನು ಮಾಡಿದ ಮಾತ್ರದಿಂದಲೇ ಈಕೆಯು ತೃಪ್ತಿಗೊಳ್ಳುವಳು.

ಕುಂಡಂ ಚಾಸ್ಯಾ ಮಯಾ ದೇವ್ಯಾಃ ಪುಣ್ಯಂ ನಿಷ್ಪಾದಿತಂ ಶುಭಂ ।
ಯತ್ರ ವೈ ಸ್ಪರ್ಶಮಾತ್ರೇಣ ಸರ್ವತೀರ್ಥಫಲಂ ಲಭೇತ್ ॥ ೭೪ ॥
ಹರಸಿದ್ಧಿರ್ದೇವಸಿದ್ಧಿರ್ಧರ್ಮಸಿದ್ಧಿಶ್ಚ ಭಾರತ ।
ವಿವಿಧಾ ಪ್ರಾಪ್ಯತೇ ಸಿದ್ಧಿಸ್ತೀರ್ಥೇಽಸ್ಮಿಂಶ್ಚಂಡಿಕಾರತೈಃ ॥ ೭೫ ॥
ಯಶ್ಚ ಪೂಜಯತೇ ದೇವೀಂ ಸ್ವಲ್ಪೇನ ಬಹುನಾಪಿ ವಾ ।
ಕಾತ್ಯಾಯನೀ ಕೋಟಿಶತೈರ್ವೃತಾ ತಸ್ಯ ವಿಭೂತಿದಾ ॥ ೭೬ ॥
ಏವಮೇತಾ ಮಹಾದುರ್ಗಾ ನವ ತೀರ್ಥೇಽತ್ರ ಸಂಸ್ಥಿತಾಃ ।
ಚತಸ್ರಶ್ಚಾಪಿ ದಿಗ್ದೇವ್ಯೋ ನಿತ್ಯಮರ್ಚ್ಯಾಃ ಶುಭೇಪ್ಸುಭಿಃ ॥ ೭೭ ॥
ಆಶ್ವಿನಸ್ಯ ಚ ಮಾಸಸ್ಯ ನವರಾತ್ರೇ ವಿಶೇಷತಃ ।
ಉಪೋಷ್ಯ ಚೈಕಭುಕ್ತ್ಯಾ ವಾ ದೇವೀಸ್ತ್ವೇತಾಃ ಪ್ರಪೂಜಯೇತ್ ॥೭೮॥
ಬಲ್ಯಪೂಪಕನೈವೇದ್ಯೈಸ್ತರ್ಪಣೈರ್ಧೂಪಗಂಧಿಭಿಃ ।
ತಸ್ಯ ರಕ್ಷಾಂ ಚರಂತ್ಯೇತಾ ರಥ್ಯಾಸು ತ್ರಿಕಚತ್ವರೇ ॥ ೭೯ ॥

---

೭೪. ಈ ದೇವಿಗೂ ಕೂಡ ಪುಣ್ಯಪ್ರದವೂ, ಪವಿತ್ರವೂ ಆದ ಕುಂಡವೊಂದನ್ನು ನಾನು ನಿರ್ಮಿಸಿರುವೆನು. ಅದರ ನೀರನ್ನು ಮುಟ್ಟಿದ ಮಾತ್ರದಿಂದಲೇ ಸಕಲ ತೀರ್ಥಗಳ ಸೇವನೆಯ ಫಲವೂ ಲಭಿಸುವುದು.

೭೫. ಈ ತೀರ್ಥದಲ್ಲಿ ನಿಯಮದಿಂದ ಚಂಡಿಕೆಯನ್ನು ಸೇವಿಸಿದವರಿಗೆ ಈಶ್ವರಸಿದ್ಧಿ, ದೇವತಾಸಿದ್ಧಿ, ಧರ್ಮಸಿದ್ಧಿ ಮುಂತಾದ ಸಕಲ ಸಿದ್ಧಿಗಳೂ ಕೈಗೂಡುವುವು.

೭೬. ಯಾವನು ಶಕ್ತ್ಯನುಸಾರ ಸ್ವಲ್ಪವಾಗಿಯಾಗಲಿ, ವಿಶೇಷವಾಗಿಯಾಗಲಿ ಈ ದೇವಿಯನ್ನು ಪೂಜಿಸುವನೊ, ಅವನಿಗೆ ನೂರುಕೋಟಿ ದೇವಿಯರಿಂದ ಪರಿವೃತಳಾದ ಕಾತ್ಯಾಯನಿಯು ಅತುಲೈಶ್ವರ್ಯವನ್ನು ದಯಪಾಲಿಸುವಳು.

೭೭. ಇಂತು ಇಲ್ಲಿ ಒಂಬತ್ತು ದುರ್ಗಿಯರು ನೆಲಸಿರುವರಲ್ಲದೆ ನಾಲ್ವರು ದಿಗ್ದೇವತೆಯರೂ ಸ್ಥಾಪಿಸಲ್ಪಟ್ಟಿರುವರು. ಶುಭವನ್ನಪೇಕ್ಷಿಸುವವರು ನಿತ್ಯವೂ ಇವರೆಲ್ಲರನ್ನೂ ಪೂಜಿಸಬೇಕು.

೭೮. ಆಶ್ವಯುಜ ಮಾಸದಲ್ಲಿಯೂ, ವಿಶೇಷವಾಗಿ ನವರಾತ್ರಿಯಲ್ಲಿಯೂ ಉಪವಾಸದಿಂದಾಗಲಿ, ಒಂದೇ ಧಾನ್ಯದ ಭೋಜನದಿಂದಾಗಲಿ ಈ ದೇವಿಯರನ್ನು ಪೂಜಿಸಬೇಕು.

೭೯. ಅನ್ನಾದಿ ಬಲಿಗಳಿಂದಲೂ, ಅಪೂಪಾದಿ ನೈವೇದ್ಯಗಳಿಂದಲೂ, ಜಲತರ್ಪಣಗಳಿಂದಲೂ, ಸುಗಂಧ ವಿಶಿಷ್ಟಗಳಾದ ಧೂಪಗಳಿಂದಲೂ ಪೂಜಿಸುವವನನ್ನು ಅವರು ದಾರಿಗಳಲ್ಲಿಯೂ ಚೌಕಗಳಲ್ಲಿಯೂ ರಕ್ಷಿಸುವರು.

**ಭೂತಪ್ರೇತಪಿಶಾಚಾದ್ಯಾ ನೋಪಕುರ್ಯುಃ ಪ್ರಪೀಡನಂ ।**
**ಆಪದೋ ವಿದ್ರವಂತ್ಯಾಶು ಯೋಗಿನ್ಯೋ ನಂದಯಂತಿ ತಂ ॥ ೮೦ ॥**
**ಪುತ್ರಾರ್ಥೀ ಲಭತೇ ಪುತ್ರಾನ್ಧನಾರ್ಥೀ ಧನಮಾಪ್ನುಯಾತ್ ।**
**ರೋಗಾರ್ತೋ ಮುಚ್ಯತೇ ರೋಗಾದ್ಬದ್ಧೋ ಮುಚ್ಯೇತ ಬಂಧನಾತ್ ॥**
**ಆಸಾಂ ಯಃ ಕುರುತೇ ಭಕ್ತಿಂ ನರೋ ನಾರೀ ಚ ಶ್ರದ್ಧಯಾ ।**
**ಸರ್ವಾನ್ಕಾಮಾನವಾಪ್ನೋತಿ ಯಾನ್ ಚಿಂತಯತಿ ಚೇತಸಿ ॥ ೮೨ ॥**
**ಕಾಮಗವ್ಯ ಇಮಾ ದೇವ್ಯಶ್ಚಿಂತಾಮಣಿನಿಭಾಸ್ತಥಾ**
**ಕಲ್ಪವಲ್ಲ್ಯೋಽಥ ಭಕ್ತಾನಾಂ ಪ್ರತಿಚ್ಛಂದೋಽತ್ರ ನೈವ ಹಿ ॥ ೮೩ ॥**
**ತಥಾತ್ರ ಭೂತಮಾತಾಸ್ತಿ ಹರಸಿದ್ಧೇಸ್ತು ದಕ್ಷಿಣೇ ।**
**ತಸ್ಯಾ ಮಹಾತ್ಮ್ಯಮತುಲಂ ಸಂಕ್ಷೇಪಾತ್ಪ್ರಬ್ರವೀಮಿ ತೇ ॥ ೮೪ ॥**
**ಪೂರ್ವಂ ಕಿಲ ಗುಹೋ ವಿದ್ವಾನ್ಪುಣ್ಯೇ ಸಾರಸ್ವತೇ ತಟೇ ।**
**ಭೂತಪ್ರೇತಪಿಶಾಚಾನಾಮಾಧಿರಾಜ್ಯೇಽಭ್ಯಷಿಚ್ಯತ ॥ ೮೫ ॥**

---

೮೦. ಆತನಿಗೆ ಭೂತ, ಪ್ರೇತ, ಪಿಶಾಚಾದಿ ಗಣಗಳು ಯಾವ ಪೀಡೆಯನ್ನೂ ಮಾಡಲಾರವು. ಆತನಿಂದ ಆಪತ್ತುಗಳೆಲ್ಲವೂ ಓಡಿಹೋಗುವುವು. ಆತನನ್ನು ಯೋಗಿನೀ ದೇವತೆಯರು ಸಂತೋಷಗೊಳಿಸುವರು.

೮೧. ಆಕೆಯ ಅನುಗ್ರಹದಿಂದ ಪುತ್ರಾಭಿಲಾಷೆಯುಳ್ಳವನು ಪುತ್ರರನ್ನು ಪಡೆಯುವನು. ದರಿದ್ರನು ಧನವನ್ನು ಸಂಪಾದಿಸುವನು. ರೋಗಪೀಡಿತನಾದವನಿಗೆ ರೋಗನಿವೃತ್ತಿಯಾಗುವುದು. ಬಂಧನದಲ್ಲಿ ಸಿಕ್ಕಿರುವವನು ಬಿಡುಗಡೆಯನ್ನು ಹೊಂದುವನು.

೮೨. ಯಾವ ಪುರುಷರಾಗಲಿ, ಸ್ತ್ರೀಯರಾಗಲಿ ಇವರಲ್ಲಿ ಶ್ರದ್ಧಾಸಹಿತವಾದ ಭಕ್ತಿಯನ್ನು ಮಾಡುವವರೊ, ಅವರು ಮನಸ್ಸಿನಲ್ಲಿ ಆಶೆಪಡುವ ಸಕಲ ಕಾಮಗಳನ್ನೂ ಹೊಂದುವರು.

೮೩. ಈ ದೇವತೆಯರೇ ಸಕಲಾಭೀಷ್ಟಗಳನ್ನೂ ಕೊಡುವ ಕಾಮಧೇನುಗಳು, ಚಿಂತಾಮಣಿಗೆ ಸಮಾನರಾದವರು. ಇವರೇ ಕಲ್ಪವಲ್ಲಿಗಳೆಂಬುವುದರಲ್ಲಿ ಸ್ವಲ್ಪವೂ ಸಂದೇಹವೇ ಇಲ್ಲವು.

೮೪. ಇವರಲ್ಲದೆ ಹರಸಿದ್ಧಿಯ ದಕ್ಷಿಣ ದಿಕ್ಕಿನಲ್ಲಿ ಭೂತಮಾತೃಕೆಯು ನೆಲಸಿರುವಳು. ಆಕೆಯ ಮಾಹಾತ್ಮ್ಯವು ಅಪಾರವಾಗಿರುವುದು. ಆದರೂ ಸಂಕ್ಷೇಪವಾಗಿ ನಿನಗೆ ತಿಳಿಸುವೆನು.

೮೫. ಪೂರ್ವದಲ್ಲಿ ಸರಸ್ವತೀ ನದಿಯ ದಡದ ಪವಿತ್ರ ಪ್ರದೇಶದಲ್ಲಿ ಷಣ್ಮುಖಸ್ವಾಮಿಯು ಭೂತ, ಪ್ರೇತ, ಪಿಶಾಚಾದಿ ಗಣಗಳಿಗೆಲ್ಲ ಅಧಿಪತಿಯಾಗಿ ಅಭಿಷಿಕ್ತನಾದನು.

ಸ ಚ ಸರ್ವಾಣಿ ಭೂತಾನಿ ಮರ್ಯಾದಾಯಾಮಧಾರಯತ್ ।
ಏತದನ್ನಂ ಪ್ರದಾಯೈವ ಕೃಪಯಾ ಭಗವಾನ್ಗುಹಃ ॥ ೮೬ ॥
ಯದಮಂತ್ರಹುತಂ ಕಿಂಚಿದ್ವೇದಬಾಹ್ಯಂ ಚ ಯತ್ಕೃತಂ ।
ಅಶ್ರದ್ಧಯಾ ಚ ಕ್ರೋಧೇನ ತದ್ವಸ್ತೃಪ್ತ್ಯೈ ಭವಿಷ್ಯತಿ ॥ ೮೭ ॥
ತತಸ್ತ್ವನೇನ ಭೋಗೇನ ತಾನಿ ನಂದಂತಿ ಕೃತ್ಸ್ನಶಃ ।
ತತಃ ಕೇನಾಪಿ ಕಾಲೇನ ಶ್ರದ್ಧಯಾಶ್ರದ್ಧಯಾ ಕೃತಂ ।
ಪುಣ್ಯಂ ತಾನ್ಯೇವ ಭೂತಾನಿ ಗ್ರಸಂತ್ಯಾಕ್ರಮ್ಯ ದೇವತಾಃ ॥ ೮೮ ॥
ತತೋ ದೇವಾಃ ಕ್ಷುಧಾರ್ತಾಸ್ತೇ ಗುಹಾಯೈತನ್ನ್ಯವೇದಯನ್ ।
ಸ ವೈ ತದಾಕರ್ಣ್ಯ ಕ್ರುದ್ಧೋ ಗುಹಃ ಕಾಲ ಇವಾಭವತ್ ॥ ೮೯ ॥
ತಸ್ಯ ಕ್ರುದ್ಧಸ್ಯ ಭ್ರೂಪದ್ಮಮಧ್ಯಾತ್ಕಾಚಿದ್ವಿನಿರ್ಗತಾ ।
ಜ್ವಾಲಾಮಾಲಾ ಸುದುರ್ದರ್ಶಾ ನಾರೀ ದ್ವಾದಶಲೋಚನಾ ॥ ೯೦ ॥
ಸಾ ಪ್ರಣಮ್ಯ ಚ ತಂ ಪ್ರಾಹ ತವ ಶಕ್ತಿರಹಂ ಪ್ರಭೋ ।
ಶೀಘ್ರಮಾದಿಶ ಮಾಂ ಕೃತ್ಯೇ ಕಿಂ ಕರೋಮಿ ತವೇಪ್ಸಿತಂ ॥ ೯೧ ॥

---

೮೬. ಅವನು ಸಕಲ ಭೂತಗಳಿಗೂ ನಿಯಮಗಳನ್ನು ವಿಧಿಸಿದನು. ಮತ್ತು ಅವುಗಳನ್ನೆಲ್ಲ ಅಂತೆಯೇ ಆಳುತ್ತ ಕೃಪೆಯಿಂದ ಅವುಗಳಿಗೆ ಅನ್ನವನ್ನು ನಿರ್ಮಿಸಿ ಕೊಟ್ಟನು.

೮೭. "ಮಂತ್ರವಿಲ್ಲದೆ ಅಗ್ನಿಯಲ್ಲಿ ಹೋಮಮಾಡಿದುದು, ವೇದ ವಿಧಿಯನ್ನು ಮೀರಿ ಅರ್ಪಿಸಿದುದು, ಅಶ್ರದ್ಧೆಯಿಂದಲೂ ಕ್ರೋಧದಿಂದಲೂ ಮಾಡಿದ ಆಹುತಿಗಳು—ಇವುಗಳೇ ನಿಮ್ಮ ಆಹಾರಕ್ಕೆ ಸಾಕಾಗುವುದು."

೮೮. ಅಂದಿನಿಂದ ಈ ಕರ್ಮಗಳ ಫಲಗಳೆಲ್ಲವೂ ಅವರಿಗೆ ಭೋಗ್ಯಗಳಾಗಿರುವುವು. ಆದುದರಿಂದ ಸಜ್ಜನರು ಇವುಗಳನ್ನೆಲ್ಲ ನಿಂದಿಸುವರು. ಇಂತು ಕೆಲವು ಕಾಲವು ಕಳೆದ ಬಳಿಕ ಆ ಭೂತಗಣಗಳು ದೇವತೆಗಳನ್ನು ಬಲಾತ್ಕಾರದಿಂದ ನಿಗ್ರಹಿಸಿ ಜನರು ಶ್ರದ್ಧೆ, ಅಶ್ರದ್ಧೆಗಳಿಂದ ಹೋಮಮಾಡಿದುದೆಲ್ಲವನ್ನೂ ಸ್ವೀಕರಿಸಲುಪಕ್ರಮಿಸಿದರು.

೮೯. ಆಗ ದೇವತೆಗಳೆಲ್ಲರೂ ಹಸಿವಿನಿಂದ ಬಳಲಿದವರಾಗಿ ಗುಹನಿಗೆ ಮೊರೆಯಿಟ್ಟು ಇದನ್ನು ತಿಳಿಸಿದರು. ಈ ವಿಷಯವನ್ನು ಕೇಳಿ ಗುಹನು ಪ್ರಳಯ ಕಾಲದ ರುದ್ರನಂತೆ ಕೋಪಗೊಂಡನು.

೯೦–೯೧. ಕೃದ್ಧನಾದ ಆತನ ಭ್ರೂಮಧ್ಯದಿಂದ ಜ್ವಾಲೆಗಳನ್ನು ಕಾರುತ್ತಿರುವಳೂ, ನೋಡಲಸಳೆಯೂ, ಹನ್ನೆರಡು ಕಣ್ಣುಗಳುಳ್ಳವಳೂ ಆದ ಒಬ್ಬಾನೊಬ್ಬ ಸ್ತ್ರೀಯು ಹೊರಕ್ಕೆ ಬಂದಳು. ಅವಳು ಗುಹನಿಗೆ ನಮಸ್ಕರಿಸಿ "ಸ್ವಾಮಿಯೆ! ನಾನು ನಿನ್ನ ಶಕ್ತಿಯು. ಬೇಗ ನನಗೊಂದು ಕೆಲಸವನ್ನು

ಸ್ಕಂದ ಉವಾಚ:—

ಏತೈರ್ಭೂತಗಣೈಃ ಪಾಪೈರುಲ್ಲಂಘ್ಯ ಮಮ ಶಾಸನಂ ।
ಮನುಷ್ಯದತ್ತಂ ಸಕಲಂ ಭುಜ್ಯತೇ ಸ್ವೇಚ್ಛಯಾಧಮೈಃ ॥ ೯೨ ॥
ಶೀಘ್ರಮೇತಾನಿ ತ್ವಂ ತಸ್ಮಾನ್ಮಾರ್ಗಮಾದಾಯಮಾನಯ ।
ಏತಾಸ್ತ್ವಾನುವ್ರಜಿಷ್ಯಂತಿ ದೇವ್ಯಃ ಕೋಟಿಶತಂ ಶುಭೇ ॥ ೯೩ ॥
ತತಸ್ತಥೇತಿ ಸಾ ಚೋಕ್ತ್ವಾ ದೇವೀಭಿಃ ಸಂವೃತಾ ತದಾ ।
ಮಯೂರಂ ಸಮುಪಾಸ್ಥಾಯ ಗುಹಶಕ್ತಿಃ ಸಮಾಗತಾ ॥ ೯೪ ॥
ಸರೋಜವನಮಾಸಾದ್ಯ ಭೂತಸಂಘಾನಪಶ್ಯತ ।
ಜಘಾನ ಚ ಸಮಾಸಾದ್ಯ ದೇವೀ ನಾನಾವಿಧಾಯುಧೈಃ ॥ ೯೫ ॥
ತತಃ ಪ್ರೇತಪಿಶಾಚಾದ್ಯಾ ಹನ್ಯಮಾನಾ ಮಹಾರಣೇ ।
ಪ್ರಸಾದಯಂತಿ ತಾಂ ದೇವೀಂ ನಾನಾವೇಷೈಃ ಸುದೀನವತ್ ॥ ೯೬ ॥
ಕೇಚಿದ್ಬ್ರಾಹ್ಮಣವೇಷೈಶ್ಚ ತಾಪಸಾನಾಂ ತಥೋಕ್ತಿಭಿಃ ।
ನೃತ್ಯಂತಿ ದೇವಿ ಪದ್ಮಾಕ್ಷಿ ಪ್ರಸೀದೇತಿ ಪುನಃ ಪುನಃ ॥ ೯೭ ॥

---

ಕೊಡು. ನಿನಗೆ ಇಷ್ಟವಾದ ಯಾವ ಕಾರ್ಯವನ್ನು ಈಗ ಮಾಡಲಿ?" ಎಂದು ಕೇಳಿದಳು.

೯೨. ಸ್ಕಂದನು ಹೇಳುತ್ತಾನೆ:— "ಪಾಪಿಗಳಾದ ಈ ಭೂತಗಣಗಳು ನನ್ನ ಕಟ್ಟಳೆಯನ್ನು ಮೀರಿ ಮನುಷ್ಯರು ಕೊಡುವ ಸಕಲ ಹವ್ಯಗಳನ್ನೂ ಸ್ವೀಕರಿಸುವ ಅಧಮರಾಗಿರುವರು.

೯೩. ಆದುದರಿಂದ ನೀನು ಅವರನ್ನೆಲ್ಲ ಸರಿಯಾದ ದಾರಿಗೆ ಎಳೆದುಕೊಂಡು ಬಾ. ಎಲೌ ಶುಭಾಂಗಿಯೆ! ಈ ಕಾರ್ಯದಲ್ಲಿ ಈ ನೂರು ಕೋಟಿ ದೇವಿಯರು ನಿನ್ನನ್ನು ಅನುಸರಿಸುವರು."

೯೪. ಹಾಗೆಯೇ ಆಗಲೆಂದು ಆಕೆಯು ತನ್ನ ದೇವಿಯರ ಪರಿವಾರದಿಂದ ಕೂಡಿಕೊಂಡು ನವಿಲಿನ ವಾಹನವನ್ನೇರಿ ಹೊರಟಳು.

೯೫–೯೬. ಸರೋಜವನವನ್ನು ಸೇರಿ ಅಲ್ಲಿ ನೆರೆದಿದ್ದ ಭೂತಸಮೂಹಗಳನ್ನು ನೋಡಿ ಅನೇಕ ವಿಧವಾದ ಆಯುಧಗಳಿಂದ ಅವರ ಮೇಲೆರಗಿ ಹೊಡೆಯಲಾರಂಭಿಸಿದಳು. ಮಹಾಯುದ್ಧದಲ್ಲಿ ಗುಹಶಕ್ತಿಯಿಂದ ನಿಗ್ರಹಿಸಲ್ಪಟ್ಟವರಾಗಿ ಪ್ರೇತ ಪಿಶಾಚಾದಿ ಗಣಗಳೆಲ್ಲರು ತಮ್ಮ ವೇಷಗಳನ್ನು ಮರೆಸಿಕೊಂಡು ಆ ದೇವಿಯನ್ನು ಪ್ರಸನ್ನೀಕರಿಸಿಕೊಳ್ಳಲು ಪ್ರಯತ್ನಿಸಿದರು.

೯೭. ಕೆಲವರು ಬ್ರಾಹ್ಮಣವೇಷಗಳಿಂದಲೂ, ಕೆಲವರು ತಾಪಸರಿಗೆ ಅನುವಾದ ಮಾತುಗಳಿಂದಲೂ "ಪದ್ಮಾಕ್ಷಿಯಾದ ದೇವಿಯೆ! ನಮ್ಮಲ್ಲಿ ಪ್ರಸನ್ನಳಾಗು" ಎಂದು ಹೇಳುತ್ತ ಮತ್ತೆ ಮತ್ತೆ ನರ್ತನಮಾಡುತ್ತಿದ್ದರು.

ತತಃ ಪ್ರಸನ್ನಾ ಸಾ ದೇವೀ ವ್ರಿಯತಾಂ ಸ್ವೇಚ್ಛಯಾಹ ತಾನ್ ।
ತಾಂ ತೇ ಪ್ರೋಚುಸ್ತ್ರಾಹಿ ನಸ್ತ್ವಂ ಭೂತಮಾತಾ ಮಹೇಶ್ವರಿ ॥ ೯೮ ॥
ಮರ್ಯಾದಾಂ ನೈವ ತ್ಯಕ್ಷ್ಯಾಮೋ ವಯಂ ಸ್ಕಂದ ವಿನಿರ್ಮಿತಾಂ ॥
ಯೇ ಚೈವಂ ತ್ವಾಂ ತೋಷಯಂತಿ ತೇಷಾಂ ದೇಹಿ ವರಾನ್ಸದಾ ॥೧೦೦॥

ಶ್ರೀದೇವ್ಯುವಾಚ:—

ವೈಶಾಖೇ ದರ್ಶದಿವಸೇ ಯೇ ಚೈವಂ ತೋಷಯಂತಿ ಮಾಂ ।
ಅರಿಷ್ಟಾಭರಣೈಃ ಪುಷ್ಪೈರ್ದಧಿಭಕ್ತೈಶ್ಚ ಪೂಜನೈಃ ।
ತೇಷಾಂ ಸರ್ವೋಪಸರ್ಗಾ ವೈ ಯಾಸ್ಯಂತಿ ವಿಲಯಂ ಸ್ಫುಟಂ ॥ ೧೦೧ ॥
ಏವಂ ದತ್ವಾ ವರಂ ದೇವೀ ಮುಮುದೇ ಭೂತಸಂವೃತಾ ।
ಏವಂಪ್ರಭಾವಾ ಸಾ ದೇವೀ ಮಯಾ ನೀತಾತ್ರ ಭಾರತ ॥ ೧೦೨ ॥
ಯ ಏನಾಂ ಪ್ರಣಮೇನ್ಮರ್ತ್ಯಃ ಸರ್ವಾರಿಷ್ಟೈರ್ವಿಮುಚ್ಯತೇ ॥ ೧೦೩ ॥

---

೯೮. ಆಗಲಾ ಗುಹಶಕ್ತಿಮಹಾದೇವಿಯು ಪ್ರಸನ್ನಳಾಗಿ ಅವರನ್ನು ಕುರಿತು "ನಿಮ್ಮ ಇಷ್ಟಬಂದ ವರಗಳನ್ನು ಕೇಳಿಕೊಳ್ಳಿರಿ" ಎಂದು ಹೇಳಲು ಅವರು ಇಂತೆಂದರು. "ಭೂತಮಾತೆಯಾದ ಮಹೇಶ್ವರಿಯೆ! ನೀನು ನಮ್ಮನ್ನು ಕೃಪೆಯಿಂದ ಕಾಪಾಡಬೇಕು.

೯೯–೧೦೦. ಮಹಾದೇವಿ! ನಾವು ಷಣ್ಮುಖನಿಂದ ನಿರ್ಮಿತವಾದ ಕಟ್ಟಳೆಯನ್ನು ಮೀರುವುದಿಲ್ಲ. ನಮ್ಮಂತೆಯೇ ಯಾರು ನಿನ್ನನ್ನು ಇಂತು ಸಂತೋಷಗೊಳಿಸುವರೊ, ಅವರಿಗೆ ಯಾವಾಗಲೂ ಬೇಕುಬೇಕಾದ ವರಗಳನ್ನು ಕೊಡುವವಳಾಗು" ಎಂದು ಬೇಡಿದರು.

೧೦೧. ಶ್ರೀದೇವಿಯು ಹೇಳುತ್ತಾಳೆ:— "ವೈಶಾಖಮಾಸದ ಅಮಾವಾಸ್ಯೆಯ ದಿನದಲ್ಲಿ ಯಾರು ನನ್ನನ್ನು ಸಂಪೂರ್ಣಾಭರಣಗಳಿಂದಲೂ, ಪುಷ್ಪಗಳಿಂದಲೂ, ದಧ್ಯನ್ನಾದಿಗಳಿಂದಲೂ, ದಿವ್ಯಪೂಜೆಗಳಿಂದಲೂ ಸಂತೋಷಗೊಳಿಸುವರೊ, ಅವರ ಸಮಸ್ತ ಉಪದ್ರವಗಳೂ ಖಂಡಿತವಾಗಿಯೂ ನಾಶವನ್ನು ಹೊಂದುವುವು."

೧೦೨. ಇಂತು ವರವನ್ನು ದಯೆಪಾಲಿಸಿ ಆ ಗುಹಶಕ್ತಿಯು ತನ್ನ ಭೂತಪರಿವಾರಯುತಳಾಗಿ ಸಂತೋಷದಿಂದಿದ್ದಳು. ಅಯ್ಯಾ ಅರ್ಜುನನೇ! ಇಂತಹ ಮಹಾಪ್ರಭಾವವುಳ್ಳ ಆ ಗುಹಶಕ್ತಿಮಹಾದೇವಿಯು ನನ್ನಿಂದ ಇಲ್ಲಿಗೆ ಕರೆತರಲ್ಪಟ್ಟಳು.

೧೦೩. ಯಾವನು ಆಕೆಗೆ ನಮಸ್ಕರಿಸುವನೊ ಅವನು ಸಕಲ ಅರಿಷ್ಟಗಳಿಂದಲೂ ಮುಕ್ತನಾಗುವನು.

**ಏವಂಪ್ರಭಾವಾಃ ಪರಿಕೀರ್ತಿತಾ ಮಯಾ**
**ಸಮಾಸತಸ್ತೀರ್ಥವರೇಽತ್ರ ದೇವ್ಯಃ ।**
**ಚತುರ್ದಶೈವಾರ್ಜುನ ಪೂಜಿತಾ ಯಾ**
**ಶ್ಚತುರ್ದಶಸ್ಥಾನವರೈರ್ನೃಮುಖ್ಯೈಃ ॥ ೧೦೪ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ**
**ಪ್ರಥಮೇ ಮಾಹೇಶ್ವರಖಂಡೇ ಕೌಮಾರಿಕಾಖಂಡೇ**
**"ಶ್ರೀ ದೇವ್ಯಾಖ್ಯಾನ ವರ್ಣನಂ" ನಾಮ**
**ಸಪ್ತಚತ್ವಾರಿಂಶತ್ತಮೋಽಧ್ಯಾಯಃ**

---

೧೦೪. ಇಂತಹ ಮಾಹಾತ್ಮ್ಯಗಳುಳ್ಳ ಹದಿನಾಲ್ಕು ದೇವತೆಯರು ಇಲ್ಲಿ ನೆಲಸಿರುವುದನ್ನು ಸಂಪೂರ್ಣವಾಗಿ ನಿನಗೆ ವಿಸ್ತರಿಸಿರುವೆನು. ಎಲೈ ಅರ್ಜುನನೆ! ಅವರೆಲ್ಲರೂ ಹದಿನಾಲ್ಕು ಲೋಕಗಳಲ್ಲಿರುವ ಮುಖ್ಯನಿವಾಸಿಗಳಿಂದ ನಿತ್ಯವೂ ಪೂಜಿಸಲ್ಪಡುತ್ತಿರುವರು.

ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಎರಡನೆಯ ಕೌಮಾರಿಕಾಖಂಡದಲ್ಲಿ
"ಶ್ರೀ ದೇವ್ಯಾಖ್ಯಾನವರ್ಣನ"ವೆಂಬ ನಲವತ್ತೇಳನೆಯ ಅಧ್ಯಾಯವು
ಮುಗಿದುದು

॥ ಶ್ರೀಃ ॥

## ಅಥಾಷ್ಟಚತ್ವಾರಿಂಶೋಽಧ್ಯಾಯಃ

### ಸ್ತಂಭತೀರ್ಥಮಾಹಾತ್ಮ್ಯೇ ಸೋಮನಾಥವೃತ್ತಾಂತವರ್ಣನಂ

ನಾರದ ಉವಾಚ :—

**ಅಥಾತಃ ಸಂಪ್ರವಕ್ಷ್ಯಾಮಿ ಸೋಮನಾಥಮಹಿಂ ಸ್ಫುಟಂ ।**
**ಶೃಣ್ವನ್ಯಾಂ ಕೀರ್ತಯಿಷ್ಯಾಮಿ ಪಾಪನ್ಮೋಕ್ಷಮವಾಪ್ನುಯಾತ್ ॥ ೧ ॥**
**ಪುರಾ ತ್ರೇತಾಯುಗೇ ಪಾರ್ಥ ಗೌಡದೇಶಸಮುದ್ಭವೌ ।**
**ಊರ್ಜಯಂತಶ್ಚ ಪ್ರಾಲೇಯೋ ವಿಪ್ರಾವಾಸ್ತಾಂ ಮಹಾದ್ಯುತೀ ॥ ೨ ॥**
**ತಾವೇಕದಾ ಪುರಾಣಾರ್ಥೇ ಶ್ಲೋಕಮೇಕಮಪಶ್ಯತಾಂ ।**
**ತಂ ದೃಷ್ಟ್ವಾ ಸರ್ವಶಾಸ್ತ್ರಜ್ಞಾವಾಸ್ತಾಂ ಕಂಟಕಿತತ್ವಚೌ ॥ ೩ ॥**
**ಪ್ರಭಾಸಾದ್ಯಾನಿ ತೀರ್ಥಾನಿ ಪುಲಸ್ತ್ಯಾಯಾಹ ಪದ್ಮಭೂಃ ।**
**ನ ಯೈಸ್ತತ್ರಾಪ್ಲುತಂ ಚೈವಂ ಕಿಂತೈಸ್ತೀರ್ಥಮುಪಾಸಿತಂ ॥ ೪ ॥**
**ಇತಿ ಶ್ಲೋಕಂ ಪಠಿತ್ವಾ ತೌ ಪುನಃ ಪುನರಭಿಷ್ಟುತಂ ।**
**ತರ್ಹ್ಯೇವ ಚ ಪ್ರಭಾಸಾಯ ನಿಃಸೃತೌ ಸ್ನಾತುಮುತ್ತಮೌ ॥ ೫ ॥**

---

### ಕನ್ನಡದ ಅನುವಾದ

#### ಸ್ತಂಭತೀರ್ಥಮಾಹಾತ್ಮ್ಯ — ಸೋಮನಾಥವೃತ್ತಾಂತವರ್ಣನ

೧. ನಾರದನು ಹೇಳುತ್ತಾನೆ:—ಇನ್ನು ಸೋಮನಾಥೇಶ್ವರನ ಮಾಹಾತ್ಮ್ಯೆ ಯನ್ನು ವಿವರವಾಗಿ ಹೇಳುವೆನು. ನಾನು ಕೀರ್ತಿಸುತ್ತಿರುವುದನ್ನು ಕೇಳಿದ ಮಾತ್ರದಿಂದಲೇ ಮನುಷ್ಯನು ಸಕಲ ಪಾಪಗಳಿಂದಲೂ ಮೋಕ್ಷವನ್ನು ಹೊಂದುವನು.

೨. ಎಲೈ ಅರ್ಜುನನೆ! ಮುನ್ನು ತ್ರೇತಾಯುಗದಲ್ಲಿ ಗೌಡದೇಶದಲ್ಲಿ ಹುಟ್ಟಿದ ಮಹಾ ತೇಜೋವಂತರಾದ ಊರ್ಜಯಂತ ಮತ್ತು ಪ್ರಾಲೇಯರೆಂಬ ಇಬ್ಬರು ಬ್ರಾಹ್ಮಣೋತ್ತಮರಿದ್ದರು.

೩. ಅವರು ಒಮ್ಮೆ ಪುರಾಣಶ್ರವಣಮಾಡುತ್ತಿರಲು ಉತ್ತಮವಾದ ಒಂದು ಶ್ಲೋಕವನ್ನು ನೋಡಿದರು. ಸಕಲ ಶಾಸ್ತ್ರಗಳನ್ನೂ ತಿಳಿದ ಅವರು ಅದನ್ನು ನೋಡಿದೊಡನೆಯೇ ಸಂತೋಷದಿಂದ ಪುಲಕಿತ ಶರೀರವುಳ್ಳವರಾದರು.

೪. "ಪುಲಸ್ತ್ಯ ಮಹರ್ಷಿಗೆ ಬ್ರಹ್ಮನು ಪ್ರಭಾಸಕ್ಷೇತ್ರವನ್ನು ಬಿಟ್ಟು ಯಾವ ತೀರ್ಥಗಳನ್ನು ತಿಳಿಸಿರುವನೊ, ಅವುಗಳಲ್ಲಿ ಮಿಂದಂತೆ ಆ ಕ್ಷೇತ್ರ ದಲ್ಲಿಯೂ ಯಾರಿಂದ ಸ್ನಾನವು ಮಾಡಲ್ಪಡಲಿಲ್ಲವೊ, ಅವರಿಂದ ಯಾವ ತೀರ್ಥವು ಉಪಾಸಿಸಲ್ಪಟ್ಟಿದಾಯಿತು ?"

೫. ಮತ್ತೆ ಮತ್ತೆ ಸ್ತೋತ್ರಮಾಡುತ್ತಿರುವ ಈ ಶ್ಲೋಕವನ್ನು ಓದಿ

ತೌ ವನಾನಿ ನದೀಶ್ಚೈವ ವ್ಯತಿಕ್ರಮ್ಯ ಶನೈಃ ಶನೈಃ ।
ಮಹರ್ಷಿಗಣಸಂಕೀರ್ಣಾಮುತ್ತೀರ್ಣೌ ನರ್ಮದಾಂ ಶುಭಾಂ ॥ ೬ ॥
ಗುಪ್ತಕ್ಷೇತ್ರಸ್ಯ ಮಹಾತ್ಮ್ಯಂ ಮಹೀಸಾಗರಸಂಗಮಂ ।
ತತ್ರ ಸ್ನಾತ್ವಾ ಪ್ರಭಾಸಾಯ ತನ್ಮಧ್ಯೇನ ಪ್ರತಸ್ಥತುಃ ॥ ೭ ॥
ತತೋ ಮಾರ್ಗಸ್ಯ ಶೂನ್ಯತ್ವಾತ್ತೃಟ್ಕ್ಷುಧಾಪೀಡಿತಾ ಭೃಶಂ ।
ಆಸ್ತಾಂ ವಿಚೇತನೌ ವಿಪ್ರೌ ಸಿದ್ಧಲಿಂಗಸಮೀಪತಃ ॥ ೮ ॥
ಸಿದ್ಧನಾಥಂ ನಮಸ್ಕೃತ್ಯ ಸಂಪ್ರಯಾತೌ ಸುಧೈರ್ಯತಃ ।
ಕ್ಷುಧಾವೇಗೇನ ತೀವ್ರೇಣ ತೃಷಾ ಮಧ್ಯಾರ್ಕತಾಪಿತೌ ॥ ೯ ॥
ಸಹಸಾ ಪತಿತೌ ಭೂಮೌ ಸ್ಥಾಣಪಾದೌ ವಿಮೂರ್ಛಿತೌ ।
ತತೋ ಮುಹೂರ್ತಾತ್ಪ್ರಾಲೇಯ ಊರ್ಜಯಂತಮಭಾಷತ ॥ ೧೦ ॥
ಕಿಂಚಿದ್ವಿಶ್ವಸ್ಯ ಧೈರ್ಯಾಚ್ಚ ಸಖೇ ಕಿಂ ನ ಶ್ರುತಂ ತ್ವಯಾ ।
ಯಥಾ ಯಥಾ ವಿವರ್ಣಾಂಗೋ ಜಾಯತೇ ತೀರ್ಥಯಾತ್ರಯಾ ।
ತಥಾ ತಥಾ ಭವೇದ್ದಾನ್ಯೈರ್ದೀನಃ ಸೋಮೇಶ್ವರೋ ಹರಃ ॥ ೧೧ ॥

---

ಕೊಂಡು ಉತ್ತಮರಾದ ಆ ಬ್ರಾಹ್ಮಣರಿಬ್ಬರೂ ತತ್ಕ್ಷಣವೇ ಪ್ರಭಾಸ ತೀರ್ಥದಲ್ಲಿ ಸ್ನಾನಮಾಡಿಬರುವ ಉದ್ದೇಶದಿಂದ ಹೊರಟರು.

೬–೧೦. ಅವರು ಅನೇಕ ವನಗಳನ್ನೂ ನದಿಗಳನ್ನೂ ಮೆಲ್ಲ ಮೆಲ್ಲನೆ ದಾಟಿಕೊಂಡು ಮಹರ್ಷಿಗಳಿಗೆ ಆಶ್ರಯವಾದ ಪವಿತ್ರವಾದ ನರ್ಮದಾ ನದಿಯನ್ನೂ ದಾಟಿದರು. ಗುಪ್ತಕ್ಷೇತ್ರದ ಮಾಹಾತ್ಮ್ಯವನ್ನು ತಿಳಿದವರಾದುದರಿಂದ ಮಹೀಸಾಗರ ಸಂಗಮವನ್ನು ಸೇರಿ ಅಲ್ಲಿ ಮಿಂದು ಆ ಮೂಲಕವಾಗಿ ಪ್ರಭಾಸಕ್ಷೇತ್ರಕ್ಕೆ ಹೊರಟರು. ಬಳಿಕ ಅವರಿಗೆ ದಾರಿಯೇ ಕಾಣದಾಯಿತು. ಹಸಿವು ಬಾಯಾರಿಕೆಗಳಿಂದ ಬಹಳ ನೊಂದುಕೊಂಡು ಸಿದ್ಧಲಿಂಗದ ಸಮೀಪದಲ್ಲಿ ಇಬ್ಬರೂ ಮೂರ್ಛೆಗೊಂಡು ಬಿದ್ದಿದ್ದರು. ಸ್ವಲ್ಪ ಚೇತರಿಸಿಕೊಂಡು ಸಿದ್ಧೇಶ್ವರನಿಗೆ ನಮಸ್ಕರಿಸಿ ಹೆಚ್ಚಾದ ಹಸಿವು ಬಾಯಾರಿಕೆಗಳಿಂದಲೂ, ಮಧ್ಯಾಹ್ನದ ಸೂರ್ಯನ ಬಿಸಿಲಿನ ತಾಪದಿಂದಲೂ ಸಂಕಟಪಡುತ್ತಿರುವರಾದರೂ ಬಹಳ ಧೈರ್ಯದಿಂದ ಮುಂದಕ್ಕೆ ಹೊರಡಲನುವಾದರು. ಆದರೆ ಸ್ವಲ್ಪದರಲ್ಲಿಯೇ ಕಾಲುಗಳು ಸ್ವಾಧೀನವಿಲ್ಲದೆ ಮೂರ್ಛೆಗೊಂಡು ನೆಲದಲ್ಲಿ ಬಿದ್ದರು. ಬಳಿಕ ಒಂದು ಮುಹೂರ್ತದ ಮೇಲೆ ಚೇತರಿಸಿಕೊಂಡು ಪ್ರಾಲೇಯನು ಊರ್ಜಯಂತನನ್ನು ಕುರಿತು ಇಂತೆಂದನು.

೧೧. "ಅಯ್ಯಾ ಸ್ನೇಹಿತನೆ! ಧೈರ್ಯದಿಂದ ಸ್ವಲ್ಪ ವಿಶ್ವಾಸವನ್ನು ತಾಳುವವನಾಗು. ನೀನು ಮುನ್ನು ಈ ಶ್ಲೋಕವನ್ನು ಕೇಳಲಿಲ್ಲವೆ? 'ಭಕ್ತನು ತೀರ್ಥಯಾತ್ರೆಯಲ್ಲಿ ನಿರತನಾಗಿ ಎಷ್ಟು ಕ್ಲೇಶಗಳನ್ನು ಸಹಿಸುವನೊ, ಕೃಪಾಸಮುದ್ರನಾದ ಸೋಮೇಶ್ವರನೂ ಅಷ್ಟೇ ವರಪ್ರದನಾಗಿ ಉದ್ಧರಿಸುವನು.'"

ತಥಾಸ್ತಾಂ ಲುಂಠಮಾನೌ ತಾವೇವಮುಕ್ತೇ ಶ್ರುತೇಽಪಿ ಚ ।
ಲುಂಠಮಾನೋ ಜಗಾಮೈವ ಪ್ರಾಲೇಯಃ ಕಿಂಚಿದಂತರೇ ॥ ೧೨ ॥
ಉತ್ಥಿತಂ ಸಹಸಾ ಲಿಂಗಂ ಭೂಮಿಂ ಭಿತ್ವಾ ಸುದುರ್ದೃಶಂ ।
ಖೇ ವಾಣೀ ಚಾಭವತ್ತತ್ರ ಪುಷ್ಪವರ್ಷಪುರಃಸರಾ ॥ ೧೩ ॥
ಪ್ರಾಲೇಯ ತವ ಹೇತೋಸ್ತು ಸೋಮನಾಥಸಮಂ ಫಲಂ ।
ಉತ್ಥಿತಂ ಸಾಗರತಟೇ ಲಿಂಗಂ ತಿಷ್ಠಾತ್ರ ಸುವ್ರತ ॥ ೧೪ ॥

ಪ್ರಾಲೇಯ ಉವಾಚ :—

ಯದ್ಯೇವಂ ಸತ್ಯಮೇತಚ್ಚ ತಥಾಪ್ಯಾತ್ಮಾ ಪ್ರಕಲ್ಪಿತಃ ।
ಪ್ರಭಾಸಾಯ ಪ್ರಯಾತವ್ಯಂ ಯದಾಮೃತ್ಯೋರ್ಮಯಾ ಸ್ಫುಟಂ ॥೧೫॥
ತತಶ್ಚೈವೋರ್ಜಯಂತೋಽಪಿ ಮೂರ್ಛಾಭಾವಾಲ್ಲುಠನ್ಪುರಃ ।
ಅಪಶ್ಯದುತ್ಥಿತಂ ಲಿಂಗಂ ಸ ಚೈವಂ ಪ್ರತ್ಯಪದ್ಯತ ॥ ೧೬ ॥
ತತಃ ಪ್ರತ್ಯಕ್ಷತಾಂ ಪ್ರಾಪ್ತೋ ಭವಶ್ಚಕ್ರೇ ತಯೋರ್ದೃಢೇ ।
ದೃಷ್ಟ್ಯಾ ತನೂ ತತೋ ಯಾತೌ ಪ್ರಭಾಸಂ ಶಿವಸದ್ಮ ಚ ॥ ೧೭ ॥

---

೧೨-೧೩. ಈ ಸ್ತುತಿ ವಾಕ್ಯವನ್ನು ಕೇಳಿಯೂ ಅವರು ತೆವಳಿಕೊಂಡೇ ಓಡಾಡುತ್ತಿದ್ದರು. ಪ್ರಾಲೇಯನು ಆಗ ಕುಂಟುತ್ತಲೇ ಸ್ವಲ್ಪದೂರಕ್ಕೆ ಸರಿದುಹೋದನು. ಹಠಾತ್ತಾಗಿ ಆತನ ಮುಂದೆ ಭೂಮಿಯನ್ನು ಭೇದಿಸಿಕೊಂಡು ನೋಡಲಾಗದ ತೇಜಸ್ಸಿನಿಂದ ಬೆಳಗುತ್ತಿರುವ ಒಂದು ಲಿಂಗವು ಉದ್ಭವಿಸಿತು. ಆಗ ದಿವ್ಯ ಪುಷ್ಪವೃಷ್ಟಿಯಾಗುತ್ತಿರಲು ಆಕಾಶವಾಣಿಯು ಹೇಳತೊಡಗಿತು.

೧೪. "ಎಲೈ ಪ್ರಾಲೇಯನೆ! ನಿನಗಾಗಿಯೇ ಇಲ್ಲಿ ಸೋಮನಾಥನಿಗೆ ಸಮಾನ ಫಲಗಳನ್ನು ಕೊಡುವ ಈ ಲಿಂಗವು ಸಾಗರತೀರದಲ್ಲಿ ಉದ್ಭವಿಸಿರುವುದು. ವ್ರತೋಪವಾಸಗಳಲ್ಲಿ ನಿರತನಾಗಿ ನೀನು ಇಲ್ಲಿಯೇ ನೆಲಸುವವನಾಗು."

೧೫. ಪ್ರಾಲೇಯನು ಹೇಳುತ್ತಾನೆ:—"ಈ ಮಾತುಗಳು ಯಥಾರ್ಥಗಳಾಗಲಿ. ಆದರೂ ಕೂಡ ನನ್ನ ಮನಸ್ಸು ಪ್ರಭಾಸಕ್ಷೇತ್ರಕ್ಕೆ ಹೋಗಬೇಕೆಂದು ಕುತೂಹಲಪಡುತ್ತಿರುವುದು. ಅಲ್ಲಿಯೇ ಸಾಯುವವರೆಗೂ ನೆಲಸಬೇಕೆಂಬುದು ನನ್ನ ದೃಢ ಪ್ರತಿಜ್ಞೆಯಾಗಿರುವುದು."

೧೬. ಅಷ್ಟರಲ್ಲಿಯೇ ಊರ್ಜಯಂತನೂ ಮೂರ್ಛೆಯಿಂದೆಚ್ಚತ್ತು ಕುಂಟಿಕೊಂಡು ಹೋಗುತ್ತ ತನ್ನ ಮುಂದೆಯೂ ಒಂದು ಲಿಂಗವು ಉದ್ಭವಿಸಿದುದನ್ನು ಕಂಡು ಪ್ರಾಲೇಯನಂತೆಯೇ ಪ್ರಾರ್ಥಿಸಿಕೊಂಡನು.

೧೭. ಆಗ ಮಹೇಶ್ವರನು ಪ್ರತ್ಯಕ್ಷನಾಗಿ ಅವರಿಬ್ಬರಿಗೂ ತನ್ನ ಅಮೃತದೃಷ್ಟಿಯಿಂದ ವಜ್ರಶರೀರವನ್ನುಂಟುಮಾಡಿದನು. ಬಳಿಕ ಅವರು ಪ್ರಭಾಸಕ್ಷೇತ್ರವನ್ನೂ ಕಾಲಾಂತರದಲ್ಲಿ ಶಿವಸಾಯುಜ್ಯವನ್ನೂ ಪಡೆಯುವವರಾದರು.

**ತಾವೇತೌ ಸೋಮನಾಥೌ ದ್ವೌ ಸಿದ್ಧೇಶ್ವರಸಮೀಪತಃ ।**
**ಊರ್ಜಯಂತಃ ಪ್ರತೀಚ್ಯಾಂ ಚ ಪ್ರಾಲೇಯಸ್ಯೇಶ್ವರೋಽಪರಃ ॥ ೧೮ ॥**
**ಸೋಮಕುಂಡಾಂಭಸಿ ಶನೈಃ ಸ್ನಾತ್ವಾರ್ಣವಮಹೀಜಲೇ ।**
**ಸೋಮನಾಥದ್ವಯಂ ಪಶ್ಯೇಜ್ಜನ್ಮಪಾಪಾತ್ಪ್ರಮುಚ್ಯತೇ ॥ ೧೯ ॥**
**ಬ್ರಹ್ಮಾತ್ರ ಸ್ಥಾಪಯಿತ್ವಾ ತು ಹಾಟಕೇಶ್ವರಸಂಜ್ಞಿತಂ ॥ ೨೦ ॥**
**ಮಹೀನಗರಕೇ ಲಿಂಗಂ ಪಾತಾಲಾತ್ಸುಮನೋಹರಂ ।**
**ತುಷ್ಟಾವ ದೇವಂ ಪ್ರಯತಃ ಸ್ತುತಿಂ ತಾಂ ಶ್ರುಣು ಪಾಂಡವ ॥ ೨೧ ॥**
**ನಮಸ್ತೇ ಭಗವನ್ರುದ್ರ ಭಾಸ್ಕರಾಮಿತತೇಜಸೇ ।**
**ನಮೋ ಭವಾಯ ರುದ್ರಾಯ ರಸಾಯಾಂಬುಮಯಾಯ ತೇ ॥ ೨೨ ॥**
**ಶರ್ವಾಯ ಕ್ಷಿತಿರೂಪಾಯ ಸದಾ ಸುರಭಿಣೇ ನಮಃ ।**
**ಈಶಾಯ ವಾಯವೇ ತುಭ್ಯಂ ಸಂಸ್ಪರ್ಶಾಯ ನಮೋ ನಮಃ ॥ ೨೩ ॥**
**ಪಶೂನಾಂ ಪತಯೇ ಚಾಪಿ ಪಾವಕಾಯಾತಿತೇಜಸೇ ।**
**ಭೀಮಾಯ ವ್ಯೋಮರೂಪಾಯ ಶಬ್ದಮಾತ್ರಾಯ ತೇ ನಮಃ ॥ ೨೪ ॥**

---

೧೮. ಈ ಎರಡು ಸೋಮನಾಥೇಶ್ವರ ಲಿಂಗಗಳೂ ಸಿದ್ಧೇಶ್ವರನಿಗೆ ಪಶ್ಚಿಮದಲ್ಲಿ ಊರ್ಜಯಂತೇಶ್ವರ ಮತ್ತು ಪ್ರಾಲೇಯೇಶ್ವರರೆಂಬ ಹೆಸರುಗಳಿಂದ ಇಂದಿಗೂ ಪ್ರಸಿದ್ಧಗಳಾಗಿರುವುವು.

೧೯. ಮಹೀಸಾಗರದ ಸಮುದ್ರತೀರದಲ್ಲಿ ಸೋಮಕುಂಡದ ಜಲದಲ್ಲಿ ಸ್ನಾನಮಾಡಿ ಸೋಮನಾಥೇಶ್ವರ ಲಿಂಗಗಳೆರಡನ್ನೂ ನೋಡುವವರು ಆಜನ್ಮ ಪಾಪಗಳಿಂದಲೂ ಮುಕ್ತರಾಗುವರು.

೨೦-೨೧. ಬ್ರಹ್ಮನೂ ಕೂಡ ಹಾಟಕೇಶ್ವರವೆಂಬ ಹೆಸರುಳ್ಳ ಮನೋಹರವಾದ ಲಿಂಗವನ್ನು ಪಾತಾಲಲೋಕದಿಂದ ತಂದು ಈ ಮಹೀನಗರದಲ್ಲಿ ಸ್ಥಾಪಿಸಿ ಪ್ರಯತ್ನಪೂರ್ವಕವಾಗಿ ಸ್ತೋತ್ರಮಾಡಿದನು. ಎಲೈ ಅರ್ಜುನನೆ! ಆ ಸ್ತೋತ್ರವನ್ನು ಶ್ರದ್ಧೆಯಿಂದ ಕೇಳು.

೨೨-೨೫. ಎಲೈ ಷಡ್ಗುಣೈಶ್ವರ್ಯಸಂಪನ್ನನಾದ ರುದ್ರನೇ! ನಿನಗೆ ನಮಸ್ಕಾರವು. ಸೂರ್ಯನಿಗಿಂತಲೂ ಅಪಾರ ತೇಜಸ್ಸಂಪನ್ನನಾಗಿರುವ ನಿನಗೆ ನಮೋ ನಮಃ! ಭವನೂ, ರುದ್ರನೂ, ರಸಸ್ವರೂಪನೂ, ಜಲಮಯನೂ ಆಗಿರುವ ನಿನಗೆ ನಮಸ್ಕಾರವು! ಓ ಶರ್ವ! ಭೂಮಿಸ್ವರೂಪನಾಗಿ ಯಾವಾಗಲೂ ಸುಗಂಧಭರಿತನಾಗಿರುವ ನಿನಗೆ ನಮೋ ನಮಃ! ಈಶನೂ, ವಾಯುಸ್ವರೂಪನೂ ಆಗಿ ಸಂಸ್ಪರ್ಶನೆನಿಸಿರುವ ನಿನಗೆ ನಮಸ್ಕಾರವು! ಪಶುಪತಿಯೂ, ಪಾವಕನೂ, ಅತಿ ತೇಜಸ್ವಿಯೂ, ಭೀಮನೂ, ಆಕಾಶರೂಪನೂ, ಶಬ್ದಮಾತ್ರ (ಗಮ್ಯ)ನೂ ಆದ ನಿನಗೆ ನಮೋ ನಮಃ! ಓ ಮಹಾದೇವ! ಸೋಮನೂ (ಉಮಾಸಹಿತನೂ,

ಮಹಾದೇವಾಯ ಸೋಮಾಯ ಅಮೃತಾಯ ನಮೋಽಸ್ತುತೇ
ಉಗ್ರಾಯ ಯಜಮಾನಾಯ ನಮಸ್ತೇ ಕರ್ಮಯೋಗಿನೇ ॥ ೨೫ ॥
ಇತ್ಯೇವಂ ನಾಮಭಿರ್ದಿವ್ಯೈಃ ಸ್ತವ ಏಷ ಉದೀರಿತಃ ।
ಯಃ ಪಠೇಚ್ಛೃಣುಯಾದ್ವಾಪಿ ಪಿತಾಮಹಕೃತಂ ಸ್ತವಂ ॥ ೨೬ ॥
ಹಾಟಕೇಶ್ವರಲಿಂಗಸ್ಯ ನಿತ್ಯಂ ಚ ಪ್ರಯತೋ ನರಃ ।
ಅಷ್ಟಮೂರ್ತೇಃ ಸ ಸಾಯುಜ್ಯಂ ಲಭತೇ ನಾತ್ರ ಸಂಶಯಃ ॥ ೨೭ ॥
ಹಾಟಕೇಶ್ವರಲಿಂಗಂ ಚ ಪ್ರಯತೋ ಯಃ ಸ್ಮರೇದಪಿ ।
ತಸ್ಯ ಸ್ಯಾದ್ವರದೋ ಬ್ರಹ್ಮಾ ತೇನೇದಂ ಸ್ಥಾಪಿತಂ ಜಯ ॥ ೨೮ ॥
ಏವಂ ವಿಧಾನಿ ತೀರ್ಥಾನಿ ಮಹೀಸಾಗರಸಂಗಮೇ ।
ಬಹೂನಿ ಸಂತಿ ಪುಣ್ಯಾನಿ ಸಂಕ್ಷೇಪಾದ್ವರ್ಣಿತಾನಿ ಮೇ ॥ ೨೯ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪ್ರಥಮೇ ಮಾಹೇಶ್ವರಖಂಡೇ ಕೌಮಾರಿಕಾಖಂಡೇ
"ಸ್ತಂಭತೀರ್ಥ ಮಾಹಾತ್ಮ್ಯೇ ಸೋಮನಾಥವೃತ್ತಾಂತವರ್ಣನಂ" ನಾಮ
ಅಷ್ಟಚತ್ವಾರಿಂಶತ್ತಮೋಽಧ್ಯಾಯಃ

---

ಚಂದ್ರರೂಪದಿಂದ ಜಗತ್ತಿಗೆ ಕಾಂತಿಯನ್ನು ಬೀರುವವನೂ), ಅಮೃತನೂ, (ಮೃತ್ಯುಂಜಯನೂ) ಆದ ನಿನಗೆ ನಮಸ್ಕಾರವು. ಉಗ್ರನೂ, ಯಜಮಾನನೂ, ಕರ್ಮಯೋಗಿಯೂ ಆದ ನಿನಗೆ ನಮೋ ನಮಃ !!

೨೬-೨೭. ಇಂತು ಈ ದಿವ್ಯನಾಮಗಳಿಂದ ಈ ಸ್ತೋತ್ರವು ಹೇಳಲ್ಪಟ್ಟಿತು. ಬ್ರಹ್ಮನಿಂದ ಉಕ್ತವಾದ ಈ ಹಾಟಕೇಶ್ವರ ಲಿಂಗದ ಸ್ತೋತ್ರವನ್ನು ನಿತ್ಯದಲ್ಲಿಯೂ ಯಾವನು ನಿಯಮದಿಂದ ಪಠಿಸುವನೋ, ಅಥವಾ ಕೇಳುವನೊ, ಅವನು ಮಹೇಶ್ವರನ ಸಾಯುಜ್ಯವನ್ನು ಹೊಂದುವನೆಂಬುದರಲ್ಲಿ ಸಂಶಯವಿಲ್ಲ.

೨೮. ಎಲೈ ಅರ್ಜುನನೆ! ಯಾವನು ಬ್ರಹ್ಮನಿಂದ ಸ್ಥಾಪಿತವಾದ ಈ ಹಾಟಕೇಶ್ವರನನ್ನು ನಿತ್ಯವೂ ಸ್ಮರಿಸುವನೊ, ಅವನಿಗೆ ಆ ಬ್ರಹ್ಮನೇ ಬೇಕಾದ ವರಗಳನ್ನು ಕೊಟ್ಟು ಕಾಪಾಡುವನು.

೨೯. ಈ ಮಹೀಸಾಗರಸಂಗಮ ಕ್ಷೇತ್ರದಲ್ಲಿ ಈ ವಿಧವಾದ ಪುಣ್ಯತೀರ್ಥಗಳು ಅನೇಕವಾಗಿರುವುವು. ಪ್ರಕೃತದಲ್ಲಿ ಕೆಲವನ್ನು ಮಾತ್ರ ಸಂಕ್ಷೇಪವಾಗಿ ವರ್ಣಿಸಿರುವೆನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಎರಡನೆಯ ಕೌಮಾರಿಕಾಖಂಡದಲ್ಲಿ
"ಸ್ತಂಭತೀರ್ಥಮಾಹಾತ್ಮ್ಯ — ಸೋಮನಾಥವೃತ್ತಾಂತವರ್ಣನ"ವೆಂಬ
ನಲವತ್ತೆಂಟನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥೈಕೋನಪಂಚಾಶತ್ತಮೋಽಧ್ಯಾಯಃ

### ಕಮಠ ಸೂರ್ಯ ಸಂವಾದೇ ಜೀವಸ್ಯ ದೇಹೋತ್ಪತ್ತಿ ವರ್ಣನಂ

ಅರ್ಜುನ ಉವಾಚ :—

**ಅತ್ಯದ್ಭುತಾನಿ ತೀರ್ಥಾನಿ ಲಿಂಗಾನಿ ಚ ಮಹಾಮುನೇ ।**
**ಶ್ರುತ್ವಾ ತವ ಮುಖಾಂಭೋಜಾದ್ಭೃಶಂ ಮೇ ಹೃಷ್ಯತೇ ಮನಃ ॥ ೧ ॥**
**ಮಹೀನಗರಕಸ್ಯಾಪಿ ಸ್ಥಾಪಿತಸ್ಯ ತ್ವಯಾ ಮುನೇ ।**
**ಯಾನಿ ತೀರ್ಥಾನಿ ಮುಖ್ಯಾನಿ ತಾನಿ ವರ್ಣಯ ಮೇ ಪ್ರಭೋ ॥ ೨ ॥**

ನಾರದ ಉವಾಚ :—

**ಶ್ರೀಮನ್ಮಹೀನಗರಕೇ ಯಾನಿ ತೀರ್ಥಾನಿ ಫಾಲ್ಗುನ ।**
**ತಾನಿ ವಕ್ಷ್ಯಾಮಿ ಯತ್ರಾಸ್ತೇ ಜಯಾದಿತ್ಯೋ ರವಿಃ ಪ್ರಭುಃ ॥ ೩ ॥**
**ಜಯಾದಿತ್ಯಸ್ಯ ಯೋ ನಾಮ ಕೀರ್ತಯೇದಿಹ ಮಾನವಃ ।**
**ಸರ್ವರೋಗವಿನಿರ್ಮುಕ್ತೋ ಲಭೇತ್ಸೋಽಪಿ ಹೃದೀಪ್ಸಿತಂ ॥ ೪ ॥**
**ಯಸ್ಯ ಸಂದರ್ಶನಾದೇವ ಕಲ್ಯಾಣೈರಪಿ ಪೂರ್ಯತೇ ।**
**ಮುಚ್ಯತೇ ಚಾಪ್ಯಕಲ್ಯಾಣೈಃ ಶ್ರದ್ಧಾವಾನ್ಪಾರ್ಥ ಮಾನವಃ ॥ ೫ ॥**

---

### ಕನ್ನಡದ ಅನುವಾದ

#### ಕಮಠ ಸೂರ್ಯ ಸಂವಾದ— ಜೀವನ ದೇಹೋತ್ಪತ್ತಿ ವರ್ಣನ

೧. ಅರ್ಜುನನು ಕೇಳುತ್ತಾನೆ:—ಎಲೈ ಮುನೀಶ್ವರನೆ! ನಿನ್ನ ಮುಖ ಕಮಲದಿಂದ ಅತ್ಯದ್ಭುತಗಳಾದ ಈ ತೀರ್ಥಗಳ ಮತ್ತು ಶಿವಲಿಂಗಗಳ ವಿಷಯ ಗಳನ್ನು ಕೇಳಿ ನನ್ನ ಮನಸ್ಸಿಗೆ ಅತಿಶಯವಾದ ಆನಂದವಾಗಿರುವುದು.

೨. ಈಗ ನಿನ್ನಿಂದ ಸ್ಥಾಪಿತವಾಗಿರುವ ಈ ಮಹೀನಗರದಲ್ಲಿರುವ ಮುಖ್ಯ ತೀರ್ಥಗಳನ್ನು ವರ್ಣಿಸುವವನಾಗು.

೩. ನಾರದನು ಹೇಳುತ್ತಾನೆ:—ಎಲೈ ಅರ್ಜುನನೆ! ಮಹೀನಗರದಲ್ಲಿ ಮುಖ್ಯ ತೀರ್ಥಗಳನ್ನೆಲ್ಲ ನಿನಗೆ ವಿವರಿಸುವೆನು. ಅಲ್ಲಿಯೇ ಸ್ವಾಮಿಯಾದ ಜಯಾದಿತ್ಯನು ನೆಲಸಿರುವನು.

೪. ಯಾವ ಮನುಷ್ಯನು ಜಯಾದಿತ್ಯನ ದಿವ್ಯನಾಮವನ್ನು ಸಂಕೀರ್ತನ ಮಾಡುವನೊ, ಅವನಿಗೆ ಸಕಲ ರೋಗಗಳ ನಿವಾರಣೆಯಾಗಿ ಅವನು ಮನಸ್ಸಿನ ಇಷ್ಟಾರ್ಥಗಳನ್ನು ಪಡೆಯುವನು.

೫. ಆ ಜಯಾದಿತ್ಯಸ್ವಾಮಿಯ ಸಂದರ್ಶನಮಾತ್ರದಿಂದಲೇ ಮನುಷ್ಯನಿಗೆ ಸಕಲ ಕಲ್ಯಾಣಗಳೂ ಪ್ರಾಪ್ತವಾಗುತ್ತವೆಯಲ್ಲದೆ ಶ್ರದ್ಧಾಯುಕ್ತನಾದ ಮನುಷ್ಯನು ಸಕಲ ಅರಿಷ್ಟಗಳಿಂದಲೂ ಮುಕ್ತನಾಗುತ್ತಾನೆ.

**ತಸ್ಯ ದೇವಸ್ಯ ಚೋತ್ಪತ್ತಿಂ ಶೃಣು ಪಾರ್ಥ ವದಾಮಿ ತೇ ।**
**ಶೃಣ್ವನ್ವಾ ಕೀರ್ತಯನ್ವಾಪಿ ಪ್ರಸಾದಂ ಭಾಸ್ಕರಾಲ್ಲಭೇತ್ ॥ ೬ ॥**
**ಅಹಂ ಸಂಸ್ಥಾಪ್ಯ ಸಂಸ್ಥಾನಮೇತತ್ಕಾಲೇನ ಕೇನಚಿತ್ ।**
**ಪ್ರಯಾತೋ ಭಾಸ್ಕರಂ ಲೋಕಂ ದರ್ಶನಾರ್ಥೀ ಯದೃಚ್ಛಯಾ ॥ ೭ ॥**
**ಸ ಮಾಂ ಪ್ರಣತಮಾಸೀನಮಭ್ಯರ್ಚ್ಯಾರ್ಘ್ಯೇಣ ಭಾಸ್ಕರಃ ।**
**ಪ್ರಹಸನ್ನಿವ ಪ್ರಾಹೇದಂ ದೇವೋ ಮಧುರಯಾ ಗಿರಾ ॥ ೮ ॥**
**ಕುತ ಆಗಮ್ಯತೇ ವಿಪ್ರ ಕ್ವ ಚ ವಾ ಪ್ರತಿಗಮ್ಯತೇ ।**
**ಕ್ವ ಚಾಯಂ ನಾರದಮುನೇ ಕಾಲಸ್ತೇ ವಿಹೃತೋಽಭವತ್ ॥ ೯ ॥**

**ನಾರದ ಉವಾಚ :—**

**ಏವಮುಕ್ತೋ ಭಾಸ್ಕರೇಣ ತಂ ತದಾ ಪ್ರಾಬ್ರವಂ ವಚಃ ।**
**ಭಾರತೇ ವಿಹೃತಃ ಖಂಡೇ ಮಹೀನಗರಕಾದಪಿ ।**
**ದರ್ಶನಾರ್ಥಂ ತವ ವಿಭೋ ಸಮಾಯಾತೋಽಸ್ಮಿ ಭಾಸ್ಕರ ॥ ೧೦ ॥**

**ರವಿರುವಾಚ :—**

**ಯತ್ತ್ವಯಾ ಸ್ಥಾಪಿತಂ ಸ್ಥಾನಂ ತತ್ರ ಯೇ ಸಂತಿ ಬ್ರಾಹ್ಮಣಾಃ ।**
**ತೇಷಾಂ ಗುಣಾನ್ಮಮ ಬ್ರೂಹಿ ಕಿಂ ಗುಣಾ ನನು ತೇ ದ್ವಿಜಾಃ ॥ ೧೧ ॥**

---

೬–೭. ಆ ದೇವತೆಯ ಉತ್ಪತ್ತಿಯ ಕಾರಣವನ್ನು ಹೇಳುವೆನು ಕೇಳು. ಎಲೈ ಪಾರ್ಥನೆ! ಈ ಚರಿತ್ರೆಯನ್ನು ಕೇಳುವುದರಿಂದಲೂ, ಹೇಳುವುದರಿಂದಲೂ ಮನುಷ್ಯನು ಸೂರ್ಯದೇವನ ಪ್ರಸಾದವನ್ನು ಹೊಂದುವನು. ಈ ಕ್ಷೇತ್ರವನ್ನು ಸ್ಥಾಪಿಸಿದ ಕೆಲವು ಕಾಲದ ಮೇಲೆ ನಾನು ಒಂದು ದಿನ ಅನಿರೀಕ್ಷಿತವಾಗಿ ಸೂರ್ಯನನ್ನು ನೋಡಲು ಆತನ ಲೋಕಕ್ಕೆ ಹೋಗಿ ಸೇರಿದೆನು.

೮. ಆತನಿಗೆ ನಮಸ್ಕರಿಸಿ ಉಚಿತಾಸನದಲ್ಲಿ ಕುಳಿತಿರಲು ಸೂರ್ಯನು ಅರ್ಘ್ಯಪಾದ್ಯಾದಿಗಳಿಂದ ನನ್ನನ್ನು ಸತ್ಕರಿಸಿ ಮುಗುಳ್ನಗೆಯೊಡನೆ ಕೂಡಿದ ಮಧುರವಚನಗಳಿಂದ ಈ ರೀತಿ ಹೇಳತೊಡಗಿದನು.

೯. "ಎಲೈ ನಾರದಮುನಿಯೆ! ಎಲ್ಲಿಂದ ಬರುತ್ತಿರುವೆ? ಎಲ್ಲಿಗೆ ಪ್ರಯಾಣ ಮಾಡುತ್ತಿರುವೆ? ಇಷ್ಟು ದಿವಸಗಳನ್ನೂ ನೀನು ಎಲ್ಲಿ ಕಳೆಯುತ್ತಿದ್ದೆ?"

೧೦. ನಾರದನು ಹೇಳುತ್ತಾನೆ:— ಇಂತು ಕೇಳಲ್ಪಟ್ಟ ಸೂರ್ಯನಿಗೆ ನಾನು ಉತ್ತರವನ್ನು ಹೇಳುವವನಾಗಿ "ಭರತಖಂಡದಲ್ಲಿ ವಿಹರಿಸುತ್ತಿದ್ದೆನು; ಈಗ ನಿನ್ನನ್ನು ದರ್ಶನಮಾಡಬೇಕೆಂಬ ಅಭಿಲಾಷೆಯಿಂದ ಮಹೀನಗರದಿಂದ ಇಲ್ಲಿಗೆ ಬಂದಿರುವೆನು" ಎಂದೆನು.

೧೧. ಸೂರ್ಯನು ಹೇಳುತ್ತಾನೆ:— "ಎಲೈ ನಾರದನೆ! ನಿನ್ನಿಂದ ಸ್ಥಾಪಿತವಾದ ಆ ಕ್ಷೇತ್ರದಲ್ಲಿ ನೆಲಸಿರುವ ಬ್ರಾಹ್ಮಣರ ಗುಣದೋಷಗಳನ್ನು ನನಗೆ ತಿಳಿಸು. ಅವರು ಆಚಾರ ವಿಹಾರಗಳಲ್ಲಿ ಹೇಗೆ ವರ್ತಿಸುತ್ತಿರುವರು?"

ನಾರದ ಉವಾಚ :–

ಏವಂ ಪೃಷ್ಟೋಽಹಂ ಭಗವತಾ ಪುನರೇವಾಬ್ರವಂ ವಚಃ ॥ ೧೨ ॥
ಯದಿ ತಾನ್ಸ್ತೌಮಿ ಪ್ರಶಂಸಾಮಿ ಸ್ವೀಯಾನ್ ಸ್ತೌತೀತಿವಾಚ್ಯತಾ ।
ನಿಂದಾಮ್ಯನರ್ಹಾನ್ಕಸ್ಮಾದ್ವಾ ಕಷ್ಟಮೇವೋಭಯತ್ರ ಚ ॥ ೧೩ ॥
ಅಥವಾಪಾರಮಾಹಾತ್ಮ್ಯೇ ಸತಿ ತೇಷಾಂ ಮಹಾತ್ಮನಾಂ ।
ಅಲ್ಪೇ ಕೃತೇ ವರ್ಣನೇ ಸ್ಯಾದ್ದೋಷ ಏವ ಮಹಾನ್ಮಮ ॥ ೧೪ ॥
ಮದರ್ಚಿತದ್ವಿಜೇಂದ್ರಾಣಾಂ ಯದಿ ಸ್ಯಾಚ್ಛ್ರವಣೇಪ್ಸುತಾ ।
ತತಃ ಸ್ವಯಂ ವಿಲೋಕ್ಯಾಸ್ತೇ ಗತ್ವೇದಂ ಮೇ ಮತಂ ರವೇ ॥ ೧೫ ॥
ಇತಿ ಶ್ರುತ್ವಾ ಮಮ ವಚೋ ರವಿರಾಸೀತ್ಸುವಿಸ್ಮಿತಃ ।
ಸ್ವಯಂ ದ್ರಕ್ಷ್ಯಾಮಿ ಚೋವಾಚ ಪುನಃಪುನರಹರ್ಪತಿಃ ॥ ೧೬ ॥
ಸೋಽಥ ವಿಪ್ರತನುಂ ಕೃತ್ವಾ ಮಾಂ ವಿಸಜ್ಯೈವ ಭಾಸ್ಕರಃ ।
ಪ್ರತಪನ್ನಿವ ಯೋಗಾಚ್ಚ ಪ್ರಯಾತೋಽರ್ಣವರೋಧಸಿ ॥ ೧೭ ॥
ಜಟಾಂ ತ್ರಿಷವಣಸ್ನಾನಪಿಂಗಲಾಂ ಧಾರಯನ್ನಥ ।
ವೃದ್ಧದ್ವಿಜೋ ಮಹಾತೇಜಾ ದದೃಶೇ ಬ್ರಾಹ್ಮಣೈರ್ಮಮ ॥ ೧೮ ॥

---

೧೨. ನಾರದರು ಹೇಳುತ್ತಾರೆ:—ಇಂತು ಸೂರ್ಯಭಗವಂತನಿಂದ ಕೇಳಲ್ಪಟ್ಟವನಾಗಿ ನಾನಿಂತು ಹೇಳತೊಡಗಿದೆನು.

೧೩. "ಎಲೈ ಸ್ವಾಮಿಯೆ! ಅವರನ್ನು ಸ್ತೋತ್ರಮಾಡಿದರೆ 'ಇವನು ತನ್ನವರನ್ನೇ ಸ್ತುತಿಸುತ್ತಿರುವನು' ಎಂಬ ಅಪವಾದವು ಬರುವುದು. ನಿಂದೆಗೆ ಅರ್ಹರಲ್ಲದ ಅವರನ್ನು ಹೇಗೆ ತಾನೆ ನಿಂದಿಸಲಿ? ಈಗ ನನಗೆ ಉಭಯತ್ರದಲ್ಲಿಯೂ ಸಂಕಟವೊದಗಿರುವುದು.

೧೪. ಅಲ್ಲದೆ ಆ ಮಹಾತ್ಮರಲ್ಲಿ ಅಪಾರವಾದ ಮಾಹಾತ್ಮ್ಯಯಿರಲು ಸ್ವಲ್ಪವಾದ ವರ್ಣನೆಯನ್ನು ಮಾಡುವುದರಿಂದಲೂ ನನಗೆ ಮಹತ್ತರವಾದ ದೋಷವೇ ಪ್ರಾಪ್ತವಾಗುವುದು.

೧೫. ನನ್ನಿಂದ ಪೂಜಿತರಾದ ಈ ಬ್ರಾಹ್ಮಣರ ವಿಷಯವನ್ನು ಕೇಳಲೆಳಸುವೆಯಾದರೆ, ನೀನು ಅಲ್ಲಿಗೇ ಹೋಗಿ ಅವರನ್ನು ನೋಡಬೇಕೆಂಬುದೇ ನನ್ನ ಪ್ರಾರ್ಥನೆ."

೧೬. ಈ ನನ್ನ ಮಾತುಗಳನ್ನು ಕೇಳಿ ದಿವಸಾಧಿಪತಿಯಾದ ಸೂರ್ಯನಿಗೆ ಅತಿಯಾದ ವಿಸ್ಮಯವುಂಟಾಯಿತು. ಆಗಲಾತನು "ನಾನೇ ಬಂದು ಅವರನ್ನು ನೋಡುವೆನು" ಎಂದು ಮತ್ತೆ ಮತ್ತೆ ಹೇಳಿದನು.

೧೭–೧೮. ಆಗ ಸೂರ್ಯನು ನನ್ನನ್ನು ಬೀಳ್ಕೊಟ್ಟು ಬ್ರಾಹ್ಮಣನ ವೇಷವನ್ನು ತಾಳಿ, ಯೋಗಶಕ್ತಿಯಿಂದ ಪ್ರಜ್ವಲಿಸುತ್ತ, ಮಹೀಸಾಗರಕ್ಕೆ ಹೊರಟು,

**ತತೋ ಹಾರೀತಪ್ರಮುಖಾಃ ಪ್ರಹರ್ಷೋತ್ಫುಲ್ಲಲೋಚನಾಃ ।**
**ಉತ್ಥಾಯ ಬ್ರಹ್ಮಶಾಲಾಯಾಸ್ತೇ ದ್ವಿಜಾ ದ್ವಿಜಮಾದ್ರವನ್ ॥ ೧೯ ॥**
**ನಮಸ್ಕೃತ್ಯ ದ್ವಿಜಾಗ್ರ್ಯಂ ತೇ ಪ್ರಹರ್ಷಾದಿದಮಬ್ರುವನ್ ॥ ೨೦ ॥**
**ಅದ್ಯ ನೋ ದಿವಸಃ ಪುಣ್ಯಃ ಸ್ಥಾನಮದ್ಯೋತ್ತಮಂ ತ್ವಿದಂ ।**
**ಯತ್ತ್ವಯಾ ವಿಪ್ರಪ್ರವರ ಸ್ವಯಮಾಗಮನಂ ಕೃತಂ ॥ ೨೧ ॥**
**ಧನ್ಯಸ್ಯ ಹಿ ಗೃಹಸ್ಥಸ್ಯ ಕೃಪಯೈವ ದ್ವಿಜೋತ್ತಮಾಃ ।**
**ಅತಿಥ್ಯವೇಕ್ಷ್ಣೇಣಾಯಾಂತಿ ಪಾವನಾರ್ಥಂ ನ ಸಂಶಯಃ ॥ ೨೨ ॥**
**ತತ್ತ್ವಂ ಗೇಹಾನಿ ಚಾಸ್ಮಾಕಂ ಪಾದಚಂಕ್ರಮಣೇನ ಚ ।**
**ದರ್ಶನಾದ್ಭೋಜನಾತ್ಸ್ಥಾನಾದಸ್ಮಾಭಿಃ ಸಹ ಪಾವಯ ॥ ೨೩ ॥**

**ಅತಿಥಿರುವಾಚ :—**

**ಭೋಜನಂ ದ್ವಿವಿಧಂ ವಿಪ್ರಾ ಪ್ರಾಕೃತಂ ಪರಮಂ ತಥಾ ।**
**ತದಹಂ ಸಮ್ಯಗಿಚ್ಛಾಮಿ ದತ್ತಂ ಪರಮಭೋಜನಂ ॥ ೨೪ ॥**

---

ತ್ರಿಷವಣಸ್ನಾನಗಳಿಂದುಂಟಾದ ಕೆಂಜೆಡೆಗಳನ್ನು ಧರಿಸಿ, ಅಪಾರವಾದ ತೇಜಸ್ಸಿನಿಂದ ಬೆಳಗುತ್ತಿರುವ ವೃದ್ಧನಾಗಿ ನನ್ನ ಮತ್ತು ಬ್ರಾಹ್ಮಣರ ಸಮೀಪದಲ್ಲಿ ಕಾಣಿಸಿಕೊಂಡನು.

೧೯. ಆಗ ಹಾರೀತನೇ ಮೊದಲಾದ ಬ್ರಾಹ್ಮಣರು ಸಂತೋಷದಿಂದ ಅರಳಿದ ಕಣ್ಣುಳ್ಳವರಾಗಿ ಬ್ರಹ್ಮಶಾಲೆಯಿಂದೆದ್ದು ಆ ಬ್ರಾಹ್ಮಣೋತ್ತಮನನ್ನು ಎದುರ್ಗೊಂಡರು.

೨೦–೨೧. ಅವರು ಹರ್ಷದಿಂದ ಆತನಿಗೆ ನಮಸ್ಕರಿಸಿ ಇಂತೆಂದು ಹೇಳಿದರು. "ಎಲೈ ಬ್ರಾಹ್ಮಣಶ್ರೇಷ್ಠನೆ! ಇಂದು ನಮಗೆ ಸುದಿವಸವಾಗಿರುವುದು. ನೀನು ಯಾದೃಚ್ಛಿಕವಾಗಿಯೂ ಇಲ್ಲಿಗೆ ದಯಮಾಡಿಸಿರುವುದರಿಂದ ಈ ಪ್ರದೇಶವೂ ಉತ್ತಮ ಕ್ಷೇತ್ರವೆನಿಸಿತು.

೨೨. ಧನ್ಯನಾದ ಗೃಹಸ್ಥನಲ್ಲಿ ಕೃಪೆಯುಳ್ಳವರಾಗಿ ಅವನನ್ನು ಪಾವನಗೊಳಿಸುವುದಕ್ಕಾಗಿಯೇ ನಿನ್ನಂತಹ ಬ್ರಾಹ್ಮಣೋತ್ತಮರು ಅತಿಥಿವೇಷದಿಂದ ಪ್ರಾಪ್ತರಾಗುವರೆಂಬುದರಲ್ಲಿ ಸಂದೇಹವಿಲ್ಲವು.

೨೩. ಆದುದರಿಂದ ನೀನು ಓಡಾಟದಿಂದಲೂ, ದರ್ಶನದಿಂದಲೂ, ಭೋಜನದಿಂದಲೂ, ಸಹವಾಸದಿಂದಲೂ ನಮ್ಮೊಡನೆ ಸೇರಿ ನಮ್ಮ ಮನೆಗಳನ್ನು ಪಾವನಗೊಳಿಸು."

೨೪. ಅತಿಥಿಯು ಹೇಳುತ್ತಾನೆ:—"ಎಲೈ ಬ್ರಾಹ್ಮಣರಿರಾ! ಭೋಜನವೆಂಬುದು ಎರಡು ವಿಧವಾಗಿರುವುದು. ಆದುದರಿಂದ ಎರಡನೆಯದಾದ ಪರಮಭೋಜನವನ್ನು ನಿಮ್ಮಿಂದ ಇಚ್ಛಿಸುವೆನೇ ಹೊರತು ಪ್ರಾಕೃತವನ್ನಲ್ಲ."

ಇತ್ಯೇತದತಿಥೇಃ ಶ್ರುತ್ವಾ ಹಾರೀತಃ ಪುತ್ರಮಬ್ರವೀತ್ ।
ಅಷ್ಟವರ್ಷಂತು ಕಮಠಂ ವೇತ್ಸಿ ಪುತ್ರ ದ್ವಿಜೋದಿತಂ ॥ ೨೫ ॥

ಕಮಠ ಉವಾಚ :—

ತಾತ ಪ್ರಣಮ್ಯ ತ್ವಾಂ ವಕ್ಷ್ಯೇ ತಾದೃಕ್ಪರಮಭೋಜನಂ ।
ದ್ವಿಜಂ ಚ ತರ್ಪಯಿಷ್ಯಾಮಿ ದತ್ವಾತ್ವ ಪರಮಭೋಜನಂ ॥ ೨೬ ॥
ಸುತೇನ ಕಿಲ ಜಾತೇನ ಜಾಯತೇ ಚಾನೃಣಃ ಪಿತಾ ।
ಸತ್ಯಂ ಕರಿಷ್ಯೇ ತದ್ವಾಕ್ಯಂ ಸಂತರ್ಪ್ಯಾತಿಥಿಮುತ್ತಮಂ ॥ ॥ ೨೭ ॥
ಭೋಜನಂ ದ್ವಿಪ್ರಕಾರಂ ಚ ಪ್ರವಿಭಾಗಸ್ತಯೋರಯಂ ।
ಪ್ರಾಕೃತಂ ಪ್ರೋಚ್ಯತೇ ತ್ವೇವಮನ್ಯತ್ಪರಮಭೋಜನಂ ॥ ೨೮ ॥
ತತ್ರ ಯತ್ಪ್ರಾಕೃತಂ ನಾಮ ಪ್ರಕೃತಿಪ್ರಮುಖಸ್ಯ ತತ್ ।
ಚತುರ್ವಿಂಶತಿತತ್ತ್ವಾನಾಂ ಗಣಸ್ಯೋಕ್ತಂ ಹಿ ತರ್ಪಣಂ ॥ ೨೯ ॥
ಷಡ್ರಸಂ ಭೋಜನಂ ಯಚ್ಚ ಪಂಚಭೇದಂ ವದಂತಿ ಚ ।
ಯೇನ ಭುಕ್ತೇನ ತೃಪ್ತಂ ಸ್ಯಾಕ್ಷೇತ್ರಂ ಯದ್ದೇಹಲಕ್ಷಣಂ ॥ ೩೦ ॥

---

೨೫. ಇಂತೆಂದ ಅತಿಥಿಯ ಮಾತುಗಳನ್ನು ಕೇಳಿ ಹಾರೀತನು ಎಂಟು ವರ್ಷದ ವಟುವಾದ ಕಮಠನೆಂಬ ತನ್ನ ಮಗನನ್ನು ಕರೆದು, "ಈ ಬ್ರಾಹ್ಮಣನು ಹೇಳಿದುದು ನಿನಗೆ ತಿಳಿಯಿತೆ?" ಎಂದು ಕೇಳಿದನು.

೨೬. ಕಮಠನು ಹೇಳುತ್ತಾನೆ:—"ತಂದೆಯೆ! ನಿನಗೆ ನಮಸ್ಕರಿಸಿ ಹೇಳುವೆನು. ಪರಮ ಭೋಜನವೆಂತಹುದೆಂಬುದನ್ನು ನಾನು ಬಲ್ಲೆನು. ಅಂತಹ ಭೋಜನದಿಂದಲೇ ಈ ಬ್ರಾಹ್ಮಣೋತ್ತಮನನ್ನು ತೃಪ್ತಿಪಡಿಸುವೆನು.

೨೭. ಪುತ್ರನು ಹುಟ್ಟಿದುದರಿಂದ ತಂದೆಯು ಋಣವಿಮುಕ್ತನಾಗುವನೆಂದು ಜನರು ಹೇಳುವರಲ್ಲವೆ. ಇಂದು ಈ ಬ್ರಾಹ್ಮಣನನ್ನು ಸಂತೋಷಗೊಳಿಸಿ ಆ ವಾಕ್ಯವನ್ನು ಸತ್ಯವನ್ನಾಗಿ ಮಾಡುವೆನು.

೨೮. ಭೋಜನವೆಂಬುದು ಎರಡು ವಿಧವಾಗಿರುವುದು. ಮತ್ತು ಅವುಗಳಲ್ಲಿ ಈ ವಿಧವಾದ ಭೇದವಿರುವುದು. ಮೊದಲನೆಯದು ಲೌಕಿಕವಾದುದರಿಂದ ಪ್ರಾಕೃತವೆನಿಸುವುದು. ಎರಡನೆಯದೇ ಪರಮಭೋಜನವು.

೨೯. ಅವುಗಳಲ್ಲಿ ಪ್ರಕೃತಿಯೇ ಮೊದಲಾದ ಇಪ್ಪತ್ತು ನಾಲ್ಕು ತತ್ವಗಳ ಸಮೂಹದ ತೃಪ್ತಿಗೆ ಪ್ರಾಕೃತಭೋಜನವೆಂದು ಹೆಸರು.

೩೦. ಅದು ಷಡ್ರಸಯುಕ್ತವೆಂದೂ, ಪಂಚಭೇದವುಳ್ಳದ್ದೆಂದೂ ಹೇಳುವರು. ಆದರ ಭೋಜನದಿಂದ ಕ್ಷೇತ್ರವೆನ್ನಿಸಿಕೊಂಡಿರುವ ಈ ದೇಹವು ತೃಪ್ತಿಗೊಳ್ಳುವುದು.

ಯಥಾಪರಂ ಪರಂ ನಾಮ ಪ್ರೋಕ್ತಂ ಪರಮಭೋಜನಂ ।
ಪರಮಃ ಪ್ರೋಚ್ಯತೇ ಚಾತ್ಮಾ ತಸ್ಯ ತದ್ಭೋಜನಂ ಭವೇತ್ ॥ ೩೧ ॥
ತತೋ ನಾನಾಪ್ರಕಾರಸ್ಯ ಧರ್ಮಸ್ಯ ಶ್ರವಣಂ ಹಿ ಯತ್ ।
ತದನ್ನಂ ಪ್ರೋಚ್ಯತೇ ಭೋಕ್ತಾ ಕ್ಷೇತ್ರಜ್ಞಃ ಶ್ರವಣೌ ಮುಖಂ ॥ ೩೨ ॥
ತದ್ದಾಸ್ಯಾಮಿ ದ್ವಿಜಾಗ್ರ್ಯಾಯ ಪೃಚ್ಛ ವಿಪ್ರ ಯದಿಚ್ಛಸಿ ।
ಶಕ್ತಿತಸ್ತರ್ಪಯಿಷ್ಯಾಮಿ ತ್ವಾಮಹಂ ವಿಪ್ರಸಂಸದಿ ॥ ೩೩ ॥

ನಾರದ ಉವಾಚ:—

ಕಮಠಸ್ಯೈತದಾಕರ್ಣ್ಯ ಸೋಽತಿಥಿರ್ವಚನಂ ಮಹತ್ ।
ಮನಸ್ಯೇವ ಪ್ರಶಸ್ಯಾಮುಂ ಪ್ರಶ್ನಮೇನಮಥಾಕರೋತ್ ॥ ೩೪ ॥
ಕಥಂ ಸಂಜಾಯತೇ ಜಂತುಃ ಕಥಂ ಚಾಪಿ ಪ್ರಲೀಯತೇ ।
ಭಸ್ಮತಾಮಥ ಸಂಪ್ರಾಪ್ಯ ಕ್ವ ಚಾಯಂ ಪ್ರತಿಪದ್ಯತೇ ॥ ೩೫ ॥

ಕಮಠ ಉವಾಚ:—

ಗುರವೇ ಪ್ರಾಙ್ನಮಸ್ಕೃತ್ಯ ಧರ್ಮಾಯ ತದನಂತರಂ ।
ಛಂದೋಗೀತಮಮುಂ ಪ್ರಶ್ನಂ ಶಕ್ತ್ಯಾ ವಕ್ಷ್ಯಾಮಿ ತೇ ದ್ವಿಜ ॥ ೩೬ ॥

---

೩೧–೩೨. ಇದಕ್ಕಿಂತ ಉತ್ತಮವಾದುದು ಪರಮಭೋಜನವೆಂದು ಹೇಳಲ್ಪಟ್ಟಿರುವುದು. ಪರಮನೆಂದು ಆತ್ಮನಿಗೆ ಹೆಸರುಂಟು. ಅವನಿಗೆ ಭೋಜನವು ಇದೇ ಆಗಿರುವುದು. ಇದರಲ್ಲಿ ಅನೇಕ ವಿಧಗಳಾದ ಧರ್ಮಗಳನ್ನು ಕೇಳುವುದೇ ಅನ್ನವೆನಿಸುವುದು. ಊಟವನ್ನು ಮಾಡುವವನು ಕ್ಷೇತ್ರಜ್ಞನಾದ ಆತ್ಮನು. ಶ್ರವಣ (ಕಿವಿ)ಗಳೇ ಆತನ ಬಾಯಿಯು.

೩೩. ಆ ಭೋಜನವನ್ನು ಈ ಬ್ರಾಹ್ಮಣನಿಗೆ ಕೊಡುವೆನು. ಎಲೈ ವಿಪ್ರನೆ! ನಿನಗೆ ಇಷ್ಟವಾದುದನ್ನು ಕೇಳು. ಈ ಬ್ರಾಹ್ಮಣರ ಸನ್ನಿಧಿಯಲ್ಲಿ ಕುಳಿತು ನನ್ನ ಶಕ್ತಿಯಿದ್ದಮಟ್ಟಿಗೂ ನಿನಗೆ ಸಂತೋಷವನ್ನುಂಟುಮಾಡಲೆಳಸುವೆನು.''

೩೪. ನಾರದನು ಹೇಳುತ್ತಾನೆ:— ಕಮಠನಾಡಿದ ಈ ಮಾತುಗಳನ್ನು ಕೇಳಿ ಅತಿಥಿಯು ಮನಸ್ಸಿನಲ್ಲಿಯೇ ಆ ವಟುವನ್ನು ಶ್ಲಾಘಿಸುತ್ತ ಮುಂದೆ ಹೇಳುವ ಪ್ರಶ್ನೆಯನ್ನು ಕೇಳಿದನು.

೩೫. "ಜಂತುವು ಹೇಗೆ ಹುಟ್ಟುವನು? ಹೇಗೆ ಸಾಯುವನು? ಇಲ್ಲಿ ಶರೀರವು ಭಸ್ಮವಾಗಿ ನಶಿಸಲು ಅದರಲ್ಲಿ ನೆಲಸಿರುವ ಜೀವನು ಎಲ್ಲಿಗೆ ಹೋಗುವನು?''

೩೬. ಕಮಠನು ಹೇಳುತ್ತಾನೆ:—"ಮೊದಲು ಗುರುದೇವನಿಗೆ ನಮಸ್ಕರಿಸಿ ಬಳಿಕ ಸನಾತನಧರ್ಮಕ್ಕೆ ಮಣಿದು ವೇದಗಳಲ್ಲಿ ನಿರೂಪಿತವಾಗಿರುವ ಈ ವಿಷಯಗಳನ್ನು ಯಥಾಮತಿಯಾಗಿ ನಿನಗೆ ಹೇಳುವೆನು.

ಜನನೇ ತ್ರಿವಿಧಂ ಕರ್ಮ ಹೇತುರ್ಜಂತೋರ್ಭವೇತ್ಕಿಲ ।
ಪುಣ್ಯಂ ಪಾಪಂ ಚ ಮಿಶ್ರಂ ಚ ಸತ್ತ್ವರಾಜಸತಾಮಸಂ ॥ ೩೭ ॥
ತತ್ರ ಯಃ ಸಾತ್ತ್ವಿಕೋ ನಾಮ ಸ ಸ್ವರ್ಗಂ ಪ್ರತಿಪದ್ಯತೇ ।
ಸ್ವರ್ಗಾತ್ಕಾಲಪರಿಭ್ರಷ್ಟೋ ಧನೀ ಧರ್ಮೀ ಸುಖೀ ಭವೇತ್ ॥ ೩೮ ॥
ತಥಾಯಸ್ತಾಮಸೋ ನಾಮ ನರಕಂ ಪ್ರತಿಪದ್ಯತೇ ।
ಭುಕ್ತ್ವಾ ಬಹ್ವೀರ್ಯಾತನಾಶ್ಚ ಸ್ಥಾವರತ್ವಂ ಪ್ರಪದ್ಯತೇ ॥ ೩೯ ॥
ಮಹತಾಂ ದರ್ಶನಸ್ಪರ್ಶೈರುಪಭೋಗಸಹಾಸನೈಃ ।
ಮಹತಾ ಕಾಲಯೋಗೇನ ಸಂಸರನ್ಮಾನವೋ ಭವೇತ್ ॥ ೪೦ ॥
ಸೋಽಪಿ ದುಃಖದರಿದ್ರಾದ್ಯೈರ್ವೇಷ್ಟಿತೋ ವಿಕಲೇಂದ್ರಿಯಃ ।
ಪ್ರತ್ಯಕ್ಷತಃ ಸರ್ವಲೋಕಾನಾಂ ಪಾಪಸ್ಯೈತದ್ಧಿ ಲಕ್ಷಣಂ ॥ ೪೧ ॥
ಅಥ ಯೋ ಮಿಶ್ರಕರ್ಮಾ ಸ್ಯಾತ್ತಿರ್ಯಕ್ತ್ವಂ ಪ್ರತಿಪದ್ಯತೇ ।
ಮಹತಾಮೇವ ಸಂಸರ್ಗಾತ್ಸಂಸ್ಮರನ್ಮಾನವೋ ಭವೇತ್ ॥ ೪೨ ॥

---

೩೭. ಪ್ರಾಣಿಯು ಇಲ್ಲಿ ಜನ್ಮವನ್ನು ಪಡೆಯಲು ಮೂರು ವಿಧಗಳಾದ ಕರ್ಮಗಳು ಕಾರಣವಾಗುವುವಷ್ಟೆ. ಅವುಗಳಿಗೆ ಪುಣ್ಯ, ಪಾಪ, ಮಿಶ್ರಗಳೆಂದೂ ಸಾತ್ತ್ವಿಕ, ರಾಜಸ, ತಾಮಸಗಳೆಂದೂ ಹೆಸರು.

೩೮. ಪುಣ್ಯಗಳನ್ನು ಮಾಡಿದ ಸಾತ್ತ್ವಿಕ ಜೀವನು ತನ್ನ ಕರ್ಮಗಳ ಫಲವಾಗಿ ಸ್ವರ್ಗವನ್ನು ಪಡೆಯುವನು. ಕಾಲಾನಂತರದಲ್ಲಿ ಸ್ವರ್ಗದಿಂದ ಭ್ರಷ್ಟನಾಗಿ ಈ ಲೋಕದಲ್ಲಿ ಧನವಂತನಾಗಿಯೂ, ಧರ್ಮಭೀರುವಾಗಿಯೂ ಸುಖಿಯಾಗಿಯೂ ಹುಟ್ಟುವನು.

೩೯. ಹಾಗೆಯೇ ಪಾಪಕರ್ಮಗಳನ್ನು ಮಾಡಿದ ತಾಮಸ ಜೀವನು ನರಕದಲ್ಲಿ ಅನೇಕ ಯಾತನೆಗಳನ್ನನುಭವಿಸಿ ತನ್ನ ಕರ್ಮದ ಫಲರೂಪವಾಗಿ ಈ ಲೋಕದಲ್ಲಿ ಸ್ಥಾವರ ಜನ್ಮವನ್ನು ಪಡೆಯುವನು.

೪೦. ಮಹಾತ್ಮರ ದರ್ಶನ, ಸ್ಪರ್ಶ, ಸೇವೆ, ಸಹವಾಸ ಮುಂತಾದುವುಗಳಿಂದ ಬಹಳ ಕಾಲವು ಕಳೆಯಲು ಉತ್ತಮೋತ್ತಮ ಜನ್ಮಗಳನ್ನು ಪಡೆಯುತ್ತ ಕಡೆಗೆ ಮನುಷ್ಯನಾಗಿ ಹುಟ್ಟುವನು.

೪೧. ಅಲ್ಲಿಯೂ ಕೂಡ ದುಃಖ, ದಾರಿದ್ರ್ಯ, ಮುಂತಾದುವುಗಳನ್ನು ಸಹಿಸಿಕೊಳ್ಳುತ್ತ ಶರೀರೇಂದ್ರಿಯಗಳ ವೈಕಲ್ಯವನ್ನು ಹೊಂದಿ ಸಕಲ ಜನರಿಗೂ ಕಾಣುತ್ತಿರುವನು. ಇದೇ ಪಾಪಕರ್ಮದ ಲಕ್ಷಣವು.

೪೨. ಇನ್ನು ಮೂರನೆಯವನಾದ ಮಿಶ್ರಕರ್ಮವನ್ನು ಮಾಡಿದವನು ತಿರ್ಯಗ್ಯೋನಿಗಳಲ್ಲಿ ಜನಿಸುವನು. ಅವನೂ ಮಹಾತ್ಮರ ಸಹವಾಸದಿಂದ ಕಾಲಕ್ರಮದಲ್ಲಿ ಮಾನವನಾಗುವನು.

ಯಸ್ಯ ಪುಣ್ಯಂ ಪೃಥುತರಂ ಪಾಪಮಲ್ಪಂ ಹಿ ಜಾಯತೇ ।
ಸ ಪೂರ್ವಂ ದುಃಖಿತೋ ಭೂತ್ವಾ ಪಶ್ಚಾತ್ಸೌಖ್ಯಾನ್ವಿತೋ ಭವೇತ್ ॥೪೩॥
ಪಾಪಂ ಪೃಥುತರಂ ಯಸ್ಯ ಪುಣ್ಯಮಲ್ಪತರಂ ಭವೇತ್ ।
ಪೂರ್ವಂ ಸುಖೀ ತತೋ ದುಃಖೀ ಮಿಶ್ರಸ್ಯೈತದ್ಧಿ ಲಕ್ಷಣಂ ॥ ೪೪ ॥
ತತ್ರ ಮಾನುಷಸಂಭೂತಿಂ ಶೃಣು ಯಾದೃಗಸೌ ಭವೇತ್ ।
ಪುರುಷಸ್ಯ ಸ್ತ್ರಿಯಾಶ್ಚೈವ ಶುಕ್ರಶೋಣಿತಸಂಗಮೇ ॥ ೪೫ ॥
ಸರ್ವದೋಷವಿನಿರ್ಮುಕ್ತೋ ಜೀವಃ ಸಂಸರತೇ ಸ್ಫುಟಂ ।
ಗುಣಾನ್ವಿತಮನೋಬುದ್ಧಿ ಶುಭಾಶುಭ ಸಮನ್ವಿತಃ ॥ ೪೬ ॥
ಜೀವಃ ಪ್ರವಿಷ್ಟೋ ಗರ್ಭಂ ತು ಕಲಲೇ ಪ್ರತಿತಿಷ್ಠತಿ ।
ಮೂಢಶ್ಚ ಕಲಲೇ ತತ್ರ ಮಾಸಮಾತ್ರಂ ಚ ತಿಷ್ಠತಿ ॥ ೪೭ ॥
ದ್ವಿತೀಯಂ ತು ತಥಾ ಮಾಸಂ ಘನೀಭೂತಃ ಸತಿಷ್ಠತಿ ।
ತಸ್ಯಾವಯವನಿರ್ಮಾಣಂ ತೃತೀಯೇ ಮಾಸಿ ಜಾಯತೇ ॥ ೪೮ ॥

---

೪೩. ಯಾವನ ಪುಣ್ಯವು ಅಧಿಕವಾಗಿ ಸ್ವಲ್ಪವಾದ ಪಾಪಫಲವು ಅನುಭವಿಸತಕ್ಕದ್ದಿರುವುದೊ, ಅವನು ಮೊದಲು ದುಃಖವನ್ನನುಭವಿಸಿ ಬಳಿಕ ಸೌಖ್ಯವನ್ನು ಪಡೆಯುವನು.

೪೪. ಆದರೆ ಯಾವನ ಪಾಪಸಂಚಯವು ಅಧಿಕವಾಗಿ ಪುಣ್ಯವು ಸ್ವಲ್ಪವಾಗಿರುವುದೊ, ಅವನ ಪುಣ್ಯವು ಮೊದಲು ಅನುಭವಿಸಲ್ಪಟ್ಟು ಜೀವಿತಾಂತ್ಯದಲ್ಲಿ ಪಾಪಗಳ ಫಲವಾದ ದುಃಖವನ್ನನುಭವಿಸುವನು. ಇದೇ ಮಿಶ್ರಕರ್ಮಗಳ ಫಲದ ಲಕ್ಷಣವು.

೪೫. ಇನ್ನು ಪತಿಪತ್ನಿಯರ ಶುಕ್ರಶೋಣಿತಗಳ ಸಂಯೋಗದಿಂದುಂಟಾಗುವ ಮಾನುಷಜನ್ಮವೆಂಬುದು ಎಂತಹುದೆಂದೂ ಹೇಗೆ ಉಂಟಾಗುವುದೆಂದೂ ಹೇಳುವೆನು, ಕೇಳು.

೪೬. ಜೀವನು ತತ್ತ್ವತಃ ಸಕಲ ದೋಷವರ್ಜಿತನಾಗಿ ಬ್ರಹ್ಮಸ್ವರೂಪವೇ ಆಗಿದ್ದರೂ, ತ್ರಿಗುಣಾತ್ಮಕಗಳಾದ ಮನಸ್ಸು, ಬುದ್ಧಿ, ಪುಣ್ಯಪಾಪಗಳು ಮುಂತಾದುವುಗಳಲ್ಲಿಟ್ಟ ಅಭಿಮಾನದ ಫಲವಾಗಿ ಸಂಸಾರದಲ್ಲಿ ಬಳಲುತ್ತಿರುವನು.

೪೭–೪೮. ಜೀವನು ತಾಯಿಯ ಗರ್ಭವನ್ನು ಸೇರಿ ಕಲಲವಾಗಿ ನೆಲಸಿರುವನು. ಮತ್ತು ಒಂದು ತಿಂಗಳ ಕಾಲ ಅಲ್ಲಿ ಜನ್ಮಾಂತರಗಳ ವಾಸನೆಯಿಲ್ಲದೆ ಮೂಢನಾಗಿರುವನು. ಎರಡನೆಯ ಮಾಸದಲ್ಲಿ ಗರ್ಭವು ಪಿಂಡವಾಗಿ ನಿಲ್ಲುವುದು. ಗಟ್ಟಿಯಾದ ಈ ಪಿಂಡದಿಂದ ಮೂರನೆಯ ಮಾಸದಲ್ಲಿ ಕೈಕಾಲುಗಳು ಮತ್ತು ತಲೆಯೆಂಬ ಅವಯವಗಳು ಕಾಣಿಸಿಕೊಳ್ಳುವುವು.

ಅಸ್ಥೀನಿ ಚ ತಥಾ ಮಾಸಿ ಜಾಯಂತೇ ಚ ಚತುರ್ಥಕೇ ।
ತ್ವಗ್ಜನ್ಮ ಪಂಚಮೇ ಮಾಸಿ ಷಷ್ಠೇ ರೊಮ್ಣಾಂ ಸಮುದ್ಭವಃ ॥ ೪೯ ॥
ಸಪ್ತಮೇ ಚ ತಥಾ ಮಾಸಿ ಪ್ರಬೋಧಶ್ಚಾಸ್ಯಜಾಯತೇ ।
ಮಾತುರಾಹಾರಪೀತಂ ಚ ಸಪ್ತಮೇ ಮಾಸ್ಯುಪಾಶ್ನುತೇ ॥ ೫೦ ॥
ಅಷ್ಟಮೇ ನವಮೇ ಮಾಸಿ ಭೃಶಮುದ್ವಿಜತೇ ತತಃ ।
ಜರಾಯುಣಾ ವೇಷ್ಟಿತಾಂಗೋ ಮುಖೇ ಬದ್ಧಕರಾಂಗುಲಿಃ ॥ ೫೧ ॥
ಮಧ್ಯೇ ಕ್ಲೀಬಸ್ತು ವಾಮೇ ಸ್ತ್ರೀ ದಕ್ಷಿಣೇ ಪುರುಷಸ್ತಥಾ ।
ತಿಷ್ಠತ್ಯುದರಭಾಗೇ ಚ ಪೃಷ್ಠೇರಗ್ನಿಮುಖಃ ಕಿಲ ॥ ೫೨ ॥
ಯಸ್ಯಾಂ ತಿಷ್ಠತ್ಯಸೌ ಯೋನೌ ತಾಂ ಚ ವೇತ್ತಿ ನ ಸಂಶಯಃ ।
ಸರ್ವಂ ಸ್ಮರತಿ ವೃತ್ತಾಂತಂ ಬಹೂನಾಂ ಜನ್ಮನಾಮಪಿ ॥ ೫೩ ॥
ಅಂಧೇ ತಮಸಿ ಕಿಂ ದೃಶ್ಯೋ ಗಂಧಾನ್ಮೋಹಂ ದೃಢಂ ಲಭೇತ್ ।
ಶೀತೇ ಮಾತ್ರಾ ಜಲೇ ಪೀತೇ ಶೀತಮುಷ್ಣಂ ತಥೋಷ್ಣಕೇ ॥ ೫೪ ॥

---

೪೯. ಹಾಗೆಯೇ ನಾಲ್ಕನೆಯ ತಿಂಗಳಲ್ಲಿ ಮೂಳೆಗಳುಂಟಾಗುವುವು. ಐದನೆಯ ತಿಂಗಳಲ್ಲಿ ಚರ್ಮದ ಹೊದಿಕೆಯೂ ಉಂಟಾಗುವುದು. ಆರನೆಯ ಮಾಸದಲ್ಲಿ ತಲೆಗೂದಲುಗಳು ಬೆಳೆಯುವುವು.

೫೦. ಇಂತು ಅವಯವನಿಷ್ಪತ್ತಿಯಾದಮೇಲೆ ಏಳನೆಯ ತಿಂಗಳಲ್ಲಿ ಜೀವನಿಗೆ ಜ್ಞಾನೋದಯವುಂಟಾಗುವುದು. ತಾಯಿಯ ಅನ್ನಪಾನಾದಿಗಳನ್ನೇ ಆಗ ಗರ್ಭದಲ್ಲಿರುವ ಶಿಶುವೂ ಸೇವಿಸಲು ಮೊದಲುಮಾಡುವುದು.

೫೧. ಎಂಟು ಮತ್ತು ಒಂಬತ್ತನೆಯ ತಿಂಗಳುಗಳಲ್ಲಿ ಗರ್ಭದಲ್ಲಿರುವ ಜರಾಯುವಿನಿಂದ ಸುತ್ತಲ್ಪಟ್ಟು, ಮುಖವನ್ನು ಕೈಬೆರಳುಗಳಿಂದ ಮುಚ್ಚಿ ಕೊಂಡು ಅತಿಶಯವಾದ ಸಂಕಟವನ್ನು ಪಡೆಯುವುದು.

೫೨. ತಾಯಿಯ ಹೊಟ್ಟೆಯಲ್ಲಿ ಗರ್ಭವು ಮಧ್ಯದಲ್ಲಿದ್ದರೆ ಕ್ಲೀಬವೆಂದೂ, ಎಡಪಕ್ಕದಲ್ಲಿದ್ದರೆ ಸ್ತ್ರೀಶಿಶುವೆಂದೂ, ಬಲಪಕ್ಕದಲ್ಲಿದ್ದರೆ ಪುರುಷಶಿಶುವೆಂದೂ ತಿಳಿಯಬೇಕು. ಇಂತು ಶಿಶುವು ತಾಯಿಯಗರ್ಭದಲ್ಲಿ ಬೆನ್ನಿನ ಕಡೆಗೆ ತನ್ನ ಮುಖವನ್ನು ಮಾಡಿಕೊಂಡು ತಾಯಿಯ ಜಠರಾಗ್ನಿಗೆ ಅಭಿಮುಖವಾಗಿರುವುದು.

೫೩–೫೪. ತಾನು ಯಾರ ಹೊಟ್ಟೆಯಲ್ಲಿರುವನೆಂಬುದನ್ನೂ ಮಗುವು ತಿಳಿದು ಕೊಳ್ಳುವನೆಂಬುದರಲ್ಲಿ ಸಂಶಯವಿಲ್ಲ. ಅಲ್ಲದೆ ತನ್ನ ಅನೇಕ ಹಿಂದಿನ ಜನ್ಮಗಳ ವೃತ್ತಾಂತವನ್ನೆಲ್ಲ ಅವನು ಸ್ಮರಿಸಿಕೊಳ್ಳುವನು. ಗರ್ಭಕೋಶದೊಳಗಿನ ಅಂಧ ಕಾರದಲ್ಲಿ ಏನೂ ಕಾಣಲಾರದೆ ವಾಸನಾ ಬಲದಿಂದಲೇ ಶಿಶು ದೇಹದಲ್ಲಿ ದೃಢ ವಾದ ಅಭಿಮಾನವನ್ನು ಹೊಂದುವನು. ತಾಯಿಯು ತಣ್ಣೀರನ್ನು ಕುಡಿಯಲು ಶೀತವನ್ನೂ ಬಿಸಿನೀರನ್ನು ಕುಡಿಯಲು ಉಷ್ಣವನ್ನೂ ಅನುಭವಿಸುವನು.

ವ್ಯಾಯಾಮೇ ಲಭತೇ ಮಾತುಃ ಕ್ಲೇಶಂ ವ್ಯಾಧೇಶ್ಚ ವೇದನಾಂ ।
ಅಲಕ್ಷ್ಯಾಃ ಪಿತೃಮಾತೃಭ್ಯಾಂ ಜಾಯಂತೇ ವ್ಯಾಧಯಃ ಪರಾಃ ॥ ೫೫ ॥
ಸೌಕುಮಾರ್ಯಾದ್ರುಜಂ ತೀವ್ರಾಂ ಜನಯಂತಿ ಚ ತಸ್ಯತೇ ।
ಸ್ವಲ್ಪಮಪ್ಯಥ ತಂ ಕಾಲಂ ವೇತ್ತಿ ವರ್ಷಶತೋಪಮಂ ॥ ೫೬ ॥
ಸಂತಪ್ಯತೇ ಭೃಶಂ ಗರ್ಭೇ ಕರ್ಮಭಿಶ್ಚ ಪುರಾತನೈಃ ।
ಮನೋರಥಾಂಶ್ಚ ಕುರುತೇ ಸುಕೃತಾರ್ಥಂ ಪುನಃ ಪುನಃ ॥ ೫೭ ॥
ಜನ್ಮ ಚೇದಹಮಾಪ್ಸ್ಯಾಮಿ ಮಾನುಷ್ಯೇ ಜೀವಿತಂ ತಥಾ ।
ತತಸ್ತತ್ಕರಿಷ್ಯಾಮಿ ಯೇನ ಮೋಕ್ಷೋ ಭವೇತ್ಸ್ಫುಟಂ ॥ ೫೮ ॥
ಏವಂ ತು ಚಿಂತಯಾನಸ್ಯ ಸೀಮಂತೋನ್ನಯನಾದನು ।
ಮಾಸದ್ವಯಂ ತದ್ವ್ರಜತಿ ಪೀಡಿತಸ್ತ್ರಿಯುಗಾಕೃತಿ ॥ ೫೯ ॥
ತತಃ ಸ್ವಕಾಲೇ ಸಂಪೂರ್ಣೇ ಸೂತಿಮಾರುತಚಾಲಿತಃ ।
ಭವತ್ಯವಾಙ್ಮುಖೋ ಜಂತುಃ ಪೀಡಾಮನುಭವನ್ಪರಾಂ ॥ ೬೦ ॥

---

೫೫. ತಾಯಿಯು ವ್ಯಾಯಾಮವನ್ನು ಮಾಡಲು ಶಿಶುವೂ ಕಷ್ಟಪಡುವುದು. ತಾಯಿಯ ರೋಗಗಳು ಮಗುವನ್ನೂ ಹವಗೆಡಿಸುವುವು. ಇವುಗಳಲ್ಲದೆ ತಂದೆತಾಯಿಗಳಿಗೆ ತಿಳಿಯದೆಯೇ ಇತರ ಅನೇಕ ವ್ಯಾಧಿಗಳೂ ಉಂಟಾಗುವುವು.

೫೬. ಶಿಶುವಿನ ಮೃದುವಾದ ದೇಹದಲ್ಲಿ ಆ ರೋಗಗಳು ಮಹತ್ತರವಾದ ಸಂಕಟವನ್ನುಂಟುಮಾಡುವುವು. ಆಗ ಕ್ಷಣಕಾಲವನ್ನೂ ನೂರುವರ್ಷಗಳನ್ನಾಗಿ ತಿಳಿದು ಕಷ್ಟದಿಂದ ಕಳೆಯುವನು.

೫೭. ತನ್ನನ್ನು ಈ ಗರ್ಭವಾಸದ ದುಃಖಕ್ಕೆ ತಂದು ಬಿಟ್ಟ ಪೂರ್ವ ಕರ್ಮಗಳಿಗಾಗಿ ಬಹಳ ಸಂತಾಪಗೊಂಡು ಮತ್ತೆ ಮತ್ತೆ ಪುಣ್ಯಕರ್ಮಗಳನ್ನೇ ಮಾಡಬೇಕೆಂಬ ಸಂಕಲ್ಪವನ್ನು ಮಾಡುವನು.

೫೮. 'ಈ ಸಲ ಜನ್ಮವನ್ನು ಹೊಂದಿ ಅದರಲ್ಲಿಯೂ ಮಾನವನಾಗಿ ಹುಟ್ಟಿದರೆ, ಆಗ ಮೋಕ್ಷವೇ ಸ್ಫುಟಫಲವಾಗಿರುವ ಉತ್ತಮ ಸತ್ಕಾರ್ಯವನ್ನೇ ಮಾಡುತ್ತೇನೆ.'

೫೯. ಇಂತು ಚಿಂತಿಸುತ್ತಿರುವ ಗರ್ಭಸ್ಥ ಜೀವನಿಗೆ ಸೀಮಂತ, ಉನ್ನಯನ ಸಂಸ್ಕಾರಗಳಾದ ಮೇಲೆ ಎರಡು ತಿಂಗಳೂ ಪಿಂಡಗಳ ದೆಸೆಯಿಂದ ಮೂರು ಯುಗಗಳಂತೆ ಕಷ್ಟದಿಂದ ಕಳೆಯುವುವು.

೬೦. ಬಳಿಕ ಗರ್ಭವಾಸದ ಕಾಲವು ಮುಗಿದೊಡನೆಯೆ ಪ್ರಸೂತಿವಾಯುವಿನಿಂದ ತಳ್ಳಲ್ಪಟ್ಟು ಶಿಶುವು ತಲೆಕೆಳಗಾಗಿ ತಿರುಗಿ ಅಪರಿಮಿತವಾದ ಸಂಕಟವನ್ನನುಭವಿಸುವುದು.

**ಅಧೋಮುಖಃ ಸಂಕಟೇನ ಯೋನಿದ್ವಾರೇಣ ಸಃ ಸರೇತ್ ।**
**ಪೀಡಯಾ ಪೀಡ್ಯಮಾನೋಽಪಿ ಚರ್ಮೋತ್ಕರ್ತನತುಲ್ಯಯಾ ॥ ೬೧ ॥**
**ಕರಪತ್ರಸಮುಸ್ಪರ್ಶಂ ಕರಸಂಸ್ಪರ್ಶನಾದಿಕಂ ।**
**ಅಸೌ ಜಾತೋ ವಿಜಾನಾತಿ ಮಾಸಮಾತ್ರಂ ವಿಮೋಹಿತಃ ॥ ೬೨ ॥**
**ಪ್ರಾಕ್ಕರ್ಮವಶಗಸ್ಯಾಸ್ಯ ಗರ್ಭಜ್ಞಾನಂ ಚ ನಶ್ಯತಿ**
**ತತಃ ಕರೋತಿ ಕರ್ಮಾಣಿ ಶ್ವೇತರಕ್ತಾಸಿತಾನಿಚ ॥ ೬೩ ॥**
**ಅಸ್ಥಿಪಟ್ಟಿತುಲಾಸ್ತಂಭಸ್ನಾಯುಬಂಧೇನ ಯಂತ್ರಿತಂ ।**
**ರಕ್ತಮಾಂಸಮೃದಾಲಿಪ್ತಂ ವಿಣ್ಮೂತ್ರದ್ರವ್ಯಭಾಜನಂ ॥ ೬೪ ॥**
**ಸಪ್ತಭಿತ್ತಿಸು ಸಂಬದ್ಧಂ ಛನ್ನಂ ರೋಮತೃಣೈರಪಿ ।**
**ವದನೈಕ ಮಹಾದ್ವಾರಂ ಗವಾಕ್ಷಾಷ್ಟವಿಭೂಷಿತಂ ॥ ೬೫ ॥**
**ಓಷ್ಠದ್ವಯಕಪಾಟಂ ಚ ದಂತಾರ್ಗಲವಿಮುದ್ರಿತಂ ।**
**ನಾಡೀಸ್ವೇದಪ್ರವಾಹಂ ಚ ಕಫಪಿತ್ತಪರಿಪ್ಲುತಂ ॥ ೬೬ ॥**

---

೬೧. ಅಧೋಮುಖನಾಗಿಯೇ ಸಂಕಟಪಡುತ್ತ, ಚರ್ಮದ ಸುಲಿತಕ್ಕೆ ಸಮಾನವಾದ ದುಃಖದಿಂದ ಪೀಡಿತನಾಗಿ ತಾಯಿಯ ಯೋನಿದ್ವಾರದಿಂದ ಅವನು ಹೊರಬೀಳುವನು.

೬೨. ಹುಟ್ಟಿದ ಮೇಲೆ ಮೋಹಗೊಂಡು ಒಂದು ತಿಂಗಳು ಕಾಲ ಯಾರ ಕರಸ್ಪರ್ಶವಾದರೂ ಮಗುವಿಗೆ ಗರಗಸದಿಂದ ಕೊಯ್ಯುತ್ತಿರುವಂತೆ ಸಂಕಟ ವಾಗುವುದು.

೬೩. ಆಗ ಪೂರ್ವಕರ್ಮವಶದಿಂದ ಗರ್ಭದೆಸೆಯಲ್ಲಿದ್ದ ಪೂರ್ವಜನ್ಮ ಜ್ಞಾನವೂ ನಾಶವಾಗುವುದು. ಆಗ ಜೀವನು ಪುನಃ ಎಂದಿನಂತೆಯೇ ಸಾತ್ತ್ವಿಕ, ರಾಜಸ, ತಾಮಸ ಕರ್ಮಗಳನ್ನು ಮಾಡುತ್ತಿರುವನು.

೬೪–೬೮. ಅಸ್ಥಿಪಂಜರವೆಂಬ ದೊಡ್ಡ ತೊಲೆಗಳಿಂದಲೂ, ನರಗಳೆಂಬ ಹಗ್ಗಗಳ ಬಿಗಿತದಿಂದಲೂ, ರಕ್ತಮಾಂಸಗಳೆಂಬ ಮಣ್ಣಿನ ಲೇಪದಿಂದಲೂ, ಮೂತ್ರ ಪುರೀಷಾದಿ ಪದಾರ್ಥಗಳ ಶೇಖರಣೆಯಿಂದಲೂ, ಸಪ್ತಧಾತುಗಳೆಂಬ ಗೋಡೆಗಳ ಭದ್ರತೆಯಿಂದಲೂ, ರೋಮಗಳೆಂಬ ಹುಲ್ಲಿನ ಹೊದಿಕೆಯಿಂದಲೂ, ಬಾಯಿಯೆಂಬ ಹೆಬ್ಬಾಗಿಲಿನಿಂದಲೂ, ಕಿವಿಗಳು, ಕಣ್ಣುಗಳು, ನಾಸಿಕೆಗಳು, ಪಾಯೂಪಸ್ಥೆಗಳೆಂಬ ಎಂಟು ಗವಾಕ್ಷಗಳಿಂದಲೂ, ತುಟಿಗಳೆಂಬ ಎರಡು ಕದಗಳಿಂದಲೂ, ಹಲ್ಲುಗಳೆಂಬ ಅಗುಳಿಗಳಿಂದಲೂ, ಚಿಹ್ನಿತವಾದ ಶರೀರವೆಂಬ ಈ ಮನೆಯು ನಾಡಿಗಳಲ್ಲಿರುವ ಸ್ವೇದದ ಪ್ರವಾಹ, ಕಫಪಿತ್ತಗಳ ಮಹಾವೃದ್ಧಿ, ಜರಾ ಶೋಕಗಳ ಸಮಾವೇಶ, ಸರ್ವಭಕ್ಷಕನಾದ ಕಾಲನ ವಕ್ತ್ರಾನಲದಲ್ಲಿನ ಸ್ಥಿತಿ, ರಾಗದ್ವೇಷಾದಿಗಳಿಂದ ಧ್ವಂಸ, ಕಾಮಕ್ರೋಧಾದಿ ಅರಿಷಡ್ವರ್ಗಗಳೆಂಬ

**ಜರಾಶೋಕಸಮಾವಿಷ್ಟಂ ಕಾಲವಕ್ತ್ರಾನಲಸ್ಥಿತಂ ।**
**ರಾಗದ್ವೇಷಾದಿಭಿರ್ಧ್ವಸ್ತಂ ಷಟ್ಕೋಶಿಕಸಮುದ್ಭವಂ ॥ ೬೭ ॥**
**ಏವಂ ಸಂಜಾಯತೇ ಪುಂಸೋ ದೇಹಗೇಹಮಿದಂ ದ್ವಿಜ ।**
**ಯಸ್ಮಿನ್ನಸತಿ ಕ್ಷೇತ್ರಜ್ಞೋ ಗೃಹಸ್ಥೋ ಬುದ್ಧಿಗೇಹಿನೀ ॥ ೬೮ ॥**
**ಮೋಕ್ಷಂ ಸ್ವರ್ಗಂ ಚ ನರಕಮಾಸ್ತೇ ಸಂಸಾಧಯನ್ನಪಿ ॥ ೬೯ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ**
**ಪ್ರಥಮೇ ಮಾಹೇಶ್ವರಖಂಡೇ ಕೌಮಾರಿಕಾಖಂಡೇ**
**"ಕಮಠ ಸೂರ್ಯ ಸಂವಾದೇ ಜೀವಸ್ಯ ದೇಹೋತ್ಪತ್ತಿವರ್ಣನಂ"**
**ನಾಮ ಏಕೋನಪಂಚಾಶತ್ತಮೋಽಧ್ಯಾಯಃ**

---

ಗೂಗೆಗಳ ನಿವಾಸ ಇವೇ ಮುಂತಾದ ಅನೇಕ ಕಷ್ಟಪರಂಪರೆಗಳಿಂದ ಕೂಡಿರುವುದು. ಅಯ್ಯಾ, ಬ್ರಾಹ್ಮಣೋತ್ತಮನೆ! ಈ ಮನೆಯಲ್ಲಿ ಜೀವನೆಂಬ ಗೃಹಸ್ಥನು ಬುದ್ಧಿಯೆಂಬ ತನ್ನ ಗೃಹಿಣಿಯೊಡನೆ ಸಂಸಾರವನ್ನು ಮಾಡುತ್ತಿರುವನು.

೬೯. ಇಂತು ಮೋಕ್ಷ, ಸ್ವರ್ಗ ಮತ್ತು ನರಕಗಳನ್ನು ಜೀವನು ಸಾಧಿಸಿಕೊಳ್ಳುತ್ತ ಶರೀರದಲ್ಲಿ ಅಭಿಮಾನವನ್ನಿಡುವನು."

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಎರಡನೆಯ ಕೌಮಾರಿಕಾಖಂಡದಲ್ಲಿ
"ಕಮಠ ಸೂರ್ಯ ಸಂವಾದ – ಜೀವನ ದೇಹೋತ್ಪತ್ತಿವರ್ಣನ"ವೆಂಬ
ನಲವತ್ತೊಂಬತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಪಂಚಾಶತ್ತಮೋಽಧ್ಯಾಯಃ

### ಆದಿತ್ಯ ಕಮಠ ಸಂವಾದೇ ಜೀವಸ್ಯ ಪಾರಲೌಕಿಕಗತ್ಯಾದಿವರ್ಣನಂ

**ಅತಿಥಿರುವಾಚ :—**

**ಸಾಧ್ವಬಾಲಮತೇ ಬಾಲ ಕಮಠೈತತ್ತ್ವಯೋಚ್ಯತೇ ।**
**ಶರೀರಲಕ್ಷಣಂ ಶ್ರೋತುಂ ಪುನರಿಚ್ಛಾಮಿ ತದ್ವದ ॥ ೧ ॥**

**ಕಮಠ ಉವಾಚ :—**

**ಯಥೈತದ್ವೇದ ಬ್ರಹ್ಮಾಂಡಂ ಶರೀರಂ ಚ ತಥಾ ಶೃಣು ।**
**ಪಾದಮೂಲಂ ಚ ಪಾತಾಲಂ ಪ್ರಪದಂ ಚ ರಸಾತಲಂ ॥ ೨ ॥**
**ತಲಾತಲಂ ತಥಾ ಗುಲ್ಫೌ ಜಂಘೇ ಚಾಸ್ಯ ಮಹಾತಲಂ ।**
**ಜಾನುನೀ ಸುತಲಂ ಚೋರೂ ವಿತಲಂ ಚಾತಲಂ ಕಟೀ ॥ ೩ ॥**
**ನಾಭಿಂ ಮಹೀತಲಂ ಪ್ರಾಹುರ್ಭುವರ್ಲೋಕಮಥೋದರಂ ।**
**ಉರಃಸ್ಥಲಂ ಚ ಸ್ವರ್ಲೋಕಂ ಮಹರ್ಗ್ರೀವಾ ಮುಖಂ ಜನಂ ॥ ೪ ॥**
**ನೇತ್ರೇ ತಪಃ ಸತ್ಯಲೋಕಂ ಶೀರ್ಷದೇಶಂ ವದಂತಿ ಚ ।**
**ತದ್ಯಥಾ ಸಪ್ತದ್ವೀಪಾನಿ ಪೃಥಿವ್ಯಾಂ ಸಂಸ್ಥಿತಾನಿ ಚ ॥ ೫ ॥**

---

### ಕನ್ನಡದ ಅನುವಾದ

#### ಆದಿತ್ಯ ಕಮಠ ಸಂವಾದ — ಜೀವನ ಪಾರಲೌಕಿಕಗತ್ಯಾದಿ ವರ್ಣನ

೧. ಅತಿಥಿಯು ಹೇಳುತ್ತಾನೆ :—'' ಎಲೈ ಕಮಠನೆ! ನೀನು ವಯಸ್ಸಿನಲ್ಲಿ ಬಾಲನಾದರೂ ಬುದ್ಧಿಯಲ್ಲಿ ಮಾತ್ರ ಮಹಾಪ್ರಾಜ್ಞನಾಗಿರುವೆ. ನಿನ್ನಿಂದ ಶರೀರದ ಲಕ್ಷಣವನ್ನು ಕೇಳಲಿಚ್ಛಿಸುವೆನು. ಅದನ್ನು ಹೇಳುವವನಾಗು.''

೨. ಕಮಠನು ಹೇಳುತ್ತಾನೆ :—''ಜ್ಞಾನಿಗಳು ಶರೀರವನ್ನು ಬ್ರಹ್ಮಾಂಡಕ್ಕೆ ಹೋಲಿಸಿರುವರು. ಅದನ್ನು ವಿವರಿಸುವೆನು, ಕೇಳು. ಪಾತಾಲವು ಪಾದಗಳು. ರಸಾತಲಲೋಕವು ಮುಂಗಾಲುಗಳು.

೩. ತಲಾತಲವು ಗುಲ್ಫವು (ಮೇಗಾಲು). ಮಹಾತಲವು ಕೆಳಗಾಲುಗಳು. ಸುತಲಲೋಕವೇ ಮೊಣಕಾಲುಗಳು. ವಿತಲವೇ ತೊಡೆಗಳು, ಅತಲವು ನಡುವು.

೪. ಭೂಲೋಕವು ನಾಭಿಯು, ಭುವರ್ಲೋಕವೇ ಉದರಪ್ರದೇಶವೆಂದು ಹೇಳುವರು. ಸ್ವರ್ಲೋಕವು ಎದೆಯು. ಮಹರ್ಲೋಕವು ಕಂಠವು. ಜನೋಲೋಕವೇ ಮುಖ.

೫–೬. ತಪೋಲೋಕವು ಕಣ್ಣುಗಳು. ಸತ್ಯಲೋಕವೇ ತಲೆಯೆಂದು ಹೇಳುವರು. ಇಷ್ಟೆಯಲ್ಲದೆ ಭೂಮಿಯಲ್ಲಿ ಸಪ್ತದ್ವೀಪಗಳೆಂತು ನೆಲಸಿರುವವೊ, ಹಾಗೆಯೇ ದೇಹದಲ್ಲಿಯೂ ಸಪ್ತಧಾತುಗಳಿರುವುವು. ಅವುಗಳ ಹೆಸರುಗಳನ್ನು

ತಥಾತ್ರ ಧಾತವಃ ಸಪ್ತ ನಾಮತಸ್ತಾನ್ನಿಬೋಧ ಮೇ ।
ತ್ವಗಸೃಙ್ಮಾಂಸಮೇದೋಽಸ್ಥಿಮಜ್ಜಾ ಶುಕ್ರಾಣಿ ಧಾತವಃ ॥ ೬ ॥
ಅಸ್ಥ್ನಾಮತ್ರ ಶತಾನಿ ಸ್ಯುಸ್ತ್ರೀಣಿ ಷಷ್ಟ್ಯಧಿಕಾನಿ ಚ ।
ತ್ರಿಂಶಚ್ಛತಸಹಸ್ರಾಣಿ ನಾಡೀನಾಂ ಕಥಿತಾನಿ ಚ ॥ ೭ ॥
ಷಟ್ಪಂಚಾಶತ್ಸಹಸ್ರಾಣಿ ತಥಾನ್ಯಾನಿ ನವೈವ ತು ।
ತಾ ವಸಂತಿ ರಸಂ ದೇಹೇ ಜಲಂ ನದ್ಯೋ ಯಥಾ ಭುವಿ ॥ ೮ ॥
ಸಾರ್ಧಾಭಿಸ್ತಿಸೃಭಿಶ್ಛನ್ನಂ ಸಮಂತಾದ್ರೋಮಕೋಟಿಭಿಃ ।
ಶರೀರಂ ಸ್ಥೂಲಸೂಕ್ಷ್ಮಾಭಿರ್ದೃಶ್ಯಾದೃಶ್ಯಾ ಹಿ ತಾಃ ಸ್ಮೃತಾಃ ॥ ೯ ॥
ಷಡಂಗಾನಿ ಪ್ರಧಾನಾನಿ ಕಥ್ಯಮಾನಾನಿ ಮೇ ಶೃಣು ।
ದ್ವೌ ಬಾಹೂ ಸಕ್ಥನೀ ದ್ವೇ ಚ ಮೂರ್ಧಾ ಜಠರಮೇವ ಚ ॥ ೧೦ ॥
ಅಂತ್ರಾಣ್ಯತ್ರ ತಥಾ ತ್ರೀಣಿ ಸಾರ್ಧವ್ಯಾಮತ್ರಯಾಣಿಚ ।
ತ್ರಿವ್ಯಾಮಾನಿ ತಥಾ ಸ್ತ್ರೀಣಾಮಾಹುರ್ವೇದವಿದೋ ದ್ವಿಜಾಃ ॥ ೧೧ ॥
ಊರ್ಧ್ವನಾಲಮಧೋವಕ್ತ್ರಂ ಹೃದಿಪದ್ಮಂ ಪ್ರಕೀರ್ತ್ಯತೇ ।
ಹೃತ್ಪದ್ಮವಾಮತಃ ಪ್ಲೀಹೋ ದಕ್ಷಿಣೇ ಸ್ಯಾತ್ತಥಾ ಯಕೃತ್ ॥ ೧೨ ॥

---

ಹೇಳುವೆನು ಕೇಳು. ಚರ್ಮ, ರಕ್ತ, ಮಾಂಸ, ಮೇದಸ್ಸು, ಅಸ್ಥಿ, ಮಜ್ಜಾ, ಶುಕ್ರ ಇವುಗಳೇ ಸಪ್ತಧಾತುಗಳು.

೭–೮. ಈ ದೇಹದಲ್ಲಿ ಮುನ್ನೂರ ಅರವತ್ತು ಅಸ್ಥಿಗಳಿರುವುವು. ಮತ್ತು ಮುವ್ವತ್ತು ಮೂರು ಲಕ್ಷಗಳೂ ಮೇಲೆ ಒಂಭತ್ತೂ ನಾಡಿಗಳಿರುವುವೆಂದು ಹೇಳಲ್ಪಟ್ಟಿರುವುದು. ಭೂಮಿಯಲ್ಲಿ ನದಿಗಳು ನೀರನ್ನು ಶೇಖರಿಸಿ ಹರಿಸುವಂತೆ ದೇಹದಲ್ಲಿ ನಾಡಿಗಳಲ್ಲಿಯೂ ರಕ್ತವು ಹರಿಯುತ್ತಿರುವುದು.

೯. ಈ ಶರೀರವು ಮೂರೂವರೆ ಕೋಟಿ ರೋಮಗಳಿಂದ ಮುಚ್ಚಲ್ಪಟ್ಟಿರುವುದು. ಅವುಗಳು ಸ್ಥೂಲ ಸೂಕ್ಷ್ಮ ರೂಪಗಳುಳ್ಳವಾದುದರಿಂದ ಕೆಲವು ಕಾಣುವುವೆಂದೂ, ಕೆಲವು ಕಾಣುವುದಿಲ್ಲವೆಂದೂ ಹೇಳುವರು.

೧೦. ಶರೀರದಲ್ಲಿ ಆರು ಅಂಗಗಳು ಬಹಳ ಮುಖ್ಯವಾದುವುಗಳು. ಯಾವುವೆಂದರೆ ಎರಡು ಬಾಹುಗಳು, ಎರಡು ತೊಡೆಗಳು, ತಲೆ ಮತ್ತು ಜಠರ.

೧೧. ಇವಲ್ಲದೆ ಮತ್ತು ಮೂರು ವಿಧಗಳಾದ ಕರುಳುಗಳು ಹೊಟ್ಟೆಯಲ್ಲಿದ್ದು ಅವು ಮೂರೂವರೆ ಬಾರು ಉದ್ದವಿರುತ್ತವೆ. ಆದರೆ ಆಯುರ್ವೇದವನ್ನು ತಿಳಿದವರು ಸ್ತ್ರೀಯರಲ್ಲಿ ಮೂರು ಬಾರು ಮಾತ್ರ ಇರುವುವೆಂದು ಹೇಳುವರು.

೧೨. ಹೃದಯ ಪದ್ಮವೆಂಬುದು ಮೇಲೆ ನಾಳವನ್ನು ಹೊಂದಿ ಅಧೋಮುಖವುಳ್ಳದ್ದೆಂದು ಹೇಳಲ್ಪಟ್ಟಿರುವುದು. ಅದರ ಎಡಪಾರ್ಶ್ವದಲ್ಲಿ ಪ್ಲೀಹವೂ ಬಲಭಾಗದಲ್ಲಿ ಯಕೃತ್ಕೋಶವೂ ಇರುವುವು.

ಮಜ್ಜಾತೋ ಮೇದಸಶ್ಚೈವ ವಸಾಯಾಶ್ಚ ತಥಾ ದ್ವಿಜ ।
ಮೂತ್ರಸ್ಯ ಚೈವ ಪಿತ್ತಸ್ಯ ಶ್ಲೇಷ್ಮಣಃ ಶಕೃತಸ್ತಥಾ ॥ ೧೩ ॥
ರಕ್ತಸ್ಯ ಚರಮಸ್ಯಾತ್ರ ಗರ್ತಾ ದ್ವ್ಯಂಜಲಯಃ ಸ್ಮೃತಾಃ ।
ತೇಭ್ಯಃ ಪ್ರವರ್ತಮಾನಾಸ್ತೇ ದೇಹಂ ಸಂಧಾರಯಂತ್ಯುತ ॥ ೧೪ ॥
ಸೀವನ್ಯಶ್ಚ ತಥಾ ಸಪ್ತ ಪಂಚ ಮೂರ್ಧಾನಮಾಸ್ಥಿತಾಃ ।
ಏಕಾ ಮೇಢ್ರಂ ಗತಾ ಚೈಕಾ ತಥಾ ಜಿಹ್ವಾಂ ಗತಾ ದ್ವಿಜ ॥ ೧೫ ॥
ನಾಡ್ಯಃ ಸರ್ವಾಃ ಪ್ರವರ್ತಂತೇ ನಾಭಿಪದ್ಮಾತ್ತಥಾತ್ರ ಚ ।
ಯಾಸಾಂ ಶ್ರೇಷ್ಠಾ ಶಿರೋ ಯಾತಾ ಸುಷುಮ್ನೇಡಾಥ ಪಿಂಗಲಾ ॥ ೧೬ ॥
ನಾಸಿಕಾದ್ವಾರಮಾಸಾದ್ಯ ಸಂಸ್ಥಿತಾ ದೇಹವರ್ಧನೇ ।
ವಾಯುರಗ್ನಿಶ್ಚಂದ್ರಮಾಶ್ಚ ಪಂಚಧಾ ಪಂಚಧಾತ್ರ ಚ ॥ ೧೭ ॥
ಪ್ರಾಣಾಪಾನಸಮಾನಾಶ್ಚ ಉದಾನೋ ವ್ಯಾನ ಏವ ಚ ।
ಪಂಚ ಭೇದಾಃ ಸ್ಮೃತಾ ವಾಯೋಃ ಕರ್ಮಾಣ್ಯೇಷಾಂ ವದಂತಿ ಚ ॥೧೮॥
ಉಚ್ಛ್ವಾಸಶ್ಚೈವ ನಿಃಶ್ವಾಸೋ ಹ್ಯನ್ನಪಾನಪ್ರವೇಶನಂ ।
ಆಕಂಠಾಚ್ಛೀರ್ಷ ಸಂಸ್ಥಾಪ್ಯ ಪ್ರಾಣಕರ್ಮ ಪ್ರಕೀರ್ತಿತಂ ॥ ೧೯ ॥

---

೧೩–೧೫. ಮಜ್ಜಾ, ಮೇದಸ್ಸು, ಕೊಬ್ಬು, ಮೂತ್ರ, ಪಿತ್ತ, ಶ್ಲೇಷ್ಮ ಮತ್ತು ಪುರೀಷಗಳನ್ನುಂಟುಮಾಡುವ ಕೋಶಗಳಲ್ಲಿ ಎರಡು ಬೊಗಸೆಗಳ ಪ್ರಮಾಣದ ಅವಕಾಶವಿರುವುದು. ಆ ಕೋಶಗಳಿಂದ ಹುಟ್ಟಿದ ಈ ಪದಾರ್ಥಗಳು ದೇಹವನ್ನು ಧರಿಸಲು ಅನುಕೂಲಗಳಾಗಿರುವುವು. ಅಂತೆಯೇ ದೇಹದಲ್ಲಿ ಏಳು ಸೀವನಿಗಳು ಇರುವುವು. ಇವುಗಳಲ್ಲಿ ಐದು ತಲೆಯಲ್ಲಿಯೂ, ಒಂದು ಮೇಢ್ರದಲ್ಲಿಯೂ, ಮತ್ತೊಂದು ನಾಲಿಗೆಯಲ್ಲಿಯೂ ಇರುವುವು.

೧೬–೧೭. ದೇಹದೊಳಗಿನ ನಾಡಿಗಳೆಲ್ಲವೂ ಹೃದಯಪದ್ಮದಿಂದ ಹೊರಟಿರುವುವು. ಅವುಗಳಲ್ಲಿ ಇಡಾ, ಪಿಂಗಲಾ, ಸುಷುಮ್ನಾ ಎಂಬ ಮೂರು ಮುಖ್ಯ ನಾಡಿಗಳು ತಲೆಗೆ ಸೇರುವುವು. ವಾಯು, ಅಗ್ನಿ ಮತ್ತು ಚಂದ್ರ—ಈ ಮೂವರು ದೇವತೆಗಳೂ ಮೂಗಿನ ಮಾರ್ಗವಾಗಿ ಪ್ರವೇಶಿಸಿ ಒಳಗೆ ಪ್ರತಿಯೊಬ್ಬರೂ ಐದು ವಿಧವಾದ ವ್ಯಾಪಾರಗಳನ್ನು ನಡೆಸುತ್ತ ದೇಹಧಾರಣವನ್ನೂ ವೃದ್ಧಿಕ್ರಿಯೆಯನ್ನೂ ಮಾಡಿಸುತ್ತಿರುವರು.

೧೮–೧೯. ವಾಯುವು ಪ್ರಾಣ, ಅಪಾನ, ಸಮಾನ, ಉದಾನ ಮತ್ತು ವ್ಯಾನಗಳೆಂದು ಐದು ಭೇದಗಳುಳ್ಳದ್ದಾಗಿ ಮುಂದೆ ಹೇಳಲ್ಪಡುವ ಕಾರ್ಯಗಳನ್ನು ನಡೆಸುವುದು. ಉಸಿರನ್ನು ತೆಗೆದುಕೊಳ್ಳುವುದು, ಬಿಡುವುದು, ಅನ್ನೋದಕಗಳನ್ನು ಗಂಟಲಿನೊಳಕ್ಕೆ ತಳ್ಳುವುದು, ಮುಂತಾದುವುಗಳು ಗಂಟಲವರೆಗೆ ಶಿರಃಪ್ರದೇಶದಲ್ಲಿರುವ ಪ್ರಾಣವಾಯುವಿನ ಕಾರ್ಯಗಳು.

ತ್ಯಾಗೋ ವಿಣ್ಮೂತ್ರಶುಕ್ರಾಣಾಂ ಗರ್ಭವಿಸ್ರವಣಂ ತಥಾ ।
ಅಪಾನಕರ್ಮ ನಿರ್ದಿಷ್ಟಂ ಸ್ಥಾನಮಸ್ಯ ಗುದೋಪರಿ ॥ ೨೦ ॥
ಸಮಾನೋ ಧಾರಯತ್ಯನ್ನಂ ವಿವೇಚಯತಿ ಚಾಪ್ಯಥ ।
ರಸಯಂಶ್ಚೈವ ಚರತಿ ಸರ್ವಶ್ರೋಣಿಷ್ವವಾರಿತಃ ॥ ೨೧ ॥
ವಾಕ್ಪ್ರವೃತ್ತಿಪ್ರದೋದ್ಗಾರೇ ಪ್ರಯತ್ನೇ ಸರ್ವಕರ್ಮಣಾಂ ।
ಆಕಂಠಸುರಸಂಸ್ಥಾನಮುದಾನಸ್ಯ ಪ್ರಕೀರ್ತ್ಯತೇ ॥ ೨೨ ॥
ವ್ಯಾನೋ ಹೃದಿ ಸ್ಥಿತೋ ನಿತ್ಯಂ ತಥಾ ದೇಹಚರೋಽಪಿ ಚ ।
ಧಾತುವೃದ್ಧಿಪ್ರದಃ ಸ್ವೇದಲಾಲೋನ್ಮೇಷನಿಮೇಷಕೃತ್ ॥ ೨೩ ॥
ಪಾಚಕೋ ರಂಜಕಶ್ಚೈವ ಸಾಧಕಾಲೋಚಕೌ ತಥಾ ।
ಭ್ರಾಜಕಶ್ಚ ತಥಾ ದೇಹೇ ಪಂಚಧಾ ಪಾವಕಃ ಸ್ಥಿತಃ ॥ ೨೪ ॥
ಪಾಚಕಸ್ತು ಪಚತ್ಯನ್ನಂ ನಿತ್ಯಂ ಪಕ್ವಾಶಯೇ ಸ್ಥಿತಃ ।
ಆಮಾಶಯಸ್ಥೋಽಪಿ ರಸಂ ರಂಜಕಃ ಕುರುತೇ ತ್ವಸೃಕ್ ॥ ೨೫ ॥

---

೨೦. ಮೂತ್ರ ಪುರೀಷ ಶುಕ್ರಗಳನ್ನು ಹೊರಗೆಡಹುವುದು, ಸ್ತ್ರೀಯರಲ್ಲಿ ಗರ್ಭೋತ್ಸರ್ಗ ಮತ್ತು ಶೋಣಿತಸ್ರಾವಗಳು ಅಪಾನವಾಯುವಿನ ಕರ್ಮಗಳು. ಇದರ ಸ್ಥಾನವು ಗುದದಮೇಲಿರುವುದು.

೨೧. ಸಮಾನವಾಯುವು (ನಾಭಿಯಲ್ಲಿ ನಿಂತು) ಅನ್ನವನ್ನು ಸ್ವೀಕರಿಸುವುದು ಮತ್ತು ಸ್ಥೂಲ ಸೂಕ್ಷ್ಮ ಭಾಗಗಳನ್ನು ಬೇರೆ ಮಾಡುವುದು. ಜಠರ ಅಂತ್ರಗಳೇ ಮೊದಲಾದ ಸಕಲ ಮಾರ್ಗಗಳಲ್ಲಿಯೂ ರಸಮಿಶ್ರಿತವಾದ ಆಹಾರವು ಪ್ರವಹಿಸುವಂತೆ ಮಾಡುವುದು.

೨೨. ವಾಕ್ಪ್ರವೃತ್ತಿಗೆ ಸಹಾಯಕವಾಗುವ ಶಬ್ದಗಳ ಉಚ್ಚಾರಣೆಯ ಸಕಲ ಪ್ರಯತ್ನಗಳನ್ನೂ ಕಂಠದೇಶದಲ್ಲಿ ನೆಲಸಿರುವ ಉದಾನವಾಯುವಿನ ಕಾರ್ಯಗಳೆಂದು ಹೇಳುವರು.

೨೩. ವ್ಯಾನವಾಯುವು ಹೃದಯದಲ್ಲಿದ್ದರೂ ದೇಹದಲ್ಲೆಲ್ಲ ಸಂಚರಿಸುತ್ತ ಧಾತುಗಳ ವೃದ್ಧಿಗೆ ಕಾರಣವಾಗಿರುವುದಲ್ಲದೆ ಬೆವರು, ಲಾಲಾರಸ ಮತ್ತು ಕಣ್ಣುಗಳ ರೆಪ್ಪೆಗಳನ್ನು ಬಡಿಯುವುದು—ಇವುಗಳನ್ನು ಮಾಡಿಸುವುದು.

೨೪. ಅಗ್ನಿಯು ಶರೀರದಲ್ಲಿ ಪಾಚಕ, ರಂಜಕ, ಸಾಧಕ, ಆಲೋಚಕ, ಭ್ರಾಜಕಗಳೆಂಬ ಐದು ವಿಧಗಳಾಗಿ ನೆಲಸಿರುವುದು.

೨೫. ಪಾಚಕವೆಂಬುದು ಯಾವಾಗಲೂ ಪಕ್ವಾಶಯದಲ್ಲಿದ್ದು ಅನ್ನವನ್ನು ಪಚನಮಾಡುವುದು. ರಂಜಕಾಗ್ನಿಯು ಆಮಾಶಯದಲ್ಲಿ ನಿಂತು ಆಹಾರದ ರಸಭಾಗವನ್ನು ರಕ್ತವನ್ನಾಗಿ ಮಾರ್ಪಡಿಸುವುದು.

ಸಾಧಕೋ ಹೃದಿಸಂಸ್ಥಶ್ಚ ಬುದ್ಧ್ಯಾದ್ಯುತ್ಸಾಹಕಾರಕಃ ।
ಆಲೋಚಕಶ್ಚ ದೃಕ್ಸಂಸ್ಥೋ ರೂಪದರ್ಶನಶಕ್ತಿಕೃತ್ ॥ ೨೬ ॥
ತ್ವಕ್ಸಂಸ್ಥೋ ಭ್ರಾಜಕೋ ದೇಹಂ ಭ್ರಾಜಯೇನ್ನಿರ್ಮಲೀಕೃತಃ ।
ಕ್ಲೇದಕೋ ಬೋಧಕಶ್ಚೈವ ತರ್ಪಣಃ ಶ್ಲೇಷ್ಮಣಸ್ತಥಾ ।
ಆಲಂಬಕಸ್ತಥಾ ದೇಹೇ ಪಂಚಧಾ ಸೋಮ ಉಚ್ಯತೇ ॥ ೨೭ ॥
ಕ್ಲೇದಕಃ ಕ್ಲೇದಯತ್ಯನ್ನಂ ನಿತ್ಯಂ ಪಕ್ವಾಶಯೇ ಸ್ಥಿತಃ ॥ ೨೮ ॥
ಬೋಧಕೋ ರಸನಾಸ್ಥಶ್ಚ ರಸಾನಾಮವಬೋಧಕಃ ।
ಶಿರಃಸ್ಥಶ್ಚಕ್ಷುರಾದೀನಾಂ ತರ್ಪಣಾತ್ತರ್ಪಣಃ ಸ್ಮೃತಃ ॥ ೨೯ ॥
ಸರ್ವಸಂಧಿಗತಶ್ಚೈವ ಶ್ಲೇಷ್ಮಣಃ ಶ್ಲೇಷ್ಮಕೃತ್ತಥಾ ।
ಉರಃಸ್ಥಂ ಸರ್ವಗಾತ್ರಾಣಿ ಸ ವೈ ಹ್ಯಾಲಂಬಕಃ ಸ್ಥಿತಃ ॥ ೩೦ ॥
ಏವಂ ವಾಯ್ವಗ್ನಿ ಸೋಮೈಶ್ಚ ದೇಹಃ ಸಂಧಾರಿತಸ್ತ್ವಸೌ ।
ಆಕಾಶಜಾನಿ ಸ್ರೋತಾಂಸಿ ತಥಾ ಕೋಷ್ಠವಿವಿಕ್ತತಾ ॥ ೩೧ ॥

---

೨೬. ಸಾಧಕಾಗ್ನಿಯು ಹೃದಯದೊಳಗಿನಿಂದ ಬುದ್ಧಿ ಮತ್ತು ಕಾರ್ಯೋತ್ಸಾಹಗಳಿಗೆ ಕಾರಣವಾಗಿರುವುದು. ಆಲೋಚಕವು ನೇತ್ರಮಂಡಲದಲ್ಲಿ ನೆಲಸಿ ರೂಪಗಳ ದರ್ಶನಕ್ಕೆ ಕಾರಣವಾಗಿರುವುದು.

೨೭. ಭ್ರಾಜಕಾಗ್ನಿಯು ನಿರ್ಮಲವಾದುದಾಗಿ ಚರ್ಮದಲ್ಲಿ ನೆಲಸಿ ಶರೀರ ಕಾಂತಿಯನ್ನುಂಟುಮಾಡುವುದು. ಚಂದ್ರನು ಕ್ಲೇದಕ, ಬೋಧಕ, ತರ್ಪಣ, ಶ್ಲೇಷ್ಮಣ ಮತ್ತು ಆಲಂಬಕಗಳೆಂಬ ಐದು ಹೆಸರುಗಳಿಂದ ದೇಹದಲ್ಲಿರುವನೆಂದು ಹೇಳುವರು.

೨೮–೨೯. ಕ್ಲೇದಕವು ಯಾವಾಗಲೂ ಪಕ್ವಾಶಯದಲ್ಲಿದ್ದು ಅನ್ನಾಹಾರಗಳಿಗೆ ರಸಗಳನ್ನೊದಗಿಸುವುದು. ಬೋಧಕವು ನಾಲಿಗೆಯೊಳಗೆ ಇದ್ದುಕೊಂಡು ಸಿಹಿ, ಕಹಿ ಮುಂತಾದ ರಸಗಳ ಪರಿಚಯಗಳನ್ನು ಮಾಡಿಸುವುದು. ತಲೆಯಲ್ಲಿ ನಿಂತು ಚಕ್ಷುರಾದಿಂದ್ರಿಯಗಳಿಗೆ ತೃಪ್ತಿಯನ್ನುಂಟುಮಾಡುವುದಕ್ಕೆ ತರ್ಪಣವೆಂದು ಹೆಸರು.

೩೦. ಶ್ಲೇಷ್ಮಣವು ದೇಹದ ಸಕಲ ಸಂಧಿಗಳ ಕಾರ್ಯಗಳನ್ನೂ ನಡೆಸಿ ಶ್ಲೇಷ್ಮವನ್ನೂ ಉಂಟುಮಾಡುವುದು. ಆಲಂಬಕವು ಎದೆಯಲ್ಲಿ ನಿಂತು ದೇಹದಲ್ಲೆಲ್ಲ ವ್ಯಾಪಿಸಿರುವುದು.

೩೧. ಇಂತು ಈ ದೇಹವು ವಾಯು, ಅಗ್ನಿ ಮತ್ತು ಚಂದ್ರರಿಂದ ವಿಧೃತವಾಗಿರುವುದು. ಶರೀರದಲ್ಲಿ ರಕ್ತಾದಿಗಳು ಪ್ರವಹಿಸುವ ನಾಡಿಗಳು ಮತ್ತು ಹೃದಯವೇ ಮೊದಲಾದ ಕೋಶಗಳು ಆಕಾಶತತ್ತ್ವದಿಂದುಂಟಾದುವು.

ಪಾರ್ಥಿವಾನೀಹ ಜಾನೀಹಿ ಘ್ರಾಣಕೇಶನಖಾನಿ ಚ ।
ಅಸ್ಥೀನಿ ಧೈರ್ಯಂ ಗುರುತಾ ತ್ವಙ್ಮಾಂಸಂ ಹೃದಯಂ ಗುದಂ ॥ ೩೨ ॥
ನಾಭಿರ್ಮೇದೋ ಯಕೃನ್ಮಜ್ಜಾ ಅಂತ್ರಮಾಮಾಶಯಃ ಶಿರಾ ।
ಸ್ನಾಯುಃ ಪಕ್ವಾಶಯಶ್ಚೈವ ಪ್ರಾಹುರ್ವೇದವಿದೋ ಜನಾಃ ॥ ೩೩ ॥
ನೇತ್ರಯೋರ್ಮಂಡಲಂ ಶುಕ್ಲಂ ಕಫಾದ್ಭವತಿ ಪೈತೃಕಂ ।
ಕೃಷ್ಣಂ ಚ ಮಂಡಲಂ ವಾತಾತ್ತಥಾ ಭವತಿ ಮಾತೃಕಂ ॥ ೩೪ ॥
ಪಕ್ಷ್ಮಮಂಡಲಮೇಕಂ ತು ದ್ವಿತೀಯಂ ಚರ್ಮಮಂಡಲಂ ।
ಶುಕ್ಲಂ ತೃತೀಯಂ ಕಥಿತಂ ಚತುರ್ಥಂ ಕೃಷ್ಣಮಂಡಲಂ ॥ ೩೫ ॥
ದೃಙ್ಮಂಡಲಂ ಪಂಚಮಂ ತು ನೇತ್ರಂ ಸ್ಯಾತ್ಪಂಚಮಂಡಲಂ ।
ಅಪರೇ ನೇತ್ರಭಾಗೇ ದ್ವೇ ಉಪಾಂಗೋಽಪಾಂಗ ಏವ ಚ ॥ ೩೬ ॥
ಉಪಾಂಗೋ ನೇತ್ರಪರ್ಯಂತೋ ನಾಸಾಮೂಲಮಪಾಂಗಕಃ ।
ವೃಷಣೌ ಚ ತಥಾ ಪ್ರೋಕ್ತೌ ಮೇದೋಽಸೃಕ್ಕಫಮಾಂಸಕೌ ॥ ೩೭ ॥
ಅಸೃಙ್ಮಾಂಸಮಯೀ ಜಿಹ್ವಾ ಸರ್ವೇಷಾಮೇವ ದೇಹಿನಾಂ ।
ಹಸ್ತಯೋರೋಷ್ಠಯೋರ್ಮೇಢ್ರೇ ಗ್ರೀವಾಯಾಂ ಷಟ್ಚ ಕೂರ್ಚಕಾಃ ॥

---

೩೨–೩೩. ಘ್ರಾಣೇಂದ್ರಿಯವು, ಕೇಶಗಳು, ಉಗುರುಗಳು, ಅಸ್ಥಿಗಳು, ಧೈರ್ಯ, ಭಾರ, ಚರ್ಮ, ಮಾಂಸ, ಹೃದಯ, ಪಾಯ್ವಿಂದ್ರಿಯ, ನಾಭಿ, ಮೇದಸ್ಸು, ಯಕೃತ್ತು, ಮಜ್ಜೆ, ಕರುಳುಗಳು, ಆಮಾಶಯ, ರಕ್ತನಾಳಗಳು, ಸ್ನಾಯುಗಳು, ಪಕ್ವಾಶಯ—ಇವುಗಳೆಲ್ಲವೂ ಪೃಥ್ವೀತತ್ತ್ವದ ವಿಕಾರಗಳೆಂದು ವೇದಜ್ಞರು ಹೇಳುವರು.

೩೪–೩೬.. ಕಣ್ಣುಗಳೊಳಗಿನ ಬಿಳಿಯ ಮಂಡಲವು ಕಫದಿಂದುಂಟಾಗಿ ತಂದೆಯಿಂದ ಬರುವುದು. ಕರಿಯ ಗುಡ್ಡೆಯು ವಾತದಿಂದ ವೃದ್ಧಿಯನ್ನು ಹೊಂದಿ ತಾಯಿಯ ಕಡೆಯಿಂದ ಪ್ರಾಪ್ತವಾಗುವುದು. ಮೊದಲನೆಯದು ಕಣ್ಣಿನ ಎವೆ, ಬಳಿಕ ಚರ್ಮ, ಬಿಳಿಯ ಗುಡ್ಡೆ, ಕರಿಯ ಗುಡ್ಡೆ, ಆಮೇಲೆ ನೇತ್ರೇಂದ್ರಿಯ ಇಂತು ಐದು ಮಂಡಲಗಳುಳ್ಳದ್ದಾಗಿರುವುದು. ಅಲ್ಲದೆ ನೇತ್ರದಲ್ಲಿ ಉಪಾಂಗ ಮತ್ತು ಅಪಾಂಗಗಳೆಂಬ ಎರಡು ಭಾಗಗಳು ಹೇಳಲ್ಪಟ್ಟಿರುವುವು.

೩೭. ಕಣ್ಣಿನ ರೆಪ್ಪೆಯವರೆಗಿನ ಅಂಗಗಳೆಲ್ಲವೂ ಉಪಾಂಗವೆಂದೂ ಮೂಗಿನ ಮೊದಲಲ್ಲಿರುವ ಕಣ್ಣಿನ ಮೂಲೆಯು ಅಪಾಂಗವೆಂದೂ ಕರೆಯಲ್ಪಡುವುವು. ವೃಷಣಗಳು ಮೇದಸ್ಸು, ರಕ್ತ, ಕಫ, ಮಾಂಸಗಳಿಂದ ಮಾಡಲ್ಪಟ್ಟಿರುವುವು.

೩೮. ಸಕಲ ಪ್ರಾಣಿಗಳಿಗೂ ನಾಲಿಗೆಯೆಂಬುದು ರಕ್ತಮಾಂಸಗಳಿಂದ ಕೂಡಿದುದು. ಕೈಗಳು, ತುಟಿಗಳು, ಮೇಢ್ರ ಮತ್ತು ಕತ್ತುಗಳಲ್ಲಿ ಕೂದಲು ಗಳಿರುವುವು.

ಏವಮತ್ರ ಸ್ಥಿತೇ ಜೀವೋ ದೇಹೇಽಸ್ಮಿನ್ಸಪ್ತಸಪ್ತಕೇ ।
ಪಂಚವಿಂಶತಿಕೋ ವ್ಯಾಪ್ಯ ದೇಹಂ ವಾಸೋಽಸ್ಯ ಮೂರ್ಧನಿ ॥ ೩೯ ॥
ತ್ವಗಸೃಙ್ಮಾಂಸಮಿತ್ಯಾಹುಸ್ತ್ರಿಕಂ ಮಾತೃಸಮುದ್ಭವಂ ।
ಮೇದೋಮಜ್ಜಾಸ್ಥಿಕಂ ಪ್ರೋಕ್ತಂ ಪಿತೃಜಂ ಷಟ್ಕ ಕೌಶಿಕಂ ॥ ೪೦ ॥
ಏವಂ ಭೂತಮಯಂ ದೇಹಂ ಪಂಚಭೂತಸಮುದ್ಭವೈಃ ।
ಅನ್ನೈರ್ಯಥಾ ವೃದ್ಧಿಮೇತಿ ತದಹಂ ವರ್ಣಯಾಮಿ ತೇ ॥ ೪೧ ॥
ತದನ್ನಂ ಪಿಂಡಕವಲೈರ್ಗ್ರಾಸೈರ್ಭುಕ್ತಂ ಚ ದೇಹಿಭಿಃ ।
ಪೂರ್ವಂ ಸ್ಥೂಲಾಶಯೇ ವಾಯುಃ ಪ್ರಾಣಃ ಪ್ರಕುರುತೇ ದ್ವಿಧಾ ॥ ೪೨ ॥
ಸಂಪ್ರವಿಶ್ಯಾನ್ನಮಧ್ಯೇತು ಪೃಥಗನ್ನಂ ಪೃಥಗ್ಜಲಂ ।
ಅಗ್ನೇರೂರ್ಧ್ವಂ ಜಲಂ ಸ್ಥಾಪ್ಯ ತದನ್ನಂ ತಜ್ಜಲೋಪರಿ ॥ ೪೩ ॥
ಜಲಸ್ಯಾಧಃ ಸ್ವಯಂ ಪ್ರಾಣಃ ಸ್ಥಿತ್ವಾಗ್ನಿಂ ಧಮತೇ ಶನೈಃ ।
ವಾಯುನಾ ಧಮ್ಯಮಾನೋಽಗ್ನಿರತ್ಯುಷ್ಣಂ ಕುರುತೇ ಜಲಂ ॥ ೪೪ ॥

---

೩೯. ಇಂತು ಸಪ್ತಧಾತುಗಳಿಂದ ರಚಿತವಾದ ಈ ದೇಹದಲ್ಲಿ ಸೇಶ್ವರ ಸಾಂಖ್ಯರ ಇಪ್ಪತ್ತೈದನೆಯ ತತ್ತ್ವವಾದ ಜೀವನು ವ್ಯಾಪಿಸಿರುವನು. ಅವನ ವಿಶೇಷ ಸ್ಥಾನವು ಬ್ರಹ್ಮರಂಧ್ರದಲ್ಲಿರುವುದು.

೪೦. ದೇಹದಲ್ಲಿರುವ ಚರ್ಮ, ರಕ್ತ ಮತ್ತು ಮಾಂಸಗಳು ತಾಯಿಯ ದೇಹದಿಂದುಂಟಾಗುವುವೆಂದೂ, ಮೇದಸ್ಸು, ಮಜ್ಜೆ, ಅಸ್ಥಿಗಳು ತಂದೆಯಿಂದ ಬಂದುವೆಂದೂ ಆರು ಕೋಶಗಳನ್ನು ನಿರೂಪಿಸಿರುವರು.

೪೧. ಇಂತು ಪಂಚಭೂತಗಳಿಂದ ಕೂಡಿದ ದೇಹವು ಆ ಭೂತಗಳಿಂದಲೇ ಉಂಟಾಗಿರುವ ಅನ್ನಗಳಿಂದ ಹೇಗೆ ವೃದ್ಧಿಯನ್ನು ಹೊಂದುವುದೆಂಬುದನ್ನು ನಿನಗೆ ವಿವರಿಸುವೆನು.

೪೨. ಅನ್ನವನ್ನು ಜೀವಿಗಳು ತುತ್ತುಗಳಾಗಿಯೂ ಗ್ರಾಸಗಳಾಗಿಯೂ ಭೋಜನಮಾಡುವರು. ಅದು ಮೊದಲು ಸ್ಥೂಲಾಶಯಕ್ಕೆ ಸೇರುವುದು. ಅಲ್ಲಿ ಪ್ರಾಣವಾಯುವು ಅದನ್ನು ಎರಡು ವಿಧವಾಗಿ ಪರಿಣಾಮಮಾಡುವುದು.

೪೩. ಅನ್ನ ಮಧ್ಯದಲ್ಲಿ ಸೇರಿ ಆ ವಾಯುವು ಸ್ಥೂಲಾಂಶವನ್ನೂ ಜಲಾಂಶವನ್ನೂ ಬೇರೆ ಮಾಡುವುದು ಮಾತ್ರವಲ್ಲದೆ ಜಠರಾಗ್ನಿಯ ಮೇಲೆ ಜಲವನ್ನೂ ಅದರ ಮೇಲೆ ಅನ್ನವನ್ನೂ ನಿಲ್ಲಿಸುವುದು.

೪೪. ಜಲದ ಕೆಳಗೆ ಪ್ರಾಣವಾಯುವು ತಾನೇ ಪಾಚಕಾಗ್ನಿಯನ್ನು ಮೆಲ್ಲಗೆ ಉದ್ರೇಕಿಸುವುದು. ಇಂತು ವಾಯುವಿನಿಂದ ಜ್ವಲಿಸಿದ ಅಗ್ನಿಯು ನೀರನ್ನು ಬಹಳ ಬಿಸಿಮಾಡುವುದು.

ತದನ್ನಮುಷ್ಣತೋಯೇನ ಸಮಂತಾತ್ಪಚ್ಯತೇ ಪುನಃ ।
ದ್ವಿಧಾ ಭವತಿ ತತ್ಪಕ್ವಂ ಪೃಥಕ್ಕಿಟ್ಟಂ ಪೃಥಗ್ರಸಂ ॥ ೪೫ ॥
ಮಲೈರ್ದ್ವಾದಶಭಿಃ ಕಿಟ್ಟಂ ಭಿನ್ನಂ ದೇಹಾದ್ಬಹಿರ್ವ್ರಜೇತ್ ।
ಕರ್ಣಾಕ್ಷಿನಾಸಿಕಾಜಿಹ್ವಾದಂತಃ ಶಿಶ್ನಂ ಗುದಂ ನಖಾಃ ।
ರೋಮಕೂಪಾಣಿ ಚೈವ ಸ್ಯುರ್ದ್ವಾದಶೈತೇ ಮಲಾಶ್ರಯಾಃ ॥ ೪೬ ॥
ಹೃತ್ಪದ್ಮಪ್ರತಿಬದ್ಧಾಶ್ಚ ಸರ್ವಾ ನಾಡ್ಯಃ ಸಮಂತತಃ ।
ತಾಸಾಂ ಮುಖೇಷು ತಂ ಸೂಕ್ಷ್ಮಂ ವ್ಯಾನಃ ಸ್ಥಾಪಯತೇ ರಸಂ ॥ ೪೭ ॥
ರಸೇನ ತೇನ ತಾ ನಾಡೀಃ ಸಮಾನಃ ಪೂರಯೇತ್ಪುನಃ ।
ತತಃ ಪ್ರಯಾಂತಿ ಸಂಪೂರ್ಣಾಸ್ತಾಶ್ಚ ದೇಹಂ ಸಮಂತತಃ ॥ ೪೮ ॥
ತತಃ ಸ ನಾಡಿಮಧ್ಯಸ್ಥೋ ರಂಜಕೇನೋಷ್ಮಣಾ ರಸಃ ।
ಪಚ್ಯತೇ ಪಚ್ಯಮಾನಸ್ತು ರುಧಿರತ್ವಂ ಭವೇತ್ಪುನಃ ॥ ೪೯ ॥
ತತಸ್ತ್ವಗ್ಲೋಮಕೇಶಾಶ್ಚ ಮಾಂಸಂ ಸ್ನಾಯುಶಿರಾಸ್ಥಿ ಚ ।
ನಖಾ ಮಜ್ಜಾಪಿ ವೈಮಲ್ಯಂ ಶುಕ್ರವೃದ್ಧಿಃ ಕ್ರಮಾದ್ಭವೇತ್ ॥ ೫೦ ॥

---

೪೫. ಆ ಅನ್ನವು ಬಿಸಿನೀರಿನಲ್ಲಿ ಮತ್ತೆ ಚೆನ್ನಾಗಿ ಪಕ್ವವಾಗುವುದು. ಬಳಿಕ ಮಲಾಂಶವೆಂದೂ ರಸಾಂಶವೆಂದೂ ಎರಡು ಭಾಗವಾಗಿ ಪರಿಣಮಿಸುವುದು.

೪೬. ಮಲಾಂಶವು ನಾನಾವಿಧವಾಗಿ ವಿಭಜನೆಯನ್ನು ಹೊಂದಿ ದೇಹದ ಹನ್ನೆರಡು ಮಲಾಶಯಗಳಿಂದ ಹೊರಕ್ಕೆ ಹೊರಡುವುದು. ಕಿವಿಗಳು, ಕಣ್ಣು ಗಳು, ಮೂಗು, ನಾಲಗೆ, ಹಲ್ಲುಗಳು, ಮೇಢ್ರ, ಗುದ, ಉಗುರುಗಳು, ರೋಮಕೂಪಗಳು—ಎಂಬಿವೇ ಹನ್ನೆರಡು ಮಲಾಶ್ರಯಗಳೆನಿಸುವುವು.

೪೭. ದೇಹದಲ್ಲಿ ಆದ್ಯಂತವಾಗಿರುವ ಸಕಲ ನಾಡಿಗಳೂ ಹೃದಯಪದ್ಮಕ್ಕೆ ಸಂಬಂಧಿಸಲ್ಪಟ್ಟಿರುವುವು. ಆಹಾರದ ಸೂಕ್ಷ್ಮವಾದ ರಸಾಂಶವನ್ನು ಸರ್ವ ವ್ಯಾಪಿಯಾದ ವ್ಯಾನವಾಯುವು ಆ ನಾಡಿಗಳ ಮುಖಗಳಲ್ಲಿ ತೆಗೆದುಕೊಂಡು ಹೋಗುವುದು.

೪೮. ಸಮಾನವಾಯುವು ಆ ರಸವನ್ನು ಆ ನಾಡಿಗಳಲ್ಲೆಲ್ಲ ತುಂಬುವುದು. ಆಮೇಲೆ ರಸಗಳು ದೇಹದ ಆದ್ಯಂತವಾಗಿಯೂ ನಾಡಿಗಳಲ್ಲಿ ತುಂಬಿ ಪ್ರವಹಿ ಸುವುವು.

೪೯–೫೦. ನಾಡಿಗಳ ಮಧ್ಯದಲ್ಲಿರುವ ಈ ರಸವು ರಂಜಕವೆಂಬ ಅಗ್ನಿ ಯಿಂದ ಪಕ್ವವಾಗಿ ರಕ್ತವಾಗಿ ಪರಿಣಾಮವನ್ನು ಹೊಂದುವುದು. ಆ ರಕ್ತದಿಂದ ಚರ್ಮ, ಲೋಮ, ತಲೆಗೂದಲು, ಮಾಂಸ, ನರಗಳು, ರಕ್ತನಾಳಗಳು, ಅಸ್ಥಿ ಗಳು, ನಖಗಳು, ಮಜ್ಜಾ, ಇಂದ್ರಿಯ ಶುದ್ಧಿ ಮತ್ತು ಶುಕ್ರವೃದ್ಧಿಯೆಂಬ ಸಕಲ ಪದಾರ್ಥಗಳೂ ಕ್ರಮವಾಗಿ ಉತ್ಪನ್ನವಾಗುವುವು.

ಏವಂ ದ್ವಾದಶಧಾನ್ನಸ್ಯ ಪರಿಣಾಮಃ ಪ್ರಕೀರ್ತ್ಯತೇ ।
ಏವಮೇತದ್ವಿನಿಷ್ಪನ್ನಂ ಶರೀರಂ ಪುಣ್ಯಹೇತವೇ ॥ ೫೧ ॥
ಯಥೈವ ಸ್ಯಂದನಃ ಶುಭ್ರೋ ಭಾರಸಂವಾಹನಾಯ ಚ ॥ ೫೨ ॥
ತೈಲಾಭ್ಯಂಗಾದಿಭಿರ್ಯತ್ನೈರ್ಬಹುಭಿಃ ಪಾಲ್ಯತೇ ನ ಚೇತ್ ।
ಕಿಂ ಕೃತ್ಯಂ ಸಾಧ್ಯತೇ ತೇನ ಯದಿ ಭಾರಂ ವಹೇನ್ನ ಹಿ ॥ ೫೩ ॥
ಏವಮೇತೇನ ದೇಹೇನ ಕಿಂ ಕೃತ್ಯಂ ಭೋಜನೋತ್ತಮೈಃ ।
ವರ್ಧಿತೇನ ನ ಚೇತ್ಪುಣ್ಯಂ ಕುರುತೇ ಪಶುವಚ್ಚ ತತ್ ॥ ೫೪ ॥

ಭವಂತಿ ಚಾತ್ರ ಶ್ಲೋಕಾಃ:—

ಯಸ್ಮಿನ್ಕಾಲೇ ಚ ದೇಶೇ ಚ ವಯಸಾ ಯಾದೃಶೇನ ಚ ।
ಕೃತಂ ಶುಭಾಶುಭಂ ಕರ್ಮ ತತ್ತಥಾ ತೇನ ಭುಜ್ಯತೇ ॥ ೫೫ ॥
ತಸ್ಮಾತ್ಸದಾ ಶುಭಂ ಕಾರ್ಯಮವಿಚ್ಛಿನ್ನಸುಖಾರ್ಥಿಭಿಃ ।
ವಿಚ್ಛಿದ್ಯಂತೇಽನ್ಯಥಾ ಭೋಗಾ ಗ್ರೀಷ್ಮೇ ಕುಸರಿತೋ ಯಥಾ ॥ ೫೬ ॥

---

೫೧. ಇಂತು ಅನ್ನವು ದೇಹದಲ್ಲಿ ಹನ್ನೆರಡು ವಿಧವಾಗಿ ಪರಿಣಾಮವನ್ನು ಹೊಂದುವುದೆಂದು ಹೇಳಲ್ಪಟ್ಟಿರುವುದು. ಈ ಶರೀರವು ಜೀವನಿಗೆ ಪುಣ್ಯ ಸಂಪಾದನೆಗೋಸ್ಕರ ಕೊಡಲ್ಪಟ್ಟಿರುವುದು.

೫೨–೫೩. ಕೀಲೆಣ್ಣೆ, ಬಣ್ಣಗಳಿಂದ ಶುದ್ಧಗೊಳಿಸಲ್ಪಟ್ಟ ರಥವು ಹೇಗೆ ಭಾರವಾದ ಪದಾರ್ಥಗಳನ್ನು ಸಾಗಿಸಲು ಸಾಧನವಾಗುವುದೊ, ಹಾಗೆಯೇ ತೈಲಾಭ್ಯಂಜನಾದಿಗಳಿಂದಲೂ ಔಷಧಾದಿ ಅನೇಕ ಪ್ರಯತ್ನಗಳಿಂದಲೂ ಪರಿಶುದ್ಧವಾದ ಶರೀರವು ಕಾರ್ಯಭಾರಗಳನ್ನು ನಿರ್ವಹಿಸಲಾರದಾದರೆ ಅದರಿಂದ ಏನು ಪ್ರಯೋಜನವು?

೫೪–೫೫. ಇಂತು ವಿಧವಿಧಗಳಾದ ಉತ್ತಮ ಭೋಜನಗಳಿಂದ ವೃದ್ಧಿಗೊಳಿಸಲ್ಪಟ್ಟ ಈ ದೇಹವು ಪುಣ್ಯದ ಸಂಪಾದನೆಗೆ ಸಾಧನವಾಗದಿದ್ದರೆ ಅದು ಪಶುಗಳ ದೇಹಗಳಂತೆಯೇ ನಿರರ್ಥಕವೆನಿಸುವುದು. ಈ ವಿಷಯದಲ್ಲಿ ಮುಂದೆ ಹೇಳುವ ಶ್ಲೋಕಗಳು ಪೂರ್ವಜರಿಂದ ಹೇಳಲ್ಪಟ್ಟಿರುವುವು. 'ಯಾವ ಕಾಲ ಮತ್ತು ದೇಶಗಳಲ್ಲಿ ಯಾವ ವಯಸ್ಸಿನ ಮನುಷ್ಯನು ಪುಣ್ಯಪಾಪ ಕರ್ಮಗಳನ್ನು ಮಾಡುವನೊ, ಅವುಗಳೆಲ್ಲ ಹಾಗೆಯೇ ಅವನಿಂದ ಉಪಭೋಗಿಸಲ್ಪಡುತ್ತವೆ.

೫೬. ಆದುದರಿಂದ ನಿರಂತರವಾದ ಸುಖವನ್ನಿಚ್ಛಿಸುವವರು ಯಾವಾಗಲೂ ಶುಭಕಾರ್ಯಗಳನ್ನೇ ಮಾಡಬೇಕು. ಇಲ್ಲದಿದ್ದಲ್ಲಿ ಸಣ್ಣ ನೀರಿನ ತೊರೆಗಳು ಬೇಸಿಗೆಯಲ್ಲಿ ಒಣಗಿ ಹೋಗುವಂತೆ ಮನುಷ್ಯನ ಸುಖಗಳಿಗೂ ಮಧ್ಯದಲ್ಲಿಯೇ ಲೋಪವು ಬರುವುದು.

ಯಸ್ಮಾತ್ಪಾಪೇನ ದುಃಖಾನಿ ತೀವ್ರಾಣಿ ಸುಬಹೂನ್ಯಪಿ ।
ತಸ್ಮಾತ್ಪಾಪಂ ನ ಕರ್ತವ್ಯಮಾತ್ಮಪೀಡಾಕರಂ ಹಿ ತತ್ ॥ ೫೭ ॥
ಏವಂ ತೇ ವರ್ಣಿತಃ ಸಾಧೋ ಪ್ರಶ್ನೋಽಯಂ ಶಕ್ತಿತೋ ಮಯಾ ।
ಯಥಾ ಸಂಜಾಯತೇ ಪ್ರಾಣೀ ಯಥಾಶ್ರೃಣು ಪ್ರಲೀಯತೇ ॥ ೫೮ ॥
ಆಯುಷ್ಯೇ ಕರ್ಮಣಿ ಕ್ಷೀಣೇ ಸಂಪ್ರಾಪ್ತೇ ಮರಣೇ ನೃಣಾಂ ।
ಸ್ವಕರ್ಮವಶಗೋ ದೇಹೀ ಕೃಷ್ಯತೇ ಯಮಕಿಂಕರೈಃ ॥ ೫೯ ॥
ಪಂಚತನ್ಮಾತ್ರಸಹಿತಃ ಸಮನೋಬುದ್ಧ್ಯಹಂಕೃತಿಃ ।
ಪುಣ್ಯಪಾಪಮಯೈಃ ಪಾಶೈರ್ಬದ್ಧೋ ಜೀವಸ್ತ್ಯಜೇದ್ವಪುಃ ॥ ೬೦ ॥
ಶೀರ್ಷ್ಣಶ್ಚ ಸಪ್ತಭಿಶ್ಛಿದ್ರೈರ್ನಿರ್ಗಚ್ಛೇತ್ಪುಣ್ಯಕರ್ಮಣಾಂ ।
ಅಧಶ್ಚ ಪಾಪಿನಾಂ ಯಾಂತಿ ಯೋಗಿನಾಂ ಬ್ರಹ್ಮರಂಧ್ರತಃ ॥ ೬೧ ॥
ತತ್ಕ್ಷಣಾತ್ಸೋಽಥ ಗೃಹ್ಣಾತಿ ಶರೀರಂ ಚಾತಿವಾಹಿಕಂ ।
ಅಂಗುಷ್ಠಪರ್ವಮಾತ್ರಂ ತು ಸ್ವಪ್ರಾಣೈರೇವ ನಿರ್ಮಿತಂ ॥ ೬೨ ॥

---

೫೭. ಪಾಪಕೃತ್ಯಗಳಿಂದ ಬಹುವಿಧಗಳಾದ ತೀಕ್ಷ್ಣ ದುಃಖಗಳು ಸಂಭವಿಸುವುವು. ಆದುದರಿಂದ ತನಗೆ ಪೀಡೆಗಳ ಪರಂಪರೆಯನ್ನುಂಟುಮಾಡುವಂತಹ ಪಾಪಕರ್ಮವನ್ನು ಮನುಷ್ಯನು ಯಾವಾಗಲೂ ಮಾಡಬಾರದು.

೫೮. ಎಲೈ ಸಾಧುವರ್ಯನೆ! ನೀನು ಜೀವನು ಹುಟ್ಟುವ ವಿಧಾನವನ್ನು ಕುರಿತು ಕೇಳಿದ ಪ್ರಶ್ನೆಗೆ ಶಕ್ತ್ಯನುಸಾರವಾಗಿ ಉತ್ತರವನ್ನು ವರ್ಣಿಸಿರುವೆನು. ಇನ್ನು ದೇಹವಾದಮೇಲೆ ಜೀವನ ಗತಿಯನ್ನು ಹೇಳುವೆನು, ಕೇಳು.

೫೯. ಮನುಷ್ಯನ ಆಯುಷ್ಯವೂ, ಪ್ರಾರಬ್ಧಕರ್ಮವೂ ಕ್ಷೀಣವಾಗಿ ಮರಣವು ಪ್ರಾಪ್ತವಾಗಲು ತನ್ನ ಪೂರ್ವಾರ್ಜಿತ ಕರ್ಮಗಳಿಗನುಸಾರವಾಗಿ ಜೀವನು ಯಮದೂತರಿಂದ ಸೆಳೆಯಲ್ಪಡುವನು.

೬೦. ಆಗ ಅವನಿಗೆ ಪಂಚತನ್ಮಾತ್ರೆಗಳು, ಮನಸ್ಸು, ಬುದ್ಧಿ, ಅಹಂಕಾರಗಳಿಂದುಂಟಾದ ದೇಹವು ಪ್ರಾಪ್ತವಾಗಿ ಅದರಲ್ಲಿ ತನ್ನ ಪೂರ್ವಕೃತ ಪುಣ್ಯಪಾಪಗಳೆಂಬ ಪಾಶಗಳಿಂದ ಬದ್ಧವಾಗಿ ಸ್ಥೂಲದೇಹವನ್ನು ಬಿಡುವನು.

೬೧. ಪುಣ್ಯಕರ್ಮಗಳನ್ನು ಮಾಡಿದವರಿಗೆ ತಲೆಯಲ್ಲಿರುವ ಕಿವಿಗಳು, ಕಣ್ಣುಗಳು, ಮೂಗು ಮತ್ತು ಬಾಯಿಗಳಲ್ಲಿ ಪ್ರಾಣವು ಹೋಗುವುದು. ಪಾಪಿಗಳಿಗೆ ಪಾಯೂಪಸ್ಥಗಳಲ್ಲಿಯೂ, ಯೋಗಿಗಳಿಗೆ ಬ್ರಹ್ಮರಂಧ್ರದಲ್ಲಿಯೂ ಹೋಗುವುದು.

೬೨. ಆ ಕ್ಷಣದಲ್ಲಿಯೇ ತನ್ನ ಪ್ರಾಣಗಳಿಂದಲೇ ನಿರ್ಮಿತವಾಗಿ, ತನ್ನ ಹೆಬ್ಬೆರಳಿನ ಗೇಣಿನ ಪ್ರಮಾಣವುಳ್ಳುದೂ, ಲೋಕಾಂತರಗಳನ್ನು ಸೇರಲು ಅನುಕೂಲವಾದುದೂ ಆದಂತಹ ಶರೀರವನ್ನು ಜೀವನು ತಾಳುವನು.

ತತಸ್ತಸ್ಮಿನ್ಸ್ಥಿತಂ ಜೀವಂ ದೇಹೇ ಯಮಭಟಾಸ್ತದಾ ।
ಬದ್ಧ್ವಾನಯಂತಿ ಮಾರ್ಗೇಣ ಯಾಮ್ಯೇನಾತಿ ಯಥಾಬಲಂ ॥ ೬೩ ॥
ತಪ್ತಾಂಬರೀಷತುಲ್ಯೇನ ಅಯೋಗುಡನಿಭೇನ ಚ ।
ಪ್ರತಪ್ತಸಿಕತೇನಾಪಿ ತಾಮ್ರಪಾತ್ರನಿಭೇನ ಚ ॥ ೬೪ ॥
ಷಡಶೀತಿಸಹಸ್ರಾಣಿ ಯೋಜನಾನಾಂ ಮಹೀತಲಾತ್ ।
ಕೃಷ್ಯಮಾಣೋ ಯಮಪುರೀಂ ನೀಯತೇ ಪಾಪಕೃದ್ಭಟೈಃ ॥ ೬೫ ॥
ಕ್ವಚಿಚ್ಛೀತಂ ಮಹಾದುರ್ಗಮಂಧಕಾರಂ ಕ್ವಚಿನ್ಮಹತ್ ।
ಅಗ್ನಿಸಂಸ್ಪರ್ಶವದನೈಃ ಕಾಕಕಾಕೋಲಜಂಬುಕೈಃ ॥ ೬೬ ॥
ಮಕ್ಷಿಕಾದಂಶಮಶಕೈರ್ಭಕ್ಷ್ಯತೇ ಸರ್ಪವೃಶ್ಚಿಕೈಃ ।
ಬಕ್ಷ್ಯಮಾಣೋಽಪಿ ತೈರ್ಜಂತುಃ ಕ್ರಂದತೇ ಮ್ರಿಯತೇ ನ ಹಿ ॥ ೬೭ ॥
ಕ್ವಚಿಚ್ಚ ಭಕ್ಷ್ಯತೇ ಘೋರೈ ರಾಕ್ಷಸೈಃ ಕೃಷ್ಯತೇಽಸ್ಯತೇ ।
ದಹ್ಯಮಾನೋಽತಿಘೋರೇಣ ಸೈಕತೇನ ಚ ನೀಯತೇ ॥ ೬೮ ॥

---

೬೩. ಈ ಶರೀರದಲ್ಲಿರುವ ಜೀವನನ್ನು ತಮ್ಮ ಪಾಶಗಳಿಂದ ಬಿಗಿದು ಯಮಭಟರು ಯಮಲೋಕದ ಮಾರ್ಗದಲ್ಲಿ ಬಲಾತ್ಕಾರವಾಗಿ ಕರೆದುಕೊಂಡು ಹೋಗುವರು.

೬೪. ಆ ಮಾರ್ಗವು ಕಾದ ಕಬ್ಬಿಣದ ಬಾಣಲೆಯಂತೆಯೂ, ಲೋಹದ ಗುಂಡುಗಳಂತೆಯೂ, ಸುಡುತ್ತಿರುವ ಮರಳ್ಗಾಡಿನಂತೆಯೂ, ಮುಟ್ಟಲಾಗದ ತಾಮ್ರದ ಪಾತ್ರೆಯಂತೆಯೂ ಇರುತ್ತದೆ.

೬೫. ಇಂತು ಎಂಬತ್ತಾರು ಸಾವಿರ ಯೋಜನಗಳ ದೂರದಲ್ಲಿರುವ ಯಮಪುರಿಗೆ ಕ್ರೂರಕರ್ಮಿಯಾದ ಜೀವನು ಯಮಭಟರಿಂದ ಒಯ್ಯಲ್ಪಡುವನು.

೬೬–೬೭. ಕೆಲವೆಡೆಗಳಲ್ಲಿ ಸಹಿಸಲಸಾಧ್ಯವಾದ ಚಳಿಯಾಗುವುದು. ಕೆಲವುಕಡೆ ಮಹತ್ತರವಾದ ಅಂಧಕಾರವಿರುವುದು. ಕೆಲವೆಡೆಗಳಲ್ಲಿ ಕಾಗೆಗಳು, ವಾಯಸಗಳು, ನರಿಗಳು, ನೊಣಗಳು, ಕೀಟಗಳು, ಸೊಳ್ಳೆಗಳು, ಹಾವುಗಳು, ಚೇಳುಗಳು ಮುಂತಾದುವುಗಳಿಂದ ಪೀಡಿತನಾಗಿ ಕಚ್ಚಿ ತಿನ್ನಲ್ಪಟ್ಟರೂ ಜೀವನು ಸಂಕಟಪಡುವನೇ ಹೊರತು ಸಾಯುವುದಿಲ್ಲ.

೬೮. ಕೆಲವು ಕಡೆಗಳಲ್ಲಿ ಘೋರರಾಕ್ಷಸರಿಂದ ಭಕ್ಷಿಸಲ್ಪಡುವನು. ಮತ್ತೆ ಕೆಲವು ಕಡೆ ಅವರು ಈ ಜೀವನನ್ನು ಸೆಳೆದು ತಮ್ಮ ತಮ್ಮಲ್ಲಿಯೇ ಚೆಂಡಾಟವನ್ನಾಡುವರು. ಇಷ್ಟೆಯಲ್ಲದೆ ಜೀವನು ಘೋರವಾದ ಮರಳಿನಿಂದ ಸುಡಲ್ಪಟ್ಟವನಾಗಿ ಯಮಭಟರಿಂದ ಒಯ್ಯಲ್ಪಡುವನು.

ಮುಹೂರ್ತೈರ್ದಶಭಿರ್ಯಾತಿ ತಂ ಮಾರ್ಗಮತಿದುಸ್ತರಂ ।
ತಂ ಕಾಲಂ ಸುಮಹದ್ವೇತ್ತಿ ಪುರುಷೋ ವರ್ಷಸಮ್ಮಿತಂ ॥ ೬೯ ॥
ತಾರ್ಯತೇ ಚ ನದೀಂ ಘೋರಾಂ ಪೂಯಶೋಣಿತವಾಹಿನೀಂ ।
ನದೀಂ ವೈತರಣೀಂ ನಾಮ ಕೇಶಶೈವಲಶಾದ್ವಲಾಂ ॥ ೭೦ ॥
ತತೋ ಯಮಸ್ಯ ಪುರತಃ ಸ್ಥಾಪ್ಯತೇ ಯಮಕಿಂಕರೈಃ ।
ಪಾಪೀ ಮಹಾಭಯಂ ಪಶ್ಯೇತ್ಕಾಲಾಂತಕಮುಖೈರ್ವೃತಂ ॥ ೭೧ ॥
ಪುಣ್ಯಕರ್ಮಾ ಸೌಮ್ಯರೂಪಂ ಧರ್ಮರಾಜಂ ತದಾ ಕಿಲ ।
ಮನುಷ್ಯಾ ಏವ ಗಚ್ಛಂತಿ ಯಮಲೋಕಂ ನ ಚಾಪರೇ ॥ ೭೨ ॥
ಮರಣಾನಂತರಂ ತೇಷಾಂ ಜಂತೂನಾಂ ಯೋನಿಪೂರಣಂ ।
ತಥಾಹಿ ಪ್ರೇತಾ ಮನುಜಾಃ ಶ್ರೂಯಂತೇ ನಾನ್ಯ ಜಂತವಃ ॥ ೭೩ ॥
ಧಾರ್ಮಿಕಃ ಪೂಜ್ಯತೇ ತತ್ರ ಪಾಪಃ ಪಾಶಗಲೋ ಭವೇತ್ ।
ಧಾರ್ಮಿಕಶ್ಚ ಯಥಾ ಯಾತಿ ತಂ ಮಾರ್ಗಂ ಶೃಣು ವಚ್ಮಿ ತೇ ॥ ೭೪ ॥

---

೬೯. ಈ ದುಸ್ಸಾಧ್ಯವಾದ ಮಾರ್ಗವನ್ನು ಜೀವನು ಹತ್ತು ಮುಹೂರ್ತಗಳಲ್ಲಿಯೇ ದಾಟಿದರೂ, ಆ ಕಾಲವೇ ಅವನಿಗೆ ಬಹುವಾಗಿ ವರ್ಷಗಟ್ಟಲೆ ಕಳೆದಂತೆ ಕಾಣುವುದು.

೭೦. ಬಳಿಕ ರಕ್ತಪುರೀಷಗಳಿಂದ ಹರಿಯುತ್ತಿರುವುದೂ, ಕೇಶಗಳೆಂಬ ಜೊಂಡುಗಳುಳ್ಳ ಹುಲ್ಲುಗಾವಲುಗಳಲ್ಲಿರುವುದೂ ಆದ ವೈತರಣಿಯೆಂಬ ಭಯಂಕರವಾದ ನದಿಯನ್ನು ಯಮಭಟರು ದಾಟಿಸುವರು.

೭೧. ಬಳಿಕ ಅವರಿಂದ ಯಮನ ಮುಂದೆ ನಿಲ್ಲಿಸಲ್ಪಡುವನು. ಪಾಪಿಯಾದವನು ಯಮನನ್ನು ಭಯಂಕರವಾದ ಪ್ರಳಯಾಗ್ನಿಮುಖವುಳ್ಳವನನ್ನಾಗಿ ಕಾಣುವನು.

೭೨. ಪುಣ್ಯಕರ್ಮಗಳನ್ನು ಮಾಡಿದವನಿಗೆ ಯಮನು ಶಾಂತಮುಖವುಳ್ಳವನಾಗಿ ಕಾಣುವನು. ಈ ಯಮಲೋಕಕ್ಕೆ ಮನುಷ್ಯರು ಮಾತ್ರ ಹೋಗುವರೇ ಹೊರತು ಇತರ ಪ್ರಾಣಿಗಳು ಹೋಗುವುದಿಲ್ಲ.

೭೩. ಆ ತಿರ್ಯಗ್ಜಂತುಗಳು ಮರಣವಾದ ತಕ್ಷಣದಲ್ಲಿಯೇ ಮತ್ತೊಂದು ಯೋನಿಯಲ್ಲಿ ಜನ್ಮವನ್ನು ಪಡೆಯುವುವು. ಆದುದರಿಂದಲೇ ಪ್ರೇತತ್ವವು ಮನುಷ್ಯರಿಗೆ ಮಾತ್ರ ಹೇಳಲ್ಪಟ್ಟಿರುವುದಲ್ಲದೆ ಇತರ ಜಂತುಗಳಿಗಲ್ಲವು.

೭೪. ಆ ಯಮನ ಆಸ್ಥಾನದಲ್ಲಿ ಧರ್ಮತತ್ಪರನಾದವನು ಪೂಜಿಸಲ್ಪಡುವನು. ಮತ್ತು ಪಾಪಿಯು ಗಂಟಲಿನಲ್ಲಿ ಪಾಶವು ಬಿಗಿಯಲ್ಪಡುವುದು. ಇನ್ನು ಧಾರ್ಮಿಕನಾದವನು ಈ ಮಾರ್ಗವನ್ನು ಹೇಗೆ ಅತಿಕ್ರಮಿಸುವನೆಂಬುದನ್ನು ತಿಳಿಸುವೆನು, ಕೇಳುವವನಾಗು.

ಅರಾಮದ್ರುಮದಾತಾರಃ ಫಲಪುಷ್ಪವತಾ ಪಥಾ ।
ಛಾಯಯಾ ಚ ಸುಖಂ ಯಾಂತಿ ತಥಾ ಯೇ ಚ್ಛತ್ರದಾ ನರಾಃ ॥ ೭೫ ॥
ಉಪಾನಹಪ್ರದಾ ಯಾನ್ಯೈಃ ವಿತೃಷಾಃ ಪೂರ್ತಧರ್ಮಿಣಃ ।
ವಿಮಾನೈರ್ಯಾನದಾ ಯಾಂತಿ ತಥಾ ಶಯ್ಯಾಸನಪ್ರದಾಃ ॥ ೭೬ ॥
ಭಕ್ಷ್ಯಭೋಜ್ಯೈಸ್ತಥಾ ತೃಪ್ತಾ ಯಾಂತಿ ಭೋಜನದಾಯಿನಃ ।
ದೀಪಪ್ರದಾಃ ಪ್ರಕಾಶೇನ ಗೋಪ್ರದಾಸ್ತಾಂ ನದೀಂ ಸುಖಂ ॥ ೭೭ ॥
ಶ್ರೀಸೂರ್ಯಂ ಶ್ರೀಮಹಾದೇವಂ ಭಕ್ತ್ಯಾ ಯೇ ಪುರುಷೋತ್ತಮಂ ।
ಜನ್ಮಪ್ರಭೃತಿ ತೇ ಯಾಂತಿ ಪೂಜ್ಯಮಾನಾ ಯಮಾನುಗೈಃ ॥ ೭೮ ॥
ಮಹೀಂ ಗಾಂ ಕಾಂಚನಂ ಲೋಹಂ ತಿಲಾನ್ಕಾರ್ಪಾಸಮೇವ ಚ ।
ಲವಣಂ ಸಪ್ತಧಾನ್ಯಂ ಚ ದತ್ವಾ ಯಾತಿ ಸುಖಂ ನರಃ ॥ ೭೯ ॥
ತೇಷಾಂ ತತ್ರ ಗತಾನಾಂ ಚ ಪಾಪಿನಾಂ ಪುಣ್ಯಕರ್ಮಿಣಾಂ ।
ಚಿತ್ರಗುಪ್ತಃ ಪ್ರೇತಪಾಯ ನಿರೂಪಯತಿ ವೈ ತತಃ ॥ ೮೦ ॥

---

೭೫. ಈ ಲೋಕದಲ್ಲಿ ಜನೋಪಕಾರಕ್ಕಾಗಿ ತೋಟಗಳನ್ನೂ ನೆರಳಿನ ಮರಗಳನ್ನೂ ನೆಡಿಸುವವರು ಫಲಪುಷ್ಪಸಮೃದ್ಧವಾದ ಮಾರ್ಗದಲ್ಲಿಯೂ ಛತ್ರಗಳನ್ನು ದಾನಮಾಡಿದವರು ಶೀತಲವಾದ ಛಾಯೆಯಲ್ಲಿಯೂ ಪ್ರಯಾಣ ಮಾಡುವರು.

೭೬. ಪಾದುಕೆಗಳನ್ನು ಕೊಟ್ಟವನು ವಾಹನದಲ್ಲಿಯೂ, ವಾಪೀ ಕೂಪಾದಿ ಧರ್ಮಕಾರ್ಯಗಳನ್ನು ಮಾಡಿದವನು ಬಾಯಾರಿಕೆಯಿಲ್ಲದೆಯೂ, ವಾಹನಗಳನ್ನೂ ಶಯ್ಯಾಸನಾದಿಗಳನ್ನೂ ಕೊಟ್ಟವರು ವಿಮಾನಗಳಲ್ಲಿಯೂ ಯಮಲೋಕದ ಮಾರ್ಗವನ್ನು ಅತಿಕ್ರಮಿಸುವರು.

೭೭. ಇತರರನ್ನು ಭಕ್ಷ್ಯಭೋಜ್ಯಗಳಿಂದ ತೃಪ್ತಿಪಡಿಸಿದವರು ಭೋಜನವುಳ್ಳವರಾಗಿಯೂ, ದೀಪದಾನ ಮಾಡಿದವರು ತೇಜಸ್ಸಿನಿಂದಲೂ, ಗೋದಾನ ಮಾಡಿದವರು ಆ ವೈತರಣೀ ನದಿಯನ್ನು ಸುಖವಾಗಿಯೂ ದಾಟುವರು.

೭೮. ಸೂರ್ಯನನ್ನೂ ಮಹೇಶ್ವರನನ್ನೂ ಮಹಾವಿಷ್ಣುವನ್ನೂ ಯಾರು ಆಜನ್ಮಪ್ರಭೃತಿ ಧ್ಯಾನಿಸುವರೊ, ಅವರು ಯಮಭಟರಿಂದ ಪೂಜೆಗೊಂಡು ಪ್ರಯಾಣಮಾಡುವರು.

೭೯. ಭೂಮಿ, ಆಕಳು, ಚಿನ್ನ, ಎಳ್ಳು, ಕಬ್ಬಿಣ, ವಸ್ತ್ರ, ಲವಣ, ಸಪ್ತಧಾನ್ಯಗಳು, ಇವುಗಳನ್ನು ದಾನಮಾಡಲು ಆ ಮನುಷ್ಯನ ಪರಲೋಕಯಾತ್ರೆಯು ಸುಖಮಯವಾಗಿರುವುದು.

೮೦. ಇಂತು ಯಮನ ಸನ್ನಿಧಿಗೆ ಹೋದ ಪುಣ್ಯಕರ್ಮಿಗಳು ಮತ್ತು ಪಾಪಿಗಳನ್ನೆಲ್ಲ ಚಿತ್ರಗುಪ್ತನು ಯಮನಿಗೆ ನಿರೂಪಿಸಿ ಹೇಳುವನು.

ಪ್ರೇತಲೋಕೇ ಸ ವಸತಿ ತತಃ ಸಂವತ್ಸರಂ ನರಃ ।
ವತ್ಸರೇಣ ಚ ತೇನಾಸ್ಯ ಶರೀರಮಭಿಜಾಯತೇ ॥ ೮೧ ॥
ಸೋದಕುಂಭಮಥಾನ್ನಾದ್ಯಂ ಬಾಂಧವೈರ್ಯತ್ಪ್ರದೀಯತೇ ।
ದಿನೇದಿನೇ ಸ ತದ್ಭುಕ್ತ್ವಾ ತೇನ ವೃದ್ಧಿಂ ಪ್ರಯಾತಿ ಚ ॥ ೮೨ ॥
ಪೂರ್ವದತ್ತಮಥಾನ್ನಾದ್ಯಂ ಪ್ರಾಪ್ನೋತಿ ಸ್ವಯಮೇವ ಚ ।
ಸ್ವಯಂ ಯೇನ ನ ದತ್ತಂ ಚ ತಥಾ ದಾತಾ ನ ವಿದ್ಯತೇ ॥ ೮೩ ॥
ನ ಚಾಪ್ಯುದಕದಾತಾಸೌ ಕ್ಷುತ್ತೃಡ್ಭ್ಯಾಮತಿ ಪೀಡ್ಯತೇ ।
ಬಾಂಧವೈಸ್ತೂದಕಂ ದತ್ತಂ ನದೀಭೂತ್ವೋಪತಿಷ್ಠತಿ ॥ ೮೪ ॥
ಮಾಸಿ ಮಾಸಿ ಚ ಯಚ್ಛ್ರಾದ್ಧಂ ಷೋಡಶಶ್ರಾದ್ಧಪೂರ್ವಕಂ ।
ಅತ್ರ ನ ಕ್ರಿಯತೇ ಯಸ್ಯ ಪ್ರೇತತ್ವಾತ್ಸ ನ ಮುಚ್ಯತೇ ॥ ೮೫ ॥
ಮಾನುಷೇಣ ದಿನೇನೈವ ಪ್ರೇತಲೋಕೇ ದಿನಂ ಸ್ಮೃತಂ ।
ತಸ್ಮಾದ್ದಿನೇದಿನೇ ದೇಯಂ ಪ್ರೇತಾಯಾನ್ನಂ ಚ ವತ್ಸರಂ ॥ ೮೬ ॥
ತಂ ಚ ಸ್ಮಾಶಾನಿಕಾನಾಮ ಗಣಾ ಯಾಮ್ಯಾ ಭಯಾವಹಾಃ ।
ಶೀತವಾತಾತಪೋಪೇತಂ ತತ್ರ ರಕ್ಷಂತಿ ಪಾಪಿನಂ ।
ಯಥೇಹ ಬಂಧನೇ ಕಶ್ಚಿದ್ರಕ್ಷ್ಯತೇ ವಿಷಮೈರ್ನರೈಃ ॥ ೮೭ ॥

---

೮೧–೮೨. ಆ ಬಳಿಕ ಆ ಮಾನವನು ಒಂದು ವರ್ಷಕಾಲ ಪ್ರೇತಲೋಕದಲ್ಲಿ ವಾಸಮಾಡುವನು. ಆ ಸಂವತ್ಸರದಲ್ಲಿ ಅವನಿಗೆ ಹೊಸದಾದ ಶರೀರವು ಉಂಟಾಗುವುದು. ಮೃತನ ಬಾಂಧವರು ಉದಕುಂಭದೊಡನೆ ಕೊಡುವ ಅನ್ನಾದಿ ದ್ರವ್ಯಗಳನ್ನೇ ಪ್ರತಿದಿನದಲ್ಲಿಯೂ ಸೇವಿಸಿ ತನ್ನ ಶರೀರವನ್ನು ವೃದ್ಧಿಗೊಳಿಸುವನು.

೮೩–೮೪. ಅಲ್ಲದೆ ತಾನೂ ಜೀವಮಾನದಲ್ಲಿ ಕೊಟ್ಟ ಅನ್ನೋದಕಗಳನ್ನೂ ಪಡೆಯುವನು. ಯಾವನು ತಾನೇ ಭೋಜನದಾನವನ್ನು ಮಾಡಿಲ್ಲವೊ, ಯಾವನಿಗೆ ಆಹಾರವನ್ನು ಕೊಡುವ ಇತರರು ಇಲ್ಲದೆ, ಒಂದು ತೊಟ್ಟು ನೀರನ್ನು ಧರ್ಮೋದಕಗಳಿಂದ ಯಾವನು ಪಡೆಯುವುದಿಲ್ಲವೊ, ಅವನು ಹಸಿವು ಬಾಯಾರಿಕೆಗಳಿಂದ ಬಹಳ ಬಾಧೆಪಡುವನು. ಬಾಂಧವರು ಕೊಡುವ ಧರ್ಮೋದಕಗಳೇ ನದಿಗಳಾಗಿ ಪರಿಣಮಿಸುವುವು.

೮೫–೮೬. ಷೋಡಶಶ್ರಾದ್ಧಪೂರ್ವಕವಾಗಿ ಸತ್ತ ವರ್ಷದಲ್ಲಿ ಯಾವನಿಗೆ ಪ್ರತಿ ತಿಂಗಳಿನಲ್ಲಿಯೂ ಮಾಸಿಕ ಶ್ರಾದ್ಧಗಳು ನಡೆಯುವುದಿಲ್ಲವೊ, ಅವನಿಗೆ ಪ್ರೇತತ್ವದಿಂದ ಬಿಡುಗಡೆಯಾಗುವುದಿಲ್ಲ. ಪಿತೃಲೋಕದಲ್ಲಿಯೂ ಮನುಷ್ಯ ಲೋಕದ ಕಾಲಗಣನೆಯಿಂದಲೇ ದಿನಗಳು ಎಣಿಸಲ್ಪಡುವುವು. ಆದುದರಿಂದ ಪ್ರೇತಕ್ಕೆ ಒಂದು ವರ್ಷದವರೆಗೂ ಪ್ರತಿದಿನವೂ ಅನ್ನವನ್ನು ಕೊಡಬೇಕು.

೮೭. ಈ ಲೋಕದಲ್ಲಿ ಹೇಗೆ ಕ್ರೂರ ಮನುಷ್ಯರಿಗೆ ಸಿಕ್ಕಿ ಮನುಷ್ಯನು

**ಪ್ರೇತಪಿಂಡಾ ನ ದೀಯಂತೇ ಷೋಡಶಶ್ರಾದ್ಧಪೂರ್ವಕಾಃ ।**
**ಯಸ್ಯ ತಸ್ಯ ನ ಮೋಕ್ಷೋಽಸ್ತಿ ಪ್ರೇತತ್ವಾದ್ವೈ ಯುಗೈರಪಿ ॥ ೮೮ ॥**
**ತತಃ ಸಪಿಂಡೀಕರಣೇ ಬಾಂಧವೈಃ ಸುಕೃತೇ ನರಃ ।**
**ಪೂರ್ಣೇ ಸಂವತ್ಸರೇ ದೇಹಂ ಸಂಪೂರ್ಣಂ ಪ್ರತಿಪದ್ಯತೇ ॥ ೮೯ ॥**
**ಪಾಪಾತ್ಮಾ ಘೋರರೂಪಂ ತು ಧಾರ್ಮಿಕೋ ದಿವ್ಯಮುತ್ತಮಂ ।**
**ತತಃ ಸ ನರಕಂ ಯಾತಿ ಸ್ವರ್ಗಂ ವಾ ಸ್ವೇನ ಕರ್ಮಣಾ ॥ ೯೦ ॥**
**ರೌರವಾದ್ಯಾಶ್ಚ ನರಕಾಃ ಪಾತಾಲತಲಸಂಸ್ಥಿತಾಃ ।**
**ಸುರಾದ್ಯಾಃ ಸತ್ಯಪರ್ಯಂತಾಃ ಸ್ವರ್ಲೋಕಸ್ಯೋರ್ಧ್ವಮಾಶ್ರಿತಾಃ॥ ೯೧ ॥**
**ಇತಿಹಾಸಪುರಾಣೇಷು ವೇದಸ್ಮೃತಿಷು ಯಚ್ಛ್ರುತಂ ॥ ೯೨ ॥**
**ಪುಣ್ಯಂ ತೇನ ಭವೇತ್ಸ್ವರ್ಗೋ ನರಕಸ್ತದ್ವಿಪರ್ಯಯಾತ್ ।**
**ತತ್ರಾಪಿ ಕಾಲವಸತಿಃ ಕರ್ಮಣಾಮನುರೂಪತಃ ॥ ೯೩ ॥**

---

ಬಂಧನದಲ್ಲಿ ಸಂಕಟಪಡುವನೊ, ಹಾಗೆಯೇ, ಚಳಿ, ಗಾಳಿ ಮತ್ತು ಬಿಸಿಲು ಗಳಿಂದ ಬಳಲಿದ ಪಾಪಿಯನ್ನು ಸ್ಮಾಶಾನಿಕರೆಂಬ ಹೆಸರುಳ್ಳ ಭಯಂಕರರಾದ ಯಮಭಟರು ನಿರ್ಬಂಧದಲ್ಲಿಟ್ಟು ಕಾಯುತ್ತಿರುವರು.

೮೮. ಯಾವನಿಗೆ ಷೋಡಶಶ್ರಾದ್ಧಗಳಿಂದ ಕೂಡಿದ ಪ್ರೇತಪಿಂಡಗಳು ಕೊಡಲ್ಪಡುವುದಿಲ್ಲವೊ, ಅವನಿಗೆ ಅನೇಕ ಯುಗಗಳು ಕಳೆದರೂ ಪ್ರೇತತ್ವದ ವಿಮೋಚನೆಯಾಗುವುದಿಲ್ಲ.

೮೯–೯೧. ಮೃತನಾದ ಮನುಷ್ಯನ ಬಂಧುಗಳು ಸಪಿಂಡೀಕರಣವನ್ನು ಮಾಡುವುದರಿಂದ ಅವನಿಗೆ ಒಂದು ವರ್ಷವು ಪೂರ್ತಿಯಾದ ಮೇಲೆ ಸಂಪೂರ್ಣ ವಾದ ದೇಹವು ಲಭಿಸುವುದು. ಪಾಪಕರ್ಮಗಳನ್ನು ಮಾಡಿರುವವನಿಗೆ ಭಯಂಕರ ರೂಪವೂ ಪುಣ್ಯಕರ್ಮಗಳನ್ನು ಮಾಡಿದವನಿಗೆ ಉತ್ತಮವಾದ ಸೌಮ್ಯ ಪುಣ್ಯ ಲೋಕಗಳನ್ನೂ, ಭೋಗಭಾಗ್ಯಗಳನ್ನೂ ಅನುಭವಿಸಲು ತಕ್ಕುದಾದ ದೇಹವೂ ಉಂಟಾಗುವುವು. ಬಳಿಕ ಜೀವನು ತನ್ನ ಕರ್ಮಾನುಸಾರವಾಗಿ ನರಕವನ್ನೋ ಸ್ವರ್ಗವನ್ನೋ ಕುರಿತು ಹೊರಡುವನು. ರೌರವಾದಿ ನರಕಗಳು ಪಾತಾಳಲೋಕದ ಕೆಳಗೆ ನೆಲಸಿರುವುವು. ದೇವತೆಗಳಿರುವ ಸತ್ಯಲೋಕವೇ ಮೊದಲಾದುವುಗಳು ಸುವರ್ಲೋಕದ ಮೇಲಿರುವುವು.

೯೨–೯೩. ಇತಿಹಾಸಗಳು, ಪುರಾಣಗಳು, ವೇದಗಳು ಮತ್ತು ಸ್ಮೃತಿಗಳಲ್ಲಿ ಹೇಳಲ್ಪಟ್ಟಿರುವ ಪುಣ್ಯಕರ್ಮಗಳನ್ನು ಆಚರಿಸುವುದರಿಂದ ಸ್ವರ್ಗಲೋಕವೂ, ತದ್ವಿಪರೀತವಾದ ಪಾಪಕರ್ಮಗಳಿಂದ ನರಕಲೋಕವೂ ಪ್ರಾಪ್ತವಾಗುವುವು. ಅದರಲ್ಲಿಯೂ ದೇಶ, ಕಾಲ, ಕರ್ಮಗಳನ್ನನುಸರಿಸಿ ಪುಣ್ಯಾಪುಣ್ಯ ಫಲವೈಪರೀತ್ಯ ವಾಗುವುದುಂಟು.

ಅರ್ವಾಕ್ಸಪಿಂಡೀಕರಣಂ ಯಸ್ಯ ವರ್ಷಾಚ್ಚ ವಾ ಕೃತಂ ।
ಪ್ರೇತತ್ವಮಪಿ ತಸ್ಯಾಪಿ ಪ್ರೋಕ್ತಂ ಸಂವತ್ಸರಂ ಧ್ರುವಂ ॥ ೯೪ ॥
ಯೈರಿಷ್ಟಂ ಚ ತ್ರಿಭಿರ್ಮೇಧೈರರ್ಚಿತಂ ವಾ ಸುರತ್ರಯಂ ।
ಪ್ರೇತಲೋಕಂ ನ ತೇ ಯಾಂತಿ ತಥಾ ಯೇ ಸಮರೇ ಹತಾಃ ॥ ೯೫ ॥

ಶುದ್ಧೇನ ಪುಣ್ಯೇನ ದಿವಂ ಚ ಶುದ್ಧಾಂ
ಪಾಪೇನ ಶುದ್ಧೇನ ತಥಾ ತಮೋಽಂಧಂ ।
ಮಿಶ್ರೇಣ ಸ್ವರ್ಗಂ ನರಕಂ ಚ ಯಾತಿ
ದೇಹಸ್ತಥೈವಾಸ್ಯ ಭವೇಚ್ಚ ತಾದೃಕ್ ॥ ೯೬ ॥
ಪ್ರಶ್ನತ್ರಯಂಚೇತಿ ತವ ಪ್ರಣೀತ
ಮುತ್ಪತ್ತಿಮೃತ್ಯೂ ಪರಲೋಕವಾಸಃ ।
ಯಥಾ ಗುರುರ್ಮೇ ಸಮುದಾಜಹಾರ
ಕಿಂ ಭೂಯ ಇಚ್ಛಸ್ಯುತ ತದ್ವದಾಮಿ ॥ ೯೭ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿ ಸಾಹಸ್ರ್ಯಾಂ ಸಂಹಿತಾಯಾಂ
ಪ್ರಥಮೇ ಮಾಹೇಶ್ವರಖಂಡೇ ಕೌಮಾರಿಕಾಖಂಡೇ
"ಆದಿತ್ಯ ಕಮಠ ಸಂವಾದೇ ಜೀವಸ್ಯ ಪಾರಲೌಕಿಕಗತ್ಯಾದಿವರ್ಣನಂ" ನಾಮ
ಪಂಚಾಶತ್ತಮೋಽಧ್ಯಾಯಃ

---

೯೪. ಯಾವ ಪ್ರೇತಕ್ಕೆ ವರ್ಷಕ್ಕಿಂತ ಮುಂಚೆಯೇ ಸಪಿಂಡೀಕರಣವು ನಡೆಯುವುದೊ, ಅವನಿಗೂ ಸಹ ವರ್ಷದವರೆಗೂ ಪ್ರೇತತ್ವವು ತಪ್ಪುವುದಿಲ್ಲವೆಂದು ಹೇಳಲ್ಪಟ್ಟಿರುವುದು.

೯೫. ಯಾರು ದೇವಯಜ್ಞ, ಪಿತೃಯಜ್ಞ ಮತ್ತು ಋಷಿಯಜ್ಞಗಳನ್ನು ಮಾಡುವರೊ, ಯಾರು ತ್ರಿಮೂರ್ತಿಗಳನ್ನು ಪೂಜಿಸುವರೊ, ಯಾರು ಯುದ್ಧದಲ್ಲಿ ಕಾದಾಡಿ ಸಾಯುವರೊ, ಅವರು ಮಾತ್ರ ಪ್ರೇತಲೋಕಕ್ಕೆ ಹೋಗುವುದಿಲ್ಲ.

೯೬. ಕೇವಲ ಪುಣ್ಯಕರ್ಮದಿಂದ ಸ್ವರ್ಗವನ್ನೂ, ಕೇವಲ ಪಾಪಕರ್ಮದಿಂದ ಅಂಧತಮಸ್ಸನಿಂದ ಕೂಡಿದ ನರಕವನ್ನೂ, ಮಿಶ್ರಕರ್ಮಗಳಿಂದ ಸ್ವರ್ಗನರಕಗಳೆರಡನ್ನೂ ಜೀವನು ಹೊಂದುವನು. ಪುನಃ ಆ ಕರ್ಮಗಳ ಫಲಗಳನ್ನು ಅನುಭವಿಸುವುದಕ್ಕೆ ಅರ್ಹವಾದ ಶರೀರವನ್ನೇ ಪಡೆಯುವನು.

೯೭. ಎಲೈ ಬ್ರಾಹ್ಮಣೋತ್ತಮನೆ! 'ನೀನು ಕೇಳಿದ ಜೀವನ ಹುಟ್ಟು, ಸಾವು ಮತ್ತು ಪರಲೋಕವಾಸಗಳಿಗೆ ಸಂಬಂಧಪಟ್ಟ ಮೂರು ಪ್ರಶ್ನೆಗಳಿಗೂ ಸಮಂಜಸವಾದ ಉತ್ತರವನ್ನು ನನ್ನ ಗುರುಗಳು ತಿಳಿಸಿದಂತೆ ನಿರೂಪಿಸಿರುವೆನು. ಮತ್ತೆ ಏನನ್ನು ಕೇಳಿದರೂ ಹೇಳಲು ಸಿದ್ಧನಾಗಿರುವೆನು.''

ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಎರಡನೆಯ ಕೌಮಾರಿಕಾಖಂಡದಲ್ಲಿ
"ಆದಿತ್ಯ ಕಮಠ ಸಂವಾದ — ಜೀವನ ಪಾರಲೌಕಿಕಗತ್ಯಾದಿವರ್ಣನ"ವೆಂಬ
ಐವತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥೈಕಪಂಚಾಶತ್ತಮೋಽಧ್ಯಾಯಃ

## ಜಯಾದಿತ್ಯಮಾಹಾತ್ಮ್ಯವರ್ಣನಂ

ಅತಿಥಿರುವಾಚ :—

**ಯದೇತತ್ಪರಲೋಕಸ್ಯ ಸ್ವರೂಪಂ ವ್ಯಾಹೃತಂ ತ್ವಯಾ ।**
**ಆಗಮಂ ಸಮುಪಾಶ್ರಿತ್ಯ ತತ್ತಥೈವ ನ ಸಂಶಯಃ ॥ ೧ ॥**
**ಕಿಂ ತ್ವತ್ರ ನಾಸ್ತಿಕಾಃ ಪಾಪಾಃ ಸಂದಿಹ್ಯಂತೇಽಲ್ಪಚೇತನಾಃ ।**
**ತೇಷಾಂ ನಿಸ್ಸಂಶಯಕೃತೇ ವದ ಕರ್ಮ ಫಲಂ ಹಿ ಯತ್ ॥ ೨ ॥**
**ಇಹೈವ ಕಸ್ಯ ಕಸ್ಯೈವ ಕರ್ಮಣಃ ಪಾಪಕಸ್ಯ ಚ ।**
**ಪ್ರಭಾವಾತ್ಕೀದೃಶೋ ಜಾಯೇತ್ಕಮಠೈತದ್ವದಾಸ್ತಿಚೇತ್ ॥ ೩ ॥**

ಕಮಠ ಉವಾಚ :—

**ಸರ್ವಮೇತತ್ಪ್ರವಕ್ಷ್ಯಾಮಿ ಸ್ಥಿರೋ ಭೂತ್ವಾ ಶೃಣುಷ್ವ ತತ್ ।**
**ಯಥಾ ಮಮಗುರುಃ ಪ್ರಾಹ ಯನ್ಮೇ ಚೇತಸಿ ಸಂಸ್ಥಿತಂ ॥ ೪ ॥**
**ಬ್ರಹ್ಮಹಾ ಕ್ಷಯರೋಗೀ ಸ್ಯಾತ್ಸುರಾಪಃ ಶ್ಯಾವದಂತಕಃ ।**
**ಸುವರ್ಣಚೋರಃ ಕುನಖೀ ದುಶ್ಚರ್ಮಾ ಗುರುತಲ್ಪಗಃ ।**
**ಸಂಸರ್ಗೀ ಸರ್ವರೋಗೀ ಸ್ಯಾತ್ಪಂಚ ಪಾತಕಿನಸ್ತ್ವಮಿ ॥ ೫ ॥**

---

## ಕನ್ನಡದ ಅನುವಾದ

### ಜಯಾದಿತ್ಯಮಾಹಾತ್ಮ್ಯವರ್ಣನ

೧. ಅತಿಥಿಯು ಹೇಳುತ್ತಾನೆ:—"ನೀನು ಶಾಸ್ತ್ರಗಳನ್ನನುಸರಿಸಿ ಪರಲೋಕದ ಸ್ವರೂಪವನ್ನು ಹೇಗೆ ತಿಳಿಸಿರುವೆಯೊ, ಅದು ಯಥಾರ್ಥವೆಂಬುದರಲ್ಲಿ ಸಂಶಯವಿಲ್ಲವು.

೨. ಆದರೆ ಈ ವಿಷಯದಲ್ಲಿ ಅಲ್ಪಬುದ್ಧಿಗಳಾದ ನಾಸ್ತಿಕರು ಸಂದೇಹಗೊಳ್ಳುವರು. ಆದುದರಿಂದ ಯಾವ ಕರ್ಮಗಳಿಗೆ ಯಾವ ಫಲಗಳು ಪ್ರಾಪ್ತವಾಗುವುವೆಂಬುದನ್ನು ಹೇಳಿ ಅಂತಹವರಿಗೆ ನಿಸ್ಸಂಶಯವಾಗುವಂತೆ ಮಾಡು.

೩. ಎಲೈ ಕಮಠನೆ! ಮಾನವನು ಯಾವ ಯಾವ ಪಾಪಕೃತ್ಯದ ಫಲವಾಗಿ ಈ ಲೋಕದಲ್ಲಿ ಯಾವ ವಿಧವಾಗಿ ಹುಟ್ಟುವನೆಂಬ ನಿಯಮವೇನಾದರೂ ಇದ್ದಲ್ಲಿ ಅದನ್ನು ವಿಸ್ತಾರವಾಗಿ ತಿಳಿಸು."

೪. ಕಮಠನು ಹೇಳುತ್ತಾನೆ:—"ನನ್ನ ಗುರುಗಳು ನಿರೂಪಿಸಿ ನನ್ನ ಮನಸ್ಸಿನಲ್ಲಿ ದೃಢವಾಗಿ ನಿಂತಿರುವುದೆಲ್ಲವನ್ನೂ ನಿನಗೆ ತಿಳಿಸುವೆನು. ಏಕಾಗ್ರಚಿತ್ತನಾಗಿ ಕೇಳುವವನಾಗು.

೫. ಬ್ರಾಹ್ಮಣರನ್ನು ಕೊಂದವನು ಕ್ಷಯರೋಗಿಯೂ, ಮದ್ಯವನ್ನು ಕುಡಿಯುವವನು ಉಬ್ಬಿದ ತುಟಿಗಳನ್ನು ಮುಟ್ಟುವ ಹಲ್ಲುಗಳುಳ್ಳವನೂ, ಪರರ

ನಿಂದಾಮಾಕರ್ಣ್ಯ ಸಾಧೂನಾಂ ಬಧಿರಃ ಸಂಪ್ರಜಾಯತೇ ॥ ೬ ॥
ಸ್ವಯಂ ಪ್ರಕೀರ್ತಯೇಚ್ಚಾಪಿ ಮೂಕಃ ಪಾಪೋಽಭಿಜಾಯತೇ ।
ಆಜ್ಞಾಲೋಪೀ ಗುರೂಣಾಂ ಚ ಅಪಸ್ಮಾರೀ ಭವೇನ್ನರಃ ॥ ೭ ॥
ಅವಜ್ಞಾಕಾರಕಸ್ತೇಷಾಂ ಕೃಮಿರೇವಾಭಿಜಾಯತೇ ।
ಉಪೇಕ್ಷತಃ ಪೂಜ್ಯಕಾರ್ಯಂ ದುಷ್ಟಬುದ್ಧಿಶ್ಚ ಜಾಯತೇ ॥ ೮ ॥
ಚೌರ್ಯಾಯ ಸಾಧುದ್ರವ್ಯಾಣಾಂ ದದ್ಯಾದ್ಯಾವತ್ಪದಾನಿ ಚ ।
ತಾವದ್ವರ್ಷಾಣಿ ಪಂಗುತ್ವಂ ಸ ಪ್ರಾಪ್ನೋತಿ ನರಾಧಮಃ ॥ ೯ ॥
ದತ್ತ್ವಾ ಹರತಿ ತದ್ಭೂಯೋ ಜಾಯತೇ ಕೃಕಲಾಸಕಃ ।
ಕುಪಿತಾನಪ್ರಸಾದ್ಯೈವ ಪೂಜ್ಯಾನ್ಶ್ಯಚ್ಛೀರ್ಷರೋಗವಾನ್ ॥ ೧೦ ॥
ರಜಸ್ವಲಾಮಭಿಗಚ್ಛಂಶ್ಚ ಚಂಡಾಲಃ ಸಂಪ್ರಜಾಯತೇ ।
ವಸ್ತ್ರಾಪಹಾರೀ ಚಿತ್ರೀ ಸ್ಯಾತ್ಕೃಷ್ಣಕುಷ್ಠೀ ತಥಾಗ್ನಿದಃ ॥ ೧೧ ॥

---

ಚಿನ್ನವನ್ನು ಕದಿಯುವವನು ವಕ್ರಗಳಾದ ಉಗುರುಗಳುಳ್ಳವನೂ, ಗುರುಪತ್ನೀ ಗಮನ ಮಾಡಿದವನು ವಿವರ್ಣವಾದ ಚರ್ಮವುಳ್ಳವನೂ ಆಗಿ ಈ ಲೋಕದಲ್ಲಿ ಜನಿಸುವರು. ಇವರ ಸ್ನೇಹವನ್ನು ಮಾಡಿದವನು ಸಕಲ ರೋಗಗಳಿಂದಲೂ ಪೀಡಿತನಾಗುವನು. ಈ ಐದು ಜನರೂ ಮಹಾಪಾತಕಿಗಳೆನಿಸುವರು.

೬–೭. ಸಾಧು ಸತ್ಪುರುಷರ ನಿಂದೆಯನ್ನು ಕೇಳಿದವನು ಕಿವುಡನಾಗಿ ಹುಟ್ಟುವನು. ತಾನೇ ಅವರನ್ನು ನಿಂದಿಸಿದರೆ ಅಂತಹ ಪಾಪಿಯು ಮೂಗನಾಗಿ ಜನಿಸುವನು. ಗುರುಗಳ ಆಜ್ಞೆಯನ್ನು ಮೀರಿದ ಮನುಷ್ಯನು ಅಪಸ್ಮಾರದಿಂದ ನರಳುವನು.

೮–೯. ಗುರು ಹಿರಿಯರಿಗೆ ಮರ್ಯಾದೆಯನ್ನು ಮಾಡದೆ ಅಸಡ್ಡೆಯಿಂದ ಕಾಣುವವನು ಕ್ರಿಮಿಯಾಗಿ ಜನಿಸುವನು. ಶ್ರದ್ಧೆಯಿಂದ ಮಾಡಬೇಕಾದ ಕಾರ್ಯಗಳಲ್ಲಿ ಉಪೇಕ್ಷೆಯನ್ನು ತೋರಿಸುವವನು ದುಷ್ಟಬುದ್ಧಿಯಾಗಿ ಜನಿಸುವನು. ಸಾಧುಗಳ ದ್ರವ್ಯವನ್ನು ಅಪಹರಿಸಲು ಮನುಷ್ಯನು ಎಷ್ಟು ಹೆಜ್ಜೆಗಳನ್ನಿಡುವನೊ, ಅಷ್ಟು ವರ್ಷಗಳವರೆಗೂ ಆ ಧೂರ್ತವಾಧಮನು ಕುಂಟನಾಗುವನು.

೧೦–೧೧. ಯಾವನು ದಾನಮಾಡಿದುದನ್ನು ಮತ್ತೆ ಕಿತ್ತುಕೊಳ್ಳುವನೊ ಅವನು ಹೆಂಟೇಗೊದ್ದದ ಜನ್ಮವನ್ನು ಹೊಂದುವನು. ದೊಡ್ಡವರು ಕೋಪಗೊಂಡಿರಲು ಅವರನ್ನು ಸಮಾಧಾನಗೊಳಿಸದಿದ್ದರೆ ಶಿರೋರೋಗದಿಂದ ನರಳುವನು. ಪುಷ್ಪವತಿಯಾದ ಸ್ತ್ರೀಯರನ್ನು ಸೇರಲು ಚಂಡಾಲರಾಗಿಯೂ, ವಸ್ತ್ರಗಳನ್ನು ಕದ್ದವರು ಶ್ವೇತರೋಗಿಗಳೂ, ಇತರರ ಮನೆಗಳಿಗೆ ಬೆಂಕಿಯನ್ನಿಡಲು ಕಪ್ಪು ಕುಷ್ಠರೋಗವುಳ್ಳವರೂ ಆಗುವರು.

ದದ್ರುರೋಗೀ ರೂಪ್ಯಹಾರೀ ಸ್ಯಾತ್ಕೂಟಸಾಕ್ಷೀ ಮುಖಾರುಜಃ ।
ಪರದಾರಾಂಶ್ಚ ಕಾಮೇನ ದೃಷ್ಟ್ವಾ ಸ್ಯಾದಕ್ಷಿರೋಗವಾನ್ ॥ ೧೨ ॥
ಪ್ರತಿಜ್ಞಾಯಾಪ್ರಯಚ್ಛನ್ಯೋ ಹ್ಯಲ್ಪಾಯುರ್ಜಾಯತೇ ನರಃ ।
ವಿಪ್ರವೃತ್ತ್ಯಪಹಾರೀ ಸ್ಯಾದಜೀರ್ಣೀ ಸರ್ವದಾಧಮಃ ॥ ೧೩ ॥
ನೈಷ್ಠಿಕಾನ್ನಾಶನಾದ್ಭೂಯೋ ನಿವೃತ್ತೋ ರೋಗವಾನ್ಸದಾ ।
ಪತ್ನೀ ಬಹುತ್ವೇ ತ್ವೇಕಸ್ಯಾಂ ರೇತೋಮೋಕ್ಷೀ ಕ್ಷಯೀ ಭವೇತ್ ॥
ಸ್ವಾಮಿನಾ ಧರ್ಮಯುಕ್ತೋ ಯಸ್ತ್ವನ್ಯಾಯ್ಯೇನ ಸಮಾಚರೇತ್ ।
ಸ್ವಯಂ ವಾ ಭಕ್ಷಯೇದ್ದ್ರವ್ಯಂ ಸ ಮೂಢಃ ಸ್ಯಾಜ್ಜಲೋದರೀ ॥ ೧೫ ॥
ದುರ್ಬಲಂ ಪೀಡ್ಯಮಾನಂ ಯೋ ಬಲವಾನ್ಸಮುಪೇಕ್ಷತೇ ।
ಅಂಗಹೀನಃ ಸ ಚ ಭವೇದನ್ನಹೃತ್ಕ್ಷುಧಿತೋ ಭವೇತ್ ॥ ೧೬ ॥
ವ್ಯವಹಾರೇ ಪಕ್ಷಪಾತೀ ಜಿಹ್ವಾರೋಗೀ ಭವೇನ್ನರಃ ।
ಧರ್ಮಪ್ರವೃತ್ತಿಂ ಸಂಚಾರ್ಯ ಪತ್ನ್ಯಾದೀಷ್ಟವಿಯೋಗಕಂ ॥ ೧೭ ॥

---

೧೨. ಬೆಳ್ಳಿಯನ್ನು ಕದ್ದವನು ದದ್ರುರರೋಗಿಯೂ, ಸುಳ್ಳುಸಾಕ್ಷ್ಯ ವನ್ನು ಹೇಳುವವನು ಮುಖರೋಗಿಯೂ, ಪರಸ್ತ್ರೀಯರನ್ನು ಕಾಮದೃಷ್ಟಿ ಯಿಂದ ನೋಡಿದವನು ನೇತ್ರರೋಗಿಯೂ ಆಗಿ ಹುಟ್ಟುವರು.

೧೩. ಮಾತನ್ನು ಕೊಟ್ಟು, ಬಳಿಕ ದಾನಾದಿಗಳನ್ನು ಕೊಡದವನು ಸ್ವಲ್ಪ ವಾದ ಆಯುಸ್ಸುಳ್ಳವನಾಗುವನು. ಬ್ರಾಹ್ಮಣರ ಜೀವನೋಪಾಯವನ್ನು ಅಪಹರಿಸುವ ಅಧಮನು ಯಾವಾಗಲೂ ಅಜೀರ್ಣದಿಂದ ಸಂಕಟಪಡುವನು.

೧೪. ನೈಷ್ಠಿಕವಾದ ಪಂಚಮಹಾಯಜ್ಞಶೇಷವಾದ ಅನ್ನವನ್ನು ಸೇವಿಸ ದಿದ್ದರೆ ಯಾವಾಗಲೂ ರೋಗಿಯಾಗಿರುವನು. ಅನೇಕ ಹೆಂಡತಿಯರಿರಲು ಒಬ್ಬಳಲ್ಲಿ ಮಾತ್ರ ಸಂಭೋಗಿಸುವವನು ಕ್ಷಯವನ್ನು ಅನುಭವಿಸುವನು.

೧೫–೧೬. ತಾನು ಧರ್ಮಯುಕ್ತನಾದರೂ ಯಾವನು ಅನ್ಯಾಯಗಳನ್ನು ಮಾಡುವ ಸ್ವಾಮಿಯನ್ನು ಸೇವಿಸುವನೊ, ಮತ್ತು ಸ್ವಾಮಿಯ ದ್ರವ್ಯವನ್ನು ತಾನೇ ತಿಂದುಹಾಕುವನೊ, ಅಂತಹ ಮೂಢನಿಗೆ ಜಲೋದರವು ಸಂಭವಿಸು ವುದು. ಬಲಹೀನನಾದವನನ್ನು ಇತರರು ಹಿಂಸಿಸುತ್ತಿರಲು ಯಾವನು ಶಕ್ತನಾದರೂ ಉಪೇಕ್ಷೆಮಾಡುವನೊ, ಅವನಿಗೆ ಅಂಗಹೀನತೆಯುಂಟಾಗು ವುದು. ಇತರರ ಅನ್ನವನ್ನು ಕದ್ದವನು ಹಸಿವಿನಿಂದ ಬಳಲುವನು.

೧೭. ಇಬ್ಬರ ವ್ಯವಹಾರದ ಇತ್ಯರ್ಥವನ್ನು ಮಾಡುವಾಗ ಯಾವನು ಪಕ್ಷ ಪಾತದಿಂದ ವರ್ತಿಸುವನೊ, ಅವನಿಗೆ ಜಿಹ್ವಾರೋಗವು ಬರುವುದು. ಧರ್ಮ ಪ್ರವೃತ್ತಿಯನ್ನು ಅತಿಕ್ರಮಿಸಲು ಪತ್ನೀ ಪುತ್ರರೇ ಮೊದಲಾದ ಆಪ್ತೇಷ್ಟರನ್ನು ಕಳೆದುಕೊಳ್ಳುವನು.

ಸ್ವಯಂ ಪಾಕಾಗ್ರಭೋಜೀ ಯೋ ಗಲರೋಗಮವಾಪ್ನುಯಾತ್ ।
ಪಂಚಯಜ್ಞಾನಕೃತ್ವೈವ ಭುಂಜಾನೋ ಗ್ರಾಮಶೂಕರಃ ॥ ೧೮ ॥
ಪರ್ವಮೈಥುನಕೃನ್ಮೇಹೀ ಪರಿತ್ಯಜ್ಯ ಸ್ವಗೇಹಿನೀಂ ।
ವೇಶ್ಯಾದಿರಕ್ತೋ ಮೂಢಾತ್ಮಾ ಖಲ್ವಾಟೋ ಜಾಯತೇ ನರಃ ॥ ೧೯ ॥
ಪರಿಕ್ಷೀಣಾನ್ಮಿತ್ರಬಂಧೂನ್ಸ್ವಾಮಿನಂ ದಯಿತಾನುಗಾನ್ ।
ಅವಮನ್ಯ ನಿವೃತ್ತಾತ್ಮಾ ಕ್ಲಿಷ್ಟವೃತ್ತಿಃ ಸದಾ ಭವೇತ್ ॥ ೨೦ ॥
ಛದ್ಮನೋಪಚರೇದ್ಯಸ್ತು ಪಿತರೌ ಸ್ವಾಮಿನಂ ಗುರೂನ್ ।
ಪ್ರಾಪ್ತಸ್ಯಾರ್ಥಸ್ಯಾತಿಕಷ್ಟಾತ್ಪರಿಭ್ರಂಶೋಽರ್ಥಜೋ ಭವೇತ್ ॥ ೨೧ ॥
ವಿಸ್ರಬ್ಧಸ್ಯಾಪಹಾರೀ ತು ದುಃಖಾನಾಂ ಭಾಜನಂ ಭವೇತ್ ।
ಧಾರ್ಮಿಕೇ ಕ್ಷುದ್ರಕಾರೀ ಯೋ ನರಃ ಸ ವಾಮನೋ ಭವೇತ್ ॥ ೨೨ ॥
ದುರ್ಬಲವೃಷವಾಹೀ ಯಃ ಕಟಿಲೂತೀ ಭವೇತ್ಸ ಚ ॥ ೨೩ ॥
ಜಾತ್ಯಂಧಶ್ಚಾಪಿ ಯೋ ಗೋಘ್ನೋ ನಿಷ್ಪಶುರ್ದುಃಖಕೃದ್ಗವಾಂ ।
ನಿರ್ದಯೋ ಗೋಷು ಘಾತಾದ್ಯೈಃ ಸದಾ ಸೋಽಧ್ವಸು ಕಷ್ಟಗಃ ॥ ೨೪ ॥

---

೧೮–೨೦. ಪಕ್ವವಾದ ಭೋಜನವನ್ನು ತಾನೇ ಮೊದಲು ಸೇವಿಸಲು ಗಂಟಲುರೋಗವನ್ನು ಹೊಂದುವನು. ಪಂಚಮಹಾಯಜ್ಞಗಳನ್ನು ಮಾಡದೆ ಊಟಮಾಡಲು ನಾಯಿಯಾಗಿ ಹುಟ್ಟುವನು. ಪರ್ವಕಾಲಗಳಲ್ಲಿ ಸ್ತ್ರೀಸಂಗವನ್ನು ಮಾಡುವವನಿಗೆ ಮೇಹರೋಗವು ಸಂಭವಿಸುವುದು. ತನ್ನ ಮನೆಯಲ್ಲಿರುವ ಹೆಂಡತಿಯನ್ನು ಬಿಟ್ಟು ವೇಶ್ಯೆಯರಲ್ಲಿ ಅನುರಕ್ತನಾದವನು ಮೂಢನೂ ಬೋಳು ತಲೆಯುಳ್ಳವನೂ ಆಗುವನು. ಕಷ್ಟದಶೆಯಲ್ಲಿರುವ ಮಿತ್ರರು, ಬಂಧುಗಳು, ಯಜಮಾನನು, ಆಪ್ತರು, ಅನುಯಾಯಿಗಳು ಮುಂತಾದವರನ್ನು ಕಡೆಗಂಡು ಕೈಬಿಡುವವನು ಯಾವಾಗಲೂ ಕಷ್ಟದ ಜೀವನವನ್ನು ಸಾಗಿಸುವನು.

೨೧. ಯಾವನು ತಂದೆತಾಯಿಗಳನ್ನೂ, ಯಜಮಾನನನ್ನೂ, ಗುರುಗಳನ್ನೂ ಲೋಕರಂಜನೆಗಾಗಿ ಸೇವಿಸುವನೊ, ಅವನು ಬಹಳಕಷ್ಟಪಟ್ಟು ಸಂಪಾದಿಸಿದ ಹಣದ ವಿಯೋಗವನ್ನು ಪಡೆಯುವನು.

೨೨–೨೪. ನಂಬಿದವನ ಸ್ವತ್ತನ್ನಪಹರಿಸುವವನು ಅನೇಕ ದುಃಖಗಳಿಗೆ ಭಾಗಿಯಾಗುವನು. ಧರ್ಮಕಾರ್ಯವನ್ನು ಮಾಡುವವನಲ್ಲಿ ಯಾವನು ಕ್ಷುದ್ರನಾಗಿ ಅಡ್ಡಬರುವನೋ, ಅವನು ಕುಳ್ಳನಾಗಿ ಹುಟ್ಟುವನು. ಮುದಿಯೂ, ಬಲಹೀನವೂ ಆದ ಎತ್ತಿನ ಮೇಲೆ ಭಾರವನ್ನು ಹೊರಿಸುವವನು ಕಟಿಲೂತಿ (ಗೂನ) ಯಾಗುವನು. ಗೋವಧೆಯನ್ನು ಮಾಡಿದವನು ಹುಟ್ಟುಕುರುಡನೂ, ಗೋವುಗಳನ್ನು ಹಿಂಸಿಸುವವನು ಪಶುಹೀನನೂ, ಅವುಗಳನ್ನು ದಯೆಯಿಲ್ಲದೆ ಹೊಡೆಯುವವನು ಮಾರ್ಗದಲ್ಲಿ ಬಳಲುವವನೂ ಆಗುವರು.

ನಿಸ್ತೇಜಕಃ ಸಭಾಯಾಂ ಯೋ ಗಲಗಂಡೀ ಸ ಜಾಯತೇ ।
ಸದಾ ಕ್ರೋಧೀ ಚ ಚಂಡಾಲಃ ಪೂತಿವಕ್ತ್ರಶ್ಚ ಸೂಚಕಃ ॥ ೨೫ ॥
ಅಜವಿಕ್ರಯಕೃದ್ವ್ಯಾಧಃ ಕುಂಡಾಶೀ ಭೃತಕೋ ಭವೇತ್ ।
ನಾಸ್ತಿಕಸ್ತಿಲಪಿಂಡೀ ಸ್ಯಾದಶ್ರದ್ಧೋ ಗೀತಜೀವನಃ ॥ ೨೬ ॥
ಅಭಕ್ಷ್ಯಾದೋ ಗಂಡಮಾಲೀ ಸ್ತ್ರೀಖಾದೀ ಚಾಸುತಸ್ಯ ಕೃತ್ ।
ಅನ್ಯಾಯತೋ ಜ್ಞಾನಗ್ರಾಹೀ ಮೂರ್ಖೋ ಭವತಿ ಮಾನವಃ ॥ ೨೭ ॥
ಶಾಸ್ತ್ರಚೌರಃ ಕೇಕರಾಕ್ಷಃ ಕಥಾಂ ಪುಣ್ಯಾಂ ಚ ದ್ವೇಷ್ಟಿ ಯಃ ।
ಕೃಮಿವಕ್ತ್ರಃ ಸ ಚ ಭವೇದ್ವಿಭ್ರಷ್ಟೋ ನರಕಾತ್ಕುಧೀಃ ॥ ೨೮ ॥
ದೇವದ್ವಿಜಗವಾಂ ವೃತ್ತಿಹಾರಕೋ ವಾಂತಭಕ್ಷಕೃತ್ ।
ತಡಾಗಾರಮಭೇತ್ತಾ ಯೋ ಭವೇದ್ವಿಕಲಪಾಣಿಕಃ ॥ ೨೯ ॥
ವ್ಯವಹಾರೇ ಛಲಗ್ರಾಹೀ ಭೃತ್ಯಗ್ರಸ್ತೋ ಭವೇನ್ನರಃ ।
ಸದಾ ಪುರುಷರೋಗೀ ಸ್ಯಾತ್ಪರದಾರರತೋ ನರಃ ॥ ೩೦ ॥

---

೨೫–೨೬. ಸಭೆಯಲ್ಲಿ ತೇಜೋವಧೆಯನ್ನು ಮಾಡುವವನು ಗಂಟಲಿನ ಗ್ರಂಥಿಯಿಂದ ನರಳುವನು. ನಿರಂತರವಾಗಿ ಕೋಪವುಳ್ಳವನು ಚಂಡಾಲ ನಾಗಿಯೂ, ಏಕಾಂತವಿಷಯಗಳನ್ನು ಬಹಿರಂಗಪಡಿಸುವವನು ಕೆಟ್ಟವಾಸನೆಯ ಮುಖವುಳ್ಳವನಾಗಿಯೂ ಜನಿಸುವರು. ಮೇಕೆಗಳ ವ್ಯಾಪಾರದಿಂದ ಜೀವಿಸುವ ವನು ಬೇಡನಾಗಿಯೂ, ವೇಶ್ಯಾಲೋಲನ ಅನುಯಾಯಿಯು ಭೃತ್ಯನಾಗಿಯೂ, ನಾಸ್ತಿಕನು ತಿಲಭಕ್ಷಕನಾಗಿಯೂ, ಅಶ್ರದ್ಧೆಯಿಂದ ಕೆಲಸಗಳನ್ನು ಮಾಡುವ ವನು ಸಂಗೀತಜೀವಿಯೂ ಆಗುವರು.

೨೭. ಅಭಕ್ಷ್ಯವನ್ನು ತಿನ್ನುವವನು ಗಂಡಮಾಲೆಯುಳ್ಳವನೂ, ಸಂತತಿ ನಾಶಕನು ಪತ್ನೀರಹಿತನೂ, ಅನ್ಯಾಯಮಾರ್ಗದಿಂದ ಜ್ಞಾನವನ್ನು ಸಂಪಾದಿಸಿದ ಮನುಷ್ಯನು ಮೂರ್ಖನೂ ಆಗುವರು.

೨೮. ಶಾಸ್ತ್ರಚೋರನೂ, ಮೆಳ್ಳಗಣ್ಣಿನವನೂ, ಪುಣ್ಯಕಥೆಯನ್ನು ದ್ವೇಷಿಸು ವವನೂ, ಕೃಮಿಗಳಿಂದ ಕೂಡಿದ ಮುಖವುಳ್ಳವನೂ, ಆಚಾರಭ್ರಷ್ಟನೂ, ನರಕ ದಿಂದ ದುರ್ಬುದ್ಧಿಯೂ ಆಗುವರು.

೨೯. ದೇವತೆಗಳು, ಬ್ರಾಹ್ಮಣರು ಮತ್ತು ಗೋವುಗಳ ಜೀವಿಕೆಯನ್ನು ಅಪಹರಿಸಲು ವಾಂತಭಕ್ಷಕನೂ (ನಾಯಿಯೂ), ಕೆರೆ, ತೋಟಗಳನ್ನು ಕೆಡಿಸುವ ವನು ವಕ್ರಹಸ್ತನೂ ಆಗುವರು.

೩೦. ವ್ಯವಹಾರದಲ್ಲಿ ಹಟವಾದಿಯಾದವನು ತನ್ನ ಸೇವಕರಿಂದಲೇ ಪರಿಭವವನ್ನು ಹೊಂದುವನು. ಪರಸ್ತ್ರೀಯರಲ್ಲಿ ಲಂಪಟನಾದವನು ಯಾವಾಗಲೂ ನಪುಂಸಕನಾಗುವನು.

ವಾತರೋಗೀ ಕುವೈದ್ಯಃ ಸ್ಯಾದ್ದುಶ್ಚರ್ಮಾ ಗುರುತಲ್ಪಗಃ ।
ಮಧುಮೇಹೀ ಖರೀಗಾಮೀ ಗೋತ್ರಸ್ತ್ರೀಮೈಥುನೋಽಪ್ರಸೂಃ ॥ ೩೧ ॥
ಸ್ವಸಾರಂ ಮಾತರಂ ಪುತ್ರವಧೂಂ ಗಚ್ಛನ್ನಬೀಜವಾನ್ ।
ಕೃತಘ್ನಃ ಸರ್ವಕಾರ್ಯಾಣಾಂ ನೈಷ್ಫಲ್ಯಂ ಸಮುಪಾಶ್ನುತೇ ॥ ೩೨ ॥
ಇತ್ಯೇಷ ಲಕ್ಷಣೋದ್ದೇಶಃ ಪಾಪಿನಾಂ ಪರಿಕೀರ್ತಿತಃ ।
ಚಿತ್ರಗುಪ್ತೋಽಪಿ ಮುಹ್ಯೇತ ಸಕಲಸ್ಯಾನುವರ್ಣನೇ ॥ ೩೩ ॥
ಏತೇ ನರಕವಿಭ್ರಷ್ಟಾ ಭುಕ್ತ್ವಾ ಯೋನೀಃ ಸಹಸ್ರಶಃ ।
ಏವಂವಿಧೈಶ್ಚಿಹ್ನಿತಾಶ್ಚ ಜಾಯಂತೇ ಲಕ್ಷಣೈರ್ನರಾಃ ॥ ೩೪ ॥
ಯೇ ಹಿ ಧರ್ಮಂ ನ ಮನ್ಯಂತೇ ತಥಾ ಯೇ ವ್ಯಸನೈರ್ಜಿತಾಃ ।
ಅನುಮಾನೇನ ಬೋದ್ಧವ್ಯಂ ಯದೇತೇ ಶೇಷಪಾಪಿನಃ ॥ ೩೫ ॥
ಯೇಷಾಂ ತ್ವಂತಗತಂ ಪಾಪಂ ಸ್ವರ್ಗಾದ್ವಾ ಯೇ ಸಮಾಗತಾಃ ।
ಸರ್ವವ್ಯಸನನಿರ್ಮುಕ್ತಾ ಧರ್ಮಮೇಕಂ ಭಜಂತಿ ತೇ ॥ ೩೬ ॥

---

೩೧. ಮಿಥ್ಯಾವೈದ್ಯವನ್ನು ಮಾಡುವವನು ವಾತರೋಗವುಳ್ಳವನೂ ಗುರುತಲ್ಪಗಾಮಿಯು ಕೆಟ್ಟ ಚರ್ಮರೋಗವುಳ್ಳವನೂ, ಹೆಣ್ಣುಕತ್ತೆಯ ಸಂಗವು ದಿಂದ ಮಧುಮೇಹಪೀಡಿತನೂ, ಸ್ವಗೋತ್ರ ಸ್ತ್ರೀಯನ್ನು ಮದುವೆಯಾದವನು ಪ್ರಜಾರಹಿತನೂ ಆಗುವರು.

೩೨. ತಂಗಿ, ತಾಯಿ, ಸೊಸೆಯರ ಸಂಗಮದಿಂದ ಬೀಜರಹಿತನಾಗು ವನು. ಕೃತಘ್ನನಾದವನು ತನ್ನ ಎಲ್ಲ ಕಾರ್ಯಗಳಲ್ಲಿಯೂ ನಿಷ್ಫಲವನ್ನು ಹೊಂದುವನು.

೩೩. ಇಂತು ಪಾಪಿಗಳ ಕರ್ಮಗಳ ಫಲಗಳನ್ನು ಕೇವಲ ದಿಗ್ದರ್ಶಕವಾಗಿ ನಿನಗೆ ನಿರೂಪಿಸಿರುವೆನು. ಇದನ್ನು ಸಮಗ್ರವಾಗಿ ವರ್ಣಿಸಲು ಚಿತ್ರಗುಪ್ತನಿಗೂ ಬುದ್ಧಿಭ್ರಮಣೆಯುಂಟಾಗುವುದು.

೩೪. ನರಕದಲ್ಲಿ ಬಿದ್ದು ಭ್ರಷ್ಟರಾದ ಈ ಜೀವರೆಲ್ಲರೂ ಸಾವಿರಾರು ಯೋನಿಗಳಲ್ಲಿ ಜನ್ಮಗಳನ್ನು ಪಡೆದು ಕಡೆಗೆ ಮೇಲೆ ಹೇಳಿದ ಗುರುತುಗಳುಳ್ಳ ದೇಹಗಳಿಂದ ಮನುಷ್ಯಜನ್ಮವನ್ನು ಪಡೆಯುತ್ತಾರೆ.

೩೫. ಯಾರು ಧರ್ಮವನ್ನು ಗೌರವಿಸುವುದಿಲ್ಲವೊ, ಮತ್ತು ಯಾರು ಸ್ತ್ರೀ ದ್ಯೂತಾದಿ ವ್ಯಸನಗಳಲ್ಲಿ ನಿರತರಾಗಿರುವರೊ, ಅಂತಹ ಇತರ ಪಾಪಿಗಳಿಗೆ ಆಗುವ ಗತಿಯನ್ನು ಅನುಮಾನದಿಂದ ಊಹಿಸಬೇಕು.

೩೬. ಯಾರಿಗೆ ಪಾಪವೆಂಬುದು ಕೊನೆಗಂಡಿರುವುದೊ, ಮತ್ತು ಯಾರು ಸ್ವರ್ಗದ ಪುಣ್ಯಕ್ಷಯದಿಂದ ಭೂಲೋಕಕ್ಕೆ ಬಂದಿರುವರೊ, ಅವರೆಲ್ಲರೂ ಸಕಲ ವ್ಯಸನಗಳನ್ನೂ ತ್ಯಜಿಸಿ ಧರ್ಮವೊಂದನ್ನೇ ಸೇವಿಸುವರು.

ಭವಂತಿ ಚಾತ್ರ ಶ್ಲೋಕಾಃ ॥
ಧರ್ಮಾದನವಮಂ ಸೌಖ್ಯಮಧರ್ಮಾದ್ದುಃಖಸಂಭವಃ ।
ತಸ್ಮಾದ್ಧರ್ಮಂ ಸುಖಾರ್ಥಾಯ ಕುರ್ಯಾತ್ಪಾಪಂ ವಿಸರ್ಜಯೇತ್ ॥ ೩೭॥
ಲೋಕದ್ವಯೇಽಪಿ ಯತ್ಸೌಖ್ಯಂ ತದ್ಧರ್ಮಾತ್ಪ್ರೋಚ್ಯತೇ ಯತಃ ।
ಧರ್ಮಮೇಕಮತಃ ಕುರ್ಯಾತ್ಸರ್ವಕಾರ್ಯಾರ್ಥಸಿದ್ಧಯೇ ॥ ೩೮ ॥
ಮುಹೂರ್ತಮಪಿ ಜೀವೇತ ನರಃ ಶುಕ್ಲೇಣ ಕರ್ಮಣಾ ।
ನ ಕಲ್ಪಮಪಿ ಜೀವೇತ ಲೋಕದ್ವಯವಿರೋಧಿನಾ ॥ ೩೯ ॥
ಇತಿ ಪೃಷ್ಟಂ ತ್ವಯಾ ವಿಪ್ರ ಯಥಾಶಕ್ತ್ಯಾ ಮಯೇರಿತಂ ।
ಅಸೂಕ್ತಂ ಸೂಕ್ತಮಥವಾ ಕ್ಷಂತವ್ಯಂ ಕಿಂ ವದಾಮಿ ಚ ॥ ೪೦ ॥

ನಾರದ ಉವಾಚ:—

ಕಮಠಸ್ಯೈತದಾಕರ್ಣ್ಯ ಅಷ್ಟವರ್ಷಸ್ಯ ಭಾಷಿತಂ ।
ಭಗವಾನ್ಭಾಸ್ಕರಃ ಪ್ರೀತೋ ಬಭೂವಾತೀವ ವಿಸ್ಮಿತಃ ॥ ೪೧ ॥
ಪ್ರಶಶಂಸ ಚ ತಾನ್ವಿಪ್ರಾನ್ಹಾರೀತಪ್ರಮುಖಾಂಸ್ತದಾ ।
ಅಹೋ ವಸುಮತೀ ಧನ್ಯಾ ದ್ವಿಜೈರೇವಂವಿಧೋತ್ತಮೈಃ ॥ ೪೨ ॥

---

೩೭. ಈ ವಿಷಯದಲ್ಲಿ ಮುಂದೆ ಹೇಳುವ ಶ್ಲೋಕಗಳು ಪೂರ್ವಜರಿಂದ ಹೇಳಲ್ಪಟ್ಟಿರುವುವು. 'ಧರ್ಮದಿಂದ ಅಪಾರವಾದ ಸೌಖ್ಯವೂ ಅಧರ್ಮದಿಂದ ದುಃಖದ ಸಂಪ್ರಾಪ್ತಿಯೂ ಉಂಟಾಗುವುವು. ಆದುದರಿಂದ ಸುಖವನ್ನು ಬಯಸುವವರು ಧರ್ಮವನ್ನು ಆಚರಿಸಬೇಕು. ಅಧರ್ಮವನ್ನು ತ್ಯಜಿಸಬೇಕು.

೩೮. ಧರ್ಮವೊಂದರಿಂದಲೇ ಇಹಲೋಕ, ಪರಲೋಕಗಳೆರಡರಲ್ಲಿಯೂ ಸೌಖ್ಯವುಂಟಾಗುವುದರಿಂದ ಸಕಲ ಕಾರ್ಯಗಳ ಸಿದ್ಧಿಯನ್ನು ಅಪೇಕ್ಷಿಸುವವನು ಧರ್ಮವೊಂದನ್ನೇ ಮಾಡಬೇಕು.

೩೯–೪೦. ಮನುಷ್ಯನು ಶುದ್ಧವಾದ ಆಚಾರದಿಂದ ಒಂದು ಮುಹೂರ್ತ ಕಾಲವಿದ್ದರೂ ಸಾಕು. ಇಹಪರಗಳೆರಡಕ್ಕೂ ವಿರೋಧಿಗಳಾದ ಪಾಪಕರ್ಮಗಳನ್ನು ಮಾಡುತ್ತ ನಡೆಸುವ ಜೀವನವು ಕಲ್ಪಕಾಲದ್ದಾದರೂ ವ್ಯರ್ಥ.' ಎಲೈ ಬ್ರಾಹ್ಮಣೋತ್ತಮನೆ! ನೀನು ಕೇಳಿದುದನ್ನೆಲ್ಲ ಯಥಾಶಕ್ತಿಯಾಗಿ ನಿರೂಪಿಸಿರುವೆನು. ಇದರಲ್ಲಿ ದುರುಕ್ತಿ ಅತ್ಯುಕ್ತಿಗಳಿದ್ದಲ್ಲಿ ಕ್ಷಮಿಸಬೇಕು. ಮತ್ತೇನನ್ನು ಹೇಳಲಿ?"

೪೧–೪೨.. ನಾರದರು ಹೇಳುತ್ತಾರೆ:—ಕೇವಲ ಎಂಟುವರ್ಷದ ಬಾಲಕನಾದ ಕಮಠನಾಡಿದ ಈ ಮಾತುಗಳನ್ನು ಕೇಳಿ ಸೂರ್ಯನು ಬಹಳ ಸಂತೋಷವನ್ನೂ ವಿಸ್ಮಯವನ್ನೂ ವ್ಯಕ್ತಪಡಿಸಿದನು. ಬಳಿಕ ಹಾರೀತನೇ ಮೊದಲಾದ ಬ್ರಾಹ್ಮಣೋತ್ತಮರನ್ನು ಶ್ಲಾಘಿಸಿ ಇಂತೆಂದನು. "ಇಂತಹ ಬ್ರಾಹ್ಮಣಶ್ರೇಷ್ಠರಿಂದ ಕೂಡಿದ ಈ ಭೂಲೋಕವೇ ಪರಮಪವಿತ್ರವಾದುದು.

ಅಥ ಪ್ರಜಾಪತಿರ್ಧನ್ಯೋ ಯನ್ಮರ್ಯಾದಾಭಿಪಾಲ್ಯತೇ ।
ಅಮೀಭಿರ್ಬ್ರಾಹ್ಮಣವರ್ಯೈರ್ಧನ್ಯಾ ವೇದಾಶ್ಚ ಸಂಪ್ರತಿ ॥ ೪೩ ॥
ಯೇಷಾಂ ಮಧ್ಯೇ ಬಾಲಬುದ್ಧಿರಿಯಮೇತಾದೃಶೀ ಸ್ಫುಟಾ ।
ಹಾರೀತಪ್ರಮುಖಾನಾಂ ಹಿ ಕಾ ವೈ ಬುದ್ಧಿರ್ಭವಿಷ್ಯತಿ ॥ ೪೪ ॥
ಅಸಂಶಯಂ ತ್ರಿಲೋಕಸ್ಥಮೇಷಾಮವಿದಿತಂ ನ ಹಿ ।
ಯಥೈತಾನ್ನಾರದಃ ಪ್ರಾಹ ಭೂಯಸ್ತಸ್ಮಾದಮೀ ಬಹು ॥ ೪೫ ॥
ಇತಿ ಪ್ರಶಸ್ಯ ತಾನ್ವಿಪ್ರಾನ್ಪ್ರಹೃಷ್ಟೋ ರವಿರಬ್ರವೀತ್ ।
ಅಹಂ ಸೂರ್ಯೋ ವಿಪ್ರಮುಖ್ಯಾ ಯುಷ್ಮಾಕಂ ದರ್ಶನಾತ್ಕೃತೇ ।
ಸಮಾಗತಃ ಸೂರ್ಯಲೋಕಾತ್ಪ್ರಾಪ್ತಂ ನೇತ್ರಫಲಂ ಚ ಮೇ ॥ ೪೬ ॥
ಭವದ್ವಿಧೈರ್ವಿಪ್ರಮುಖ್ಯೈಃ ಸಂಜಲ್ಪನಸಹಾಸನಾತ್ ।
ಅಂತ್ಯಜಾ ಅಪಿ ಪೂಯಂತೇ ಕಿಂ ಪುನರ್ಮಾದೃಶಾ ದ್ವಿಜಾಃ ॥ ೪೭ ॥
ಸರ್ವಥಾ ನಾರದೋ ಧನ್ಯೋ ಯೋಽಸೌ ತ್ರೈಲೋಕ್ಯತತ್ತ್ವವಿತ್ ॥೪೮॥

---

೪೩. ಮತ್ತು ಜಗತ್ಕರ್ತೃವಾದ ಬ್ರಹ್ಮನ ಕಟ್ಟಳೆಗಳು ಇಲ್ಲಿ ತಪ್ಪದೆ ನುಸರಿಸಲ್ಪಡುತ್ತಿರುವುದರಿಂದ ಆ ಬ್ರಹ್ಮನೂ ಧನ್ಯನೇ! ಈ ಬ್ರಾಹ್ಮಣೋತ್ತಮರ ಮುಖಗಳಿಂದ ಉಚ್ಚರಿಸಲ್ಪಡುತ್ತಿರುವ ವೇದಗಳೂ ಧನ್ಯಗಳೇ!!

೪೪–೪೫. ಯಾರ ಮಧ್ಯದಲ್ಲಿರುವ ಬಾಲಕನಿಗೂ ಈ ವಿಧವಾದ ನಿಶ್ಚಯ ಜ್ಞಾನವುಂಟಾಗಿರುವುದೊ, ಅಂತಹ ಹಾರೀತನೇ ಮೊದಲಾದ ಜ್ಞಾನವೃದ್ಧರಿಗೆ ಎಂತಹ ಅಪಾರವಾದ ಜ್ಞಾನವಿರುವುದೊ! ನಿಸ್ಸಂಶಯವಾಗಿಯೂ ಮೂರು ಲೋಕಗಳಲ್ಲಿಯೂ ಇವರಿಗೆ ತಿಳಿಯದ ವಿಷಯವು ಯಾವುದೂ ಇರುವುದಿಲ್ಲ. ನಾರದನು ಇವರ ವಿಷಯವಾಗಿ ಏನನ್ನು ಹೇಳಿದ್ದನೊ, ಅದಕ್ಕಿಂತಲೂ ಅನೇಕ ಪಾಲು ಹೆಚ್ಚಿನ ಧರ್ಮಜ್ಞರಾಗಿ ಇವರು ಶೋಭಿಸುತ್ತಿರುವರು.”

೪೬. ಇಂತು ಆ ಬ್ರಾಹ್ಮಣರನ್ನು ಮನಸ್ಸಿನಲ್ಲಿಯೇ ಪ್ರಶಂಸಿಸಿ ಸೂರ್ಯನು ಬಹಿರಂಗವಾಗಿ ಇಂತೆಂದನು. “ಎಲೈ ಬ್ರಾಹ್ಮಣೋತ್ತಮರೆ! ನಾನೇ ಜಗತ್ಸಾಕ್ಷಿಯಾದ ಸೂರ್ಯನು. ನಿಮ್ಮ ದರ್ಶನಕ್ಕೋಸ್ಕರವಾಗಿಯೇ ಸೂರ್ಯಲೋಕದಿಂದ ಇಲ್ಲಿಗೆ ಬಂದಿರುವೆನು. ಇಂದು ನಿಮ್ಮನ್ನು ಕಂಡು ನನ್ನ ನೇತ್ರಗಳು ಸಫಲಗಳಾದುವು.

೪೭. ನಿಮ್ಮಂತಹ ಬ್ರಾಹ್ಮಣಮುಖ್ಯರೊಡನೆ ಮಾತನಾಡುವುದರಿಂದಲೂ ಸಹವಾಸದಿಂದಲೂ ಚಂಡಾಲರೂ ಪವಿತ್ರರಾಗುವರೆಂದಮೇಲೆ ನನ್ನಂತಹವರ ಮಾತೇನು?

೪೮–೪೯. ಪಾಪಲೇಶವೂ ಇಲ್ಲದ ನಿಮ್ಮಂತಹವರೊಡನೆ ಶ್ರೇಯೋಬಂಧನವನ್ನು ಹೊಂದಿದ ತ್ರಿಲೋಕತತ್ತ್ವಗಳನ್ನು ತಿಳಿದ ನಾರದನೇ ಪರಮ

**ಯುಷ್ಮಾಭಿರ್ಬಧ್ಯತೇ ಶ್ರೇಯೋ ಯಸ್ಯ ವೈ ಧೂತಕಿಲ್ಬಿಷೈಃ ।**
**ಪ್ರಣಮಾಮಿ ಚ ವಃ ಸರ್ವಾನ್ಮನೋಬುದ್ಧಿಸಮಾಧಿಭಿಃ ।**
**ತಪೋ ವಿದ್ಯಾ ಚ ವೃತ್ತಂ ಚ ಯತೋ ವಾರ್ಧಕ್ಯಕಾರಣಂ ॥ ೪೯ ॥**
**ವರಂ ಮತ್ತೋ ವೃಣೀಧ್ವಂ ಚ ದುರ್ಲಭಂ ಯಂ ಹೃದೀಚ್ಛತ ।**
**ಯೂಯಂ ಸ್ವಯಂ ಹಿ ವರದಾ ಮತ್ಸಂಗೋ ಮಾಸ್ತು ನಿಷ್ಫಲಂ ॥೫೦॥**
**ದೇವತಾನಾಂ ಹಿ ಸಂಸರ್ಗೋ ನಿಷ್ಫಲೋ ನೋಪಜಾಯತೇ ।**
**ತಸ್ಮಾನ್ಮತ್ತೋ ವರಂ ಕಿಂಚಿದ್ವೃಣುಧ್ವಂ ಪ್ರದದಾಮಿ ವಃ ॥ ೫೧ ॥**
**ಶ್ರೀ ನಾರದ ಉವಾಚ:—**
**ಇತಿ ಸೂರ್ಯವಚಃ ಶ್ರುತ್ವಾ ಪ್ರಹೃಷ್ಟಾಸ್ತೇ ದ್ವಿಜೋತ್ತಮಾಃ ॥ ೫೨ ॥**
**ಸಂಪೂಜ್ಯ ಪರಯಾ ಭಕ್ತ್ಯಾ ಪಾದ್ಯಾರ್ಘ್ಯಸ್ತುತಿವಂದನೈಃ ।**
**ಮಂಡಲಾದೀನ್ಮಹಾಜಪ್ಯಾನ್ಗೃಣಂತಃ ಪ್ರೋಚಿರೇ ರವಿಂ ॥ ೫೩ ॥**
**ಜಯಾದಿತ್ಯ ಜಯ ಸ್ವಾಮಿನ್ಜಯ ಭಾನೋ ಜಯಾನಲ ।**
**ಜಯ ವೇದಪತೇ ಶಶ್ವತ್ತಾರಯಾಸ್ಮಾನಹರ್ಪತೇ ॥ ೫೪ ॥**

---

ಧನ್ಯನೆಂದು ಹೇಳಬೇಕು. ಯಾರಲ್ಲಿ ಕೇವಲ ತಪಸ್ಸು, ವಿದ್ಯೆ ಮತ್ತು ಆಚಾರಗಳೇ ವಾರ್ಧಕ್ಯಕ್ಕೆ ಕಾರಣಗಳಾಗಿರುವುವೋ, ಅಂತಹ ನಿಮ್ಮೆಲ್ಲ ರನ್ನೂ ಮನಸ್ಸು, ಬುದ್ಧಿ, ಸಮಾಧಾನಗಳಿಂದ ನಮಸ್ಕರಿಸುವೆನು.

೫೦. ನಿಮಗೆ ಮನಸೇಪ್ಸಿತವಾದ ಎಂತಹ ದುರ್ಲಭವಾದ ವರವನ್ನಾದರೂ ನನ್ನಿಂದ ಕೇಳಿಕೊಳ್ಳಿರಿ. ಆದರೆ ನೀವೇ ಸ್ವತಃ ವರಗಳನ್ನು ಕೊಡಲು ಸಮರ್ಥ ರಾಗಿರುವಿರಿ. ನನ್ನ ಸಮಾಗಮವು ಮಾತ್ರ ನಿಷ್ಫಲವಾಗದಿರಲಿ.

೫೧. ದೇವತೆಗಳ ಪ್ರತ್ಯಕ್ಷಲಾಭವೆಂಬುದು ಎಂದಿಗೂ ವಿಫಲವಾಗಲಾರದು. ಆದುದರಿಂದ ನನ್ನಿಂದ ಯಾವ (ಸ್ವಲ್ಪ) ವರವನ್ನಾದರೂ ನೀವು ಕೇಳಿಕೊಳ್ಳಿರಿ. ನಿಮ್ಮ ಇಷ್ಟವನ್ನು ನೆರವೇರಿಸಿ ಕೊಡುವೆನು.''

೫೨. ನಾರದನು ಹೇಳುತ್ತಾನೆ:—ಇಂತೆಂದ ಸೂರ್ಯನ ಮಾತುಗಳನ್ನು ಕೇಳಿ ಆ ಬ್ರಾಹ್ಮಣಶ್ರೇಷ್ಠರು ಪ್ರಹೃಷ್ಟರಾದರು.

೫೩. ಅಲ್ಲದೆ ಅವರೆಲ್ಲರೂ ಸೂರ್ಯದೇವನನ್ನು ಅತ್ಯಂತ ಭಕ್ತಿಯಿಂದ ಪಾದ್ಯ, ಅರ್ಘ್ಯ ಮತ್ತು ಸ್ತೋತ್ರಗಳಿಂದ ಪೂಜಿಸಿ ಸೂರ್ಯಮಂಡಲವೇ ಮೊದಲಾದ ಮಂತ್ರಗಳನ್ನು ಜಪಿಸಿ ಇಂತೆಂದು ಬೇಡಿಕೊಂಡರು.

೫೪. ''ಆದಿತ್ಯನೂ, ಲೋಕನಾಯಕನೂ, ಭಾನುವೂ, ನಿತ್ಯಶುದ್ಧನೂ, ವೇದಗಳಿಗೆ ಒಡೆಯನೂ ಆದ ನಿನಗೆ ಜಯವುಂಟಾಗಲಿ. ಎಲೈ ದಿವಸಾಧಿ ಪತಿಯೆ! ನಮ್ಮನ್ನು ಈ ಸಂಸಾರಸಾಗರದಿಂದ ಶಾಶ್ವತವಾಗಿ ಕಡೆಹಾಯಿಸು.

ವಿಪ್ರಾಣಾಂ ತ್ವಂ ಪರೋ ದೇವೋ ವಿಪ್ರಸರ್ಗೋಽಪಿ ತ್ವನ್ಮಯಃ ।
ನಿತರಾಂ ಪೂತಮೇತನ್ನಃ ಸ್ಥಾನಂ ದೇವ ತ್ವಯೇಕ್ಷಿತಂ ॥ ೫೫ ॥
ಅದ್ಯ ನಃ ಸಫಲಾ ವೇದಾ ಅದ್ಯ ನಃ ಸಫಲಾಃ ಕ್ರಿಯಾಃ ।
ಅದ್ಯ ನಃ ಸಫಲಂ ಗೇಹಂ ತ್ವಯಾ ಸಂಗಮ್ಯ ಗೋಪತೇ ॥ ೫೬ ॥
ವರಂ ಯದಿ ಪ್ರದಾತಾಸಿ ತದೇನಂ ಪ್ರವೃಣೀಮಹೇ ।
ಅಸ್ಮಾಕೀನಮಿದಂ ಸ್ಥಾನಂ ನ ಹಿ ತ್ಯಾಜ್ಯಂ ಕಥಂಚನ ॥ ೫೭ ॥

ಶ್ರೀ ಸೂರ್ಯ ಉವಾಚ:—

ಯಸ್ಮಾದ್ಭವದ್ಭಿಃ ಪೂರ್ವಂ ಹಿ ಜಯಾದಿತ್ಯೇತಿ ಚೋದಿತಂ ।
ಜಯಾದಿತ್ಯ ಇತಿ ಖ್ಯಾತಸ್ತಸ್ಮಾತ್ಸ್ಥಾಸ್ಯೇಽತ್ರ ಸರ್ವದಾ ॥ ೫೮ ॥
ಯಾವನ್ಮಹೀಸಮುದ್ರಾಶ್ಚ ಪರ್ವತಾ ನಗರಾಣಿ ಚ ।
ತಾವತ್ಸ್ಥಾನಮಿದಂ ವಿಪ್ರಾ ನಹಿ ತ್ಯಕ್ಷ್ಯಾಮಿ ಕರ್ಹಿಚಿತ್ ॥ ೫೯ ॥
ದಾರಿದ್ರ್ಯರೋಗಸಂಘಾತಾನ್ವ್ರಣೋ ಮಂಡಲಾನಿ ಚ ।
ಕುಷ್ಠಾದೀನ್ನಾಶಯಿಷ್ಯಾಮಿ ಭಜತಾಮತ್ರ ಸಂಸ್ಥಿತಃ ॥ ೬೦ ॥

---

೫೫. ಬ್ರಾಹ್ಮಣರಿಗೆ ನೀನೇ ಪರಮ ದೇವತೆಯು. ಬ್ರಾಹ್ಮಣರ ಅಭ್ಯುದಯವೂ ನಿನ್ನನ್ನೇ ಆಶ್ರಯಿಸಿರುವುದು. ದೇವದೇವನೆ! ನಿನ್ನ ದೃಷ್ಟಿಗೆ ಬಿದ್ದಿರುವ ಈ ನಮ್ಮ ಕ್ಷೇತ್ರವು ಯಾವಾಗಲೂ ಪವಿತ್ರವಾಗಿರುವುದು.

೫೬. ಇಂದು ನಮ್ಮ ವೇದಾಧ್ಯಯನಗಳು ಸಫಲಗಳಾದುವು. ನಮ್ಮ ಸತ್ಕರ್ಮಗಳೆಲ್ಲ ಫಲೋನ್ಮುಖಗಳಾದುವು. ತೇಜೋರಾಶಿಯಾದ ನಿನ್ನ ಸಮಾಗಮದಿಂದ ಇಂದು ನಮ್ಮ ಗೃಹಗಳು ಪವಿತ್ರಗೊಳಿಸಲ್ಪಟ್ಟುವು.

೫೭. ನೀನು ನಮಗೆ ವರವನ್ನುಕೊಡಲುಳ್ಳವನಾಗಿದ್ದರೆ ನಾವು ಈ ವರವನ್ನು ಬೇಡುವೆವು. ನಮ್ಮ ಈ ನಿವಾಸಸ್ಥಾನವನ್ನು ನೀನು ಎಂದೆಂದಿಗೂ ತ್ಯಜಿಸಬಾರದು.''

೫೮. ಸೂರ್ಯನು ಹೇಳುತ್ತಾನೆ:—''ನಿಮ್ಮ ಸ್ತೋತ್ರದ ಮೊದಲಿನಲ್ಲಿ 'ಜಯಾದಿತ್ಯ' ಎಂದು ಹೇಳಿದ ಕಾರಣದಿಂದ ಅದೇ ಹೆಸರಿನಿಂದಲೇ ನಾನು ಈ ಕ್ಷೇತ್ರದಲ್ಲಿ ಪ್ರಸಿದ್ಧನಾಗಿ ಯಾವ ಕಾಲದಲ್ಲಿಯೂ ನೆಲಸಿರುವೆನು.

೫೯. ಸೃಷ್ಟಿಯಲ್ಲಿ ಭೂಮಿಯೂ, ಸಮುದ್ರಗಳೂ, ಪರ್ವತಗಳೂ, ಪಟ್ಟಣಗಳೂ ಎಲ್ಲಿಯವರೆಗೆ ನಿಂತಿರುವುವೊ, ಅಂದಿನವರೆಗೂ ನಾನು ಈ ಕ್ಷೇತ್ರವನ್ನು ಖಂಡಿತವಾಗಿಯೂ ಬಿಟ್ಟು ಹೋಗುವುದಿಲ್ಲ.

೬೦. ದಾರಿದ್ರ್ಯ, ರೋಗಸಮೂಹಗಳು, ವ್ರಣರೋಗ, ಮಂಡಲರೋಗ, ಕುಷ್ಠ ಮುಂತಾದುವುಗಳೆಲ್ಲ ಇಲ್ಲಿ ನನ್ನನ್ನು ಭಜಿಸುವವರಿಗೆ ನಾಶವಾಗುವುವು.

ಯೋ ಮಾಮತ್ರ ಸ್ಥಿತಂ ಚಾಪಿ ಪೂಜಯಿಷ್ಯತಿ ಮಾನವಃ
ಸೂರ್ಯಲೋಕಮಿವಾಗಮ್ಯ ಪೂಜಾಂ ತಸ್ಯ ಭಜಾಮ್ಯಹಂ ॥ ೬೧ ॥

ಶ್ರೀ ನಾರದ ಉವಾಚ:—

ಏವಮುಕ್ತೇ ಭಗವತೌ ಹಾರೀತಾದ್ಯಾ ದ್ವಿಜೋತ್ತಮಾಃ ।
ಮೂರ್ತಿಂ ಸಂಸ್ಥಾಪಯಾಮಾಸುರ್ವೇದೋದಿತವಿಧಾನತಃ ॥ ೬೨ ॥
ತತೋ ದ್ವಿಜಾಃ ಪ್ರಾಹುರೇವಂ ಕಮಠಂ ತ್ವತ್ಕೃತೇ ರವಿಃ ।
ಅತ್ರ ಸ್ವಾಮೀ ಸ್ಥಿತಸ್ತಸ್ಮಾತ್ಪ್ರಥಮಂ ಸ್ತುಹಿ ತ್ವಂ ರವಿಂ ॥ ೬೩ ॥
ಇತ್ಯುಕ್ತೋ ಬ್ರಾಹ್ಮಣೈಃ ಸರ್ವೈಃ ಕಮಠೋ ವಾಗ್ಮಿನಾಂ ವರಃ ।
ಪ್ರಣಿಪತ್ಯ ಜಯಾದಿತ್ಯಂ ಮಹಾಸ್ತೋತ್ರಮಿದಂ ಜಗೌ ॥ ೬೪ ॥

ನ ತ್ವಂ ಕೃತಃ ಕೇವಲಸಂಶ್ರುತಶ್ಚ
ಯಜುಷ್ಯೇವಂ ವ್ಯಾಹರತ್ಯಾದಿದೇವ ।
ಚತುರ್ವಿಧಾ ಭಾರತೀ ದೂರದೂರಂ
ಧೃಷ್ಟಃ ಸ್ತೌಮಿ ಸ್ವಾರ್ಥಕಾಮಃ ಕ್ಷಮಸ್ವೈತತ್ ॥ ೬೫ ॥

---

೬೧. ಇಲ್ಲಿ ನೆಲಸಿರುವ ನನ್ನನ್ನು ಯಾವ ಮನುಷ್ಯನು ಪೂಜಿಸುವನೊ, ಅವನು ಸೂರ್ಯಲೋಕಕ್ಕೆ ಬಂದವನೆಂದೇ ಭಾವಿಸಿ ಅವನ ಪೂಜೆಯನ್ನು ಸ್ವೀಕರಿಸುವೆನು.''

೬೨. ನಾರದನು ಹೇಳುತ್ತಾನೆ:—ಇಂತು ಸೂರ್ಯ ಭಗವಂತನು ಅಪ್ಪಣೆ ಮಾಡಲು ಹಾರೀತನೇ ಮೊದಲಾದ ಆ ಬ್ರಾಹ್ಮಣೋತ್ತಮರು ವೇದೋಕ್ತ ವಿಧಾನದಿಂದ ಅಲ್ಲಿ ಆ ಸ್ವಾಮಿಯ ಮೂರ್ತಿಯನ್ನು ಸ್ಥಾಪಿಸಿದರು.

೬೩. ಬಳಿಕ ಅವರು ಕಮಠನನ್ನು ಕುರಿತು "ನಿನಗೋಸ್ಕರವಾಗಿಯೇ ಸ್ವಾಮಿಯಾದ ಸೂರ್ಯನು ಇಲ್ಲಿ ನೆಲಸಿರುವನು; ಆದುದರಿಂದ ನೀನೇ ಮೊದಲು ಈತನನ್ನು ಸ್ತೋತ್ರವನ್ನು ಮಾಡು" ಎಂದು ಹೇಳಿದರು.

೬೪. ಇಂತು ಅಲ್ಲಿ ನೆರೆದಿದ್ದ ಸಕಲ ಬ್ರಾಹ್ಮಣರಿಂದಲೂ ಆಜ್ಞಪ್ತನಾಗಿ ಶಾಸ್ತ್ರಜ್ಞರಲ್ಲಿ ಉತ್ತಮನಾದ ಆ ಕಮಠನು ಜಯಾದಿತ್ಯನಿಗೆ ನಮಸ್ಕರಿಸಿ ಉತ್ತಮವಾದ ಈ ಸ್ತೋತ್ರವನ್ನು ಹೇಳತೊಡಗಿದನು.

೬೫. "ನೀನು ಜನ್ಮರಹಿತನಾಗಿಯೂ ಕೇವಲನಾಗಿಯೂ ಇರುವೆ ಯೆಂಬುದನ್ನು ಕೇಳಿರುವೆವು. ಯಜುರ್ವೇದದಲ್ಲಿ ಹಾಗೆಯೇ ನಿರೂಪಿಸಲ್ಪಟ್ಟಿರುವುದು. ಪರಾ, ಪಶ್ಯಂತೀ, ಮಧ್ಯಮಾ ಮತ್ತು ವೈಖರಿಗಳೆಂಬ ನಾಲ್ಕು ವಿಧಗಳಾದ ಭಾಷೆಗಳೂ ನಿನ್ನನ್ನು ತಿಳಿಯಲಾರದೆ ದೂರದಲ್ಲಿಯೆ ಹಿಂದಿರುಗುವುವು. ಹಾಗಾದರೂ ನಾನು ಸ್ವಾರ್ಥಲೋಭದಿಂದ ಧೈರ್ಯಗೊಂಡವನಾಗಿ ಸ್ತೋತ್ರ ಮಾಡುವೆನು. ಈ ಅಪರಾಧವನ್ನು ಕ್ಷಮಿಸು.

ಮಾರ್ತಾಂಡಸೂರ್ಯಾಂಶು ರವಿಸ್ತಥೇಂದ್ರೋ
ಭಾನುರ್ಭಗಶ್ಚಾರ್ಯಮಾ ಸ್ವರ್ಣರೇತಾಃ ।
ದಿವಾಕರೋ ಮಿತ್ರವಿಷ್ಣುಶ್ಚ ದೇವ
ಖ್ಯಾತಸ್ತ್ವಂ ವೈ ದ್ವಾದಶಾತ್ಮಾ ನಮಸ್ತೇ ॥ ೬೬ ॥
ಲೋಕತ್ರಯಂ ವೈ ತವಗರ್ಭಗೇಹಂ
ಜಲಾಧಾರಃ ಪ್ರೋಚ್ಯಸೇ ಖಂ ಸಮಗ್ರಂ ॥ ೬೭ ॥
ನಕ್ಷತ್ರಮಾಲಾ ಕುಸುಮಾಭಿಮಾಲಾ
ತಸ್ಮೈ ನಮೋ ವ್ಯೋಮಲಿಂಗಾಯ ತುಭ್ಯಂ ॥ ೬೮ ॥
ತ್ವಂ ದೇವದೇವಸ್ತ್ವಮನಾಥನಾಥ
ಸ್ತ್ವಂ ಪ್ರಾಪ್ಯಪಾಲಃ ಕೃಪಣೇ ಕೃಪಾಲುಃ ।
ತ್ವಂ ನೇತ್ರನೇತ್ರಂ ಜನಬುದ್ಧಿಬುದ್ಧಿ
ರಾಕಾಶಕಾಶೋ ಜಯಜೀವಜೀವಃ ॥ ೬೯ ॥
ದಾರಿದ್ರ್ಯದಾರಿದ್ರ್ಯನಿಧೇ ನಿಧೀನಾ
ಮಮಂಗಲಾಮಂಗಲ ಶರ್ಮಶರ್ಮ ।
ರೋಗಪ್ರರೋಗಃ ಪ್ರಥಿತಃ ಪೃಥಿವ್ಯಾಂ
ಚಿರಂ ಜಯಾದಿತ್ಯ ಜಯಾಪ್ರಮೇಯ ॥ ೭೦ ॥

---

೬೬. ನೀನೇ ಮಾರ್ತಾಂಡ, ಸೂರ್ಯ, ಅಂಶು, ರವಿ, ಇಂದ್ರ, ಭಾನು, ಭಗ, ಅರ್ಯಮ, ಸ್ವರ್ಣರೇತ ಎಂಬ ಹೆಸರುಗಳಿಂದ ಪ್ರಸಿದ್ಧನಾಗಿರುವೆ! ದಿವಸಕರ, ಮಿತ್ರ, ವಿಷ್ಣು ಎಂಬುದಾಗಿ ಖ್ಯಾತಿಯನ್ನು ಹೊಂದಿರುವೆ. ದ್ವಾದಶಾದಿತ್ಯರಲ್ಲಿ ಅಂತರ್ಯಾಮಿಯಾಗಿರುವ ನಿನಗೆ ಇದೋ ನಮಸ್ಕಾರವನ್ನು ಮಾಡುವೆನು!

೬೭. ಮೂರು ಲೋಕಗಳೂ ನಿನ್ನ ಗರ್ಭಗೃಹವಾಗಿರುವುದು. ಸಮುದ್ರದ ಜಲವನ್ನು ಆಕರ್ಷಿಸಿ ಮಳೆಯನ್ನು ಸುರಿಸುವುದರಿಂದ ನಿನ್ನನ್ನು ಜಲಾಧಾರನೆಂದು ಕರೆಯುವರು. ನೀನು ಆಕಾಶವೆಲ್ಲವನ್ನೂ ವ್ಯಾಪಿಸಿರುವೆ.

೬೮. ನಕ್ಷತ್ರಮಂಡಲವೇ ಪುಷ್ಪಮಾಲೆಯಾಗಿ ಶೋಭಿಸುತ್ತಿರುವ ಆಕಾಶ ಲಿಂಗರೂಪನಾದ ನಿನಗೆ ಮತ್ತೆ ಮತ್ತೆ ನಮಸ್ಕರಿಸುವೆನು!

೬೯. ನೀನು ದೇವತೆಗಳಿಗೆ ಅಧಿದೇವತೆಯೂ, ಅನಾಥರಿಗೆ ನಾಥನೂ, ಶರಣಾಗತರ ಪರಿಪಾಲಕನೂ, ದೀನರಿಗೆ ಕೃಪಾಳುವೂ, ನೇತ್ರದ ಅಭಿಮಾನಿ ದೇವತೆಯೂ, ಜನರ ಬುದ್ಧಿಯ ಪ್ರಕಾಶಕನೂ, ಆಕಾಶ ಜ್ಯೋತಿಯೂ, ಜೀವಿಗಳ ಜೀವನವೂ ಆಗಿರುವೆ. ನಿನಗೆ ಜಯವಾಗಲಿ!

೭೦. ಎಲೈ ಜಯಾದಿತ್ಯನೇ! ದಾರಿದ್ರ್ಯದ ದಾರಿದ್ರ್ಯವೂ, ಐಶ್ವರ್ಯದ ನಿಧಿಯೂ, ಅಶುಭಗಳ ಅಮಂಗಳವೂ, ಸೌಖ್ಯಗಳ ಸುಖವೂ, ರೋಗಗಳ

ವ್ಯಾಧಿಗ್ರಸ್ತಂ ಕುಷ್ಠರೋಗಾಭಿಭೂತಂ
ಭಗ್ನಘ್ರಾಣಂ ಶೀರ್ಣದೇಹಂ ವಿಸಂಜ್ಞಂ ।
ಮಾತಾ ಪಿತಾ ಬಾಂಧವಾಃ ಸಂತ್ಯಜಂತಿ
ಸರ್ವೈಸ್ತ್ಯಕ್ತಂ ಪಾಸಿ ಕೋಽಸ್ತಿ ತ್ವದನ್ಯಃ ॥ ೭೧ ॥
ತ್ವಂ ಮೇ ಪಿತಾ ತ್ವಂ ಜನನೀ ತ್ವಮೇವ
ತ್ವಂ ಮೇ ಗುರುರ್ಬಾಂಧವಾಶ್ಚ ತ್ವಮೇವ ।
ತ್ವಂ ಮೇ ಧರ್ಮಸ್ತ್ವಂ ಚ ಮೇ ಮೋಕ್ಷಮಾರ್ಗೋ
ದಾಸಸ್ತುಭ್ಯಂ ತ್ಯಜ ವಾ ರಕ್ಷ ದೇವ ॥ ೭೨ ॥
ಪಾಪೋಽಸ್ಮಿ ಮೂಢೋಽಸ್ಮಿ ಮಹೋಗ್ರಕರ್ಮಾ
ರೌದ್ರೋಽಸ್ಮಿ ನಾಚಾರನಿಧಾನಮಸ್ಮಿ ।
ತಥಾಪಿ ತುಭ್ಯಂ ಪ್ರಣಿಪತ್ಯ ಪಾದಯೋ
ರ್ಜಯಂ ಭಕ್ತಾನಾಮಪರ್ಯಯ ಶ್ರೀ ಜಯಾರ್ಕ ॥ ೭೩ ॥

ಶ್ರೀ ನಾರದ ಉವಾಚ :—

ಏವಂ ಸ್ತುತೋ ಜಯಾದಿತ್ಯಃ ಕಮಠೇನ ಮಹಾತ್ಮನಾ ।
ಸ್ನಿಗ್ಧಗಂಭೀರಯಾ ವಾಚಾ ಪ್ರಾಹ ತಂ ಪ್ರಹಸನ್ನಿವ ॥ ೭೪ ॥

---

ರೋಗವೂ ನಿನ್ನಲ್ಲಿರುವುವೆಂದು ಭೂಲೋಕದಲ್ಲಿ ಪ್ರಸಿದ್ಧಿಯಾಗಿರುವುದು. ಅಪ್ರಮೇಯ ಮಹಿಮನಾದ ನಿನಗೆ ಜಯವು!

೭೧–೭೨. ವ್ಯಾಧಿಪೀಡಿತನೂ, ಕುಷ್ಠರೋಗದಿಂದ ನರಳುವವನೂ, ಇಂದ್ರಿಯವಿಕಲನೂ, ಗಳಿತಶರೀರನೂ ಆದ ಮನುಷ್ಯನನ್ನು ಜ್ಞಾನಶೂನ್ಯನಾದಕೂಡಲೆ ತಾಯಿ ತಂದೆಗಳೂ ಬಂಧುಗಳೂ ಕೈಬಿಡುವರು. ನೀನು ಮಾತ್ರ ಎಲ್ಲರಿಂದಲೂ ಪರಿತ್ಯಕ್ತನಾದ ರೋಗಿಯನ್ನು ಕಾಪಾಡುತ್ತಿರುವೆ. ಅವನಿಗೆ ನೀನಲ್ಲದೆ ಮತ್ತೆ ಯಾರು ಗತಿ! ನೀನೇ ನನಗೆ ತಂದೆಯು. ನೀನೇ ತಾಯಿಯು, ಗುರುವು, ಬಂಧುವರ್ಗವು! ನೀನೇ ಧರ್ಮವೂ ಮೋಕ್ಷಮಾರ್ಗವೂ ಆಗಿರುವೆ. ನಾನು ನಿನಗೆ ದಾಸನೆನಿಸಿರುವೆನು. ನೀನು ಪಾಲಿಸಿದರೂ ಸರಿ. ಕೈಬಿಟ್ಟರೂ ಸರಿ!!

೭೩. ನಾನು ಅತ್ಯಂತ ಪಾಪಿಯು; ಮೂಢಬುದ್ಧಿಯು; ಅನೇಕ ಭಯಂಕರ ಕೃತ್ಯಗಳನ್ನು ಮಾಡಿರುವೆನು. ಕ್ರೂರನಾಗಿರುವೆನು. ಆಚಾರವೆಂಬುದು ನನ್ನಲ್ಲಿ ಸ್ವಲ್ಪವೂ ಇಲ್ಲ. ಆದರೂ ನಿನ್ನ ಪಾದಪದ್ಮಗಳಲ್ಲಿ ನಮಸ್ಕರಿಸುತ್ತಿರುವೆನು. ಎಲೈ ಜಯಾದಿತ್ಯನೆ! ನಿನ್ನ ಭಕ್ತರಿಗೆ ಸಂಸಾರದಿಂದ ಮೋಕ್ಷವನ್ನು ದಯೆಪಾಲಿಸು."

೭೪. ನಾರದನು ಹೇಳುತ್ತಾನೆ:— ಇಂತು ಮಹಾತ್ಮನಾದ ಕಮಠನಿಂದ ಹೊಗಳಿಸಿಕೊಂಡ ಜಯಾದಿತ್ಯನು ಮುಗುಳ್ನಗೆಯಿಂದ ಕೂಡಿದವನಾಗಿ ಸ್ನೇಹಯುಕ್ತವೂ ಗಂಭಿರವೂ ಆದ ಧ್ವನಿಯಲ್ಲಿ ಆತನನ್ನು ಕುರಿತು ಇಂತೆಂದನು.

ಜಯಾದಿತ್ಯಾಷ್ಟಕಮಿದಂ ಯತ್ತ್ವಯಾ ಪರಿಕೀರ್ತಿತಂ ।
ಅನೇನ ಸ್ತೋಷ್ಯತೇ ಯೋ ಮಾಂ ಭುವಿ ತಸ್ಯ ನ ದುರ್ಲಭಂ ॥ ೭೫ ॥
ರವಿವಾರೇ ವಿಶೇಷೇಣ ಮಾಂ ಸಮಭ್ಯರ್ಚ್ಯ ಯಃ ಪಠೇತ್ ।
ತಸ್ಯ ರೋಗಾ ನ ಶಿಷ್ಯಂತಿ ದಾರಿದ್ರ್ಯಂ ಚ ನ ಸಂಶಯಃ ॥ ೭೬ ॥
ತ್ವಯಾ ಚ ತೋಷಿತೋ ವತ್ಸ ತವ ದದ್ಮಿ ವರಂ ತ್ವಮುಂ ।
ಸರ್ವಜ್ಞೋ ಭುವಿ ಭೂತ್ವಾ ತ್ವಂ ತತೋ ಮುಕ್ತಿಮವಾಪ್ಸ್ಯಸಿ ॥ ೭೭ ॥
ತ್ವತ್ಪಿತಾ ಸ್ಮೃತಿಕಾರಶ್ಚ ಭವಿಷ್ಯತಿ ದ್ವಿಜಾರ್ಚಿತಃ ।
ಸ್ಥಾನಸ್ಯಾಸ್ಯ ನ ನಾಶಶ್ಚ ಕದಾಚಿತ್ಪ್ರಭವಿಷ್ಯತಿ ॥ ೭೮ ॥
ನ ಚೈತತ್ಸ್ಥಾನಕಂ ವತ್ಸ ಪರಿತ್ಯಕ್ಷ್ಯಾಮಿ ಕರ್ಹಿಚಿತ್ ।
ಏವಮುಕ್ತ್ವಾ ಸ ಭಗವಾನ್ಬ್ರಾಹ್ಮಣೈರರ್ಚಿತಃ ಸ್ತುತಃ ।
ಅನುಜ್ಞಾಪ್ಯ ದ್ವಿಜೇಂದ್ರಾಂಸ್ತಾಂಸ್ತತ್ರೈವಾಂತರ್ದಧೇ ಪ್ರಭುಃ ॥ ೭೯ ॥
ಏವಂ ಪಾರ್ಥ ಸಮುತ್ಪನ್ನೋ ಜಯಾದಿತ್ಯೋಽತ್ರ ಭೂತಲೇ ॥ ೮೦ ॥

---

೭೫. "ಈಗ ನೀನು ಮಾಡಿದ ಸ್ತೋತ್ರವು ಜಯಾದಿತ್ಯಾಷ್ಟಕವೆಂಬುದಾಗಿ ಪ್ರಸಿದ್ಧಿಯನ್ನು ಪಡೆಯುವುದು. ಯಾರು ಈ ಸ್ತೋತ್ರದಿಂದ ನನ್ನನ್ನು ಸ್ತುತಿಸುವರೊ ಅವರಿಗೆ ಪ್ರಪಂಚದಲ್ಲಿ ದುರ್ಲಭವಾದುದು ಯಾವುದೂ ಇರುವುದಿಲ್ಲವು.

೭೬. ವಿಶೇಷವಾಗಿ ಭಾನುವಾರದ ದಿನ ನನ್ನನ್ನು ಪೂಜಿಸಿ ಈ ಸ್ತೋತ್ರವನ್ನು ಪಠಿಸುವವನಿಗೆ ರೋಗಗಳೂ ದಾರಿದ್ರ್ಯವೂ ನಿಶ್ಶೇಷವಾಗಿ ನಾಶವಾಗುವುವು. ಈ ವಿಷಯದಲ್ಲಿ ಸಂಶಯವಿಲ್ಲ.

೭೭. ಎಲೈ ಬಾಲಕನೆ! ನಿನ್ನ ಭಕ್ತಿಯಿಂದ ಸಂತೋಷಗೊಂಡವನಾಗಿ ನಿನಗೂ ಒಂದು ವರವನ್ನು ಕೊಡುವೆನು. ನೀನು ಭೂಮಿಯಲ್ಲಿ ಸರ್ವಜ್ಞನೆನಿಸಿಕೊಂಡು ಬಳಿಕ ಮೋಕ್ಷವನ್ನು ಪಡೆಯುವೆ.

೭೮. ನಿನ್ನ ತಂದೆಯೂ ಸ್ಮೃತಿಕಾರನೆನಿಸಿಕೊಂಡು ಇಹಲೋಕದಲ್ಲಿ ಬ್ರಾಹ್ಮಣರಿಂದ ಪೂಜಿತನಾಗುವನು. ಈ ಕ್ಷೇತ್ರವೂ ಸಹ ಎಂದಿಗೂ ನಾಶವನ್ನು ಹೊಂದುವುದಿಲ್ಲ.

೭೯. ಮಗುವೆ! ಈ ಸ್ಥಾನವನ್ನು ನಾನು ಎಂದಿಗೂ ತ್ಯಜಿಸುವುದಿಲ್ಲ." ಇಂತು ಹೇಳಿ ಸೂರ್ಯದೇವನು ಬ್ರಾಹ್ಮಣರಿಂದ ಪೂಜೆ, ಸ್ತೋತ್ರಗಳನ್ನು ಸ್ವೀಕರಿಸಿ ಅವರಿಗೆಲ್ಲ ಅನುಜ್ಞೆಯನ್ನು ಕೊಟ್ಟು ಅಲ್ಲಿಯೇ ಅಂತರ್ಧಾನವನ್ನು ಹೊಂದಿದನು.

೮೦–೮೧. ಎಲೈ ಪಾರ್ಥನೆ! ಇಂತು ಈ ಭೂಮಿಯಲ್ಲಿ ಜಯಾದಿತ್ಯನು ನೆಲಸುವನಾದನು. ಆಶ್ವಯುಜ ಮಾಸವೊದಗಲು ಭಾನುವಾರಗಳಲ್ಲಾಗಲಿ

ಆಶ್ವಿನೇ ಮಾಸಿ ಸಂಪ್ರಾಪ್ತೇ ರವಿವಾರೇ ಚ ಸುವ್ರತ ।
ಆಶ್ವಿನೇ ಭಾನುವಾರೇಣ ಯೋ ಜಯಾದಿತ್ಯಮರ್ಚಯೇತ್ ।
ಕೋಟಿತೀರ್ಥೇ ನರಃ ಸ್ನಾತ್ವಾ ಬ್ರಹ್ಮಹತ್ಯಾಂ ವ್ಯಪೋಹತಿ ॥ ೮೧ ॥
ಪೂಜನಾದ್ರಕ್ತಮಾಲ್ಯೈಶ್ಚ ರಕ್ತಚಂದನಕುಂಕುಮೈಃ ।
ಲೇಪನಾದ್ಗಂಧಧೂಪಾದ್ಯೈರ್ನೈವೇದ್ಯಘೃತಪಾಯಸೈಃ ॥ ೮೨ ॥
ಬ್ರಹ್ಮಘ್ನಶ್ಚ ಸುರಾಪಶ್ಚ ಸ್ತೇಯೀ ಚ ಗುರುತಲ್ಪಗಃ ।
ಮುಚ್ಯತೇ ಸರ್ವಪಾಪೇಭ್ಯಃ ಸೂರ್ಯಲೋಕಂ ಚ ಗಚ್ಛತಿ ॥ ೮೩ ॥
ಪುತ್ರದಾರಧನಾನ್ಯಾಯುಃ ಪ್ರಾಪ್ಯ ಸಾಂಸಾರಿಕಂ ಸುಖಂ ॥ ೮೪ ॥
ಇಷ್ಟಕಾಮೈಃ ಸಮಾಯುಕ್ತಃ ಸೂರ್ಯಲೋಕೇ ಚಿರಂ ವಸೇತ್ ॥ ೮೫ ॥
ಸರ್ವೇಷು ರವಿವಾರೇಷು ಜಯಾದಿತ್ಯಸ್ಯ ದರ್ಶನಂ ।
ಕೀರ್ತನಂ ಸ್ಮರಣಂ ವಾಪಿ ಸರ್ವರೋಗೋಪಶಾಂತಿದಂ ॥ ೮೬ ॥
ಅನಾದಿನಿಧನಂ ದೇವಮವ್ಯಕ್ತಂ ತೇಜಸಾಂ ನಿಧಿಂ ।
ಯೇ ಭಕ್ತಾಸ್ತೇ ಚ ಲೀಯಂತೇ ಸೌರಸ್ಥಾನೇ ನಿರಾಮಯೇ ॥ ೮೭ ॥

---

ಅಥವಾ ಅಶ್ವಿನೀ ನಕ್ಷತ್ರದೊಡಗೂಡಿದ ಭಾನುವಾರದಲ್ಲಾಗಲಿ ಯಾವ ಮನುಷ್ಯನು ಕೋಟಿತೀರ್ಥದಲ್ಲಿ ಸ್ನಾನಮಾಡಿ ಜಯಾದಿತ್ಯನನ್ನು ಅರ್ಚಿಸುವನೊ ಅವನಿಗೆ ಬ್ರಹ್ಮಹತ್ಯೆಯೆಂಬ ಪಾಪವೂ ಕಳೆದುಹೋಗುವುದು.

೮೨–೮೩. ಕೆಂಪುಹೂಗಳ ಪೂಜೆಯಿಂದಲೂ, ರಕ್ತಚಂದನ, ಕುಂಕುಮಗಳ ಲೇಪದಿಂದಲೂ, ಗಂಧ ಧೂಪಾದಿಗಳಿಂದಲೂ, ಘೃತಪಾಯಸಯುಕ್ತಗಳಾದ ನೈವೇದ್ಯಗಳಿಂದಲೂ ಬ್ರಹ್ಮಹತ್ಯೆಯನ್ನು ಮಾಡಿದವನೂ, ಸುರಾಪಾನನಿರತನೂ, ಚೋರನೂ, ಗುರುತಲ್ಪಗಾಮಿಯೂ ಸಕಲ ಪಾಪಗಳಿಂದ ನಿರ್ಮುಕ್ತರಾಗಿ ಸೂರ್ಯಲೋಕವನ್ನು ಹೊಂದುವರು.

೮೪–೮೫. ಎಂತಹ ಪಾಪಿಯಾದವನೂ, ಮಕ್ಕಳು, ಹೆಂಡತಿ, ಧನ, ದೀರ್ಘಾಯುಸ್ಸುಗಳನ್ನೂ ಸಂಸಾರ ಸುಖವನ್ನೂ ಪಡೆದು, ತನಗೆ ಬೇಕಾದ ಅಭಿಲಾಷೆಗಳಿಂದ ಕೂಡಿದವನಾಗಿ ಸೂರ್ಯಲೋಕದಲ್ಲಿ ಬಹಳ ಕಾಲ ವಾಸ ಮಾಡುವನು.

೮೬. ವರ್ಷದ ಎಲ್ಲ ಭಾನುವಾರಗಳಲ್ಲಿಯೂ ಜಯಾದಿತ್ಯನನ್ನು ನೋಡವುದರಿಂದಾಗಲಿ, ಸ್ಮರಿಸುವುದರಿಂದಾಗಲಿ ಸಕಲ ರೋಗಗಳೂ ಉಪಶಾಂತಿಯನ್ನು ಹೊಂದುವುವು.

೮೭. ಆದ್ಯಂತರಹಿತನೂ, ಅವ್ಯಕ್ತನೂ, ಜ್ಯೋತಿಗಳಿಗೆಲ್ಲ ನಿಧಿಯೂ ಆದ ಜಯಾದಿತ್ಯನಿಗೆ ಯಾರು ಭಕ್ತರೊ ಅವರು ತಾಪತ್ರಯರಹಿತವಾದ ಸೂರ್ಯನ ಸ್ಥಾನದಲ್ಲಿ ಸೇರುವರು.

ಸೂರ್ಯೋಪರಾಗೇ ಸಂಪ್ರಾಪ್ತೇ ರವಿಕೂಪೇ ಸಮಾಹಿತಃ ।
ಸ್ನಾನಂ ಯಃ ಕುರುತೇ ಪಾರ್ಥ ಹೋಮಂ ಕುರ್ಯಾತ್ಪ್ರಯತ್ನತಃ ॥
ದಾನಂ ಚೈವ ಯಥಾಶಕ್ತ್ಯಾ ಜಯಾದಿತ್ಯಾಗ್ರತಃ ಸ್ಥಿತಃ ।
ತಸ್ಯ ಪುಣ್ಯಸ್ಯ ಮಾಹಾತ್ಮ್ಯಂ ಶೃಣುಷ್ವೈಕಮನಾ ಜಯ ॥ ೮೯ ॥
ಕುರುಕ್ಷೇತ್ರೇಷು ಯತ್ಪುಣ್ಯಂ ಪ್ರಭಾಸೇ ಪುಷ್ಕರೇಷು ಚ ।
ವಾರಾಣಸ್ಯಾಂ ಚ ಯತ್ಪುಣ್ಯಂ ಪ್ರಯಾಗೇ ನೈಮಿಷೇಽಪಿ ವಾ ।
ತತ್ಪುಣ್ಯಂ ಲಭತೇ ಮರ್ತ್ಯೋ ಜಯಾದಿತ್ಯಪ್ರಸಾದತಃ ॥ ೯೦ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪ್ರಥಮೇ ಮಾಹೇಶ್ವರಖಂಡೇ ಕೌಮಾರಿಕಾಖಂಡೇ
"ಜಯಾದಿತ್ಯ ಮಹಾತ್ಮ್ಯವರ್ಣನಂ" ನಾಮ ಏಕಪಂಚಾಶತ್ತಮೋಽಧ್ಯಾಯಃ

---

೮೮. ಸೂರ್ಯಗ್ರಹಣವು ಬಂದ ಕಾಲದಲ್ಲಿ ಸಮಾಹಿತಮನಸ್ಕನಾಗಿ ರವಿಕೂಪದಲ್ಲಿ ಸ್ನಾನವನ್ನು ಮಾಡಿ ಆಮೇಲೆ ಪ್ರಯತ್ನಪೂರ್ವಕವಾಗಿ ಹೋಮವನ್ನು ಮಾಡಬೇಕು.

೮೯. ಇದಾದಬಳಿಕ ಜಯಾದಿತ್ಯನ ಸನ್ನಿಧಾನದಲ್ಲಿ ನಿಂತು ತನ್ನ ಶಕ್ತ್ಯನುಸಾರ ದಾನವನ್ನು ಕೊಡಬೇಕು. ಎಲೈ ಅರ್ಜುನನೆ! ಇಂತು ಮಾಡಿದ ಕರ್ಮದ ಫಲವನ್ನು ಏಕಾಗ್ರಚಿತ್ತನಾಗಿ ಕೇಳು.

೯೦. ಕುರುಕ್ಷೇತ್ರ, ಪ್ರಭಾಸ, ಪುಷ್ಕರ, ಕಾಶಿ, ಪ್ರಯಾಗ, ನೈಮಿಷ ಮುಂತಾದ ಪುಣ್ಯಕ್ಷೇತ್ರಗಳಲ್ಲಿ ದಾನವನ್ನು ಮಾಡಿದ ಫಲವನ್ನೇ ಮನುಷ್ಯನು ಇಲ್ಲಿಯೂ ಕೂಡ ಜಯಾದಿತ್ಯನ ಪ್ರಸಾದದಿಂದ ಪಡೆಯುತ್ತಾನೆ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಎರಡನೆಯ ಕೌಮಾರಿಕಾಖಂಡದಲ್ಲಿ
"ಜಯಾದಿತ್ಯ ಮಾಹಾತ್ಮ್ಯವರ್ಣನ"ವೆಂಬ
ಐವತ್ತೊಂದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ದ್ವಿಪಂಚಾಶತ್ತಮೋऽಧ್ಯಾಯಃ

### ಕೋಟಿತೀರ್ಥ ಮಾಹಾತ್ಮ್ಯವರ್ಣನಂ

ಅರ್ಜುನ ಉವಾಚ :—

ಕೋಟಿತೀರ್ಥಂ ಕಥಂ ಜಾತಂ ಕೇನ ವಾ ನಿರ್ಮಿತಂ ಮುನೇ ।
ಕಸ್ಮಾದ್ವಾ ಕೋಟಿತೀರ್ಥಾನಾಂ ಫಲಮತ್ರೋಚ್ಯತೇ ಮುನೇ ॥ ೧ ॥

ನಾರದ ಉವಾಚ :—

ಯದಾ ಮೇ ಸ್ಥಾಪಿತಂ ಸ್ಥಾನಂ ಪ್ರಸಾದ್ಯಾಥ ಮಯಾ ಪ್ರಭುಃ ।
ಬ್ರಹ್ಮಲೋಕಾತ್ಸಮಾನೀತಃ ಸಾಕ್ಷಾದ್ಬ್ರಹ್ಮಾ ಪಿತಾಮಹಃ ॥ ೨ ॥
ತತೋ ಮಧ್ಯಾಹ್ನಸಮಯೇ ಸ್ನಾನಾರ್ಥೇ ಭಗವಾನ್ವಿಧಿಃ ।
ಸಸ್ಮಾರ ಕೋಟಿತೀರ್ಥಾನಾಂ ಸ್ಮೃತಾನ್ಯತ್ರಾಗತಾನಿ ಚ ॥ ೩ ॥
ಸ್ವರ್ಗಾತ್ತ್ರಿದಶಲಕ್ಷಾಣಿ ಸಪ್ತತಿಶ್ಚ ಮಹೀತಲಾತ್ ।
ಪಾತಾಲಾದ್ವಿಂಶಲಕ್ಷಾಣಿ ಸ್ಮೃತಾನ್ಯಭ್ಯಾಗತಾನಿ ಚ ॥ ೪ ॥
ಅನೇನ ಪ್ರವಿಭಾಗೇನ ಲಿಂಗಾನ್ಯಪಿ ಕುರೂದ್ವಹ ।
ಆಯಾತಾನಿ ಯಥಾ ಪೂಜಾಂ ವಿದಧಾತಿ ಪಿತಾಮಹಃ ॥ ೫ ॥

---

### ಕನ್ನಡದ ಅನುವಾದ

#### ಕೋಟಿತೀರ್ಥ ಮಾಹಾತ್ಮ್ಯವರ್ಣನ

೧. ಅರ್ಜುನನು ಕೇಳುತ್ತಾನೆ:—ಕೋಟಿ ತೀರ್ಥವೆಂಬುದು ಹೇಗೆ ಹುಟ್ಟಿತು? ಯಾರಿಂದ ನಿರ್ಮಿತವಾಯಿತು? ಎಲೈ ಮುನಿಶ್ರೇಷ್ಠನೆ! ಏತಕ್ಕಾಗಿ ಈ ತೀರ್ಥದಲ್ಲಿ ಕೋಟಿ ತೀರ್ಥಗಳ ಫಲವುಂಟೆಂದು ಹೇಳುವರು?

೨–೩. ನಾರದನು ಹೇಳುತ್ತಾನೆ:— ನಾನು ಮೊದಲು ಈ ಕ್ಷೇತ್ರವನ್ನು ಸ್ಥಾಪಿಸಿದಾಗ ಲೋಕೇಶ್ವರನೂ ಪಿತಾಮಹನೂ ಆದ ಚತುರ್ಮುಖ ಬ್ರಹ್ಮನನ್ನು ಸತ್ಯಲೋಕದಿಂದ ಕರೆದುತಂದೆನು. ಆಗ ಮಧ್ಯಾಹ್ನಸಮಯವಾಗಲು ಬ್ರಹ್ಮದೇವನು ಸ್ನಾನಕ್ಕಾಗಿ ಕೋಟಿತೀರ್ಥಗಳನ್ನು ಸ್ಮರಿಸಿದನು. ಸ್ಮರಿಸಿದ ಮಾತ್ರದಿಂದಲೇ ಅವುಗಳೆಲ್ಲವೂ ಇಲ್ಲಿಗೆ ಬಂದುವು.

೪–೫. ಸ್ವರ್ಗದಿಂದ ಮುವ್ವತ್ತು ಲಕ್ಷ ತೀರ್ಥಗಳೂ, ಭೂಲೋಕದಿಂದ ಎಪ್ಪತ್ತು ಲಕ್ಷಗಳೂ, ಪಾತಾಲದಿಂದ ಇಪ್ಪತ್ತು ಲಕ್ಷ ತೀರ್ಥಗಳೂ ಸ್ಮರಿಸಿದ ಕೂಡಲೆ ಪ್ರಾಪ್ತವಾದುವು. ಈ ವಿಭಾಗ ಕ್ರಮದಿಂದಲೇ ಕೋಟಿ ಲಿಂಗಗಳೂ ಆಗಮಿಸಿದುವು. ಎಲೈ ಪಾರ್ಥನೆ! ಬ್ರಹ್ಮನು ಇವುಗಳೆಲ್ಲಕ್ಕೂ ಕ್ರಮವಾಗಿ ಪೂಜೆಯನ್ನು ಮಾಡುತ್ತಿರುವನು.

ತತೋಽಭಿಷೇಚನಂ ಕೃತ್ವಾ ಲಿಂಗಾನ್ಯಭ್ಯರ್ಚ್ಯ ಪದ್ಮಭೂಃ ।
ಮಧ್ಯಾಹ್ನಕೃತ್ಯಂ ಸಂಸಾಧ್ಯ ಮಮ ಪ್ರೀತ್ಯಾ ವರಂ ದದೌ ॥ ೬ ॥
ತತೋ ಭಗವತಾ ಹ್ಯತ್ರ ಮನಸಾ ನಿರ್ಮಿತಂ ಸರಃ ।
ಭಗವಾನರ್ಚಿತಸ್ತೀರ್ಥೈರಿದಮೂಚೇ ಪ್ರಜಾಪತಿಃ ॥ ೭ ॥
ಕಿಂ ಕುರ್ಮೋ ಭಗವನ್ನಾಥ ತದಾದೇಶಂ ದೇಹಿ ನಃ ಪ್ರಭೋ ।
ತೇಷಾಂ ತದ್ವಚನಂ ಶ್ರುತ್ವಾ ಬ್ರಹ್ಮಾ ಪ್ರಾಹ ಪ್ರಜಾಪತಿಃ ॥ ೮ ॥
ಏತಸ್ಮಿನ್ಸರಸಿ ಸ್ಥೇಯಂ ತೀರ್ಥೈಸ್ಸರ್ವೈರಥಾತ್ರ ಚ ।
ಏಕಸ್ಮಿಂಶ್ಚ ತಥಾ ಲಿಂಗೇ ಸರ್ವಲಿಂಗೈರ್ಮಮಾರ್ಚನಾತ್ ॥ ೯ ॥
ಕೋಟೀನಾಮೇವ ತೀರ್ಥಾನಾಂ ಲಿಂಗಾನಾಂ ಸ್ನಾನಪೂಜಯಾ ।
ದಾನೇನ ಚ ಫಲಂ ತ್ವತ್ರ ಯದಿ ಸತ್ಯಂ ವಚೋ ಮಮ ॥ ೧೦ ॥
ಯಃ ಶ್ರಾದ್ಧಂ ಕುರುತೇ ಚಾತ್ರ ಪಿಂಡದಾನಂ ಯಥಾವಿಧಿ ।
ಪಿತೄಣಾಮಕ್ಷಯಾ ತೃಪ್ತಿರ್ಜಾಯತೇ ನಾತ್ರ ಸಂಶಯಃ ॥ ೧೧ ॥

---

೬. ಬಳಿಕ ಆ ಲಿಂಗಗಳಿಗೆಲ್ಲ ಅಭಿಷೇಕ ಪೂಜೆಗಳನ್ನು ನೆರವೇರಿಸಿ ಬ್ರಹ್ಮನು ತನ್ನ ಮಧ್ಯಾಹ್ನಿಕಗಳನ್ನು ನೆರವೇರಿಸಿಕೊಂಡು ನನ್ನಲ್ಲಿ ಪ್ರೀತಿಯುಳ್ಳವನಾಗಿ ವರವನ್ನು ಕೊಟ್ಟನು.

೭. ಆಗ ಭಗವಂತನಿಂದಲೇ ಸಂಕಲ್ಪಮಾತ್ರದಿಂದ ಈ ಸರೋವರವು ನಿರ್ಮಿಸಲ್ಪಟ್ಟಿತು. ಆಗ ಲೋಕನಾಥನಾದ ಬ್ರಹ್ಮನು ಸಕಲ ತೀರ್ಥಗಳ ಅಭಿಮಾನಿ ದೇವತೆಗಳಿಂದ ಇಂತೆಂದು ಪ್ರಾರ್ಥಿತನಾದನು.

೮. "ಎಲೈ ಸ್ವಾಮಿಯಾದ ಸೃಷ್ಟಿಕರ್ತೃವೆ! ಈಗ ನಾವು ಮಾಡಬೇಕಾದುದೇನು? ನಮಗೆ ಅಪ್ಪಣೆಯನ್ನು ಕೊಡು." ಅವರ ಮಾತನ್ನು ಕೇಳಿ ಪ್ರಜಾಪತಿಯಾದ ಬ್ರಹ್ಮನು ಅಪ್ಪಣೆ ಮಾಡಿದನು.

೯. "ಸರ್ವತೀರ್ಥಗಳೂ ಈ ಕ್ಷೇತ್ರದ ಸರೋವರದಲ್ಲಿ ನೆಲಸಿರಬೇಕು. ಅಲ್ಲದೆ ನನ್ನ ಪೂಜೆಯ ಮಹಿಮೆಯಿಂದ ಈ ಸಕಲ ಲಿಂಗಗಳೂ ಒಂದೇ ಲಿಂಗದಲ್ಲಿಯೇ ಸಾನ್ನಿಧ್ಯವನ್ನು ಹೊಂದಬೇಕು.

೧೦. ಈ ನನ್ನ ಮಾತು ನಿಜವಾದಲ್ಲಿ ಕೋಟಿ ತೀರ್ಥಗಳಲ್ಲಿ ಸ್ನಾನವನ್ನೂ, ಕೋಟಿ ಲಿಂಗಗಳ ಪೂಜೆಯನ್ನೂ ದಾನಗಳನ್ನೂ ಮಾಡಿದ ಪುಣ್ಯವು ಇಲ್ಲಿ ಜನರಿಗೆ ಲಭಿಸುವುದು.

೧೧. ಯಾವನು ಇಲ್ಲಿ ವಿಧ್ಯುಕ್ತರೀತಿಯಿಂದ ಶ್ರಾದ್ಧವನ್ನೂ ಪಿಂಡದಾನವನ್ನೂ ಮಾಡುವನೊ, ಅವನ ಪಿತೃಗಳಿಗೆ ಅಕ್ಷಯ ತೃಪ್ತಿಯುಂಟಾಗುವುದರಲ್ಲಿ ಸಂಶಯವಿಲ್ಲವು.

ಸ್ನಾತ್ವಾ ಯೋಽಭ್ಯರ್ಚಯೇದ್ದೇವಂ ಕೋಟೀಶ್ವರಮನನ್ಯಧೀಃ ।
ಕೋಟಿಲಿಂಗಾರ್ಚನಫಲಂ ವ್ಯಕ್ತಂ ತಸ್ಯೋಪಜಾಯತೇ ॥ ೧೨ ॥
ತ್ರೈಲೋಕ್ಯೇ ಯಾನಿ ತೀರ್ಥಾನಿ ಗಂಗಾದ್ಯಾ ಸರಿತಸ್ತಥಾ
ತೇಷಾಂ ಸ ಫಲಮಾಪ್ನೋತಿ ಕೋಟಿತೀರ್ಥಾವಗಾಹನಾತ್ ॥ ೧೩ ॥
ಏವಂ ದತ್ತ್ವಾ ವರಂ ಬ್ರಹ್ಮಾ ಬ್ರಹ್ಮಲೋಕಂ ಯಯೌ ಪ್ರಭುಃ ।
ಕೋಟಿತೀರ್ಥಂ ಚ ಸಂಜಾತಂ ತತಃ ಪ್ರಭೃತಿ ವಿಶ್ರುತಂ ॥ ೧೪ ॥
ಅಸ್ಯ ತೀರೇ ಪುರಾ ಪಾರ್ಥ ಬ್ರಹ್ಮಾದ್ಯೈರ್ದೇವಸತ್ತಮೈಃ ।
ಯಜ್ಞಾನ್ಬಹುವಿಧಾನ್ಕೃತ್ವಾ ತತಃ ಸಿದ್ಧಿಂ ಪರಾಂ ಯಯುಃ ॥ ೧೫ ॥
ವಸಿಷ್ಠಾದ್ಯೈರ್ಮುನಿವರೈಸ್ತಪಶ್ಚೀರ್ಣಂ ಪುರಾನಘ ।
ಮನಸೋಽಭೀಪ್ಸಿತಾನ್ಕಾಮಾನ್ಪ್ರಾಪುರನ್ಯೇ ತಪೋಧನಾಃ ॥ ೧೬ ॥
ಅತ್ರ ತೀರ್ಥೇ ಪುರಾ ಪಾರ್ಥ ಅತ್ರಿಣಾ ವಿಹಿತಂ ತಪಃ ।
ಕೋಟಿತೀರ್ಥಾದ್ದಕ್ಷಿಣತಃ ಸ್ಥಾಪಿತಂ ಲಿಂಗಮುತ್ತಮಂ ॥ ೧೭ ॥

---

೧೨. ಯಾವನು ಈ ಸರಸ್ಸಿನಲ್ಲಿ ಸ್ನಾನಮಾಡಿ ತದೇಕ ಚಿತ್ತನಾಗಿ ಕೋಟೀಶ್ವರನನ್ನು ಪೂಜಿಸುವನೊ, ಅವನಿಗೆ ಕೋಟಿಲಿಂಗಗಳ ಪೂಜೆಯನ್ನು ಮಾಡಿದ ಫಲವು ನಿಜವಾಗಿಯೂ ಲಭಿಸುವುದು.

೧೩. ಮೂರು ಲೋಕಗಳಲ್ಲಿಯೂ ಎಷ್ಟು ತೀರ್ಥಗಳಿರುವುವೊ, ಗಂಗಾದಿ ಪುಣ್ಯನದಿಗಳೆಷ್ಟಿರುವುವೊ, ಅವುಗಳೆಲ್ಲವುಗಳಲ್ಲಿಯೂ ಸ್ನಾನಮಾಡಿದ ಫಲವನ್ನು ಮನುಷ್ಯನು ಈ ಕೋಟಿ ತೀರ್ಥದಲ್ಲಿ ಮಿಾಯುವುದರಿಂದ ಪಡೆಯುವನು.''

೧೪. ಇಂತು ವರವನ್ನು ಕೊಟ್ಟು ಬ್ರಹ್ಮನು ತನ್ನ ಲೋಕವನ್ನು ಕುರಿತು ತೆರಳಿದನು. ಅಂದಿನಿಂದ ಈ ಕೋಟಿ ತೀರ್ಥವು ನಿರ್ಮಿತವಾಗಿ ಪ್ರಸಿದ್ಧಿಯನ್ನು ಹೊಂದಿರುವುದು.

೧೫. ಎಲೈ ಅರ್ಜುನನೆ! ಪೂರ್ವದಲ್ಲಿ ಈ ತೀರ್ಥದಲ್ಲಿಯೇ ಬ್ರಹ್ಮಾದಿ ದೇವತೆಗಳು ವಿಧವಿಧಗಳಾದ ಯಜ್ಞಗಳನ್ನು ಮಾಡಿ ಉತ್ತಮ ಸಿದ್ಧಿಯನ್ನು ಹೊಂದಿದರು.

೧೬. ನಿಷ್ಪಾಪನಾದ ಎಲೈ ಪಾರ್ಥನೆ! ಇಲ್ಲಿಯೇ ಮುನ್ನು ವಸಿಷ್ಠನೇ ಮೊದಲಾದ ಮುನಿಶ್ರೇಷ್ಠರು ತಪಸ್ಸನ್ನು ಮಾಡಿರುವರು. ಇತರ ತಪಸ್ಸಂಪನ್ನರೂ ಕೂಡ ತಮ್ಮತಮ್ಮ ಮನಸ್ಸಿನ ಕೋರಿಕೆಗಳನ್ನೆಲ್ಲ ಹೊಂದುವವರಾದರು.

೧೭. ಓ ಪಾರ್ಥ! ಇಲ್ಲಿಯೇ ಹಿಂದೆ ಅತ್ರಿಮಹರ್ಷಿಯು ತಪಸ್ಸನ್ನು ಮಾಡಿದನು. ಆತನಿಂದಲೇ ಕೋಟಿತೀರ್ಥದ ದಕ್ಷಿಣ ದಿಕ್ಕಿನಲ್ಲಿ ಉತ್ತಮವಾದ ಶಿವಲಿಂಗವು ಸ್ಥಾಪಿಸಲ್ಪಟ್ಟಿತು.

ಅತ್ರೀಶ್ವರಾಭಿಸಂಜ್ಞಂ ತು ಮಹಾಪಾಪಹರಂ ಪರಂ ।
ಸ್ಥಾಪಯಿತ್ವಾ ಚ ತಲ್ಲಿಂಗಮಗ್ರೇ ಚಕ್ರೇ ಸರೋವರಂ ॥ ೧೮ ॥
ತತ್ರ ಸ್ನಾತ್ವಾ ಚ ಯೋ ಮರ್ತ್ಯಃ ಶ್ರಾದ್ಧಂ ಕುರ್ಯಾತ್ಪ್ರಯತ್ನತಃ ।
ಅತ್ರೀಶ್ವರಂ ಸಮಭ್ಯರ್ಚ್ಯ ರುದ್ರಲೋಕೇ ವಸೇಚ್ಚಿರಂ ॥ ೧೯ ॥
ಭರದ್ವಾಜೇನ ಮುನಿನಾ ಕೋಟಿತೀರ್ಥೇ ಸರೋವರೇ ।
ತಪಶ್ಚೀರ್ಣಂ ಮಹಾಬಾಹೋ ಯಜ್ಞಾಶ್ಚ ವಿಹಿತಾಃ ಕಿಲ ॥ ೨೦ ॥
ಭರದ್ವಾಜೇಶ್ವರಂ ಲಿಂಗಂ ಸ್ಥಾಪಿತಂ ಸುಮನೋಹರಂ ।
ತತ್ರ ಕೃತ್ವಾ ಸರೋ ರಮ್ಯಂ ಪರಾಂ ಮುದಮವಾಪ್ತವಾನ್ ॥ ೨೧ ॥
ತತ್ರ ಸ್ನಾತ್ವಾ ಸರೋ ಭಕ್ತ್ಯಾ ಶ್ರಾದ್ಧಂ ಕುರ್ಯಾದ್ವಿಧಾನತಃ ।
ಭರದ್ವಾಜೇಶ್ವರಂ ಪೂಜ್ಯ ಶಿವಲೋಕೇ ಮಹೀಯತೇ ॥ ೨೨ ॥
ತತಶ್ಚ ಕೋಟಿತೀರ್ಥೇಽಸ್ಮಿನ್ಗೌತಮೋ ಭಗವಾನೃಷಿಃ ।
ಅತಪ್ಯತ ತಪೋ ಘೋರಮಹಲ್ಯಾಸಂಗಮಾಶಯಾ ॥ ೨೩ ॥

---

೧೮. ಅದು ಅತ್ಯಂತ ಪಾಪಹರವೂ ಶ್ರೇಷ್ಠವೂ ಆಗಿ ಅತ್ರೀಶ್ವರನೆಂಬ ಹೆಸರುಳ್ಳದ್ದಾಗಿರುವುದು. ಇಂತು ಆ ಮಹರ್ಷಿಯು ಲಿಂಗವನ್ನು ಸ್ಥಾಪಿಸಿ ಅದರ ಎದುರಾಗಿಯೇ ಸರೋವರವೊಂದನ್ನು ನಿರ್ಮಿಸಿದನು.

೧೯. ಅದರಲ್ಲಿ ಯಾವ ಮನುಷ್ಯನು ಮಿಂದು ಅತ್ರೀಶ್ವರನನ್ನು ಪೂಜಿಸಿ ಪಿತೃಗಳ ಶ್ರಾದ್ಧವನ್ನು ಮಾಡುವನೊ, ಅವನು ಬಹಳ ಕಾಲ ರುದ್ರಲೋಕದಲ್ಲಿ ವಾಸಮಾಡುವನು.

೨೦. ಮಹಾಪರಾಕ್ರಮಿಯಾದ ಅರ್ಜುನನೆ! ಈ ಕೋಟಿ ತೀರ್ಥದ ಸರೋವರದ ಸಮೀಪದಲ್ಲಿಯೇ ಭರದ್ವಾಜ ಮಹರ್ಷಿಯಿಂದ ತಪಸ್ಸು ಮಾಡಲ್ಪಟ್ಟಿತು. ಆತನು ಇಲ್ಲಿ ಅನೇಕ ಯಜ್ಞಗಳನ್ನೂ ನೆರವೇರಿಸಿದನು.

೨೧. ಆತನಿಂದಲೇ ಮನೋಹರವಾದ ಭರದ್ವಾಜೇಶ್ವರವೆಂಬ ಲಿಂಗವು ಸ್ಥಾಪಿತವಾಯಿತು. ಬಳಿಕ ಅದರ ಬಳಿಯಲ್ಲಿಯೇ ರಮ್ಯವಾದ ಸರೋವರವೊಂದನ್ನು ನಿರ್ಮಿಸಿ ಆ ಮಹರ್ಷಿಯು ಪರಮ ಸಂತೋಷವನ್ನು ಪಡೆದನು.

೨೨. ಅಲ್ಲಿ ಮಾನವನು ಸ್ನಾನಮಾಡಿ ಭಕ್ತಿಯಿಂದ ಭರದ್ವಾಜೇಶ್ವರನನ್ನು ಪೂಜಿಸಿ ವಿಧಿವಿಹಿತವಾದ ರೀತಿಯಿಂದ ಶ್ರಾದ್ಧವನ್ನು ಮಾಡಲು ಶಿವಲೋಕದಲ್ಲಿ ಹೆಚ್ಚಿನ ಮರ್ಯಾದೆಯನ್ನು ಹೊಂದುವನು.

೨೩. ಬಳಿಕ ಈ ಕೋಟಿತೀರ್ಥದಲ್ಲಿಯೇ ಮಹಾತ್ಮನಾದ ಗೌತಮ ಮಹರ್ಷಿಯು ಅಹಲ್ಯೆಯನ್ನು ಸೇರಬೇಕೆಂಬ ಬಯಕೆಯಿಂದ ಘೋರವಾದ ತಪಸ್ಸನ್ನು ಮಾಡಿದನು.

ತಂ ಕಾಮಂ ಪ್ರಾಪ್ತವಾನ್ಧೀಮಾನ್ಸುರಾಂ ಮುದಮುಪಾಗತಃ ।
ಅಹಲ್ಯಯಾ ಸಮಾಯೋಗನೋತತ್ತೀರ್ಥಪ್ರಭಾವತಃ ॥ ೨೪ ॥
ಅಸ್ಮಿನ್‌ಕ್ಷೇತ್ರೇ ಮಹಾಲಿಂಗಂ ಗೌತಮೇಶ್ವರಸಂಜ್ಞಿತಂ ।
ಸ್ಥಾಪಯಾಮಾಸ ಭಗವಾನಹಲ್ಯಾಸರಸಸ್ತಟೇ ॥ ೨೫ ॥

ಅರ್ಜುನ ಉವಾಚ :—

ಅಹಲ್ಯಯಾ ಕದಾ ಬ್ರಹ್ಮನ್ಪಾನಿತಂ ವೈ ಮಹತ್ಸರಃ ।
ತನ್ಮಮ ಬ್ರೂಹಿ ಸಕಲಮಹಲ್ಯಾಸರಃಕಾರಣಂ ॥ ೨೬ ॥

ನಾರದ ಉವಾಚ :—

ಅಹಲ್ಯಾ ಶಾಪಮಾಪನ್ನಾ ಗೌತಮಾತ್ಕಿಲ ಫಾಲ್ಗುನ ।
ಪುರಾ ಚೇಂದ್ರಸಮಾಯೋಗೇ ಪರಂ ದುಃಖಮುಪಾಗತಾ ॥ ೨೭ ॥
ತತೋ ದುಃಖಾರ್ತಃ ಸ ಮುನಿಃ ಕೋಟಿತೀರ್ಥೇಽಕರೋತ್ತಪಃ ।
ತಪಸಾ ತೇನ ವೈ ಪಾರ್ಥಾಹಲ್ಯಯಾ ಸಹ ಸಂಗತಃ ॥ ೨೮ ॥
ತತಃ ಸಾಧ್ವೀ ಪರಂ ಹೃಷ್ಟಾ ಅತ್ರ ಕ್ಷೇತ್ರೇ ಸರೋವರಂ ।
ಚಕಾರ ಸುಮಹತ್ಪುಣ್ಯಂ ತೀರ್ಥೋದ್ಯೈಃ ಪರಿಪೂರಿತಂ ॥ ೨೯ ॥

---

೨೪. ಆತನು ತನ್ನ ಮನಸ್ಸಿನ ಇಷ್ಟಾರ್ಥವಾದ ಅಹಲ್ಯಾಸಂಗಮವನ್ನು ಈ ತೀರ್ಥದ ಮಾಹಾತ್ಮ್ಯೆಯಿಂದ ಪಡೆದವನಾಗಿ ಬಹಳ ಸಂತೋಷಗೊಂಡನು.

೨೫. ಈ ಕ್ಷೇತ್ರದಲ್ಲಿಯೇ ಅಹಲ್ಯಾಸರೋವರದ ದಡದಲ್ಲಿ ಗೌತಮೇಶ್ವರ ನೆಂಬ ಹೆಸರಿನ ಮಹಾಲಿಂಗವನ್ನು ಆ ಮಹರ್ಷಿಯು ಸ್ಥಾಪನೆಮಾಡಿದನು.

೨೬. ಅರ್ಜುನನು ಕೇಳುತ್ತಾನೆ:—ಎಲೈ ಮಹರ್ಷಿಯೆ ! ಮಹತ್ತಾದ ಈ ಸರೋವರವು ಅಹಲ್ಯಾದೇವಿಯಿಂದ ಯಾವಾಗ ನಿರ್ಮಿತವಾಯಿತು ? ಇದರ ಕಾರಣವನ್ನೆಲ್ಲ ಆದ್ಯಂತಸಹಿತವಾಗಿ ನನಗೆ ಹೇಳುವವನಾಗು.

೨೭. ನಾರದನು ಹೇಳುತ್ತಾನೆ:— ಎಲೈ ಅರ್ಜುನನೆ ! ಮುನ್ನು ಇಂದ್ರನ ನಿಮಿತ್ತವಾಗಿ ಗೌತಮ ಮಹರ್ಷಿಗಳಿಂದ ಶಾಪವನ್ನು ಪಡೆದು ಅಹಲ್ಯೆಯು ಅಪಾರವಾದ ದುಃಖವನ್ನು ಹೊಂದಿದಳು.

೨೮. ಇದರಿಂದ ಮಹರ್ಷಿಯೂ ಕೂಡ ದುಃಖದಿಂದ ವ್ಯಾಕುಲನಾಗಿ ಕೋಟಿ ತೀರ್ಥದಲ್ಲಿ ತಪಸ್ಸನ್ನು ಮಾಡಿದನು. ಆ ತಪಸ್ಸಿನ ಫಲವಾಗಿಯೇ ಮತ್ತೆ ಆಕೆಯೊಡನೆ ಸೇರುವವನಾದನು.

೨೯. ಬಳಿಕ ಆ ಸಾಧ್ವೀಮಣಿಯು ಅತ್ಯಂತ ಹರ್ಷಗೊಂಡು ಈ ಕ್ಷೇತ್ರ ದಲ್ಲಿ ಪರಮ ಪುಣ್ಯಪ್ರದವೂ, ಸಕಲ ತೀರ್ಥೋದಕಗಳಿಂದ ತುಂಬಿದುದೂ ಆದ ಈ ಸರೋವರವನ್ನುಂಟುಮಾಡಿದಳು.

ಅಹಲ್ಯಾಸರಸಿ ಸ್ನಾನಂ ಪಿಂಡದಾನಂ ಸಮಾಚರೇತ್ ।
ಗೌತಮೇಶಂ ಚ ಸಂಪೂಜ್ಯ ಬ್ರಹ್ಮಲೋಕಂ ಸ ಗಚ್ಛತಿ ॥ ೩೦ ॥
ಕೋಟಿತೀರ್ಥೇ ನರಶ್ರೇಷ್ಠ ಅನೇಕೇ ಮುನಯೋಽಮಲಾಃ ।
ತಪಸ್ತಪ್ತ್ವಾ ಸುಘೋರಂ ಚ ಪರಾಂ ಸಿದ್ಧಿಮುಪಾಗತಾಃ ॥ ೩೧ ॥
ರಾಜಭಿಃ ಬಹುಭಿಃ ಪೂರ್ವಂ ತಪೋ ದಾನಂ ತಥಾಧ್ವರಾಃ ।
ಅಸ್ಮಿಂಸ್ತೀರ್ಥೇ ಸುವಿಹಿತಾಃ ಪರಾಂ ಸಿದ್ಧಿಮುಪಾಗತಾಃ ॥ ೩೨ ॥
ಅಸ್ಯ ತೀರೇ ದ್ವಿಜಂ ಚೈಕಂ ಮೃಷ್ಟಾನ್ನೈರ್ಯಸ್ತು ತರ್ಪಯೇತ್ ।
ತೇನ ಶ್ರದ್ಧಾಸಹಾಯೇನ ಕೋಟಿರ್ಭವತಿ ತರ್ಪಿತಾ ॥ ೩೩ ॥
ಅಸ್ಯ ತೀರೇ ನರಃ ಪಾರ್ಥ ರತ್ನಾನಿ ವಿವಿಧಾನಿ ಚ ।
ಗೋಭೂಮಿತಿಲಧಾನ್ಯಾನಿ ವಾಸಾಂಸಿ ವಿವಿಧಾನಿ ಚ ।
ಶ್ರದ್ಧಯಾ ಪರಯಾ ಪಾರ್ಥ ದ್ವಿಜೇಭ್ಯಃ ಸಂಪ್ರಯಚ್ಛತಿ ।
ಶತಕೋಟಿಗುಣಂ ಪುಣ್ಯಂ ಕೋಟಿತೀರ್ಥಪ್ರಭಾವತಃ ॥ ೩೪ ॥
ಕೋಟಿತೀರ್ಥೇ ಪ್ರತಿಶ್ರುತ್ಯ ದ್ವಿಜೇಭ್ಯೋ ನ ಪ್ರಯಚ್ಛತಿ ॥ ೩೫ ॥
ನರಕೇ ಪಾತಯಿತ್ವಾ ಚ ಕುಲಮೇಕೋತ್ತರಂ ಶತಂ ।
ಆತ್ಮಾನಂ ಪಾತಯೇತ್ಪಶ್ಚಾದ್ದಾರುಣಂ ರೌರವಂ ಮಹತ್ ॥ ೩೬

೩೦–೩೧. ಅಹಲ್ಯಾಸರಸ್ಸಿನಲ್ಲಿ ಸ್ನಾನಮಾಡಿ ಗೌತಮೇಶ್ವರನನ್ನು ಪೂಜಿಸಿ ಪಿಂಡಪ್ರದಾನವನ್ನು ಮಾಡಲು ಬ್ರಹ್ಮಲೋಕ ಪ್ರಾಪ್ತಿಯಾಗುವುದು. ಎಲೈ ನರೋತ್ತಮನೆ! ಈ ಕೋಟಿತೀರ್ಥದಲ್ಲಿ ನಿಷ್ಕಲ್ಮಷರಾದ ಅನೇಕ ಮಹರ್ಷಿಗಳು ಬಹುಕಾಲ ತಪಸ್ಸನ್ನು ಮಾಡಿ ಉತ್ತಮ ಸಿದ್ಧಿಯನ್ನು ಸಂಪಾದಿಸಿದರು.

೩೨–೩೩. ಪೂರ್ವದಲ್ಲಿ ಈ ತೀರ್ಥದಲ್ಲಿಯೇ ಅನೇಕ ರಾಜರೂ ಸಹ ತಪಸ್ಸು, ದಾನ, ಯಜ್ಞಗಳು ಮುಂತಾದುವುಗಳನ್ನು ಮಾಡಿ ನಿಷ್ಪಾಪರಾಗಿ ಸಿದ್ಧಿಯನ್ನು ಪಡೆದರು. ಈ ತೀರ್ಥದಲ್ಲಿ ಕೇವಲ ಶ್ರದ್ಧೆಯಿಂದ ಯಾವನು ಒಬ್ಬ ಬ್ರಾಹ್ಮಣನನ್ನಾದರೂ ಮೃಷ್ಟಾನ್ನಭೋಜನದಿಂದ ಸಂತೋಷಗೊಳಿಸುವನೊ, ಅವನಿಂದ ಕೋಟಿ ಬ್ರಾಹ್ಮಣಸಮೂಹವು ತೃಪ್ತಿಗೊಳಿಸಲ್ಪಟ್ಟಂತೆಯೇ ಸರಿ.

೩೪. ಎಲೈ ಪಾರ್ಥನೆ! ಈ ತೀರ್ಥದಲ್ಲಿ ಯಾವ ಮನುಷ್ಯನು ವಿಧವಿಧಗಳಾದ ರತ್ನಗಳು, ಗೋವು, ಭೂಮಿ, ತಿಲ, ಧಾನ್ಯಗಳು, ವಿವಿಧ ವಸ್ತ್ರಗಳು ಮುಂತಾದುವುಗಳನ್ನು ಬ್ರಾಹ್ಮಣೋತ್ತಮರಿಗೆ ಶ್ರದ್ಧೆಯಿಂದ ದಾನಮಾಡುವನೊ, ಅವನಿಗೆ ಕೋಟಿತೀರ್ಥದ ಮಹಿಮೆಯಿಂದ ನೂರು ಕೋಟಿ ಗುಣಿತವಾದ ಪುಣ್ಯವು ಲಭಿಸುವುದು.

೩೫–೩೬. ಯಾವನು ಕೋಟಿ ತೀರ್ಥದಲ್ಲಿ ಪ್ರತಿಜ್ಞೆಯನ್ನು ಮಾಡಿ ಬ್ರಾಹ್ಮಣರಿಗೆ ದಾನಮಾಡುವುದಿಲ್ಲವೋ, ಅವನ ಪಾಪವು ನೂರೊಂದು

ಮಾಘಮಾಸೇ ತು ಸಂಪ್ರಾಪ್ತೇ ಪ್ರಾತಃಕಾಲೇ ತಥಾಮಲೇ ।
ಯಃ ಸ್ನಾತಿ ಮಕರಾದಿತ್ಯೇ ತಸ್ಯ ಪುಣ್ಯಂ ಶೃಣುಷ್ವ ಮೇ ॥ ೩೭ ॥
ಸರ್ವತೀರ್ಥೇಷು ಯತ್ಪುಣ್ಯಂ ಸರ್ವಯಜ್ಞೇಷು ಯತ್ಫಲಂ ।
ಸರ್ವದಾನವ್ರತೈರ್ಯಚ್ಚ ಕೋಟಿತೀರ್ಥೇ ದಿನೇದಿನೇ ॥ ೩೮ ॥
ತತ್ಪುಣ್ಯಂ ಲಭತೇ ಮರ್ತ್ಯೋ ನಾತ್ರ ಕಾರ್ಯಾ ವಿಚಾರಣಾ ।
ಕನ್ಯಾಗತೇ ಸವಿತರಿ ಯಃ ಶ್ರಾದ್ಧಂ ಕುರುತೇ ನರಃ ।
ಪಿತರಸ್ತಸ್ಯ ತುಷ್ಯಂತಿ ಗಯಾಶ್ರಾದ್ಧಶತೈರ್ನ ತು ॥ ೩೯ ॥
ಕಾರ್ತಿಕೇ ಮಾಸಿ ಸಂಪ್ರಾಪ್ತೇ ಸ್ನಾನಾದಿ ಕುರುತೇ ಯದಿ ।
ತದಕ್ಷಯ ಫಲಂ ಸರ್ವಂ ಬ್ರಹ್ಮಣೋ ವಚನಂ ಯಥಾ ॥ ೪೦ ॥
ಇಷ್ಟ್ವಾತ್ರ ಯಜ್ಞಮೇಕಂ ತು ಕೋಟಿಯಜ್ಞಫಲಂ ಲಭೇತ್ ॥ ೪೧ ॥

---

ಕುಲದವರನ್ನೂ ನರಕದಲ್ಲಿ ಬೀಳಿಸಿ, ಅವನನ್ನೂ ಕೂಡ ಭಯಂಕರವೂ ಶಾಶ್ವತವೂ ಆದ ರೌರವದಲ್ಲಿ ತಳ್ಳುವುದು.

೩೭. ಮಾಘಮಾಸವು ಪ್ರಾಪ್ತವಾಗಲು ಶುಭ್ರವಾದ ಪ್ರಾತಃಕಾಲದಲ್ಲಿ ಸೂರ್ಯನು ಮಕರ ಲಗ್ನದಲ್ಲಿರಲು ಈ ತೀರ್ಥದಲ್ಲಿ ಸ್ನಾನಮಾಡುವವನ ಪುಣ್ಯವನ್ನು ತಿಳಿಸುವೆನು, ಕೇಳು.

೩೮. ಸಕಲ ತೀರ್ಥಗಳಲ್ಲಿಯೂ ಸ್ನಾನ ಮಾಡುವುದರಿಂದ ಯಾವ ಪುಣ್ಯವುಂಟೊ, ಸಕಲ ಯಜ್ಞಗಳನ್ನು ಆಚರಿಸುವವನಿಗೆ ಯಾವ ಫಲಗಳು ಲಭಿಸುವುವೊ, ಸರ್ವದಾನ, ವ್ರತಗಳಿಂದಲೂ ಯಾವ ಸುಕೃತವುಂಟೊ, ಅವುಗಳೆಲ್ಲವೂ ಈ ಕೋಟಿ ತೀರ್ಥದಲ್ಲಿ ಪ್ರತಿನಿತ್ಯದ ಆಚರಣೆಯಿಂದ ಲಭಿಸುವುವು.

೩೯. ಮಾನವನು ಆ ಪುಣ್ಯವನ್ನು ಪಡೆಯುವನೆಂಬ ವಿಷಯದಲ್ಲಿ ವಿಚಾರ ಮಾಡಬೇಕಾಗಿಯೇ ಇರುವುದಿಲ್ಲ. ಸೂರ್ಯನು ಕನ್ಯಾಲಗ್ನಸ್ಥನಾಗಿರಲು ಯಾವನು ಈ ಕ್ಷೇತ್ರದಲ್ಲಿ ಶ್ರಾದ್ಧವನ್ನು ಮಾಡುವನೊ, ಅವನ ಪಿತೃಗಳು ಒಂದು ನೂರು ಗಯಾಶ್ರಾದ್ಧಗಳಿಂದಲೂ ಹೊಂದಲಾಗದ ತೃಪ್ತಿಯನ್ನು ಹೊಂದುವರು.

೪೦. ಕಾರ್ತಿಕ ಮಾಸದಲ್ಲಿ ಪ್ರತಿನಿತ್ಯವೂ ಪ್ರಾತಃಸ್ನಾನವನ್ನು ಕೋಟಿ ತೀರ್ಥದಲ್ಲಿ ಮಾಡಲು ಬ್ರಹ್ಮದೇವನ ವಚನಾನುಸಾರವಾಗಿ ಅದು ಅಕ್ಷಯ ಫಲದಾಯಕವಾಗಿರುವುದು.

೪೧–೪೨. ಇಲ್ಲಿ ಒಂದು ಯಜ್ಞವನ್ನು ಮಾಡಲು ಕೋಟಿ ಯಜ್ಞಗಳ ಫಲವನ್ನು ಕರ್ತೃವು ಪಡೆಯುವನು. ಬ್ರಾಹ್ಮ ವಿಧಾನದಿಂದ ಇಲ್ಲಿ ಕನ್ಯಾದಾನವನ್ನು ಮಾಡಲು ಕೋಟಿಗುಣಿತಫಲವು ಲಭಿಸುವುದು. ಈ ಕೋಟಿತೀರ್ಥದಲ್ಲಿ ಮಾಡಿದ ಸಕಲ ದಾನಗಳೂ ಕೋಟಿಗುಣಿತ ಪುಣ್ಯಗಳನ್ನು ಸಂಪಾದಿಸಿಕೊಡುವುವು.

ಕನ್ಯಾಂ ಬ್ರಾಹ್ಮೇಣ ವಿಧಿನಾ ದತ್ವಾತ್ವಕೋಟಿಗುಣಂ ಫಲಂ ।
ಸರ್ವದಾನಂ ಕೋಟಿಗುಣಂ ಕೋಟಿತೀರ್ಥೇ ಭವೇದ್ಯತಃ ॥ ೪೨ ॥
ಕೋಟಿತೀರ್ಥೇ ತ್ಯಜೇತ್ಪ್ರಾಣಾನ್ಹೃದಿ ಕೃತ್ವಾ ತು ಮಾಧವಂ ।
ತಸ್ಯ ಪಾರ್ಥ ಚಿರಂ ಸ್ವರ್ಗೇ ಹ್ಯಕ್ಷಯಾ ಶಾಶ್ವತೀ ಗತಿಃ ॥ ೪೩ ॥
ಕೋಟಿತೀರ್ಥೇ ತೀರ್ಥವರೇ ದೇಹತ್ಯಾಗಂ ಕರೋತಿ ಯಃ ।
ತಸ್ಯ ಪೂಜಾಂ ಪ್ರಕುರ್ವಂತಿ ಬ್ರಹ್ಮಾದ್ಯಾ ದೇವತಾಗಣಾಃ ॥ ೪೪ ॥
ಅಸ್ಯ ತೀರೇ ದೇಹದಾಹೋ ಯಸ್ಯ ಕಸ್ಯ ಪ್ರಜಾಯತೇ ।
ಅಸ್ಥಿಕ್ಷೇಪೋ ಯಸ್ಯ ಭವೇನ್ಮಹೀಸಾಗರಸಂಗಮೇ ॥ ೪೫ ॥
ತತ್ಫಲಂ ಗದಿತುಂ ಪಾರ್ಥ ವಾಗೀಶೋಽಪಿ ನ ವೈ ಕ್ಷಮಃ ।
ಏತಜ್ಜ್ಞಾತ್ವಾ ಪರಂ ಪಾರ್ಥ ಕೋಟಿತೀರ್ಥಂ ಪ್ರಸೇವತೇ ॥ ೪೬ ॥
ದಿನೇದಿನೇ ಫಲಂ ತಸ್ಯ ಕಾಪಿಲಂ ಗೋಸಹಸ್ರಕಂ ।
ಸ್ವರ್ಗೇ ಮರ್ತ್ಯೇ ಚ ಪಾತಾಲೇ ತಸ್ಮಾದೇತತ್ಸುದುರ್ಲಭಂ ॥ ೪೭ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿ ಸಾಹಸ್ರ್ಯಾಂ ಸಂಹಿತಾಯಾಂ
ಪ್ರಥಮೇ ಮಾಹೇಶ್ವರಖಂಡೇ ಕೌಮಾರಿಕಾಖಂಡೇ
"ಕೋಟ ತೀರ್ಥ ಮಹಾತ್ಮ್ಯವರ್ಣನಂ" ನಾಮ
ದ್ವಿಪಂಚಾಶತ್ತಮೋಽಧ್ಯಾಯಃ

---

೪೩–೪೪. ಮನುಷ್ಯನಾದವನು ಮನಸ್ಸಿನಲ್ಲಿ ನಾರಾಯಣನನ್ನು ಸ್ಮರಿಸುತ್ತ ಕೋಟಿತೀರ್ಥದಲ್ಲಿ ದೇಹವನ್ನು ಬಿಡಬೇಕು. ಎಲೈ ಪಾರ್ಥನೆ! ಅವನಿಗೆ ಶಾಶ್ವತವೂ, ಅಕ್ಷಯವೂ ಆದ ಸ್ವರ್ಗವಾಸವು ಲಭಿಸುವುದು. ಪರಮ ಪವಿತ್ರ ವಾದ ಕೋಟಿತೀರ್ಥದಲ್ಲಿ ಯಾವನು ದೇಹತ್ಯಾಗವನ್ನು ಮಾಡುವನೊ, ಅವನನ್ನು ಬ್ರಹ್ಮಾದಿ ದೇವತೆಗಳೂ ಕೂಡ ವಿಶೇಷವಾಗಿ ಗೌರವಿಸುವರು.

೪೫–೪೭. ಯಾವ ಮಾನವನಿಗಾದರೂ ಈ ಕ್ಷೇತ್ರದ ತೀರದಲ್ಲಿ ದೇಹವು ದಗ್ಧವಾಗಿ ಅಸ್ಥಿಗಳು ಮಹೀಸಾಗರಸಂಗಮದಲ್ಲಿ ಹಾಕಲ್ಪಡುವುವೊ, ಅವನ ಪುಣ್ಯದ ಇಯತ್ತೆಯನ್ನು ತಿಳಿಸಲು ಬೃಹಸ್ಪತಿಯೂ ಕೂಡ ಶಕ್ತನಲ್ಲವು. ಎಲೈ ಪಾರ್ಥನೆ! ಇದನ್ನು ತಿಳಿದೇ ಮನುಷ್ಯನು ಪರಮಕ್ಷೇತ್ರವಾದ ಕೋಟಿತೀರ್ಥ ವನ್ನು ಸೇವಿಸುವನು. ಅವನಿಗೆ ಪ್ರತಿನಿತ್ಯವೂ ಒಂದುಸಾವಿರ ಕಪಿಲೆಗೋವುಗಳನ್ನು ದಾನಮಾಡಿದ ಫಲವು ಪ್ರಾಪ್ತವಾಗುವುದು. ಆದುದರಿಂದ ಸ್ವರ್ಗ, ಮರ್ತ್ಯ, ಪಾತಾಲಗಳೆಂಬ ಮೂರು ಲೋಕಗಳಲ್ಲಿಯೂ ಇದಕ್ಕೆ ಸಮಾನವಾದ ಕ್ಷೇತ್ರವು ಅತ್ಯಂತ ದುರ್ಲಭವು.

ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಎರಡನೆಯ ಕೌಮಾರಿಕಾಖಂಡದಲ್ಲಿ
"ಕೋಟಿತೀರ್ಥ ಮಾಹಾತ್ಮ್ಯವರ್ಣನ"ವೆಂಬ
ಐವತ್ತೆರಡನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ತ್ರಿಪಂಚಾಶತ್ತಮೋಽಧ್ಯಾಯಃ

### ಕೋಟಿತೀರ್ಥಾದಿ ಮಾಹಾತ್ಮ್ಯವರ್ಣನಂ

ನಾರದ ಉವಾಚ :—

ಅಥಾನ್ಯತ್ಸಂಪ್ರವಕ್ಷ್ಯಾಮಿ ಶಾಲಾಮಾಹಾತ್ಮ್ಯಮುತ್ತಮಂ ।
ಸಂಸ್ಥಾಪಿತೇ ಪುರಾಸ್ಥಾನೇ ಪ್ರೋಕ್ತೋಽಹಂ ದ್ವಿಜಪುಂಗವೈಃ ॥ ೧ ॥
ಸ್ಥಾನಸ್ಯ ರಕ್ಷಣಾರ್ಥಾಯ ಉಪಾಯಂ ಕುರು ಸುವ್ರತ ।
ತತೋ ಮಯಾ ಪ್ರತಿಜ್ಞಾತಂ ಕರಿಷ್ಯೇ ಸ್ಥಾನರಕ್ಷಣಂ ॥ ೨ ॥
ಆರಾಧಿತಾ ಮಯಾ ಪಶ್ಚಾದ್ಬ್ರಹ್ಮವಿಷ್ಣುಮಹೇಶ್ವರಾಃ ।
ತ್ರಯಸ್ತ್ವೇಕಾಗ್ರಚಿತ್ತೇನ ತತಸ್ತುಷ್ಟಾಃ ಸುರೋತ್ತಮಾಃ ॥ ೩ ॥
ಸಮಾಗಮ್ಯಾಥ ಮಾಂ ಪ್ರೋಚುರ್ನಾರದ ವ್ರಿಯತಾಂ ವರಃ ।
ಪ್ರೋಕ್ತಂ ತಾನರ್ಚ್ಯ ಚ ಮಯಾ ಕ್ರಿಯತಾಂ ಸ್ಥಾನರಕ್ಷಣಂ ॥ ೪ ॥
ಅಯಮೇವ ವರೋ ಮಹ್ಯಂ ದೇಯೋ ದೇವೈಃ ಸುತೋಷಿತೈಃ ।
ಸ್ಥಾನಲೋಪೋ ಯಥಾ ನ ಸ್ಯಾದ್ಯಥಾ ಕೀರ್ತಿರ್ಭವೇನ್ಮಮ ॥ ೫ ॥

---

### ಕನ್ನಡದ ಅನುವಾದ

#### ಕೋಟಿತೀರ್ಥಾದಿಮಾಹಾತ್ಮ್ಯವರ್ಣನ

೧–೨. ನಾರದನು ಹೇಳುತ್ತಾನೆ:—ಇನ್ನು ನಿನಗೆ ಉತ್ತಮವಾದ ಶಾಲಾ ಮಾಹಾತ್ಮ್ಯೆಯನ್ನು ತಿಳಿಸುವೆನು. ಪೂರ್ವದಲ್ಲಿ ನಾನು ಈ ಕ್ಷೇತ್ರವನ್ನು ಸ್ಥಾಪಿಸಿದಾಗ ಬ್ರಾಹ್ಮಣೋತ್ತಮರಿಂದ "ಎಲೈ ಸುವ್ರತನೆ! ಈ ಸ್ಥಾನದ ರಕ್ಷಣೆಗಾಗಿ ಯಾವುದಾದರೂ ಉಪಾಯವನ್ನು ಕಲ್ಪಿಸಬೇಕು" ಎಂದು ಪ್ರಾರ್ಥಿತನಾದೆನು. ಆಗ ನಾನು ಸ್ಥಾನರಕ್ಷಣವನ್ನು ಮಾಡಲು ಅವರಿಗಾಗಿ ಪ್ರತಿಜ್ಞೆಯನ್ನು ಮಾಡಿದೆನು.

೩–೫. ಬಳಿಕ ತ್ರಿಮೂರ್ತಿಗಳಾದ ಬ್ರಹ್ಮ ವಿಷ್ಣು ಮಹೇಶ್ವರರು ಏಕಾಗ್ರ ಚಿತ್ತನಾದ ನನ್ನಿಂದ ಪೂಜಿಸಲ್ಪಟ್ಟರು. ಅದರಿಂದ ಆ ಮೂವರು ದೇವೋತ್ತ ಮರೂ ಸಂತೋಷಗೊಂಡರು. ಅವರು ಒಟ್ಟಿಗೆ ಪ್ರಾಪ್ತರಾಗಿ ನನ್ನನ್ನು ಕುರಿತು "ಎಲೈ ನಾರದನೆ! ನಿನಗೆ ಬೇಕಾದ ವರವನ್ನು ಬೇಡು" ಎಂದು ಅನುಗ್ರಹಿ ಸಿದರು. ನಾನು ಅವರೆಲ್ಲರಿಗೂ ಉಚಿತವಾದ ಪೂಜೆಯನ್ನೊಪ್ಪಿಸಿ "ನಿಮ್ಮಿಂದ ಈ ಕ್ಷೇತ್ರದ ರಕ್ಷಣೆಯು ಮಾಡಲ್ಪಡಬೇಕು. ಸಂತುಷ್ಟರಾದ ದೇವತೆಗಳಿಂದ ನನಗೆ ಈ ವರವೇ ಅನುಗ್ರಹಿಸಲ್ಪಡಬೇಕು. ಈ ಸ್ಥಾನವು ಎಂದಿಗೂ ನಾಶವಾಗ ಬಾರದು. ಅಲ್ಲದೆ ಇಲ್ಲಿ ನನ್ನ ಕೀರ್ತಿಯು ಸ್ಥಿರವಾಗಿ ನೆಲಸಿರಬೇಕು" ಎಂದು ಪ್ರಾರ್ಥಿಸಿದೆನು.

ಏವಮಸ್ತ್ವಿತಿ ದೇವೇಶೈಃ ಪ್ರತಿಜ್ಞಾತಂ ತದಾ ಮುನೇ ।
ಸ್ವಾಂಶೇನ ಪ್ರಕರಿಷ್ಯಾಮೋ ದ್ವಿಜಾನಾಂ ತವ ರಕ್ಷಣಂ ॥ ೬ ॥
ಏವಮುಕ್ತ್ವಾ ಕಲಾ ಮುಕ್ತ್ವಾ ದೇವೈಸ್ತ್ರಿಪುರುಷೈಃ ಸ್ವಯಂ ।
ಅಂತರ್ಧಾನಂ ತತಃ ಪ್ರಾಪ್ತಾಃ ಸರ್ವೇಽಪಿ ಸುರಸತ್ತಮಾಃ ॥ ೭ ॥
ತತೋ ಮಯಾ ದ್ವಿಜೈಃ ಸಾರ್ಧಂ ಶಾಲಾಗ್ರೇ ಸ್ಥಾನರಕ್ಷಣಂ ।
ಸ್ಥಾಪಿತಾಶ್ಚ ಪೃಥಗ್ದೇವಾಸ್ತ್ರಯಸ್ತ್ರಿಭುವನೇಶ್ವರಾಃ ॥ ೮ ॥
ಪೀಡ್ಯಮಾನಾ ಯದಾ ವಿಪ್ರಾಃ ಕೇನಾಪಿ ಚ ಭವಂತಿ ಹಿ ।
ಪೂರ್ವಾಹ್ಣೇ ಚಾಪಿ ಋಗ್ವೇದಂ ಮಧ್ಯಾಹ್ನೇ ಚ ಯಜೂಂಷ್ಯಥ ॥ ೯ ॥
ಯಾಮೇ ತೃತೀಯೇ ಸಾಮಾನಿ ತಾರಸ್ವರಮಧೀತ್ಯ ಚ ।
ಶಾಪಂ ಯಸ್ಯ ಪ್ರದಾಸ್ಯಂತಿ ಶಾಲಾಗ್ರೇ ಭೃಶರೋಷಿತಾಃ ।
ಸಪ್ತಾಹಾದ್ವರ್ಷಮಧ್ಯಾದ್ವಾ ತ್ರಿವರ್ಷಾದ್ಭಸ್ಮತಾಂ ವ್ರಜೇತ್ ॥ ೧೦ ॥
ಪ್ರತಿಜ್ಞಾತಾ ಸ್ಥಾನರಕ್ಷಾ ಯದಿ ವೋ ನಾರದಾಗ್ರತಃ ।
ಸತ್ಯೇನ ತೇನ ನೋ ವೈರೀ ಭಸ್ಮೀಭವತು ಚ ಕ್ಷಣಾತ್ ॥ ೧೧ ॥

---

೬-೭. ಆಗ ತ್ರಿಮೂರ್ತಿಗಳೂ ನನ್ನ ಪ್ರಾರ್ಥನೆಯನ್ನಾಲಿಸಿ ನನ್ನನ್ನು ಕುರಿತು "ಎಲೈ ಮುನಿವರ್ಯನೆ! ನೀನೆಂದಂತೆಯೇ ಆಗಲಿ. ನಾವು ನಮ್ಮ ಅಂಶಗಳಿಂದ ನಿನ್ನ ಮತ್ತು ಈ ಬ್ರಾಹ್ಮಣರ ರಕ್ಷಣೆಯನ್ನು ಮಾಡುತ್ತಿರುವೆವು" ಎಂದು ಪ್ರತಿಜ್ಞೆಯನ್ನು ಮಾಡಿದರು. ಇಂತು ಹೇಳಿ ತಂತಮ್ಮ ಅಂಶಗಳನ್ನು ಇಲ್ಲಿ ಬಿಟ್ಟು ಬಳಿಕ ಆ ತ್ರಿಮೂರ್ತಿಗಳೂ ಅಲ್ಲಿಯೇ ಅಂತರ್ಧಾನವನ್ನು ಹೊಂದಿದರು.

೮. ಆ ಬಳಿಕ ನಾನು ಬ್ರಾಹ್ಮಣರಿಂದೊಡಗೂಡಿ ಕ್ಷೇತ್ರದ ಸಂರಕ್ಷಣೆಗೋಸ್ಕರ ಲೋಕತ್ರಯಗಳಿಗೂ ಒಡೆಯರಾದ ತ್ರಿಮೂರ್ತಿಗಳನ್ನು ಬೇರೆಬೇರೆಯಾಗಿ ಶಾಲಾಗ್ರದಲ್ಲಿ ಸ್ಥಾಪಿಸಿದೆನು.

೯-೧೦. ಇಲ್ಲಿ ವಾಸವಾಗಿರುವ ಬ್ರಾಹ್ಮಣೋತ್ತಮರು ಕಾಲಾಂತರದಲ್ಲಿ ಯಾವನಿಂದಾದರೂ ಪೀಡಿತರಾದರೆ ಪ್ರಾತಃಕಾಲದಲ್ಲಿ ಋಗ್ವೇದವನ್ನೂ, ಮಧ್ಯಾಹ್ನದಲ್ಲಿ ಯಜುರ್ವೇದವನ್ನೂ ಸಾಯಾಹ್ನದಲ್ಲಿ ಸಾಮವೇದವನ್ನೂ ತಾರಸ್ವರದಲ್ಲಿ ಅಧ್ಯಯನ ಮಾಡಿ ಶಾಲಾಗ್ರದಲ್ಲಿ ನಿಂತು ಅತ್ಯಂತ ರೋಷದಿಂದ ಯಾವನಿಗೆ ಶಾಪವನ್ನು ಕೊಡುವರೊ, ಅವನು ಏಳು ದಿನದಲ್ಲಾಗಲಿ, ಆರು ತಿಂಗಳಲ್ಲಾಗಲಿ, ಮೂರು ವರ್ಷಗಳಲ್ಲಾಗಲಿ ಬೂದಿಯಾಗಿಹೋಗುವನು.

೧೧. "ಎಲೈ ತ್ರಿಮೂರ್ತಿಗಳಿರಾ! ನೀವು ದೇವರ್ಷಿಯಾದ ನಾರದನ ಎದುರಿನಲ್ಲಿ ಈ ಸ್ಥಾನದ ರಕ್ಷಣೆಯನ್ನುಮಾಡಲು ಪ್ರತಿಜ್ಞೆಯನ್ನು ಮಾಡಿದುದು ಸತ್ಯವಾಗಿದ್ದರೆ, ಆ ಸತ್ಯದಿಂದಲೇ ಈಗ ನಮ್ಮ ಶತ್ರುವು ತತ್ಕ್ಷಣದಲ್ಲಿಯೇ ಸುಟ್ಟು ಬೂದಿಯಾಗಲಿ."

ಅನೇನ ಶಾಪಮಂತ್ರೇಣ ಭಸ್ಮೀಭವತಿ ನಿಶ್ಚಿತಂ ॥ ೧೨ ॥
ಶಾಲಾಂ ತ್ರಿಪುರುಷಾಂ ತತ್ರ ಯಃ ಪಶ್ಯತಿ ದಿನೇದಿನೇ ।
ಅರ್ಚಯೇತ್ತೋಷಯೇಚ್ಚಾಸೌ ಸ್ವರ್ಗಲೋಕೇ ಮಹೀಯತೇ ॥ ೧೩ ॥

ಇತಿ ತ್ರಿಪುರುಷಶಾಲಾಮಾಹಾತ್ಮ್ಯಂ

ನಾರದ ಉವಾಚ:—

ಅಥಾನ್ಯತ್ಸಂಪ್ರವಕ್ಷ್ಯಾಮಿ ಮದೀಯಂಸರಸೋ ಮಹತ್ ।
ಮಾಹಾತ್ಮ್ಯಮತುಲಂ ಪಾರ್ಥ ದೇವಾನಾಮಪಿ ದುರ್ಲಭಂ ॥ ೧೪ ॥
ಮಯಾ ಪೂರ್ವಂ ಸರಃ ಖಾತಂ ದರ್ಭಾಂಕುರಶಲಾಕಯಾ ॥ ೧೫ ॥
ಮೃತ್ತಿಕಾ ತಾಮ್ರಪಾತ್ರೇಣ ತ್ಯಕ್ತಾ ಬಾಹ್ಯೇ ತತಃ ಸ್ವಯಂ ।
ಸರ್ವೇಷಾಮೇವ ತೀರ್ಥಾನಾಮಾಹೃತ್ಯೋದಕಮುತ್ತಮಂ ॥ ೧೬ ॥
ತತ್ತತ್ರ ಸರಸಿ ಕ್ಷಿಪ್ತಂ ತೇನ ಸಂಪೂರಿತಂ ಸರಃ
ಆಶ್ವಿನೇ ಮಾಸಿ ಸಂಪ್ರಾಪ್ತೇ ಭಾನುವಾರೇ ನರಃ ಶುಚಿಃ ॥ ೧೭ ॥
ಶ್ರಾದ್ಧಂ ಯಃ ಕುರುತೇ ತತ್ರ ಸ್ನಾತ್ವಾ ದಾನಂ ವಿಶೇಷತಃ ।
ಪಿತರಸ್ತಸ್ಯ ತೃಪ್ಯಂತಿ ಯಾವದಾಭೂತಸಂಪ್ಲವಂ ॥ ೧೮ ॥

---

೧೨–೧೩. ಈ ಶಾಪಮಂತ್ರದ ಪುನಶ್ಚರಣೆಯಿಂದ ಶತ್ರುವು ಖಂಡಿತವಾಗಿಯೂ ಭಸ್ಮವಾಗುವನು. ಯಾವನು ಪ್ರತಿನಿತ್ಯವೂ ತ್ರಿಪುರುಷರ ಶಾಲೆಯನ್ನು ದರ್ಶನಮಾಡಿ ತ್ರಿಮೂರ್ತಿಗಳನ್ನು ಪೂಜಿಸಿ ಸಂತೋಷಗೊಳಿಸುವನೊ, ಅವನು ಸ್ವರ್ಗದಲ್ಲಿಯೂ ಪೂಜ್ಯನಾಗುವನು.

ಇಂತಿದು ತ್ರಿಪುರುಷಶಾಲಾಮಾಹಾತ್ಮ್ಯವು.

೧೪–೧೫. ನಾರದರು ಹೇಳುತ್ತಾರೆ:—ಎಲೈ ಪಾರ್ಥನೆ! ಈಗ ಅಪಾರವೂ ದೇವತೆಗಳಿಗೂ ದುರ್ಲಭವೂ ಆದ ನನ್ನ ಸರೋವರದ ವಿಶೇಷ ಮಾಹಾತ್ಮ್ಯೆಯನ್ನು ನಿನಗೆ ಹೇಳುವೆನು. ಪೂರ್ವದಲ್ಲಿ ನಾನು ದರ್ಭೆಯ ಕೊನೆಯಿಂದ ಒಂದು ಸರೋವರವನ್ನು ನಿರ್ಮಿಸಿದೆನು.

೧೬–೧೮. ಅದರ ಮಣ್ಣನ್ನು ನನ್ನ ತಾಮ್ರದ ಕಮಂಡಲದಿಂದ ನಾನೇ ಹೊರಗೆ ಬಿಸುಟೆನು. ಮತ್ತು ಸಕಲ ತೀರ್ಥಗಳಿಂದಲೂ ಉತ್ತಮವಾದ ನೀರನ್ನು ತಂದು ಆ ಸರಸ್ಸಿನಲ್ಲಿ ಸುರಿಯಲು ಅದರಿಂದ ಆ ಸರೋವರವು ತುಂಬಿ ಹೋಯಿತು. ಆಶ್ವಯುಜ ಮಾಸವು ಪ್ರಾಪ್ತವಾಗಲು ಭಾನುವಾರದ ದಿನದಲ್ಲಿ ಇದರಲ್ಲಿ ಮಿಂದು ಶುಚಿಯಾಗಿ ಶ್ರಾದ್ಧವನ್ನೂ ಪಿಂಡದಾನವನ್ನೂ ವಿಶೇಷ ರೀತಿಯಿಂದ ಯಾವನು ನೆರವೇರಿಸುವನೊ, ಅವನ ಪಿತೃದೇವತೆಗಳು ಪ್ರಳಯಕಾಲದ ವರೆಗೂ ತೃಪ್ತಿಯನ್ನು ಹೊಂದುವರು.

ನಾರದೀಯಾ ಸರೋ ಹ್ಯೇತದ್ವಿಖ್ಯಾತಂ ಜಗತೀತಲೇ ।
ಮಹತಾ ಪುಣ್ಯಯೋಗೇನ ದೇವೈರಪಿ ಹಿ ಲಭ್ಯತೇ ॥ ೧೯ ॥
ಯದತ್ರ ದೀಯತೇ ದಾನಂ ಹೂಯತೇ ಯಚ್ಚ ಪಾವಕೇ ।
ಸರ್ವಂ ತದಕ್ಷಯಂ ವಿದ್ಯಾಜ್ಜಪಾನಶನಸಾಧನಾತ್ ॥ ೨೦ ॥
ನಾರದೀಯೇ ಸರಃ ಶ್ರೇಷ್ಠೇ ಸ್ನಾತ್ವಾ ಯೋ ನಾರದೇಶ್ವರಂ ।
ಪೂಜಯೇಚ್ಛ್ರದ್ಧಯಾ ಮರ್ತ್ಯಃ ಸರ್ವಪಾಪೈಃ ಪ್ರಮುಚ್ಯತೇ ॥ ೨೧ ॥
ಅತ್ರ ತೀರ್ಥೇ ಪುರಾ ಪಾರ್ಥ ಸರ್ವನಾಗೈಸ್ತಪಃ ಕೃತಂ ।
ಕದ್ರೂಶಾಪಸ್ಯ ಮೋಕ್ಷಾರ್ಥಮಾತ್ಮನೋ ಹಿತಕಾಮ್ಯಯಾ ॥ ೨೨ ॥
ತತಃ ಸಿದ್ಧಿಂ ಪರಾ ಪ್ರಾಪ್ತಾ ಏತಸ್ತೀರ್ಥಪ್ರಭಾವತಃ ।
ತತೋ ನಾಗೇಶ್ವರಂ ಲಿಂಗಂ ಸ್ಥಾಪಯಾಮಾಸುರೂರ್ಜಿತಂ ॥ ೨೩ ॥
ನಾರದಾದುತ್ತರೇ ಭಾಗೇ ಸರ್ವೇ ನಾಗಾಃ ಪ್ರಹರ್ಷಿತಾಃ ।
ನಾರದೀಯೇ ಸರಃಶ್ರೇಷ್ಠೇ ಯಸ್ಸ್ನಾತ್ವಾ ಪೂಜಯೇದ್ಧರಂ ॥ ೨೪ ॥

---

೧೯. ಇದಕ್ಕೆ ಭೂಲೋಕದಲ್ಲಿ ನಾರದೀಯ ಸರೋವರವೆಂದು ಹೆಸರು ವಿಖ್ಯಾತವಾಗಿರುವುದು. ಇದು ದೇವತೆಗಳಿಗೂ ಕೂಡ ಅತ್ಯಂತವಾದ ಪುಣ್ಯ ಪರಿಪಾಕದಿಂದಲೇ ಲಭಿಸುವುದು.

೨೦. ಈ ಸ್ಥಳದಲ್ಲಿ ಕೊಡಲ್ಪಡುವ ದಾನವೂ ಅಗ್ನಿಯಲ್ಲಿ ಕೊಡಲ್ಪಡುವ ಆಹುತಿಯೂ ಜಪೋಪವಾಸ ಸಾಧನೆಗಳಿಂದ ಕೂಡಿದಲ್ಲಿ ಅಕ್ಷಯ ಫಲವನ್ನು ಕೊಡುವುವೆಂದು ತಿಳಿಯಬೇಕು.

೨೧. ನಾರದೀಯ ಸರೋವರದಲ್ಲಿ ಸ್ನಾನಮಾಡಿ ನಾರದೇಶ್ವರನನ್ನು ಭಕ್ತಿಯಿಂದ ಯಾವ ಮನುಷ್ಯನು ಪೂಜೆಮಾಡುವನೊ, ಅವನು ಸಮಸ್ತ ಪಾಪಗಳಿಂದಲೂ ನಿರ್ಮುಕ್ತನಾಗುವನು.

೨೨. ಎಲೈ ಅರ್ಜುನನೆ! ಈ ತೀರ್ಥದಲ್ಲಿಯೇ ಹಿಂದೆ ನಾಗರೆಲ್ಲರೂ ಕೂಡಿ ಕದ್ರೂದೇವಿಯ ಶಾಪದ ವಿಮೋಚನೆಗಾಗಿಯೂ ತಮ್ಮ ಶ್ರೇಯೋಭಿವೃದ್ಧಿಗಾಗಿಯೂ ತಪಸ್ಸನ್ನು ಮಾಡಿದರು.

೨೩. ಅದರಿಂದ ಈ ತೀರ್ಥದ ಪ್ರಭಾವದ ಪರಿಣಾಮವಾಗಿ ಉತ್ತಮವಾದ ಸಿದ್ಧಿಯನ್ನು ಪಡೆದರು. ಅವರು ಇಲ್ಲಿಯೆ ಶ್ರೇಷ್ಠವಾದ ನಾಗೇಶ್ವರ ಲಿಂಗವನ್ನು ಸ್ಥಾಪಿಸಿದರು.

೨೪–೨೫. ನಾರದ ಸರಸ್ಸಿನ ಉತ್ತರಭಾಗದಲ್ಲಿ ಆ ನಾಗೇಶ್ವರ ಲಿಂಗವನ್ನು ಸ್ಥಾಪಿಸಿ ನಾಗರೆಲ್ಲರೂ ಸಂತೋಷಗೊಂಡರು. ಯಾವ ಮಾನವನು ಉತ್ತಮವಾದ ನಾರದೀಯ ಸರೋವರದಲ್ಲಿ ಸ್ನಾನಮಾಡಿ ಶ್ರೀ ನಾಗೇಶ್ವರ

ನಾಗೇಶ್ವರಂ ಮಹಾಭಕ್ತ್ಯಾ ತಸ್ಯ ಪುಣ್ಯಮನಂತಕಂ ।
ತೇಷಾಂ ಸರ್ಪಭಯಂ ನಾಸ್ತಿ ನಾಗಾನಾಂ ವಚನಂ ಯಥಾ ॥ ೨೫ ॥

ಇತಿ ನಾರದೀಯಸರೋಮಾಹಾತ್ಮ್ಯಂ

ನಾರದ ಉವಾಚ:—

ಅಪರದ್ವಾರಕಾನಾಮ ದೇವೀ ಚಾತ್ರಾಸ್ತಿ ಪಾಂಡವ ॥ ೨೬ ॥
ಸಾ ಚ ಬ್ರಹ್ಮಾಂಡದ್ವಾರೇ ವೈ ಸದೈವ ವಿಹಿತಾಲಯಾ ।
ಚತುರ್ವಿಂಶತಿಕೋಟೀಭಿರ್ದೇವೀಭಿಃ ಪರಿರಕ್ಷಿತಾ ॥ ೨೭ ॥
ತತೋ ದೀರ್ಘಂ ತಪಸ್ತಪ್ತ್ವಾ ಮಯಾ ನೀತಾತ್ರ ತೋಷಿತಾ ।
ಅಪರಸ್ಮಿಂಸ್ತತೋ ದ್ವಾರೇ ಸ್ಥಾಪಿತಾ ಪರಮೇಶ್ವರೀ ॥ ೨೮ ॥
ಪೂರ್ವಸ್ಮಿನ್ನಗರದ್ವಾರೇ ಸ್ಥಾಪಿತಾ ದ್ವಾರವಾಸಿನೀ ।
ನವಮೀ ಚೈತ್ರಮಾಸಸ್ಯ ಕೃಷ್ಣಪಕ್ಷೇ ಭವೇತ್ತು ಯಾ ॥ ೨೯ ॥
ಕುಂಡೇ ಸ್ನಾನಂ ನರಃ ಕೃತ್ವಾ ತಾಂ ಚ ದೇವೀಂ ಪ್ರಪೂಜಯೇತ್ ।
ಬಲಿಬಾಕುಲನೈವೇದ್ಯೈರ್ಗಂಧಧೂಪಾದಿ ಪೂಜನೈಃ ॥ ೩೦ ॥

---

ಲಿಂಗವನ್ನು ಅನನ್ಯ ಭಕ್ತಿಯಿಂದ ಪೂಜಿಸುವನೊ, ಅವನ ಪುಣ್ಯವು ಅನಂತವಾಗಿರುವುದು. ಅಂತಹವರಿಗೆ ಸರ್ಪಗಳ ಭಯವೇ ಇಲ್ಲ. ಹೀಗೆ ನಾಗಾಧಿಪರ ಪ್ರತಿಜ್ಞೆಯಿರುವುದು.

ಇಂತಿದು ನಾರದೀಯಸರೋವರಮಾಹಾತ್ಮ್ಯವು.

೨೬. ನಾರದನು ಹೇಳುತ್ತಾನೆ:—ಎಲೈ ಪಾಂಡವಶ್ರೇಷ್ಠನೆ! ಇಲ್ಲಿ ಅಪರದ್ವಾರಕೆಯೆಂಬ ಮತ್ತೊಬ್ಬ ದೇವತೆಯಿರುವಳು.

೨೭. ಆಕೆಯು ಯಾವಾಗಲೂ ಇಪ್ಪತ್ತುನಾಲ್ಕುಕೋಟಿ ದೇವತೆಯರಿಂದ ಕೂಡಿದವಳಾಗಿ ಬ್ರಹ್ಮಾಂಡದ ದ್ವಾರದಲ್ಲಿ ವಾಸವನ್ನು ಮಾಡಿಕೊಂಡಿರುವಳು.

೨೮. ನಾನು ಬಹಳಕಾಲ ತಪಸ್ಸನ್ನು ಮಾಡಿ ಆಕೆಯನ್ನು ಸಂತೋಷಗೊಳಿಸಿ ಇಲ್ಲಿಗೆ ಕರೆದುತಂದಿರುವೆನು. ಮತ್ತೊಂದು ದ್ವಾರದಲ್ಲಿ ಪರಮೇಶ್ವರಿಯು ಸ್ಥಾಪಿತಳಾಗಿರುವಳು.

೨೯–೩೦. ನಗರದ ಪೂರ್ವದ್ವಾರದಲ್ಲಿ ಆಕೆಯು ದ್ವಾರಪಾಲಿಕೆಯಾಗಿ ನೆಲಸಿರುವಳು. ಚೈತ್ರಮಾಸದ ಕೃಷ್ಣಪಕ್ಷದಲ್ಲಿ ನವಮಿಯು ಪ್ರಾಪ್ತವಾದ ದಿನದಲ್ಲಿ ಪ್ರತಿಯೊಬ್ಬ ಮನುಷ್ಯನೂ ಕುಂಡದಲ್ಲಿ ಸ್ನಾನಮಾಡಿ ಆ ದೇವಿಯನ್ನು ಪೂಜೆಮಾಡಬೇಕು. ಬಲಿಯನ್ನೂ ಬಕುಲಫಲಗಳನ್ನೂ ನೈವೇದ್ಯಮಾಡಿ ಗಂಧ ಧೂಪ ಮುಂತಾದುವುಗಳಿಂದ ಪೂಜಿಸಬೇಕು.

**ಸಪ್ತಜನ್ಮಕೃತಂ ಪಾಪಂ ನಾಶಮಾಯಾತಿ ತತ್ಕ್ಷಣಾತ್ ।**
**ಯಾನ್ಯಾನ್ಪ್ರಾರ್ಥಯತೇ ಕಾಮಾಂಸ್ತಾಂಸ್ತಾನಾಪ್ನೋತಿ ಮಾನವಃ ॥ ೩೧॥**
**ವಂಧ್ಯಾ ಚ ಲಭತೇ ಪುತ್ರಂ ಸ್ನಾನಮಾತ್ರೇಣ ತತ್ರ ವೈ ।**
**ನವಮ್ಯಾಂ ಚೈತ್ರಮಾಸಸ್ಯ ಪುಷ್ಪಧೂಪಾರ್ಘ್ಯಪೂಜಯಾ ॥ ೩೨ ॥**
**ವಿಘ್ನಾನಿ ನಾಶಯೇದ್ದೇವೀ ಸರ್ವಸಿದ್ಧಿಂ ಪ್ರಯಚ್ಛತಿ ।**
**ಭಕ್ತಾನಾಂ ತತ್ಕ್ಷಣಾದೇವ ಸತ್ಯಮೇತನ್ನ ಸಂಶಯಃ ॥ ೩೩ ॥**
**ಉತ್ತರದ್ವಾರಕಾಂ ಚಾಪಿ ಪೂಜ್ಯೈವಂ ವಿಧಿವನ್ನರಃ ।**
**ಏತದೇವ ಫಲಂ ಸೋಽಪಿ ಪ್ರಾಪ್ನುಯಾನ್ಮಾನವೋತ್ತಮಃ ॥ ೩೪ ॥**
**ಪೂರ್ವದ್ವಾರೇ ತು ವೈ ದೇವೀ ಯಾ ಸ್ಥಿತಾ ದ್ವಾರವಾಸಿನೀ ।**
**ತಸ್ಯಾಃ ಪೂಜನಮಾತ್ರೇಣ ಪ್ರಾಪ್ನುಯಾದ್ವಾಂಛಿತಂ ಫಲಂ ॥ ೩೫ ॥**
**ಆಶ್ವಿನೇ ಮಾಸಿ ಸಂಪ್ರಾಪ್ತೇ ನವರಾತ್ರೇ ವಿಶೇಷತಃ ।**
**ಉಪೋಷ್ಯ ನವರಾತ್ರಂ ಚ ಸ್ನಾತ್ವಾ ಕುಂಡೇ ಸಮಾಹಿತಃ ॥ ೩೬ ॥**

---

೩೧. ಅಂತಹನಿಗೆ ಏಳು ಜನ್ಮಗಳಲ್ಲಿ ಮಾಡಿದ ಪಾಪವೆಲ್ಲವೂ ತತ್ಕ್ಷಣದಲ್ಲಿಯೇ ನಾಶವಾಗುವುದು. ಮತ್ತು ಅವನು ಯಾವ ಯಾವ ಇಷ್ಟಾರ್ಥಗಳನ್ನು ಬೇಡಿದರೂ ಅವುಗಳನ್ನೆಲ್ಲ ಪಡೆಯುವನು.

೩೨. ಬಂಜೆಯಾದವಳು ಗಂಡುಮಗುವನ್ನು ಹೊಂದುವುದಕ್ಕಾಗಿ ಆ ಕುಂಡದಲ್ಲಿ ಸ್ನಾನಮಾಡಿ ಚೈತ್ರಮಾಸದ ನವಮಿಯಲ್ಲಿ ಹೂವು, ಧೂಪ ಮತ್ತು ಅರ್ಘ್ಯಗಳಿಂದ ಪೂಜಿಸಬೇಕು.

೩೩. ಈ ದೇವಿಯು ಕ್ಷಿಪ್ರದಲ್ಲಿಯೇ ಭಕ್ತನ ಸಕಲ ವಿಘ್ನಗಳನ್ನೂ ನಾಶಗೊಳಿಸಿ ಸರ್ವಸಿದ್ಧಿಗಳನ್ನೂ ನೆರವೇರಿಸಿಕೊಡುವಳು. ಇದರಲ್ಲಿ ಸಂದೇಹವೇ ಇಲ್ಲ.

೩೪. ಹೀಗೆಯೇ ಉತ್ತರ ದ್ವಾರಕೆಯೆಂಬ ದೇವಿಯನ್ನು ವಿಧ್ಯುಕ್ತರೀತಿಯಿಂದ ಮನುಷ್ಯಶ್ರೇಷ್ಠನು ಪೂಜಿಸಲು ಅವನೂ ಕೂಡ ಇದೇ ಫಲವನ್ನೇ ಪಡೆಯುವನು.

೩೫. ಪೂರ್ವದ್ವಾರದಲ್ಲಿ ನೆಲಸಿರುವ ಪರಮೇಶ್ವರಿಯೆಂಬ ಯಾವ ದೇವಿಯಿರುವಳೊ, ಅವಳನ್ನು ಪೂಜಿಸುವುದರಿಂದಲೇ ಮನುಷ್ಯನು ಸಕಲ ಇಷ್ಟಾರ್ಥಗಳನ್ನೂ ಪಡೆಯುವನು.

೩೬. ಆಶ್ವಯುಜ ಮಾಸದಲ್ಲಿಯೂ, ವಿಶೇಷವಾಗಿ ನವರಾತ್ರಿಯಲ್ಲಿಯೂ ಒಂಬತ್ತು ರಾತ್ರಿಗಳು ಉಪವಾಸವನ್ನು ಮಾಡಿ ಶಾಂತಮನಸ್ಕನಾಗಿ ಕುಂಡದಲ್ಲಿ ಸ್ನಾನವನ್ನು ಮಾಡಿಕೊಂಡು ಈ ದೇವಿಯನ್ನು ಪುಷ್ಪಗಳು, ಧೂಪ ಮತ್ತು ಅನ್ನಬಲಿಗಳಿಂದ ಸಂತೋಷಗೊಳಿಸಬೇಕು.

ಪೂಜಯೇದ್ದೇವತಾಂ ಭಕ್ತ್ಯಾ ಪುಷ್ಪಧೂಪಾನ್ನತರ್ಪಣೈಃ ।
ಅಪುತ್ರೋ ಲಭತೇ ಪುತ್ರಾನ್ನಿರ್ಧನೋ ಲಭತೇ ಧನಂ ॥ ೩೭ ॥
ವಂಧ್ಯಾ ಪ್ರಸೂಯತೇ ಪಾರ್ಥ ನಾತ್ರ ಕಾರ್ಯಾ ವಿಚಾರಣಾ ॥ ೩೮ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿ ಸಾಹಸ್ರ್ಯಾಂ ಸಂಹಿತಾಯಾಂ
ಪ್ರಥಮೇ ಮಾಹೇಶ್ವರಖಂಡೇ ಕೌಮಾರಿಕಾಖಂಡೇ
"ಕೋಟಿತೀರ್ಥಾದಿಮಾಹಾತ್ಮ್ಯವರ್ಣನಂ" ನಾಮ
ತ್ರಿಪಂಚಾಶತ್ತಮೋऽಧ್ಯಾಯಃ

---

೩೭–೩೮. ಸಂತತಿಯಿಲ್ಲದವನು ಗಂಡುಮಕ್ಕಳನ್ನೂ, ದರಿದ್ರನಾದವನು ಧನವನ್ನೂ ಪಡೆಯುವರು. ಬಂಜೆಯಾದವಳೂ ಪುತ್ರಪುತ್ರಿಯರನ್ನು ಪಡೆಯುವಳು. ಎಲೈ ಅರ್ಜುನನೆ! ಈ ವಿಷಯದಲ್ಲಿ ಅನುಮಾನವನ್ನೇ ಮಾಡಬೇಕಾಗಿಲ್ಲವು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಎರಡನೆಯ ಕೌಮಾರಿಕಾಖಂಡದಲ್ಲಿ
"ಕೋಟಿತೀರ್ಥಾದಿಮಾಹಾತ್ಮ್ಯವರ್ಣನ"ವೆಂಬ
ಐವತ್ತು ಮೂರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಚತುಃಪಂಚಾಶತ್ತಮೋಽಧ್ಯಾಯಃ

### ನಾರದಮಾಹಾತ್ಮ್ಯವರ್ಣನಂ

ನಾರದ ಉವಾಚ :—

**ಮಮಾಪಿ ಪಾರ್ಥ ತತ್ರಾಸ್ತಿ ಮೂರ್ತಿರ್ಬ್ರಾಹ್ಮಣಕಾಮ್ಯಯಾ ।**
**ತತ್ರ ನಾಹಂ ತ್ಯಜಾಮ್ಯಂಗ ಛತ್ರದಂಡವಿಭೂಷಿತಾಂ ॥ ೧ ॥**
**ಕಾರ್ತಿಕಸ್ಯ ತು ಯಾ ಶುಕ್ಲಾ ಭವತ್ಯೇಕಾದಶೀ ಶುಭಾ ।**
**ತಸ್ಯಾಂ ಮದರ್ಚನಂ ಕೃತ್ವಾ ಕಲಿದೋಷೈರ್ವಿಮುಚ್ಯತೇ ॥ ೨ ॥**

ಅರ್ಜುನ ಉವಾಚ :—

**ಬಾಲ್ಯಾತ್ಪ್ರಭೃತಿ ಸಂದೇಹೋ ಮಮಾಯಂ ಹೃದಿ ವರ್ತತೇ ।**
**ಪೃಚ್ಛತಸ್ತಂ ಚ ಮೇ ವಿಪ್ರ ನ ಕ್ರೋಧಂ ಕರ್ತುಮರ್ಹಸಿ ॥ ೩ ॥**
**ಸದಾ ತ್ವಂ ಮೋಕ್ಷಧರ್ಮೇಷು ಪರಿನಿಷ್ಠಾಂ ಪರಾಂ ಗತಃ ।**
**ಸರ್ವಭೂತಸಮೋ ದಾಂತೋ ರಾಗದ್ವೇಷವಿವರ್ಜಿತಃ ॥ ೪ ॥**
**ತ್ಯಕ್ತನಿಂದಾಸ್ತುತಿರ್ಮೌನೀ ಮೋಕ್ಷಸ್ಥಃ ಪರಿಕೀರ್ತ್ಯಸೇ ।**
**ತ್ವಂ ಚ ನಾರದ ಲೋಕೇಷು ವಾಯುವಚ್ಚಪಲೋ ಮುನೇ ॥ ೫ ॥**

---

### ಕನ್ನಡದ ಅನುವಾದ

#### ನಾರದಮಾಹಾತ್ಮ್ಯವರ್ಣನ

೧-೨. ನಾರದನು ಹೇಳುತ್ತಾನೆ:—ಎಲೈ ಅರ್ಜುನನೆ! ಇಲ್ಲಿ ಬ್ರಾಹ್ಮಣರ ಇಷ್ಟಾನುಸಾರವಾಗಿ ನನ್ನ ಮೂರ್ತಿಯೂ ಕೂಡ ಒಂದು ಸ್ಥಾಪಿತವಾಗಿರುವುದು. ಛತ್ರದಂಡಗಳಿಂದ ಕಂಗೊಳಿಸುತ್ತಿರುವ ಅದನ್ನು ನಾನು ಎಂದಿಗೂ ತ್ಯಜಿಸುವುದಿಲ್ಲವು. ಕಾರ್ತಿಕಮಾಸದ ಶುಕ್ಲಪಕ್ಷದ ಏಕಾದಶಿಯ ಶುಭದಿವಸದಲ್ಲಿ ನನ್ನ ಮೂರ್ತಿಗೆ ಪೂಜೆಯನ್ನು ಮಾಡಲು ಸಕಲ ಕಲಿ ಕಲ್ಮಷಗಳೂ ನಿರ್ಮೂಲವಾಗುವುವು.

೩. ಅರ್ಜುನನು ಕೇಳುತ್ತಾನೆ:—ಎಲೈ ಬ್ರಾಹ್ಮಣೋತ್ತಮನೆ! ನನಗೆ ಚಿಕ್ಕಂದಿನಿಂದಲೂ ಹೃದಯದಲ್ಲಿ ಈ ಸಂಶಯವೊಂದು ಉಂಟಾಗುತ್ತಲೇ ಇರುವುದು. ಆದುದರಿಂದ ಅದನ್ನು ಕೇಳುವ ನನ್ನ ಮೇಲೆ ಸಿಟ್ಟುಮಾಡಲಾಗದು.

೪. ನೀನು ಯಾವಾಗಲೂ ಮೋಕ್ಷಮಾರ್ಗದ ಸಾಧನೆಗಳಲ್ಲಿಯೇ ವಿಶೇಷವಾದ ನಿಷ್ಠೆಯನ್ನು ಹೊಂದಿರುವವನು. ಸಕಲ ಭೂತಗಳಲ್ಲಿಯೂ ಸಮಬುದ್ಧಿಯುಳ್ಳವನೂ, ಜಿತೇಂದ್ರಿಯನೂ, ರಾಗದ್ವೇಷರಹಿತನೂ ಆಗಿರುವೆ.

೫. ನಿಂದೆ ಮತ್ತು ಸ್ತೋತ್ರಗಳೆರಡೂ ನಿನಗೆ ಸಮಾನವಾಗಿರುವುವು. ಮೌನವ್ರತವನ್ನು ನಡೆಸುವೆ. ಮೋಕ್ಷದಲ್ಲಿ ನೆಲಸಿರುವವನೆಂದು ಹೇಳಲ್ಪಡುವೆ.

ಸೌದಾಮಿನೀವ ವಿಚರನ್ದೃಶ್ಯಸೇ ಪ್ರಾಜ್ಞಸಮ್ಮತಃ ।
ಸದಾ ಕಲಿಕರೋ ಲೋಕೇ ನಿರ್ದಯಃ ಸರ್ವಪ್ರಾಣಿಷು ॥ ೬ ॥
ಬಹೂನಾಂ ಹಿ ಸಹಸ್ರಾಣಿ ದೇವಗಂಧರ್ವರಕ್ಷಸಾಂ
ರಾಜ್ಞಾಂ ಮುನೀಂದ್ರದೈತ್ಯಾನಾಂ ಕಲೇರ್ನಷ್ಟಾನಿ ತೇಽಭವನ್ ॥ ೭ ॥
ಕಸ್ಮಾತ್ತದೇಷಾ ಚೇಷ್ಟಾ ತೇ ಸಂದೇಹಂ ಮೇ ಹರ ದ್ವಿಜ ।
ಸಂದೇಹಾನ್ನ ಸುಖಂ ಶ್ರೇಯೇ ಬಾಣವಿದ್ಧೋ ಮೃಗೋ ಯಥಾ ॥ ೮ ॥

ಸೂತ ಉವಾಚ:—

ಶೌನಕೇದಂ ವಚಃ ಶ್ರುತ್ವಾ ಫಾಲ್ಗುನಾನ್ನಾರದೋ ಮುನಿಃ ।
ಪ್ರಹಸನ್ನಿವ ಬಾಭ್ರವ್ಯವದನಂ ಸ ನಿರೈಕ್ಷತ ॥ ೯ ॥
ಸ ಚ ಬಾಭ್ರವ್ಯನಾಮಾ ವೈ ಹಾರೀತಸ್ಯಾನ್ವಯೋಧ್ಭವಃ ।
ಬ್ರಾಹ್ಮಣೋ ನಾರದಮುನೇಃ ಸಮೀಪೇ ವರ್ತತೇ ಸದಾ ॥ ೧೦ ॥

---

ಎಲೈ ನಾರದ ಮುನಿಯೆ! ನೀನು ವಾಯುವಿನಂತೆ ತ್ರಿಲೋಕಗಳಲ್ಲಿಯೂ ಸಂಚರಿಸುತ್ತಿರುವವನು.

೬. ಮಿಂಚಿನ ಬಳ್ಳಿಯಂತೆ ಕ್ಷಣಕಾಲ ಮಾತ್ರ ಕಾಣುತ್ತ ಸಮಸ್ತ ಜ್ಞಾನಿಗಳಿಗೂ ಬೇಕಾದವನಾಗಿರುವೆ. ಆದರೂ ಕೂಡ ಲೋಕದಲ್ಲಿ ಕಲಹ ಪ್ರಿಯನೆಂದೂ, ಸಕಲ ಪ್ರಾಣಿಗಳಲ್ಲಿಯೂ ನಿರ್ದಯನೆಂದೂ ಯಾವಾಗಲೂ ಕರೆಯಲ್ಪಡುತ್ತಿರುವೆ.

೭. ದೇವತೆಗಳು, ಗಂಧರ್ವರು, ರಾಕ್ಷಸರು, ರಾಜರು, ಮಹರ್ಷಿಗಳು ಮತ್ತು ದೈತ್ಯರು ಮುಂತಾದ ಅನೇಕ ಸಾವಿರ ಜನರು ಕಲಹಪ್ರಿಯನಾದ ನಿನ್ನಿಂದ ನಾಶವನ್ನು ಹೊಂದಿದರು.

೮. ಎಲೈ ದ್ವಿಜೋತ್ತಮನೆ! ಈ ನಿನ್ನ ಆಚರಣೆಗೆ ಕಾರಣವೇನೆಂದು ನನಗುಂಟಾಗುತ್ತಿರುವ ಈ ಸಂದೇಹವನ್ನು ಕಳೆಯುವವನಾಗು, ಈ ಸಂದೇಹ ವನ್ನೊಳಕೊಂಡು ನಾನು ಬಾಣದಿಂದ ಹೊಡೆಯಲ್ಪಟ್ಟ ಜಿಂಕೆಯಂತೆ ಸುಖವಾಗಿ ನಿದ್ರೆಯನ್ನೂ ಹೊಂದುತ್ತಿಲ್ಲ.

೯. ಸೂತನು ಹೇಳುತ್ತಾನೆ:—ಎಲೈ ಶೌನಕನೆ! ಅರ್ಜುನನ ಈ ಮಾತು ಗಳನ್ನು ಕೇಳಿ ನಾರದನು ಮುಗುಳ್ನಗೆಯೊಡಗೂಡಿದ ಮುಖದಿಂದ ಬಾಭ್ರವ್ಯನ ಕಡೆಗೆ ನೋಡಿದನು.

೧೦. ಆ ಬಾಭ್ರವ್ಯನು ಹಾರೀತನ ವಂಶದಲ್ಲಿ ಹುಟ್ಟಿದ ಒಬ್ಬ ಬ್ರಾಹ್ಮ ಣೋತ್ತಮನು. ಆತನು ಯಾವಾಗಲೂ ನಾರದನ ಸಮೀಪದಲ್ಲಿಯೇ ಓಡಾಡು ತ್ತಿರುವವನು.

ಸ ಚ ಜ್ಞಾತ್ವಾ ಮಹಾಬುದ್ಧಿರ್ನಾರದಸ್ಯ ಮನೀಷಿತಂ ।
ಪ್ರಹಸನ್ನಿವ ಪ್ರೋವಾಚ ಫಾಲ್ಗುನಂ ಸ್ನಿಗ್ಧಯಾ ಗಿರಾ ॥ ೧೧ ॥

ಬಾಭ್ರವ್ಯ ಉವಾಚ :—

ಸತ್ಯಮೇತದ್ಯದಾತ್ಥ ತ್ವಂ ನಾರದಂ ಪ್ರತಿ ಪಾಂಡವ ।
ಸರ್ವೋಽಪಿ ಚಾತ್ರ ವೃತ್ತಾಂತೇ ಸಂಶಯಂ ಯಾತಿ ಮಾನವಃ ॥ ೧೨ ॥
ತದಹಂ ತೇ ಪ್ರವಕ್ಷ್ಯಾಮಿ ಯಥಾ ಕೃಷ್ಣಾನ್ಮಯಾ ಶ್ರುತಂ ।
ಸ್ತೋಕಕಾಲಾಂತರೇ ಪೂರ್ವಂ ಸರ್ವಂ ಯಾದವನಂದನಃ ।
ಮಹೀಸಾಗರಯಾತ್ರಾಯಾಂ ಕೃಷ್ಣಸ್ತತ್ರಾಯಯೌ ಪ್ರಭುಃ ॥ ೧೩ ॥
ಉಗ್ರಸೇನೇನ ಸಹಿತೋ ವಸುದೇವೇನ ಬಭ್ರುಣಾ ।
ರಾಮೇಣ ರೌಕ್ಮಿಣೇಯೇನ ಯುಯುಧಾನಾದಿಭಿಸ್ತದಾ ॥ ೧೪ ॥
ಸಚ ಜ್ಞಾತ್ವಾ ಜ್ಞಾತಿಸಮಂ ಮಹೀಸಾಗರಸಂಗಮೇ ॥ ೧೫ ॥
ಪಿಂಡದಾನಾದಿಕಂ ಕೃತ್ವಾ ದತ್ವಾ ದಾನಾನಿ ಭೂರಿಶಃ ।
ಗುಹೇಶ್ವರಾದಿ ಲಿಂಗಾನಿ ಯತ್ನತಃ ಪ್ರತಿಪೂಜ್ಯ ಚ ॥ ೧೬ ॥

---

೧೧. ಮಹಾಬುದ್ಧಿಶಾಲಿಯಾದ ಆತನು ನಾರದಮಹರ್ಷಿಯ ಇಂಗಿತವನ್ನು ತಿಳಿದುಕೊಂಡು ನಗುತ್ತಲೇ ಅರ್ಜುನನ್ನು ಕುರಿತು ಸ್ನೇಹಪೂರಿತವಾದ ಮಾತುಗಳಿಂದ ಇಂತೆಂದನು.

೧೨. ಬಾಭ್ರವ್ಯನು ಹೇಳುತ್ತಾನೆ:—ಎಲೈ ಅರ್ಜುನನೇ! ನೀನು ನಾರದನನ್ನು ಕುರಿತು ಹೇಳಿದ ನುಡಿಗಳೆಲ್ಲವೂ ನಿಜವೆ. ಈ ವಿಷಯದಲ್ಲಿ ಪ್ರತಿಯೊಬ್ಬ ಮನುಷ್ಯನೂ ಕೂಡ ಸಂಶಯವನ್ನು ಹೊಂದಿಯೇ ಹೊಂದುವನು.

೧೩. ಆದುದರಿಂದ ಶ್ರೀಕೃಷ್ಣನ ಕಡೆಯಿಂದ ಕೇಳಿದ ವಿಷಯವನ್ನು ನಿನಗೆ ತಿಳಿಸುವೆನು. ಕೆಲವು ಕಾಲಕ್ಕೆ ಮುಂಚೆ ಯದುಕುಲತಿಲಕನೂ ಲೋಕನಾಯಕನೂ ಆದ ಕೃಷ್ಣನು ಮಹೀಸಾಗರ ತೀರ್ಥದ ಯಾತ್ರೆಗೋಸ್ಕರ ಇಲ್ಲಿಗೆ ಬಂದನು.

೧೪. ಉಗ್ರಸೇನ, ವಸುದೇವ, ಬಭ್ರು, ಬಲರಾಮ, ಪ್ರದ್ಯುಮ್ನ ಯುಯುಧಾನ ಮುಂತಾದ ಯಾದವವೀರರೊಡನೆ ಕೂಡಿದ್ದನು.

೧೫—೧೭. ಕ್ಷೇತ್ರಮಾಹಾತ್ಮ್ಯೆಯನ್ನು ತಿಳಿದ ಶ್ರೀ ಕೃಷ್ಣನು ತನ್ನ ಜ್ಞಾತಿಗಳೊಡನೆ ಮಹೀಸಾಗರ ಸಂಗಮದಲ್ಲಿ ಪಿಂಡದಾನಾದಿ ಪಿತೃಕಾರ್ಯಗಳನ್ನು ಮಾಡಿ, ಅನೇಕ ವಿಧಗಳಾದ ದಾನಗಳನ್ನು ಕೊಟ್ಟು, ಶ್ರದ್ಧಾಪೂರ್ವಕವಾಗಿ ಗುಹೇಶ್ವರನೇ ಮೊದಲಾದ ಲಿಂಗಗಳೆಲ್ಲವನ್ನೂ ಪೂಜಿಸಿ, ಕೋಟಿತೀರ್ಥದಲ್ಲಿ ಸ್ನಾನವನ್ನು ಮಾಡಿ ಜಯಾದಿತ್ಯಮೂರ್ತಿಯನ್ನು ಅರ್ಚಿಸಿ, ಉದಾರಮನಸ್ಕನಾದುದರಿಂದ ನಾರದಮಹರ್ಷಿಯನ್ನು ಭಕ್ತಿಯುಕ್ತನಾಗಿ ಪೂಜೆ

ಸ್ನಾನಂ ಕೃತ್ವಾ ಕೋಟಿತೀರ್ಥೇ ಜಯಾದಿತ್ಯಂ ಸಮರ್ಚ್ಯ ಚ ।
ಪೂಜಯನ್ನಾರದಮುನಿಂ ಯುಕ್ತಃ ಕೃಷ್ಣೋ ಮಹಾಮನಾಃ ॥ ೧೭ ॥
ಉಗ್ರಸೇನೇನ ರಾಜ್ಞಾ ವೈ ಪೂರ್ವಜೇನ ಜಟಾಯುನಾ ।
ಮುದಾದಿವಿಪ್ರಮುಖ್ಯಾನಾಂ ಬಹೂನಾಂ ಚೋಪಶೃಣ್ವತಾಂ ।
ಉಗ್ರಸೇನೋ ಮಹಾರಾಜಃ ಕೃಷ್ಣಂ ಪ್ರೋವಾಚ ಸಂಸದಿ ॥ ೧೮ ॥

ಉಗ್ರಸೇನ ಉವಾಚ:—

ಕೃಷ್ಣ ವಕ್ಷ್ಯಾಮಿ ತ್ವಾಮೇಕಂ ಸಂಶಯಂ ವದ ತಂ ಮಮ ॥ ೧೯ ॥
ಯೋಽಯಂ ನಾಮ ಮಹಾಬುದ್ಧಿರ್ನಾರದೋ ವಿಶ್ವವಂದಿತಃ ।
ಕಸ್ಮಾದೇಷೋಽತಿ ಚಪಲೋ ವಾಯುವದ್ಭ್ರಮತೇ ಜಗತ್ ।
ಕಲಿಪ್ರಿಯಶ್ಚ ಕಸ್ಮಾದ್ವಾ ಕಸ್ಮಾತ್ತ್ವದತಿಪ್ರೀತಿಮಾನ್ ॥ ೨೦ ॥

ಶ್ರೀ ಕೃಷ್ಣ ಉವಾಚ:—

ಸತ್ಯಂ ರಾಜಂಸ್ತ್ವಯಾ ಪೃಷ್ಟಮೇತತ್ಸರ್ವಂ ವದಾಮಿ ತೇ ।
ದಕ್ಷೇಣ ತು ಪುರಾ ಶಪ್ತೋ ನಾರದೋ ಮುನಿಸತ್ತಮಃ ।
ಸೃಷ್ಟಿಮಾರ್ಗಾತ್ಸುತಾನ್ವೀಕ್ಷ್ಯ ನಾರದೇನ ವಿಚಾಲಿತಾನ್ ॥ ೨೧ ॥
ನಾವಸ್ಥಾನಂ ಚ ಲೋಕೇಷು ಭ್ರಮತಸ್ತೇ ಭವಿಷ್ಯತಿ ।
ಪೈಶುನ್ಯವಕ್ತಾ ಚ ತಥಾ ದ್ವಿತೀಯಾನಾಂ ಪ್ರಚಾಲನಾತ್ ॥ ೨೨ ॥

---

ಮಾಡಿದನು. ವಯೋವೃದ್ಧನೂ ಜಟಾಧಾರಿಯೂ ಆದ ಉಗ್ರಸೇನ ಮಹಾರಾಜನೂ ಆಗ ಕೃಷ್ಣನೊಡನಿದ್ದನು.

೧೮. ಆಗ ಉಗ್ರಸೇನನು ನಾನೂ ಇತರ ಬ್ರಾಹ್ಮಣೋತ್ತಮರೂ ಕೇಳುವಂತೆಯೇ ಸಭೆಯಲ್ಲಿ ಕುಳಿತು ಕೃಷ್ಣನನ್ನು ಕುರಿತು ಕೇಳತೊಡಗಿದನು.

೧೯. ಉಗ್ರಸೇನನು ಕೇಳುತ್ತಾನೆ:—ಎಲೈ ಕೃಷ್ಣನೆ! ನನ್ನ ಮನಸ್ಸಿನ ಸಂಶಯವೊಂದನ್ನು ನಿನಗೆ ತಿಳಿಸುವೆನು. ಅದನ್ನು ಪರಿಹರಿಸಬೇಕು.

೨೦. ಈ ನಾರದನೆಂಬವನು ಮಹಾಬುದ್ಧಿಶಾಲಿಯೂ, ಲೋಕವಂದ್ಯನೂ ಆಗಿರುವನಲ್ಲವೆ! ಈತನು ಅತ್ಯಂತ ಚಪಲನಾಗಿ ವಾಯುವಿನಂತೆ ಜಗತ್ತಿನಲ್ಲೆಲ್ಲ ಸುತ್ತುತ್ತಿರುವುದೇಕೆ? ಏತಕ್ಕಾಗಿ ಈತನು ಕಲಹಪ್ರಿಯನಾದನು? ಇಷ್ಟಾದರೂ ಈತನು ನಿನ್ನಲ್ಲಿ ಅತ್ಯಂತ ಪ್ರೀತಿಯುಳ್ಳವನಾಗಿರುವನೆಂತು?

೨೧. ಶ್ರೀಕೃಷ್ಣನು ಹೇಳುತ್ತಾನೆ:—ಎಲೈ ರಾಜನೆ! ನೀನು ಕೇಳಿದುದು ಸತ್ಯವೇ ಸರಿ. ಈ ವಿಷಯವೆಲ್ಲವನ್ನೂ ನಿನಗೆ ವಿವರಿಸುವೆನು. ಪೂರ್ವದಲ್ಲಿ ದಕ್ಷಪ್ರಜಾಪತಿಯು ಸೃಷ್ಟಿಯನ್ನು ನಡೆಸಲು ಮಕ್ಕಳನ್ನು ಪಡೆದನು. ಅವರಲ್ಲಿ ಕೆಲವರನ್ನು ಮುನಿಶ್ರೇಷ್ಠನಾದ ನಾರದನು ನಶ್ವರವಾದ ಪ್ರಪಂಚದಿಂದ ವಿಮುಖರನ್ನಾಗಿ ಮಾಡಲು ದಕ್ಷನು ಆತನಿಗೆ ಶಾಪವನ್ನು ಕೊಟ್ಟನು.

೨೨. "ಎಲೈ ನಾರದನೆ! ನೀನು ತ್ರಿಕಾಲಗಳಲ್ಲಿಯೂ ಚಪಲನಾಗಿ

ಇತಿ ಶಾಪದ್ವಯಂ ಪ್ರಾಪ್ಯ ದ್ವಿವಿಧಾತ್ಮಜಚಾಲನಾತ್ ।
ನಿರಾಕರ್ತುಂ ಸಮರ್ಥೋಽಪಿ ಮುನಿರ್ಮೇನೇ ತಥೈವ ತತ್ ॥ ೨೩ ॥
ಏತಾವಾನ್ಸಾಧುವಾದೋ ಹಿ ಯತಶ್ಚ ಕ್ಷಮತೇ ಸ್ವಯಂ ॥ ೨೪ ॥
ವಿನಾಶಕಾಲಂ ಚಾವೇಕ್ಷ್ಯ ಕಲಿಂ ವರ್ಧಯತೇ ಯತಃ ।
ಸತ್ಯಂ ಚ ವಕ್ತಿ ತಸ್ಮಾತ್ಸ ನ ಚ ಪಾಪೇನ ಲಿಪ್ಯತೇ ॥ ೨೫ ॥
ಭ್ರಮತೋಽಪಿ ಚ ಸರ್ವತ್ರ ನಾಸ್ಯ ಯಸ್ಮಾತ್ಪೃಥಙ್ಮನಃ ।
ಧ್ಯೇಯಾದ್ಭವತಿ ನೈವ ಸ್ಯಾದ್ಭ್ರಮದೋಷಸ್ತತೋಽಸ್ಯ ಚ ॥
ಯಚ್ಚ ಪ್ರೀತಿರ್ಮಯಿ ತಸ್ಯ ಪರಮಾ ತಚ್ಛೃಣುಷ್ವ ಚ ॥ ೨೬ ॥
ಅಹಂ ಹಿ ಸರ್ವದಾ ಸ್ತೌಮಿ ನಾರದಂ ದೇವದರ್ಶನಂ ।
ಮಹೇಂದ್ರಗದಿತೇನೈವ ಸ್ತೋತ್ರೇಣ ಶೃಣು ತನ್ನೃಪ ॥ ೨೭ ॥
ಶ್ರುತಚಾರಿತ್ರಯೋರ್ಜಾತಾ ಯಸ್ಯಾಹಂತಾ ನ ವಿದ್ಯತೇ ।
ಅಗುಪ್ತಶ್ರುತಚಾರಿತ್ರಂ ನಾರದಂ ತಂ ನಮಾಮ್ಯಹಂ ॥ ೨೮ ॥

---

ಸಂಚರಿಸುತ್ತಲೇ ಇರು. ಲೋಕದಲ್ಲಿ ನಿನಗೆ ನಿಲ್ಲಲು ನೆಲೆಯೇ ಸಿಕ್ಕದಿರಲಿ." ಮತ್ತೆ ನಾರದನು ಎರಡನೆಯ ಸಲವೂ ಹಾಗೆಯೇ ಮಾಡಲು ದಕ್ಷನು "ಕ್ಷುದ್ರಭಾಷಿಯಾಗು" ಎಂದು ಶಪಿಸಿದನು.

೨೩. ಇಂತು ಎರಡು ಸಲ ದಕ್ಷಪುತ್ರರನ್ನು ವಿಮುಖಗೊಳಿಸಿದ್ದರಿಂದ ಎರಡು ಶಾಪಗಳನ್ನು ಹೊಂದಿ ನಾರದಮುನಿಯು ಅವುಗಳನ್ನು ವಿಫಲಗೊಳಿಸಲು ಸಮರ್ಥನಾಗಿದ್ದರೂ, ತನಗೆ ಅನುಕೂಲವೆಂದು ಅವುಗಳನ್ನಂಗೀಕರಿಸಿದನು.

೨೪–೨೫. ಸಾಧುಗಳ ನಡತೆಯೇ ಈ ವಿಧವಾಗಿರುವುದು. ಅವರು ಇತರರ ಅಕಾರ್ಯಗಳನ್ನು ತಾವೇ ಕ್ಷಮಿಸುವರು. ಈ ನಾರದನಾದರೊ ದುಷ್ಟರ ವಿನಾಶದ ಕಾಲವನ್ನು ನಿರೀಕ್ಷಿಸಿಕೊಂಡೇ ಕಲಹಗಳನ್ನು ಪ್ರಾರಂಭಿಸುವನು. ಈತನು ಯಾವಾಗಲೂ ಸತ್ಯವನ್ನೇ ನುಡಿಯುವನು. ಆದುದರಿಂದ ಈತನಿಗೆ ಸ್ವಲ್ಪವೂ ಪಾಪದ ಲೇಪವೆಂಬುದೇ ಇಲ್ಲವು.

೨೬. ಸಕಲ ಲೋಕಗಳಲ್ಲಿ ಸಂಚರಿಸುತ್ತಿರುವನಾದರೂ ಈತನ ಮನಸ್ಸು ಧ್ಯೇಯನಾದ ಪರಮಾತ್ಮನಿಂದ ಚಲಿಸುವುದಿಲ್ಲವು. ಆದುದರಿಂದ ಈತನಿಗೆ ಬುದ್ಧಿ ಭ್ರಮಣೆಯ ದೋಷವು ಸಂಭವಿಸಲಾರದು. ಇನ್ನು ಈತನಿಗೆ ನನ್ನಲ್ಲಿರುವ ಅಪಾರವಾದ ಪ್ರೀತಿಗೆ ಕಾರಣವನ್ನು ತಿಳಿಸುವೆನು, ಕೇಳು.

೨೭. ಎಲೈ ಉಗ್ರಸೇನ ಮಹಾರಾಜನೆ! ನಾನು ಯಾವಾಗಲೂ ನಾರದ ಮಹರ್ಷಿಯನ್ನು ದೇವೇಂದ್ರನಿಂದ ಪ್ರೋಕ್ತವಾದ ಉತ್ತಮ ಸ್ತೋತ್ರದಿಂದ ಹೊಗಳುತ್ತಿರುವೆನು. ಆ ಸ್ತೋತ್ರವನ್ನು ಕೇಳುವವನಾಗು.

೨೮. "ಯಾರಿಗೆ ಜ್ಞಾನ ಮತ್ತು ಸದಾಚಾರಗಳಿಂದುಂಟಾದ ಅಹಂಕಾರ

ಅರತಿಕ್ರೋಧಚಾಪಲ್ಯೇ ಭಯಂ ನೈತಾನಿ ಯಸ್ಯ ಚ ।
ಅದೀರ್ಘಸೂತ್ರಂ ಧೀರಂ ಚ ನಾರದಂ ತಂ ನಮಾಮ್ಯಹಂ ॥ ೨೯ ॥
ಕಾಮಾದ್ವಾ ಯದಿ ವಾ ಲೋಭಾದ್ವಾಚಂ ಯೋ ನಾನ್ಯಥಾ ವದೇತ್ ।
ಉಪಾಸ್ಯಂ ಸರ್ವಜಂತೂನಾಂ ನಾರದಂ ತಂ ನಮಾಮ್ಯಹಂ ॥ ೩೦ ॥
ಅಧ್ಯಾತ್ಮಗತಿತತ್ತ್ವಜ್ಞಂ ಶಾಂತಂ ಶಕ್ತಂ ಜಿತೇಂದ್ರಿಯಂ ।
ಋಜುಂ ಯಥಾರ್ಥವಕ್ತಾರಂ ನಾರದಂ ತಂ ನಮಾಮ್ಯಹಂ ॥ ೩೧ ॥
ತೇಜಸಾ ಯಶಸಾ ಬುದ್ಧ್ಯಾ ನಯೇನ ವಿನಯೇನ ಚ ।
ಜನ್ಮನಾ ತಪಸಾ ವೃದ್ಧಂ ನಾರದಂ ತಂ ನಮಾಮ್ಯಹಂ ॥ ೩೨ ॥
ಸುಖಶೀಲಂ ಸುಖಂ ವೇಷಂ ಸುಭೋಜಂ ಸ್ವಾಚರಂ ಶುಭಂ ।
ಸುಚಕ್ಷುಷಂ ಸುವಾಕ್ಯಂ ಚ ನಾರದಂ ತಂ ನಮಾಮ್ಯಹಂ ॥ ೩೩ ॥
ಕಲ್ಯಾಣಂ ಕುರುತೇ ಗಾಢಂ ಪಾಪಂ ಯಸ್ಯ ನವಿದ್ಯತೇ ।
ನ ಪ್ರೀಯತೇ ಪರಾನರ್ಥೇ ಯೋಽಸೌ ತಂ ನೌಮಿ ನಾರದಂ ॥ ೩೪ ॥

---

ವೆಂಬುದಿಲ್ಲವೊ, ಯಾರ ಜ್ಞಾನಚಾರಿತ್ರಗಳು ಲೋಕಪ್ರಖ್ಯಾತಗಳಾಗಿರುವುವೊ ಅಂತಹ ನಾರದನನ್ನು ನಾನು ನಮಸ್ಕರಿಸುವೆನು.

೨೯-೩೦. ಯಾರಿಗೆ ಅಭಿಮಾನ, ಕ್ರೋಧ, ಚಾಪಲ್ಯ, ಭಯಗಳು ಇಲ್ಲವೊ, ಅಂತಹ ಕ್ಷಿಪ್ರಕಾರಿಯೂ ಧೀರನೂ ಆದ ನಾರದಮಹರ್ಷಿಗೆ ನಾನು ನಮಸ್ಕರಿಸುವೆನು. ಕಾಮದಿಂದಾಗಲಿ, ಲೋಭದಿಂದಾಗಲಿ ಯಾರು ಮಿಥ್ಯಾವಚನವನ್ನು ಹೇಳುವುದಿಲ್ಲವೊ, ಅಂತಹ ಸಕಲ ಪ್ರಾಣಿಗಳಿಗೂ ಉಪಾಸ್ಯಮೂರ್ತಿಯಾದ ನಾರದಮಹರ್ಷಿಗೆ ನಮಸ್ಕರಿಸುವೆನು.

೩೧. ಅಧ್ಯಾತ್ಮಗತಿಯ ಸೂಕ್ಷ್ಮವನ್ನು ತಿಳಿದವನೂ, ಕ್ಷಮಾಶಾಲಿಯೂ, ಸರ್ವಶಕ್ತನೂ, ಜಿತೇಂದ್ರಿಯನೂ, ಋಜುಸ್ವಭಾವದವನೂ, ಸತ್ಯಭಾಷಿಯೂ ಆದ ನಾರದನನ್ನು ನಾನು ನಮಸ್ಕರಿಸುವೆನು.

೩೨. ತೇಜಸ್ಸಿನಿಂದಲೂ, ಕೀರ್ತಿಯಿಂದಲೂ, ಬುದ್ಧಿಶಕ್ತಿಯಿಂದಲೂ, ನಯವಿನಯಗಳಿಂದಲೂ, ಉತ್ತಮಜನ್ಮದಿಂದಲೂ, ತಪಶ್ಶಕ್ತಿಯಿಂದಲೂ ವೃದ್ಧನೆನಿಸಿದ ನಾರದನಿಗೆ ನಮಸ್ಕರಿಸುವೆನು.

೩೩. ಮಂಗಳಶೀಲನೂ, ಸುಂದರವೇಷಧಾರಿಯೂ, ಮೃಷ್ಟಾನ್ನಭೋಜಿಯೂ, ಸದಾಚಾರಯುಕ್ತನೂ, ಮಂಗಳಪ್ರದನೂ, ಸೌಮ್ಯದೃಷ್ಟಿಯುಳ್ಳವನೂ, ಮೃದುಭಾಷಿಯೂ ಆದ ನಾರದಮಹರ್ಷಿಗೆ ನಮಸ್ಕರಿಸುವೆನು.

೩೪. ಯಾವನು ಲೋಕಕ್ಕೆ ಅಪರಿಮಿತವಾದ ಕಲ್ಯಾಣವನ್ನುಂಟುಮಾಡುವನೊ, ಯಾವನಲ್ಲಿ ಪಾಪಲೇಶವೂ ಕಾಣುವುದಿಲ್ಲವೊ, ಯಾವನು ಇತರರ ಅನರ್ಥಗಳನ್ನು ನೋಡಿ ಸಹಿಸಲಾರನೊ, ಅಂತಹ ನಾರದನಿಗೆ ನಮಿಸುವೆನು.

ವೇದಸ್ಮೃತಿಪುರಾಣೋಕ್ತಧರ್ಮೇ ಯೋ ನಿತ್ಯಮಾಸ್ಥಿತಃ ।
ಪ್ರಿಯಾಪ್ರಿಯವಿಮುಕ್ತಂ ತಂ ನಾರದಂ ಪ್ರಣಮಾಮ್ಯಹಂ ॥ ೩೫ ॥
ಅಶನಾದಿಷ್ವಲಿಪ್ತಂ ಚ ಪಂಡಿತಂ ನಾಲಸಂ ದ್ವಿಜಂ ।
ಬಹುಶ್ರುತಂ ಚಿತ್ರಕಥಂ ನಾರದಂ ಪ್ರಣಮಾಮ್ಯಹಂ ॥ ೩೬ ॥
ನಾರ್ಥೇ ಕ್ರೋಧೇ ಚ ಕಾಮೇ ಚ ಭೂತಪೂರ್ವೋಽಸ್ಯ ವಿಭ್ರಮಃ ।
ಯೇನೈತೇ ನಾಶಿತಾ ದೋಷಾ ನಾರದಂ ತಂ ನಮಾಮ್ಯಹಂ ॥ ೩೭ ॥
ವೀತಸಂಮೋಹದೋಷೋ ಯೋ ದೃಢಭಕ್ತಿಶ್ಚ ಶ್ರೇಯಸಿ ।
ಸುನಯಂ ಸತ್ರಪಂ ತಂ ಚ ನಾರದಂ ಪ್ರಣಮಾಮ್ಯಹಂ ॥ ೩೮ ॥
ಅಸಕ್ತಃ ಸರ್ವಸಂಗೇಷು ಯಸ್ಸಕ್ತಾತ್ಮೇತಿ ಲಕ್ಷ್ಯತೇ ।
ಅದೀರ್ಘಸಂಶಯೋ ವಾಗ್ಮೀ ನಾರದಂ ತಂ ನಮಾಮ್ಯಹಂ ॥ ೩೯ ॥
ನ ತ್ಯಜತ್ಯಾಗಮಂ ಕಿಂಚಿದ್ಯಸ್ತಪೋ ನೋಪಜೀವತಿ ।
ಅವಂಧ್ಯಕಾಲೋ ಯಸ್ಯಾತ್ಮಾ ತಮಹಂ ನೌಮಿ ನಾರದಂ ॥ ೪೦ ॥

---

೩೫. ವೇದಗಳು, ಸ್ಮೃತಿಗಳು, ಪುರಾಣಗಳು ಇವುಗಳಲ್ಲಿ ಹೇಳಲ್ಪಟ್ಟಿರುವ ಧರ್ಮದಲ್ಲಿಯೇ ಯಾವನು ಸದಾ ನಿರತನಾಗಿರುವನೊ, ಯಾವನು ಪ್ರಿಯ, ಅಪ್ರಿಯಗಳೆಂಬ ದ್ವಂದ್ವಗಳಿಂದ ರಹಿತನಾಗಿರುವನೊ, ಅಂತಹ ನಾರದನಿಗೆ ಪ್ರಣಾಮವನ್ನು ಮಾಡುವೆನು.

೩೬. ಭೋಜನಾದಿ ವ್ಯಾಪಾರಗಳಲ್ಲಿ ನಿರ್ಲಿಪ್ತನೂ, ಜ್ಞಾನಿಯೂ, ಆಲಸ್ಯವಿಲ್ಲದವನೂ, ಬ್ರಾಹ್ಮಣೋತ್ತಮನೂ, ಅನೇಕ ವೇದವೇದಾಂತಗಳನ್ನು ತಿಳಿದವನೂ, ವಿಚಿತ್ರ ಜನ್ಮಕಥೆಯುಳ್ಳವನೂ ಆದ ನಾರದನಿಗೆ ನಮಸ್ಕರಿಸುವೆನು.

೩೭–೩೯. ಧನದಲ್ಲಾಗಲಿ, ಕ್ರೋಧದಲ್ಲಾಗಲಿ, ಕಾಮದಲ್ಲಾಗಲಿ ಯಾವನಿಗೆ ಪೂರ್ವದಲ್ಲೆಂದೂ ಬುದ್ಧಿವಿಭ್ರಮವಾಗಿಲ್ಲವೊ, ಯಾವನಿಂದ ಈ ದೋಷಗಳೆಲ್ಲವೂ ನಾಶಮಾಡಲ್ಪಟ್ಟಿರುವುವೊ, ಅಂತಹ ನಾರದಮುನಿಯನ್ನು ನಮಸ್ಕರಿಸುವೆನು. ಯಾರಿಗೆ ಸಂಮೋಹವೆಂಬ ದೋಷವು ನಿಶ್ಶೇಷವಾಗಿರುವುದೊ, ಯಾವನಿಗೆ ಶ್ರೇಯೋಮಾರ್ಗದಲ್ಲಿಯೇ ದೃಢವಾದ ಭಕ್ತಿಯಿರುವುದೊ, ವಿನಯಸಂಪನ್ನನೂ, ತಪೋರಾಶಿಯೂ ಆದ ಅಂತಹ ನಾರದನಿಗೆ ನಮಸ್ಕಾರವನ್ನು ಮಾಡುವೆನು. ಸಕಲ ವಿಧಗಳಾದ ಸಂಗಗಳನ್ನೂ ಪರಿತ್ಯಾಗಮಾಡಿದ್ದರೂ, ಜನರಿಗೆ ಅತ್ಯಂತ ಸಕ್ತನಂತೆ ತೋರುತ್ತಿರುವನೊ, ಯಾವನು ಕ್ಷಿಪ್ರಸಂಶಯವುಳ್ಳವನೊ, ವಾಚಾಳಿಯೂ ಆಗಿರುವನೊ, ಆ ನಾರದನಿಗೆ ನಮಿಸುವೆನು.

೪೦. ಯಾವನು ವೇದಮಾರ್ಗವನ್ನು ಎಡಬಿಡದಿರುವನೊ, ತಪಸ್ಸಿನಿಂದ ಯಾವನು ಉಪಜೀವಿಸುವುದಿಲ್ಲವೊ, ಯಾವನ ಆತ್ಮನಿಗೆ ವ್ಯರ್ಥವಾದ ಕಾಲವೆಂಬುದೇ ಇಲ್ಲವೊ, ಆ ನಾರದನಿಗೆ ನಮಸ್ಕಾರ ಮಾಡುವೆನು.

ಕೃತಶ್ರಮಂ ಕೃತಪ್ರಜ್ಞಂ ನ ಚ ತೃಪ್ತಂ ಸಮಾಧಿತಃ ।
ನಿತ್ಯಂ ಯತ್ನಾತ್ಪ್ರಮತ್ತಂ ಚ ನಾರದಂ ತಂ ನಮಾಮ್ಯಹಂ ॥ ೪೧ ॥
ನ ಹೃಷ್ಯತ್ಯರ್ಥಲಾಭೇನ ಯೋಽಲಾಭೇ ನ ವ್ಯಥತ್ಯಪಿ ।
ಸ್ಥಿರಬುದ್ಧಿರಸಕ್ತಾತ್ಮಾ ತಮಹಂ ನೌಮಿ ನಾರದಂ ॥ ೪೨ ॥
ತಂ ಸರ್ವಗುಣಸಂಪನ್ನಂ ದಕ್ಷಂ ಶುಚಿಮಕಾತರಂ ।
ಕಾಲಜ್ಞಂ ಚ ನಯಜ್ಞಂ ಚ ಶರಣಂ ಯಾಮಿ ನಾರದಂ ॥ ೪೩ ॥
ಇಮಂ ಸ್ತವಂ ನಾರದಸ್ಯ ನಿತ್ಯಂ ರಾಜನ್ಪಠಾಮ್ಯಹಂ ।
ತೇನ ಮೇ ಪರಮಾ ಪ್ರೀತಿಂ ಕರೋತಿ ಮುನಿಸತ್ತಮಃ ॥ ೪೪ ॥
ಅನ್ಯೋಽಪಿ ಯಃ ಶುಚಿರ್ಭೂತ್ವಾ ನಿತ್ಯಮೇತಾಂ ಸ್ತುತಿಂ ಜಪೇತ್ ।
ಅಚಿರಾತ್ತಸ್ಯ ದೇವರ್ಷಿಃ ಪ್ರಸಾದಂ ಕುರುತೇ ಪರಂ ॥ ೪೫ ॥
ಏತಾನ್ಗುಣಾನ್ನಾರದಸ್ಯ ತ್ವಮಾಕರ್ಣ್ಯ ಪಾರ್ಥಿವ ।
ಜಪ ನಿತ್ಯಂ ಸ್ತವಂ ಪುಣ್ಯಂ ಪ್ರೀತಸ್ತೇ ಭವಿತಾ ಮುನಿಃ ॥ ೪೬ ॥

---

೪೧. ಪರಿಶ್ರಮವಂತನೂ, ಪ್ರಜ್ಞೆಯಿಂದ ಕೂಡಿದವನೂ, ಸಮಾಧಿಸ್ಥಿತಿಯನ್ನು ಹೊಂದಿ ತೃಪ್ತಿಪಡದಿರುವವನೂ, ಯಾವಾಗಲೂ ಪ್ರಯತ್ನದಲ್ಲಿ ಜಾಗರೂಕನೂ ಆದ ನಾರದನಿಗೆ ನಮಸ್ಕರಿಸುವೆನು.

೪೨. ಧನಲಾಭದಿಂದ ಸಂತೋಷಗೊಳ್ಳದೆ, ಲಭಿಸದಿದ್ದಾಗ ವ್ಯಥೆಗೊಳ್ಳದೆ, ದೃಢಮನಸ್ಸುಳ್ಳವನೂ, ಅಸಕ್ತವಾದ ಆತ್ಮವನ್ನು ಹೊಂದಿದವನೂ ಆದ ನಾರದ ಮಹರ್ಷಿಗೆ ನಮಸ್ಕರಿಸುವೆನು.

೪೩. ಸಕಲ ಸುಗುಣಗಳಿಂದ ಕೂಡಿದವನೂ, ಕಾರ್ಯದಕ್ಷನೂ, ಶುಚಿಯೂ, ಸಂಪ್ರೇಕ್ಷ್ಯಕಾರಿಯೂ, ಕಾಲ, ದೇಶ, ವರ್ತಮಾನಗಳನ್ನು ತಿಳಿದವನೂ ಆದ ನಾರದಮಹರ್ಷಿಯನ್ನು ಶರಣುಹೊಗುವೆನು.''

೪೪. ಎಲೈ ಉಗ್ರಸೇನ ಮಹಾರಾಜನೆ! ನಾರದನ ಈ ಸ್ತೋತ್ರವನ್ನು ನಾನು ನಿತ್ಯವೂ ಜಪಿಸುತ್ತಿರುವೆನು. ಆದುದರಿಂದ ಈ ಮುನಿವರ್ಯನು ನನ್ನಲ್ಲಿ ಹೆಚ್ಚಿನ ಪ್ರೀತಿಯನ್ನಿಟ್ಟಿರುವನು.

೪೫. ಮತ್ತೆ ಯಾರಾದರೂ ಸರಿಯೆ, ಶುಚಿಯಾಗಿ ನಿತ್ಯದಲ್ಲಿಯೂ ಈ ಸ್ತೋತ್ರವನ್ನು ಜಪಿಸಿದುದಾದರೆ, ಅವರಿಗೆ ಶೀಘ್ರವಾಗಿಯೇ ದೇವರ್ಷಿಯಾದ ನಾರದನು ಪೂರ್ಣವಾಗಿ ಪ್ರಸನ್ನನಾಗುವನು.

೪೬. ಎಲೈ ರಾಜನೆ! ನಾರದಮಹರ್ಷಿಯ ಈ ಗುಣಗಳನ್ನೆಲ್ಲ ನೀನು ಕೇಳಿ ನಿತ್ಯದಲ್ಲಿಯೂ ಈ ಪುಣ್ಯಸ್ತೋತ್ರವನ್ನು ಜಪಿಸುತ್ತಿರು. ಆತನು ನಿನ್ನಲ್ಲಿ ವಿಶೇಷವಾದ ಪ್ರೀತಿಯನ್ನು ಮಾಡುವನು.

ಬಾಭ್ರವ್ಯ ಉವಾಚ :—
ಇತಿ ಕೃಷ್ಣಮುಖಾಚ್ಛ್ರುತ್ವಾ ನಾರದಸ್ಯ ಗುಣಾನ್ನೃಪಃ ।
ಬಭೂವ ಪರಮಪ್ರೀತಶ್ಚಕ್ರೇ ತಚ್ಚ ತಥಾ ವಚಃ ॥ ೪೭ ॥
ತತೋ ನಾರದಮಾನರ್ಚ್ಯ ದತ್ವಾ ದಾನಂ ಚ ಪುಷ್ಕಲಂ ।
ನಾರದೀಯ ದ್ವಿಜಾಗ್ರ್ಯಾಣಾಂ ನಾರದಃ ಪ್ರಿಯತಾಮಿತಿ ॥ ೪೮ ॥
ಯಯೌ ದ್ವಾರವತೀಂ ಕೃಷ್ಣಃ ಸಭ್ರಾತೃಜ್ಞಾತಿಬಾಂಧವಃ ।
ತೀರ್ಥಯಾತ್ರಾಮಿಮಾಂ ಕೃತ್ವಾ ವಿಧಿವತ್ಪುರುಷೋತ್ತಮಃ ॥ ೪೯ ॥
ತಥಾ ತ್ವಮಪಿ ಕೌರವ್ಯ ನಾರದಸ್ಯ ಗುಣಾನಿಮಾನ್ ।
ಶ್ರುತ್ವಾ ಶ್ರದ್ಧಾಮಯೋ ಭೂತ್ವಾ ಶ್ರೃಣು ಕೃತ್ಯಂ ಯದತ್ರ ಚ ॥ ೫೦ ॥
ಕಾರ್ತಿಕೇ ಶುಕ್ಲದ್ವಾದಶ್ಯಾಂ ಪ್ರಬೋಧಿನ್ಯಾಮಸೌ ಮುನಿಃ ।
ವಿಷ್ಣೋರ್ಧ್ಯಾನಸಮಾಧೇಶ್ಚ ಪ್ರಬುದ್ಧೋ ಜಾಯತೇ ಸದಾ ॥ ೫೧ ॥
ತಸ್ಮಿನ್ದಿನೇ ನಾರದೇನ ನಿರ್ಮಿತೇಽತ್ರೈವ ಕೂಪಕೇ ।
ಸ್ನಾನಂ ಕೃತ್ವಾ ಪ್ರಯತ್ನೇನ ಶ್ರಾದ್ಧಂ ಕುರ್ಯಾತ್ಸಮಾಹಿತಃ ॥ ೫೨ ॥

---

೪೭. ಬಾಭ್ರವ್ಯನು ಹೇಳುತ್ತಾನೆ:—ಇಂತು ಕೃಷ್ಣನ ಮುಖದಿಂದ ಹೊರಬಿದ್ದ ನಾರದನ ಗುಣಗಳ ವರ್ಣನೆಯನ್ನು ಕೇಳಿ ಉಗ್ರಸೇನನು ಅತ್ಯಂತ ಪ್ರೀತನಾಗಿ ಕೃಷ್ಣನೆಂದಂತೆಯೇ ಮಾಡತೊಡಗಿದನು.

೪೮-೪೯. ಬಳಿಕ ನಾರದನನ್ನು ಪೂಜಿಸಿ ಆತನಿಗೆ ಪ್ರೀತಿಯುಂಟಾಗಲೆಂಬ ಸಂಕಲ್ಪದಿಂದ ಆ ಕ್ಷೇತ್ರದ ಬ್ರಾಹ್ಮಣೋತ್ತಮರಿಗೆಲ್ಲ ಹೇರಳವಾದ ದಾನ ಗಳನ್ನಿತ್ತು ಪುರುಷೋತ್ತಮನಾದ ಆ ಕೃಷ್ಣನು ವಿಧ್ಯುಕ್ತರೀತಿಯಿಂದ ಈ ತೀರ್ಥ ಯಾತ್ರೆಯನ್ನೆಲ್ಲ ಸಾಂಗವಾಗಿ ನೆರವೇರಿಸಿ ಬಲರಾಮ, ಜ್ಞಾತಿಗಳು, ಬಂಧುಗಳು ಮುಂತಾದವರೊಡನೆ ದ್ವಾರಕೆಯನ್ನು ಕುರಿತು ತೆರಳಿದನು.

೫೦. ಎಲೈ ಅರ್ಜುನನೆ! ಅಂತೆಯೇ ನೀನೂ ಕೂಡ ನಾರದನ ಈ ಸುಗುಣಗಳನ್ನು ಕೇಳಿ ಶ್ರದ್ಧೆಯಿಂದ ಕೂಡಿದವನಾಗಿ ಮುಂದೆ ಮಾಡಬೇಕಾ ಗಿರುವ ಕಾರ್ಯವನ್ನು ಕೇಳು.

೫೧. ಕಾರ್ತಿಕ ಶುಕ್ಲ ದ್ವಾದಶಿಯ ದಿನದಲ್ಲಿ ಪ್ರಾತಃಕಾಲದಲ್ಲಿ ಪ್ರತಿ ವರ್ಷವೂ ಈ ಮುನಿಯು ವಿಷ್ಣುವಿನ ಧ್ಯಾನರೂಪವಾದ ಸಮಾಧಿಸ್ಥಿತಿಯಿಂದ ಬಹಿರ್ಮುಖನಾಗುವನು.

೫೨. ಆ ದಿವಸವು ಪ್ರಾಪ್ತವಾಗಲು ನಾರದನಿಂದಲೇ ನಿರ್ಮಿತವಾದ ಈ ಕೂಪದಲ್ಲಿ ಸ್ನಾನವನ್ನು ಮಾಡಿ ಪ್ರಯತ್ನಪೂರ್ವಕವಾಗಿ ಸಮಾಹಿತ ಮನಸ್ಸಿ ನಿಂದ ಶ್ರಾದ್ಧವನ್ನು ಮಾಡಬೇಕು.

ತಪೋಽನ್ನಂ ಜಪಶ್ಚಾತ್ರ ಕೂಪೇ ಭವತಿ ಚಾಕ್ಷಯಂ ॥ ೫೩ ॥
ಇದಂ ವಿಷ್ಣುರಿತಿ ಮಂತ್ರೇಣ ತತೋ ವಿಷ್ಣುಂ ಪ್ರಬೋಧಯೇತ್ ।
ನಾರದಂ ಚ ಮುನಿಂ ಪಶ್ಚಾನ್ಮಂತ್ರೇಣಾನೇನ ಪಾಂಡವ ॥ ೫೪ ॥
ಯೋಗನಿದ್ರಾ ಯಥಾ ತ್ಯಕ್ತಾ ಹರಿಣಾ ಮುನಿಸತ್ತಮ ।
ತಥಾ ಲೋಕೋಪಕಾರಾಯ ಭವಾನಪಿ ಪರಿತ್ಯಜ ॥ ೫೫ ॥
ಇತಿ ಮಂತ್ರೇಣ ಚೋತ್ಥಾಪ್ಯ ನಾರದಂ ಪರಿಪೂಜಯೇತ್ ।
ಕೃಷ್ಣಪ್ರೋದಿತಯಾ ಸ್ತುತ್ಯಾ ಛತ್ರಧೋತ್ರಾರ್ಚನೈಃ ಶುಭೈಃ ॥ ೫೬ ॥
ಶಕ್ತ್ಯಾ ದ್ವಿಜಾನಾಂ ದೇಯಂ ಚ ಛತ್ರಂ ಧೋತ್ರಂ ಕಮಂಡಲುಂ ।
ಪ್ರಣಮ್ಯ ಬ್ರಾಹ್ಮಣಾನ್ಭಕ್ತ್ಯಾ ನಾರದಃ ಪ್ರೀಯತಾಮಿತಿ ॥ ೫೭ ॥
ಏವಂ ಕೃತೇ ಪ್ರಸಾದಾತ್ಸ ಮುನೇಃ ಪಾಪೇನ ಮುಚ್ಯತೇ ।
ಜಾಯತೇ ನ ಕಲಿಸ್ತಸ್ಯ ನ ಚಾಸೌಖ್ಯಂ ಭವೇದಿಹ ॥ ೫೮ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪ್ರಥಮೇ ಮಾಹೇಶ್ವರಖಂಡೇ ಕೌಮಾರಿಕಾಖಂಡೇ
"ನಾರದಮಾಹಾತ್ಮ್ಯವರ್ಣನಂ" ನಾಮ ಚತುಃಪಂಚಾಶತ್ತಮೋಽಧ್ಯಾಯಃ

---

೫೩–೫೪. ಈ ಕೂಪದಲ್ಲಿ ಮಾಡಿದ ತಪಸ್ಸು, ದಾನ, ಮತ್ತು ಜಪಗಳು ಅಕ್ಷಯ ಫಲಗಳನ್ನು ಕೊಡುವುವು. "ಇದಂ ವಿಷ್ಣುಃ" ಎಂಬ ಮಂತ್ರದಿಂದ ಶೇಷಶಾಯಿಯಾದ ಮಹಾವಿಷ್ಣುವನ್ನು ಪ್ರಬೋಧಗೊಳಿಸಬೇಕು. ಎಲೈ ಅರ್ಜುನನೆ! ಬಳಿಕ ಮುಂದೆ ಹೇಳುವ ಮಂತ್ರದಿಂದ ನಾರದಮುನಿಯನ್ನು ಸಮಾಧಿಯಿಂದ ಎಚ್ಚರಗೊಳಿಸಬೇಕು.

೫೫–೫೬. "ಎಲೈ ಮುನಿವರ್ಯನೆ! ಮಹಾವಿಷ್ಣುವು ಹೇಗೆ ತನ್ನ ಯೋಗ ನಿದ್ರೆಯನ್ನು ಬಿಟ್ಟಿರುವನೊ, ಹಾಗೆಯೇ ನೀನೂ ಅದನ್ನು ಲೋಕಾನುಗ್ರಹದ ದೃಷ್ಟಿಯಿಂದ ತ್ಯಜಿಸುವವನಾಗು." ಈ ಮಂತ್ರದಿಂದ ನಾರದನನ್ನು ಎಚ್ಚರ ಗೊಳಿಸಿ ಕೃಷ್ಣನು ಹೇಳಿದ ಸ್ತೋತ್ರದಿಂದಲೂ, ಛತ್ರ, ವಸ್ತ್ರ, ಮುಂತಾದ ಶುಭ ದ್ರವ್ಯಗಳ ಸಮೂಹದಿಂದಲೂ ಸಾಂಗಪೂಜೆಯನ್ನು ನೆರವೇರಿಸಬೇಕು.

೫೭. ತನ್ನ ಶಕ್ತ್ಯನುಸಾರವಾಗಿ ಬ್ರಾಹ್ಮಣಶ್ರೇಷ್ಠರಿಗೆ ಛತ್ರ, ವಸ್ತ್ರ, ಕಮಂಡಲುಗಳನ್ನು ದಾನಮಾಡಬೇಕು. ಅಲ್ಲದೆ ನಾರದಮಹರ್ಷಿಗೆ ಸಂತೋಷ ವಾಗಲೆಂದು ಆ ಬ್ರಾಹ್ಮಣರಿಗೆ ಭಕ್ತಿಯಿಂದ ಪ್ರಣಾಮವನ್ನು ಮಾಡಬೇಕು.

೫೮. ಇಂತು ಮಾಡಲು ಮನುಷ್ಯನು ನಾರದನ ಕರುಣೆಯಿಂದ ಪಾಪ ಲೇಪವಿಲ್ಲದವನಾಗುವನು. ಅವನಿಗೆ ಕಲಿದೋಷಗಳುಂಟಾಗುವುದಿಲ್ಲವಲ್ಲದೆ ಇಹಲೋಕದಲ್ಲಿ ದುಃಖವೆಂಬುದೇ ಸಂಭವಿಸುವುದಿಲ್ಲವು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಎರಡನೆಯ ಕೌಮಾರಿಕಾಖಂಡದಲ್ಲಿ "ನಾರದಮಾಹಾತ್ಮ್ಯವರ್ಣನ"ವೆಂಬ ಐವತ್ತನಾಲ್ಕನೆಯ ಅಧ್ಯಾಯವು ಮುಗಿದ್ದುದು

॥ ಶ್ರೀಃ ॥

# ಅಥ ಪಂಚಪಂಚಾಶತ್ತಮೋಽಧ್ಯಾಯಃ

## ಗೌತಮೇಶ್ವರ ಮಾಹಾತ್ಮ್ಯಸವಿಸ್ತರಯೋಗಲಕ್ಷಣವರ್ಣನಂ

**ಸೂತ ಉವಾಚ :—**

**ಇತಿ ಬಾಭ್ರವ್ಯವಚನಮಾಕರ್ಣ್ಯ ಕುರುನಂದನಃ ।**
**ಪ್ರಾಣಮನ್ನಾರದಂ ಭಕ್ತ್ಯಾ ವಿಸ್ಮಿತಃ ಪುಲಕಾನ್ವಿತಃ ॥ ೧ ॥**
**ಪ್ರಶಸ್ಯ ಚ ಚಿರಂ ಕಾಲಂ ಪುನರ್ನಾರದಮಬ್ರವೀತ್ ॥ ೨ ॥**
**ಗುಪ್ತಕ್ಷೇತ್ರಸ್ಯ ಮಾಹಾತ್ಮ್ಯಂ ಶೃಣ್ವಾನಸ್ತ್ವನ್ಮುಖಾನ್ಮುನೇ ।**
**ತೃಪ್ತಿಂ ನೈವಾಧಿಗಚ್ಛಾಮಿ ಭೂಯಸ್ತದ್ವಕ್ತುಮರ್ಹಸಿ ॥ ೩ ॥**

**ನಾರದ ಉವಾಚ :—**

**ಮಹಾಲಿಂಗಸ್ಯ ವಕ್ಷ್ಯಾಮಿ ಮಹಿಮಾನಂ ಕುರೂದ್ವಹ ।**
**ಗೌತಮೇಶ್ವರಲಿಂಗಸ್ಯ ಸಾವಧಾನಃ ಶೃಣುಷ್ವ ತತ್ ॥ ೪ ॥**
**ಅಕ್ಷಪಾದೋ ಮಹಾಯೋಗೀ ಗೌತಮಾಖ್ಯೋಽಭವನ್ಮುನಿಃ ।**
**ಗೋದಾವರೀಸಮಾನೇತಾ ಅಹಲ್ಯಾಯಾಃ ಪತಿಃ ಪ್ರಭುಃ ॥ ೫ ॥**

---

### ಕನ್ನಡದ ಅನುವಾದ

#### ಗೌತಮೇಶ್ವರ ಮಾಹಾತ್ಮ್ಯ — ಸವಿಸ್ತರಯೋಗಲಕ್ಷಣವರ್ಣನ

೧–೨. ಸೂತಪೌರಾಣಿಕನು ಹೇಳುತ್ತಾನೆ:— ಇಂತೆಂದ ಬಾಭ್ರವ್ಯ ಬ್ರಾಹ್ಮಣನ ಮಾತುಗಳನ್ನು ಕೇಳಿ ಅರ್ಜುನನು ನಾರದನಿಗೆ ಭಕ್ತಿಭಾವದಿಂದ ನಮಸ್ಕರಿಸಿ, ವಿಸ್ಮಯದಿಂದ ಮೈನವಿರೇಳಲು ಬಹಳಕಾಲ ಆತನನ್ನು ಸ್ತೋತ್ರ ಮಾಡಿ ಮತ್ತೆ ಇಂತೆಂದನು.

೩. "ಎಲೈ ಮುನಿವರ್ಯನೆ! ಈ ಗುಪ್ತಕ್ಷೇತ್ರದ ಮಾಹಾತ್ಮ್ಯೆಯನ್ನು ನಿನ್ನ ಮುಖದಿಂದ ಕೇಳುತ್ತ ತೃಪ್ತಿಯನ್ನೇ ಹೊಂದಲಾರದೆ ಇರುವೆನು. ಆದುದರಿಂದ ದಯವಿಟ್ಟು ಮತ್ತೆ ಹೇಳುವವನಾಗು."

೪. ನಾರದನು ಹೇಳುತ್ತಾನೆ:—ಎಲೈ ಕೌರವನೆ! ಮಹಾಲಿಂಗವಾದ ಗೌತಮೇಶ್ವರ ಲಿಂಗದ ಮಹಿಮೆಯನ್ನು ನಿನಗೆ ಹೇಳುವೆನು. ಸಾವಧಾನ ಚಿತ್ತನಾಗಿ ಕೇಳು.

೫. ಪೂರ್ವದಲ್ಲಿ, ಕಾಲುಗಳಲ್ಲಿಯೂ ಕಣ್ಣುಗಳುಳ್ಳ ಮಹಾಯೋಗಿಯಾದ ಗೌತಮನೆಂಬ ಹೆಸರಿನ ಮುನಿವರ್ಯನೊಬ್ಬನಿದ್ದನು. ಅಹಲ್ಯಾದೇವಿಯ ಪತಿಯಾದ ಆತನು ಸರ್ವಶಕ್ತನಾಗಿ ಗೋದಾವರೀ ನದಿಗೆ ಕಾರಣಭೂತ ನಾದನು.

ಗುಪ್ತಕ್ಷೇತ್ರಸ್ಯ ಮಾಹಾತ್ಮ್ಯಂ ಸ ಚ ಜ್ಞಾತ್ವಾ ಮಹೋತ್ತಮಂ ।
ಯೋಗಸಂಸಾಧನಂ ಕುರ್ವನ್ನತ್ರ ತೇಪೇ ತಪೋ ಮಹತ್ ॥ ೬ ॥
ಯೋಗಸಿದ್ಧಿಂ ತತಃ ಪ್ರಾಪ್ಯ ಗೌತಮೇನ ಮಹಾತ್ಮನಾ ।
ಅತ್ರ ಸಂಸ್ಥಾಪಿತಂ ಲಿಂಗಂ ಗೌತಮೇಶ್ವರಸಂಜ್ಞಯಾ ॥ ೭ ॥
ಸಂಸ್ನಾಪ್ಯೈತನ್ಮಹಾಲಿಂಗಂ ಚಂದನೇನ ವಿಲಿಪ್ಯ ಚ ।
ಸಂಪೂಜ್ಯ ಪುಷ್ಪೈರ್ವಿವಿಧೈರ್ಗುಗ್ಗುಲಂ ದಾಹಯೇತ್ಪರಃ ।
ಸರ್ವಪಾಪವಿನಿರ್ಮುಕ್ತೋ ರುದ್ರಲೋಕೇ ಮಹೀಯತೇ ॥ ೮ ॥

ಅರ್ಜುನ ಉವಾಚ :—

ಯೋಗಸ್ವರೂಪಮಿಚ್ಛಾಮಿ ಶ್ರೋತುಂ ನಾರದ ತತ್ತ್ವತಃ ।
ಯೋಗಂ ಸರ್ವೇ ಪ್ರಶಂಸಂತಿ ಯತಃ ಸರ್ವೋತ್ತಮೋತ್ತಮಂ ॥ ೯ ॥

ನಾರದ ಉವಾಚ :—

ಸಮಾಸಾತ್ತವ ವಕ್ಷ್ಯಾಮಿ ಯೋಗತತ್ತ್ವಂ ಕುರೂದ್ವಹ ।
ಶ್ರವಣಾದಪಿ ನೈರ್ಮಲ್ಯಂ ಯಸ್ಯ ಸ್ಯಾತ್ಸೇವನಾತ್ಕಿಮು ॥ ೧೦ ॥

---

೬–೭. ಆತನು ಅತ್ಯುತ್ಕೃಷ್ಟವಾದ ಗುಪ್ತಕ್ಷೇತ್ರದ ಮಾಹಾತ್ಮ್ಯೆಯನ್ನು ತಿಳಿದು ಇಲ್ಲಿಯೇ ಯೋಗಾಭ್ಯಾಸದ ಸಾಧನೆಯನ್ನು ಮಾಡುತ್ತ ಮಹತ್ತರವಾದ ತಪಸ್ಸನ್ನು ಮಾಡಿದನು. ಯೋಗಸಿದ್ಧಿಯನ್ನು ಪಡೆದ ಗೌತಮಮುನಿಯಿಂದ ಇಲ್ಲಿ ಗೌತಮೇಶ್ವರನೆಂದು ಪ್ರಸಿದ್ಧವಾದ ಲಿಂಗವು ಸ್ಥಾಪಿಸಲ್ಪಟ್ಟಿತು.

೮. ಮನುಷ್ಯನು ಈ ಲಿಂಗಕ್ಕೆ ಅಭಿಷೇಕವನ್ನು ಮಾಡಿ ಚಂದನವನ್ನು ಲೇಪಿಸಿ ವಿಧವಿಧಗಳಾದ ಪುಷ್ಪಗಳಿಂದ ಪೂಜೆಯನ್ನು ಮಾಡಿ ಗುಗ್ಗುಲದ ಧೂಪವನ್ನು ಅರ್ಪಿಸಬೇಕು. ಅದರಿಂದ ಸಕಲ ಪಾಪಗಳಿಂದಲೂ ಬಿಡುಗಡೆಯನ್ನು ಹೊಂದಿ ರುದ್ರಲೋಕದಲ್ಲಿ ಹೆಚ್ಚಿನ ಮರ್ಯಾದೆಯನ್ನು ಹೊಂದುವನು.

೯. ಅರ್ಜುನನು ಕೇಳುತ್ತಾನೆ:—'' ಎಲೈ ನಾರದ ಮುನಿಯೆ ! ನಿನ್ನಿಂದ ಯಥಾವತ್ತಾಗಿ ಯೋಗಸಾಧನೆಯ ಸ್ವರೂಪವನ್ನು ತಿಳಿಯಲು ಇಚ್ಛಿಸುತ್ತೇನೆ. ಉತ್ಕೃಷ್ಟವಾದ ಸಕಲ ಸಾಧನಗಳಲ್ಲಿಯೂ ಯೋಗವೇ ಉತ್ತಮವಾದುದೆಂದು ಎಲ್ಲರೂ ಹೊಗಳುವರಲ್ಲವೆ !''

೧೦–೧೧. ನಾರದನು ಹೇಳುತ್ತಾನೆ:—ಎಲೈ ಕೌರವಶ್ರೇಷ್ಠನೆ ! ಯೋಗತತ್ತ್ವವನ್ನು ಸಂಗ್ರಹವಾಗಿ ನಿನಗೆ ತಿಳಿಸುವೆನು. ಅದರ ಶ್ರವಣದಿಂದಲೇ ಚಿತ್ತಶುದ್ಧಿಯೇರ್ಪಡುವುದೆಂದಮೇಲೆ ಸೇವನೆಯಿಂದಾಗುವ ಮಹತ್ಫಲವನ್ನು ಬೇರೆ ತಿಳಿಸಬೇಕೆ? ಯೋಗದ ನಿಜಸ್ವರೂಪವು ಚಿತ್ತವೃತ್ತಿಗಳನ್ನು ನಿರೋಧಿಸುವುದೆಂದು ಹೇಳಲ್ಪಟ್ಟಿರುವುದು. ಅದನ್ನು ಯೋಗಿಗಳು ಅಷ್ಟಾಂಗವಿಧಾನದಿಂದ ಸಾಧಿಸಿಕೊಳ್ಳುವರು.

ಚಿತ್ತವೃತ್ತಿನಿರೋಧಾಖ್ಯಂ ಯೋಗತತ್ತ್ವಂ ಪ್ರಕೀರ್ತ್ಯತೇ ।
ತದಷ್ಟಾಂಗಪ್ರಕಾರೇಣ ಸಾಧಯಂತೀಹ ಯೋಗಿನಃ ॥ ೧೧ ॥
ಯಮಶ್ಚ ನಿಯಮಶ್ಚೈವ ಪ್ರಾಣಾಯಾಮಸ್ತೃತೀಯಕಃ ।
ಪ್ರತ್ಯಾಹಾರೋ ಧಾರಣಾ ಚ ಧ್ಯೇಯಂ ಧ್ಯಾನಂ ಚ ಸಪ್ತಮಂ ॥ ೧೨ ॥
ಸಮಾಧಿರಿತಿ ಚಾಷ್ಟಾಂಗೋ ಯೋಗಃ ಸಂಪರಿಕೀರ್ತಿತಃ ।
ಪ್ರತ್ಯೇಕಂ ಲಕ್ಷಣಂ ತೇಷಾಮಷ್ಟಾನಾಂ ಶೃಣು ಪಾಂಡವ ॥ ೧೩ ॥
ಅನುಕ್ರಮಾನ್ನರೋ ಯೇಷಾಂ ಸಾಧನಾದ್ಯೋಗಮಶ್ನುತೇ ।
ಅಹಿಂಸಾ ಸತ್ಯಮಾಸ್ತೇಯಂ ಬ್ರಹ್ಮಚರ್ಯಾಪರಿಗ್ರಹೌ ।
ಏತೇ ಪಂಚ ಯಮಾಃ ಪ್ರೋಕ್ತಾಃ ಶೃಣ್ವೇಷಾಮಪಿ ಲಕ್ಷಣಂ ॥ ೧೪ ॥
ಆತ್ಮವತ್ಸರ್ವಭೂತೇಷು ಯೋ ಹಿತಾಯ ಪ್ರವರ್ತತೇ ।
ಅಹಿಂಸೈಷಾ ಸಮಾಖ್ಯಾತಾ ವೇದಸಂವಿಹಿತಾ ಚ ಯಾ ॥ ೧೫ ॥
ದೃಷ್ಟಂ ಶ್ರುತಂ ಚಾನುಮಿತಂ ಸ್ವಾನುಭೂತಂ ಯಥಾರ್ಥತಃ ।
ಕಥನಂ ಸತ್ಯಮಿತ್ಯುಕ್ತಂ ಪರಪೀಡಾವಿವರ್ಜಿತಂ ॥ ೧೬ ॥
ಅನಾದಾನಂ ಪರಸ್ವಾನಾಮಾಪದ್ಯಪಿ ಕಥಂಚನ ।
ಮನಸಾ ಕರ್ಮಣಾ ವಾಚಾ ತದಸ್ತೇಯಂ ಪ್ರಕೀರ್ತಿತಂ ॥ ೧೭ ॥

---

೧೨-೧೩. ಯಮ, ನಿಯಮ, ಪ್ರಾಣಾಯಾಮ, ಪ್ರತ್ಯಾಹಾರ, ಧಾರಣ, ಧ್ಯೇಯ, ಧ್ಯಾನ ಮತ್ತು ಸಮಾಧಿಗಳೆಂಬುವೇ ಅಷ್ಟಾಂಗಗಳು. ಇವುಗಳಿಂದ ಕೂಡಿರುವುದೇ ಯೋಗವು. ಈ ಎಂಟು ಅಂಗಗಳ ಲಕ್ಷಣಗಳನ್ನು ಬೇರೆಬೇರೆಯಾಗಿ ಹೇಳುವೆನು, ಕೇಳು.

೧೪. ಇವುಗಳನ್ನು ಅನುಕ್ರಮವಾಗಿ ಅಭ್ಯಾಸ ಮಾಡುವುದರಿಂದ ಮನುಷ್ಯನು ಯೋಗಫಲವನ್ನು ಪಡೆಯುವನು. ಅಹಿಂಸೆ, ಸತ್ಯ, ಕದಿಯದಿರುವುದು, ಬ್ರಹ್ಮಚರ್ಯ, ಅಸ್ವೀಕಾರ— ಇವುಗಳೈದೂ ಯಮಗಳೆಂದು ಹೇಳಲ್ಪಟ್ಟಿರುವುವು. ಇವುಗಳ ಲಕ್ಷಣಗಳನ್ನೂ ವಿವರವಾಗಿ ತಿಳಿಸುವೆನು.

೧೫. ಯಾವನು ತನ್ನಂತೆಯೇ ಇತರರನ್ನು ಭಾವಿಸಿ ಸಕಲ ಪ್ರಾಣಿಗಳಲ್ಲಿಯೂ ಮೈತ್ರಿಯಿಂದ ಅವುಗಳ ಹಿತಕ್ಕಾಗಿಯೇ ದುಡಿಯುವನೋ ಅದನ್ನೇ ವೇದಗಳಲ್ಲಿ ನಿರೂಪಿತವಾಗಿರುವ ಅಹಿಂಸೆಯೆಂದು ಕರೆಯುವರು.

೧೬-೧೭. ತಾನು ಕಂಡುದನ್ನಾಗಲಿ, ಕೇಳಿದುದನ್ನಾಗಲಿ, ಅನುಮಾನಪಟ್ಟುದನ್ನಾಗಲಿ, ಅನುಭವಿಸಿದುದನ್ನಾಗಲಿ ನಡೆದಂತೆಯೇ ತಿಳಿಸುವುದಕ್ಕೆ ಸತ್ಯವೆಂದು ಹೇಳಿರುವರು. ಅದನ್ನೂ ಇತರರಿಗೆ ಹಿಂಸೆಯಾಗದ ವಿಧದಲ್ಲಿ ಹೇಳಬೇಕು. ಎಂತಹ ಆಪತ್ಕಾಲವೊದಗಿದರೂ ಇತರರ ಪದಾರ್ಥಗಳನ್ನು ಮನಸ್ಸಿನಲ್ಲಾಗಲಿ, ಕರ್ಮದಲ್ಲಾಗಲಿ, ಮಾತಿನಲ್ಲಾಗಲಿ ಇಚ್ಛಿಸದಿರುವುದೇ ಅಸ್ತೇಯವೆನಿಸುವುದು.

ಅಮೈಥುನಂ ಯತೀನಾಂ ಚ ಮನೋವಾಕ್ಕಾಯಕರ್ಮಭಿಃ ॥ ೧೮ ॥
ಋತೌ ಸ್ವದಾರಗಮನಂ ಗೇಹಿನಾಂ ಬ್ರಹ್ಮಚರ್ಯತಾ ।
ಯತೀನಾಂ ಸರ್ವಸನ್ಯಾಸೋ ಮನೋವಾಕ್ಕಾಯಕರ್ಮಣಾ ॥ ೧೯ ॥
ಗೃಹಸ್ಥಾನಾಂ ಚ ಮನಸಾ ಸ್ಮೃತ ಏಷೋಽಪರಿಗ್ರಹಃ ।
ಏತೇ ಯಮಾಸ್ತವ ಪ್ರೋಕ್ತಾಃ ಪಂಚೈವ ನಿಯಮಾನ್ಶೃಣು ॥ ೨೦ ॥
ಶೌಚಂ ತುಷ್ಟಿಸ್ತಪಶ್ಚೈವ ಜಪೋ ಭಕ್ತಿರ್ಗುರೌ ತಥಾ ।
ಏತೇಷಾಮಪಿ ಪಂಚಾನಾಂ ಪೃಥಕ್ಸಂಶೃಣು ಲಕ್ಷಣಂ ॥ ೨೧ ॥
ಬಾಹ್ಯಮಾಭ್ಯಂತರಂ ಚೈವ ದ್ವಿವಿಧಂ ಶೌಚಮುಚ್ಯತೇ ।
ಬಾಹ್ಯಂ ತು ಮೃಜ್ಜಲೈಃ ಪ್ರೋಕ್ತಮಾಂತರಂ ಶುದ್ಧಮಾನಸಂ ॥ ೨೨ ॥
ನ್ಯಾಯೇನಾಗತಯಾ ವೃತ್ತ್ಯಾ ಭಿಕ್ಷಯಾ ವಾರ್ತಯಾಪಿ ಚ ।
ಸಂತೋಷೋ ಯಸ್ಯ ಸತತಂ ಸಾ ತುಷ್ಟಿರಿತಿ ಚೋಚ್ಯತೇ ॥ ೨೩ ॥
ಚಾಂದ್ರಾಯಣಾದೀನಿ ಪುನಸ್ತಪಾಂಸಿ ವಿಹಿತಾನಿ ಚ ।
ಆಹಾರಲಾಘವಪರಃ ಕುರ್ಯಾತ್ತತ್ತಪ ಉಚ್ಯತೇ ॥ ೨೪ ॥

---

೧೮–೨೧. ಯತಿಗಳಾದವರು ಮನೋವಾಕ್ಕಾಯಗಳಿಂದಲೂ ಸ್ತ್ರೀಸಂಗವನ್ನು ಮಾಡದಿರುವುದು, ಗೃಹಸ್ಥರು ಋತುಕಾಲದಲ್ಲಿ ಮಾತ್ರ ತಮ್ಮ ಪತ್ನಿಯರ ಸಂಗವನ್ನು ಮಾಡುವುದು — ಇವುಗಳಿಗೆ ಬ್ರಹ್ಮಚರ್ಯವೆಂದು ಹೆಸರು. ಯತಿಗಳು ತ್ರಿಕರಣಶುದ್ಧರಾಗಿ ಸರ್ವಸಂಗವನ್ನು ತ್ಯಾಗಮಾಡುವುದು ಗೃಹಸ್ಥರು ಮನಸ್ಸಿನಲ್ಲಿಯೇ ತ್ಯಜಿಸುವುದು — ಇವುಗಳಿಗೆ ಅಪರಿಗ್ರಹವೆನ್ನುವರು. ಇವುಗಳೆಲ್ಲವೂ ಯಮಗಳೆಂದು ಹೇಳಲ್ಪಟ್ಟಿರುವುವು. ಇನ್ನು ನಿಯಮಗಳನ್ನು ಕೇಳುವವನಾಗು. ಶೌಚ, ಸಂತೋಷ, ತಪಸ್ಸು, ಜಪ, ಗುರುಭಕ್ತಿಗಳೆಂಬುವುಗಳೇ ನಿಯಮಗಳು. ಇವುಗಳ ಭೇದಗಳನ್ನು ಹೇಳುವೆನು, ಕೇಳು.

೨೨. ಶೌಚವು ಬಾಹ್ಯವೆಂದೂ, ಅಂತರವೆಂದೂ ಎರಡು ವಿಧವಾಗಿರುವುದು. ಮಣ್ಣು, ನೀರು ಮುಂತಾದುವುಗಳಿಂದ ಬಾಹ್ಯಶುದ್ಧಿಯಾಗುವುದು. ಮನಸ್ಸು ನಿಷ್ಕಲ್ಮಷವಾಗುವುದೇ ಅಂತಶ್ಶುದ್ಧಿಯು.

೨೩. ನ್ಯಾಯದಿಂದ ಲಭಿಸಿದ ವೃತ್ತಿಯಿಂದಲೂ, ಭಿಕ್ಷೆಯಿಂದಲೂ, ಪಾಠಪ್ರವಚನಗಳಿಂದಲೂ, ಮನುಷ್ಯನಿಗೆ ಯಾವಾಗಲೂ ಯಾವ ತೃಪ್ತಿಯುಂಟಾಗುವುದೊ, ಅದಕ್ಕೆ ಸಂತೋಷವೆಂದು ಹೆಸರು.

೨೪. ಚಾಂದ್ರಾಯಣವೇ ಮೊದಲಾದ ಅನೇಕ ತಪಸ್ಸುಗಳು ಶಾಸ್ತ್ರಗಳಲ್ಲಿ ವಿಹಿತಗಳಾಗಿರುವುವು. ಇವುಗಳನ್ನು ಲಘುವಾದ ಆಹಾರದ ಸೇವನೆಯೊಡನೆ ಮಾಡುವುದೇ ತಪಸ್ಸೆನಿಸುವುದು.

ಸ್ವಾಧ್ಯಾಯಸ್ತು ಜಪಃ ಪ್ರೋಕ್ತಃ ಪ್ರಣವಾಭ್ಯಾಸನಾದಿಕಃ
ಶಿವೇ ಜ್ಞಾನೇ ಗುರೌ ಭಕ್ತಿರ್ಗುರುಭಕ್ತಿರಿತಿ ಸ್ಮೃತಾ ॥ ೨೫ ॥
ಏವಂ ಸಂಸಾಧ್ಯ ನಿಯಮಾನ್ಸಂಯಮಾಂಶ್ಚ ವಿಚಕ್ಷಣಃ ।
ಪ್ರಾಣಾಯಾಮಾಯ ಸಂದಧ್ಯಾನ್ನಾನ್ಯಥಾ ಯೋಗಸಾಧಕಃ ॥ ೨೬ ॥
ಯತೋಽಶುಚಿಶರೀರಸ್ಯ ವಾಯುಕೋಪೋ ಮಹಾನ್ಭವೇತ್ ।
ವಾಯುಕೋಪಾತ್ಕುಷ್ಠತಾ ಚ ಜಡತ್ವಾದೀನುಪಾಶ್ನುತೇ ॥ ೨೭ ॥
ತಸ್ಮಾದ್ವಿಚಕ್ಷಣಃ ಶುದ್ಧಂ ಕೃತ್ವಾ ದೇಹಂ ಯತೇತ್ಪರಂ ।
ಪ್ರಾಣಾಯಾಮಸ್ಯ ವಕ್ಷ್ಯಾಮಿ ಲಕ್ಷಣಂ ಶೃಣು ಪಾಂಡವ ॥ ೨೮ ॥
ಪ್ರಾಣಾಪಾನನಿರೋಧಶ್ಚ ಪ್ರಾಣಾಯಾಮಃ ಪ್ರಕೀರ್ತಿತಃ ।
ಲಘುಮಧ್ಯೋತ್ತರೀಯಾಖ್ಯಃ ಸ ಚ ಧೀರೈಸ್ತ್ರಿಧೋದಿತಃ ॥ ೨೯ ॥
ಲಘುರ್ದ್ವಾದಶಮಾತ್ರಸ್ತು ಮಾತ್ರಾ ನಿಮಿಷ ಉನ್ಮಿಷಃ ।
ದ್ವಿಗುಣೋ ಮಧ್ಯಮಶ್ಚೋಕ್ತಸ್ತ್ರಿಗುಣಶ್ಚೋತ್ತಮಃ ಸ್ಮೃತಃ ॥ ೩೦ ॥

---

೨೫. ವೇದಗಳ ಪುರಶ್ಚರಣೆ ಮತ್ತು ಪ್ರಣವಜಪದ ಅಭ್ಯಾಸಗಳಿಗೆ ಸ್ವಾಧ್ಯಾಯವೆನ್ನುವರು. ಪರಮೇಶ್ವರನಲ್ಲಿಯೂ, ಜ್ಞಾನದಲ್ಲಿಯೂ, ಗುರುವಿನಲ್ಲಿಯೂ ಇಡುವ ಪೂಜ್ಯಭಾವಕ್ಕೆ ಗುರುಭಕ್ತಿಯೆಂದು ಹೆಸರು.

೨೬. ಇಂತು ಯಮಗಳನ್ನೂ ನಿಯಮಗಳನ್ನೂ ಸಾಧಿಸಿದ ಮೇಲೆ ಬುದ್ಧಿವಂತನಾದ ಸಾಧಕನು ಪ್ರಾಣಾಯಾಮಕ್ಕಾಗಿ ಮನಸ್ಸನ್ನು ಕೊಡಬೇಕು. ಯೋಗಸಾಧಕನು ಮೊದಲೇ ಯೋಗವನ್ನು ಮಾಡಬಾರದು.

೨೭. ಅಶುಚಿಯಾದ ಶರೀರದಲ್ಲಿ ಹೆಚ್ಚಿನ ವಾಯುಗಳ ಉದ್ರೇಕವುಂಟಾಗುವುದು. ವಾಯುಪ್ರಕೋಪದಿಂದ ಕುಷ್ಠಾದಿ ರೋಗಗಳಾಗಲಿ, ಜಡತ್ವಾದಿ ಮಾನಸಿಕ ವಿಘ್ನಗಳಾಗಲಿ ಮನುಷ್ಯನನ್ನು ಪೀಡಿಸುವುದು.

೨೮. ಆದುದರಿಂದ ಕಾರ್ಯದಕ್ಷನಾದವನು ಮೊದಲು ದೇಹವನ್ನು ಶುದ್ಧಗೊಳಿಸಿಕೊಂಡು ಬಳಿಕ ಇತರ ಅಂಗಗಳ ಸಾಧನೆಯಲ್ಲಿ ತೊಡಗಬೇಕು. ಎಲೈ ಅರ್ಜುನನೆ! ಇನ್ನು ಪ್ರಾಣಾಯಾಮದ ಲಕ್ಷಣವನ್ನು ಹೇಳುವೆನು, ಕೇಳು.

೨೯–೩೦. ಪ್ರಾಣ, ಅಪಾನಗಳೆಂಬ ವಾಯುಗಳ ನಿರೋಧಕ್ಕೆ ಪ್ರಾಣಾಯಾಮವೆಂದು ಹೇಳಲ್ಪಟ್ಟಿರುವುದು. ಜಿತೇಂದ್ರಿಯರಾದ ಸಾಧಕರು ಇದನ್ನು ಲಘು, ಮಧ್ಯಮ, ಉತ್ತಮಗಳೆಂದು ಮೂರು ವಿಧಗಳಾಗಿ ವಿಂಗಡಿಸಿರುವರು. ಹನ್ನೆರಡು ಮಾತ್ರೆಗಳ ಕಾಲದ ನಿಯಮದಿಂದ ಮಾಡುವ ಪ್ರಾಣಾಯಾಮವು ಲಘುವೆನಿಸುವುದು. ಮಾತ್ರೆಯೆಂದರೆ ಕಣ್ಣು ಮುಚ್ಚಿ ತೆಗೆಯುವಷ್ಟು ಕಾಲವೆಂದು ತಿಳಿಯಬೇಕು. ಇಪ್ಪತ್ತುನಾಲ್ಕು ಮಾತ್ರೆಗಳ ಪ್ರಾಣಾಯಾಮಕ್ಕೆ ಮಧ್ಯಮವೆಂದೂ, ಮುವ್ವತ್ತಾರು ಮಾತ್ರೆಗಳಾದರೆ ಉತ್ತಮವೆಂದೂ ಹೇಳಿರುವುದು.

ಪ್ರಥಮೇನ ಜಯೇತ್ಸ್ವೇದಂ ಮಧ್ಯಮೇನ ತು ವೇಪಥುಂ ।
ವಿಷಾದಂ ಚ ತೃತೀಯೇನ ಜಯೇದ್ದೋಷಾನನುಕ್ರಮಾನ್ ॥ ೩೧ ॥
ಪದ್ಮಾಖ್ಯಮಾಸನಂ ಕೃತ್ವಾ ರೇಚಕಂ ಪೂರಕಂ ತಥಾ ।
ಕುಂಭಕಂ ಚ ಸುಖಾಸೀನಃ ಪ್ರಾಣಾಯಾಮಂ ತ್ರಿಧಾಭ್ಯಸೇತ್ ॥ ೩೨ ॥
ಪ್ರಾಣಾನಾಮುಪಸಂರೋಧಾತ್ಪ್ರಾಣಾಯಾಮ ಇತಿ ಸ್ಮೃತಃ ।
ಯಥಾ ಪರ್ವತಧಾತೂನಾಂ ಧ್ಮಾತಾನಾಂ ದಹ್ಯತೇ ಮಲಃ ॥ ೩೩ ॥
ತಥೇಂದ್ರಿಯವೃತೋ ದೋಷಃ ಪ್ರಾಣಾಯಾಮೇನ ದಹ್ಯತೇ ।
ಗೋಶತಂ ಕಾಪಿಲಂ ದತ್ವಾ ಯತ್ಫಲಂ ತತ್ಫಲಂ ಭವೇತ್ ॥ ೩೪ ॥
ಪ್ರಾಣಾಯಾಮೇನ ಯೋಗಜ್ಞಸ್ತಸ್ಮಾತ್ಪ್ರಾಣಂ ಸದಾ ಯಮೇತ್ ।
ಪ್ರಾಣಾಯಾಮೇನ ಸಿದ್ಧ್ಯಂತಿ ದಿವಾಃ ಶಾಂತ್ಯಾದಯಃ ಕ್ರಮಾತ್ ॥ ೩೫ ॥
ಶಾಂತಿಃ ಪ್ರಶಾಂತಿರ್ದೀಪ್ತಿಶ್ಚ ಪ್ರಸಾದಶ್ಚ ಯಥಾಕ್ರಮಂ ।
ಸಹಜಾಗಂತುಕಾನಾಂ ಪಾಪಾನಾಂ ಚ ಪ್ರವರ್ತತಾಂ ॥ ೩೬ ॥

---

೩೧. ಲಘು ಪ್ರಾಣಾಯಾಮದಿಂದ ಶರೀರದ ಬೆವರನ್ನೂ, ಮಧ್ಯಮದಿಂದ ದೇಹದ ನಡುಕನ್ನೂ, ಉತ್ತಮದಿಂದ ಮನಸ್ಸಿನ ವಿಷಾದವನ್ನೂ ದೋಷಗಳೆಂದು ಬಗೆದು ಅನುಕ್ರಮವಾಗಿ ಜಯಿಸಬೇಕು.

೩೨. ಪದ್ಮಾಸನವನ್ನು ಹಾಕಿ ಯಥಾಸುಖವಾಗಿ ರೇಚಕ, ಪೂರಕ, ಕುಂಭಕಗಳೊಡನೆ ಮೂರು ವಿಧಗಳಾದ ಪ್ರಾಣಾಯಾಮಗಳನ್ನೂ ಚೆನ್ನಾಗಿ ಅಭ್ಯಾಸ ಮಾಡಬೇಕು.

೩೩. ಪ್ರಾಣಗಳನ್ನು ಬಲವಾಗಿ ಬಂಧಿಸುವುದರಿಂದ ಇದಕ್ಕೆ ಪ್ರಾಣಾಯಾಮವೆಂದೆನ್ನುವರು. ಬಲವಾದ ಗಾಳಿಯ ಹೊಡೆತದಿಂದ ಪರ್ವತದ ಧಾತುಗಳ ಕಲ್ಮಷವೆಂಬುದು ಹೇಗೆ ಮಾಯವಾಗುವುದೊ, ಹಾಗೆಯೇ ಪ್ರಾಣಾಯಾಮದಿಂದ ಇಂದ್ರಿಯಗತಗಳಾದ ಸಕಲ ದೋಷಗಳೂ ಸುಟ್ಟುಹೋಗುವುವು.

೩೪–೩೫. ನೂರು ಕಪಿಲಗೋವುಗಳನ್ನು ದಾನಮಾಡಿದರೆ ಯಾವ ಸುಕೃತವುಂಟೊ, ಒಂದು ಪ್ರಾಣಾಯಾಮದಿಂದಲೂ ಅಷ್ಟೇ ಫಲವು ಲಭಿಸುವುದು. ಆದುದರಿಂದ ಯೋಗವಿಧಿಯನ್ನರಿತವನು ಪ್ರಾಣಾಯಾಮವನ್ನು ಅಭ್ಯಾಸ ಮಾಡಬೇಕು. ಪ್ರಾಣಾಯಾಮದಿಂದ ದಿವ್ಯಗಳಾದ ಶಾಂತ್ಯಾದಿ ಸದ್ಗುಣಗಳು ಕ್ರಮವಾಗಿ ಸಿದ್ಧಿಸುವುವು. ಶಾಂತಿ, ಪ್ರಶಾಂತಿ, ದೀಪ್ತಿ ಮತ್ತು ಪ್ರಸಾದಗಳೆಂಬ ಗುಣಗಳು ಯಥಾಕ್ರಮವಾಗಿ ನೆಲೆಗೊಳ್ಳುವುವು.

೩೬–೩೭. ಸಹಜವಾಗಿಯೇ ಕಾಣಿಸಿಕೊಳ್ಳಲಪೇಕ್ಷಿಸಿ ಪ್ರವರ್ತನೋನ್ಮುಖಗಳಾದ ಪಾಪಗಳ ವಾಸನೆಗಳನ್ನು ಶಮನಗೊಳಿಸುವುದೇ ಪ್ರಾಣಾಯಾಮದ ಶಾಂತಿಯೆಂಬ ಮೊದಲನೆಯ ಗುಣವು. ಇನ್ನು ನಿಜವಾದ ಶಾಂತಿಯೆಂದ

ವಾಸನಾಶಾಂತಿರಿತ್ಯಾಖ್ಯಃ ಪ್ರಥಮೋ ಜಾಯತೇ ಗುಣಃ ।
ಲೋಭಮೋಹಾತ್ಮಕಾನ್ದೋಷಾನ್ನಿರಾಕೃತ್ಯೈವ ಕೃತ್ಸ್ನಶಃ ॥ ೩೭ ॥
ತಪಸಾಂ ಚ ಯದಾ ಪ್ರಾಪ್ತಿಃ ಸಾ ಶಾಂತಿರಿತಿ ಚೋಚ್ಯತೇ ।
ಸರ್ವೇಂದ್ರಿಯಪ್ರಸಾದಶ್ಚ ಬುದ್ಧೇರ್ಮರುತಾಮಪಿ ॥ ೩೮ ॥
ಪ್ರಸಾದ ಇತಿ ಸ ಪ್ರೋಕ್ತಃ ಪ್ರಾಪ್ಯಮೇವಂ ಚತುಷ್ಟಯಂ ।
ಏವಂ ಫಲಂ ಸದಾ ಯೋಗೀ ಪ್ರಾಣಾಯಾಮಂ ಸಮಭ್ಯಸೇತ್ ॥ ೩೯ ॥
ಮೃದುತ್ವಂ ಸೇವ್ಯಮಾನಾಸ್ತು ಸಿಂಹಶಾರ್ದೂಲ ಕುಂಜರಾಃ ।
ಯಥಾ ಯಾಂತಿ ತಥಾ ಪ್ರಾಣೋ ವಶ್ಯೋ ಭವತಿ ಸಾಧಿತಃ ॥ ೪೦ ॥
ಪ್ರಾಣಾಯಾಮಸ್ತ್ವಯಂ ಪ್ರೋಕ್ತಃ ಪ್ರತ್ಯಾಹಾರಂ ತತಃ ಶೃಣು ।
ವಿಷಯೇಷು ಪ್ರವೃತ್ತಸ್ಯ ಚೇತಸೋ ವಿನಿವರ್ತನಂ ॥ ೪೧ ॥
ಪ್ರತ್ಯಾಹಾರಂ ವಿನಿರ್ದಿಷ್ಟಂ ತಸ್ಯ ಸಂಯಮನಂ ಹಿ ಯತ್ ।
ಪ್ರತ್ಯಾಹಾರಸ್ತ್ವಯಂ ಪ್ರೋಕ್ತೋ ಧಾರಣಾಲಕ್ಷಣಂ ಶೃಣು ॥ ೪೨ ॥

---

ರೇನೆಂಬುದನ್ನು ಕೇಳು. ಲೋಭ, ಮೋಹ ಮುಂತಾದ ಮನಸ್ಸಿನ ದೋಷಗಳನ್ನೆಲ್ಲ ಮೂಲಸಹಿತವಾಗಿ ನಾಶಗೊಳಿಸಿ ತಪಸ್ಸಿನ ಪ್ರಾಪ್ತಿಯುಂಟುಮಾಡುವುದಕ್ಕೂ ಶಾಂತಿಯೆಂದೇ ಹೇಳುವರು.

೩೮–೩೯. ಸಕಲ ಜ್ಞಾನೇಂದ್ರಿಯಗಳು, ಕರ್ಮೇಂದ್ರಿಯಗಳು, ಬುದ್ಧಿ, ಪ್ರಾಣವಾಯುಗಳು, ಇವುಗಳೆಲ್ಲವೂ ಯಾವ ಬಗೆಯಲ್ಲಿಯೂ ಚಲಿಸದೆ ಸಮಸ್ಥಿತಿಯಲ್ಲಿ ಶಾಂತಭಾವದಿಂದಿರುವುದಕ್ಕೆ ಪ್ರಸಾದವೆಂದು ಹೆಸರು. ಈ ಪ್ರಕಾರವಾಗಿ ಪ್ರಾಣಾಯಾಮದ ನಾಲ್ಕು ಬಗೆಯ ಫಲಗಳನ್ನೂ ಸಾಧಕನು ಹೊಂದಬೇಕು. ಈ ಫಲಗಳುಳ್ಳ ಪ್ರಾಣಾಯಾಮವನ್ನು ಯೋಗಿಯಾದವನು ಯಾವಾಗಲೂ ಅಭ್ಯಾಸಮಾಡುತ್ತಿರಬೇಕು.

೪೦. ನಿಜವಾಗಿಯೂ ಪ್ರಾಣಾಯಾಮವನ್ನು ಸಾಧಿಸಿದವನಿಗೆ ಪ್ರಾಣವಾಯುಗಳು ಕ್ರೂರ ವನಮೃಗಗಳನ್ನು ಪಳಗಿಸುವವನಿಗೆ ಸಿಂಹ, ಶಾರ್ದೂಲ, ಗಜಗಳೇ ಮುಂತಾದುವು ಎಂತೋ ಅಂತು ತಮ್ಮ ಸಹಜಗುಣವನ್ನು ಬಿಟ್ಟು ಸೌಮ್ಯಭಾವವನ್ನು ಹೊಂದುವುವು.

೪೧–೪೨. ಇದಕ್ಕೆ ಪ್ರಾಣಾಯಾಮವೆಂದು ಹೇಳುವರು. ಇನ್ನು ಪ್ರತ್ಯಾಹಾರವನ್ನು ಕೇಳು. ವಿಷಯಗಳಲ್ಲಿ ಅಭಿಲಾಷೆಯಿಂದ ಪ್ರವಹಿಸುತ್ತಿರುವ ಮನಸ್ಸನ್ನು ಹಿಂದಿರುಗಿಸುವುದೇ ಪ್ರತ್ಯಾಹಾರವೆಂದು ನಿರ್ದೇಶಿಸಲ್ಪಟ್ಟಿರುವುದು. ಆ ಮನಸ್ಸಿನ ಸಂಯಮನವೇ ಪ್ರತ್ಯಾಹಾರವೆನಿಸಿಕೊಳ್ಳುವುದು. ಇನ್ನು ಧಾರಣೆಯ ಲಕ್ಷಣವನ್ನು ಕೇಳುವವನಾಗು.

ಯಥಾ ತೋಯಾರ್ಥಿನಸ್ತೋಯಂ ಪತ್ರನಾಲಾದಿಭಿಃ ಶನೈಃ ।
ಆಪಿಬೇಯುಸ್ತಥಾ ವಾಯುಂ ಯೋಗೀ ನಯತಿ ಸಾಧಿತಂ ॥ ೪೩ ॥
ಪ್ರಾಗ್ನಾಭ್ಯಾಂ ಹೃದಯೇ ವಾಯುರಥ ತಾಲೌ ಭ್ರುವೋಽಂತರೇ ।
ಚತುರ್ದಲೇ ಷಡ್ದಶೇ ಚ ದ್ವಾದಶೇ ಷೋಡಶದ್ವಿಕೇ ॥ ೪೪ ॥
ಆಕುಂಚನೇ ನೈವಮೂರ್ಧ್ನ್ಯಮುನ್ನೀಯ ಪವನಂ ಶನೈಃ ।
ಮೂರ್ಧನಿ ಬ್ರಹ್ಮರಂಧ್ರೇ ತಂ ಪ್ರಾಣಂ ಸಂಧಾರಯೇತ್ಕೃತೀ ॥ ೪೫ ॥
ಪ್ರಾಣಾಯಾಮಾ ದಶ ದ್ವೌ ಚ ಧಾರಣೈಷಾ ಪ್ರಕೀರ್ತ್ಯತೇ ।
ದಶೈತಾ ಧಾರಣಾಃ ಸ್ಥಾಪ್ಯ ಪ್ರಾಪ್ನೋತ್ಯಕ್ಷರಸಾಮ್ಯತಾಂ ॥ ೪೬ ॥
ಧಾರಣಾಸ್ಥಸ್ಯ ಯದ್ಧ್ಯೇಯಂ ತಸ್ಯ ತ್ವಂ ಶೃಣು ಲಕ್ಷಣಂ ।
ಧ್ಯೇಯಂ ಬಹುವಿಧಂ ಪಾರ್ಥ ಯಸ್ಯಾಂತೋ ನೋಪಲಭ್ಯತೇ ॥ ೪೭ ॥
ಕೇಚಿಚ್ಛಿವಂ ಹರಿಂ ಕೇಚಿತ್ಕೇಚಿತ್ಸೂರ್ಯಂ ವಿಧಿಂ ಪರೇ ।
ಕೇಚಿದ್ದೇವೀಂ ಮಹದ್ಭೂತಾಮುತ ಧ್ಯಾಯಂತಿ ಕೇಚನ ॥ ೪೮ ॥

---

೪೩–೪೪. ಬಾಯಾರಿದವರು ಎಲೆಯ ದಂಟಿನ ಮೂಲಕವಾಗಿ ಮೆಲ್ಲಗೆ ನೀರನ್ನು ಹೇಗೆ ಕುಡಿಯುವರೊ, ಹಾಗೆಯೇ ಯೋಗಿಯಾದವನು ವಶಪಡಿಸಿಕೊಂಡ ಪ್ರಾಣವಾಯುವನ್ನು ಸುಷುಮ್ನಾ ನಾಳದ ಮೂಲಕ ತೆಗೆದುಕೊಂಡು ಹೋಗುವನು. ಮೂಲಪ್ರದೇಶದಲ್ಲಿಯೂ, ಹೃದಯದಲ್ಲಿಯೂ, ತಾಲುಪ್ರದೇಶದಲ್ಲಿಯೂ, ಭ್ರೂಮಧ್ಯದಲ್ಲಿಯೂ ಇರುವ ನಾಲ್ಕು, ಆರು, ಹತ್ತು, ಹನ್ನೆರಡು, ಹದಿನಾರು, ಎರಡು ಈ ಸಂಖ್ಯೆಯ ದಳಗಳುಳ್ಳ ಪದ್ಮಗಳಲ್ಲಿ ಈ ವಾಯುವು ಸಂಚರಿಸುತ್ತಿರುತ್ತದೆ.

೪೫–೪೬. ಇಂತು ಸಂಕೋಚಗೊಂಡ ವಾಯುವನ್ನು ಮೆಲ್ಲಗೆ ಮೇಲಕ್ಕೆ ಸೆಳೆದುಕೊಂಡು ತಲೆಯ ಮಧ್ಯದಲ್ಲಿರುವ ಬ್ರಹ್ಮರಂಧ್ರದಲ್ಲಿ ಪ್ರಾಣವನ್ನು ಧಾರಣಮಾಡಲು ಯೋಗ್ಯನಾದವನು ಕೃತಕಾರ್ಯನಾಗುವನು. ಇಂತು ಹನ್ನೆರಡು ಬಗೆಯ ಪ್ರಾಣಾಯಾಮ ಮಾಡುವುದೇ ಧಾರಣೆಯೆಂದು ಹೆಸರುಗೊಂಡಿರುವುದು. ಈ ವಿಧವಾದ ಹತ್ತು ಧಾರಣೆಗಳನ್ನು ಮಾಡಲು ಶಕ್ತನಾದರೆ ಯೋಗಿಯು ನಾಶರಹಿತನಾದ ಪರಮಾತ್ಮನ ಸಮಾನತೆಯನ್ನು ಹೊಂದುವನು.

೪೭. ಇನ್ನು ಧಾರಣೆಯಲ್ಲಿ ಅನುರಕ್ತನಾದವನ ಧ್ಯೇಯಮೂರ್ತಿಯೆಂತಹುದೆಂಬುದನ್ನೂ ಅದರ ಲಕ್ಷಣವನ್ನೂ ಕೇಳು. ಎಲೈ ಅರ್ಜುನನೆ! ಧ್ಯೇಯವೆಂಬುದು ಅನೇಕ ವಿಧ. ಅದಕ್ಕೆ ಕೊನೆಮೊದಲೇ ಸಿಕ್ಕುವಂತಿಲ್ಲ.

೪೮. ಕೆಲವರು ಶಿವನನ್ನೂ, ಕೆಲವರು ವಿಷ್ಣುವನ್ನೂ ಕೆಲವರು ಸೂರ್ಯನನ್ನು, ಇತರರು ಬ್ರಹ್ಮನನ್ನೂ, ಕೆಲವರು ಮಹದಾದಿ ತತ್ತ್ವಗಳಿಗೆ ಕಾರಣಭೂತಳಾದ ದೇವಿಯನ್ನೂ ಧ್ಯಾನಮಾಡುವರು.

**ತತ್ರ ಯೋ ಯಚ್ಚ ಧ್ಯಾಯೇತ ಸ ಚ ತತ್ರ ಪ್ರಲೀಯತೇ ।**
**ತಸ್ಮಾತ್ಸದಾಶಿವಂ ದೇವಂ ಪಂಚವಕ್ತ್ರಂ ಹರಂ ಸ್ಮರೇತ್ ॥ ೪೯ ॥**
**ಪದ್ಮಾಸನಸ್ಥಂ ತಂ ಗೌರಂ ಬೀಜಪೂರಕಸಂಸ್ಥಿತಂ ।**
**ದಶಹಸ್ತಂ ಸುಪ್ರಸನ್ನವದನಂ ಧ್ಯಾನಮಾಸ್ಥಿತಂ ॥ ೫೦ ॥**
**ಧ್ಯೇಯಮೇತತ್ತವ ಪ್ರೋಕ್ತಂ ತಸ್ಮಾದ್ಧ್ಯಾನಂ ಸಮಾಚರೇತ್ ।**
**ಧ್ಯಾನಸ್ಯ ಲಕ್ಷಣಂ ಚೈತನ್ನಿಮೇಷಾರ್ಧಮಪಿ ಸ್ಫುಟಂ ॥ ೫೧ ॥**
**ನ ಪೃಥಗ್ಜಾಯತೇ ಧ್ಯೇಯಾದ್ಧಾರಣಾಂ ಯಸ್ಸಮಾಸ್ಥಿತಃ ।**
**ಏವಮೇತಾಂ ದುರಾರೋಹಾಂ ಭೂಮಿಮಾಸ್ಥಾಯ ಯೋಗವಿತ್ ॥ ೫೨ ॥**
**ನ ಕಿಂಚಿಚ್ಚಿಂತಯೇತ್ಪಶ್ಚಾತ್ಸಮಾಧಿರಿತಿ ಕೀರ್ತ್ಯತೇ ।**
**ಸಮಾಧೇರ್ಲಕ್ಷಣಂ ಸಮ್ಯಗ್ಬ್ರುವತೋ ಮೇ ನಿಶಾಮಯ ॥ ೫೩ ॥**
**ಶಬ್ದಸ್ಪರ್ಶರಸೈರ್ಹೀನಂ ಗಂಧರೂಪವಿವರ್ಜಿತಂ ।**
**ಪರಂ ಪುರುಷಂ ಸಂಪ್ರಾಪ್ತಃ ಸಮಾಧಿಸ್ಥಃ ಪ್ರಕೀರ್ತಿತಃ ॥ ೫೪ ॥**

---

೪೯. ಇವುಗಳಲ್ಲಿ ಯಾವನು ಯಾವ ರೂಪವನ್ನು ಧ್ಯಾನಿಸುವನೊ, ಅವನು ಅದರಲ್ಲಿಯೇ ಲಯವನ್ನು ಹೊಂದುವನು. ಆದುದರಿಂದ ಮಾನವನು ನಿತ್ಯದಲ್ಲಿಯೂ ದೇವದೇವನೂ, ಪಂಚಮುಖನೂ, ಭಕ್ತರ ಪಾಪಗಳನ್ನು ಕಳೆಯುವವನೂ ಆದ ಸದಾಶಿವನನ್ನೇ ಧ್ಯಾನಿಸಬೇಕು.

೫೦. ಆ ಧ್ಯೇಯ ರೂಪವು ಪದ್ಮಾಸನವನ್ನು ಹಾಕಿ, ಕೆಂಪುಬಣ್ಣದ ಶರೀರದಿಂದೊಪ್ಪುತ್ತ, ಸೃಷ್ಟಿಯ ವಾಸನಾಮಯ ಬೀಜಗಳಿಂದ ತುಂಬಿದ ಹತ್ತು ಕೈಗಳುಳ್ಳದ್ದಾಗಿ ಪ್ರಸನ್ನವಾದ ಮುಖಕಾಂತಿಯಿಂದ ಧ್ಯಾನಮಗ್ನವಾದುದಾಗಿರಬೇಕು.

೫೧–೫೨. ಇಂತು ನಿನಗೆ ಧ್ಯೇಯದ ಸ್ವರೂಪವು ನಿರೂಪಿಸಲ್ಪಟ್ಟಿತು. ಇದನ್ನುದ್ದೇಶಮಾಡಿಕೊಂಡೇ ಧ್ಯಾನವನ್ನು ಚೆನ್ನಾಗಿ ಆಚರಿಸಬೇಕು. ಆ ಧ್ಯಾನದ ಲಕ್ಷಣವು ಹೀಗಿರುವುದು: ಧಾರಣೆಯನ್ನು ಚೆನ್ನಾಗಿ ಅಭ್ಯಾಸಮಾಡಿದವನು ಧ್ಯೇಯರೂಪದಿಂದ ಒಂದು ನಿಮಿಷ ಮಾತ್ರವೂ ಕೂಡ ಬೇರೆಯಾಗದಿರುವುದು ಸ್ಫುಟವು. ಇಂತು ಅತ್ಯಂತ ಕಷ್ಟಸಾಧ್ಯವಾಧ ನೆಲೆಯನ್ನು ಹೊಂದಿ ಯೋಗವನ್ನು ತಿಳಿದವನು ಆಮೇಲೆ ಮತ್ತೇನನ್ನೂ ಕುರಿತು ಯೋಚಿಸಬಾರದು. ಇದೇ ಸಮಾಧಿಯೆಂದು ಕರೆಯಲ್ಪಡುವುದು.

೫೩–೫೪. ಸಮಾಧಿಯ ಲಕ್ಷಣವನ್ನು ಹೇಳುವೆನು, ಏಕಾಗ್ರಚಿತ್ತನಾಗಿ ಕೇಳು. ಶಬ್ದ, ಸ್ಪರ್ಶ, ರಸ, ಗಂಧ, ರೂಪಗಳೆಂಬ ಪಂಚೇಂದ್ರಿಯ ವಿಷಯಗಳಿಂದ ದೂರವಾದುದೂ, ಇಂದ್ರಿಯ ಗ್ರಾಹ್ಯವಲ್ಲದುದೂ, ಆದ ಪರಮಾತ್ಮನ ಪದವನ್ನು ಹೊಂದಿದವನೇ ಸಮಾಧಿಸ್ಥಿತನೆಂದು ಹೇಳಲ್ಪಡುವನು.

ತಾಂ ತು ಪ್ರಾಪ್ಯ ನರೋ ವಿಘ್ನೈರ್ನಾಭಿಭೂಯೇತ ಕರ್ಹಿಚಿತ್ ।
ಸಮಾಧಿಸ್ಥಶ್ಚ ದುಃಖೇನ ಗುರುಣಾಪಿ ನ ಚಾಲ್ಯತೇ ॥ ೫೫ ॥
ಶಂಖಾದ್ಯಾಃ ಶತಶಸ್ತಸ್ಯ ವಾದ್ಯಂತೇ ಯದಿ ಕರ್ಣಯೋಃ ।
ಭೇರ್ಯಶ್ಚ ಯದಿ ಹನ್ಯಂತೇ ಶಬ್ದಂ ಬಾಹ್ಯಂ ನ ವಿಂದತಿ ॥ ೫೬ ॥
ಕಶಾಪ್ರಹಾರಾಭಿಹತೋ ವಹ್ನಿದಗ್ಧತನುಸ್ತಥಾ ।
ಶೀತಾಢ್ಯೇಽವಸ್ಥಿತೋ ಘೋರೇ ಸ್ಪರ್ಶಂ ಬಾಹ್ಯಂ ನ ವಿಂದತಿ ॥ ೫೭ ॥
ರೂಪೇ ಗಂಧೇ ರಸೇ ಬಾಹ್ಯೇ ತಾದೃಶಸ್ಯ ತು ಕಾ ಕಥಾ ।
ದೃಷ್ಟ್ವಾ ಯ ಆತ್ಮನಾತ್ಮಾನಂ ಸಮಾಧಿಂ ಲಭತೇ ಪುನಃ ॥ ೫೮ ॥
ತೃಷ್ಣಾ ವಾಥ ಬುಭುಕ್ಷಾ ವಾ ಬಾಧೇತೇ ತಂ ನ ಕರ್ಹಿಚಿತ್ ॥ ೫೯ ॥
ನ ಸ್ವರ್ಗೇ ನ ಚ ಪಾತಾಲೇ ಮಾನುಷ್ಯೇ ಕ್ವ ಚ ತತ್ಸುಖಂ ।
ಸಮಾಧಿಂ ನಿಶ್ಚಲಂ ಪ್ರಾಪ್ಯ ಯತ್ಸುಖಂ ವಿಂದತೇ ನರಃ ॥ ೬೦ ॥
ಏವಮಾರೂಢಯೋಗಸ್ಯ ತಸ್ಯಾಪಿ ಕುರುನಂದನ ।
ಪಂಚೋಪಸರ್ಗಾಃ ಕಟುಕಾಃ ಪ್ರವರ್ತಂತೇ ಯಥಾ ಶೃಣು ॥ ೬೧ ॥

---

೫೫. ಆ ಪರಮಪದವನ್ನು ಹೊಂದಿದ ಮನುಷ್ಯನು ಎಂದಿಗೂ ವಿಘ್ನಗಳಿಂದ ಉಪಹತಿಯನ್ನು ಹೊಂದಲಾರನು. ಸಮಾಧಿಯಲ್ಲಿ ಸುಸ್ಥಿತನಾದವನು ಮಹತ್ತರವಾದ ದುಃಖದಿಂದಲೂ ಮನಸ್ಸಿನ ಕಲ್ಮಷವನ್ನು ಹೊಂದಲಾರನು.

೫೬–೫೭. ಆತನ ಕಿವಿಗಳಲ್ಲಿ ನೂರಾರು ಶಂಖಾದಿ ವಾದ್ಯಗಳು ಬಾಜಿಸಲ್ಪಡುತ್ತಿದ್ದರೂ, ಭೇರಿಗಳು ಭೋರ್ಗರೆಯುತ್ತಿದ್ದರೂ ಕೂಡ ಆತನು ಹೊರಗಿನ ಶಬ್ದಗಳನ್ನೇ ತಿಳಿಯಲಾರನು. ಚಾವಟಿಗಳಿಂದ ಹೊಡೆದರೂ, ಅಗ್ನಿಯಿಂದ ಸುಡುತ್ತಿದ್ದರೂ, ಸಹಿಸಲಸಾಧ್ಯವಾದ ಶೀತಪ್ರದೇಶದಲ್ಲಿದ್ದರೂ ಸಮಾಹಿತನಾದವನು ಬಾಹ್ಯಸ್ಪರ್ಶವನ್ನೇ ತಿಳಿಯುವುದಿಲ್ಲ.

೫೮–೫೯. ಇನ್ನು ಅಂತಹ ಮಹಾತ್ಮರ ವಿಷಯವಾಗಿ ರೂಪ, ರಸ ಗಂಧಗಳ ಬಾಹ್ಯವೃತ್ತಿಯ ಬಗ್ಗೆ ಹೇಳಬೇಕಾದುದೇ ಇಲ್ಲವು. ಯಾವನು ತನ್ನಲ್ಲಿಯೇ ತನ್ನ ಆತ್ಮನನ್ನು ಕಂಡು ಸಮಾಧಿಯಲ್ಲಿ ದೃಢವಾಗಿ ನೆಲೆಗೊಂಡಿರುವನೊ, ಅವನನ್ನು ಎಂದಿಗೂ ಹಸಿವು ಬಾಯಾರಿಕೆಗಳು ಬಾಧಿಸಲಾರವು.

೬೦. ಮಾನವನು ನಿಶ್ಚಲವಾದ ಸಮಾಧಿಸ್ಥಿತಿಯನ್ನು ಹೊಂದಿ ಯಾವ ಆನಂದವನ್ನನುಭವಿಸುವನೊ, ಅದಕ್ಕೆ ಸಮಾನವಾದ ಸೌಖ್ಯವು ಸ್ವರ್ಗ, ಮರ್ತ್ಯ ಪಾತಾಲಗಳಲ್ಲೆಲ್ಲಿಯೂ ಸಿಕ್ಕಲಾರದು.

೬೧. ಇಂತು ಯೋಗದ ಪರಾಕಾಷ್ಠೆಯನ್ನು ಏರಿದವನಾದರೂ, ಅವನಿಗೆ ಐದು ವಿಧಗಳಾದ ಪ್ರತಿಬಂಧಗಳುಂಟಾಗುವುವು. ಎಲೈ ಅರ್ಜುನನೆ! ಅವು ಬಹು ತೀಕ್ಷ್ಣಗಳಾಗಿರುವುವು. ಅವುಗಳ ಸ್ವರೂಪಗಳನ್ನು ಕೇಳು.

ಪ್ರಾತಿಭಃ ಶ್ರಾವಣೋ ದೈವೋ ಭ್ರಮಾವರ್ತೋಽಥ ಭೀಷಣಃ ।
ಪ್ರತಿಭಾ ಸರ್ವಶಾಸ್ತ್ರಾಣಾಂ ಪ್ರಾತಿಭೋಽಯಂ ಚ ಸಾತ್ತ್ವಿಕಃ ॥ ೬೨ ॥
ತೇನ ಯೋ ಮದಮಾದದ್ಯಾದ್ಯೋಗೀ ಶೀಘ್ರಂ ಚ ಚೇತಸಃ ।
ಯೋಜನಾನಾಂ ಸಹಸ್ರೇಭ್ಯಃ ಶ್ರವಣಂ ಶ್ರವಣಸ್ತು ಸಃ ॥ ೬೩ ॥
ದ್ವಿತೀಯಃ ಸಾತ್ತ್ವಿಕಶ್ಚಾಯಮಸ್ಮಾನ್ಮತ್ತೋ ವಿನಶ್ಯತಿ ।
ಅಷ್ಟೌ ಪಶ್ಯತಿ ಯೋನೀಶ್ಚ ದೇವಾನಾಂ ದೈವ ಇತ್ಯಸೌ ॥ ೬೪ ॥
ಅಯಂ ಚ ಸಾತ್ತ್ವಿಕೋ ದೋಷೋ ಮದಾದಸ್ಮಾದ್ವಿನಶ್ಯತಿ ।
ಆವರ್ತ ಇವ ತೋಯಸ್ಯ ಜನಾವರ್ತೇ ಯದಾಕುಲಃ ॥ ೬೫ ॥
ಆವರ್ತಾಖ್ಯಸ್ತ್ವಯಂ ದೋಷೋ ರಾಜಸಃ ಸ ಮಹಾಭಯಃ ।
ಭ್ರಾಮ್ಯತೇ ಯನ್ನಿರಾಲಂಬಂ ಮನೋ ದೋಷೈಶ್ಚ ಯೋಗಿನಃ ॥ ೬೬ ॥

---

೬೨. ಪ್ರಾತಿಭ, ಶ್ರಾವಣ, ದೈವ, ಭ್ರಮ ಮತ್ತು ಭೀಕರವಾದ ಆವರ್ತ ಇವುಗಳೇ ಉಪಸರ್ಗಗಳೆನಿಸುವುವು. ಸಕಲ ಶಾಸ್ತ್ರಗಳಲ್ಲಿಯೂ ತಾತ್ಪರ್ಯವನ್ನರಿಯುವ ಪ್ರತಿಭೆಯುಂಟಾಗುವುದೇ ಸಾತ್ತ್ವಿಕವಾದ ಪ್ರಾತಿಭವೆಂಬ ಉಪಸರ್ಗವು.

೬೩. ಅದರಿಂದ ಯಾವನು ಬೇಗ ಮನಸ್ಸಿನ ಅಹಂಕಾರವನ್ನು ಹೊಂದುವನೊ ಅವನು ನಾಶವನ್ನು ಹೊಂದುವನು. ಸಾವಿರಾರು ಯೋಜನಗಳ ದೂರದಲ್ಲಿ ಆಗುವ ಶಬ್ದಗಳನ್ನು ತಿಳಿಯುವ ಶಕ್ತಿಯೇ ಶ್ರಾವಣವೆನಿಸುವುದು.

೬೪. ಇದು ಎರಡನೆಯ ಸಾತ್ತ್ವಿಕ ಪ್ರತಿಬಂಧವು. ಇದರಿಂದ ಮತ್ತನಾದವನೂ ಕೂಡ ಆರೂಢಚ್ಯುತನಾಗುವನು. ದೇವತಾಗಣಗಳ ಎಂಟು ಭೇದಗಳ ಸ್ವರೂಪಗಳನ್ನೂ ತಿಳಿಯಬಲ್ಲ ಯೋಗಿಯ ಶಕ್ತಿಗೆ ದೈವವೆಂದು ಹೆಸರು.

೬೫. ಇದೂ ಕೂಡ ಒಂದು ಸಾತ್ತ್ವಿಕ ದೋಷವೆ. ಇದರಿಂದ ಅಹಂಕಾರವನ್ನು ಪಡೆದ ಯೋಗಿಯೂ ನಾಶವನ್ನೈದುವನು. ಪ್ರವಾಹದ ಸುಳಿಯಲ್ಲಿ ಸಿಕ್ಕ ಮನುಷ್ಯನಂತೆ ಯೋಗಿಯು ಜನ ಸಮೂಹದಲ್ಲಿ ಸಿಕ್ಕಿಕೊಂಡು ವ್ಯಾಕುಲಪಡುವುದೇ ಆವರ್ತವೆಂಬ ದೋಷದ ಫಲವು. ಇದು ರಜೋಗುಣದಿಂದ ಹುಟ್ಟಿ ಮಹಾ ಭಯಂಕರವಾಗಿರುವುದು.

೬೬. ಧ್ಯೇಯಗಳೆಂಬ ಸಕಲ ಆಧಾರಗಳೂ ನಾಶವಾಗಲು ಯೋಗಿಯ ಮನಸ್ಸು ದೋಷಗಳಿಂದ ತುಂಬಿದುದಾಗಿ ನಿರಾಲಂಬವಾಗಿ ಭ್ರಮೆಗೊಳ್ಳುವುದಕ್ಕೆ ಭ್ರಮವೆಂದು ಹೆಸರು. ಇದು ತಮೋಗುಣದ ಕಾರ್ಯವಾಗಿರುವುದು.

ಸಮಸ್ತಾಧಾರವಿಭ್ರಂಶಾದ್ಭ್ರಮಾಖ್ಯಸ್ತಾಮಸೋ ಗುಣಃ ।
ಏತೈರ್ನಾಶಿತಯೋಗಾಶ್ಚ ಸಕಲಾ ದೇವಯೋನಯಃ ॥ ೬೭ ॥
ಉಪಸರ್ಗೈರ್ಮಹಾಘೋರೈರಾವರ್ತ್ಯಂತೇ ಪುನಃ ಪುನಃ ।
ಪ್ರಾವೃತ್ಯ ಕಂಬಲಂ ಶುಕ್ಲಂ ಯೋಗೀ ತಸ್ಮಾನ್ಮನೋಮಯಂ ॥ ೬೮ ॥
ಚಿಂತಯೇತ್ಪರಮಂ ಬ್ರಹ್ಮ ಕೃತ್ವಾ ತತ್ಪ್ರವಣಂ ಮನಃ ।
ಆಹಾರಾಃ ಸಾತ್ತ್ವಿಕಾಶ್ಚೈವ ಸಂಸೇವ್ಯಾಃ ಸಿದ್ಧಿಮಿಚ್ಛತಾ ।
ರಾಜಸೈಸ್ತಾಮಸೈಶ್ಚೈವ ಯೋಗೀ ಸಿಧ್ಯೇನ್ನ ಕರ್ಹಿಚಿತ್ ॥ ೬೯ ॥
ಶ್ರದ್ಧಧಾನೇಷು ದಾಂತೇಷು ಶ್ರೋತ್ರಿಯೇಷು ಮಹಾತ್ಮಸು ।
ಸ್ವಧರ್ಮಾದನಪೇತೇಷು ಭಿಕ್ಷಾ ಯಾಚ್ಯಾ ಚ ಯೋಗಿನಾ ॥ ೭೦ ॥
ಭೈಕ್ಷಂ ಯವಾನ್ನಂ ತಕ್ರಂ ವಾ ಪಯೋ ಯಾವಕಮೇವ ವಾ ।
ಫಲಮೂಲಂ ವಿಪಕ್ವಂ ವಾ ಕಣಪಿಣ್ಯಾಕಸಕ್ತವಃ ॥ ೭೧ ॥
ಶ್ರುತಾ ಇತ್ಯೇತ ಆಹಾರ ಯೋಗಿನಾಂ ಸಿದ್ಧಿಕಾರಕಾಃ ॥ ೭೨ ॥

---

೬೭. ಈ ಐದು ದೋಷಗಳಿಂದ ಯೋಗವನ್ನು ನಾಶಗೊಳಿಸಿಕೊಂಡವರೇ ಸಮಸ್ತ ದೇವಯೋನಿಗಳಲ್ಲಿ ಜನಿಸುವರು. ಮಹಾ ಭಯಂಕರಗಳಾದ ಈ ಪ್ರತಿಬಂಧಕಗಳ ಬಲದಿಂದಲೇ ಯೋಗಿಗಳು ಮತ್ತೆ ಮತ್ತೆ ಭೂಲೋಕದಲ್ಲಿ ಜನ್ಮವನ್ನು ತಾಳುವರು.

೬೮–೬೯. ಆದುದರಿಂದ ಶುದ್ಧಸತ್ತ್ವಗುಣವೆಂಬ ಮನೋಮಯವಾದ ಕಂಬಳಿಯನ್ನು ಹೊದ್ದುಕೊಂಡು ಯೋಗಿಯಾದವನು ಮನಸ್ಸನ್ನು ಏಕಾಗ್ರವನ್ನಾಗಿ ಮಾಡಿ ಪರಬ್ರಹ್ಮವಸ್ತುವನ್ನು ಕುರಿತು ಧ್ಯಾನಮಾಡಬೇಕು. ಮತ್ತು ಯೋಗಸಿದ್ಧಿಯನ್ನು ಬಯಸುವವನು ಕೇವಲ ಸಾತ್ತ್ವಿಕಗಳಾದ ಆಹಾರಗಳನ್ನೇ ಸೇವಿಸಬೇಕು. ರಾಜಸ ತಾಮಸ ಪದಾರ್ಥಗಳ ಸೇವನೆಯಿಂದ ಎಂದಿಗೂ ಯೋಗಿಯು ಪುರುಷಾರ್ಥವನ್ನು ಹೊಂದುವುದಿಲ್ಲ.

೭೦. ಶ್ರದ್ಧಾವಂತರೂ, ಜಿತೇಂದ್ರಿಯರೂ, ಶ್ರೋತ್ರಿಯರೂ, ಮಹಾತ್ಮರೂ ಸ್ವಧರ್ಮನಿರತರೂ ಆದವರ ಮನೆಗಳಲ್ಲಿ ಮಾತ್ರ ಯೋಗಿಯಾದವನು ಭಿಕ್ಷೆಯನ್ನು ಯಾಚನೆ ಮಾಡಬೇಕು.

೭೧. ಯೋಗಿಗೆ ಭಿಕ್ಷಾರ್ಹಗಳಾದ ಪದಾರ್ಥಗಳು ಯಾವುವೆಂದರೆ— ಯವಾನ್ನ, ಮಜ್ಜಿಗೆ, ಹಾಲು, ಅವಲಕ್ಕಿ, ಪಕ್ವವಾಗದ ಫಲಮೂಲಗಳು, ಹಿಟ್ಟು, ಹಿಂಡಿ ಮತ್ತು ಸಕ್ತು (ಹುರಿಹಿಟ್ಟು)ಗಳು.

೭೨–೭೩. ಈ ಆಹಾರಗಳು ಮಾತ್ರ ಯೋಗಿಗೆ ತಪಸ್ಸಿದ್ಧಿಯನ್ನುಂಟು ಮಾಡಿಕೊಡುವುವೆಂದು ಹೇಳಲ್ಪಟ್ಟಿರುವುವು. ಯೋಗಾಭ್ಯಾಸನಿರತನಾದವನು ಅನೇಕ ಸೂಚನೆಗಳಿಂದ ತನ್ನ ಮೃತ್ಯುವು ಸಮೀಪಿಸುತ್ತಿರುವುದನ್ನು ತಿಳಿದು

ಮೃತ್ಯುಕಾಲಂ ವಿದಿತ್ವಾ ಚ ನಿಮಿತ್ತೈರ್ಯೋಗಸಾಧಕಃ ।
ಯೋಗಂ ಯುಂಜೀತ ಕಾಲಸ್ಯ ವಂಚನಾರ್ಥಂ ಸಮಾಹಿತಃ ॥ ೭೩ ॥
ನಿಮಿತ್ತಾನಿ ಚ ವಕ್ಷ್ಯಾಮಿ ಮೃತ್ಯುಂ ಯೋ ವೇತ್ತಿ ಯೋಗವಿತ್ ।
ರಕ್ತಕೃಷ್ಣಾಂಬರಧರಾ ಗಾಯಂತೀಹ ಸತೀ ಚ ಯಂ ।
ದಕ್ಷಿಣಾಯಾಂ ನಯೇನ್ನಾರೀ ಸ್ವಪ್ನೇ ಸೋಽಪಿ ನ ಜೀವತಿ ॥ ೭೪ ॥
ನಗ್ನಂ ಕ್ಷಪಣಕಂ ಸ್ವಪ್ನೇ ಹಸಮಾನಂ ಪ್ರದೃಶ್ಯ ಚ ॥ ೭೫ ॥
ವಿನಂ ಚ ವೀಕ್ಷ್ಯ ವಲ್ಗಂತಂ ತಂ ವಿದ್ಯಾನ್ಮೃತ್ಯುಮಾಗತಂ ।
ಋಕ್ಷವಾನರಯುಗ್ಯಸ್ಥೋ ಗಾಯನ್ಯೋ ದಕ್ಷಿಣಾಂ ದಿಶಂ ॥ ೭೬ ॥
ಯಾತಿ ಮಜ್ಜೇದಥೋ ಪಂಕೇ ಗೋಮಯೇ ವಾ ನ ಜೀವತಿ ।
ಕೇಶಾಂಗಾರೈಸ್ತಥಾ ಭಸ್ಮಭುಜಂಗೈರ್ನಿರ್ಜಲಾಂ ನದೀಂ ॥ ೭೭ ॥
ವಿಷಾಮನ್ಯತಮೈಃ ಪೂರ್ಣಾಂ ದೃಷ್ಟ್ವಾ ಸ್ವಪ್ನೇ ನ ಜೀವತಿ ।
ಕರಾಳೈರ್ವಿಕಟೈ ರೂಕ್ಷೈಃ ಪುರುಷೈರುದ್ಯತಾಯುಧೈಃ ।
ಪಾಷಾಣೈಸ್ತಾಡಿತಃ ಸ್ವಪ್ನೇ ಸದ್ಯೋ ಮೃತ್ಯುಂ ಭಜೇನ್ನರಃ ॥ ೭೮ ॥

---

ಕೊಂಡು ಆ ಮೃತ್ಯುದೇವತೆಯನ್ನು ವಂಚಿಸುವ ಉದ್ದೇಶದಿಂದ ಸಮಾಹಿತ ಮನಸ್ಕನಾಗಿ ಯೋಗದಲ್ಲಿ ಯುಕ್ತನಾಗಬೇಕು.

೭೪. ಇನ್ನು ಯೋಗಜ್ಞನಾದವನು ಮರಣವು ಸನ್ನಿಹಿತವಾಗಿರುವುದನ್ನು ಯಾವ ಸೂಚನೆಗಳಿಂದ ತಿಳಿಯಬಲ್ಲನೆಂಬುದನ್ನು ಹೇಳುವೆನು. ಯಾವನನ್ನು ಸ್ವಪ್ನದಲ್ಲಿ ಸಾಧ್ವಿಯಾದ ಸ್ತ್ರೀಯು ಕೆಂಪು ಅಥವ ಕಪ್ಪು ಬಣ್ಣದ ವಸ್ತ್ರಗಳನ್ನುಟ್ಟು ಸಂಗೀತವನ್ನು ಹಾಡುತ್ತ ದಕ್ಷಿಣ ದಿಕ್ಕಿಗೆ ಕರೆದುಕೊಂಡು ಹೋಗುವಳೊ, ಅವನು ಬಹಳಕಾಲ ಜೀವಿಸಲಾರನು.

೭೫–೭೮. ದಿಗಂಬರನಾದ ಬೌದ್ಧಸನ್ಯಾಸಿಯು ನಗುತ್ತಿರುವುದನ್ನೂ ಕುಣಿದಾಡುತ್ತಿರುವುದನ್ನೂ ಸ್ವಪ್ನದಲ್ಲಿ ಕಂಡವನು ತನ್ನ ಅವಸಾನವು ಸನ್ನಿಹಿತವಾಗಿರುವುದೆಂದು ತಿಳಿಯಬೇಕು. ಕರಡಿಗಳನ್ನಾಗಲಿ, ಕೋತಿಗಳನ್ನಾಗಲಿ ಹೂಡಿದ ಗಾಡಿಯಲ್ಲಿ ಕುಳಿತು ಹಾಡಿಕೊಳ್ಳುತ್ತ ದಕ್ಷಿಣದಿಕ್ಕಿಗೆ ಪ್ರಯಾಣಮಾಡುವವನೂ, ಆಳವಾದ ಕೆಸರಿನಲ್ಲಾಗಲಿ, ಸಗಣಿಯಲ್ಲಾಗಲಿ ಮುಳುಗುವವನೂ ದೀರ್ಘಕಾಲ ಜೀವಿಸಲಾರನು. ನದಿಯಲ್ಲಿ ನೀರೇ ಇಲ್ಲದೆ ಪಾತ್ರವೆಲ್ಲ ಕೂದಲುಗಳಿಂದಾಗಲಿ, ಕೆಂಡಗಳಿಂದಾಗಲಿ, ಬೂದಿಯಿಂದಾಗಲಿ, ಹಾವುಗಳಿಂದಾಗಲಿ, ಇವುಗಳಲ್ಲಿ ಎರಡು ಅಥವಾ ಹೆಚ್ಚಿನವುಗಳಿಂದಾಗಲಿ ತುಂಬಿದುದನ್ನು ಸ್ವಪ್ನದಲ್ಲಿ ಕಂಡ ಮನುಷ್ಯನು ಜೀವಿಸುವುದಿಲ್ಲ. ಭಯಂಕರರೂ, ಕುರೂಪಿಗಳೂ, ಕಠಿನಹೃದಯರೂ, ಆಯುಧಗಳನ್ನೆತ್ತಿ ಹಿಡಿದವರೂ ಆದ ಮನುಷ್ಯರು ಸ್ವಪ್ನದಲ್ಲಿ ಯಾವ

**ಸೂರ್ಯೋದಯೇ ಯಸ್ಯ ಶಿವಾ ಕ್ರೋಶಂತೀ ಯಾತಿ ಸಮ್ಮುಖಂ ।**
**ವಿಪರೀತಂ ಪರೀತಂ ವಾ ಸ ಸದ್ಯೋ ಮೃತ್ಯುಮೃಚ್ಛತಿ ॥ ೭೯ ॥**
**ದೀಪಾಧಿಗಂಧಂ ನೋ ವೇತ್ತಿ ವಮತ್ಯಗ್ನಿಂ ತಥಾ ನಿಶಿ ।**
**ನಾತ್ಮಾನಂ ಪರನೇತ್ರಸ್ಥಂ ವೀಕ್ಷತೇ ನ ಸ ಜೀವತಿ ॥ ೮೦ ॥**
**ಶಕ್ರಾಯುಧಂ ಚಾರ್ಧರಾತ್ರೇ ದಿವಾ ವಾ ಗ್ರಹಣಂ ತಥಾ ।**
**ದೃಷ್ಟ್ವಾ ಮನ್ಯೇತ ಸ ಕ್ಷೀಣಮಾತ್ಮಜೀವಿತಮಾಪ್ತವಾನ್ ॥ ೮೧ ॥**
**ನಾಸಿಕಾವಕ್ರತಾಮೇತಿ ಕರ್ಣಯೋರ್ನಮನೋನ್ನತೀ ।**
**ನೇತ್ರಂ ಚ ವಾಮಂ ಸ್ರವತಿ ಯಸ್ಯ ತಸ್ಯಾಯುರುದ್ಗತಂ ॥ ೮೨ ॥**
**ಆರಕ್ತತಾಮೇತಿ ಮುಖಂ ಜಿಹ್ವಾ ಚಾಪ್ಯಸಿತಾ ಯದಾ ।**
**ತದಾ ಪ್ರಾಜ್ಞೋ ವಿಜಾನೀಯಾದಾಸನ್ನಂ ಮೃತ್ಯುಮಾತ್ಮನಃ ॥ ೮೩ ॥**
**ಉಷ್ಟ್ರರಾಸಭಯಾನೇನ ಸ್ವಪ್ನೇ ಯೋ ಯಾತಿ ದಕ್ಷಿಣಾಂ ॥ ೮೪ ॥**

---

ನನ್ನು ಕಲ್ಲುಗಳಿಂದ ಹೊಡೆಯುವರೊ, ಆ ಮನುಷ್ಯನು ತತ್ಕ್ಷಣದಲ್ಲಿಯೇ ಮರಣವನ್ನು ಹೊಂದುವನು.

೭೯–೮೧. ಸೂರ್ಯೋದಯದಲ್ಲಿ ಯಾವನಿಗೆದುರಾಗಿ ಹೆಣ್ಣು ನರಿಯು ಕೂಗುತ್ತ ಬರುವುದೊ, ಅದು ಪ್ರದಕ್ಷಿಣೆ ಅಥವಾ ಅಪ್ರದಕ್ಷಿಣೆಯಾಗಿ ಸುತ್ತು ವುದೊ ಅವನು ಶೀಘ್ರವಾಗಿ ಪ್ರಾಣಗಳನ್ನು ಬಿಡುವನು. ಯಾವನು ಆರಿದ ದೀಪದ ಬತ್ತಿಯ ವಾಸನೆಯನ್ನು ತಿಳಿಯಲಾರನೊ, ಯಾವನ ಬಾಯಿಂದ ರಾತ್ರಿ ಯಲ್ಲಿ ಅಗ್ನಿಯ ಜ್ವಾಲೆಗಳು ಹೊರಡುತ್ತಿರುವಂತೆ ಇತರರಿಗೆ ಭಾಸವಾಗುವುದೊ, ಯಾವನು ತನ್ನ ಪ್ರತಿಬಿಂಬವನ್ನು ಎದುರಿಗಿರುವವರ ಕಣ್ಣುಬೊಂಬೆಯಲ್ಲಿ ಕಾಣಲಾರನೊ, ಅವನು ಸ್ವಲ್ಪಕಾಲದಲ್ಲಿಯೇ ಮೃತಿಯೊಂದುವನೆಂದು ತಿಳಿಯ ಬೇಕು. ಮಧ್ಯರಾತ್ರಿಯಲ್ಲಿ ಕಾಮನಬಿಲ್ಲೂ, ಹಗಲಿನಲ್ಲಿ ಗ್ರಹಣವೂ ಯಾವ ನೊಬ್ಬನಿಗೆ ಮಾತ್ರ ಕಾಣುವುವೊ, ಅವನು ತನ್ನ ಆಯುಸ್ಸಿನ ಅವಸಾನವನ್ನು ಹೊಂದಿರುವನೆಂದು ತಿಳಿಯಬೇಕು.

೮೨–೮೩. ಯಾವನ ಮೂಗು ವಕ್ರವಾಗಿದ್ದಂತೆ ತೋರುವುದೊ, ಕಿವಿಗಳು ಕೀಳುಮೇಲುಗಳಾಗಿ ಕಾಣುವುವೊ, ಯಾವನಿಗೆ ನಿಷ್ಕಾರಣವಾಗಿಯೇ ಎಡಗಣ್ಣಿ ನಲ್ಲಿ ನೀರು ಸುರಿಯುವುದೊ, ಅವನ ಜೀವಿತವು ಕೊನೆಗಂಡಿದೆಯೆಂದು ತಿಳಿಯ ಬೇಕು. ಯಾವನ ಮುಖವು ತಾಮ್ರವರ್ಣವುಳ್ಳದ್ದಾಗುವುದೊ, ನಾಲಗೆಯೂ ಕಪ್ಪಾಗುವುದೊ, ಆ ಮನುಷ್ಯನು ಬುದ್ಧಿವಂತನಾದಲ್ಲಿ ತನ್ನ ಅವಸಾನಕಾಲವು ಸಮೀಪಿಸಿರುವುದೆಂದು ನಿಶ್ಚಯಿಸಬೇಕು.

೮೪–೮೫. ಯಾವನು ಸ್ವಪ್ನದಲ್ಲಿ ಒಂಟೆ ಅಥವ ಕತ್ತೆಯನ್ನು ಕಟ್ಟಿದ ಬಂಡಿಯಲ್ಲಿ ಕುಳಿತು ದಕ್ಷಿಣ ದಿಕ್ಕಿಗೆ ಪ್ರಯಾಣಮಾಡುವನೊ, ಯಾವನು ಕಿವಿ

ದಿಶಂ ಕರ್ಣಾ ಪಿಧಾಯಾಪಿ ನಿರ್ಘೋಷಂ ಶ್ರುಣುಯಾನ್ನ ಚ ।
ನ ಸ ಜೀವೇತ್ತಥಾ ಸ್ವಪ್ನೇ ಪತಿತಸ್ಯ ಪಿಧೀಯತೇ ॥ ೮೫ ॥
ದ್ವಾರಂ ನಚೋತ್ತಿಷ್ಠತಿ ಚ ಶುಭ್ರಾ ದೃಷ್ಟಿಶ್ಚ ಲೋಹಿತಾ ।
ಸ್ವಪ್ನೇಽಗ್ನಿಂ ಪ್ರವಿಶೇದ್ಯಶ್ಚ ನ ಚ ನಿಷ್ಕ್ರಮತೇ ಪುನಃ ।
ಜಲಪ್ರವೇಶಾದಪಿ ವಾ ತದಂತಂ ತಸ್ಯ ಜೀವಿತಂ ॥ ೮೬ ॥
ಯಶ್ಚಾಭಿಹನ್ಯತೇ ದೃಷ್ಟೈರ್ಭೂತೈ ರಾತ್ರಾವಥೋ ದಿವಾ ।
ಪ್ರಕೃತೈರ್ವಿಕೃತೈರ್ವಾಪಿ ತಸ್ಯಾಸನ್ನೌ ಯಮಾಂತಕೌ ॥ ೮೭ ॥
ದೇವತಾನಾಂ ಗುರೂಣಾಂ ಚ ಪಿತ್ರೋರ್ಜ್ಞಾನವಿದಾಂ ತಥಾ ।
ನಿಂದಾಮವಜ್ಞಾಂ ಕುರುತೇ ಭಕ್ತೋ ಭೂತ್ವಾ ನ ಜೀವತಿ ॥ ೮೮ ॥
ಏವಂ ದೃಷ್ಟ್ವಾ ನಿಮಿತ್ತಾನಿ ವಿಪರೀತಾನಿ ಯೋಗವಿತ್ ।
ಧಾರಣಾಂ ಸಮ್ಯಗಾಸ್ಥಾಯ ಸಮಾಧಾವಚಲೋ ಭವೇತ್ ॥ ೮೯ ॥
ಯದಿ ನೇಚ್ಛಂತಿ ತೇ ಮೃತ್ಯುಂ ತತೋ ನಾಸೌ ಪ್ರಪದ್ಯತೇ ।
ವಿಮುಕ್ತಿಮಥವಾ ವಾಂಛೇದ್ವಿಸೃಜೇದ್ಬ್ರಹ್ಮಮೂರ್ಧನಿ ॥ ೯೦ ॥

---

ಗಳನ್ನು ಮುಚ್ಚಿಕೊಳ್ಳಲು ಪ್ರಾಣಘೋಷವನ್ನು ಕೇಳಲಾರನೊ, ಯಾವನು ಸ್ವಪ್ನದಲ್ಲಿ ನವದ್ವಾರಗಳನ್ನು ಮುಚ್ಚಿಕೊಂಡು ಕೆಳಗೆ ಬಿದ್ದು ಮತ್ತೆ ಮೇಲಕ್ಕೇಳಲಾರನೊ, ಯಾವನ ಶುಭ್ರಗಳಾದ ಕಣ್ಣುಗಳು ಕೆಂಪಾಗುವುವೊ, ಯಾವನು ಸ್ವಪ್ನಾವಸ್ಥೆಯಲ್ಲಿ ಅಗ್ನಿಯಲ್ಲಿಯೋ, ಜಲದಲ್ಲಿಯೋ ಬಿದ್ದಂತೆ ಭಾಸವಾಗಿ ಮತ್ತೆ ಹೊರಕ್ಕೆ ಬರುವುದಿಲ್ಲವೊ, ಅವನ ಜೀವಿತದ ಅಂತವು ಸಮೀಪಿಸಿದೆಯೆಂದು ತಿಳಿಯಬೇಕು.

೮೭. ಯಾವನು ರಾತ್ರಿಯಲ್ಲಾಗಲಿ ಹಗಲಿನಲ್ಲಾಗಲಿ ಸಾಧಾರಣ ಮತ್ತು ಅಸಾಧಾರಣಗಳಾದ ಭೂತಗಳಿಂದ ಪೀಡಿತನಾಗುವನೊ, ಅವನಿಗೆ ಕಾಲನೂ, ಯಮನೂ ಸಮೀಪದಲ್ಲಿರುವರು.

೮೮. ಯಾವನು ಭಗವದ್ಭಕ್ತನಾದರೂ ದೇವರನ್ನಾಗಲಿ ಗುರುಗಳನ್ನಾಗಲಿ ತಂದೆ ತಾಯಿಗಳನ್ನಾಗಲಿ, ಜ್ಞಾನಿಗಳನ್ನಾಗಲಿ, ನಿಂದೆ ಅಥವಾ ಉದಾಸೀನ ಮಾಡುವನೊ, ಅವನು ಖಂಡಿತವಾಗಿಯೂ ಜೀವಿಸಲಾರನು.

೮೯–೯೦. ಈರೀತಿಯಾದ ಮೃತ್ಯುಸೂಚಕಗಳಾದ ನಿಮಿತ್ತಗಳನ್ನು ಕಂಡು ಯೋಗಿಯಾದವನು ಧಾರಣೆಯನ್ನು ಚೆನ್ನಾಗಿ ಅನುಸರಿಸಿ ಸಮಾಧ್ಯವಸ್ಥೆಯಲ್ಲಿ ನಿಶ್ಚಲಚಿತ್ತನಾಗಬೇಕು. ಅಂತಹ ಯೋಗಿಗಳು ಮೃತ್ಯುವನ್ನು ಇಚ್ಛಿಸದಿದ್ದರೆ ಯಮನು ಅವರ ಸಮೀಪಕ್ಕೆ ಬರಲಾರನು. ಯಾವ ಯೋಗಿಯು ಶಾಶ್ವತ ಮೋಕ್ಷವನ್ನು ಅಪೇಕ್ಷಿಸುವನೊ, ಅವನು ತನ್ನ ಪ್ರಾಣವನ್ನು ಬ್ರಹ್ಮರಂಧ್ರದ ಮೂಲಕ ಬಿಡಬೇಕು.

ಸಂತ್ಯಿದೇಹೇ ವಿಮುಕ್ತೇಽಚ ಉಪಸರ್ಗಾಶ್ಚ ಯೇ ಪುನಃ ।
ಯೋಗಿನಂ ಸಮುಪಾಯಾಂತಿ ಶೃಣು ತಾನಪಿ ಪಾಂಡವ ॥ ೯೧ ॥
ಐಶಾನ್ಯೇ ರಾಕ್ಷಸಪುರೇ ಯಕ್ಷೇ ಗಂಧರ್ವ ಏವ ಚ ।
ಐಂದ್ರೇ ಸೌಮ್ಯೇ ಪ್ರಜಾಪತ್ಯೇ ಬ್ರಾಹ್ಮೇ ಚಾಷ್ಟಸು ಸಿದ್ಧಯಃ ॥ ೯೨ ॥
ಭವಂತಿ ಚಾಷ್ಟೌ ಶೃಣು ತಾಃ ಪಾರ್ಥಿವೀ ಯಾ ಚ ತೈಜಸೀ ।
ವಾಯವೀ ವ್ಯೋಮಾತ್ಮಿಕಾಚ್ಚೈವ ಮಾನಸಾಹಂಭವಾ ಮತಿಃ ॥ ೯೩ ॥
ಪ್ರತ್ಯೇಕಮಷ್ಟಧಾ ಭಿನ್ನಾ ದ್ವಿಗುಣಾ ದ್ವಿಗುಣಾ ಕ್ರಮಾತ್ ।
ಪೂರ್ವೇ ಚಾಷ್ಟೌ ಚತುಃಷ್ಷಷ್ಟಿರಂತೇ ಶೃಣುಷ್ವ ತದ್ಯಥಾ ॥ ೯೪ ॥
ಸ್ಥೂಲತಾ ಹ್ರಸ್ವತಾ ಬಾಲ್ಯಂ ವಾರ್ಧಕ್ಯಂ ಯೌವನಂ ತಥಾ ।
ನಾನಾಜಾತಿಸ್ವರೂಪಂ ಚ ಚತುರ್ಭಿರ್ದೇಹಧಾರಣಂ ॥ ೯೫ ॥
ಪಾರ್ಥಿವಾಂಶಂ ವಿನಾ ನಿತ್ಯಮಷ್ಟೌ ಪಾರ್ಥಿವಸಿದ್ಧಯಃ ।
ವಿಜಿತೇ ಪೃಥಿವೀತತ್ತ್ವೇ ಯದೈಶಾನ್ಯೇ ಭವಂತಿ ಚ ॥ ೯೬ ॥

---

೯೧. ಇಂತು ದೇಹವಿಯೋಗವಾದರೂ ಯೋಗಿಗೆ ಅನೇಕ ಉಪಸರ್ಗಗಳು ಮತ್ತೆ ಮತ್ತೆ ಪ್ರಾಪ್ತಗಳಾಗಿ ತಪೋಭಂಗಗಳನ್ನು ಮಾಡುವುವು. ಎಲೈ ಅರ್ಜುನನೆ! ಅವುಗಳನ್ನು ವಿವರಿಸುವೆನು ಕೇಳು.

೯೨. ಈ ಎಂಟು ಸಿದ್ಧಿಗಳು ಐಶಾನ್ಯ, ರಾಕ್ಷಸಪುರ, ಯಕ್ಷ, ಗಂಧರ್ವ, ಐಂದ್ರ, ಸೌಮ್ಯ, ಪ್ರಜಾಪತ್ಯ ಮತ್ತು ಬ್ರಾಹ್ಮಗಳೆಂಬ ಲೋಕಗಳನ್ನು ಹೊಂದಿಸುವುವು.

೯೩. ಇವುಗಳ ಹೆಸರುಗಳಾವುವೆಂದರೆ ಪಾರ್ಥಿವೀ, ಅಮ್ಮಯೀ, ತೈಜಸೀ, ವಾಯವೀ, ವ್ಯೋಮಾತ್ಮಿಕಾ, ಮಾನಸಾ, ಅಹಂಭವಾ, ಬುದ್ಧಿಭವಾ ಎಂಬುವುಗಳು.

೯೪. ಇವುಗಳಲ್ಲಿ ಒಂದೊಂದೂ ಎಂಟು ಬಗೆಗಳಾಗಿ ಪ್ರತಿಯೊಂದೂ ಹಿಂದಿನದರ ಎರಡರಷ್ಟು ಗುಣವುಳ್ಳದ್ದಾಗಿರುವುದು. ಮೊದಲನೆಯದರಲ್ಲಿ ಎಂಟೂ, ಕೊನೆಯದರಲ್ಲಿ ಅರುವತ್ತುನಾಲ್ಕೂ ಗುಣಗಳಿರುವುವೆಂದು ಹೇಳು ವರು. ಅದು ಹೇಗೆಂಬುದನ್ನು ಕೇಳು.

೯೫–೯೬. ಸ್ಥೂಲತ್ವ, ಹ್ರಸ್ವತ್ವ, ಬಾಲ್ಯ, ವಾರ್ಧಕ್ಯ, ಯೌವನ, ನಾನಾ ಜಾತಿಗಳ ಸಾರೂಪ್ಯ, ಸ್ವರೂಪಪ್ರಾಪ್ತಿಯು, ಪಾರ್ಥಿವಾಂಶವನ್ನು ಬಿಟ್ಟು ಮಿಕ್ಕ ನಾಲ್ಕು ಭೂತಗಳಿಂದುಂಟಾದ ದೇಹ— ಇವುಗಳೆಂಟೂ ಪಾರ್ಥಿವಸಿದ್ಧಿ ಗಳೆನಿಸುವುವು. ಪೃಥ್ವೀತತ್ತ್ವವನ್ನು ಜಯಿಸಿದವರಿಗೆ ಇವುಗಳು ಐಶಾನ್ಯದಲ್ಲಿ ಲಭಿಸುವುವು.

ಭೂಮಾವಿವ ಜಲೇ ವಾಸೋ ನಾತುರೋಽರ್ಣವಮಾಪಿಬೇತ್ ।
ಸರ್ವತ್ರ ಜಲಪ್ರಾಪ್ತಿಶ್ಚ ಅಪಿ ಶುಷ್ಕಂ ದ್ರವಂ ಫಲಂ ॥ ೯೭ ॥
ತ್ರಿಭಿರ್ದೇಹಸ್ಯ ಧರಣಂ ನದೀರ್ವಾ ಸ್ಥಾಪಯೇತ್ಕರೇ ।
ಅವ್ರಣತ್ವಂ ಶರೀರಸ್ಯ ಕಾಂತಿಶ್ಚಾಥಾಷ್ಟಕಂ ಸ್ಮೃತಂ ॥ ೯೮ ॥
ಅಷ್ಟೌ ಪೂರ್ವಾ ಇಮಾಶ್ಚಾಷ್ಟೌ ರಾಕ್ಷಸಾನಾಂ ಪುರೇ ಸ್ಮೃತಾಃ ।
ದೇಹಾದಗ್ನಿವಿನಿರ್ಮಾಣಂ ತತ್ತಾಪಭಯವರ್ಜನಂ ॥ ೯೯ ॥
ಶಕ್ತಿದತ್ವಂ ಚ ಲೋಕಾನಾಂ ಜಲಮಧ್ಯೇಽಗ್ನಿಜ್ವಾಲನಂ ।
ಅಗ್ನಿಗ್ರಹಶ್ಚ ಹಸ್ತೇನ ಸ್ಮೃತಿಮಾತ್ರೇಣ ಪಾವನಂ ॥ ೧೦೦ ॥
ಭಸ್ಮೀಭೂತಸ್ಯ ನಿರ್ಮಾಣಂ ದ್ವಾಭ್ಯಾಂ ದೇಹಸ್ಯ ಧಾರಣಂ ।
ಪೂರ್ವಾಃ ಷೋಡಶ ಚಾಪ್ಯಷ್ಟೌ ತೇಜಸೋ ಯಕ್ಷಸದ್ಮನಿ ॥ ೧೦೧ ॥
ಮನೋಗತಿತ್ವಂ ಭೂತಾನಾಮಂತರ್ನಿವೇಶನಂ ತಥಾ ।
ಪರ್ವತಾದಿಮಹಾಭಾರವಹನಂ ಲೀಲಯೈವ ಚ ॥ ೧೦೨ ॥

---

೯೭–೯೯. ಭೂಮಿಯ ಮೇಲೆ ಹೇಗೋ ಹಾಗೆಯೇ ಜಲಮಧ್ಯದಲ್ಲಿಯೂ ವಾಸಮಾಡುವುದು, ಕ್ಲೇಶವಿಲ್ಲದೆಯೇ ಸಮುದ್ರವನ್ನೆಲ್ಲ ಪಾನಮಾಡುವುದು, ಎಲ್ಲೆಲ್ಲಿಯೂ ನೀರನ್ನು ಪಡೆಯುವುದು, ತಾನು ಮುಟ್ಟಿದ ಎಂತಹ ಶುಷ್ಕ ಪದಾರ್ಥವನ್ನಾದರೂ ಆರ್ದ್ರವನ್ನಾಗಿ ಮಾಡುವುದು, ಭೂಜಲಗಳಲ್ಲದ ಮೂರು ಭೂತಗಳಿಂದಲೇ ದೇಹವನ್ನು ತಾಳಿರುವುದು, ಸಕಲ ನದಿಗಳನ್ನೂ ಅಂಗೈಯಲ್ಲಿ ನಿಲ್ಲಿಸುವುದು, ಶರೀರದ ಸೌಷ್ಠವ ಮತ್ತು ತೇಜಸ್ಸಂಪನ್ನತೆ— ಈ ಎಂಟೂ ಹಿಂದೆ ಹೇಳಿದ ಎಂಟೂ, ಒಟ್ಟು ಹದಿನಾರು ಗುಣಗಳು ರಾಕ್ಷಸಪುರದಲ್ಲಿ ಲಭಿಸುವುವೆಂದು ಹೇಳಲ್ಪಟ್ಟಿರುವುವು.

೧೦೦–೧೦೧. ದೇಹದಿಂದ ಬೆಂಕಿಯನ್ನುಂಟುಮಾಡುವುದು, ಅದರ ಭಯವಿಲ್ಲದಿರುವುದು, ಸಕಲ ಲೋಕಗಳಿಗೂ ಶಕ್ತಿಯನ್ನು ಕೊಡುವುದು, ನೀರಿನ ಮಧ್ಯದಲ್ಲಿಯೂ ಬೆಂಕಿಯನ್ನುರಿಸುವುದು, ಕೈಗಳಲ್ಲಿ ಅಗ್ನಿಯನ್ನು ಹಿಡಿಯುವುದು, ಸ್ಮರಿಸಿದ ಮಾತ್ರದಿಂದಲೇ ಪಾವನ ಮಾಡುವುದು, ಸುಟ್ಟು ಬೂದಿಯಾದುದನ್ನು ಮತ್ತೆ ನಿರ್ಮಾಣ ಮಾಡುವುದು, ವಾಯ್ವಾಕಾಶಗಳೆಂಬ ಎರಡು ಭೂತಗಳ ಅಂಶಗಳಿಂದಲೇ ದೇಹವನ್ನು ಹೊಂದಿರುವುದು — ಈ ಎಂಟು ಗುಣಗಳೂ ಹಿಂದೆ ಹೇಳಿದ ಹದಿನಾರು ಗುಣಗಳೊಡನೆ ಯಕ್ಷಪುರದಲ್ಲಿ ಕಾಣುವುವು.

೧೦೨–೧೦೪. ಮನೋವೇಗದಿಂದ ಸಂಚರಿಸುವುದು, ಸಕಲ ಪ್ರಾಣಿಗಳಲ್ಲಿ ಅಂತರ್ಯಾಮಿಯಾಗುವುದು, ಪರ್ವತಗಳೇ ಮೊದಲಾದ ಪದಾರ್ಥಗಳ ಮಹಾ ಭಾರವನ್ನು ಲೀಲೆಯಿಂದೆತ್ತುವುದು, ಹಗುರವಾಗುವುದು, ಭಾರವಾಗುವುದು,

ಲಘುತ್ವಂ ಗೌರವತ್ವಂ ಚ ಪಾಣಿಭ್ಯಾಂ ವಾಯುವಾರಣಂ ।
ಅಂಗುಲ್ಯಗ್ರನಿಪಾತೇನ ಭೂಮೇಃ ಸರ್ವತ್ರ ಕಂಪನಂ ॥ ೧೦೩ ॥
ಏಕೇನ ದೇಹನಿಷ್ಪತ್ತಿರ್ಗಾಂಧರ್ವೇ ವಾಂತಿ ಸಿದ್ಧಯಃ ।
ಚತುರ್ವಿಂಶತಿಃ ಪೂರ್ವಾಶ್ಚಾಪ್ಯಷ್ಟಾವೇತಾಶ್ಚ ಸಿದ್ಧಯಃ ।
ಗಂಧರ್ವಲೋಕೇ ದ್ವಾತ್ರಿಂಶದತ ಊರ್ಧ್ವಂ ನಿಶಾಮಯ ॥ ೧೦೪ ॥
ಛಾಯಾವಿಹೀನ ನಿಷ್ಪತ್ತಿರಿಂದ್ರಿಯಾಣಾಮದರ್ಶನಂ ॥ ೧೦೫ ॥
ಆಕಾಶಗಮನಂ ನಿತ್ಯಮಿಂದ್ರಿಯಾದಿಶಮಃ ಸ್ವಯಂ ।
ದೂರೇ ಚ ಶಬ್ದಗ್ರಹಣಂ ಸರ್ವಶಬ್ದಾವಗಾಹನಂ ॥ ೧೦೬ ॥
ತನ್ಮಾತ್ರಲಿಂಗಗ್ರಹಣಂ ಸರ್ವಪ್ರಾಣಿನಿದರ್ಶನಂ ।
ಅಷ್ಟೌ ವಾತಾತ್ಮಿಕಾಶ್ಚೈಂದ್ರೇ ದ್ವಾತ್ರಿಂಶದಪಿ ಪೂರ್ವಕಾಃ ॥ ೧೦೭ ॥
ಯಥಾಕಾಮೋಪಲಬ್ಧಿಶ್ಚ ಯಥಾಕಾಮವಿನಿರ್ಗಮಃ ।
ಸರ್ವತ್ರಾಭಿಭವಶ್ಚೈವ ಸರ್ವಗುಹ್ಯನಿದರ್ಶನಂ ॥ ೧೦೮ ॥
ಸಂಸಾರದರ್ಶನಂ ಚಾಪಿ ಮಾನಸ್ಯೋಽಷ್ಟೌ ಚ ಸಿದ್ಧಯಃ ।
ಚತ್ವಾರಿಂಶಚ್ಚ ಪೂರ್ವಾಶ್ಚ ಸೋಮಲೋಕೇ ಸ್ಮೃತಾಸ್ತ್ವಿಮಾಃ ॥೧೦೯॥

---

ಕೈಗಳಿಂದಲೇ ಗಾಳಿಯನ್ನು ತಡೆದು ನಿಲ್ಲಿಸುವುದು, ಕಿರುಬೆರಳಿನ ಏಟಿನಿಂದಲೇ ಸಕಲ ಭೂಮಂಡಲವನ್ನೂ ನಡುಗಿಸುವುದು, ವಾಯುತತ್ತ್ವದಿಂದಲೇ ದೇಹವನ್ನುಂಟುಮಾಡಿಕೊಳ್ಳುವುದು — ಈ ಎಂಟು ಸಿದ್ಧಿಗಳೂ ಗಂಧರ್ವಲೋಕದಲ್ಲಿ ಲಭಿಸುವುವು. ಹಿಂದೆ ನಿರೂಪಿಸಿದ ಇಪ್ಪತ್ತುನಾಲ್ಕು ಗುಣಗಳು ಈ ಎಂಟರೊಡನೆ ಸೇರಿ ಗಂಧರ್ವಲೋಕದಲ್ಲಿರುವುವು.

೧೦೫–೧೦೭. ಶರೀರಕ್ಕೆ ನೆರಳಿಲ್ಲದಿರುವುದು, ಇಂದ್ರಿಯಗಳಿಗೆ ಅಗೋಚರನಾಗುವುದು, ಆಕಾಶದಲ್ಲಿ ಸಂಚಾರ, ಯಾವಾಗಲೂ ಅನಾಯಾಸವಾಗಿಯೇ ಇಂದ್ರಿಯಗಳನ್ನು ನಿಗ್ರಹಿಸುವ ಶಕ್ತಿ, ದೂರದಿಂದಲೇ ಶಬ್ದವನ್ನು ತಿಳಿಯುವುದು, ಸಕಲ ಶಬ್ದಗಳನ್ನೂ ಅವುಗಳ ಅರ್ಥಗಳನ್ನೂ ತಿಳಿಯುವುದು, ಪಂಚತನ್ಮಾತ್ರೆಗಳ ಸೂಕ್ಷ್ಮಗ್ರಹಣ, ಸಕಲ ಪ್ರಾಣಿಗಳನ್ನು ನೋಡುವುದು, — ಈ ಎಂಟೂ ಹಿಂದೆ ಹೇಳಿದ ಮುವ್ವತ್ತೆರಡು ಗುಣಗಳೂ ವಾಯ್ವಾತ್ಮಕಗಳಾಗಿ ಇಂದ್ರ ಲೋಕದಲ್ಲಿರುವುವು.

೧೦೮–೧೦೯. ಮನಸ್ಸಿನ ಇಷ್ಟಾರ್ಥಗಳನ್ನೆಲ್ಲ ಪಡೆಯುವುದು, ಸ್ವೇಚ್ಛೆಯಾಗಿ ವಿನಿರ್ಗಮಿಸುವುದು, ಎಲ್ಲೆಲ್ಲಿಯೂ ವ್ಯಾಪಿಸಿರುವುದು, ಸಕಲ ರಹಸ್ಯಗಳನ್ನೂ ತಿಳಿಯುವುದು, ಸಂಸಾರದ ಯಥಾರ್ಥವನ್ನು ತಿಳಿಯುವುದು — ಈ ಎಂಟೂ ಮಾನಸ ಸಿದ್ಧಿಗಳೆನಿಸುವುವು. ಇವುಗಳೊಡನೆ ಹಿಂದಿನ ನಲವತ್ತು ಸಿದ್ಧಿಗಳೂ ಸೇರಿ ಸೋಮಲೋಕದಲ್ಲಿರುವುವೆಂದು ಹೇಳುವರು.

**ಛೇದನಂ ಪಾವನಂ ಬಂಧಃ ಸಂಸಾರಪರಿವರ್ತನಂ ।**
**ಸರ್ವಭೂತಪ್ರಸಾದತ್ವಂ ಮೃತ್ಯುಕಾಲಜಯಸ್ತಥಾ ॥ ೧೧೦ ॥**
**ಅಹಂಕಾರೋದ್ಭವಶ್ಚಾಷ್ಟೌ ಪ್ರಾಜಾಪತ್ಯೇ ಚ ಪೂರ್ವಿಕಾಃ ।**
**ಆಕಾರೇಣ ಜಗತ್ಸೃಷ್ಟಿಸ್ತಥಾನುಗ್ರಹ ಏವ ಚ ॥ ೧೧೧ ॥**
**ಪ್ರಲಯಸ್ಯಾಧಿಕಾರಂ ಚ ಲೋಕಚಿತ್ರಪ್ರವರ್ತನಂ ।**
**ಅಸಾದೃಶ್ಯಮಿದಂ ವ್ಯಕ್ತಂ ನಿರ್ವಾಣಂ ಚ ಪೃಥಕ್ಪೃಥಕ್ ॥ ೧೧೨ ॥**
**ಶುಭೇತರಸ್ಯ ಕರ್ತೃತ್ವಮಷ್ಟೌ ಬುದ್ಧಿಭವಾಸ್ತ್ವಿಮೇ ।**
**ಷಟ್ಪಂಚಾಶತ್ತಥಾ ಪೂರ್ವಾಶ್ಚತುಃಷಷ್ಟಿರಿಮೇ ಗುಣಾಃ ॥ ೧೧೩ ॥**
**ಬ್ರಾಹ್ಮ್ಯೇ ಪದೇ ಪ್ರವರ್ತಂತೇ ಗುಹ್ಯಮೇತತ್ತವೇರಿತಂ ।**
**ಜೀವತೋ ದೇಹಭೇದೇ ವಾ ಸಿದ್ಧ್ಯಶ್ಚ್ಯೈತಾಸ್ತು ಯೋಗಿನಾಂ ॥ ೧೧೪ ॥**
**ಸಂಗೋ ನೈವ ವಿಧಾತವ್ಯೋ ಭಯಾತ್ಪತನಸಂಭವಾತ್ ।**
**ಏತಾನ್ಗುಣಾನ್ನಿರಾಕೃತ್ಯ ಯುಂಜತೋ ಯೋಗಿನಸ್ತದಾ ॥ ೧೧೫ ॥**
**ಸಿದ್ಧಯೋಽಷ್ಟೌ ಪ್ರವರ್ತಂತೇ ಯೋಗಸಂಸಿದ್ಧಿಕಾರಕಾಃ ।**
**ಅಣಿಮಾ ಲಘಿಮಾ ಚೈವ ಮಹಿಮಾ ಪ್ರಾಪ್ತಿರೇವ ಚ ॥ ೧೧೬ ॥**

---

೧೧೦–೧೧೧. ಛೇದನ, ತಾಪ, ಬಂಧನ, ಸಂಸಾರಭ್ರಮಣೆ, ಸಕಲ ಭೂತಗಳ ಪ್ರಸನ್ನತೆ, ಮೃತ್ಯುಜಯ, ಕಾಲಜಯ ಮತ್ತು ಅಭಿಮಾನ— ಈ ಎಂಟೂ ಅಹಂಕಾರಸಂಭೂತಗಳಾಗಿ ಹಿಂದಿನ ನಲವತ್ತೆಂಟು ಸಿದ್ಧಿಗಳೊಡನೆ ಪ್ರಜಾಪತಿ ಲೋಕದಲ್ಲಿ ಲಭಿಸುವುವು.

೧೧೩–೧೧೩. ಸ್ವೇಚ್ಛೆಯಿಂದಲೆ ಜಗತ್ತನ್ನುಂಟುಮಾಡುವುದು, ಅದನ್ನು ನಿರ್ವಹಿಸುವುದು, ಅದನ್ನು ಲಯಗೊಳಿಸುವ ಅಧಿಕಾರವು, ಲೋಕದ ವಿಚಿತ್ರ ವ್ಯಾಪಾರಗಳಲ್ಲಿ ಪ್ರವರ್ತಿಸುವುದು, ಅಸದೃಶವಾದ ಕಾರ್ಯಗಳನ್ನು ತೋರಿಸುವುದು, ಬೇರೆಬೇರೆಯಾದ ಮೋಕ್ಷಗಳನ್ನು ಪಡೆಯುವುದು, ಶುಭ ಮತ್ತು ಅಶುಭ ಕರ್ಮಗಳನ್ನು ಮಾಡುವುದು— ಎಂಟೂ ಬುದ್ಧಿಭವಗಳೆನಿಸುವುವು.

೧೧೪–೧೧೫. ಹಿಂದಿನ ಐವತ್ತಾರು ಗುಣಗಳೊಡನೆ ಸೇರಿ ಒಟ್ಟು ಅರುವತ್ತುನಾಲ್ಕು ಗುಣಗಳು ಬ್ರಹ್ಮಲೋಕದಲ್ಲಿ 'ನೆಲಸಿರುವುವೆಂಬ ಸೂಕ್ಷ್ಮವನ್ನು ನಿನಗೆ ತಿಳಿಸಿರುವೆನು. ಆದರೆ ಇವುಗಳಲ್ಲಿ ಮನುಷ್ಯನು ಪತಿತನಾಗುವ ಭಯವಿರುವುದರಿಂದ ಯೋಗಿಯಾದವನು ಜೀವಿಸಿರುವಾಗಲೂ, ದೇಹಪಾತಾನಂತರವೂ ಈ ಸಿದ್ಧಿಗಳಲ್ಲಿ ಸಂಗವನ್ನು ಮಾಡಬಾರದು.

೧೧೬–೧೧೭. ಈ ಅರವತ್ತುನಾಲ್ಕು ಗುಣಗಳನ್ನೂ ದೂರಗೊಳಿಸಿ ಮನಸ್ಸನ್ನು ಪರಮಾತ್ಮನಲ್ಲಿ ನಿಯೋಜಿಸುವ ಯೋಗಿಯಾದವನಿಗೆ ಯೋಗಸಿದ್ಧಿಯನ್ನುಂಟು ಮಾಡಿಕೊಡುವ ಮುಂದಿನ ಎಂಟು ಮಹಾಸಿದ್ಧಿಗಳು ಪ್ರಾಪ್ತ

ಪ್ರಾಕಾಮ್ಯಂ ಚ ತಥೇಶಿತ್ವಂ ವಶಿತ್ವಂ ಚ ತಥಾ ಪರೇ ॥ ೧೧೭ ॥
ಯತ್ರ ಕಾಮಾವಸಾಯಿತ್ವಂ ಮಹೇಶ್ವರಪದಸ್ಥಿತಾಃ ।
ಸೂಕ್ಷ್ಮಾತ್ಸೂಕ್ಷ್ಮತ್ವಮಣಿಮಾ ಶೀಘ್ರತ್ವಾಲ್ಲಘಿಮಾ ಸ್ಮೃತಾ ॥ ೧೧೮ ॥
ಮಹಿಮಾ ಶೇಷಪೂಜ್ಯತ್ವಾತ್ಪ್ರಾಪ್ತಿರ್ನಾಪ್ರಾಪ್ಯಮಸ್ಯ ಯತ್ ।
ಪ್ರಾಕಾಮ್ಯಮಸ್ಯ ವ್ಯಾಪಿತ್ವಾದೀಶಿತ್ವಂ ಚೇಶ್ವರೋ ಯತಃ ॥ ೧೧೯ ॥
ವಶಿತ್ವಾದ್ವಶಿತಾ ನಾಮ ಸಪ್ತಮೀ ಸಿದ್ಧಿರುತ್ತಮಾ ।
ಯತ್ರೇಚ್ಛಾ ತತ್ರ ಚ ಸ್ಥಾನಂ ತತ್ರ ಕಾಮಾವಸಾಯಿತಾ ॥ ೧೨೦ ॥
ಐಶ್ವರಂ ಪದಮಾಪ್ತಸ್ಯ ಭವಂತ್ಯೇತಾಶ್ಚ ಸಿದ್ಧಯಃ ।
ತತೋ ನ ಜಾಯತೇ ನೈವ ವರ್ಧತೇ ನ ವಿನಶ್ಯತಿ ॥ ೧೨೧ ॥
ಏಷ ಮುಕ್ತ ಇತಿ ಪ್ರೋಕ್ತೋ ಯ ಏವಂ ಮುಕ್ತಿಮಾಪ್ನುಯಾತ್ ।
ಯಥಾ ಜಲಂ ಜಲೇನೈಕ್ಯಂ ನಿಕ್ಷಿಪ್ತಮುಪಗಚ್ಛತಿ ।
ತಥೈವಂ ಸಾತ್ಮ್ಯಮಭ್ಯೇತಿ ಯೋಗಿನಾಮಾತ್ಮಾ ಪರಾತ್ಮನಾ ॥ ೧೨೨ ॥

---

ಗಳಾಗುವುವು. ಅಣಿಮಾ, ಲಘಿಮಾ, ಮಹಿಮಾ, ಪ್ರಾಪ್ತಿ, ಪ್ರಾಕಾಮ್ಯ, ಈಶಿತ್ವ, ವಶಿತ್ವ ಮುಂತಾದ ಅನೇಕ ಸಿದ್ಧಿಗಳು ಯೋಗಿಗೆ ಲಭಿಸುವುವು.

೧೧೮. ಆ ಅವಸ್ಥೆಯಲ್ಲಿ ಸಕಲ ಇಷ್ಟಾರ್ಥಗಳೂ ನೆರವೇರುವುವು. ಯೋಗಿಗಳು ಮಹೇಶ್ವರನ ಪದವಿಯನ್ನು ಹೊಂದುವರು. ಸೂಕ್ಷ್ಮಗಳಾದ ಪರಮಾಣುಗಳಿಗಿಂತ ಸೂಕ್ಷ್ಮವಾಗುವ ಶಕ್ತಿಗೆ ಅಣಿಮಾ ಎಂದೂ, ವೇಗವಾಗಿ ಚಲಿಸುವುದಕ್ಕೆ ಲಘಿಮಾ ಎಂದು ಹೆಸರು.

೧೧೯. ಇತರರಿಂದ ಪೂಜೆಗೊಳ್ಳುವುದೇ ಮಹಿಮೆಯು. ಹೊಂದಲಾರದ ವಸ್ತುಗಳಿಲ್ಲದಿರುವುದೇ ಪ್ರಾಪ್ತಿಯೆನಿಸುವುದು. ಸರ್ವತ್ರವ್ಯಾಪಕನಾಗಿರುವುದೇ ಪ್ರಾಕಾಮ್ಯವು. ಸೃಷ್ಟಿಗೆ ಒಡೆಯನಾಗಿರುವುದೇ ಈಶಿತ್ವವು.

೧೨೦. ಸಕಲ ಭೂತಗಳನ್ನೂ ವಶದಲ್ಲಿರಿಸಿಕೊಳ್ಳುವುದೇ ವಶಿತ್ವವು. ಇದೇ ಏಳನೆಯದಾದ ಅತ್ಯುತ್ತಮ ಸಿದ್ಧಿಯು. ಈ ಅಷ್ಟೈಶ್ವರ್ಯಗಳಿಂದ ಕೂಡಿದ ಯೋಗಿಯು ಇಚ್ಛೆಗೆ ಬಂದ ಸ್ಥಳದಲ್ಲಿ ನಿಲ್ಲಬಹುದು. ಅಲ್ಲಿಯೇ ಸಕಲ ಕಾಮಗಳನ್ನೂ ಪಡೆಯಬಹುದು.

೧೨೧. ಈಶ್ವರ ಪದವಿಯನ್ನು ಪಡೆದ ಯೋಗಿಗೆ ಈ ಸಿದ್ಧಿಗಳೆಲ್ಲವೂ ಕರಗತಗಳಾಗಿರುವುವು. ಅಂತಹವನಿಗೆ ಜನ್ಮವಾಗಲಿ, ವಾರ್ಧಕ್ಯವಾಗಲಿ, ವಿನಾಶವಾಗಲಿ ಉಂಟಾಗಲಾರವು.

೧೨೨–೧೨೩. ಯಾವನು ಈ ರೀತಿಯಾದ ಮೋಕ್ಷವನ್ನು ಪಡೆದಿರುವನೊ, ಅವನನ್ನೇ ಮುಕ್ತನೆಂದು ಹೇಳುವರು. ನೀರಿನಲ್ಲಿ ಸುರಿದ ನೀರು ಅದರೊಡನೆ ಐಕ್ಯಭಾವವನ್ನು ಹೊಂದುವಂತೆ ಯೋಗಿಯಾದವನ ಆತ್ಮವು ಪರಮಾತ್ಮನಲ್ಲಿ

ಏವಂ ಜ್ಞಾತ್ವಾ ಫಲಂ ಯೋಗೀ ಸದಾ ಯೋಗಂ ಸಮಭ್ಯಸೇತ್ ॥೧೨೩॥
ಅತ್ರೋಪಮಾಂ ವ್ಯಾಹರಂತಿ ಯೋಗಾರ್ಥೇ ಯೋಗಿನೋಽಮಲಾಃ ।
ಶಶಾಂಕರಶ್ಮಿಸಂಯೋಗಾದರ್ಕಕಾಂತೋ ಹುತಾಶನಂ ।
ಸಮುತ್ಸೃಜತಿ ನೈಕಃ ಸನ್ನುಪಮಾ ನಾಸ್ತಿ ಯೋಗಿನಃ ॥ ೧೨೪ ॥
ಕಪಿಂಜಲಾಖುನಕುಲಾ ವಸಂತಿ ಸ್ವಾಮಿವದ್ಗೃಹೇ
ಧ್ವಸ್ತೇ ಯಾಂತ್ಯನ್ಯತೋ ದುಃಖಂ ನ ತೇಷಾಂ ಸೋಪಮಾಯತೇ ॥
ಮೃದ್ದೇಹಕಲ್ಪದೇಹೋಽಪಿ ಮುಖಾಗ್ರೇಣ ಕನೀಯಸಾ ।
ಕರೋತಿ ಮೃದ್ಭಾಗಚಯಮುಪದೇಶಃ ಸ ಯೋಗಿನಃ ॥ ೧೨೬ ॥
ಪಶುಪಕ್ಷಿಮನುಷ್ಯಾದ್ಯೈಃ ಪತ್ರಪುಷ್ಪಫಲಾನ್ವಿತಂ ।
ವೃಕ್ಷಂ ವಿಲುಪ್ಯಮಾನಂ ಚ ಲಬ್ಧ್ವಾ ಸಿಧ್ಯಂತಿ ಯೋಗಿನಃ ॥ ೧೨೭ ॥
ರುರುಗಾತ್ರವಿಷಾಣಾಗ್ರಮಾಲಕ್ಷ್ಯ ತಿಲಕಾಕೃತಿಂ ।
ಸಹ ತೇನ ವಿವರ್ಧೇತ ಯೋಗೀ ಸಿದ್ಧಿಮುಪಾಶ್ನುತೇ ॥ ೧೨೮ ॥
ದ್ರವ್ಯಂ ಪೂರ್ಣಮುಪಾದಾಯ ಪಾತ್ರಮಾರೋಹತೇ ಭುವಃ ।
ತುಂಗಮಾರ್ಗಂ ವಿಲೋಕ್ಯೈವಂ ವಿಜ್ಞಾತಂ ಕಿಂ ನ ಯೋಗಿನಾಂ ॥೧೨೯॥

---

ಐಕ್ಯಭಾವವನ್ನು ಹೊಂದುವುದು. ಇದನ್ನು ತಿಳಿದು ಯೋಗಿಯು ಸರ್ವಕಾಲದಲ್ಲಿಯೂ ಯೋಗವನ್ನೇ ಅಭ್ಯಾಸ ಮಾಡುತ್ತಿರಬೇಕು.

೧೨೪-೧೨೯. ಈ ಯೋಗದ ವಿಷಯವಾಗಿ ಪರಿಶುದ್ಧರಾದ ಯೋಗಿಗಳು ಒಂದು ಉಪಮಾನವನ್ನು ಹೇಳುವರು. ಚಂದ್ರನ ಕಿರಣಗಳ ಸಂಪರ್ಕದಿಂದ ಸೂರ್ಯಕಾಂತ ಶಿಲೆಯು ಅಗ್ನಿಯನ್ನೇ ಹೊರಗೆಡಹುವುದು. ಯೋಗಿಯ ಸ್ಥಿತಿಗೆ ಇದೊಂದೇ ಉಪಮಾನವಲ್ಲ. ಪಕ್ಷಿಗಳು, ಇಲಿಗಳು, ಹಲ್ಲಿಗಳು ಕೂಡ ಯಜಮಾನನಂತೆಯೇ ಮನೆಯಲ್ಲಿ ವಾಸಮಾಡುವುವು. ಆದರೆ ಮನೆಯು ನಾಶವಾದೊಡನೆ ಮತ್ತೊಂದು ಸ್ಥಳಕ್ಕೆ ಹೋಗುವುವು. ಅವುಗಳಿಗೆ ಗೃಹನಾಶದ ದುಃಖವು ಲೇಶವೂ ಇರುವುದಿಲ್ಲ. ಇದೂ ಯತಿಗೆ ಉಪಮಾನವು. ಗೆದ್ದಲು ಹುಳುವೂ ಸಹ ತನ್ನ ಬಾಯಿಯಲ್ಲಿ ಸಣ್ಣದಾದ ಭೂರೇಣುಗಳನ್ನು ಹೊರುವುದಾದರೂ ಕಾಲಕ್ರಮದಲ್ಲಿ ಮಹಾಪ್ರಮಾಣದ ಹುತ್ತಗಳನ್ನು ನಿರ್ಮಿಸುವುದು. ಇದೂ ಯೋಗಿಗೆ ಒಂದು ಉಪದೇಶವು. ಎಲೆ, ಹೂ, ಹಣ್ಣುಗಳಿಂದ ತುಂಬಿದ ವೃಕ್ಷವು, ಪಶು, ಪಕ್ಷಿ ಮನುಷ್ಯರಿಂದ ಮುರಿದು ಬೀಳುವುದನ್ನು ನೋಡಿ ಯೋಗಿಗಳು ಸಿದ್ಧಿಯನ್ನು ಹೊಂದುವರು. ಜಿಂಕೆಯ ದೇಹದಿಂದ ತಿಲಕಾಕೃತಿಯಾಗಿ ಹೊರಡುವ ಕೊಂಬಿನ ಕೊನೆಯನ್ನು ಕಂಡು ಅದರಂತೆಯೇ ಯಾದೃಚ್ಛಿಕವಾಗಿ ದೇಹವನ್ನು ವೃದ್ಧಿಗೊಳಿಸುವ ಯತಿಯು ಸಿದ್ಧಿಯನ್ನು ಹೊಂದುವನು. ಇಷ್ಟೆಯಲ್ಲದೆ ಯೋಗಿಯು ಅತುಲವಾದ ಐಶ್ವರ್ಯವನ್ನು ಹೊಂದಿ ಭೂಲೋಕ

ತದ್ಗೇಹಂ ಯತ್ರ ವಸತಿ ತದ್ಭೋಜ್ಯಂ ಯೇನ ಜೀವತಿ ।
ಯೇನ ನಿಷ್ಪಾದ್ಯತೇ ಚಾರ್ಥಃ ಸ್ವಯಂ ಸ್ಯಾದ್ಯೋಗಸಿದ್ಧಯೇ ॥ ೧೩೦ ॥
ತಥಾ ಜ್ಞಾನಮುಪಾಸೀತ ಯೋಗೀ ಯತ್ಕಾರ್ಯಸಾಧಕಂ ।
ಜ್ಞಾನಾನಾಂ ಬಹುತಾ ಯೇಯಂ ಯೋಗವಿಘ್ನಕರೀ ಹಿ ಸಾ ॥ ೧೩೧ ॥
ಇದಂ ಜ್ಞೇಯಮಿದಂ ಜ್ಞೇಯಮಿತಿ ಯಸ್ತೃಷಿತಶ್ಚರೇತ್ ।
ಅಪಿ ಕಲ್ಪಸಹಸ್ರಾಯುರ್ನೈವ ಜ್ಞೇಯಮವಾಪ್ನುಯಾತ್ ॥ ೧೩೨ ॥
ತ್ಯಕ್ತಸಂಗೋ ಜಿತಕ್ರೋಧೋ ಲಬ್ಧಾಹಾರೋ ಜಿತೇಂದ್ರಿಯಃ ।
ಪಿಧಾಯ ಬುದ್ಧ್ಯಾ ದ್ವಾರಾಣಿ ಮನೋ ಧ್ಯಾನೇ ನಿವೇಶಯೇತ್ ॥ ೧೩೩ ॥
ಆಹಾರಂ ಸಾತ್ತ್ವಿಕಂ ಸೇವೇನ್ನ ತಂ ಯೇನ ವಿಚೇತನಃ ।
ಸ್ಯಾದಯಂ ತಂ ಚ ಭುಂಜಾನೋ ರೌರವಸ್ಯ ಪ್ರಿಯಾತಿಥಿಃ ॥ ೧೩೪ ॥
ವಾಗ್ದಂಡಃ ಕರ್ಮದಂಡಶ್ಚ ಮನೋದಂಡಶ್ಚ ತೇ ತ್ರಯಃ ।
ಯಸ್ಯೈತೇ ನಿಯತಾ ದಂಡಾಃ ಸ ತ್ರಿದಂಡೀ ಯತಿಃ ಸ್ಮೃತಃ ॥ ೧೩೫ ॥

---

ದಲ್ಲಿ ಗಣ್ಯಸ್ಥಾನವನ್ನು ಪಡೆಯುವನು. ಇಂತು ಉತ್ತಮ ಮಾರ್ಗವನ್ನು ಕಂಡ ಯೋಗಿಗೆ ಯಾವುದು ತಾನೆ ಗೋಚರವಾಗುವುದಿಲ್ಲ ?

೧೩೦–೧೩೧. ಯೋಗಸಿದ್ಧಿಗಾಗಿ ಮನುಷ್ಯನು ಎಲ್ಲಿವಾಸಿಸಿದರೆ ಅದೇ ಮನೆಯು. ಯಾವುದರಿಂದ ಜೀವಿಸುವನೋ ಅದೇ ಭೋಜನವು. ಯಾವುದರಿಂದ ವ್ಯವಹಾರವನ್ನು ನಡೆಸುವನೊ. ಅದೇ ಧನವು. ಅಲ್ಲದೆ ಯೋಗಿಯಾದವನು ತನ್ನ ಕಾರ್ಯಸಾಧನೆಗೆ ಅನುಕೂಲವಾದ ಜ್ಞಾನವನ್ನು ಮಾತ್ರ ಸಂಪಾದಿಸಬೇಕು. ಅನೇಕ ವಿಷಯಗಳನ್ನು ತಿಳಿಯಬೇಕೆಂಬ ಇಚ್ಛೆಯು ನಿಜವಾಗಿಯೂ ಯೋಗಕ್ಕೆ ವಿಘ್ನಕಾರಿಯೇ ಸರಿ.

೧೩೨–೧೩೪. ಯಾವನು ಅಪರಿಮಿತಾಭಿಲಾಷೆಯಿಂದ 'ಇದನ್ನು ತಿಳಿಯಬೇಕು; ಅದನ್ನು ತಿಳಿಯಬೇಕು' ಎಂಬುದಾಗಿ ಪ್ರಯತ್ನಪಡುವನೊ, ಅವನು ಸಹಸ್ರ ಕಲ್ಪಗಳ ಆಯುಸ್ಸನ್ನು ಹೊಂದಿದರೂ ತನ್ನ ಧ್ಯೇಯವನ್ನು ಸಾಧಿಸಲಾರನು. ಯೋಗಿಯಾಗಲೆಳಸುವನು ಸರ್ವಸಂಗ ಪರಿತ್ಯಾಗವನ್ನು ಮಾಡಿ, ಕ್ರೋಧವನ್ನು ಜಯಿಸಿ, ಯದೃಚ್ಛಾಲಬ್ಧವಾದ ಆಹಾರದಿಂದ ದೇಹಧಾರಣೆಯನ್ನು ಮಾಡುತ್ತ, ಜಿತೇಂದ್ರಿಯನಾಗಿ ತನ್ನ ಬುದ್ಧಿಯಿಂದ ನವದ್ವಾರಗಳನ್ನು ಮುಚ್ಚಿ (ದೇಹದಿಂದ ಹಿಂದಿರುಗಿಸಿ) ಮನಸ್ಸನ್ನು ಧ್ಯಾನದಲ್ಲಿ ಸ್ಥಿರಗೊಳಿಸಬೇಕು. ಸಾತ್ವಿಕವಾದ ಆಹಾರವನ್ನು ಮಾತ್ರ ಸೇವಿಸಬೇಕೇ ಹೊರತು ಮನುಷ್ಯನ ಚೇತನವನ್ನು ನಾಶಗೊಳಿಸುವ ರಾಜಸತಾಮಸಾಹಾರಗಳನ್ನು ಸೇವಿಸಬಾರದು. ಅಂತಹ ಆಹಾರವನ್ನು ಭೋಜನಮಾಡಿದವನು ರೌರವ ನರಕಕ್ಕೆ ಪ್ರಿಯನಾದ ಅತಿಥಿಯಾಗುವನೆಂದು ತಿಳಿಯಬೇಕು.

೧೩೫–೧೩೬. ವಾಗ್ದಂಡ, ಕರ್ಮದಂಡ ಮತ್ತು ಮನೋದಂಡಗಳೆಂಬ

ಅನುರಾಗಂ ಜನೋ ಯಾತಿ ಪರೋಕ್ಷೇ ಗುಣಕೀರ್ತನಂ ॥ ೧೩೬ ॥
ನ ಬಿಭ್ಯತಿ ಚ ಸತ್ತ್ವಾನಿ ಸಿದ್ಧೇರ್ಲಕ್ಷಣಮುಚ್ಯತೇ ॥ ೧೩೭ ॥

ಅಲೌಲ್ಯಮಾರೋಗ್ಯಮನಿಷ್ಠುರತ್ವಂ
ಗಂಧಃ ಶುಭೋ ಮೂತ್ರಪುರೀಷಯೋಶ್ಚ ।
ಕಾಂತಿಃ ಪ್ರಸಾದಃ ಸ್ವರಸೌಮ್ಯತಾ ಚ
ಯೋಗಪ್ರವೃತ್ತೇಃ ಪ್ರಥಮಂ ಹಿ ಚಿಹ್ನ ॥ ೧೩೮ ॥
ಸಮಾಹಿತೋ ಬ್ರಹ್ಮಪರೋಽಪ್ರಮಾದೀ
ಶುಚಿಸ್ತಥೈಕಾಂತರತಿರ್ಜಿತೇಂದ್ರಿಯಃ ।
ಸಮಾಪ್ನುಯಾದ್ಯೋಗಮಿಮಂ ಮಹಾಮನಾ
ವಿಮುಕ್ತಿಮಾಪ್ನೋತಿ ತತಶ್ಚ ಯೋಗತಃ ॥ ೧೩೯ ॥
ಕುಲಂ ಪವಿತ್ರಂ ಜನನೀ ಕೃತಾರ್ಥಾ
ವಸುಂಧರಾ ಭಾಗ್ಯವತೀ ಚ ತೇನ ।
ಅಬಾಹ್ಯಮಾರ್ಗೇ ಸುಖಸಿಂಧುಮಗ್ನಂ
ಲಗ್ನಂ ಪರೇ ಬ್ರಹ್ಮಣಿ ಯಸ್ಯ ಚೇತಃ ॥ ೧೪೦ ॥

---

ಮೂರನ್ನೂ ಯತಿಯುಳ್ಳವನಾಗಬೇಕು. ಯಾವನಿಗೆ ಈ ಮೂರು ದಂಡಗಳೂ ಸ್ವಾಭಾವಿಕಗಳಾಗಿರುವುವೊ, ಅವನು ತ್ರಿದಂಡಿಯಾದ ಯತಿಯೆಂದು ಹೇಳಲ್ಪಟ್ಟಿರುವನು. ಜನರು ನಿಷ್ಕಾರಣವಾಗಿಯೇ ಪ್ರೀತಿಸುವುದು, ಪರೋಕ್ಷದಲ್ಲಿಯೂ ಗುಣಗಳನ್ನು ಹೊಗಳುವುದು ಮತ್ತು ಸಮೀಪದಲ್ಲಿ ಮೃಗಪಕ್ಷಿಗಳು ಸ್ವೇಚ್ಛೆಯಾಗಿ ಭಯವಿಲ್ಲದೆ ಸಂಚರಿಸುವುದು— ಇವುಗಳೇ ಯೋಗಸಿದ್ಧಿಯ ಲಕ್ಷಣಗಳು.

೧೩೮. ನಿಶ್ಚಂಚಲತೆ, ದೇಹಾರೋಗ್ಯ, ಮೃದುಭಾಷಣ, ಮಲಮೂತ್ರಗಳಲ್ಲಿ ಸುಗಂಧ, ದೇಹದಲ್ಲಿ ಕಾಂತಿ, ಪ್ರಸನ್ನತೆ, ಮಧ್ಯಮಸ್ವರದಲ್ಲಿ ಮಾತನಾಡೋಣ— ಇವುಗಳು ಯೋಗಾಭ್ಯಾಸವನ್ನು ಮಾಡುವುದರ ಪ್ರಥಮಚಿಹ್ನೆಗಳು.

೧೩೯–೧೪೦. ಸಮಾಹಿತಮನಸ್ಸುಳ್ಳವನೂ, ಬ್ರಹ್ಮಚಾರಿಯೂ, ಜಾಗರೂಕನೂ, ಬಾಹ್ಯಾಭ್ಯಂತರ ಶುಚಿಯೂ, ಏಕಾಂತಪ್ರಿಯನೂ, ಜಿತೇಂದ್ರಿಯನೂ, ಆದ ವಿಶಾಲಹೃದಯನು ಈ ಯೋಗವನ್ನು ಪಡೆಯುವನಲ್ಲದೆ ಈ ಯೋಗದ ಸಹಾಯದಿಂದಲೇ ಮೋಕ್ಷವನ್ನೂ ಪಡೆಯುವನು. ಯಾವನು ಅಂತರಂಗದ ಆತ್ಮಾನಂದದಲ್ಲಿ ಮುಳುಗಿರುವನೊ, ಯಾವನ ಚಿತ್ತವು ಪರಬ್ರಹ್ಮವಸ್ತುವಿನಲ್ಲಿ ಲೀನವಾಗಿರುವುದೊ, ಅವನ ಕುಲವು ಪವಿತ್ರವು. ಅವನ ತಾಯಿಯು ಕೃತಕಾರ್ಯಳು. ಅಂತಹ ಯೋಗಿಯಿಂದ ಭೂದೇವಿಯೂ ಪುನೀತಳಾಗುವಳು.

ವಿಶುದ್ಧಬುದ್ಧಿಃ ಸಮಲೋಷ್ಟಕಾಂಚನಃ
ಸಮಸ್ತಭೂತೇಷು ವಸನ್ಸಮೋ ಹಿ ಯಃ ।
ಸ್ಥಾನಂ ಪರಂ ಶಾಶ್ವತಮವ್ಯಯಂ ಚ
ಯತಿರ್ಹಿ ಗತ್ವಾ ನ ಪುನಃ ಪ್ರಜಾಯತೇ ॥ ೧೪೧ ॥
ಇದಂ ಮಯಾ ಯೋಗರಹಸ್ಯಮುಕ್ತ
ಮೇವಂವಿಧಂ ಗೌತಮಃ ಪ್ರಾಪ ಯೋಗಂ ।
ತೇನೈತಚ್ಚ ಸ್ಥಾಪಿತಂ ಪಾರ್ಥ ಲಿಂಗಂ
ಸಂದರ್ಶನಾದರ್ಚನಾತ್ಕಲ್ಮಷಘ್ನಂ ॥ ೧೪೨ ॥
ಯಶ್ಚಾಶ್ವಿನೇ ಕೃಷ್ಣಚತುರ್ದಶೀದಿನೇ
ರಾತ್ರೌ ಸಮಭ್ಯರ್ಚತಿ ಲಿಂಗಮೇತತ್ ।
ಸ್ನಾತ್ವಾ ಅಹಲ್ಯಾಸರಸಿಪ್ರಧಾನೇ
ಶ್ರದ್ಧಾಯ ಸರ್ವಂ ಪ್ರವಿಧಾಯ ಭಕ್ತಿತಃ ॥ ೧೪೩ ॥
ಮಹೋಪಕಾರೇಣ ವಿಮುಕ್ತಪಾಪಃ
ಸ ಯಾತಿ ಯತ್ರಾಸ್ತಿ ಸ ಗೌತಮೋ ಮುನಿಃ ॥ ೧೪೪ ॥

---

೧೪೧. ನಿಷ್ಕಲ್ಮಷವಾದ ಬುದ್ಧಿಯುಳ್ಳವನಾಗಿ, ಲೋಷ್ಟಕಾಂಚನಗಳಲ್ಲಿ ಸಮದೃಷ್ಟಿಯುಳ್ಳ ಯಾವನು ತನ್ನ ಕರ್ಮಾನುಗುಣವಾಗಿ ಸಕಲ ಪ್ರಾಣಿಜನ್ಮಗಳಲ್ಲಿಯೂ ವಾಸಮಾಡಿಯೂ ಸಹ ಸಮಭಾವದಿಂದಿರುವನೊ, ಆ ಯೋಗಿಯು ಪರಾತ್ಪರವೂ, ಶಾಶ್ವತವೂ, ವಿಕಾರರಹಿತವೂ ಆದ ಮೋಕ್ಷಸ್ಥಾನವನ್ನು ಹೊಂದಿ ಮತ್ತೆ ಸಂಸಾರದಲ್ಲಿ ಹುಟ್ಟುವುದಿಲ್ಲ.

೧೪೨. ಎಲೈ ಅರ್ಜುನನೆ! ಇಂತು ಯೋಗರಹಸ್ಯವು ನನ್ನಿಂದ ಹೇಳಲ್ಪಟ್ಟಿರುವುದು. ಈ ವಿಧವಾದ ಯೋಗವನ್ನೇ ಗೌತಮ ಮಹಾಮುನಿಯು ಹೊಂದಿದನು. ಆತನಿಂದಲೇ ಈ ಲಿಂಗವು ಸ್ಥಾಪಿಸಲ್ಪಟ್ಟಿರುವುದು. ದರ್ಶನದಿಂದಲೂ ಪೂಜೆಯಿಂದಲೂ ಈ ಲಿಂಗವು ಭಕ್ತರ ಸಮಸ್ತ ಪಾಪಗಳನ್ನೂ ದೂರ ಮಾಡುವುದು.

೧೪೩-೧೪೪. ಯಾವ ಮಾನವನು ಆಶ್ವಯುಜ ಮಾಸದ ಕೃಷ್ಣಪಕ್ಷದ ಚತುರ್ದಶಿಯ ರಾತ್ರಿಯಲ್ಲಿ ಪವಿತ್ರವಾದ ಅಹಲ್ಯಾಸರಸ್ಸಿನಲ್ಲಿ ಮಿಂದು ಶ್ರದ್ಧಾಭಕ್ತಿಗಳಿಂದ ಸಕಲ ಸಂಭಾರಗಳೊಡನೆ ಈ ಲಿಂಗವನ್ನು ಪೂಜಿಸುವನೊ, ಅವನು ಆ ಮಹತ್ಕಾರ್ಯದ ಫಲವಾಗಿ ಸಕಲ ಪಾಪಗಳಿಂದಲೂ ಮುಕ್ತನಾಗಿ ಗೌತಮ ಮುನಿಯು ವಾಸಮಾಡುತ್ತಿರುವ ಪುಣ್ಯಲೋಕವನ್ನು ಸೇರುವನು.

ಇದಂ ಮಯಾ ಪಾರ್ಥ ತವ ಪ್ರಣೀತಂ ।
ಗುಪ್ತಸ್ಯ ಕ್ಷೇತ್ರಸ್ಯ ಸಮಾಸಯೋಗಾತ್ ।
ಮಹಾತ್ಮ್ಯಮೇತತ್ಸಕಲಂ ಶ್ರೃಣೋತಿ ಯಃ
ಸ ಸ್ಯಾದ್ವಿಶುದ್ಧಃ ಕಿಮು ವಚ್ಮಿ ಭೂಯಃ ॥ ೧೪೫ ॥
ಯ ಇದಂ ಶೃಣುಯಾದ್ಭಕ್ತ್ಯಾ ಗೌತಮಾಖ್ಯಾನಮುತ್ತಮಂ ।
ಪುತ್ರಪೌತ್ರಪ್ರಿಯಂ ಪ್ರಾಪ್ಯ ಸ ಯಾತಿ ಪದಮವ್ಯಯಂ ॥ ೧೪೬ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪ್ರಥಮೇ ಮಾಹೇಶ್ವರಖಂಡೇ ಕೌಮಾರಿಕಾಖಂಡೇ
"ಗೌತಮೇಶ್ವರ ಮಹಾತ್ಮ್ಯಸವಿಸ್ತರಯೋಗಲಕ್ಷಣವರ್ಣನಂ" ನಾಮ
ಪಂಚಪಂಚಾಶತ್ತಮೋಽಧ್ಯಾಯಃ

---

೧೪೫. ಎಲೈ ಪಾರ್ಥನೆ! ಇಂತು ಸಮಾಸಯೋಗದಿಂದ ಈ ಗುಪ್ತ ಕ್ಷೇತ್ರದ ಸಕಲ ಮಾಹಾತ್ಮ್ಯವೂ ನಿನಗಾಗಿ ವಿಸ್ತರಿಸಲ್ಪಟ್ಟಿತು. ಯಾವನು ಈ ಲಿಂಗದ ಮಾಹಾತ್ಮ್ಯವನ್ನು ಆಮೂಲಾಗ್ರವಾಗಿ ಕೇಳುವನೊ, ಅವನು ಪರಿಶುದ್ಧನಾಗುವನು. ಈಗ ನಿನಗೆ ಮತ್ತೇನನ್ನು ನಿರೂಪಿಸಲಿ?

೧೪೬. ಯಾವನು ಭಕ್ತಿಯುಕ್ತನಾಗಿ ಉತ್ತಮೋತ್ತಮವಾದ ಈ ಗೌತಮ ಚರಿತ್ರೆಯನ್ನು ಕೇಳುವನೊ, ಅವನು ಪುತ್ರ ಪೌತ್ರಾದಿ ಸಕಲ ಐಹಿಕ ಸಂಪತ್ತುಗಳನ್ನೂ ಪಡೆದು ದೇಹಾವಸನವಾದಮೇಲೆ ಶಾಶ್ವತವಾದ ಪದವಿಯನ್ನು ಹೊಂದುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಎರಡನೆಯ ಕೌಮಾರಿಕಾಖಂಡದಲ್ಲಿ
"ಗೌತಮೇಶ್ವರ ಮಾಹಾತ್ಮ್ಯ – ಸವಿಸ್ತರಯೋಗಲಕ್ಷಣವರ್ಣನ"ವೆಂಬ
ಐವತ್ತೈದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಷಟ್ಪಂಚಾಶತ್ತಮೋಽಧ್ಯಾಯಃ

### ಬ್ರಹ್ಮೇಶ್ವರ ಮೋಕ್ಷೇಶ್ವರ ಗರ್ಭೇಶ್ವರ ಮಾಹಾತ್ಮ್ಯವರ್ಣನಂ

ನಾರದ ಉವಾಚ :—

**ಅತಃ ಪರಂ ಪ್ರವಕ್ಷ್ಯಾಮಿ ಬ್ರಹ್ಮೇಶಂ ಲಿಂಗಮುತ್ತಮಂ ।**
**ಯಸ್ಯ ಸ್ಮರಣಮಾತ್ರೇಣ ವಾಜಪೇಯಫಲಂ ಭವೇತ್ ॥ ೧ ॥**
**ಏಕದಾ ತು ಪುರಾ ಪಾರ್ಥ ಸೃಷ್ಟಿಕಾಮೇನ ಬ್ರಹ್ಮಣಾ ।**
**ತಪಃ ಸುಚರಿತಂ ಘೋರಂ ಸಾರ್ಧವರ್ಷಸಹಸ್ರಕಂ ॥ ೨ ॥**
**ತಪಸಾ ತೇನ ಸಂತುಷ್ಟಃ ಪಾರ್ವತೀಪತಿಶಂಕರಃ ।**
**ವರಮಸ್ಮೈ ತತಃ ಪ್ರಾದಾಲ್ಲೋಕಕರ್ತ್ರೇ ಸ್ವವಾಂಛಿತಂ ॥ ೩ ॥**
**ತತೋ ಹೃಷ್ಟಃ ಪ್ರಮುದಿತಃ ಕೃತಕೃತ್ಯಃ ಪಿತಾಮಹಃ ।**
**ಜ್ಞಾತ್ವಾ ಕ್ಷೇತ್ರಸ್ಯ ಮಾಹಾತ್ಮ್ಯಂ ಸ್ವಯಂ ಲಿಂಗಂ ಚಕಾರ ಹ ॥ ೪ ॥**
**ಚಖಾನ ಚ ಸರಃ ಪುಣ್ಯಂ ನಾಮ್ನಾ ಬ್ರಹ್ಮಸರಃ ಶುಭಂ ।**
**ಮಹೀನಗರಕಾತ್ಪೂರ್ವೇ ಮಹಾಪಾತಕನಾಶನಂ ॥ ೫ ॥**

---

### ಕನ್ನಡದ ಅನುವಾದ

#### ಬ್ರಹ್ಮೇಶ್ವರ, ಮೋಕ್ಷೇಶ್ವರ, ಗರ್ಭೇಶ್ವರ ಮಾಹಾತ್ಮ್ಯವರ್ಣನ

೧. ನಾರದನು ಹೇಳುತ್ತಾನೆ:— ಅರ್ಜುನಾ! ಇನ್ನು ಬ್ರಹ್ಮೇಶಲಿಂಗದ ಉತ್ತಮ ಮಹಿಮೆಯನ್ನು ಹೇಳುವೆನು. ಆ ಲಿಂಗವನ್ನು ಸ್ಮರಿಸಿದ ಮಾತ್ರದಿಂದಲೇ ವಾಜಪೇಯ ಮಹಾಯಜ್ಞದ ಫಲವು ಲಭಿಸುವುದು.

೨. ಎಲೈ ಪಾರ್ಥನೆ! ಮುನ್ನು ಜಗತ್ತನ್ನು ಸೃಷ್ಟಿಮಾಡಲೆಳಸಿದ ಬ್ರಹ್ಮನು ಒಂದಸಾವಿರದ ಐನೂರು ವರ್ಷಗಳಕಾಲ ಮಹಾಘೋರವಾದ ತಪಸ್ಸನ್ನು ಆಚರಿಸಿದನು.

೩. ಆ ತಪಸ್ಸಿನಿಂದ ಸಂತುಷ್ಟನಾಗಿ ಪಾರ್ವತೀರಮಣನಾದ ಮಹೇಶ್ವರನು ಲೋಕಪಿತಾಮಹನಾದ ಬ್ರಹ್ಮನಿಗೆ ಅಭೀಪ್ಸಿತ ವರವನ್ನು ಕೊಟ್ಟನು.

೪. ಆಗ ಪಿತಾಮಹನು ಸಂತೋಷದಿಂದಲೂ ಕೃತಕೃತ್ಯನಾದ ಆನಂದದಿಂದಲೂ ತಾನು ತಪಸ್ಸುಮಾಡಿದ ಕ್ಷೇತ್ರದ ಮಾಹಾತ್ಮ್ಯೆಯನ್ನು ತಿಳಿದು ಅಲ್ಲಿಯೇ ಒಂದು ಲಿಂಗವನ್ನು ಸ್ಥಾಪಿಸಿದನು.

೫. ಮತ್ತು ಮಹೀನಗರದ ಪೂರ್ವಕ್ಕೆ ಮಹಾಪಾತಕನಾಶಕವೂ ಪುಣ್ಯಪ್ರದವೂ ಆದ ಬ್ರಹ್ಮಸರವೆಂದು ಹೆಸರುಳ್ಳ ಉತ್ತಮವಾದ ಸರೋವರವೊಂದನ್ನುಂಟುಮಾಡಿದನು.

ಅಸ್ಯ ತೀರೇ ಮಹಾಲಿಂಗಂ ಸ್ಥಾಪಯಾಮಾಸ ವೈ ವಿಭುಃ ।
ತತ್ರ ದೇವಃ ಸ್ವಯಂ ಸಾಕ್ಷಾದ್ವಿದ್ಯತೇ ಕಿಲ ಶಂಕರಃ ॥ ೬ ॥
ಪುಷ್ಕರಾದಧಿಕಂ ತೀರ್ಥಂ ಬ್ರಹ್ಮೇಶಂ ನಾಮ ಫಾಲ್ಗುನ ।
ತತ್ರ ಸ್ನಾತ್ವಾ ನರೋ ಭಕ್ತ್ಯಾ ಪಿಂಡದಾನಂ ಸಮಾಚರೇತ್ ॥ ೭ ॥
ದಾನಂ ಚೈವ ಯಥಾಶಕ್ತ್ಯಾ ಕಾರ್ತಿಕ್ಯಾಂ ಚ ವಿಶೇಷತಃ ।
ದೇವಂ ಪ್ರಪೂಜಯೇದ್ಭಕ್ತ್ಯಾ ಬ್ರಹ್ಮೇಶಂ ಹೃಷ್ಟಮಾನಸಃ ॥ ೮ ॥
ಪಿತರಸ್ತಸ್ಯ ತುಷ್ಯಂತಿ ಯಾವದಾಭೂತಸಂಪ್ಲವಂ ।
ಪುಷ್ಕರೇಷು ಚ ಯತ್ಪುಣ್ಯಂ ಕುರುಕ್ಷೇತ್ರೇ ರವಿಗ್ರಹೇ ॥ ೯ ॥
ಗಂಗಾದಿಪುಣ್ಯತೀರ್ಥೇಷು ಯತ್ಫಲಂ ಪ್ರಾಪ್ಯತೇ ನರೈಃ ।
ತತ್ಫಲಂ ಸಮವಾಪ್ನೋತಿ ತೀರ್ಥಸ್ಯಾಸ್ಯಾವಗಾಹನಾತ್ ॥ ೧೦ ॥
ಮೋಕ್ಷಲಿಂಗಸ್ಯ ಮಾಹಾತ್ಮ್ಯಂ ಶೃಣು ಪಾರ್ಥ ಮಹಾದ್ಭುತಂ ।
ಮಯಾ ಸ್ಥಾನಹಿತಾರ್ಥಂ ಚ ಸಮಾರಾಧ್ಯ ಮಹೇಶ್ವರಂ ॥ ೧೧ ॥

---

೬. ಆ ಸರೋವರದ ದಡದಲ್ಲಿಯೇ ಬ್ರಹ್ಮದೇವನು ಮಹಾಲಿಂಗವನ್ನು ನೆಲೆಗೊಳಿಸಿದನು. ಅಲ್ಲಿ ಯಾವಾಗಲೂ ಮಹೇಶ್ವರನು ತಾನೇ ಸಾಕ್ಷಾತ್ತಾಗಿ ನೆಲಸಿರುವನು.

೭. ಎಲೈ ಅರ್ಜುನನೆ! ಬ್ರಹ್ಮಸರವು ಪುಷ್ಕರ ಕ್ಷೇತ್ರಕ್ಕಿಂತಲೂ ಅಧಿಕವಾದುದು. ಅಲ್ಲಿ ಭಕ್ತಿಯಿಂದ ಸ್ನಾನಮಾಡಿ ಮನುಷ್ಯನು ಪಿಂಡದಾನಾದಿಗಳನ್ನು ಮಾಡಬೇಕು.

೮. ವಿಶೇಷವಾಗಿ ಕಾರ್ತಿಕ ಪೌರ್ಣಮಿಯ ದಿನದಲ್ಲಿ ಯಥಾಶಕ್ತಿ ದಾನವನ್ನೂ ಕೊಡಬೇಕು. ಸಂತೋಷಗೊಂಡ ಮನಸ್ಸಿನಿಂದ ಬ್ರಹ್ಮೇಶ್ವರ ಲಿಂಗವನ್ನು ಪೂಜೆ ಮಾಡಬೇಕು.

೯–೧೦. ಇದರಿಂದ ಅವನ ಪಿತೃಗಳು ಮಹಾಪ್ರಳಯದವರೆಗೂ ತೃಪ್ತಿಯನ್ನು ಹೊಂದುವರು. ಪುಷ್ಕರ ಕ್ಷೇತ್ರದಲ್ಲಿ ಯಾವ ಪುಣ್ಯವು ಲಭಿಸುವುದೊ, ಸೂರ್ಯಗ್ರಹಣಕಾಲದಲ್ಲಿ ಕುರುಕ್ಷೇತ್ರದಲ್ಲಿ ಯಾವ ಪುಣ್ಯವುಂಟಾಗುವುದೊ, ಗಂಗಾದಿ ಪುಣ್ಯತೀರ್ಥಗಳಲ್ಲಿ ಮಾನವರು ಯಾವ ಉತ್ತಮ ಫಲಗಳನ್ನು ಪಡೆಯುವರೊ, ಅವುಗಳೆಲ್ಲವನ್ನೂ ಈ ತೀರ್ಥದಲ್ಲಿ ಸ್ನಾನಮಾಡುವುದರಿಂದ ಮನುಷ್ಯನು ಪಡೆಯುವನು.

೧೧–೧೨. ಎಲೈ ಪಾರ್ಥನೆ! ಮಹಾಶ್ಚರ್ಯಭರಿತವಾದ ಮೋಕ್ಷಲಿಂಗದ ಮಾಹಾತ್ಮ್ಯೆಯನ್ನು ಕೇಳು. ಈ ಲಿಂಗವು ಕ್ಷೇತ್ರದ ಹಿತದೃಷ್ಟಿಯಿಂದ ನನ್ನಿಂದ ಸ್ಥಾಪಿತವಾಯಿತು. ಮಹೇಶ್ವರನನ್ನು ಪೂಜಿಸಿ ಆತನ ಅನುಗ್ರಹದ

ಸ್ಥಾಪಿತಂ ಪ್ರವರಂ ಲಿಂಗಂ ನಾಮ್ನಾ ಮೋಕ್ಷೇಶ್ವರಂ ಹರಂ ।
ದರ್ಭಾಗ್ರೇಣ ತತಃ ಪಾರ್ಥ ಕೂಪಂ ಖಾನಿತವಾನಹಂ ॥ ೧೨ ॥
ಪ್ರಸಾದ್ಯ ಲೋಕಕರ್ತಾರಂ ಬ್ರಹ್ಮಾಣಂ ಪರಮೇಷ್ಠಿನಂ ।
ಕಮಂಡಲೋಃ ಬ್ರಹ್ಮಣಶ್ಚ ಸಮಾನೀತಾ ಸರಸ್ವತೀ ॥ ೧೩ ॥
ಕೂಪೇಽಸ್ಮಿನ್ಮೋಕ್ಷನಾಥಸ್ಯ ಲೋಕಾನಾಂ ಪ್ರೇತಮುಕ್ತಯೇ ।
ಕಾರ್ತಿಕಸ್ಯ ತು ಮಾಸಸ್ಯ ಶುಕ್ಲಪಕ್ಷೇ ಚತುರ್ದಶೀ ॥ ೧೪ ॥
ಕೂಪೇ ಸ್ನಾತ್ವಾ ನರಸ್ತಸ್ಯಾಂ ತಿಲಪಿಂಡಂ ಸಮಾಚರೇತ್ ।
ಪ್ರೇತಾನುದ್ದಿಶ್ಯ ನಿಯತಂ ಮೋಕ್ಷತೀರ್ಥಫಲಂ ಭವೇತ್ ॥ ೧೫ ॥
ಕುಲೇ ನ ಜಾಯತೇ ತಸ್ಯ ಪ್ರೇತಃ ಪಾರ್ಥ ನ ಸಂಶಯಃ ।
ಪ್ರೇತಾ ಮೋಕ್ಷಂ ಪ್ರಗಚ್ಛಂತಿ ತೀರ್ಥಸ್ಯಾಸ್ಯ ಪ್ರಭಾವತಃ ॥ ೧೬ ॥
ಜಯಾದಿತ್ಯಕೂಪವರೇ ನರಃ ಸ್ನಾತ್ವಾ ಪ್ರಯತ್ನತಃ ।
ಗರ್ಭೇಶ್ವರಂ ನಮಸ್ಕೃತ್ಯ ನ ಸ ಗರ್ಭೇಷು ಮಜ್ಜತಿ ॥ ೧೭ ॥

---

ಬಲದಿಂದಲೇ ಅತ್ಯುತ್ತಮವಾದ ಈ ಮೋಕ್ಷೇಶ್ವರವೆಂಬ ಹೆಸರುಳ್ಳ ಲಿಂಗವು ಸ್ಥಾಪಿಸಲ್ಪಟ್ಟಿತು. ಬಳಿಕ ನಾನು ದರ್ಭೆಯ ಕೊನೆಯಿಂದ ಪವಿತ್ರವಾದ ಬಾವಿಯೊಂದನ್ನು ತೋಡಿದೆನು.

೧೩. ಪರಮೇಷ್ಠಿಯೂ, ಲೋಕಪಿತಾಮಹನೂ ಆದ ಬ್ರಹ್ಮನನ್ನು ಪ್ರಸನ್ನೀಕರಿಸಿಕೊಂಡು ಆತನ ಕಮಂಡಲುವಿನಿಂದ ಸರಸ್ವತಿಯನ್ನು ಇಲ್ಲಿಗೆ ಕರೆದು ತಂದೆನು.

೧೪. ಲೋಕನಿವಾಸಿಗಳ ಪ್ರೇತವಿಮುಕ್ತಿಗಾಗಿ ಮೋಕ್ಷನಾಥೇಶ್ವರನ ಈ ಕೂಪದಲ್ಲಿ ಕಾರ್ತಿಕಮಾಸದ ಕೃಷ್ಣ ಚತುರ್ದಶಿಯ ದಿವಸವು ಶ್ಲಾಘ್ಯವಾಗಿರುವುದು.

೧೫. ಮನುಷ್ಯನು ಈ ಕೂಪದಲ್ಲಿ ಸ್ನಾನಮಾಡಿ ಬಳಿಕ ಪ್ರೇತಗಳನ್ನು ಉದ್ದೇಶಿಸಿ ಅಲ್ಲಿ ತಿಲಪಿಂಡಗಳನ್ನು ಅರ್ಪಿಸಲು ಮೋಕ್ಷತೀರ್ಥದ ಫಲವು ಲಭಿಸುವುದು.

೧೬. ಎಲೈ ಪಾರ್ಥನೆ! ಅವನ ಕುಲದಲ್ಲಿ ಪ್ರೇತವು ಎಂದಿಗೂ ಜನಿಸುವುದಿಲ್ಲ. ಈ ವಿಷಯವು ನಿಸ್ಸಂದೇಹವು. ಈ ತೀರ್ಥದ ಪ್ರಭಾವದಿಂದ ಸಕಲ ಪ್ರೇತಗಳೂ ಮೋಕ್ಷವನ್ನು ಪಡೆಯುವುವು.

೧೭. ಮನುಷ್ಯನು ಜಯಾದಿತ್ಯಕೂಪದಲ್ಲಿ ಸ್ನಾನಮಾಡಿ ಪ್ರಯತ್ನಪೂರ್ವಕವಾಗಿ ಗರ್ಭೇಶ್ವರನನ್ನು ನಮಸ್ಕರಿಸಲು ಮತ್ತೆ ಜನನಿಯ ಗರ್ಭದಲ್ಲಿ ವಾಸಮಾಡುವುದಿಲ್ಲ.

ಇದಂ ಮಯಾ ಪಾರ್ಥ ತವ ಪ್ರಣೀತಂ
ಗುಪ್ತಸ್ಯ ಕ್ಷೇತ್ರಸ್ಯ ಸಮಾಸಯೋಗಾತ್ ।
ಮಾಹಾತ್ಮ್ಯಮೇತತ್ಸಕಲಂ ಶೃಣೋತಿ
ಯಃಸ್ಯಾದ್ವಿಶುದ್ಧಃ ಕಿಮು ವಚ್ಮಿ ಭೂಯಃ ॥ ೧೮ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪ್ರಥಮೇ ಮಾಹೇಶ್ವರಖಂಡೇ ಕೌಮಾರಿಕಾಖಂಡೇ
"ಬ್ರಹ್ಮೇಶ್ವರ ಮೋಕ್ಷೇಶ್ವರ ಗರ್ಭೇಶ್ವರ ಮಾಹಾತ್ಮ್ಯವರ್ಣನಂ"ನಾಮ
ಷಟ್ಪಂಚಾಶತ್ತಮೋಽಧ್ಯಾಯಃ

---

೧೮. ಎಲೈ ಪಾರ್ಥನೆ! ಇಂತು ನಿನಗೆ ಈ ಗುಪ್ತಕ್ಷೇತ್ರದ ಮಾಹಾತ್ಮ್ಯೆಯೆಲ್ಲವನ್ನೂ ಸಮಾಸಯೋಗದಿಂದ ಹೇಳಿರುವೆನು. ಇದನ್ನು ಕೇಳಿದವನು ವಿಶುದ್ಧನಾಗುವನು. ಇನ್ನು ನಿನಗೆ ಮತ್ತೇನನ್ನು ತಿಳಿಸಲಿ?

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಎರಡನೆಯ ಕೌಮಾರಿಕಾಖಂಡದಲ್ಲಿ
"ಬ್ರಹ್ಮೇಶ್ವರ, ಮೋಕ್ಷೇಶ್ವರ, ಗರ್ಭೇಶ್ವರ ಮಾಹಾತ್ಮ್ಯವರ್ಣನ"ವೆಂಬ
ಐವತ್ತಾರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಸಪ್ತಪಂಚಾಶತ್ತಮೋಽಧ್ಯಾಯಃ

## ನೀಲಕಂಠ ಮಾಹಾತ್ಮ್ಯವರ್ಣನಂ

ನಾರದ ಉವಾಚ :—

ತತೋ ವಿಪ್ರಾ ನಾರದಶ್ಚ ಸಮಾರಾಧ್ಯ ಮಹೇಶ್ವರಂ ।
ಮಹೀನಗರಕೇ ಪುಣ್ಯೇ ಸ್ಥಾಪಯಾಮಾಸ ಶಂಕರಂ ॥ ೧ ॥
ಲೋಕಾನಾಂ ಚ ಹಿತಾರ್ಥಾಯ ಕೇದಾರಂ ಲಿಂಗಮುತ್ತಮಂ ।
ಅತ್ರೀಶಾದುತ್ತರೇ ಭಾಗೇ ಮಹಾಪಾತಕನಾಶನಂ ॥ ೨ ॥
ಅತ್ರಿಕುಂಡೇ ನರಃ ಸ್ನಾತ್ವಾ ಶ್ರಾದ್ಧಂ ಕೃತ್ವಾ ಯಥಾವಿಧಿ ।
ಅತ್ರೀಶಂ ಚ ನಮಸ್ಕೃತ್ಯ ಕೇದಾರಂ ಯಃ ಪ್ರಪಶ್ಯತಿ ॥ ೩ ॥
ಮಾತುಃ ಸ್ತನ್ಯಂ ಪುನರ್ನೈವ ಸ ಪಿಬೇನ್ಮುಕ್ತಿಭಾಗ್ಭವೇತ್ ।
ತತೋ ರುದ್ರೋ ನೀಲಕಂಠಂ ನಾರದಾಯ ಮಹಾತ್ಮನೇ ॥ ೪ ॥
ಸ್ವಯಂ ದತ್ವಾ ಸ್ವಯಂ ತಸ್ಥೌ ಮಹೀನಗರಕೇ ಶುಭೇ ।
ಕೋಟಿತೀರ್ಥೇ ನರಃ ಸ್ನಾತ್ವಾ ನೀಲಕಂಠಂ ಪ್ರಪಶ್ಯತಿ ॥ ೫ ॥

---

## ಕನ್ನಡದ ಅನುವಾದ

### ನೀಲಕಂಠ ಮಾಹಾತ್ಮ್ಯವರ್ಣನ

೧. ನಾರದನು ಹೇಳುತ್ತಾನೆ:— ಎಲೈ ಬ್ರಾಹ್ಮಣೋತ್ತಮರೆ! ಬಳಿಕ ನಾರದನಾದ ನಾನು ಮಹೇಶ್ವರನನ್ನು ಆರಾಧಿಸಿ ಪವಿತ್ರವಾದ ಮಹೀನಗರದಲ್ಲಿ ಶಂಕರನನ್ನು ಸ್ಥಾಪಿಸಿದೆನು.

೨. ಈ ಲಿಂಗವು ತ್ರಿಲೋಕಗಳ ಹಿತಸಾಧಕವಾಗಿ ಕೇದಾರಲಿಂಗವೆಂದು ಹೆಸರುಳ್ಳದ್ದಾಗಿ ಅತ್ರೀಶ್ವರನ ಉತ್ತರದಲ್ಲಿ ನೆಲಸಿ ಮಹಾಪಾತಕಗಳನ್ನೂ ಹೋಗಲಾಡಿಸುವ ಉತ್ತಮ ಮಹಿಮೆಯುಳ್ಳದ್ದಾಗಿರುವುದು.

೩–೭. ಅತ್ರಿಕುಂಡದಲ್ಲಿ ಯಾವ ಮನುಷ್ಯನು ಮಿಂದು ಯಥಾವಿಧಿಯಾಗಿ ಪಿತೃಶ್ರಾದ್ಧಗಳನ್ನು ಮಾಡಿ ಅತ್ರೀಶ್ವರನಿಗೆ ನಮಸ್ಕರಿಸಿ ಬಳಿಕ ಕೇದಾರೇಶ್ವರನನ್ನು ದರ್ಶನ ಮಾಡುವನೊ, ಅವನು ಮತ್ತೆ ತಾಯಿಯ ಹಾಲನ್ನು ಕುಡಿಯುವುದಿಲ್ಲ. ಶಾಶ್ವತ ಮೋಕ್ಷವನ್ನು ಪಡೆಯುವನು. ಮಹಾರುದ್ರನು ತಾನೇ ನಾರದ ಮಹಾಮುನಿಗೆ ನೀಲಕಂಠೇಶ್ವರ ಲಿಂಗವನ್ನು ದಯಪಾಲಿಸಿ ಆರೂಪದಿಂದ ತಾನೇ ಮಹೀನಗರದಲ್ಲಿ ಸನ್ನಿಹಿತನಾಗಿರುವನು. ಯಾವ ಮನುಷ್ಯನು ಕೋಟಿ ತೀರ್ಥದಲ್ಲಿ ಸ್ನಾನಮಾಡಿ ಜಯಾದಿತ್ಯ ಲಿಂಗವನ್ನು ನಮಸ್ಕರಿಸಿ ಬಳಿಕ ನೀಲ ಕಂಠೇಶ್ವರನ ದರ್ಶನವನ್ನು ಮಾಡುವನೊ, ಅವನು ರುದ್ರಲೋಕವನ್ನು

ಜಯಾದಿತ್ಯಂ ನಮಸ್ಕೃತ್ಯ ರುದ್ರಲೋಕಮವಾಪ್ನುಯಾತ್ ।
ಜಯಾದಿತ್ಯಂ ಪೂಜಯಂತಿ ಕೂಪೇ ಸ್ನಾತ್ವಾ ನರೋತ್ತಮಾಃ ॥ ೬ ॥
ನ ತೇಷಾಂ ವಂಶನಾಶೋಽಸ್ತಿ ಜಯಾದಿತ್ಯಪ್ರಸಾದತಃ ॥ ೭ ॥
ಇದಂ ತೇ ಕಥಿತಂ ಪಾರ್ಥ ಮಹೀನಗರಕಸ್ಯ ಚ ।
ಆಖ್ಯಾನಂ ಸಕಲಂ ಶ್ರುತ್ವಾ ಸರ್ವಪಾಪೈಃ ಪ್ರಮುಚ್ಯತೇ ॥ ೮ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪ್ರಥಮೇ ಮಾಹೇಶ್ವರಖಂಡೇ ಕೌಮಾರಿಕಾಖಂಡೇ
"ನೀಲಕಂಠ ಮಾಹಾತ್ಮ್ಯವರ್ಣನಂ" ನಾಮ
ಸಪ್ತಪಂಚಾಶತ್ತಮೋಽಧ್ಯಾಯಃ

---

ಹೊಂದುವನು. ಯಾವ ಮನುಷ್ಯೋತ್ತಮರು ಕೂಪದಲ್ಲಿ ಸ್ನಾನಮಾಡಿ ಜಯಾದಿತ್ಯನನ್ನು ವಿಧ್ಯುಕ್ತ ರೀತಿಯಿಂದ ಪೂಜಿಸುವರೊ, ಅವರ ವಂಶವು ಭೂಮಿಯಲ್ಲಿ ಎಂದಿಗೂ ನಾಶವಾಗುವುದಿಲ್ಲ. ಇಂತು ಜಯಾದಿತ್ಯನ ಪ್ರಸಾದ ವಿರುವುದು.

೮. ಎಲೈ ಪಾರ್ಥನೆ! ಇಂತು ಮಹೀನಗರದ ಸಕಲ ಚರಿತ್ರೆಯನ್ನೂ ನಿನಗೆ ತಿಳಿಸಿರುವೆನು. ಇದನ್ನು ಕೇಳಿದ ಭಕ್ತನು ಸಕಲ ಪಾಪಗಳಿಂದಲೂ ಬಿಡುಗಡೆಯನ್ನು ಹೊಂದುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಎರಡನೆಯ ಕೌಮಾರಿಕಾಖಂಡದಲ್ಲಿ
"ನೀಲಕಂಠ ಮಾಹಾತ್ಮ್ಯವರ್ಣನ"ವೆಂಬ ಐವತ್ತೇಳನೆಯ
ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಅಷ್ಟಪಂಚಾಶತ್ತಮೋऽಧ್ಯಾಯಃ

**ಮಹೀಸಾಗರ ಮಾಹಾತ್ಮ್ಯವರ್ಣನೇ ಅರ್ಜುನ ತೀರ್ಥಯಾತ್ರಾ ಪರಿಸಮಾಪ್ತಿವರ್ಣನಂ**

**ಅರ್ಜುನ ಉವಾಚ:—**

**ಗುಪ್ತಕ್ಷೇತ್ರಮಿದಂ ಕಸ್ಮಾತ್ಕಸ್ಮಾದ್ಗುಪ್ತಂ ಚ ನಾರದ**
**ಯಸ್ಯ ಪ್ರಭಾವಃ ಸುಮಹಾನ್ನೈವ ಕಸ್ಯಾಪಿ ಸಂಸ್ತುತಃ ॥ ೧ ॥**

**ನಾರದ ಉವಾಚ:—**

**ಪುರಾತನಾಮತ್ರ ಕಥಾಂ ಗುಪ್ತಕ್ಷೇತ್ರಸ್ಯ ಕಾರಣೇ ।**
**ಶೃಣು ಪಾಂಡವ ಶಾಪೇನ ಗುಪ್ತಮಾಸೀದಿದಂ ಯಥಾ ॥ ೨ ॥**
**ಪುರಾ ನಿಮಿತ್ತೇ ಕಸ್ಮಿನ್ಶ್ಚಿತ್ಸರ್ವತೀರ್ಥಾಧಿದೈವತಾಃ ।**
**ಪ್ರಣಾಮಾಯ ಬ್ರಹ್ಮಸದೋ ಬ್ರಹ್ಮಾಣಂ ಸಹಿತಾ ಯಯುಃ ॥ ೩ ॥**
**ಪುಷ್ಕರಸ್ಯ ಪ್ರಭಾಸಸ್ಯ ನಿಮಿಷಸ್ಯಾರ್ಬುದಸ್ಯ ಚ ।**
**ಕುರುಕ್ಷೇತ್ರಸ್ಯ ಕ್ಷೇತ್ರಸ್ಯ ಧರ್ಮಾರಣ್ಯಸ್ಯ ದೇವತಾಃ ॥ ೪ ॥**
**ವಸ್ತ್ರಾಪಥಸ್ಯ ಶ್ವೇತಸ್ಯ ಫಲ್ಗುತೀರ್ಥಸ್ಯ ಚಾಪಿ ಯಾಃ ।**
**ಕೇದಾರಸ್ಯ ತಥಾನ್ಯೇಷಾಂ ಕ್ಷೇತ್ರಾಣಾಂ ಕೋಟಿಶೋऽಪಿ ಯಾಃ ॥ ೫ ॥**

---

## ಕನ್ನಡದ ಅನುವಾದ

**ಮಹೀಸಾಗರ ಮಾಹಾತ್ಮ್ಯವರ್ಣನ — ಅರ್ಜುನ ತೀರ್ಥಯಾತ್ರಾ ಪರಿಸಮಾಪ್ತಿವರ್ಣನ**

೧. ಅರ್ಜುನನು ಕೇಳುತ್ತಾನೆ:— ಎಲೈ ನಾರದನೆ! ಇದು ಗುಪ್ತಕ್ಷೇತ್ರವೆಂದೆನ್ನಿಸುವ ಕಾರಣವೇನು? ಮತ್ತು ಗುಪ್ತವಾದುದು ಹೇಗೆ? ಈ ಕ್ಷೇತ್ರಕ್ಕೆ ಇಷ್ಟು ಮಹತ್ತರವಾದ ಪ್ರಭಾವವುಂಟಾಗಿದ್ದರೂ ಯಾರಿಂದಲೂ ಹೊಗಳಲ್ಪಟ್ಟಿಲ್ಲವಲ್ಲ.

೨. ನಾರದನು ಹೇಳುತ್ತಾನೆ:— ಎಲೈ ಅರ್ಜುನನೆ! ಈ ವಿಷಯದಲ್ಲಿ ಈ ಪ್ರದೇಶವು ಗುಪ್ತಕ್ಷೇತ್ರವಾದ ಕಾರಣವನ್ನೂ ಮತ್ತು ಶಾಪದಿಂದ ಗುಪ್ತವಾದ ವಿಧಾನವನ್ನೂ ತಿಳಿಸುವೆನು, ಕೇಳು.

೩. ಪೂರ್ವದಲ್ಲಿ ಒಂದಾನೊಂದು ನಿಮಿತ್ತದಿಂದ ಸಕಲ ತೀರ್ಥಗಳ ಅಧಿದೇವತೆಗಳೂ ಬ್ರಹ್ಮದೇವನಿಗೆ ನಮಸ್ಕಾರಗಳನ್ನು ಮಾಡಲೆಳಸಿ ಒಟ್ಟುಗೂಡಿಕೊಂಡು ಸತ್ಯಲೋಕದಲ್ಲಿರುವ ಬ್ರಹ್ಮನ ಸಭೆಗೆ ಹೊರಟರು.

೪–೮. ಪುಷ್ಕರ, ಪ್ರಭಾಸ, ನೈಮಿಷ, ಅರ್ಬುದ, ಕುರುಕ್ಷೇತ್ರ, ಧರ್ಮಾರಣ್ಯ, ವಸ್ತ್ರಾಪಥ, ಶ್ವೇತಕ್ಷೇತ್ರ, ಫಲ್ಗುತೀರ್ಥ, ಕೇದಾರ ಇನ್ನೂ ಇತರ ಅನೇಕಕೋಟಿ ತೀರ್ಥಗಳ ಅಧಿದೇವತೆಗಳೂ, ಸಿಂಧುಸಾಗರ ಸಂಯೋಗ,

ಸಿಂಧುಸಾಗರಯೋಗಸ್ಯ ಮಹೀಸಾಗರಕಸ್ಯ ಚ ।
ಗಂಗಾಸಾಗರಯೋಗಸ್ಯ ಅಧಿಪಾಃ ಸೂಕರಸ್ಯ ಚ ॥ ೬ ॥
ಗಂಗಾರೇವಾಮುಖೀನಾಂ ತು ನದೀನಾಮಧಿದೇವತಾಃ ।
ಶೋಣಹ್ರದಪುರೋಗಾಣಾಂ ಹ್ರದಾನಾಂ ಚಾಧಿದೇವತಾಃ ॥ ೭ ॥
ತೇ ಸರ್ವೇ ಸಂಘಶೋ ಭೂತ್ವಾ ಶ್ರೈಷ್ಠ್ಯಜ್ಞಾನಾಯ ಚಾತ್ಮನಃ ।
ಸಮಾಜಗ್ಮುರಮಲಾಂ ಮಹತೀಂ ಬ್ರಹ್ಮಣಃ ಸಭಾಂ ॥ ೮ ॥
ತತ್ರ ತೀರ್ಥಾನಿ ಸರ್ವಾಣಿ ಸಮಾಯಾತಾನಿ ವೀಕ್ಷ್ಯ ಸಃ ।
ಉತ್ತಸ್ಥೌ ಸಹಿತಃ ಸರ್ವೈಃ ಸಭಾಸದ್ಭಿಃ ಪಿತಾಮಹಃ ॥ ೯ ॥
ಪ್ರಣಮ್ಯ ಸರ್ವತೀರ್ಥೇಭ್ಯಃ ಪ್ರಬದ್ಧಕರಸಂಪುಟಃ ।
ತೀರ್ಥಾನಿ ಭಗವಾನಾಹ ವಿಸ್ಮಯೋತ್ಫುಲ್ಲಲೋಚನಃ ॥ ೧೦ ॥
ಅದ್ಯ ನಃ ಸದ್ಮ ಸಕಲಂ ಯುಷ್ಮಾಭಿರತಿಪಾವಿತಂ ।
ವಯಂ ಚ ಪಾವಿತಾ ಭೂಯೋ ಯುಷ್ಮಾಕಂ ದರ್ಶನಾದಪಿ ॥ ೧೧ ॥
ತೀರ್ಥಾನಾಂ ದರ್ಶನಂ ಶ್ರೇಯಃ ಸ್ಪರ್ಶನಂ ಸ್ನಾನಮೇವ ಚ ।
ಕೀರ್ತನಂ ಸ್ಮರಣಂ ಚಾಪಿ ನ ಸ್ಯಾತ್ಪುಣ್ಯಂ ವಿನಾ ಪರಂ ॥ ೧೨ ॥

---

ಮಹೀಸಾಗರ ಕ್ಷೇತ್ರ, ಗಂಗಾಸಾಗರ, ವರಾಹ ಕ್ಷೇತ್ರ, ಗಂಗಾ, ರೇವಾ ಮುಂತಾದ ನದ್ಯಭಿಮಾನಿ ದೇವತೆಗಳೂ, ಶೋಣಹ್ರದವೇ ಮೊದಲಾದ ಸಕಲ ಸರೋವರಗಳ ಅಧಿದೇವತೆಗಳೂ, ಎಲ್ಲರೂ ಗುಂಪುಕಟ್ಟಿಕೊಂಡು ತಮ್ಮಲ್ಲಿ ಯಾರು ಶ್ರೇಷ್ಠರೆಂಬಂಶವನ್ನು ತಿಳಿಯಲು ವಿಶುದ್ಧಭಾವದಿಂದ ವಿಶಾಲವಾದ ಬ್ರಹ್ಮಸಭೆಯನ್ನು ಹೊಕ್ಕರು.

೯. ಇಂತು ಸಕಲ ತೀರ್ಥಗಳೂ ಒಮ್ಮೆಯೇ ಬಂದುದನ್ನು ಕಂಡು ಬ್ರಹ್ಮನು ಸಕಲ ಸಭಾಸದರಿಂದೊಡಗೂಡಿ ಅವರಿಗೆ ಪ್ರತ್ಯುತ್ಥಾನಮಾಡಿ ಗೌರವಿಸಿದನು.

೧೦. ಸೃಷ್ಟಿಕರ್ತೃವಾದ ಬ್ರಹ್ಮನು ಅವರಿಗೆಲ್ಲ ಕೈಗಳನ್ನು ಮುಗಿದು ಪ್ರಣಾಮಗಳನ್ನು ಮಾಡಿ ಆಶ್ಚರ್ಯದಿಂದ ಅರಳಿದ ಕಣ್ಣುಗಳುಳ್ಳವನಾಗಿ ಅವರನ್ನು ಕುರಿತು ಇಂತೆಂದನು.

೧೧. ನಿಮ್ಮಿಂದ ನಮ್ಮ ನಿವಾಸವೆಲ್ಲವೂ ಅತ್ಯಂತ ಪವಿತ್ರಮಾಡಲ್ಪಟ್ಟಿತು. ನಿಮ್ಮ ದರ್ಶನದಿಂದ ನಾವೆಲ್ಲರೂ ಇದೀಗ ಪುನೀತರಾದೆವು.

೧೨. ತೀರ್ಥಗಳ ದರ್ಶನ, ಸ್ಪರ್ಶನ, ಸ್ನಾನ, ಕೀರ್ತನ, ಸ್ಮರಣಗಳೇ ಮನುಷ್ಯನಿಗೆ ಶ್ರೇಯಸ್ಸನ್ನುಂಟುಮಾಡುವುವು. ಇವುಗಳಿಗಿಂತ ಉತ್ತಮ ಪುಣ್ಯವು ಮತ್ತೊಂದಿಲ್ಲ.

ಮಹಾಪಾಪಾನ್ವಿತಾ ರೌದ್ರಾಸ್ತ್ವಪಿ ಯೇ ಸ್ಯುಃ ಸುನಿಷ್ಠುರಾಃ ।
ತೇಽಪಿ ತೀರ್ಥೈಃ ಪ್ರಪೂಯಂತೇ ಕಿಂ ಪುನರ್ಧರ್ಮಸಂಸ್ಥಿತಾಃ ॥ ೧೩ ॥
ಏವಮುಕ್ತ್ವಾ ಪುಲಸ್ತ್ಯಂ ಸ ಪುತ್ರಮಭ್ಯಾದಿದೇಶ ಚ ।
ಶೀಘ್ರಮರ್ಘಂ ತೀರ್ಥಹೇತೋಃ ಸಮಾನಯ ಯಥಾರ್ಚಯೇ ॥ ೧೪ ॥
ಪುಲಸ್ತ್ಯ ಉವಾಚ :—
ಅಸಂಖ್ಯಾನೀಹ ತೀರ್ಥಾನಿ ದೃಶ್ಯಂತೇ ಪದ್ಮಸಂಭವ ।
ಯಥಾ ದಿಶಸಿ ಮಾಂ ತಾತ ಅರ್ಘಮೇಕಮುಪಾನಯೇ ॥ ೧೫ ॥
ಧರ್ಮಪ್ರವಚನೇ ಶ್ಲೋಕೋ ಯತ ಏಷ ಪ್ರಗೀಯತೇ ॥ ೧೬ ॥
ಭವೇಯುರ್ಯದ್ಯಸಂಖ್ಯಾತಾ ಅರ್ಘಯೋಗ್ಯಾಃ ಸಮಾರ್ಚನೇ ।
ತತಸ್ತೇಷಾಂ ವರಿಷ್ಠಾಯ ದಾತವ್ಯೋಽರ್ಘಃ ಕಿಲೈಕತಃ ॥ ೧೭ ॥
ಬ್ರಹ್ಮೋವಾಚ :—
ಸಾಭಿಪ್ರಾಯಂ ಸಾಧು ವತ್ಸ ತ್ವಯಾ ಪ್ರೋಕ್ತಮಿದಂ ವಚಃ ।
ಏವಂ ಕುರುಷ್ವೈಕಮರ್ಘಮಾನಯ ತ್ವಂ ಸುಶೀಘ್ರತಃ ॥ ೧೮ ॥

---

೧೩. ಮಹಾಪಾಪಗಳನ್ನು ಮಾಡಿದವರಾಗಲಿ, ಕ್ರೂರರಾಗಲಿ, ಅತ್ಯಂತ ನಿಷ್ಠುರರಾಗಲಿ, ಎಲ್ಲರೂ ಕೂಡ ತೀರ್ಥಸೇವನೆಯಿಂದ ಪುಣ್ಯವಂತರಾಗುವ ರೆಂದಮೇಲೆ ಧರ್ಮಾಚರಣೆಯನ್ನು ಮಾಡುವವರ ವಿಷಯವಾಗಿ ಹೇಳ ತಕ್ಕುದೇನು ?

೧೪. ಇಂತೆಂದು ಬ್ರಹ್ಮನು ತನ್ನ ಮಗನಾದ ಪುಲಸ್ತ್ಯನನ್ನು ಕುರಿತು "ಎಲೈ ಮಗನೆ! ಈ ಸಕಲ ತೀರ್ಥಗಳನ್ನೂ ಯಥೋಚಿತವಾಗಿ ಪೂಜಿಸಲು ಅರ್ಘವನ್ನು ತೆಗೆದುಕೊಂಡು ಬಾ" ಎಂದು ಅಪ್ಪಣೆ ಮಾಡಿದನು.

೧೫. ಪುಲಸ್ತ್ಯನು ಹೇಳುತ್ತಾನೆ:—"ಎಲೈ ಪದ್ಮಜನ್ಮನೆ! ಇಲ್ಲಿ ಅಸಂಖ್ಯಾತರಾದ ತೀರ್ಥಾಧಿದೇವತೆಗಳು ಕಾಣುತ್ತಿರುವರು. ತಂದೆಯೇ! ನೀನು ಅಪ್ಪಣೆ ಮಾಡಿದಂತೆ ಒಂದು ಅರ್ಘವನ್ನು ತರುವೆನು.

೧೬. ಏಕೆಂದರೆ ಧರ್ಮಶಾಸ್ತ್ರದಲ್ಲಿ ಈ ವಿಧವಾದ ನಿಯಮವು ಹೇಳಲ್ಪಟ್ಟಿರು ವುದಲ್ಲವೆ.

೧೭. ಪೂಜಾಕಾಲದಲ್ಲಿ ಅರ್ಘಯೋಗ್ಯರಾದ ಅನೇಕರು ಏಕಕಾಲದಲ್ಲಿ ಪ್ರಾಪ್ತರಾದರೆ ಅವರಲ್ಲಿ ಸರ್ವಜ್ಯೇಷ್ಠನಾದ ಒಬ್ಬನಿಗೆ ಮಾತ್ರ ಅರ್ಘವನ್ನು ಅರ್ಪಿಸಬೇಕು."

೧೮. ಬ್ರಹ್ಮನು ಹೇಳುತ್ತಾನೆ:—"ಎಲೈ ಪುತ್ರನೆ! ನೀನು ಹೇಳಿದ ಈ ಮಾತು ಬಹಳ ಅರ್ಥಗರ್ಭಿತವಾಗಿರುವುದು. ಆದುದರಿಂದ ಬಹು ಜಾಗ್ರತೆ ಯಾಗಿ ಒಂದೇ ಅರ್ಘವನ್ನು ತರುವವನಾಗು."

ನಾರದ ಉವಾಚ :—

ತತಃ ಪುಲಸ್ತ್ಯೋ ವೇಗೇನ ಸಮಾನಿನ್ಯೇಽರ್ಘಮುತ್ತಮಂ ।
ತಂ ಚ ಬ್ರಹ್ಮಾ ಕರೇ ಗೃಹ್ಯ ತೀರ್ಥಾನ್ಯಾಹೇತಿ ಭಾರತೀಂ ॥ ೧೯ ॥
ಸರ್ವೈರ್ಭವದ್ಭಿಃ ಸಂಹತ್ಯ ಮುಖ್ಯಸ್ತ್ವೇಕಃ ಪ್ರಕೀರ್ತ್ಯತಾಂ ।
ತಸ್ಮೈ ಚಾರ್ಘಂ ಪ್ರಯಚ್ಛಾಮಿ ನೈವಂ ಮಾಮನಯಃ ಸ್ಪೃಶೇತ್ ॥೨೦॥

ತೀರ್ಥಾನ್ಯೂಚುಃ :—

ನ ವಯಂ ಶ್ರೇಷ್ಠತಾಂ ವಿದ್ಮಃ ಕಥಂಚನ ಪರಸ್ಪರಂ ।
ಅಸ್ಮಾದ್ಧೇತೋಽತ್ರ ಸಂಪ್ರಾಪ್ತಾ ಜ್ಞಾತ್ವಾ ದೇಹಿ ತ್ವಮೇವ ತತ್ ॥೨೧॥

ಬ್ರಹ್ಮೋವಾಚ :—

ನಾಹಂ ವೇದ್ಮಿ ಶ್ರೇಷ್ಠತಾಂ ವಃ ಕಥಂಚನ ನಮೋಽಸ್ತು ವಃ ।
ಸರ್ವೇ ಚಾಪಾರಮಾಹಾತ್ಮ್ಯಂ ಸ್ವಯಂ ಮೇ ವಕ್ತುಮರ್ಹಥ ॥ ೨೨ ॥
ಯತ್ರ ಗಂಗಾ ಗಯಾ ಕಾಶೀ ಪುಷ್ಕರಂ ನಿಮಿಷಂ ತಥಾ ।
ಕುರುಕ್ಷೇತ್ರಂ ತಥಾ ರೇವಾ ಮಹೀಸಾಗರಸಂಗಮಃ ॥ ೨೩ ॥
ಪ್ರಭಾಸಾದ್ಯಾನಿ ಶತಶೋ ಯತ್ರ ನಸ್ತತ್ರ ಕಾ ಮತಿಃ ॥ ೨೪ ॥

---

೧೯. ನಾರದನು ಹೇಳುತ್ತಾನೆ:—ಬಳಿಕ ಪುಲಸ್ತ್ಯನು ವೇಗವಾಗಿ ಹೋಗಿ ಉತ್ತಮವಾದ ಅರ್ಘದ್ರವ್ಯವನ್ನು ತಂದನು. ಅದನ್ನು ಬ್ರಹ್ಮನು ಕೈಗಳಲ್ಲಿ ಹಿಡಿದುಕೊಂಡು ಆ ತೀರ್ಥಗಳನ್ನು ಕುರಿತು ಮುಂದೆ ಹೇಳುವಂತೆ ಮಾತನಾಡಿದನು.

೨೦. "ನೀವುಗಳೆಲ್ಲರೂ ನಿಮ್ಮಲ್ಲಿಯೇ ವಿಚಾರವನ್ನು ಮಾಡಿಕೊಂಡು ಮುಖ್ಯನಾದವನೊಬ್ಬನನ್ನು ತಿಳಿಸಿರಿ. ಆತನಿಗೆ ಅರ್ಘವನ್ನು ಕೊಡಲು ನನಗೆ ಅಧರ್ಮಾಚರಣೆಯ ದೋಷವು ಸಂಭವಿಸುವುದಿಲ್ಲ."

೨೧. ತೀರ್ಥದೇವತೆಗಳು ಹೇಳುತ್ತಾರೆ:—"ನಮ್ಮ ನಮ್ಮಲ್ಲಿಯ ತಾರತಮ್ಯಗಳನ್ನು ನಾವು ನಿಜವಾಗಿಯೂ ತಿಳಿಯಲಾರದವರಾಗಿರುವೆವು. ಆ ಕಾರಣದಿಂದಲೇ ನಾವೆಲ್ಲರೂ ಇಲ್ಲಿಗೆ ಬಂದಿರುವೆವು. ಆದುದರಿಂದ ನೀನೆ ಶ್ರೈಷ್ಠ್ಯವನ್ನು ತಿಳಿದು ಅರ್ಘವನ್ನು ಕೊಡುವನಾಗು."

೨೨. ಬ್ರಹ್ಮನು ಹೇಳುತ್ತಾನೆ:—"ನಾನು ಖಂಡಿತವಾಗಿಯೂ ನಿಮ್ಮ ಶ್ರೇಷ್ಠತೆಯನ್ನು ತಿಳಿಯಲಾರದೆ ನಿಮಗೆಲ್ಲರಿಗೂ ನಮಸ್ಕರಿಸುತ್ತಿರುವೆನು. ನೀವೇ ನಿಮ್ಮ ನಿಮ್ಮ ಅಪಾರ ಮಾಹಾತ್ಮ್ಯೆಯನ್ನು ತಿಳಿಸಲು ಅರ್ಹರಾಗಿರುವಿರಿ.

೨೩-೨೪. ಗಂಗೆ, ಗಯಾ, ಕಾಶಿ, ಪುಷ್ಕರ, ನೈಮಿಷ, ಕುರುಕ್ಷೇತ್ರ, ರೇವಾ, ಮಹೀಸಾಗರಸಂಗಮ, ಪ್ರಭಾಸ ಮುಂತಾದ ಅನೇಕ ಕ್ಷೇತ್ರಗಳಿರುವೆಡೆಯಲ್ಲಿ ನಮ್ಮ ಬುದ್ಧಿಗೆ ಯಾವ ಶಕ್ತಿಯಿದ್ದೀತು?"

ನಾರದ ಉವಾಚ :—

ಏವಮುಕ್ತೇ ಪದ್ಮಭುವಾ ಕೋಽಪಿ ನೋವಾಚ ಕಿಂಚನ ।
ಚಿರೇಣೇದಂ ತತಃ ಪ್ರಾಹ ಮಹೀಸಾಗರಸಂಗಮಃ ॥ ೨೫ ॥
ಮಮೈನಮರ್ಘಂ ತ್ವಂ ಯಚ್ಛ ಚತುರಾನನ ಶೀಘ್ರತಃ ।
ಯತಃ ಕೋಟಿಕಲಾಯಾಂ ವಾ ಮಮ ಕೋಽಪಿ ನ ಪೂರ್ಯತೇ. ॥೨೬॥
ಯತಶ್ಚೇಂದ್ರದ್ಯುಮ್ನರಾಜ್ಞಾ ತಾಪ್ಯಮಾನಾ ವಸುಂಧರಾ ।
ಸರ್ವತೀರ್ಥದ್ರವೀಭೂತಾ ಮಹೀನಾಮಾಭವನ್ನದೀ ॥ ೨೭ ॥
ಸಾ ಚ ಸರ್ವಾಣಿ ತೀರ್ಥಾನಿ ಸಂಯುಕ್ತಾನಿ ಮಯಾ ಸಹ ।
ಸರ್ವತೀರ್ಥಮಯಸ್ತಸ್ಮಾದಸ್ಮಿನ್ ಖ್ಯಾತೋ ಜಗತ್ತ್ರಯೇ ॥ ೨೮ ॥
ಗುಹೇನ ಚ ಮಹಾಲಿಂಗಂ ಕುಮಾರೇಶ್ವರಮೀಶ್ವರಂ ।
ಸಂಸ್ಥಾಪ್ಯ ತೀರ್ಥಮುಖ್ಯತ್ವಂ ಮಮ ದತ್ತಂ ಮಹಾತ್ಮನಾ ॥ ೨೯ ॥
ನಾರದೇನಾಪಿ ಮತ್ತೀರೇ ಸ್ಥಾನಂ ಸಂಸ್ಥಾಪ್ಯ ಶೋಭನಂ ।
ಸರ್ವೇಭ್ಯಃ ಪುಣ್ಯಕ್ಷೇತ್ರೇಭ್ಯೋ ದತ್ತಂ ಶ್ರೈಷ್ಠ್ಯಂ ಪುರಾ ಮಮ ॥ ೩೦ ॥

---

೨೫. ನಾರದನು ಹೇಳುತ್ತಾನೆ:—ಇಂತು ಬ್ರಹ್ಮದೇವನು ನುಡಿಯು ತ್ತಿರಲು ಯಾರೂ ಪ್ರತ್ಯುತ್ತರವನ್ನು ಹೇಳಲು ಶಕ್ತರಾಗಲಿಲ್ಲ. ಬಹಳ ಕಾಲ ಕಳೆದಮೇಲೆ ಮಹೀಸಾಗರಸಂಗಮ ಕ್ಷೇತ್ರದ ದೇವತೆಯು ಇಂತೆಂದನು.

೨೬. "ಎಲೈ ಚಾತುರಾಸ್ಯನೆ! ಈ ಅರ್ಘವನ್ನು ಈಗಲೆ ನನಗೆ ಕೊಡು. ಏಕೆಂದರೆ ನನ್ನಲ್ಲಿರುವ ಮಾಹಾತ್ಮ್ಯೆಯಲ್ಲಿ ಕೋಟಿಯ ಅಂಶವಾದರೂ ಇಲ್ಲಿರುವ ಯಾವ ತೀರ್ಥಗಳಲ್ಲಿಯೂ ಪೂರ್ಣವಾಗಿಲ್ಲ.

೨೭. ಏಕೆಂದರೆ ಇಂದ್ರದ್ಯುಮ್ನ ರಾಜನಿಂದ ಪೀಡಿತಳಾದ ಭೂದೇವಿಯು ಸಕಲ ತೀರ್ಥಗಳ ಸಾರಗಳನ್ನೂ ಆಕರ್ಷಿಸಿದವಳಾಗಿ ಮಹೀನದಿಯಾದಳಲ್ಲವೆ?

೨೮. ಆ ನದಿಯೂ ನನ್ನೊಡನೆ ಸೇರಿರಲು ಸರ್ವ ತೀರ್ಥಗಳೂ ನನ್ನಲ್ಲಿರು ವುವು. ಆದುದರಿಂದ ನಾನು ಮೂರು ಲೋಕಗಳಲ್ಲಿಯೂ ಸಕಲತೀರ್ಥಮಯ ನೆಂದು ಖ್ಯಾತಿಯನ್ನು ಪಡೆದಿರುವೆನು.

೨೯. ಷಣ್ಮುಖಸ್ವಾಮಿಯೂ ಕೂಡ ಈಶ್ವರನ ಚಿಹ್ನವಾದ ಕುಮಾರೇಶ್ವರ ನೆಂಬ ಮಹಾಲಿಂಗವನ್ನು ಸ್ಥಾಪಿಸಿ ಮಹಾತ್ಮಬುದ್ಧಿಯಿಂದ ನನಗೆ ಸಕಲ ತೀರ್ಥಗಳ ಮುಖ್ಯತ್ವವನ್ನು ಕೊಟ್ಟಿರುವನು.

೩೦. ಅಲ್ಲದೆ ಮುನ್ನು ನಾರದಮಹರ್ಷಿಯೂ ಕೂಡ ನನ್ನ ತೀರದಲ್ಲಿ ಪವಿತ್ರವಾದ ಕ್ಷೇತ್ರವನ್ನು ನಿರ್ಮಿಸಿ ಸರ್ವಪುಣ್ಯತೀರ್ಥಗಳಲ್ಲಿಯೂ ಶ್ರೈಷ್ಠ್ಯ ವನ್ನು ದಯಪಾಲಿಸಿರುವನು.

ನಾರದ ಉವಾಚ :—

ತತಃ ಪುಲಸ್ತ್ಯೋ ವೇಗೇನ ಸಮಾನಿನ್ಯೇಽರ್ಘಮುತ್ತಮಂ ।
ತಂ ಚ ಬ್ರಹ್ಮಾ ಕರೇ ಗೃಹ್ಯ ತೀರ್ಥಾನ್ಯಾಹೇತಿ ಭಾರತೀಂ ॥ ೧೯ ॥
ಸರ್ವೈರ್ಭವದ್ಭಿಃ ಸಂಹತ್ಯ ಮುಖ್ಯಸ್ತ್ವೇಕಃ ಪ್ರಕೀರ್ತ್ಯತಾಂ ।
ತಸ್ಮೈ ಚಾರ್ಘಂ ಪ್ರಯಚ್ಛಾಮಿ ನೈವಂ ಮಾಮನಯಃ ಸ್ಪೃಶೇತ್ ॥೨೦॥

ತೀರ್ಥಾನ್ಯೂಚುಃ :—

ನ ವಯಂ ಶ್ರೇಷ್ಠತಾಂ ವಿದ್ಮಃ ಕಥಂಚನ ಪರಸ್ಪರಂ ।
ಅಸ್ಮಾದ್ಧೇತೋರಿಹ ಸಂಪ್ರಾಪ್ತಾ ಜ್ಞಾತ್ವಾ ದೇಹಿ ತ್ವಮೇವ ತತ್ ॥೨೧॥

ಬ್ರಹ್ಮೋವಾಚ :—

ನಾಹಂ ವೇದ್ಮಿ ಶ್ರೇಷ್ಠತಾಂ ವಃ ಕಥಂಚನ ನಮೋಽಸ್ತು ವಃ ।
ಸರ್ವೇ ಚಾಪಾರಮಾಹಾತ್ಮ್ಯಂ ಸ್ವಯಂ ಮೇ ವಕ್ತುಮರ್ಹಥ ॥ ೨೨ ॥
ಯತ್ರ ಗಂಗಾ ಗಯಾ ಕಾಶೀ ಪುಷ್ಕರಂ ನಿಮಿಷಂ ತಥಾ ।
ಕುರುಕ್ಷೇತ್ರಂ ತಥಾ ರೇವಾ ಮಹೀಸಾಗರಸಂಗಮಃ ॥ ೨೩ ॥
ಪ್ರಭಾಸಾದ್ಯಾನಿ ಶತಶೋ ಯತ್ರ ನಸ್ತತ್ರ ಕಾ ಮತಿಃ ॥ ೨೪ ॥

---

೧೯. ನಾರದನು ಹೇಳುತ್ತಾನೆ:—ಬಳಿಕ ಪುಲಸ್ತ್ಯನು ವೇಗವಾಗಿ ಹೋಗಿ ಉತ್ತಮವಾದ ಅರ್ಘದ್ರವ್ಯವನ್ನು ತಂದನು. ಅದನ್ನು ಬ್ರಹ್ಮನು ಕೈಗಳಲ್ಲಿ ಹಿಡಿದುಕೊಂಡು ಆ ತೀರ್ಥಗಳನ್ನು ಕುರಿತು ಮುಂದೆ ಹೇಳುವಂತೆ ಮಾತನಾಡಿದನು.

೨೦. "ನೀವುಗಳೆಲ್ಲರೂ ನಿಮ್ಮಲ್ಲಿಯೇ ವಿಚಾರವನ್ನು ಮಾಡಿಕೊಂಡು ಮುಖ್ಯನಾದವನೊಬ್ಬನನ್ನು ತಿಳಿಸಿರಿ. ಆತನಿಗೆ ಅರ್ಘವನ್ನು ಕೊಡಲು ನನಗೆ ಅಧರ್ಮಾಚರಣೆಯ ದೋಷವು ಸಂಭವಿಸುವುದಿಲ್ಲ."

೨೧. ತೀರ್ಥದೇವತೆಗಳು ಹೇಳುತ್ತಾರೆ:—"ನಮ್ಮ ನಮ್ಮಲ್ಲಿಯ ತಾರತಮ್ಯಗಳನ್ನು ನಾವು ನಿಜವಾಗಿಯೂ ತಿಳಿಯಲಾರದವರಾಗಿರುವೆವು. ಆ ಕಾರಣದಿಂದಲೇ ನಾವೆಲ್ಲರೂ ಇಲ್ಲಿಗೆ ಬಂದಿರುವೆವು. ಆದುದರಿಂದ ನೀನೆ ಶ್ರೈಷ್ಠ್ಯವನ್ನು ತಿಳಿದು ಅರ್ಘವನ್ನು ಕೊಡುವನಾಗು."

೨೨. ಬ್ರಹ್ಮನು ಹೇಳುತ್ತಾನೆ:—"ನಾನು ಖಂಡಿತವಾಗಿಯೂ ನಿಮ್ಮ ಶ್ರೇಷ್ಠತೆಯನ್ನು ತಿಳಿಯಲಾರದೆ ನಿಮಗೆಲ್ಲರಿಗೂ ನಮಸ್ಕರಿಸುತ್ತಿರುವೆನು. ನೀವೇ ನಿಮ್ಮ ನಿಮ್ಮ ಅಪಾರ ಮಾಹಾತ್ಮ್ಯೆಯನ್ನು ತಿಳಿಸಲು ಅರ್ಹರಾಗಿರುವಿರಿ.

೨೩–೨೪. ಗಂಗೆ, ಗಯಾ, ಕಾಶಿ, ಪುಷ್ಕರ, ನೈಮಿಷ, ಕುರುಕ್ಷೇತ್ರ, ರೇವಾ, ಮಹೀಸಾಗರಸಂಗಮ, ಪ್ರಭಾಸ ಮುಂತಾದ ಅನೇಕ ಕ್ಷೇತ್ರಗಳಿರುವೆಡೆಯಲ್ಲಿ ನಮ್ಮ ಬುದ್ಧಿಗೆ ಯಾವ ಶಕ್ತಿಯಿದ್ದೀತು?"

ನಾರದ ಉವಾಚ :—

**ಏವಮುಕ್ತೇ ಪದ್ಮಭುವಾ ಕೋಽಪಿ ನೋವಾಚ ಕಿಂಚನ ।**
**ಚಿರೇಣೇದಂ ತತಃ ಪ್ರಾಹ ಮಹೀಸಾಗರಸಂಗಮಃ ॥ ೨೫ ॥**
**ಮಮೈನಮರ್ಘಂ ತ್ವಂ ಯಚ್ಛ ಚತುರಾನನ ಶೀಘ್ರತಃ ।**
**ಯತಃ ಕೋಟಿಕಲಾಯಾಂ ವಾ ಮಮ ಕೋಽಪಿ ನ ಪೂರ್ಯತೇ ॥ ೨೬ ॥**
**ಯತಶ್ಚೇಂದ್ರದ್ಯುಮ್ನರಾಜ್ಞಾ ತಾಪ್ಯಮಾನಾ ವಸುಂಧರಾ ।**
**ಸರ್ವತೀರ್ಥದ್ರವೀಭೂತಾ ಮಹೀನಾಮಾಭವನ್ನದೀ ॥ ೨೭ ॥**
**ಸಾ ಚ ಸರ್ವಾಣಿ ತೀರ್ಥಾನಿ ಸಂಯುಕ್ತಾನಿ ಮಯಾ ಸಹ ।**
**ಸರ್ವತೀರ್ಥಮಯಸ್ತಸ್ಮಾದಸ್ಮಿನ್ ಖ್ಯಾತೋ ಜಗತ್ತ್ರಯೇ ॥ ೨೮ ॥**
**ಗುಹೇನ ಚ ಮಹಾಲಿಂಗಂ ಕುಮಾರೇಶ್ವರಮೀಶ್ವರಂ ।**
**ಸಂಸ್ಥಾಪ್ಯ ತೀರ್ಥಮುಖ್ಯತ್ವಂ ಮಮ ದತ್ತಂ ಮಹಾತ್ಮನಾ ॥ ೨೯ ॥**
**ನಾರದೇನಾಪಿ ಮತ್ತೀರೇ ಸ್ಥಾನಂ ಸಂಸ್ಥಾಪ್ಯ ಶೋಭನಂ ।**
**ಸರ್ವೇಭ್ಯಃ ಪುಣ್ಯಕ್ಷೇತ್ರೇಭ್ಯೋ ದತ್ತಂ ಶ್ರೈಷ್ಠ್ಯಂ ಪುರಾ ಮಮ ॥ ೩೦ ॥**

---

೨೫. ನಾರದನು ಹೇಳುತ್ತಾನೆ:—ಇಂತು ಬ್ರಹ್ಮದೇವನು ನುಡಿಯುತ್ತಿರಲು ಯಾರೂ ಪ್ರತ್ಯುತ್ತರವನ್ನು ಹೇಳಲು ಶಕ್ತರಾಗಲಿಲ್ಲ. ಬಹಳ ಕಾಲ ಕಳೆದಮೇಲೆ ಮಹೀಸಾಗರಸಂಗಮ ಕ್ಷೇತ್ರದ ದೇವತೆಯು ಇಂತೆಂದನು.

೨೬. "ಎಲೈ ಚಾತುರಾಸ್ಯನೆ! ಈ ಅರ್ಘವನ್ನು ಈಗಲೆ ನನಗೆ ಕೊಡು. ಏಕೆಂದರೆ ನನ್ನಲ್ಲಿರುವ ಮಾಹಾತ್ಮ್ಯೆಯಲ್ಲಿ ಕೋಟಿಯ ಅಂಶವಾದರೂ ಇಲ್ಲಿರುವ ಯಾವ ತೀರ್ಥಗಳಲ್ಲಿಯೂ ಪೂರ್ಣವಾಗಿಲ್ಲ.

೨೭. ಏಕೆಂದರೆ ಇಂದ್ರದ್ಯುಮ್ನ ರಾಜನಿಂದ ಪೀಡಿತಳಾದ ಭೂದೇವಿಯು ಸಕಲ ತೀರ್ಥಗಳ ಸಾರಗಳನ್ನೂ ಆಕರ್ಷಿಸಿದವಳಾಗಿ ಮಹೀನದಿಯಾದಳಲ್ಲವೆ?

೨೮. ಆ ನದಿಯೂ ನನ್ನೊಡನೆ ಸೇರಿರಲು ಸರ್ವ ತೀರ್ಥಗಳೂ ನನ್ನಲ್ಲಿರುವುವು. ಆದುದರಿಂದ ನಾನು ಮೂರು ಲೋಕಗಳಲ್ಲಿಯೂ ಸಕಲತೀರ್ಥಮಯನೆಂದು ಖ್ಯಾತಿಯನ್ನು ಪಡೆದಿರುವೆನು.

೨೯. ಷಣ್ಮುಖಸ್ವಾಮಿಯೂ ಕೂಡ ಈಶ್ವರನ ಚಿಹ್ನವಾದ ಕುಮಾರೇಶ್ವರನೆಂಬ ಮಹಾಲಿಂಗವನ್ನು ಸ್ಥಾಪಿಸಿ ಮಹಾತ್ಮಬುದ್ಧಿಯಿಂದ ನನಗೆ ಸಕಲ ತೀರ್ಥಗಳ ಮುಖ್ಯತ್ವವನ್ನು ಕೊಟ್ಟಿರುವನು.

೩೦. ಅಲ್ಲದೆ ಮುನ್ನು ನಾರದಮಹರ್ಷಿಯೂ ಕೂಡ ನನ್ನ ತೀರದಲ್ಲಿ ಪವಿತ್ರವಾದ ಕ್ಷೇತ್ರವನ್ನು ನಿರ್ಮಿಸಿ ಸರ್ವಪುಣ್ಯತೀರ್ಥಗಳಲ್ಲಿಯೂ ಶ್ರೈಷ್ಠ್ಯವನ್ನು ದಯಪಾಲಿಸಿರುವನು.

ಏವಂ ತ್ರಿಭಿರ್ಹೇತುವರ್ಯೈಃ ಮಮೈವಾರ್ಘಃ ಪ್ರದೀಯತಾಂ ।
ಗುಣೈಕದೇಶೇಽಪಿ ಸಮಂ ಮಮ ತೀರ್ಥಂ ನ ವೈ ಪರಂ ॥ ೩೧ ॥
ಇತ್ಯುಕ್ತೇ ವಚನೇ ಪಾರ್ಥ ತೀರ್ಥರಾಜೇನ ಭಾರತ ।
ಸರ್ವೇ ನೋಚುಃ ಕಿಂಚನಾಪಿ ಕಿಂ ಬ್ರಹ್ಮಾ ವಕ್ಷ್ಯತೀತಿ ಯತ್ ॥ ೩೨ ॥
ತತೋ ಬ್ರಹ್ಮಸುತೋ ಜ್ಯೇಷ್ಠಃ ಶ್ವೇತಮಾಲ್ಯಾನುಲೇಪನಃ ।
ದಕ್ಷಿಣಂ ಬಾಹುಮುದ್ಧೃತ್ಯ ಧರ್ಮೋ ವಚನಮಬ್ರವೀತ್ ॥ ೩೩ ॥
ಅಹೋ ಕಷ್ಟಮಿದಂ ಕೂಕ್ತಂ ತೀರ್ಥರಾಜೇನ ಮೋಹತಃ ।
ಸಂತೋಽಪಿ ನ ಗುಣಾ ವಾಚ್ಯಾಃ ಸ್ವಯಂ ಸದ್ಭಿಃ ಸ್ವಕಾ ಯತಃ ॥ ೩೪ ॥
ಸ್ವೀಯಾನ್ಗುಣಾಸ್ಸ್ವಯಂ ಯೋ ಹಿ ಸಂಪತ್ಸು ಪ್ರಕ್ಷಿಪನ್ಪರಾನ್ ।
ಬ್ರವೀತಿ ರಾಜಸಸ್ತ್ವೇಷ ಹ್ಯಹಂಕಾರೋ ಜುಗುಪ್ಸಿತಃ ॥ ೩೫ ॥
ತಸ್ಮಾದಸ್ಮಾದಹಂಕಾರಾತ್ಸತ್ಸ್ವಪ್ಯೇಷು ಗುಣೇಷು ಚ ।
ಅಪ್ರಖ್ಯಾತಂ ಧ್ವಸ್ತರೂಪಮಿದಂ ತೀರ್ಥಂ ಭವಿಷ್ಯತಿ ॥ ೩೬ ॥

---

೩೧. ಈ ಮೂರು ಕಾರಣಗಳೂ ಬಲವತ್ತರವಾದುವುಗಳಾದುದರಿಂದ ಈ ಅರ್ಘವು ನನಗೇ ಸಲ್ಲತಕ್ಕುದು. ನನ್ನ ಗುಣಗಳಲ್ಲಿ ಏಕದೇಶ ಮಾತ್ರವಾದರೂ ಉಳ್ಳ ಮತ್ತೊಂದು ತೀರ್ಥವು ಎಲ್ಲಿಯೂ ಇಲ್ಲವಷ್ಟೆ!"

೩೨. ಎಲೈ ಪಾರ್ಥನೆ! ಇಂತು ತೀರ್ಥರಾಜನಾದ ಮಹೀಸಾಗರ ಸಂಗಮವು ಹೇಳಲು ಮಿಕ್ಕವರೆಲ್ಲರೂ ಬ್ರಹ್ಮನ ಮರುಮಾತನ್ನು ಕೇಳಬೇಕೆಂಬ ಕುತೂಹಲದಿಂದ ಮೌನವನ್ನವಲಂಬಿಸಿದರು.

೩೩. ಆಗ ಬ್ರಹ್ಮನ ಮಕ್ಕಳಲ್ಲಿ ಹಿರಿಯವನಾದ ಧರ್ಮರಾಜನು ಬಿಳಿಯ ಪೂಮಾಲೆಯಿಂದಲೂ, ಚಂದನದಿಂದಲೂ ಅಲಂಕೃತನಾಗಿ ಎದ್ದುನಿಂತು ಶಪಥವನ್ನು ಮಾಡುವವನಂತೆ ಬಲಗೈಯನ್ನು ಮೇಲಕ್ಕೆತ್ತಿ ಸಭೆಯಲ್ಲಿ ಇಂತೆಂದನು.

೩೪. "ಅಯ್ಯೊ! ಬಹಳ ಕಷ್ಟಕಾಲವೇ ಒದಗಿರುವುದು. ಈ ತೀರ್ಥರಾಜನು ಮೋಹದಿಂದ ಹೇಳಿದುದು ತಪ್ಪಾಯಿತು. ಏಕೆಂದರೆ ಸತ್ಪುರುಷರು ತಮ್ಮಲ್ಲಿ ಸದ್ಗುಣಗಳಿದ್ದರೂ ಅವುಗಳನ್ನು ತಾವೇ ಹೇಳಿಕೊಳ್ಳಬಾರದು.

೩೫. ಸಂಪದ್ಯುಕ್ತನಾದವನು ತನ್ನ ಗುಣಗಳನ್ನು ತಾನೇ ಇತರರ ಮುಂದೆ ಹೊಗಳಿಕೊಂಡರೆ ಅದು ರಾಜಸಾಹಂಕಾರದ ಫಲವೆನಿಸುವುದು. ಇದು ಕೇವಲ ಜುಗುಪ್ಸಿತವಾಗಿರುವುದು.

೩೬. ಆದುದರಿಂದ ಈ ತೀರ್ಥದಲ್ಲಿ ಅನೇಕ ಗುಣಗಳಿದ್ದರೂ ಕೂಡ ಈ ಅಹಂಕಾರದ ಫಲವಾಗಿ ಇದು ಪ್ರಖ್ಯಾತಿಯನ್ನು ಪಡೆಯದೆ ರೂಪನಾಶವನ್ನು ಹೊಂದುವುದು.

**ಸ್ತಂಭತೀರ್ಥಮಿತಿ ಖ್ಯಾತಂ ಸ್ತಂಭೋ ಗರ್ವಃ ಕೃತೋ ಯತಃ ।**
**ಸ್ತಂಭಸ್ಯ ಹಿ ಫಲಂ ಸದ್ಯೋ ಬ್ರಹ್ಮಾಪಿ ಪ್ರಾಪ ಕಿಂ ಪರಃ ॥ ೩೭ ॥**
**ಇತ್ಯುಕ್ತೇ ಧರ್ಮದೇವೇನ ಹಾಹೇತಿ ರವ ಉತ್ಥಿತಃ ।**
**ತತಃ ಶೀಘ್ರಂ ಸಮಾಯಾತೋ ಯೋಗೀಶೋಽಹಂ ಚ ಪಾಂಡವ ॥೩೮॥**
**ಗುಹಸ್ತತೋ ವಚಃ ಪ್ರಾಹ ಧರ್ಮದೇವಸಮಾಗಮೇ ।**
**ಅಯುಕ್ತಮೇತಚ್ಛಾಪೋಽಯಂ ದತ್ತೋ ಯದ್ಧರ್ಮ ಧಾರ್ಷ್ಟ್ಯತಃ ॥**
**ಬ್ರವೀತು ಕೋಽಪಿ ಸರ್ವೇಷಾಂ ತೀರ್ಥಾನಾಂ ತೇಷು ವರ್ತತಾಂ ।**
**ಯದ್ಯೈಶ್ವರ್ಯಂ ನಾರ್ಹತೇಽಸೌ ಮಹೀಸಾಗರಸಂಗಮಃ ॥ ೪೦ ॥**
**ತಿಷ್ಠತ್ವಾತ್ಮಗುಣೋ ಯಚ್ಚ ತೀರ್ಥರಾಜೇನ ವರ್ಣಿತಃ ।**
**ತತ್ರ ಕೋ ವಿಗುಣೋ ನಾಮ ಮಿಥ್ಯಾವಾದೋ ಯತೋಽಗುಣಃ ॥೪೧॥**
**ಅಹೋ ನ ಯುಕ್ತಂ ಪಾಲಾನಾಂ ಯದಿ ತೇಽಪ್ಯವಿಮೃಶ್ಯ ಚ ।**
**ಏವಮರ್ಥಾನ್ಕರಿಷ್ಯಂತಿ ಕಂ ಯಾಂತಿ ಶರಣಂ ಪ್ರಜಾಃ ॥ ೪೨ ॥**

---

೩೭. 'ಸ್ತಂಭ' ಎಂದರೆ ಗರ್ವವು ಈ ತೀರ್ಥಕ್ಕೆ ಉಂಟಾಗಿರುವುದರಿಂದ ಇದಕ್ಕೆ ಸ್ತಂಭತೀರ್ಥವೆಂದೇ ಹೆಸರಾಗಲಿ. ಈ ಗರ್ವದ ಫಲವನ್ನು ಈಗ ಬ್ರಹ್ಮನೇ ಅನುಭವಿಸಿದನೆಂದಮೇಲೆ ಮಿಕ್ಕವರ ಮಾತೇನು?"

೩೮. ಎಲೈ ಅರ್ಜುನನೆ! ಇಂತು ಧರ್ಮದೇವನು ಮಾತನ್ನಾಡುತ್ತಿರಲು ಎಲ್ಲೆಲ್ಲಿಯೂ ಹಾಹಾಕಾರವುಂಟಾಯಿತು. ಆಗ ಯೋಗೀಶ್ವರನಾದ ಷಣ್ಮುಖ ಸ್ವಾಮಿಯೂ ನಾನೂ ಅಲ್ಲಿಗೆ ಬಂದೆವು.

೩೯. ಷಣ್ಮುಖನು ಧರ್ಮರಾಜನ ಇದಿರಿನಲ್ಲಿ ನಿಂತು ಇಂತೆಂದನು. "ಎಲೈ ಧರ್ಮರಾಜನೆ! ದಿಟ್ಟತನದಿಂದ ನೀನಿತ್ತ ಈ ಶಾಪವು ತುಂಬ ಅಯುಕ್ತವಾದುದು.

೪೦. ಇಲ್ಲಿ ನೆರೆದಿರುವ ಸಕಲ ತೀರ್ಥಗಳಲ್ಲಿಯೂ ಈ ಮಹೀಸಾಗರ ಸಂಗಮವೇ ಶ್ರೈಷ್ಠ್ಯವನ್ನು ಪಡೆಯಲು ಅರ್ಹವಾದುದಲ್ಲವೆಂಬ ಸಾಹಸದ ಮಾತನ್ನು ಇಲ್ಲಿ ಯಾವನುತಾನೆ ಹೇಳಬಲ್ಲನು?

೪೧. ಆದರೆ ತೀರ್ಥಾಧಿದೇವತೆಯು ತನ್ನ ಗುಣಗಳನ್ನೇ ವರ್ಣಿಸಿಕೊಂಡನೆಂಬ ವಿಷಯವೊತ್ತಟ್ಟಿಗಿರಲಿ. ಅದರಲ್ಲಿ ದೋಷವು ತಾನೆ ಏನು? ಮಿಥ್ಯಾವಚನವನ್ನು ಮಾತ್ರ ದುರ್ಗುಣವೆನ್ನಬೇಕಲ್ಲವೆ?

೪೨. ಇಂತಹ ಕಾರ್ಯವು ಲೋಕಪಾಲಕರಿಗೆ ಖಂಡಿತವಾಗಿಯೂ ತಕ್ಕುದಲ್ಲ. ಅಂತಹವರೂ ಕೂಡ ಯುಕ್ತಾಯುಕ್ತ ವಿವೇಚನೆಯಿಲ್ಲದೆ ಹೀಗೆ ನಡೆಯುವುದಾದರೆ ಪ್ರಜೆಗಳು ಮತ್ತೆ ಯಾರನ್ನು ಶರಣುಹೊಂದಬೇಕು?"

**ಏವಮುಕ್ತೋ ಗುಹೇನಾಥ ಧರ್ಮೋ ವಚನಮಬ್ರವೀತ್ ।**
**ಸತ್ಯಮೇತದ್ಯದಹೋಽಯಂ ಮಹೀಸಾಗರಸಂಗಮಃ ॥ ೪೩ ॥**
**ಮುಖ್ಯತ್ವಂ ಸರ್ವತೀರ್ಥಾನಾಮರ್ಘಂ ಚಾಪಿ ಪಿತಾಮಹಾತ್ ।**
**ಕಿಂತು ನಾತ್ಮಗುಣಾ ವಾಚ್ಯಾಃ ಸತಾಮೇತತ್ಸದಾ ವ್ರತಂ ।**
**ಪರೋಕ್ಷೇಽಪಿ ಸ್ವಪ್ರಶಂಸಾ ಬ್ರಹ್ಮಾಣಮಪಿ ಚಾಲಯೇತ್ ॥ ೪೪ ॥**
**ಸ್ವಪ್ರಶಂಸಾಂ ಪ್ರಕುರ್ವಾಣಃ ಪರಾಕ್ಷೇಪಸಮನ್ವಿತಾಂ ।**
**ಕಿಂ ದಿವಃ ಪೃಥಿವೀಂ ಪೂರ್ವಂ ಯಯಾತಿರ್ನ ಪಪಾತ ಹ ।**
**ಯಾನಿ ಪೂರ್ವಂ ಪ್ರಮಾಣಾನಿ ಕೃತಾನೀಶೇನ ಧೀಮತಾ ॥ ೪೫ ॥**
**ತಾನಿ ಸಂಪಾಲನೀಯಾನಿ ತಾನಿ ಕೋಽತಿಕ್ರಮೇದ್ಬುಧಃ ।**
**ತವ ಪಿತ್ರಾ ಸಮಾದಿಶ್ಯ ಯದರ್ಥಂ ಸ್ಥಾಪಿತಾ ವಯಂ ॥ ೪೬ ॥**
**ಪಾಲಯಾಮಾಸ ಏತಚ್ಚ ತ್ವಂ ಪಾಲಯಿತುಮರ್ಹಸಿ ।**
**ಈಶ್ವರಾಃ ಸ್ವಪ್ರಮಾಣೇನ ಭವಂತೋ ಯದಿ ಕುರ್ವತೇ ॥ ೪೭ ॥**
**ತದಸ್ಮಾಭಿರಿದಂ ಯುಕ್ತಂ ಶಾಸನಂ ದಿಶ್ಯತಾಂ ಪರಂ ।**
**ಏವಮುಕ್ತ್ವಾ ಸ್ವೀಯಮುದ್ರಾಂ ನೋಕ್ತ್ವಾ ಕಾಮಂ ವೃಷಂ ತದಾ ॥೪೮॥**

---

೪೩–೪೪. ಇಂತೆಂದ ಗುಹನನ್ನು ಕಂಡು ಧರ್ಮರಾಜನು ನುಡಿದನೆಂತೆನೆ: "ಈ ಮಹೀಸಾಗರಸಂಗಮವು ಸಕಲ ತೀರ್ಥಗಳಲ್ಲಿ ಮುಖ್ಯತ್ವವನ್ನೂ ಬ್ರಹ್ಮದೇವನಿಂದ ಅರ್ಘವನ್ನೂ ಪಡೆಯಲು ಅರ್ಹವಾದುದೆಂಬುದು ನಿಸ್ಸಂಶಯವು. ಆದರೂ ತನ್ನ ಗುಣಗಳನ್ನು ತಾನೇ ಪ್ರಶಂಸಿಸಬಾರದು. ಇದೇ ಯಾವಾಗಲೂ ಸತ್ಪುರುಷರ ಲಕ್ಷಣವು. ಪರೋಕ್ಷದಲ್ಲಿ ಮಾಡಿದ ಆತ್ಮಪ್ರಶಂಸೆಯು ಬ್ರಹ್ಮನನ್ನೂ ಕೂಡ ಸ್ಥಾನಚ್ಯುತನನ್ನಾಗಿ ಮಾಡಬಲ್ಲುದು.

೪೫–೪೬. ಹಿಂದೆ ಪರನಿಂದೆಯ ಸಹಿತವಾದ ಆತ್ಮಶ್ಲಾಘನೆಯನ್ನು ಮಾಡಿಕೊಂಡ ಯಯಾತಿಯು ಸ್ವರ್ಗದಿಂದ ಭೂಲೋಕಕ್ಕೆ ಬೀಳಲಿಲ್ಲವೆ! ಸರ್ವಜ್ಞನಾದ ಮಹೇಶ್ವರನು ಪೂರ್ವದಲ್ಲಿ ಯಾವ ನಿಯಮಗಳನ್ನು ನಮ್ಮ ಆಚರಣೆಗಾಗಿ ಹೇಳಿರುವನೊ, ಅವುಗಳನ್ನು ಖಂಡಿತವಾಗಿಯೂ ಪಾಲಿಸಲೇಬೇಕು. ಬುದ್ಧಿವಂತನಾದ ಯಾವನು ತಾನೆ ಅವುಗಳನ್ನು ಮೀರಬಲ್ಲನು? ಈ ಉದ್ದೇಶದಿಂದಲೇ ನಾವುಗಳೆಲ್ಲರೂ ನಿನ್ನ ತಂದೆಯಾದ ಮಹಾದೇವನಿಂದ ಆದೇಶವನ್ನು ತಳೆದು ದಿಕ್ಪಾಲಕ ಸ್ಥಾನಗಳಲ್ಲಿ ನಿಲ್ಲಿಸಲ್ಪಟ್ಟಿರುವೆವು.

೪೭–೫೨. ನಿನ್ನ ತಂದೆಯೂ ಈ ನಿಯಮಗಳನ್ನನುಸರಿಸಿದನು. ನೀನೂ ಇವುಗಳನ್ನು ಪಾಲಿಸಲೇಬೇಕು. ಸರ್ವೇಶ್ವರರಾದ ನೀವೇ ನಿಮ್ಮ ನಿಯಮಗಳನ್ನನುಸರಿಸುತ್ತಿರಲು ನಮ್ಮಿಂದಲೂ ಕೂಡ ಈ ಶಾಸನ ಕಾರ್ಯವು ನಡೆಯಬೇಕಾದುದೇ ಸರಿಯಲ್ಲದೆ ಮತ್ತೇನು?" ಇಂತೆಂದು ನುಡಿದು ತನ್ನ ಅಧಿಕಾರ

ಅಹಂ ಪ್ರಸ್ತಾವಮನ್ವೀಕ್ಷ್ಯ ವಾಕ್ಯಮೇತದುದೈರಯಂ ।
ನಮೋ ಧರ್ಮಾಯ ಮಹತೇ ವಿಶ್ವಧಾತ್ರೇ ಮಹಾತ್ಮನೇ ॥ ೪೯ ॥
ಬ್ರಹ್ಮವಿಷ್ಣುಶಿವೈರ್ನಿತ್ಯಂ ಪೂಜಿತಾಯಾಘನಾಶಿನೇ ।
ಯದಿ ಮುದ್ರಾಂ ಭವಾನ್ಧರ್ಮ ಪರಿತ್ಯಕ್ಷ್ಯತಿ ಕರ್ಹಿಚಿತ್ ॥ ೫೦ ॥
ತದಸ್ಮಾಕಂ ಕುತೋ ಭಾವೋ ಮಾ ವಿಶ್ವಂ ನಾಶಯ ಪ್ರಭೋ ।
ಯೋಗೀಶ್ವರಂ ಗುಹಂ ಚಾಪಿ ಸಂಮಾನಯಿತುಮರ್ಹಸಿ ॥ ೫೧ ॥
ಶಿವವನ್ಮಾನನೀಯೋ ಹಿ ಯತಃ ಸಾಕ್ಷಾಚ್ಛಿವಾತ್ಮಜಃ ।
ತ್ವಂ ಚ ದೇವೋ ಗುಹಃ ಸ್ವಾಮೀ ಸಂಮಾನಯಿತುಮರ್ಹಸಿ ॥ ೫೨ ॥
ಯುವಯೋರೈಕ್ಯಭಾವೇನ ಸುಖಂ ಜೀವೇದಿದಂ ಜಗತ್ ।
ತ್ವಯಾ ಪ್ರದತ್ತಃ ಶಾಪೋಽಯಂ ಮಾ ಪ್ರತ್ಯಾಖ್ಯಾತಿಲಕ್ಷಣಃ ॥ ೫೩ ॥
ಅನುಗ್ರಹಶ್ಚ ಕ್ರಿಯತಾಂ ತೀರ್ಥರಾಜಸ್ಯ ಮಾನದ ॥ ೫೪ ॥
ಏವಮುಚ್ಚಾರಮಾಣಂ ಮಾಂ ಪ್ರಶಸ್ಯಾಹಾಪಿ ಪದ್ಮಭೂಃ ।
ಸಾಧ್ವೇತನ್ನಾರದೇನೋಕ್ತಂ ಧರ್ಮೈತದ್ವಚನಂ ಕುರು ॥ ೫೫ ॥

---

ಲಾಂಛನವಾದ ಕಾಲದಂಡವನ್ನು ಪ್ರಯೋಗಿಸಲು ಉಜ್ಜುಗಿಸಿದ ಧರ್ಮರಾಜನನ್ನು ಕುರಿತು ನಾನು ಸಮಯಕ್ಕೆ ಅನುಕೂಲವಾದ ಈ ಮಾತುಗಳನ್ನಾಡಿದೆನು. ಸನಾತನನೂ, ಲೋಕರಕ್ಷಕನೂ, ಮಹಾತ್ಮನೂ ಆದ ಧರ್ಮರಾಜನಿಗೆ ನಮಸ್ಕಾರವು. ಬ್ರಹ್ಮ, ವಿಷ್ಣು, ಮಹೇಶ್ವರರು ನಿನ್ನನ್ನು ಯಾವಾಗಲೂ ಪೂಜಿಸುತ್ತಿರುವರು. ನೀನು ಭಜಕರ ಸಮಸ್ತಪಾಪಗಳನ್ನೂ ನಾಶಗೊಳಿಸುತ್ತಿರುವೆ. ಎಲೈ ಧರ್ಮರಾಜನೆ! ನೀನು ನಿನ್ನ ದಂಡವನ್ನು ಎಲ್ಲಿಯಾದರೂ ಬಿಟ್ಟುಬಿಡುವೆಯಾದರೆ ನಮಗೆಲ್ಲ ಜೀವಾವಸ್ಥೆಯೆಲ್ಲಿ? ಎಲೈ ಲೋಕನಾಥನೆ! ನೀನು ಲೋಕವನ್ನೆಲ್ಲ ನಾಶಮಾಡಬಾರದು. ಯೋಗೀಶ್ವರನಾದ ಷಣ್ಮುಖಸ್ವಾಮಿಯನ್ನೂ ಕೂಡ ಪೂಜಿಸುವುದು ನಿನಗೆ ತಕ್ಕುದಾಗಿದೆ. ಆತನು ಸಾಕ್ಷಾತ್ತಾಗಿ ಮಹೇಶ್ವರನ ಪುತ್ರನಾದುದರಿಂದ ಮಹೇಶ್ವರನಂತೆಯೇ ಪೂಜ್ಯನೂ ಆಗಿರುವನು. ನೀನೂ ಲೋಕಪಾಲಕನಾಗಿರುವೆ; ಗುಹನೂ ನಾಯಕನಾಗಿರುವನು. ಆತನನ್ನೂ ಮರ್ಯಾದೆ ಮಾಡಲು ಅರ್ಹನಾಗಿರುವೆ.

೫೨–೫೪. ನಿಮ್ಮಿಬ್ಬರ ಏಕೀಭಾವದಿಂದ ಲೋಕವು ಸುಖವಾಗಿರುವುದು. ನೀನು ಕೊಟ್ಟಿರುವ ಈ ಶಾಪವೂ ಕೂಡ ಹಿಂದೆಗೆಯಲಾರದಂತಹುದಾಗಿರುವುದು. ಎಲೈ ಮಾನದನೆ! ಆ ತೀರ್ಥರಾಜನಿಗೂ ಅನುಗ್ರಹವನ್ನು ಮಾಡುವವನಾಗು.”

೫೫. ಇಂತು ಹೇಳುತ್ತಿರುವ ನನ್ನನ್ನು ಅಭಿನಂದಿಸಿ ಬ್ರಹ್ಮದೇವನೂ ಕೂಡ ಹೇಳತೊಡಗಿದನೆಂತೆನೆ:—“ ಎಲೈ ಧರ್ಮದೇವನೆ! ಈ ನಾರದನು ಹೇಳಿದುದು ಸಮಿಾಚೀನವಾಗಿರುವುದು. ಆತನ ಮಾತನ್ನು ನಡೆಸಿಕೊಡು.

ಸಮ್ಮಾನಯ ಗುಹಂ ಚಾಪಿ ಗುಹಃ ಸ್ವಾಮೀ ಯತೋ ಹಿ ನಃ ।
ಏವಮುಕ್ತೇ ಬ್ರಹ್ಮಣಾ ಚ ಧರ್ಮೋ ವಚನಮಬ್ರವೀತ್ ॥ ೫೬ ॥
ನಮೋ ಗುಹಾಯ ಸಿದ್ಧಾಯ ಕಿಂಕರಾ ಯಸ್ಯ ತೇ ವಯಂ ।
ಮದೀಯಾಂ ಸ್ಕಂದ ವಿಜ್ಞಪ್ತಿಂ ನಾಥೈನಾಮವಧಾರಯ ॥ ೫೭ ॥
ಸ್ತಂಭಾದೇತನ್ಮಹಾತೀರ್ಥಮಪ್ರಸಿದ್ಧಂ ಭವಿಷ್ಯತಿ ।
ಸ್ತಂಭತೀರ್ಥಮಿತಿ ಖ್ಯಾತಂ ಸುಪ್ರಸಿದ್ಧಂ ಭವಿಷ್ಯತಿ ॥ ೫೮ ॥
ಸ್ತಂಭತೀರ್ಥಮಿತಿ ಖ್ಯಾತಂ ಸರ್ವತೀರ್ಥಫಲಪ್ರದಂ ।
ಯಶ್ಚಾತ್ರ ಸ್ನಾನದಾನಾನಿ ಪ್ರಕರಿಷ್ಯತಿ ಮಾನವಃ ॥ ೫೯ ॥
ಯಥೋಕ್ತಂ ಚ ಫಲಂ ತಸ್ಯ ಸ್ಫುಟಂ ಸರ್ವಂ ಭವಿಷ್ಯತಿ ।
ಶನಿವಾರೇ ಹ್ಯಮಾವಾಸ್ಯಾ ಭವೇತ್ತಸ್ಯಾಃ ಫಲಂ ಚ ಯತ್ ॥ ೬೦ ॥
ಮಹೀಸಾಗರಯಾತ್ರಾಯಾಂ ಭವೇತ್ತಚ್ಚಾವಧಾರಯ ।
ಪ್ರಭಾಸದಶಯಾತ್ರಾಭಿಃ ಸಪ್ತಭಿಃ ಪುಷ್ಕರಸ್ಯ ಚ ॥ ೬೧ ॥
ಅಷ್ಟಭಿಶ್ಚ ಪ್ರಯಾಗಸ್ಯ ತತ್ಫಲಂ ಪ್ರಭವಿಷ್ಯತಿ ।
ಪಂಚಭಿಃ ಕುರುಕ್ಷೇತ್ರಸ್ಯ ನಕುಲೀಶಸ್ಯ ಚ ತ್ರಿಭಿಃ ॥ ೬೨ ॥

---

೫೬. ಗುಹನನ್ನೂ ಕೂಡ ಕಡೆಗಣಿಸಬೇಡ. ಈಗ ಆತನೇ ನಮಗೆ ಸೇನಾನಾಯಕನಾಗಿರುವನಲ್ಲವೆ.'' ಇಂತೆಂದ ಬ್ರಹ್ಮದೇವನನ್ನು ಕುರಿತು ಧರ್ಮದೇವತೆಯಿಂತೆಂದನು.

೫೭. "ಸಿದ್ಧನಾದ ಷಣ್ಮುಖಸ್ವಾಮಿಗೆ ನಮಸ್ಕಾರವು. ಅವನಿಗೆ ನಾವುಗಳೆಲ್ಲರೂ ಕಿಂಕರರಾಗಿರುವೆವು. ಎಲೈ ಸ್ಕಂದನೆ! ನಾಥನೆ! ನನ್ನ ಈ ಬಿನ್ನಪವನ್ನು ಕೇಳುವವನಾಗು.

೫೮. ಈ ಮಹಾತೀರ್ಥವು ತನ್ನ ಗರ್ವದ ಫಲವಾಗಿ ಪ್ರಸಿದ್ಧಿಯನ್ನು ಹೊಂದದಿರುವುದು. ಆದರೂ ಸ್ತಂಭತೀರ್ಥವೆಂದು ಖ್ಯಾತಿಯನ್ನು ಪಡೆದು ಜಗತ್ಪ್ರಸಿದ್ಧವಾಗುವುದು.

೫೯–೬೫. ಪ್ರಖ್ಯಾತಿಯನ್ನು ಪಡೆದ ಈ ತೀರ್ಥವು ಸಕಲ ತೀರ್ಥಗಳ ಫಲಗಳನ್ನೂ ಒಮ್ಮೆಯೇ ಕೊಡುವಂತಹುದು ಯಾವ ಮಾನವನು ಇಲ್ಲಿ ಸ್ನಾನದಾನಾದಿಗಳನ್ನು ಶ್ರದ್ಧೆಯಿಂದ ಮಾಡುವನೊ, ಅವನಿಗೆ ಶಾಸ್ತ್ರೋಕ್ತವಾದ ಫಲವು ಸಾಂಗವಾಗಿ ಲಭಿಸುವುದು. ಈ ಮಹೀಸಾಗರ ಕ್ಷೇತ್ರಕ್ಕೆ ಅಮಾವಾಸ್ಯೆಯಿಂದ ಕೂಡಿದ ಶನಿವಾರದ ದಿನದಲ್ಲಿ ಯಾತ್ರೆಯನ್ನು ಮಾಡುವವರ ಫಲವನ್ನು ಕೇಳು. ಇಲ್ಲಿ ಪ್ರಭಾಸಕ್ಷೇತ್ರಕ್ಕೆ ಹತ್ತು ಯಾತ್ರೆಗಳು, ಪುಷ್ಕರಕ್ಷೇತ್ರಕ್ಕೆ ಏಳು, ಪ್ರಯಾಗಕ್ಕೆ ಎಂಟು ಯಾತ್ರೆಗಳನ್ನು ಮಾಡಿದ ಫಲವು ಸಂಭವಿಸುವುದು. ಕುರುಕ್ಷೇತ್ರಕ್ಕೆ ಐದು, ನಕುಲೀಶಕ್ಷೇತ್ರಕ್ಕೆ ಮೂರು, ಅರ್ಬುದಕ್ಷೇತ್ರಕ್ಕೆ

ಅರ್ಬುದಸ್ಯ ಚ ಯತ್ಷಡ್ಭಿಸ್ತತ್ಫಲಂ ಚ ಭವಿಷ್ಯತಿ ।
ವಸ್ತ್ರಾಪಥಸ್ಯ ತಿಸೃಭಿರ್ಗಂಗಾಯಾಃ ಪಂಚಭಿಶ್ಚ ಯತ್ ॥ ೬೩ ॥
ಕೂಪೋದಯಾಶ್ಚತುರ್ಭಿಶ್ಚ ತತ್ಫಲಂ ಪ್ರಭವಿಷ್ಯತಿ ।
ಕಾಶ್ಯಾಃ ಷಡ್ಭಿಸ್ತಥಾ ಯತ್ಸ್ಯಾದ್ಗೋದಾವರ್ಯಾಶ್ಚ ಪಂಚಭಿಃ ॥ ೬೪ ॥
ತತ್ಫಲಂ ಸ್ತಂಭತೀರ್ಥೇ ವೈ ಶನಿದರ್ಶೇ ಭವಿಷ್ಯತಿ ।
ಏವಂ ದತ್ತೇ ವರೇ ಸ್ಕಂದಸ್ತದಾ ಪ್ರೀತಮನಾಭವತ್ ॥ ೬೫ ॥
ಬ್ರಹ್ಮಾಪಿ ಸ್ತಂಭತೀರ್ಥಾಯ ದದಾವರ್ಘಂ ಸಮಾಹಿತಃ ।
ದದೌ ಚ ಸರ್ವತೀರ್ಥಾನಾಂ ಶ್ರೈಷ್ಠ್ಯತ್ವಮಮಿತದ್ಯುತಿಃ ॥ ೬೬ ॥
ತೀರ್ಥಾನಿ ಚ ಗುಹಂ ನಾಥಂ ಸಮ್ಮಾನ್ಯ ವಿಸಸರ್ಜ ಸಃ ।
ಏವಮೇತತ್ಪುರಾವೃತ್ತಂ ಗುಪ್ತಕ್ಷೇತ್ರಸ್ಯ ಕಾರಣಂ ॥ ೬೭ ॥
ಭೂಯಶ್ಚಾಪಿ ಪ್ರಸಿದ್ಧ್ಯರ್ಥಂ ಪ್ರೇಷಿತಾಪ್ಸರಸೋಽತ್ರ ಮೇ ।
ವಿಮೋಕ್ಷಿತಾ ಗ್ರಾಹರೂಪಾತ್ತ್ವಯಾ ತಾಶ್ಚ ಕುರೂದ್ವಹ ॥ ೬೮ ॥
ಯತೋ ಧರ್ಮಸ್ಯ ಸರ್ವಸ್ಯ ನಾನಾರೂಪೈಃ ಪ್ರವರ್ತತಃ ।
ಪರಿತ್ರಾಣಾಯ ಭವತಃ ಕೃಷ್ಣಸ್ಯ ಚ ಭವೋ ಭವೇ ॥ ೬೯ ॥

---

ಆರು ಯಾತ್ರೆಗಳನ್ನು ಮಾಡಿದ ಪುಣ್ಯವು ಲಭಿಸುವುದು. ವಸ್ತ್ರಾಪಥಕ್ಕೆ ಮೂರು, ಗಂಗಾಸಾಗರಕ್ಕೆ ಐದು, ಕೂಪೋದರಿಗೆ ನಾಲ್ಕು, ಕಾಶಿಗೆ ಆರು, ಗೋದಾವರೀ ತೀರ್ಥಕ್ಕೆ ಐದು ಯಾತ್ರೆಗಳನ್ನು ಮಾಡಿದ ಪುಣ್ಯವು ಈ ಕ್ಷೇತ್ರಕ್ಕೆ ಅಮಾಯುಕ್ತ ವಾದ ಶನಿವಾರದ ಯಾತ್ರೆಯೊಂದರಿಂದಲೇ ಲಭಿಸುವುದು.'' ಇಂತು ಧರ್ಮ ರಾಜನು ವರವನ್ನು ಕೊಡಲು ಷಣ್ಮುಖಸ್ವಾಮಿಯು ಸಂತುಷ್ಟಮಾನಸನಾದನು.

೬೬. ಬಳಿಕ ಬ್ರಹ್ಮದೇವನೂ ಶಾಂತಮನಸ್ಸಿನಿಂದ ಸ್ತಂಭತೀರ್ಥಕ್ಕೇ ಅರ್ಘ್ಯವನ್ನು ಒಪ್ಪಿಸಿದನು. ಅಮಿತತೇಜೋವಂತನಾದ ಆತನು ಸರ್ವತೀರ್ಥ ಗಳಲ್ಲಿ ಶ್ರೇಷ್ಠತ್ವವನ್ನೂ ದಯಪಾಲಿಸಿದನು.

೬೭. ಬಳಿಕ ಇತರ ತೀರ್ಥಗಳನ್ನೂ ಸ್ಕಂದಸ್ವಾಮಿಯನ್ನೂ ಯಥಾ ಯೋಗ್ಯವಾಗಿ ಸತ್ಕರಿಸಿ ಬೀಳುಕೊಟ್ಟನು. ಅರ್ಜುನಾ! ಮುನ್ನ ಈ ಕ್ಷೇತ್ರವು ಗುಪ್ತವಾಗುವುದಕ್ಕೆ ಕಾರಣವಾದ ವೃತ್ತಾಂತವು ಇಂತು ನಡೆಯಿತು.

೬೮. ಎಲೈ ಅರ್ಜುನನೆ! ಈ ಕ್ಷೇತ್ರಕ್ಕೆ ಮತ್ತೂ ಪ್ರಸಿದ್ಧಿಯನ್ನು ಸಂಪಾದಿಸಲೆಳಸಿ ಕೆಲವು ಅಪ್ಸರಸ್ತ್ರೀಯರನ್ನು ನಾನು ಕಳಿಸಿದೆನು. ಮೊಸಳೆಗಳ ಆಕೃತಿಯುಳ್ಳ ಅವರನ್ನು ನೀನು ವಿಮೋಚನೆಮಾಡಿದೆ.

೬೯. ನಾನಾ ರೂಪಗಳಿಂದ ಸಕಲ ಧರ್ಮಗಳನ್ನೂ ನೆಲೆಗೊಳಿಸುವುದಕ್ಕೆ ಪರಮಾತ್ಮನಾದ ಶ್ರೀಕೃಷ್ಣನೂ ನೀನೂ ಸಂಸಾರದಲ್ಲಿ ಜನ್ಮವನ್ನು ಪಡೆದಿರುವಿರಿ. ನೀವೇ ಧನ್ಯರು.

ತದಿದಂ ವರ್ಣಿತಂ ತುಭ್ಯಂ ಸರ್ವತೀರ್ಥಫಲಂ ಮಹತ್ ।
ಶ್ರುತ್ವೈತದಾದಿತಃ ಪೂರ್ವಂ ಪುಮಾನ್ ಪಾಪೈಃ ಪ್ರಮುಚ್ಯತೇ ॥ ೭೦ ॥

ಸೂತ ಉವಾಚ :–

ಶ್ರುತ್ವೇತಿ ವಿಜಯೋ ಧೀಮಾನ್ಪ್ರಶಶಂಸ ಸುವಿಸ್ಮಿತಃ ।
ವಿಸೃಷ್ಟೋ ನಾರದಾದ್ಯೈಶ್ಚ ದ್ವಾರಕಾಂ ಪ್ರತಿ ಜಗ್ಮಿವಾನ್ ॥ ೭೧ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪ್ರಥಮೇ ಮಾಹೇಶ್ವರಖಂಡೇ ಕೌಮಾರಿಕಾಖಂಡೇ
"ಮಹೀಸಾಗರ ಮಾಹಾತ್ಮ್ಯವರ್ಣನೇ ಅರ್ಜುನ ತೀರ್ಥಯಾತ್ರಾಪರಿಸಮಾಪ್ತಿ
ವರ್ಣನಂ"ನಾಮ ಅಷ್ಟಪಂಚಾಶತ್ತಮೋಽಧ್ಯಾಯಃ

---

೭೦. ಇಂತು ಈ ಕ್ಷೇತ್ರದ ಸಕಲ ತೀರ್ಥಗಳ ಉತ್ತಮ ಫಲವನ್ನೂ ವಿವರಿಸಿರುವೆನು. ಇದನ್ನು ಮೊದಲಿನಿಂದ ಸಮಗ್ರವಾಗಿ ಕೇಳಲು ಮನುಷ್ಯನು ಸಕಲ ಪಾಪಗಳನ್ನೂ ಕಳೆದುಕೊಳ್ಳುವನು.

೭೧. ಸೂತಪೌರಾಣಿಕನು ಹೇಳುತ್ತಾನೆ:—ಈ ವೃತ್ತಾಂತವನ್ನೆಲ್ಲ ಕೇಳಿ ಅರ್ಜುನನು ವಿಸ್ಮಯಗೊಂಡು ಎಲ್ಲರನ್ನೂ ಪ್ರಶಂಸೆಮಾಡಿದನು. ಬಳಿಕಲವನು ನಾರದಾದಿ ಮಹರ್ಷಿಗಳಿಂದ ಬೀಳ್ಕೊಳ್ಳಲ್ಪಟ್ಟವನಾಗಿ ದ್ವಾರಕೆಯನ್ನು ಕುರಿತು ತೆರಳಿದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಎರಡನೆಯ ಕೌಮಾರಿಕಾಖಂಡದಲ್ಲಿ
"ಮಹೀಸಾಗರಮಾಹಾತ್ಮ್ಯ — ಅರ್ಜುನ ತೀರ್ಥಯಾತ್ರಾ ಪರಿಸಮಾಪ್ತಿವರ್ಣನ"ವೆಂಬ
ಐವತ್ತೆಂಟನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥೈಕೋನಷಷ್ಟಿತಮೋಽಧ್ಯಾಯಃ

### ಬರ್ಬರೀಕೋಪಾಖ್ಯಾನೇ ಘಟೋತ್ಕಚಸ್ಯ ಪ್ರಾಗ್ಜ್ಯೋತಿಷಪುರಂ ಪ್ರತಿಗಮನವರ್ಣನಂ

ಶೌನಕ ಉವಾಚ:—

ಅತ್ಯದ್ಭುತಮಿದಂ ಸೂತ ಗುಪ್ತ ಕ್ಷೇತ್ರಸ್ಯ ಪಾವನಂ ।
ಮಹನ್ಮಾಹಾತ್ಮ್ಯಮತುಲಂ ಕೀರ್ತಿತಂ ಹರ್ಷವರ್ಧನಂ ॥ ೧ ॥
ಪುನರ್ಯತ್ಸಿದ್ಧಲಿಂಗಸ್ಯ ಪೂರ್ವಂ ಮಾಹಾತ್ಮ್ಯಕೀರ್ತನೇ ।
ಇತ್ಯುಕ್ತಂ ಯತ್ಪ್ರಸಾದೇನ ಸಿದ್ಧಮಾತುಸ್ತು ಸೇತ್ಸ್ಯತಿ ॥ ೨ ॥
ವಿಜಯೋ ನಾಮ ಪುಣ್ಯಾತ್ಮಾ ಸಾಹಾಯ್ಯಾಚ್ಚಂಡಿಲಸ್ಯ ಚ ।
ಕೋಽಸ್ಸಾ ಚಂಡಿಲೋ ನಾಮ ವಿಜಯೋನಾಮಕಸ್ತಥಾ ॥ ೩ ॥
ಕಥಂ ಚ ಪ್ರಾಪ್ತವಾನ್ಸಿದ್ಧಿಂ ಸಿದ್ಧಮಾತುಃ ಪ್ರಸಾದತಃ ।
ಏತದಾಚಕ್ಷ್ವ ತತ್ತ್ವೇನ ಶ್ರೋತುಂ ಕೌತೂಹಲಂ ಹಿ ನಃ ॥ ೪ ॥
ಸತಾಂ ಚರಿತ್ರಶ್ರವಣೇ ಕೌತುಕಂ ಕಸ್ಯ ನೋ ಭವೇತ್ ।

ಉಗ್ರಶ್ರವಾ ಉವಾಚ:—

ಸಾಧು ಪೃಷ್ಟಮಿದಂ ವಿಪ್ರಾ ದೂರಾಂತರಿತಮದ್ಭುತ ॥ ೫ ॥
ಶ್ರೂಯತಾಂ ದ್ವೈಪಾಯನಮುಖಾತ್ಕಥಾಂ ವಕ್ಷ್ಯಾಮಿ ಚಾತ್ರ ವಃ ।
ಪುರಾ ದ್ರುಪದರಾಜಸ್ಯ ಪುತ್ರೀಮಾಸಾದ್ಯ ಪಾಂಡವಾಃ ॥ ೬ ॥

---

## ಕನ್ನಡದ ಅನುವಾದ

### ಬರ್ಬರೀಕೋಪಾಖ್ಯಾನ — ಘಟೋತ್ಕಚನ ಪ್ರಾಗ್ಜ್ಯೋತಿಷಪುರಗಮನದ ವರ್ಣನ

೧. ಶೌನಕನು ಕೇಳುತ್ತಾನೆ:— ಎಲೈ ಸೂತನೆ! ಈಗ ನೀನು ವರ್ಣಿಸಿರುವ ಗುಪ್ತಕ್ಷೇತ್ರದ ಅಪಾರ ಮಾಹಾತ್ಮ್ಯವು ಅತ್ಯದ್ಭುತವೂ ಪರಮ ಪಾವನವೂ, ನಿರ್ದ್ವಂದ್ವವೂ ಭಕ್ತರಿಗೆ ಆನಂದವರ್ಧಕವೂ ಆಗಿರುವುದು.

೨-೩. ಮುನ್ನ ಸಿದ್ಧಲಿಂಗದ ಮಾಹಾತ್ಮ್ಯವನ್ನು ಹೇಳುತ್ತಿರುವಾಗ ಸಿದ್ಧಮಾತೆಯ ಪ್ರಸಾದದಿಂದಲೂ ಚಂಡಿಲನ ಸಹಾಯದಿಂದಲೂ ವಿಜಯನೆಂಬ ಪುಣ್ಯಾತ್ಮನೊಬ್ಬನು ಸಿದ್ಧಿಯನ್ನು ಹೊಂದಿದನೆಂದು ನಿರೂಪಿಸಿದೆಯಲ್ಲವೆ. ಆ ಚಂಡಿಲನು ಯಾರು? ವಿಜಯನೆಂಬ ಹೆಸರುಳ್ಳವನಾದರೂ ಯಾರು?

೪. ಆತನು ಸಿದ್ಧಿಮಾತೆಯ ಪ್ರಸಾದದಿಂದ ಹೇಗೆ ಸಿದ್ಧಿಯನ್ನು ಹೊಂದಿದನು? ಇದನ್ನೆಲ್ಲ ವಿಸ್ತಾರವಾಗಿ ತಿಳಿಸುವವನಾಗು. ನಮಗೆ ಕೇಳಬೇಕೆಂಬ ಕುತೂಹಲವು ಅತ್ಯಧಿಕವಾಗಿರುವುದು.

೫-೬. ಸಚ್ಚರಿತ್ರೆಗಳನ್ನು ಕೇಳುವುದರಲ್ಲಿ ಯಾರಿಗೆತಾನೆ ಕೌತುಕವುಂಟಾಗುವುದಿಲ್ಲ?'' ಸೂತಪೌರಾಣಿಕನು ಹೇಳುತ್ತಾನೆ:—''ಎಲೈ ಬ್ರಾಹ್ಮಣೋತ್ತಮರೆ! ನೀವು ಪ್ರಶ್ನೆಮಾಡಿದುದು ಸಾಧುವಾಗಿದೆ. ಬಹಳ ಕಾಲದ ಹಿಂದೆ ವ್ಯಾಸರ

ಧೃತರಾಷ್ಟ್ರಮತೇ ಪಶ್ಚಾದಿಂದ್ರಪ್ರಸ್ಥಂ ನ್ಯವೇಶಯನ್ ॥ ೭ ॥
ರಕ್ಷಿತಾ ವಾಸುದೇವೇನ ಕದಾಚಿತ್ತತ್ರ ಪಾಂಡವಾಃ ।
ಉಪವಿಷ್ಟಾಃ ಸಭಾಮಧ್ಯೇ ಕಥಾಶ್ಚಕ್ರುಃ ಪೃಥಗ್ವಿಧಾಃ ॥ ೮ ॥
ದೇವರ್ಷಿಪಿತೃಭೂತಾನಾಂ ರಾಜ್ಞಾಂ ಚಾಪಿ ಪ್ರಕೀರ್ತನೇ ।
ಕ್ರಿಯಮಾಣೇಽಥ ತತ್ರಾಗಾದ್ಭೀಮಪುತ್ರೋ ಘಟೋತ್ಕಚಃ ॥ ೯ ॥
ತಂ ದೃಷ್ಟ್ವಾ ಭ್ರಾತರಃ ಪಂಚ ವಾಸುದೇವಶ್ಚ ವೀರ್ಯವಾನ್ ।
ಉತ್ಥಾಯ ಸಹಸಾ ಪೀಠಾದಾಲಿಲಿಂಗುರ್ಮುದಾ ಯುತಾಃ ॥ ೧೦ ॥
ಸ ಚ ತಾನ್ ಪ್ರಣತಃ ಪ್ರಹ್ವೋ ವವಂದೇ ಭೀಮನಂದನಃ ।
ಸಾಶಿಷಂ ಚ ತತೋ ರಾಜ್ಞಾ ಸ್ವೋತ್ಸಂಗ ಉಪವೇಶಿತಃ ।
ಆಘ್ರಾಯ ಸ್ನೇಹತೋ ಮೂರ್ಧ್ನಿ ಪ್ರೋಕ್ತಶ್ಚ ಜನಸಂಸದಿ ॥ ೧೧ ॥

ಯುಧಿಷ್ಠಿರ ಉವಾಚ :—

ಕುತ ಆಗಮ್ಯತೇ ಪುತ್ರ ಕ್ವಚಾಯಂ ವಿಹೃತಸ್ತ್ವಯಾ ।
ಕಾಲಃ ಕ್ವಚಿತ್ಸುಖಂ ರಾಜ್ಯಂ ಕುರುಷೇ ಮಾತುಲಂ ತವ ॥ ೧೨ ॥

---

ಮುಖದಿಂದ ಕೇಳಿದ ಕಥೆಯನ್ನು ಈ ವಿಷಯದಲ್ಲಿ ನಿಮಗೆ ಹೇಳುವೆನು. ಪೂರ್ವದಲ್ಲಿ ಪಂಚಪಾಂಡವರು ದ್ರೌಪದಿಯನ್ನು ವಿವಾಹಮಾಡಿಕೊಂಡಮೇಲೆ ಧೃತರಾಷ್ಟ್ರನ ಆಜ್ಞಾನುಸಾರವಾಗಿ ಇಂದ್ರಪ್ರಸ್ಥ ನಗರದಲ್ಲಿ ವಾಸಿಸುತ್ತಿದ್ದರು.

೮–೯. ವಸುದೇವನ ಮಗನಾದ ಶ್ರೀ ಕೃಷ್ಣನಿಂದ ರಕ್ಷಿಸಲ್ಪಟ್ಟವರಾಗಿ ಒಮ್ಮೆ ಪಾಂಡವರು ಸಭೆಯಲ್ಲಿ ಕುಳಿತು ನಾನಾವಿಧಗಳಾದ ಕಥೆಗಳಿಂದ ಕಾಲ ವನ್ನು ಕಳೆಯುತ್ತಿದ್ದರು. ದೇವತೆಗಳು, ಮಹರ್ಷಿಗಳು ಮತ್ತು ತಮ್ಮ ಪೂರ್ವಿಕ ರಾದ ರಾಜರುಗಳ ವಿವಿಧ ಕಥೆಗಳನ್ನು ಹೇಳಿಕೊಳ್ಳುತ್ತಿರಲು, ಅಲ್ಲಿಗೆ ಭೀಮ ಸೇನನ ಮಗನಾದ ಘಟೋತ್ಕಚನು ಪ್ರಾಪ್ತನಾದನು.

೧೦. ಅವನನ್ನು ಕಂಡು ಪಂಚಪಾಂಡವರೂ ಬಲಶಾಲಿಯಾದ ವಾಸು ದೇವನೂ ಸಂಭ್ರಮದಿಂದ ತಮ್ಮ ಆಸನಗಳನ್ನು ಬಿಟ್ಟೆದ್ದು ಆಲಿಂಗಿಸಿಕೊಂಡರು.

೧೧. ಅವನೂ ಕೂಡ ದೀನನಾಗಿ ಅವರೆಲ್ಲರಿಗೂ ಸಾಷ್ಟಾಂಗ ನಮಸ್ಕಾರ ವನ್ನು ಮಾಡಿದನು. ಬಳಿಕ ರಾಜನಾದ ಯುಧಿಷ್ಠಿರನು ಅವನಿಗೆ ಆಶೀರ್ವಾದ ವನ್ನು ಮಾಡಿ ತನ್ನ ತೊಡೆಯ ಮೇಲೆ ಕುಳ್ಳಿರಿಸಿಕೊಂಡು ವಾತ್ಸಲ್ಯದಿಂದ ತಲೆಯನ್ನು ಮೂಸಿನೋಡುತ್ತ ಸಭಾಮಧ್ಯದಲ್ಲಿ ಅವನನ್ನು ಕುರಿತು ಇಂತೆಂದನು.

೧೨. ಯುಧಿಷ್ಠಿರನು ಹೇಳುತ್ತಾನೆ:—"ಮಗನೆ! ಎಲ್ಲಿಂದ ಬರುತ್ತಿರುವೆ? ಇಷ್ಟು ಕಾಲವೂ ಎಲ್ಲಿ ವಿಹರಿಸುತ್ತಿದ್ದೆ? ನಿನ್ನ ಸೋದರಮಾವನ ರಾಜ್ಯವನ್ನು ಸುಖವಾಗಿ ಆಳುತ್ತಿರುವೆಯ?

ಕಂಚಿದ್ದೇವೇಷು ವಿಪ್ರೇಷು ಗೋಷು ಸಾಧುಷು ಸರ್ವದಾ ।
ಹೈಡಂಬೇ ನಾಪಕುರುಷೇ ಪ್ರಿಯಮೇತದ್ಧರೇಶ್ಚ ನಃ ॥ ೧೩ ॥
ಹಿಡಂಬಸ್ಯ ವನಂ ಸರ್ವಂ ತಸ್ಯ ಯೇ ಸೈನ್ಯರಾಕ್ಷಸಾಃ ।
ಪಾಲ್ಯಮಾನಾಸ್ತ್ವಯಾ ಸಾಧೋ ವರ್ಧಂತೇ ಜನಕ್ಷೇಮಕಾಃ ॥ ೧೪ ॥
ಕಚ್ಚಿನ್ನಂದತಿ ತೇ ಮಾತಾ ಭೃಶಂ ನಃ ಪ್ರಿಯಕಾರಿಣೀ ।
ಕನ್ಯೈವ ಯಾ ಪುರಾ ಭೀಮಂ ತ್ಯಕ್ತ್ವಾ ಮಾನಂ ಪತಿಂ ಶ್ರಿತಾ ॥ ೧೫ ॥
ಇತಿ ಪೃಷ್ಟೋ ಧರ್ಮರಾಜ್ಞಾ ಸ್ಮಯನ್ಹೈಡಂಬಿರಬ್ರವೀತ್ ।
ಹತೇ ತಸ್ಮಿನ್ದುರಾಚಾರೇ ಮಾತುಲೇಽಸ್ಮಿ ನಿಯೋಜಿತಃ ॥ ೧೬ ॥
ತದ್ರಾಜ್ಯಂ ಶಾಸನೇ ಸ್ಥಾಪ್ಯ ದುಷ್ಟಾನ್ನಿಘ್ನಂಶ್ಚರಾಮ್ಯಹಂ ।
ಮಾತಾ ಕುಶಲಿನೀ ದೇವೀ ತಪೋ ದಿವ್ಯಮುಪಾಶ್ರಿತಾ ॥ ೧೭ ॥
ಮಾಮುವಾಚ ಸದಾ ಪುತ್ರ ಪಿತ್ರೂಣಾಂ ಭಕ್ತಿಕೃದ್ಭವ ।
ಸೋಽಹಂ ಮಾತುರ್ವಚಃ ಶ್ರುತ್ವಾ ಮೇರುಪಾದಾತ್ಸಮಾಗತಃ ॥ ೧೮ ॥

---

೧೩. ಎಲೈ ಘಟೋತ್ಕಚನೆ! ನೀನೆಂದೂ ದೇವತೆಗಳಿಗಾಗಲಿ, ಬ್ರಾಹ್ಮಣರಿಗಾಗಲಿ, ಗೋವುಗಳಿಗಾಗಲಿ, ಸಾಧುಗಳಿಗಾಗಲಿ ಅಪಕಾರವನ್ನು ಮಾಡುತ್ತಿಲ್ಲವಷ್ಟೆ. ಇದೇ ನಮಗೂ ಶ್ರೀಕೃಷ್ಣನಿಗೂ ಪ್ರೀತಿಕರವಾದ ಆಚಾರವು.

೧೪. ಎಲೈ ಸಾಧುವೆ! ಹಿಡಿಂಬಾಸುರನ ವನವೆಲ್ಲವೂ ಅವನ ಸೈನ್ಯದ ರಾಕ್ಷಸರೊಡನೆ ನಿನ್ನಿಂದ ಪಾಲಿತವಾಗಿರಲು, ಅವರು ಜನರಿಗೆ ಕ್ಷೇಮಗಳನ್ನು ಮಾತ್ರ ಉಂಟುಮಾಡುತ್ತಿರುವರಷ್ಟೆ.

೧೫. ನಮಗೆ ಅತ್ಯಂತ ಹಿತವನ್ನುಂಟುಮಾಡಿದ ನಿನ್ನ ತಾಯಿಯು ಸಂತೋಷದಿಂದಿರುವಳೆ? ಆಕೆಯು ಮುನ್ನ ಸ್ತ್ರೀಯರಿಗೆ ಸಹಜವಾದ ಲಜ್ಜೆಯನ್ನೇ ಬಿಟ್ಟು ಭೀಮಸೇನನನ್ನೇ ಕನ್ಯೆಯಾಗಿ ವರಿಸಿದಳು.''

೧೬. ಇಂತು ಧರ್ಮರಾಜನು ಕೇಳುತ್ತಿರಲು ಮುಗುಳ್ನಗೆಯಿಂದೊಡಗೂಡಿದವನಾಗಿ ಘಟೋತ್ಕಚನು ಹೇಳತೊಡಗಿದನು. ''ನನ್ನ ಸೋದರಮಾವನಾದ ದುರಾಚಾರಿಯಾದ ಹಿಡಿಂಬಾಸುರನು ಸಂಹೃತನಾಗಲು ಅವನ ರಾಜ್ಯದಲ್ಲಿ ಸ್ಥಾಪಿಸಲ್ಪಟ್ಟವನಾಗಿರುವೆನು.

೧೭. ಆ ರಾಜ್ಯವನ್ನೆಲ್ಲ ನನ್ನ ಆಳ್ವಿಕೆಯಲ್ಲಿ ತೆಗೆದುಕೊಂಡು ದುಷ್ಟರನ್ನೆಲ್ಲ ಸಂಹರಿಸುತ್ತ ರಾಜ್ಯಭಾರವನ್ನು ನಡೆಸುತ್ತಿರುವೆನು. ನನ್ನ ತಾಯಿಯೂ ಕ್ಷೇಮದಿಂದಿರುವಳು. ಆಕೆಯಿಗ ದಿವ್ಯವಾದ ತಪಸ್ಸನ್ನು ಮಾಡುತ್ತಿರುವಳು.

೧೮--೧೯. ಆಕೆಯು ನನ್ನನ್ನು ಕುರಿತು ''ಎಲೈ ಪುತ್ರನೆ! ನೀನು ಯಾವಾಗಲೂ ತಂದೆಯರಲ್ಲಿ ಭಕ್ತಿಭಾವದಿಂದಿರು'' ಎಂದು ಆದೇಶವನ್ನು ಮಾಡಿರುವಳು. ಆದುದರಿಂದ ಆಕೆಯ ಮಾತಿಗೆ ಅನುಸಾರವಾಗಿ ಭಕ್ತಿಯಿಂದ

ಪ್ರಣಾಮಾಯೈವ ಭವತಾಂ ಭಕ್ತಿಪ್ರಹ್ವೇಣ ಚೇತಸಾ ।
ಆತ್ಮಾನಂ ಚ ಮಹತ್ಯರ್ಥೇ ಕಸ್ಮಿಂಶ್ಚಿತ್ತು ನಿಯೋಜಿತಂ ।
ಭವದ್ಭಿರಹಮಿಚ್ಛಾಮಿ ಫಲಂ ಯಸ್ಮಾದಿದಂ ಮಹತ್ ॥ ೧೯ ॥
ಯದಾಜ್ಞಾಪಾಲನಂ ಪುತ್ರಃ ಪಿತ್ರೋಃ ಣಾಂ ಸರ್ವದಾಚರೇತ್ ।
ಅಥೋರ್ಧ್ವಲೋಕಾನ್ಸ ಜಯೇದಿಹ ಜಾಯೇತ ಕೀರ್ತಿಮಾನ್ ॥ ೨೦ ॥

ಸೂತ ಉವಾಚ :–

ಇತ್ಯುಕ್ತವಂತಂ ತಂ ರಾಜಾ ಪರಿರಭ್ಯ ಪುನಃ ಪುನಃ ।
ಉವಾಚ ಧರ್ಮರಾಟ್ಪುತ್ರಮಾನಂದಾಶ್ರುಃ ಸಗದ್ಗದಂ ॥ ೨೧ ॥
ತ್ವಮೇವ ನೋ ಭಕ್ತಿಕಾರೀ ಸಹಾಯಶ್ಚಾಪಿ ವರ್ತಸೇ ॥ ೨೨ ॥
ಏತದರ್ಥಂ ಚ ಹೈಡಂಬೇ ಪುತ್ರಾನಿಚ್ಛಂತಿ ಸಾಧವಃ ।
ಇಹಾಮುತ್ರ ತಾರಯಂತೇ ತಾದೃಶಾಶ್ಚಾಪಿ ಪುತ್ರಕಾಃ ॥ ೨೩ ॥
ಅವಶ್ಯಂ ಯಾದೃಶೀ ಮಾತಾ ತಾದೃಶಸ್ತನಯೋ ಭವೇತ್ ।
ಮಾತಾ ಚ ತೇ ಭಕ್ತಿಮತೀ ದೃಢಂ ನಸ್ತ್ವಂ ಚ ತಾದೃಶಃ ॥ ೨೪ ॥

---

ಬಾಗಿದ ಚಿತ್ತವುಳ್ಳವನಾಗಿ ನಿಮಗೆ ನಮಸ್ಕರಿಸಲು ಈಗ ಮೇರುಪರ್ವತದ ಸಮೀಪದಿಂದ ಬಂದಿರುವೆನು. ನನ್ನನ್ನು ಹೆಚ್ಚಿನದಾದ ಯಾವುದಾದರೂ ಕೆಲಸದಲ್ಲಿ ನೀವು ನಿಯೋಜಿಸಿರಿ. ಅದನ್ನು ಮಾಡುವುದರಿಂದ ನನಗೆ ಮಹತ್ಫಲವು ಲಭಿಸುವುದು.

೨೦. ಯಾವ ಮಗನು ತಂದೆ ತಾಯಿಗಳ ಆಜ್ಞೆಗಳನ್ನು ಪಾಲಿಸುವನೊ, ಅವನು ಮೇಲಿನ ಸಕಲ ಲೋಕಗಳನ್ನೂ ಜಯಿಸುವುದಲ್ಲದೆ ಈ ಲೋಕದಲ್ಲಿಯೂ ಕೀರ್ತಿಯನ್ನು ಪಡೆಯುವನಲ್ಲವೆ."

೨೧. ಸೂತನು ಹೇಳುತ್ತಾನೆ:—ಇಂತೆಂದ ಮಗನನ್ನು ಧರ್ಮರಾಜನು ಮತ್ತೆ ಮತ್ತೆ ಬಿಗಿದಪ್ಪಿಕೊಂಡು ಆನಂದಬಾಷ್ಪಗಳನ್ನು ಸುರಿಸುತ್ತ ಗದ್ಗದಿತ ಕಂಠನಾಗಿ ಹೇಳತೊಡಗಿದನು.

೨೨. "ನೀನೇ ನಮ್ಮಲ್ಲಿ ಭಕ್ತಿಯುಕ್ತನೂ ಸಹಾಯಕನೂ ಆಗಿರುವೆ.

೨೩. ಎಲೈ ಘಟೋತ್ಕಚನೆ! ಇದಕ್ಕಾಗಿಯೇ ಸಾಧುಜನರು ಪುತ್ರಲಾಭವನ್ನು ಆಶಿಸುವರು. ಅಂತಹ ಪುತ್ರರು ತಮ್ಮ ತಾಯಿತಂದೆಗಳನ್ನು ಇಹಲೋಕದಲ್ಲಿಯೂ ಪರಲೋಕದಲ್ಲಿಯೂ ಕಡೆಹಾಯಿಸುವರು.

೨೪. ನಿಜವಾಗಿಯೂ ತಾಯಿಯ ಗುಣಗಳಿಗನುಸಾರವಾಗಿಯೇ ಮಗನೂ ಹುಟ್ಟುವನು. ನಿನ್ನ ತಾಯಿಯು ನಮ್ಮಲ್ಲಿ ದೃಢವಾದ ಭಕ್ತಿಯುಳ್ಳವಳಾದುದರಿಂದಲೇ ನೀನೂ ಅಂತಹವನೇ ಆಗಿರುವೆ.

ಅಹೋ ಸದುಷ್ಕರಂ ದೇವೀ ಕುರುತೇ ಮೇ ಪ್ರಿಯಾ ವಧೂಃ ।
ಯಾ ಭರ್ತೃಶ್ರಿಯಮುಲ್ಲಂಘ್ಯ ತಪ ಏವ ಸಮಾಶ್ರಿತಾ ॥ ೨೫ ॥
ನೂನಂ ಕಾಮೇನ ಭೋಗೈರ್ವಾ ಕೃತ್ಯಂ ವಧ್ವಾ ನ ಮೇ ಮನಾಕ್ ।
ಯಾ ಪುತ್ರಸುಖಮನ್ವೀಕ್ಷ್ಯ ಪರಲೋಕಾರ್ಥಮಾಶ್ರಿತಾ ॥ ೨೬ ॥
ದುಷ್ಕುಲೀನಾಪಿ ಯಾ ಭಕ್ತಾ ಸೂತೇಽಪತ್ಯಂ ಚ ಭಕ್ತಿಮತ್ ।
ಕುಲೀನಮೇವ ತನ್ಮನ್ಯೇ ಮಮೇದಂ ಮತಮುತ್ತಮಂ ॥ ೨೭ ॥
ಏವಂ ಬಹೂನಿ ವಾಕ್ಯಾನಿ ತಾನಿ ತಾನಿ ವದನ್ನೃಪಃ ।
ಧರ್ಮರಾಜಃ ಸಮಾಭಾಷ್ಯ ಕೇಶವಂ ವಾಕ್ಯಮಬ್ರವೀತ್ ॥ ೨೮ ॥
ಪುಂಡರೀಕಾಕ್ಷ ಜಾನಾಸಿ ಯಥಾ ಭೀಮಾದಭೂದಯಂ ।
ಜಾತಮಾತ್ರಸ್ತು ಯಶ್ಚಾಸೀದ್ಯೌವನಸ್ಥೋ ಮಹಾಬಲಃ ॥ ೨೯ ॥
ಅಷ್ಟಾನಾಂ ದೇವಯೋನೀನಾಂ ಯತೋ ಜನ್ಮ ಚ ಯೌವನಂ ।
ಸದ್ಯ ಏವ ಭವೇತ್ತಸ್ಮಾತ್ಸದ್ಯೋಽಸ್ಯಾಸೀಚ್ಚ ಯೌವನಂ ॥ ೩೦ ॥

---

೨೫. ಅಹೊ! ಪತಿಯ ಐಶ್ವರ್ಯವನ್ನೂ ಕಡೆಗಂಡು ತಪಸ್ಸನ್ನೇ ಆಶ್ರಯಿಸಿರುವ ಪ್ರಿಯಳಾದ ನನ್ನ ನಾದಿನಿಯು ಅತ್ಯಂತ ದುಷ್ಕರವಾದ ಕಾರ್ಯವನ್ನು ಮಾಡುತ್ತಿರುವಳು.

೨೬. ಖಂಡಿತವಾಗಿಯೂ ಈಕೆಯು ತಪಸ್ಸು ಕಾಮುಕ್ಯಾಗಲಿ, ಭೋಗಪ್ರಾಪ್ತಿಗಾಗಲಿ, ಕೇವಲ ಸನಗಾಗಲಿ ನಡೆಯುತ್ತಿರುವುದಿಲ್ಲ. ಆದರೆ ಪುತ್ರಲಾಭದ ಸುಖವನ್ನು ಅನುಭವಿಸಿ ಈಗ ತನ್ನ ಪರಲೋಕದ ಸಾಧನೆಯನ್ನು ಮಾಡಿಕೊಳ್ಳುತ್ತಿರುವಳು.

೨೭. ಯಾವ ಸ್ತ್ರೀಯು ದುಷ್ಕುಲಪ್ರಸೂತಳಾದರೂ ಭಕ್ತಿಯುಕ್ತಳಾಗಿರುವಳೊ, ಭಕ್ತಿಯುಕ್ತನಾದ ಮಗನನ್ನು ಪಡೆಯುವಳೊ ಅವಳು ಕುಲೀನಳೆಂದೇ ನಾನು ತಿಳಿಯುವೆನು. ಇದೇ ನನ್ನ ಉತ್ತಮ ಸಿದ್ಧಾಂತವು.''

೨೮. ಈ ವಿಧವಾದ ಅನೇಕ ವಾಕ್ಯಗಳನ್ನಾಡುತ್ತ ಧರ್ಮರಾಜನು ಶ್ರೀಕೃಷ್ಣನನ್ನು ಕುರಿತು ಮಾತನಾಡತೊಡಗಿದನು.

೨೯. ''ಎಲೈ ಪುಂಡರೀಕಾಕ್ಷನೆ! ಇವನು ಭೀಮನ ದೆಸೆಯಿಂದ ಹುಟ್ಟಿದ ಬಗೆಯನ್ನು ನೀನು ಬಲ್ಲೆ. ಇವನು ಹುಟ್ಟಿದ ಕ್ಷಣದಲ್ಲಿಯೇ ಯೌವನವಂತನೂ ಮಹಾಬಲಶಾಲಿಯೂ ಆದನು.

೩೦. ಎಂಟು ದೇವಯೋನಿಗಳಲ್ಲಿ ಜನ್ಮವನ್ನು ಪಡೆದವರಿಗೆ ಏಕಕಾಲದಲ್ಲಿಯೇ ಜನ್ಮವೂ ಯೌವನವೂ ಸಂಭವಿಸುವುದರಿಂದ ಇವನಿಗೂ ಹುಟ್ಟಿದಾಗಲೇ ಯೌವನವು ಪ್ರಾಪ್ತವಾಯಿತು.

ತದಸ್ಯೋಚಿತದಾರಾರ್ಥೇ ಸದಾ ಚಿಂತಾಸ್ತಿ ಕೃಷ್ಣ ಮೇ ।
ಉಚಿತಂ ಬತ ಹೈಡಂಬೇಃ ಕ್ವ ಕಲತ್ರಂ ಕರೋಮ್ಯಹಂ ॥ ೩೧ ॥
ತದ್ಭವಾನ್ಕೃಷ್ಣ ಸರ್ವಜ್ಞ ತ್ರಿಲೋಕೀಮಪಿ ವೇತ್ಸಿ ಚ ।
ಹೈಡಂಬೇರುಚಿತಾಂ ದಾರಾನ್ವಕ್ತುಮರ್ಹಸಿ ಯಾದವ ॥ ೩೨ ॥
ಏವಮುಕ್ತೋ ಧರ್ಮರಾಜ್ಞಾ ಕ್ಷಣಂ ಧ್ಯಾತ್ವಾ ಜನಾರ್ದನಃ ।
ಧರ್ಮರಾಜಮಿದಂ ವಾಕ್ಯಂ ಪದಾಂತರಿತಮಬ್ರವೀತ್ ॥ ೩೩ ॥
ಅಸ್ತಿ ರಾಜನ್ಪ್ರವಕ್ಷ್ಯಾಮಿ ದಾರಾನಸ್ಯೋಚಿತಾಂ ಶುಭಾಂ ।
ಸಾಂಪ್ರತಂ ಸಂಸ್ಥಿತಾ ರಮ್ಯೇ ಪ್ರಾಗ್ಜ್ಯೋತಿಷಪುರೇ ವರೇ ॥ ೩೪ ॥
ಸಾ ಚ ಪುತ್ರೀ ಮುರೋಃ ಪಾರ್ಥ ದೈತ್ಯಸ್ಯಾದ್ಭುತಕರ್ಮಣಃ ।
ಯೋಽಸೌ ನರಕದೈತ್ಯಸ್ಯ ಪ್ರಾಣತುಲ್ಯಃ ಸಖಾಭವತ್ ॥ ೩೫ ॥
ಸ ಚ ಮೇ ನಿಹತೋ ಘೋರಃ ಪಾಶದುರ್ಗಸಮನ್ವಿತಃ ।
ನರಕಶ್ಚ ದುರಾಚಾರಸ್ತ್ವಮೇತದ್ವೇತ್ಸಿ ಸರ್ವಶಃ ॥ ೩೬ ॥

---

೩೧. ಎಲೈ ಕೃಷ್ಣನೆ! ಆದುದರಿಂದ ಇವನಿಗೆ ತಕ್ಕ ಹೆಣ್ಣನ್ನು ನೋಡಬೇಕೆಂಬ ಚಿಂತೆಯು ನನಗೆ ಯಾವಾಗಲೂ ಉಂಟಾಗುತ್ತಿರುವುದು. ಈ ಘಟೋತ್ಕಚನಿಗೆ ಉಚಿತಳಾದ ಪತ್ನಿಯನ್ನು ಎಲ್ಲಿ ಹುಡುಕಿ ತರಲಿ?

೩೨. ಓ ವಾಸುದೇವ! ನೀನು ಸರ್ವಜ್ಞನಾಗಿರುವೆ. ಮೂರು ಲೋಕಗಳ ವಿಷಯಗಳೆಲ್ಲವನ್ನೂ ತಿಳಿದಿರುವೆ. ಹಿಡಿಂಬಿಯ ಮಗನಾದ ಇವನಿಗೆ ಸದೃಶಳಾದ ಹೆಂಡತಿಯೆಲ್ಲಿರುವಳೆಂಬುದನ್ನು ಹೇಳಲು ನೀನೇ ಅರ್ಹನು.''

೩೩. ಧರ್ಮನಂದನನು ಇಂತು ಹೇಳಲು ಶ್ರೀಕೃಷ್ಣನು ಕ್ಷಣಕಾಲ ಧ್ಯಾನದಲ್ಲಿದ್ದುಕೊಂಡು ಮೆಲ್ಲಗೆ ಹೇಳತೊಡಗಿದನು.

೩೪. ''ಎಲೈ ರಾಜನೆ! ಇವನಿಗೆ ಉಚಿತಳಾದ ಪತ್ನಿಯೊಬ್ಬಳಿರುವಳು. ಶುಭಾಂಗಿಯಾದ ಅವಳ ವಿಷಯವನ್ನು ಹೇಳುವೆನು. ಈಗ ಅವಳು ಮನೋಹರವೂ ಉತ್ತಮವೂ ಆದ ಪ್ರಾಗ್ಜ್ಯೋತಿಷವೆಂಬ ಪಟ್ಟಣದಲ್ಲಿ ವಾಸಿಸುತ್ತಿರುವಳು.

೩೫. ಧರ್ಮರಾಜ! ಅವಳು ಮುರುವೆಂಬ ಅದ್ಭುತ ಪರಾಕ್ರಮಿಯಾದ ರಾಕ್ಷಸೇಂದ್ರನ ಮಗಳು. ಆತನು ನರಕಾಸುರನಿಗೆ ಪ್ರಾಣಸಮಾನನಾದ ಸ್ನೇಹಿತನೆನಿಸಿಕೊಂಡಿದ್ದನು.

೩೬. ಪಾಶ, ದುರ್ಗಗಳಿಂದ ಅಜೇಯನಾಗಿದ್ದ ಆ ಘೋರ ರಾಕ್ಷಸನು ನನ್ನಿಂದ ಹತನಾದನು. ದುರಾಚಾರಿಯಾದ ನರಕಾಸುರನೂ ಕೂಡ ಸಂಹಾರವನ್ನು ಹೊಂದಿದ ಬಗೆಯನ್ನು ವಿಶದವಾಗಿ ನೀನೇ ಬಲ್ಲೆ.

ತತೋ ಹತೇ ಮುರೌ ದೈತ್ಯೇ ಮಯಾ ತಸ್ಯ ಸುತಾವ್ರಜತ್ ।
ಯೋದ್ಧುಂ ಮಾಮತಿವೀರ್ಯಾತ್ವಾದ್ಘೋರಾ ಕಾಮುಕಟಂಕಟಾ ॥ ೩೭ ॥
ತಾಂ ತತೋಽಹಂ ಮಹಾಯುದ್ಧೇ ಖಡ್ಗಖೇಟಕಧಾರಿಣೀಂ ।
ಅಯೋಧಯಂ ಮಹಾಬಾಣೈಃ ಸುಶಾರ್ಙ್ಗಧನುಷಶ್ಚ್ಯುತೈಃ ॥ ೩೮ ॥
ಖಡ್ಗೇನ ಚಿಚ್ಛೇದ ಬಾಣಾನ್ಮಮ ಸಾ ಚ ಮುರೋಃ ಸುತಾ ।
ಸಮಾಗಮ್ಯ ಚ ಖಡ್ಗೇನ ಗರುಡಂ ಮೂರ್ಧ್ನ್ಯತಾಡಯತ್ ॥ ೩೯ ॥
ಸ ಚ ಮೋಹಸಮಾವಿಷ್ಟೋ ಗರುಡೋಽಭೂದಚೇತನಃ ।
ತತಸ್ತಸ್ಯಾ ವಧಾರ್ಥಾಯ ಮಯಾ ಚಕ್ರಂ ಸಮುದ್ಯತಂ ॥ ೪೦ ॥
ಚಕ್ರಂ ಸಮುದ್ಯತಂ ದೃಷ್ಟ್ವಾ ಮಯಾ ತಸ್ಮಿನ್ರಣಾಜಿರೇ ।
ಕಾಮಾಖ್ಯಾ ನಾಮ ಮಾಂ ದೇವೀ ಪುರಃ ಸ್ಥಿತ್ವಾ ವಚೋಽಬ್ರವೀತ್ ॥ ೪೧ ॥
ನೈನಾಂ ಹಂತುಂ ಭವಾನರ್ಹೋ ರಕ್ಷ್ಯೈತಾಂ ಪುರುಷೋತ್ತಮ ।
ಅಜೇಯತ್ವಂ ಮಯಾ ಹ್ಯಸ್ಯಾ ದತ್ತಂ ಖಡ್ಗಂ ಚ ಖೇಟಕಂ ॥ ೪೨ ॥
ಬುದ್ಧಿರಪ್ರತಿಮಾ ಚಾಪಿ ಶಕ್ತಿಶ್ಚ ಪರಮಾ ರಣೇ ।
ತತಸ್ತ್ವಯಾ ತ್ರಿರಾತ್ರೇಽಪಿ ನ ಜಿತಾಸೀನ್ಮುರೋಃ ಸುತಾ ॥ ೪೩ ॥

---

೩೭–೩೯. ಇಂತು ಮುರುದೈತ್ಯನು ಹತನಾಗಲು ಮಹಾ ಬಲಶಾಲಿಯೂ ಘೋರಳೂ ಆದ ಕಾಮುಕಟಂಕಟೆಯೆಂಬ ಹೆಸರಿನ ಆ ರಾಕ್ಷಸನ ಮಗಳು ನನ್ನೊಡನೆ ಯುದ್ಧಮಾಡಲನುವಾದಳು. ಖಡ್ಗ, ಖೇಟಕಗಳೆಂಬ ಆಯುಧಗಳೊಡನೆ ಯುದ್ಧಸನ್ನದ್ಧಳಾದ ಆಕೆಯೊಡನೆ ನನ್ನ ಉತ್ತಮವಾದ ಶಾರ್ಙ್ಗವೆಂಬ ಬಿಲ್ಲಿನಿಂದ ಬಾಣಗಳನ್ನು ಬಿಡುತ್ತ ಯುದ್ಧಮಾಡಿದೆನು. ಆ ಮುರುಪುತ್ರಿಯು ತನ್ನ ಖಡ್ಗದಿಂದ ನನ್ನ ಬಾಣಗಳೆಲ್ಲವನ್ನೂ ಕತ್ತರಿಸುತ್ತ ಓಡಿಬಂದು ನನ್ನ ವಾಹನವಾದ ಗರುಡನನ್ನು ತಲೆಯಮೇಲೆ ಪ್ರಹರಿಸಿದಳು.

೪೦–೪೧. ಆ ಪ್ರಹಾರದ ಫಲವಾಗಿ ಗರುಡನು ಮೋಹಗೊಂಡವನಾಗಿ ನಿಶ್ಚೇಷ್ಟನಾದನು. ಬಳಿಕ ಅವಳನ್ನು ಸಂಹರಿಸಲು ನಾನು ಚಕ್ರಾಯುಧವನ್ನು ತೆಗೆದೆನು. ನಾನು ಚಕ್ರವನ್ನು ಹಿಡಿದುದನ್ನು ಕಂಡು ಕಾಮಾಖ್ಯೆಯೆಂಬ ದೇವಿಯೊಬ್ಬಳು ಆ ರಣರಂಗದಲ್ಲಿ ನನ್ನೆದುರಿಗೆ ನಿಂತು ಹೇಳಿದಳು.

೪೨. " ಎಲೈ ಪುರುಷೋತ್ತಮನೆ! ಈಕೆಯನ್ನು ಕೊಲ್ಲಲು ನೀನು ಅರ್ಹನಲ್ಲ. ಈಕೆಯನ್ನು ರಕ್ಷಿಸು. ನಾನು ಈಕೆಗೆ ಅಜೇಯತ್ವದ ವರವನ್ನೂ ಈ ಖಡ್ಗ ಖೇಟಕಗಳೆಂಬ ಆಯುಧಗಳನ್ನೂ ಕೊಟ್ಟಿರುವೆನು.

೪೩. ಹಾಗೆಯೇ ಅನ್ಯಾದೃಶವಾದ ಬುದ್ಧಿಶಕ್ತಿಯನ್ನೂ ಯುದ್ಧದಲ್ಲಿ ಅಪ್ರತಿಮ ಶಕ್ತಿಯನ್ನೂ ದಯಪಾಲಿಸಿರುವೆನು. ಆದುದರಿಂದಲೇ ಮೂರು ರಾತ್ರಿಗಳಾದರೂ ಮುರುಪುತ್ರಿಯಾದ ಈಕೆಯು ನಿನಗೆ ಸೋಲಲಿಲ್ಲ."

ಏವಮುಕ್ತೇ ತದಾ ದೇವೀಂ ವಚನಂ ಚಾಹಮಬ್ರವಂ ।
ಅಯಮೇಷ ನಿವೃತ್ತೋಽಸ್ಮಿ ವಾರಯೈನಾಂ ಚ ತ್ವಂ ಶುಭೇ ॥ ೪೪ ॥
ತತಶ್ಚಾಲಿಂಗ್ಯ ತಾಂ ಭಕ್ತಾಂ ಕಾಮಾಖ್ಯಾ ವಾಕ್ಯಮಬ್ರವೀತ್ ।
ಭದ್ರೇ ರಣಾನ್ನಿವರ್ತಸ್ವ ನಾಯಂ ಹಂತುಂ ಕಥಂಚನ ॥ ೪೫ ॥
ಶಕ್ಯಃ ಕೇನಾಪಿ ಸಮರೇ ಮಾಧವೋ ರಣದುರ್ಜಯಃ ।
ನಾಭೂದಸ್ತಿ ಭವಿಷ್ಯೋ ವಾ ಯ ಏನಂ ಸಂಯುಗೇ ಜಯೇತ್ ॥ ೪೬ ॥
ಅಪಿ ವಾ ತ್ರ್ಯಂಬಕಃ ಪುತ್ರಿ ನೈನಂ ಶಕ್ತಃ ಕುತೋಽನ್ಯಕಃ ।
ತಸ್ಮಾದೇನಂ ನಮಸ್ಕೃತ್ಯ ಭಾವಿನಂ ಶ್ವಶುರಂ ಶುಭೇ ॥ ೪೭ ॥
ರಣಾದಸ್ಮಾನ್ನಿವರ್ತಸ್ವ ತವೋಚಿತಮಿದಂ ಸ್ಫುಟಂ ।
ಅಸ್ಯ ಭ್ರಾತುರ್ಹಿ ಭೀಮಸ್ಯ ಸ್ನುಷಾ ತ್ವಂ ಚ ಭವಿಷ್ಯಸಿ ॥ ೪೮ ॥
ತಸ್ಮಾತ್ತ್ವಂ ಶ್ವಶುರಂ ಭದ್ರೇ ಸನ್ಮಾನಯ ಜನಾರ್ದನಂ ।
ನ ಚ ಶೋಕಸ್ತ್ವಯಾ ಕಾರ್ಯಃ ಪಿತರಂ ಪ್ರತಿ ಪಂಡಿತೇ ॥ ೪೯ ॥

---

೪೪. ಇಂತೆಂದ ದೇವಿಯನ್ನು ಕುರಿತು ನಾನು "ಹಾಗಾದರೆ ನಾನು ಯುದ್ಧವನ್ನು ಸಾಕುಮಾಡುವೆನು; ನೀನು ಈಕೆಯನ್ನೂ ಯುದ್ಧದಿಂದ ಹಿಂದಿರುಗುವಂತೆ ಮಾಡು" ಎಂಬುದಾಗಿ ಹೇಳಿದೆನು.

೪೫-೪೬. ಆಗ ಕಾಮಾಖ್ಯೆಯೆಂಬ ದೇವಿಯು ಕಾಮುಕಟಂಕಟೆಯೆಂಬ ತನ್ನ ಭಕ್ತಳನ್ನು ಆಲಿಂಗಿಸಿಕೊಂಡು ಇಂತೆಂದಳು. "ಎಲೌ ಮಂಗಳಾಂಗಿಯೆ! ಇನ್ನು ಯುದ್ಧವನ್ನು ಸಾಕುಮಾಡು. ಈತನು ಯಾರಿಂದಲೂ ಯಾವವಿಧದಿಂದಲೂ ಕೊಲ್ಲಲ್ಪಡತಕ್ಕವನಲ್ಲ. ಈತನು ಮಹಾವಿಷ್ಣುವು; ಯುದ್ಧದಲ್ಲಿ ಅಜೇಯನೆನಿಸಿರುವನು. ಈತನನ್ನು ರಣದಲ್ಲಿ ಜಯಿಸುವವನು ಹಿಂದೆ ಇರಲಿಲ್ಲ. ಈಗಲೂ ಇಲ್ಲ. ಮುಂದೆಯೂ ಹುಟ್ಟಲಾರನು.

೪೭-೪೮. ಮಗಳೆ! ಸಾಕ್ಷಾತ್ತಾಗಿ ಮಹೇಶ್ವರನೇ ಬಂದರೂ ಈತನನ್ನು ಗೆಲ್ಲಲಾರನೆಂದಮೇಲೆ ಮಿಕ್ಕವರ ಪಾಡೇನು? ಶೋಭನಳೆ! ಈತನು ನಿನಗೆ ಮುಂದೆ ಮಾವನಾಗುವನೆಂಬುದನ್ನು ಮನಸ್ಸಿನಲ್ಲಿ ತಂದುಕೊಂಡು ನಮಸ್ಕರಿಸಿ ಈ ಯುದ್ಧದಿಂದ ವಿರಾಮವನ್ನು ಹೊಂದು. ಇದೇ ನಿನಗೆ ಉಚಿತವಾದುದೆಂದು ನನಗೆ ಸ್ಫುಟವಾಗಿ ತಿಳಿದಿರುವುದು. ಈತನ ಅಣ್ಣನಾದ ಭೀಮಸೇನನಿಗೆ ನೀನು ಸೊಸೆಯಾಗುವೆ.

೪೯. ಆದುದರಿಂದ ಈ ಜನಾರ್ದನನೇ ನಿನಗೆ ಮಾವನಾಗುವನೆಂದು ತಿಳಿದು ಮರ್ಯಾದೆಯನ್ನು ಮಾಡು. ಜ್ಞಾನಿಯಾದ ನಿನಗೆ ನಿನ್ನ ತಂದೆಯ ಮರಣವನ್ನು ಕುರಿತು ದುಃಖಿಸುವುದಕ್ಕೆ ಕಾರಣವೂ ಇಲ್ಲ.

ಜಾತಸ್ಯ ಹಿ ಧ್ರುವೋ ಮೃತ್ಯುಃ ಧ್ರುವಂ ಜನ್ಮ ಮೃತಸ್ಯ ಚ ।
ಬಹವಶ್ಚಾತ್ರ ವೇತ್ತಾರೋ ವದ ಕೇನಾಪಿ ವಾರ್ಯತೇ ॥ ೫೦ ॥

ಋಷೀಂಶ್ಚ ದೇವಾಂಶ್ಚ ಮಹಾಸುರಾಂಶ್ಚ
ತ್ರೈವಿದ್ಯ ವಿದ್ಯಾನ್ಪುರುಷಾನ್ನೃಪಾಂಶ್ಚ ।
ಕಾನ್ಮೃತ್ಯುರೇಕೋ ನ ಪತೇತ ಕಾಲೇ
ಪರಾವರಜ್ಞೋಽತ್ರ ನ ಮುಹ್ಯತೇ ಕ್ವಚಿತ್ ॥ ೫೧ ॥

ಶ್ಲಾಘ್ಯ ಏವಹಿ ತೇ ಮೃತ್ಯುಃ ಪಿತುರಸ್ಮಾಜ್ಜನಾರ್ದನಾತ್ ।
ಸರ್ವಪಾತಕನಿರ್ಮುಕ್ತೋ ಗತೋಽಸೌ ಧಾಮ ವೈಷ್ಣವಂ ॥ ೫೨ ॥

ಏವಂ ಕಾಮಾಖ್ಯಯಾ ಪ್ರೋಕ್ತಾ ಸಾ ಚ ಕಾಮಕಟಂಕಟಾ ।
ತ್ಯಕ್ತ್ವಾ ಕ್ರೋಧಂ ಚ ಸಂವೃತ್ಯ ಗಾತ್ರಾಣಿ ಪ್ರಣತಾ ಚ ಮಾಂ ॥ ೫೩ ॥

ತಾಮಹಂ ಸಾಶಿಷಂ ಚಾಪಿ ಪ್ರಾವೋಚಂ ಭರತರ್ಷಭ ।
ಅಸ್ಮಿನ್ನೇವ ಪುರೇ ತಿಷ್ಠ ಭಗದತ್ತಪ್ರಪೂಜಿತಾ ॥ ೫೪ ॥

ಮಯಾ ದೇವ್ಯಾ ಪೃಥಿವ್ಯಾ ಚ ಭಗದತ್ತಃ ಕೃತೋ ನೃಪಃ ।
ಸ ತೇ ಪೂಜಾಂ ಬಹುವಿಧಾಂ ಕರಿಷ್ಯತಿ ಸ್ವಸುರ್ಯಥಾ ॥ ೫೫ ॥

---

೫೦. ಹುಟ್ಟಿದ ಜೀವನಿಗೆ ಮೃತ್ಯುವು ನಿಯತವಾಗಿರುವುದು. ಮೃತನಾದವನಿಗೆ ಜನ್ಮವೂ ಸಿದ್ಧವಾಗಿಯೇ ಇರುವುದು. ಇದನ್ನು ತಿಳಿದ ಅನೇಕ ಜ್ಞಾನಿಗಳಿರುವರು. ಆದರೂ ಯಾರಿಂದಲಾದರೂ ಮೃತ್ಯುವು ನಿವಾರಿಸಲ್ಪಟ್ಟುದನ್ನು ನೀನು ತಿಳಿದಿರುವೆಯಾ, ಹೇಳು.

೫೧. ಋಷಿಗಳು, ದೇವತೆಗಳು, ಮಹಾಸುರರು, ವೇದವಿದ್ಯಾಪಾರಂಗತರು, ಮನುಷ್ಯರು, ಮಹಾರಾಜರು ಮುಂತಾದ ಯಾರನ್ನು ತಾನೆ ಮೃತ್ಯುವು ಜೀವಿತಾಂತದಲ್ಲಿ ಬೀಳಿಸುವುದಿಲ್ಲ? ಆದುದರಿಂದ ತತ್ತ್ವವನ್ನು ತಿಳಿದ ಯಾವನೂ ಈ ವಿಷಯದಲ್ಲಿ ಮೋಹಗೊಳ್ಳುವುದಿಲ್ಲ.

೫೨. ಅಲ್ಲದೆ ನಿನ್ನ ತಂದೆಯು ಈ ಜನಾರ್ದನನಿಂದಲೇ ಮರಣವನ್ನು ಪಡೆದುದು ಶ್ಲಾಘ್ಯವೇ ಆಯಿತು. ಅದರ ಫಲವಾಗಿ ಆತನು ಸಕಲ ಪಾಪಗಳನ್ನೂ ಕಳೆದುಕೊಂಡು ವೈಕುಂಠವನ್ನು ಸೇರಿರುವನು."

೫೩–೫೫. ಇಂತು ಕಾಮಾಖ್ಯದೇವಿಯು ನಿರೂಪಿಸುತ್ತಿರಲು ಕಾಮಕಟಂಕಟೆಯು ತನ್ನ ಕೋಪವನ್ನೆಲ್ಲ ತೊರೆದು ನಾಚಿಕೆಯಿಂದ ಮೈಯನ್ನಡಗಿಸಿಕೊಳ್ಳುತ್ತ ನನಗೆ ನಮಸ್ಕರಿಸಿದಳು. ಆಗ ನಾನು ಅವಳಿಗೆ ಆಶೀರ್ವಾದವನ್ನು ಮಾಡಿ ಇಂತೆಂದು ಅಪ್ಪಣೆಮಾಡಿದೆನು. "ನೀನು ಭಗದತ್ತ ಮಹಾರಾಜನಿಂದ ಸತ್ಕಾರವನ್ನುಹೊಂದುತ್ತ ಈ ಪುರದಲ್ಲಿಯೇ ವಾಸಮಾಡುತ್ತಿರು. ಈ ಭಗದತ್ತನು ನನ್ನಿಂದಲೇ ಈ ಭೂದೇವಿಗೆ ಒಡೆಯನಾಗಿ ಮಾಡಲ್ಪಟ್ಟಿರುವನು. ಅವನು

ವಸಂತೀ ಚಾತ್ರ ತಂ ವೀರಂ ಹೈಡಿಂಬಂ ಪತಿಮಾಪ್ಸ್ಯಸಿ ।
ಏವಮಾಶ್ವಾಸ್ಯ ತಾಂ ದೇವಿಂ ಮೌರ್ವೀಂ ಚಾಹಂ ವ್ಯಸರ್ಜಯಂ ॥ ೫೬ ॥
ಸಾ ಸ್ಥಿತಾ ಚ ಪುರೇ ತತ್ರ ಗತೋಽಹಂ ಶಕ್ರ ಸದ್ಮ ಚ
ತತೋ ದ್ವಾರವತೀಂ ಪ್ರಾಪ್ಯ ತ್ವಯಾಸಹ ಸಮಾಗತಃ ॥ ೫೭ ॥
ಏವಮೇಷೋಚಿತಾ ದಾರಾ ಹೈಡಂಬೇರ್ವಿದ್ಯತೇ ಶುಭಾ ।
ಕಾಮಾಖ್ಯೇ ಚ ರಣೇ ಘೋರಾ ಯಾ ವಿದ್ಯುದಿವ ಭಾಸತೇ ॥ ೫೮ ॥
ನ ಚ ರೂಪಂ ವರ್ಣಿತಂ ಮೇ ಶ್ವಶುರಸ್ಯೋಚಿತಂ ಯತಃ ।
ಸಾಧೋರ್ಹಿ ನೈತದುಚಿತಂ ಸರ್ವಸ್ತ್ರೀಣಾಂ ಪ್ರವರ್ಣನಂ ॥ ೫೯ ॥
ಪುನರೇಕಶ್ಚ ಸಮಯಃ ಕೃತಸ್ತಂ ಶ್ರುಣು ಯಸ್ತಯಾ ।
ಯೋ ಮಾಂ ನಿರುತ್ತರಾಂ ಪ್ರಶ್ನೇ ಕೃತ್ವೈವ ವಿಜಯೇತ್ಪುಮಾನ್ ॥ ೬೦ ॥
ಯೋ ಮೇ ಪ್ರತಿಬಲಶ್ಚಾಪಿ ಸ ಮೇ ಭರ್ತಾ ಭವಿಷ್ಯತಿ ।
ಏವಂ ಚ ಸಮಯಂ ಶ್ರುತ್ವಾ ಬಹವೋ ದೈತ್ಯರಾಕ್ಷಸಾಃ ॥ ೬೧ ॥

---

ನಿನಗೆ ಸಹೋದರಿಗೆ ಉಚಿತಗಳಾದ ಅನೇಕ ವಿಧದ ಉಪಚಾರಗಳನ್ನು ಮಾಡು ತ್ತಿರುವನು.

೫೬. ಇಲ್ಲಿಯೇ ವಾಸಮಾಡುತ್ತಿರಲು ಕಾಲಾಂತರದಲ್ಲಿ ಹಿಡಿಂಬಾಪುತ್ರ ನಾದ ಘಟೋತ್ಕಚನನ್ನೇ ಪತಿಯಾಗಿ ಪಡೆಯುವೆ.'' ಇಂತು ಮುರುದಾನವನ ಮಗಳಾದ ಕಾಮುಕಟಂಕಟೆಯನ್ನು ಸಮಾಧಾನಗೊಳಿಸಿ ಕಳುಹಿಸಿಕೊಟ್ಟೆನು.

೫೭. ಅವಳು ಆ ಪಟ್ಟಣದಲ್ಲಿ ನಿಲ್ಲಲು ನಾನು ಇಂದ್ರನ ಲೋಕಕ್ಕೆ ಹೊರಟೆನು. ಬಳಿಕ ದ್ವಾರವತಿಯನ್ನು ಸೇರಿ ನಿನ್ನೊಡನೆ ಸಮಾಗಮವನ್ನು ಹೊಂದಿದೆನು.

೫೮. ಈಕೆಯೇ ಘಟೋತ್ಕಚನಿಗೆ ತಕ್ಕವಳೂ ಸೌಭಾಗ್ಯವತಿಯೂ ಆದ ಹೆಂಡತಿಯಾಗಿರುವಳೆಂದು ತಿಳಿದಿರುವೆನು. ಈಕೆಯು ಕಾಮಾಖ್ಯ ರಣರಂಗದಲ್ಲಿ ಭಯಂಕರಳಾಗಿ ಮಿಂಚಿನಂತೆ ಬೆಳಗುತ್ತಿರುವಳು.

೫೯. ಮಾವನಾದ ನನಗೆ ಅನುಚಿತವಾದುದರಿಂದ ಆಕೆಯ ರೂಪವನ್ನು ನಿಮಗೆ ವರ್ಣಿಸಲಿಲ್ಲವು. ಸಾಧುಗಳಿಗೆ ಇತರ ಸ್ತ್ರೀಯರ ವರ್ಣನೆಯು ಉಚಿತ ವಲ್ಲವಷ್ಟೆ.

೬೦–೬೪. ಆದರೆ ಆಕೆಯು ಮತ್ತೊಂದು ಶಪಥವನ್ನು ಮಾಡಿಕೊಂಡಿರು ವಳು. ಅದನ್ನು ಕೇಳು. "ಯಾವನು ವಾದದಲ್ಲಿ ನನ್ನನ್ನು ನಿರುತ್ತರೆಯನ್ನಾಗಿ ಮಾಡಿ ವಿಜಯವನ್ನು ಪಡೆಯುವನೊ, ಯಾವನು ನನ್ನೊಡನೆ ಸಮಾನವಾದ ಯುದ್ಧವನ್ನು ಮಾಡುವನೊ, ಅವನೇ ನನ್ನ ಪತಿಯಾಗಬೇಕು.'' ಇಂತಹ ಪ್ರತಿಜ್ಞೆಯನ್ನು ಕೇಳಿ ಅನೇಕ ದೈತ್ಯರೂ ರಾಕ್ಷಸರೂ ಜಯಿಸಬೇಕೆಂಬ

ತಸ್ಯಾ ಜಯಾರ್ಥಮಗಮಂಸ್ತೇಽಪಿ ಜಿತ್ವಾ ಹತಾಸ್ತಯಾ ।
ಯೋ ಯ ಏನಾಂಗತಃ ಪೂರ್ವಂ ನ ಸ ಭೂಯೋ ನ್ಯವರ್ತತ ॥ ೬೨ ॥
ವಹ್ನೇರಿವ ಪ್ರಭಾಂ ದೀಪ್ತಾಂ ಪತಂಗಾನಾಂ ಸಮುಚ್ಚಯಃ ।
ಏವಮೇತಾದೃಶೀಂ ವೌರ್ವೀಂ ಜೇತುಮುತ್ಸಹತೇ ಯದಿ ॥ ೬೩ ॥
ಘಟೋತ್ಕಚೋ ಮಹಾವೀರ್ಯೋ ಭಾರ್ಯಾಸ್ಯ ನಿಯತಂ ಭವೇತ್ ॥

ಯುಧಿಷ್ಠಿರ ಉವಾಚ :—

ಅಲಂ ಸರ್ವಗುಣೈಸ್ತಸ್ಯಾ ಯಸ್ಯಾಸ್ತ್ವೇಕೋಽಗುಣೋ ಮಹಾನ್ ।
ಕ್ರಿಯತೇ ಕಿಂ ಹಿ ಕ್ಷೀರೇಣ ಯದಿ ತದ್ವಿಷಮಿಶ್ರಿತಂ ॥ ೬೪ ॥
ಪ್ರಾಣಾಧಿಕಂ ಭೈಮಸೇನಿಂ ಕಥಂ ಕೇವಲಸಾಹಸಾತ್ ।
ಕ್ಷಿಪೇಯಂ ತವ ವಾಕ್ಯಾನಾಂ ಶುದ್ಧಾನಾಂ ಚಾರ್ಥಕೋವಿದಂ ॥ ೬೬ ॥
ಅನ್ಯಾ ಅಪಿ ಸ್ತ್ರಿಯಃ ಸಂತಿ ದೇಶೇ ದೇಶೇ ಜನಾರ್ದನ ।
ಬಹ್ವ್ಯಸ್ತಾಸಾಂ ವರಾಂ ಕಾಂಚಿದ್ಯೋಷಿತಂ ವಕ್ತುಮರ್ಹಸಿ ॥ ೬೭ ॥

ಭೀಮ ಉವಾಚ :—

ಸಮ್ಯಗುಕ್ತಂ ಕೇಶವೇನ ವಾಕ್ಯಂ ಬಹ್ವರ್ಥಮುತ್ತಮಂ ।
ರಾಜ್ಞಾ ಪುನಃ ಸ್ನೇಹವಶಾದ್ಯದುಕ್ತಂ ತನ್ನ ಭಾತಿ ಮೇ ॥ ೬೮ ॥

---

ಕುತೂಹಲದಿಂದ ಬಂದು ಆಕೆಯಿಂದ ಪರಾಜಯವನ್ನು ಹೊಂದಿ ಯುದ್ಧದಲ್ಲಿ ಮಡಿದರು. ಹಿಂದೆ ಈಕೆಯನ್ನು ಹೊಂದ ಬಯಸಿದವರೆಲ್ಲ ಉರಿಯುವ ಬೆಂಕಿಯ ಜ್ವಾಲೆಗಳಲ್ಲಿ ಬಿದ್ದ ಪತಂಗದ ಹುಳುಗಳಂತೆ ಮತ್ತೆ ಹೊರಕ್ಕೆ ಬರಲಾರದೆ ನಾಶವನ್ನು ಹೊಂದಿದರು. ಇಂತಹ ಮುರುಪುತ್ರಿಯನ್ನು ಮಹಾ ಪರಾಕ್ರಮಿಯಾದ ಈ ಘಟೋತ್ಕಚನು ಜಯಿಸಲು ಉತ್ಸಾಹವನ್ನು ಹೊಂದಿರುವನಾದರೆ ಖಂಡಿತವಾಗಿಯೂ ಆಕೆಯು ಈತನಿಗೆ ಪತ್ನಿಯಾಗುವಳು.''

೬೪. ಯುಧಿಷ್ಠಿರನು ಹೇಳುತ್ತಾನೆ:—'' ಇಂತಹ ದೊಡ್ಡ ದುರ್ಗುಣವುಳ್ಳ ಸ್ತ್ರೀಯಳಿಗೆ ಇತರ ಸಕಲ ಸುಗುಣಗಳಿದ್ದರೇನು? ವಿಷಮಿಶ್ರಿತವಾದ ಕ್ಷೀರವು ಎಷ್ಟಿದ್ದರೆ ತಾನೆ ಅದರಿಂದ ಏನು ಮಾಡಲಾದೀತು?

೬೬–೬೭. ನಿನ್ನ ಪರಿಶುದ್ಧ ವಾಕ್ಯಗಳ ಅರ್ಥವನ್ನು ತಿಳಿದವನೂ ನನ್ನ ಪ್ರಾಣಕ್ಕಿಂತಲೂ ಪ್ರಿಯತಮನೂ ಆದ ಈ ಭೀಮಸೇನನ ಮಗನನ್ನು ಕೇವಲ ದುಡುಕುತನದಿಂದ ಹೇಗೆ ಈ ಕೆಲಸಕ್ಕೆ ನೂಕಲಿ? ಎಲೈ ಜನಾರ್ದನನೆ! ಇತರ ದೇಶ ವಿದೇಶಗಳಲ್ಲಿ ಅನೇಕ ಕನ್ಯೆಯರು ವಿವಾಹಯೋಗ್ಯರಾಗಿರುವರಲ್ಲವೆ. ಅವರಲ್ಲಿ ಉತ್ತಮಳಾದ ಒಬ್ಬಳನ್ನು ಹುಡುಕಿ ಹೇಳು.''

೬೮. ಭೀಮಸೇನನು ಹೇಳುತ್ತಾನೆ:—'' ಕೇಶವನು ಈಗ ಹೇಳಿದ ಅರ್ಥ ಭೂಯಿಷ್ಠವೂ, ಉತ್ತಮವೂ ಆದ ವಾಕ್ಯವೇ ಯುಕ್ತವಾಗಿ ಕಾಣುವುದು.

ಕಾರ್ಯೇ ದುಸ್ಸಾಧ್ಯ ಏವ ಸ್ಯಾತ್ಕ್ಷತ್ರಿಯಸ್ಯ ಪರಾಕ್ರಮಃ ।
ಕರೀಂದ್ರಸ್ಯೇವ ಯೂಥೇಷು ಗಜಾನಾಂ ನ ಮೃಗೇಷು ಚ ॥ ೬೯ ॥
ಆತ್ಮಾ ಪ್ರಖ್ಯಾತಿಮಾನೇಯಃ ಸರ್ವಥಾ ವೀರಪುಂಗವೈಃ ।
ಸಾ ಚ ಖ್ಯಾತಿಃ ಕಥಂ ಜಾಯೇದ್ದುಸ್ಸಾಧ್ಯಕರಣಾದೃತೇ ॥ ೭೦ ॥
ನ ಹ್ಯಾತ್ಮವಶಗಂ ಪಾರ್ಥ ಹೈಡಂಬೇರಸ್ಯ ರಕ್ಷಣಂ ।
ಯೇನ ದತ್ತಸ್ತ್ವಯಂ ಧಾತ್ರಾ ಸ ಏನಂ ಪಾಲಯಿಷ್ಯತಿ ॥ ೭೧ ॥
ಸರ್ವಥೋಚ್ಚಪದಾರೋಹೇ ಯತ್ನಃ ಕಾರ್ಯೋ ವಿಜಾನತಾ ।
ತನ್ನ ಸಿದ್ಧ್ಯತಿ ಚೇದ್ದೈವಾನ್ನಾಸೌ ದೋಷೋ ವಿಜಾನತಃ ॥ ೭೨ ॥
ಯಥಾ ದೇವವ್ರತಸ್ತ್ವೇಕೋ ಜಹ್ರೇ ಕಾಶಿಸುತಾಃ ಪುರಾ ।
ತಥೈಕ ಏವ ಹೈಡಂಬಿರ್ಮೌರ್ವೀಂ ಪ್ರಾಪ್ನೋತು ಮಾ ಚಿರಂ ॥ ೭೩ ॥

ಅರ್ಜುನ ಉವಾಚ :—

ಕೇವಲಂ ಪೌರುಷಪರಂ ಭೀಮೇನೋಕ್ತಮಿದಂ ವಚಃ ।
ಅಬಲಂ ದೈವಹೇತುತ್ವಾತ್ಪ್ರಬಲಂ ಪ್ರತಿಭಾತಿ ಮೇ ॥ ೭೪ ॥

---

ಧರ್ಮರಾಜನು ಪುತ್ರವಾತ್ಸಲ್ಯದ ಕಾರಣದಿಂದ ಹೇಳಿದುದು ಸರಿಯೆಂದು ನನಗೆ ತೋರುವುದಿಲ್ಲ.

೬೯–೭೧. ಮದಿಸಿದ ಸಲಗನ ಪರಾಕ್ರಮವು ತನ್ನ ಯೂಥದಲ್ಲಿ ಪ್ರದರ್ಶಿಸಲು ಯೋಗ್ಯವಾದಂತೆ ಜಿಂಕೆಗಳ ಮಧ್ಯದಲ್ಲಿ ಯೋಗ್ಯವಲ್ಲ. ಅಂತೆಯೇ ಕ್ಷತ್ರಿಯನ ಪರಾಕ್ರಮವೂ ಕಷ್ಟವಾದ ಕಾರ್ಯದಲ್ಲಿಯೇ ತೋರಿಸಲರ್ಹವು. ವೀರಪುಂಗವರೆನಿಸಿಕೊಳ್ಳುವವರು ತಮ್ಮ ಕೀರ್ತಿಯನ್ನು ಸರ್ವಪ್ರಕಾರದಿಂದಲೂ ಸಂಪಾದಿಸಬೇಕು. ದುಸ್ಸಾಧ್ಯಗಳಾದ ಕಾರ್ಯಗಳನ್ನು ಸಾಧಿಸದಿದ್ದಲ್ಲಿ ಅಂತಹ ಪ್ರಖ್ಯಾತಿಯು ಹೇಗೆ ತಾನೆ ಲಭಿಸುವುದು ? ಎಲೈ ಪಾರ್ಥನೆ! ಅಲ್ಲದೆ ಈ ಘಟೋತ್ಕಚನ ರಕ್ಷಣೆಯೂ ನಮ್ಮನ್ನು ಸೇರಿದುದಲ್ಲ. ಯಾವ ಸೃಷ್ಟಿಕರ್ತನು ಇವನನ್ನು ನಮಗೆ ಕೊಟ್ಟನೊ, ಅವನೇ ಇವನನ್ನು ರಕ್ಷಿಸುವನು.

೭೨–೭೩. ಜ್ಞಾನಿಯಾದವನು ಸರ್ವಥಾ ಉನ್ನತಪದವಿಯನ್ನೇರಲು ಪ್ರಯತ್ನಿಸಬೇಕು. ಅದು ದೈವಯೋಗದಿಂದ ಲಭಿಸದಿದ್ದಲ್ಲಿ ಸಾಧಕನ ದೋಷವೇನೂ ಇರುವುದಿಲ್ಲ. ಮುನ್ನು ಭೀಷ್ಮನು ಕಾಶಿರಾಜನ ಮಕ್ಕಳನ್ನು ಬಲಾತ್ಕಾರದಿಂದ ಹರಿಸಿಕೊಂಡು ಬಂದಂತೆಯೇ ಈಗಲೂ ಘಟೋತ್ಕಚನು ಮುರು ರಾಕ್ಷಸನ ಮಗಳನ್ನು ತೆಗೆದುಕೊಂಡು ಬರುವುದರಲ್ಲಿ ತಡಮಾಡಲೇಕೆ ?"

೭೪. ಅರ್ಜುನನು ಹೇಳುತ್ತಾನೆ:—"ಕೇವಲ ಪುರುಷಕಾರವನ್ನೇ ಆಶ್ರಯಿಸಿ ಭೀಮಸೇನನಾಡಿದ ನುಡಿಯು ಸ್ವತಃ ಬಲಹೀನವಾದರೂ ದೈವ ಸಹಾಯದಿಂದ ಪ್ರಬಲವಾಗಬಲ್ಲುದೆಂದು ನನಗೆ ತೋರುವುದು.

ನ ಮೃಷಾ ಹಿ ವಚೋ ಬ್ರೂತೇ ಕಾಮಾಖ್ಯಾ ಯಾ ಪುರಾಬ್ರವೀತ್ ।
ಭೀಮಸೇನಸುತಃ ಪಾಣಿಂ ತವ ಭದ್ರೇ ಗೃಹೀಷ್ಯತಿ ॥ ೭೫ ॥
ಅನೇನ ಹೇತುನಾ ಯಾತು ಶೀಘ್ರಂ ತತ್ರ ಘಟೋತ್ಕಚಃ ।
ಇತಿ ಮೇ ರೋಚತೇ ಕೃಷ್ಣ ತವ ಕಿಂ ಬ್ರೂಹಿ ರೋಚತೇ ॥ ೭೬ ॥

ಕೃಷ್ಣ ಉವಾಚ:—

ರೋಚತೇ ಮೇ ವಚಸ್ತುಭ್ಯಂ ಭೀಮಸ್ಯ ಚ ಮಹಾತ್ಮನಃ ।
ನ ಹಿ ತುಲ್ಯೋ ಭೈಮಸೇನೇರ್ಬುದ್ಧ್ಯಾ ವೀರ್ಯೇ ಚ ಕಶ್ಚನ ॥ ೭೭ ॥
ಅಂತರಾತ್ಮಾ ಚ ಮೇ ವೇತ್ತಿ ಪ್ರಾಪ್ತಾಮೇವ ಮುರೋಃ ಸುತಾಂ ।
ತಚ್ಛೀಘ್ರಂ ಯಾತು ಹೈಡಂಬಿಸ್ತ್ವಂ ಚ ಕಿಂ ಪುತ್ರ ಮನ್ಯಸೇ ॥ ೭೮ ॥

ಘಟೋತ್ಕಚ ಉವಾಚ:—

ನ ಹಿ ನ್ಯಾಯ್ಯಾಃ ಸ್ವಕಾ ವಕ್ತುಂ ಪೂಜ್ಯಾನಾಮಗ್ರತೋ ಗುಣಾಃ ।
ಪ್ರವೃತ್ತಾ ಏವ ಭಾಸಂತೇ ಸದ್ಗುಣಾಶ್ಚ ರವೇಃ ಕರಾಃ ॥ ೭೯ ॥
ಸರ್ವಥಾ ತತ್ಕರಿಷ್ಯಾಮಿ ಪಿತರೋ ಯೇನ ಮೇಽಮಲಾಃ ।
ಲಜ್ಜಿಷ್ಯಂತಿ ನ ಸಂಸತ್ಸು ಮಯಾ ಪುತ್ರೇಣ ಪಾಂಡವಾಃ ॥ ೮೦ ॥

---

೭೫. ಪೂರ್ವದಲ್ಲಿ ಕಾಮಾಖ್ಯೆಯೆಂಬ ದೇವಿಯು ಆ ಕನ್ಯಕೆಯನ್ನು ಕುರಿತು "ಭದ್ರಳೆ! ಭೀಮಸೇನನ ಮಗನು ನಿನ್ನ ಕೈಯನ್ನು ಹಿಡಿಯುವನು" ಎಂದು ಹೇಳಿದ ಮಾತು ಸುಳ್ಳಾಗಲಾರದು.

೭೬. ಈ ಕಾರಣದಿಂದ ಘಟೋತ್ಕಚನು ಅಲ್ಲಿಗೆ ಶೀಘ್ರವಾಗಿ ಹೊರಡಬೇಕೆಂದು ನನಗೆ ತೋರುವುದು. ಎಲೈ ಕೃಷ್ಣನೆ! ನಿನ್ನ ಅಭಿಪ್ರಾಯವೇನು?"

೭೭. ಶ್ರೀಕೃಷ್ಣನು ಹೇಳುತ್ತಾನೆ:—"ನೀನೂ ಭೀಮಸೇನನೂ ಹೇಳಿದ ಮಾತುಗಳೇ ನನಗೂ ಹಿತವೆಂದು ತೋರುವುದು. ಬುದ್ಧಿಶಕ್ತಿಯಲ್ಲಾಗಲಿ ಶರೀರದ ಪರಾಕ್ರಮದಲ್ಲಾಗಲಿ ಘಟೋತ್ಕಚನಿಗೆ ಸಮಾನರಾರೂ ಇಲ್ಲ.

೭೮. ನನ್ನ ಅಂತರಂಗದಲ್ಲಿಯೂ ಆ ಕನ್ಯೆಯು ಘಟೋತ್ಕಚನಿಗೆ ಲಭಿಸಿದಂತೆಯೇ ಭಾಸಿಸುತ್ತಿರುವುದು. ಆದುದರಿಂದ ಈತನು ಶೀಘ್ರವಾಗಿ ಹೊರಡಲಿ. ಎಲೈ ಘಟೋತ್ಕಚನೆ! ನಿನ್ನ ಮನಸ್ಸಿನಲ್ಲಿರುವುದೇನು?"

೭೯. ಘಟೋತ್ಕಚನು ಹೇಳುತ್ತಾನೆ:—"ಪೂಜ್ಯರಾದವರೆದುರಿನಲ್ಲಿ ತನ್ನ ಗುಣಗಳನ್ನು ಹೊಗಳಿಕೊಳ್ಳುವುದು ಸರ್ವಥಾ ನ್ಯಾಯವಲ್ಲ. ಮನುಷ್ಯನ ಗುಣಗಳೂ ಸೂರ್ಯನ ಕಿರಣಗಳೂ ಉದಯಿಸಿದಾಗಲೇ ಕಾಣುತ್ತಿರುತ್ತವೆ.

೮೦. ನಿಷ್ಪಾಪರೂ ನನ್ನ ತಂದೆಯವರೂ ಆದ ಪಾಂಡವರು ನನಗಾಗಿ ಸಭೆಯಲ್ಲಿ ಲಜ್ಜೆಯಿಂದ ತಲೆಬಾಗಿಸದಿರುವಂತೆ ಸರ್ವಪ್ರಕಾರದಿಂದಲೂ ಕಾರ್ಯಸಾಧನೆಯನ್ನು ಮಾಡುವೆನು."

ಏವಮುಕ್ತ್ವಾ ಮಹಾಬಾಹುರುತ್ಥಾಯ ಪ್ರಣನಾಮ ತಾನ್ ।
ಜಯಾಶೀರ್ಭಿಶ್ಚ ಪಿತೃಭಿರ್ವರ್ಧಿತೋ ಗಂತುಮೈಚ್ಛತ ॥ ೮೧ ॥
ತಂ ಗಂತುಕಾಮಮಾಹೇದಮಭಿನಂದ್ಯ ಜನಾರ್ದನಃ ।
ಕಥಾಕಥನಕಾಲೇ ಮಾಂ ಸ್ಮರೇಥಾಸ್ತ್ವಂ ಜಯಾವಹಂ ॥ ೮೨ ॥
ಯಥಾ ಬುದ್ಧಿಂ ಸುದುರ್ಭೇದ್ಯಾಂ ವರ್ಧಯಾಮಿ ಬಲಂ ಚ ತೇ ।
ಇತ್ಯುಕ್ತ್ವಾಲಿಂಗ್ಯ ತಂ ಕೃಷ್ಣೋ ವ್ಯಸಸರ್ಜ ಚ ಸಾಶಿಷಂ ॥ ೮೩ ॥
ತತೋ ಹಿಡಿಂಬಾತನಯೋ ಮಹೌಜಾಃ
ಸೂರ್ಯಾಕ್ಷಕಾಲಾಕ್ಷಮಹೋದರಾನುಗಃ ।
ವಿಯತ್ಪಥಂ ಪ್ರಾಪ್ಯ ಜಗಾಮ ತತ್ಪುರಂ
ಪ್ರಾಗ್ಜ್ಯೋತಿಷಂ ನಾಮ ದಿನವ್ಯಪಾಯೇ ॥ ೮೪ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪ್ರಥಮೇ ಮಾಹೇಶ್ವರಖಂಡೇ ಕೌಮಾರಿಕಾ ಖಂಡೇ "ಬರ್ಬರೀಕೋಪಾಖ್ಯಾನೇ ಘಟೋತ್ಕಚಸ್ಯ ಪ್ರಾಗ್ಜ್ಯೋತಿಷಪುರಂ ಪ್ರತಿಗಮನವರ್ಣನಂ" ನಾಮ ಏಕೋನಷಷ್ಟಿತಮೋಽಧ್ಯಾಯಃ

---

೮೧. ಇಂತೆಂದು ಮಹಾಪರಾಕ್ರಮಿಯಾದ ಘಟೋತ್ಕಚನು ಎದ್ದು ಎಲ್ಲರಿಗೂ ನಮಸ್ಕರಿಸಿದನು. ಬಳಿಕಲವನು ತಂದೆಯರಿಂದ ಜಯಕಾರಗಳನ್ನೂ ಆಶೀರ್ವಾದಗಳನ್ನೂ ತಳೆದವನಾಗಿ ಹೊರಡಲನುವಾದನು.

೮೨–೮೩. ಇಂತು ಹೊರಡಲು ಉತ್ಸುಕನಾದವನನ್ನು ಕಂಡು ಶ್ರೀ ಕೃಷ್ಣನು ಶ್ಲಾಘಿಸುತ್ತ "ನೀನು ಕನ್ಯೆಯೊಡನೆ ವಾದವನ್ನು ಮಾಡುವ ಸಮಯದಲ್ಲಿ ಜಯಪ್ರದನಾದ ನನ್ನನ್ನು ಮಾತ್ರ ಸ್ಮರಿಸುತ್ತಿರು; ಇತರರಿಗೆ ದುರ್ಭೇದ್ಯವಾದ ಬುದ್ಧಿ ಶಕ್ತಿಯನ್ನೂ ಬಲವನ್ನೂ ನಿನಗೆ ಕೊಡುವೆನು" ಎಂದು ಹೇಳಿ, ಆಲಿಂಗನವನ್ನು ಮಾಡಿಕೊಂಡು ಆಶೀರ್ವಾದಗಳೊಡನೆ ಘಟೋತ್ಕಚನನ್ನು ಬೀಳ್ಕೊಟ್ಟನು.

೮೪. ಆಗ ಮಹಾಪರಾಕ್ರಮಶಾಲಿಯಾದ ಹಿಡಿಂಬಾಪುತ್ರನು ಸೂರ್ಯಾಕ್ಷ, ಕಾಲಾಕ್ಷ ಮತ್ತು ಮಹೋದರರೆಂಬ ರಾಕ್ಷಸರನ್ನು ಕೂಡಿಕೊಂಡು ಆಕಾಶಮಾರ್ಗದಲ್ಲಿ ಸಂಚರಿಸುತ್ತ ಸೂರ್ಯಾಸ್ತಮಾನದ ಸಮಯಕ್ಕೆ ಸರಿಯಾಗಿ ಪ್ರಾಗ್ಜ್ಯೋತಿಷ ಪುರವನ್ನು ಕುರಿತು ಹೊರಟನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಎರಡನೆಯ ಕೌಮಾರಿಕಾಖಂಡದಲ್ಲಿ "ಬರ್ಬರೀಕೋಪಾಖ್ಯಾನ — ಘಟೋತ್ಕಚನ ಪ್ರಾಗ್ಜ್ಯೋತಿಷಪುರಗಮನದ ವರ್ಣನ" ವೆಂಬ ಐವತ್ತೊಂಬತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀ ॥

## ಅಥ ಷಷ್ಟಿತಮೋಽಧ್ಯಾಯಃ

### ಬರ್ಬರೀಕೋತ್ಪತ್ತಿವರ್ಣನಂ

**ಸೂತ ಉವಾಚ :—**

**ಸೋಽಥ ಪ್ರಾಗ್ಜ್ಯೋತಿಷಾದ್ಬಾಹ್ಯೇ ಮಹೋಪವನಸಂಸ್ಥಿತಂ ।**
**ಸಹಸ್ರಭೂಮಿಕಂ ಗೇಹಮಪಶ್ಯತ ಹಿರಣ್ಮಯಂ ॥ ೧ ॥**
**ವೇಣುವೀಣಾಮೃದಂಗಾನಾಂ ನಿಸ್ಸ್ವನೈಃ ಪರಿಪೂರಿತಂ ।**
**ದಶಸಾಹಸ್ರಸಂಖ್ಯಾಭಿಶ್ಚೇಟೀಭಿಃ ಪರಿಪೂರಿತಂ ॥ ೨ ॥**
**ಆಯಾದ್ಭಿಃ ಪ್ರತಿಯಾದ್ಭಿಶ್ಚ ಭಗದತ್ತಸ್ಯ ಕಿಂಕರೈಃ ।**
**ಕಿಮಿಚ್ಛಂತೀತಿ ಭಗಿನೀ ಪೃಚ್ಛಕೈರಭಿಪೂರಿತಂ ॥ ೩ ॥**
**ತದಾಸಾದ್ಯ ಸ ಹೈಡಂಬಿರ್ಮೇರೋಃ ಶಿಖರವದ್ಗೃಹಂ ।**
**ದ್ವಾರಿ ಸ್ಥಿತಾಂ ಸಂದದರ್ಶ ಕರ್ಣಪ್ರಾವರಣಾಂ ಸಖೀಂ ॥ ೪ ॥**
**ತಾಮಾಹ ಲಲಿತಂ ವೀರೋ ಭದ್ರೇ ಸಾ ಕ್ವ ಮುರೋಃ ಸುತಾ ।**
**ಕಾಮುಕೋ ದ್ರಷ್ಟುಮಿಚ್ಛಾಮಿ ದೂರದೇಶಾಗತೋಽತಿಥಿಃ ॥ ೫ ॥**

---

## ಕನ್ನಡದ ಅನುವಾದ

### ಬರ್ಬರೀಕೋತ್ಪತ್ತಿವರ್ಣನ

೧. ಸೂತನು ಹೇಳುತ್ತಾನೆ:—ಆ ಘಟೋತ್ಕಚನು ಪ್ರಾಗ್ಜ್ಯೋತಿಷಪುರದ ಬಹಿರುದ್ಯಾನವನದಲ್ಲಿದ್ದ ಕನಕಮಯವೂ ಒಂದು ಸಹಸ್ರ ಮಹಡಿಗಳುಳ್ಳದ್ದೂ ಆದ ಅರಮನೆಯೊಂದನ್ನು ಕಂಡನು.

೨-೩. ಆ ಅರಮನೆಯು ಕೊಳಲು, ವೀಣೆ, ಮೃದಂಗ, ಮುಂತಾದ ವಾದ್ಯಗಳ ಧ್ವನಿಯಿಂದ ತುಂಬಿದುದೂ, ಹತ್ತುಸಾವಿರ ದಾಸಿಯರಿಂದ ಕೂಡಿದುದೂ ಆಗಿ ರಂಜಿಸುತ್ತಿದ್ದಿತು. ತನ್ನ ಸಹೋದರಿಯು ಏನನ್ನು ಬಯಸುವಳೆಂದು ಕೇಳಲು ಭಗದತ್ತನು ಅಡಿಗಡಿಗೂ ಕಳುಹಿಸುತ್ತಿರುವ ದೂತರು ಅಲ್ಲಿಗೆ ಬರುತ್ತಲೂ ಹೋಗುತ್ತಲೂ ಇದ್ದರು.

೪-೫. ಆಗಲಾ ಘಟೋತ್ಕಚನು ಮೇರುಶಿಖರದಂತೆ ಉನ್ನತವಾದ ಆ ಪ್ರಾಸಾದವನ್ನು ಸಮೀಪಿಸಿ ದ್ವಾರದಲ್ಲಿ ನಿಂತಿದ್ದ ಕರ್ಣಪ್ರಾವರಣೆಯೆಂಬ ಸಖಿಯನ್ನು ಕಂಡನು. ವೀರಪುರುಷನಾದ ಆತನು ಆಕೆಯನ್ನು ಕುರಿತು ಮಧುರವಾಗಿ ಮಾತನಾಡುತ್ತ "ಎಲೌ ಮಂಗಳಾಂಗಿಯೆ! ಮುರುದೈತ್ಯನ ಮಗಳೆಲ್ಲಿರುವಳು? ಕಾಮುಕನಾದ ನಾನು ಆಕೆಯ ದರ್ಶನಕ್ಕಾಗಿ ಅತಿಥಿಯಾಗಿ ದೂರದೇಶದಿಂದ ಬಂದಿರುವೆನು" ಎಂದನು.

ಕರ್ಣಪ್ರಾವರಣೋವಾಚ :—

ಕಿಂ ತವಾಸ್ತಿ ಮಹಾಬಾಹೋ ತಯಾ ಮೌರ್ವ್ಯಾ ಪ್ರಯೋಜನಂ ।
ಕೋಟಿಶೋ ನಿಹತಾಃ ಪೂರ್ವಂ ತಯಾ ಕಾಮುಕ ಕಾಮುಕಾಃ ॥ ೬ ॥
ತವ ರೂಪಮಹಂ ದೃಷ್ಟ್ವಾ ಘಟಿಹಾಸಂ ಸದೋತ್ಕಚಂ ।
ಪ್ರಣಮ್ಯ ಪಾದಯೋರ್ವೀರ ಸ್ಥಿತಾ ತೇ ವಚನಂಕರೀ ॥ ೭ ॥
ತನ್ಮಯಾ ಸಹ ಮೋದಸ್ವ ಭುಙ್ಕ್ಷ್ವ ಭೋಗಾಂಶ್ಚ ಕಾಮುಕ ।
ದಾಸ್ಯಾಮ್ಯನುಚರಾಣಾಂ ತೇ ತ್ರಯಾಣಾಂ ಚ ಪ್ರಿಯಾತ್ರಯಂ ॥ ೮ ॥

ಘಟೋತ್ಕಚ ಉವಾಚ :—

ಕಲ್ಯಾಣಿ ಕಿಂವದಂತೀ ತೇ ಪ್ರಮುಕ್ತಾ ಸ್ವೋಚಿತಾ ಶುಭೇ ।
ಪುನರ್ನೈತದ್ವಚಸ್ತುಭ್ಯಂ ವಿಶತೇ ಮಮ ಚೇತಸಿ ॥ ೯ ॥
ವಾಮಃ ಕಾಮೋ ಯತೋ ಭದ್ರೇ ಯಸ್ಮಿನ್ಮನ ಉಪನಿಬಧ್ಯತೇ ।
ಸ ಚಾತ್ರ ನೈವ ಬಧ್ನಾತಿ ತದ್ವಯಂ ಕಿಂ ಪ್ರಕುರ್ಮಹೇ ॥ ೧೦ ॥
ಅದ್ಯ ತೇ ಸ್ವಾಮಿನೀ ದೃಷ್ಟ್ವಾ ಜಿತಾ ವಾ ಕ್ರೀಡತೇ ಮಯಾ ।
ತಯಾ ವಾ ವಿಜಿತೋ ಯಾಸ್ಯೇ ಪೂರ್ವೇಷಾಂ ಕಾಮಿನಾಂ ಗತಿಂ ॥೧೧॥

---

೬–೮. ಕರ್ಣಪ್ರಾವರಣೆಯು ಹೇಳುತ್ತಾಳೆ:— ಎಲೈ ಕಾಮುಕನಾದ ಮಹಾಬಾಹುವೆ! ಆ ಮೌರ್ವಿಯಾದ ಕಾಮುಕಟಂಕಟೆಯಿಂದ ನಿನಗೇನು ಪ್ರಯೋಜನ? ಆಕೆಯಿಂದ ಮುಂಚೆ ಅನೇಕ ಕಾಮುಕರು ಕೋಟಿಗಟ್ಟಳೆಯಾಗಿ ನಿಹತರಾಗಿರುವರು. ಘಟದಂತಿರುವ ಹಾಸವೂ ಯಾವಾಗಲೂ ಕೆದರಿ ನಿಂತಿರುವ ಕೂದಲೂ ಉಳ್ಳ ನಿನ್ನ ರೂಪವನ್ನು ನೋಡಿ ನೀನು ವೀರನೆಂದು ತಿಳಿದು ನಿನ್ನ ಆಜ್ಞೆಯನ್ನು ನಡೆಸುವಳಾಗಿ ಪಾದತಲದಲ್ಲಿ ಬಿದ್ದಿರುವೆನು. ಕಾಮುಕನಾದ ನೀನು ನನ್ನೊಡನೆ ಭೋಗಗಳನ್ನು ಅನುಭವಿಸಿಕೊಂಡಿರು. ನಿನ್ನ ಅನುಚರರಿಗೂ ಯೋಗ್ಯರಾದ ಮೂವರು ಪ್ರಿಯಪತ್ನಿಯರನ್ನೂ ಒದಗಿಸಿಕೊಡುತ್ತೇನೆ.

೯. ಘಟೋತ್ಕಚನು ಹೇಳುತ್ತಾನೆ:—ಎಲೌ ಕಲ್ಯಾಣಿಯೆ! ಸೌಭಾಗ್ಯವತಿಯಾದ ನಿನಗೆ ಉಚಿತವಾದ ಮಾತುಗಳನ್ನೇ ನೀನು ಆಡುತ್ತಿರುವೆ. ಆದರೆ ನಿನ್ನ ಈ ಮಾತುಗಳು ನನ್ನ ಮನಸ್ಸಿಗೆ ರುಚಿಸುವುದಿಲ್ಲ.

೧೦. ಕಾಮವು ವಕ್ರಗತಿಯುಳ್ಳುದೆಂದು ನಿನಗೆ ತಿಳಿದಿಲ್ಲವೆ? ಯಾರಲ್ಲಿ ನಮ್ಮ ಮನಸ್ಸು ಅಭಿಲಾಷೆಪಡುವುದೊ, ಅವರು ನಮ್ಮಲ್ಲಿ ಅನುರಾಗವನ್ನು ತೋರುವುದಿಲ್ಲ. ಆದುದರಿಂದ ನಾವು ಏನುಮಾಡಬಲ್ಲೆವು?

೧೧. ಇಂದು ನಿನ್ನ ಯಜಮಾನಿಯನ್ನು ನೋಡಲೇಬೇಕು. ಆಕೆಯು ಜಿತಳಾದರೆ ನನ್ನೊಡನೆ ಸೌಖ್ಯಪಡಲಿ. ಇಲ್ಲದೆ ಆಕೆಯಿಂದ ನಾನೇ ಸೋತೆನಾದರೆ ಹಿಂದಿನ ಕಾಮುಕರ ಗತಿಯನ್ನೇ ಹೊಂದುವೆನು.

ಕರ್ಣಪ್ರಾವರಣೇ ತಸ್ಯಾಶ್ಶೀಘ್ರಮೇವ ನಿವೇದ್ಯತಾಂ ।
ಯಥಾ ದರ್ಶನಮಾತ್ರೇಣ ಪೂಜಯಂತ್ಯತಿಥಿಂ ಖಲು ॥ ೧೨ ॥
ಇತಿ ಭೈಮೇರ್ವಚಃ ಶ್ರುತ್ವಾ ಪ್ರಸ್ಖಲಂತೀ ನಿಶಾಚರೀ ।
ಪ್ರಾಸಾದಶಿಖರಸ್ಥಾಂ ತಾಂ ಮೌರ್ವೀಮೇವ ವಚೋಽವದತ್ ॥ ೧೩ ॥
ದೇವಿ ಕೋಽಪಿ ಯುವಾ ಶ್ರೀಮಾಂಸ್ತ್ರೈಲೋಕ್ಯೇಷ್ವಮಿತಪ್ರಭಃ ।
ಕಾಮಾತಿಥಿಸ್ತವ ದ್ವಾರಿ ವರ್ತತೇ ದಿಶ ತತ್ಪರಂ ॥ ೧೪ ॥

ಕಾಮುಕಟಂಕಟೋವಾಚ :—

ಮುಚ್ಯತಾಂ ಶೀಘ್ರಮೇವಾಸೌ ಕಿಮರ್ಥಂ ವಾ ವಿಲಂಬಸೇ ।
ಕದಾಚಿದ್ದೈವಸಂಗತ್ಯಾ ಸಮಯೋ ಮೇಽಭಿಪೂರ್ಯತೇ ॥ ೧೫ ॥
ಇತ್ಯುಕ್ತವಚನಾಚ್ಚೇಟೀ ಪ್ರಾಪ್ಯಾವೋಚದ್ಘಟೋತ್ಕಚಂ ।
ವ್ರಜ ಶೀಘ್ರಂ ಕಾಮುಕ ತ್ವಂ ತಸ್ಯಾ ಮೃತ್ಯೋಶ್ಚ ಸನ್ನಿಧೌ ॥ ೧೬ ॥
ಇತ್ಯುಕ್ತಃ ಸ ಪ್ರಹಸ್ಯೈವ ತತ್ರೋತ್ಸೃಜ್ಯ ಸ್ವಕಾನುಗಾನ್ ।
ಪ್ರವಿವೇಶ ಗೃಹಂ ಭೈಮಿಃ ಸಿಂಹೋ ಮೇರುಗುಹಾಮಿವ ॥ ೧೭ ॥

---

೧೨. ಎಲೈ ಕರ್ಣಪ್ರಾವರಣೆಯೇ! ನಾನು ಬಂದಿರುವ ವಿಷಯವನ್ನು ನಿನ್ನ ಒಡತಿಗೆ ಬೇಗ ತಿಳಿಸು. ಅತಿಥಿಯನ್ನು ದರ್ಶನಮಾತ್ರದಿಂದಲೇ ಪೂಜಿಸುವುದು ಧರ್ಮವಲ್ಲವೆ?

೧೩. ಇಂತು ನುಡಿದ ಘಟೋತ್ಕಚನನ್ನು ಕಂಡು ರಾಕ್ಷಸಿಯು ಒಯ್ಯಾರದಿಂದ ಬಳುಕುತ್ತ ಪ್ರಾಸಾದದ ಮೇಲಿದ್ದ ಕಾಮುಕಟಂಕಟೆಗೆ ಹೇಳತೊಡಗಿದಳು.

೧೪. "ಎಲೌ ದೇವಿಯೇ! ಮೂರುಲೋಕಗಳಲ್ಲಿಯೂ ಕಾಣದ ಅಪ್ರತಿಮತೇಜೋವಂತನಾದ ಯುವಕನೊಬ್ಬನು ಕಾಮುಕನಾಗಿ ಅರಮನೆಯ ಬಾಗಿಲಲ್ಲಿ ಬಂದು ನಿಂತಿರುವನು. ನಿನ್ನ ಅಪ್ಪಣೆಯೇನು?"

೧೫. ಕಾಮುಕಟಂಕಟೆಯು ಹೇಳುತ್ತಾಳೆ:—ಎಲೌ! ಆತನನ್ನು ಜಾಗ್ರತೆಯಾಗಿ ಒಳಗೆ ಬಿಡಿರಿ. ಏತಕ್ಕಾಗಿ ತಡೆಮಾಡುತ್ತಿರುವಿರಿ? ದೈವಾನುಕೂಲದಿಂದ ನನ್ನ ಶಪಥವು ಸಫಲವಾದರೂ ಆಗಬಹುದು.

೧೬. ಈ ಮಾತುಗಳನ್ನು ಕೇಳಿ ಚೇಟಿಯು ಘಟೋತ್ಕಚನನ್ನು ಕುರಿತು "ಎಲೈ ಕಾಮುಕನೆ! ಜಾಗ್ರತೆಯಾಗಿ ಆಕೆಯ ಮತ್ತು ಮೃತ್ಯುವಿನ ಸನ್ನಿಧಿಗೆ ಒಮ್ಮೆಯೆ ಹೋಗು" ಎಂದಳು.

೧೭. ಇಂತೆನ್ನಲು ಆತನು ನಗುತ್ತ ತನ್ನ ಅನುಚರರನ್ನು ಅಲ್ಲಿಯೇ ಬಿಟ್ಟು ಸಿಂಹವು ಮೇರುಪರ್ವತದ ಗುಹೆಯನ್ನು ಹೊಗುವಂತೆ ಆ ಪ್ರಾಸಾದವನ್ನು ಹೊಕ್ಕನು.

ಸ ಪಶ್ಯಂಚ್ಛುಕಸಂಘಾತಾನ್ಸಾರಾವತಗಣಾಂಸ್ತಥಾ ।
ಸಾರಿಕಾಶ್ಚ ಮದೋನ್ಮತ್ತಾಶ್ಚೇಟೀಸ್ತಾಂ ಚಾಪ್ಯಪಶ್ಯತ ॥ ೧೮ ॥
ರೂಪೇಣ ವಯಸಾ ಚೈವ ರತೇರಪಿ ರತಿಂಕರೀಂ
ಆಂದೋಲಕಸುಖಾಸೀನಾಂ ಸರ್ವಾಭರಣಭೂಷಿತಾಂ ॥ ೧೯ ॥
ತಾಂ ವಿದ್ಯುತಮಿವೋನ್ನದ್ಧಾಂ ದೃಷ್ಟ್ವಾ ಭೈಮಿರಚಿಂತಯತ್ ।
ಅಹೋ ಕೃಷ್ಣೇನ ಪಿತ್ರಾ ಮೇ ನಿರ್ದಿಷ್ಟೇಯಂ ಮನೋಚಿತಾ ॥ ೨೦ ॥
ನ್ಯಾಯಮೇತತ್ಕೃತೇ ಪೂರ್ವಂ ನಷ್ಟಾ ಯತ್ಕಾಮಿನಾಂ ಗಣಾಃ ।
ಶರೀರಂ ಕ್ಷಯಪರ್ಯಾಪ್ತಂ ಕ್ಷೀಯತೇ ಯದಿ ಕಾಮಿನಾಂ ॥ ೨೧ ॥
ಕಾಮಿನೀನಾಂ ಕೃತೇ ಯೇಷಾಂ ಕ್ಷೀಯತೇ ಗಣನಾತ್ರ ಕಾ ।
ಏವಂ ಬಹುವಿಧಂ ಕಾಮೀ ಚಿಂತಯನ್ನಾಹ ಭೀಮಭೂಃ ॥ ೨೨ ॥
ನಿಷ್ಠುರೇ ವಜ್ರಹೃದಯೇ ಪ್ರಾಪ್ತೋಽಹಮತಿಥಿಸ್ತವ ।
ಉಚಿತಾಂ ತತ್ಸತಾಂ ಪೂಜಾಂ ಕುರು ಯಾ ತೇ ಹೃದಿ ಸ್ಥಿತಾ ॥ ೨೩ ॥

---

೧೮. ಅವನು ಗಿಳಿವಿಂಡುಗಳನ್ನೂ, ಪಾರಿವಾಳಗಳನ್ನೂ, ಕೋಗಿಲೆಗಳನ್ನೂ, ಮತ್ತೆಯರಾದ ದಾಸಿಯರನ್ನೂ ನೋಡಿಕೊಂಡು ಬರುತ್ತ ಕಡೆಗೆ ಆ ಕಾಮಕಟಂಕಟಿಯನ್ನೂ ಕಂಡನು.

೧೯. ಆಕೆಯು ರೂಪದಿಂದಲೂ, ಯೌವನದಿಂದಲೂ ರತೀದೇವಿಗೂ ಕಾಮವನ್ನುಂಟುಮಾಡುವಳಾಗಿ ಸರ್ವಾಭರಣಭೂಷಿತೆಯಾಗಿ ಉಯ್ಯಾಲೆಯ ಮೇಲೆ ಸುಖಾಸೀನಳಾಗಿದ್ದಳು.

೨೦. ಕಟ್ಟಿ ನಿಲ್ಲಿಸಿದ ಮಿಂಚಿನ ಬಳ್ಳಿಯಂತಿದ್ದ ಆಕೆಯನ್ನು ನೋಡಿ ಘಟೋತ್ಕಚನು ಯೋಚಿಸತೊಡಗಿದನು. ನಿಜವಾಗಿಯೂ ಶ್ರೀಕೃಷ್ಣನಿಂದಲೂ ನನ್ನ ತಂದೆಯಿಂದಲೂ ಸೂಚಿಸಲ್ಪಟ್ಟ ಇವಳೇ ನನಗೆ ಅನುರೂಪಳಾಗಿರುವಳು.

೨೧–೨೨. ಪೂರ್ವದಲ್ಲಿ ಅನೇಕ ಕಾಮುಕರ ಸಮೂಹಗಳು ಇವಳಿಗಾಗಿ ನಾಶವನ್ನು ಹೊಂದಿದುದು ನ್ಯಾಯವಾಗಿಯೇ ಇದೆ. ಶರೀರವು ಸಹಜವಾಗಿಯೇ ಕ್ಷಯವನ್ನು ಹೊಂದಿ ನಶಿಸುವುದಾಗಿರಲು, ಕಾಮಿನಿಯರಿಗಾಗಿ ಕಾಮುಕ ಪುರುಷರ ದೇಹಗಳು ನಾಶವನ್ನು ಹೊಂದುವುದರಲ್ಲಿ ಆಶ್ಚರ್ಯವೇನು? ಇಂತು ಕಾಮಿಯಾದ ಘಟೋತ್ಕಚನು ಬಹುವಿಧವಾಗಿ ಚಿಂತಿಸಿ ಅವಳನ್ನು ಕುರಿತು ಹೇಳತೊಡಗಿದನು.

೨೩. "ಎಲೌ ನಿಷ್ಠುರಳೆ! ಕಠೋರಹೃದಯಳೆ! ಇಗೋ ನಾನು ನಿನ್ನ ಅತಿಥಿಯಾಗಿ ಬಂದಿರುವೆನು. ನಿನ್ನ ಹೃದಯದಲ್ಲಿ ತೋರಿದಹಾಗೆ ಸತ್ಪುರುಷರಿಗೆ ಉಚಿತವಾದ ಪೂಜೆಯನ್ನು ಮಾಡುವವಳಾಗು."

ಇತಿ ಹೈಡಂಬಿವಚನಂ ಶ್ರುತ್ವಾ ಕಾಮುಕಟಂಕಟಾ ।
ವಿಸ್ಮಿತಾಭೂತ್ತಸ್ಯ ರೂಪಾತ್ಸ್ವಂ ನಿನಿಂದ ಚ ಬಾಲಿಶಂ ॥ ೨೪ ॥
ಧಿಗಹಂ ಯನ್ಮಯಾ ಪೂರ್ವಂ ಸಮಯಃ ಸ ಕೃತೋಽಭವತ್ ।
ನ ಕೃತೋಽಭೂದ್ಯದಿ ಪುರಾ ಅಭವಿಷ್ಯದಸೌ ಪತಿಃ ॥ ೨೫ ॥
ಇತಿ ಸಂಚಿಂತಯಂತೀ ಸಾ ಭೈಮಿಂ ವಚನಮಬ್ರವೀತ್ ।
ವೃಥಾ ತ್ವಮಾಗತೋ ಭದ್ರ ಜೀವನ್ಯಾಹಿ ಪುನಃ ಸುಖೀ ॥ ೨೬ ॥
ಅಥ ಕಾಮಯಸೇ ಮಾಂ ತ್ವಂ ತತ್ಕಥಾಂ ಶೀಘ್ರಮುಚ್ಚರ ।
ಕಥಾಮಾಭಾಷ್ಯ ಯದಿ ಮಾಂ ಸಂದೇಹೇ ಪಾತಯಿಷ್ಯಸಿ ।
ತತೋಽಹಂ ವಶಗಾ ಜಾತಾ ಹತೋ ವಾ ಸ್ವಪ್ಸ್ಯಸೇ ಮಯಾ ॥ ೨೭ ॥

ಸೂತ ಉವಾಚ :—

ಇತ್ಯುಕ್ತವಚನಾಮೇತಾಂ ನೇತ್ರೋಪಾಂತೇನ ವೀಕ್ಷ್ಯ ಸಃ ॥ ೨೮ ॥
ಸ್ಮೃತ್ವಾ ಚರಾಚರಗುರುಂ ಕೃಷ್ಣಮಾರಬ್ಧವಾನ್ಕಥಾಂ ।
ಕಸ್ಯಾಂಚಿದಭವತ್ಪತ್ನ್ಯಾಂ ಯುವಾ ಕೋಽಪ್ಯಜಿತೇಂದ್ರಿಯಃ ॥ ೨೯ ॥

---

೨೪. ಹಿಡಿಂಬಾಪುತ್ರನ ಈ ಮಾತುಗಳನ್ನು ಕೇಳಿ ಕಾಮುಕಟಂಕಟೆಯು ವಿಸ್ಮಯಗೊಂಡು ಆತನ ರೂಪವನ್ನು ನೋಡಿ ತನ್ನ ಮೌಢ್ಯವನ್ನೇ ನಿಂದಿಸಿ ಕೊಂಡಳು.

೨೫. "ಅಂತಹ ಕಠಿನವಾದ ಶಪಥವನ್ನು ಮುನ್ನ ಮಾಡಿದ ನನಗೆ ಧಿಕ್ಕಾರವಿರಲಿ. ಹಾಗೆ ಮಾಡದಿದ್ದಿದ್ದರೆ ಈತನೇ ನನಗೆ ಪತಿಯಾಗಬಹು ದಾಗಿತ್ತು."

೨೬. ಹೀಗೆ ಯೋಚನೆ ಮಾಡುತ್ತಲೇ ಅವಳು ಆತನನ್ನು ಕುರಿತು ಇಂತೆಂದಳು. ಎಲೈ ಪುಣ್ಯಾತ್ಮನೆ! ನೀನು ನಿಷ್ಪ್ರಯೋಜನವಾಗಿ ಇಲ್ಲಿಗೆ ಬಂದಿರುವೆ. ಸುಖವಾಗಿ ಜೀವದಿಂದ ಹೀಗೆಯೇ ಹಿಂದಿರುಗು.

೨೭. ಹಾಗಲ್ಲದೆ ನನ್ನನ್ನು ಅಪೇಕ್ಷಿಸುವೆಯಾದರೆ ಬೇಗ ಕಥೆಯೊಂದನ್ನು ಹೇಳು. ನಿನ್ನ ಪ್ರಶ್ನೆಯಿಂದ ನನ್ನನ್ನು ಸಂದೇಹದಲ್ಲಿ ಹಾಕುವೆಯಾದರೆ ಆಗ ನಾನು ನಿನ್ನ ವಶಳಾಗುತ್ತೇನೆ. ಇಲ್ಲದಿದ್ದಲ್ಲಿ ನೀನು ನನ್ನಿಂದ ಹತನಾಗಿ ಭೂಮಿ ಯಲ್ಲಿ ಮಲಗುವೆ.

೨೮–೨೯. ಸೂತನು ಹೇಳುತ್ತಾನೆ:—ಹೀಗೆ ಹೇಳಿದ ಆಕೆಯನ್ನು ಕಡೆ ಗಣ್ಣಿನಿಂದ ನೋಡುತ್ತ ಘಟೋತ್ಕಚನು ಸಕಲ ಸ್ಥಾವರಜಂಗಮಗಳಿಗೂ ಗುರುವಾದ ಶ್ರೀಕೃಷ್ಣನನ್ನು ಮನಸ್ಸಿನಲ್ಲಿ ನೆನಸಿ ಕಥೆಯೊಂದನ್ನು ಹೇಳತೊಡ ಗಿದನು. "ಒಬ್ಬಾನೊಬ್ಬ ಪುರುಷನ ಪತ್ನಿಯ ಹೊಟ್ಟೆಯಲ್ಲಿ ಕೇವಲ ಇಂದ್ರಿಯ ಲೋಲುಪನಾದ ಮಗನೊಬ್ಬನು ಹುಟ್ಟಿ ಯೌವನಸ್ಥನಾದನು.

ತಸ್ಯ ಚೈಕಾ ಸುತಾ ಜಜ್ಞೇ ಭಾರ್ಯಾ ತಸ್ಯ ಮೃತಾಽಭವತ್ ।
ತತೋ ಬಾಲಕಿಕಾಂ ಪುತ್ರೀಂ ರರಕ್ಷ ಚ ಪುಪೋಷ ಚ ॥ ೩೦ ॥
ಸಾ ಯದಾಭೂದ್ಯೌವನಗಾ ವ್ಯಂಜಿತಾವಯವಾ ಶುಭಾ ।
ಪ್ರೋಲ್ಲಸತ್ಕುಚಮಧ್ಯಾಂಗೀ ಪ್ರೋಲ್ಲಸನ್ಮುಖಪಂಕಜಾ ॥ ೩೧ ॥
ತದಾಸ್ಯ ಕಾಮಲುಳಿತಮಾಲಾನಂ ಪ್ರಜಹೌ ಮನಃ ।
ಪ್ರೋವಾಚ ತಾಂ ಚ ತನಯಾಂ ಸಮಾಲಿಂಗ್ಯ ದುರಾಶಯಃ ॥ ೩೨ ॥
ಪ್ರಾತಿವೇಶ್ಮಕಪುತ್ರೀ ತ್ವಂ ಮಯಾನೀಯಾತ್ರ ಪೋಷಿತಾ ।
ಭಾರ್ಯಾರ್ಥಂ ಸುಚಿರಂ ಕಾಲಂ ತತ್ಕಾರ್ಯಂ ಸಾಧಯ ಪ್ರಿಯೇ ॥೩೩॥
ಇತ್ಯುಕ್ತಾ ಸಾ ಚ ಮೇನೇ ಚ ತತ್ತಥೈವ ವಚಸ್ತದಾ ।
ಪತಿತ್ವೇನ ಚ ಭೇಜೇ ತಂ ಭಾರ್ಯಾತ್ವೇನ ಸ ತಾಂ ತಥಾ ॥ ೩೪ ॥
ತತಸ್ತಸ್ಯಾಂ ಸುತಾ ಜಜ್ಞೇ ತಸ್ಮಾನ್ಮದನರಾಸಭಾತ್ ।
ವದ ಸಾ ತಸ್ಯ ಭವತಿ ಕಿಂ ದೌಹಿತ್ರೀ ಸುತಾಥವಾ ॥
ಏನಂ ಪ್ರಶ್ನಂ ಮಮ ಬ್ರೂಹಿ ಶೀಘ್ರಂ ಚೇಚ್ಛಕ್ತಿರಸ್ತಿ ತೇ ॥ ೩೫ ॥

---

೩೦. ಅವನಿಗೊಬ್ಬ ಹೆಣ್ಣುಮಗಳಾದಳು. ಆ ಬಳಿಕ ಅವನ ಹೆಂಡತಿಯೂ ಸತ್ತುಹೋದಳು. ಬಳಿಕ ಎಳಗುವರಿಯಾದ ಪುತ್ರಿಯನ್ನು ಅವನು ರಕ್ಷಣೆಮಾಡಿ ಪೋಷಿಸುತ್ತಿದ್ದನು.

೩೧–೩೨. ಕಾಲಕ್ರಮದಲ್ಲಿ ಅವಳೂ ಯೌವನವನ್ನು ಹೊಂದಿ ಪ್ರಕಟಗಳಾದ ಅವಯವಗಳುಳ್ಳವಳಾದಳು. ಆಗಲವಳು ಉನ್ನತಗಳಾದ ಕುಚಗಳ ಭಾರದಿಂದ ಬಳುಕುವ ಬಡನಡುವುಳ್ಳವಳೂ, ಮಂದಸ್ಮಿತದಿಂದ ಕೂಡಿದ ಮುಖಕಮಲವುಳ್ಳವಳೂ ಆಗಿದ್ದಳು. ಆಕೆಯನ್ನು ಕಂಡೊಡನೆ ಕಾಮವಶವನ್ನೈದಿದ ಅವನ ಮನಸ್ಸು ಹಿಡಿತಕ್ಕೆ ನಿಲುಕದಾಯಿತು. ಆ ದುರಾತ್ಮನು ಆ ಮಗಳನ್ನೇ ಆಲಿಂಗಿಸಿ ಇಂತೆಂದು ಹೇಳಿದನು.

೩೩. 'ಎಲೈ ಕನ್ಯೆಯೆ! ನೀನು ಎದುರುಮನೆಯ ಹುಡುಗಿಯು. ನಾನು ನಿನ್ನನ್ನು ಪತ್ನಿಯಾಗಿ ಪಡೆಯಬೇಕೆಂಬ ಅಭಿಲಾಷೆಯಿಂದ ಬಹಳಕಾಲದಿಂದಲೂ ಪೋಷಿಸುತ್ತಿರುವೆನು. ಈಗ ಆ ಕಾರ್ಯವನ್ನು ಸಾಧಿಸಿಕೊಡು.'

೩೪. ಹೀಗೆ ಹೇಳಲ್ಪಟ್ಟ ಆ ಕನ್ಯೆಯು ಅವನ ಮಾತನ್ನು ನಿಜವೆಂದೇ ತಿಳಿದುಕೊಂಡಳು. ಅವನನ್ನು ಪತಿಯೆಂದೇ ತಿಳಿದು ಸೇವಿಸಿದಳು. ಅವನೂ ಅವಳನ್ನು ಪತ್ನಿಯಾಗಿ ಸ್ವೀಕರಿಸಿದನು.

೩೫. ಬಳಿಕ ಕಾಮಗಾರ್ದಭನಾದ ಅವನಿಂದ ಆಕೆಗೆ ಒಂದು ಹೆಣ್ಣುಮಗು ಜನಿಸಿತು. ಆ ಶಿಶುವು ಅವನಿಗೆ ಮೊಮ್ಮಗಳಾಗಬೇಕೆ? ಅಥವ ಮಗಳಾಗಬೇಕೆ? ನಿನಗೆ ಶಕ್ತಿಯಿರುವುದಾದರೆ ಇದಕ್ಕೆ ಉತ್ತರವನ್ನು ಶೀಘ್ರವಾಗಿ ತಿಳಿಸು.''

ಸೂತ ಉವಾಚ:—

ಇತಿ ಪ್ರಶ್ನಂ ಸಾ ಚ ಶ್ರುತ್ವಾ ಚಿಂತಯದ್ಬಹುಧಾ ಹೃದಿ ॥ ೩೬ ॥
ನ ಚ ಪಶ್ಯತಿ ನಿರ್ಧಾರಂ ಪ್ರಶ್ನಸ್ಯಾಸ್ಯ ಕಥಂಚನ ।
ತತಃ ಪ್ರಶ್ನೇನ ವಿಜಿತಾ ಸ್ವಾಂ ಶಕ್ತಿಂ ಸಮುಪಾದದೇ ॥ ೩೭ ॥
ಅತಾಡಯದ್ರುಕ್ಮರಜ್ಜುಂ ಕರಾಭ್ಯಾಂ ದೋಲಕಸ್ಯ ಚ
ತತೋ ರಕ್ಷಾಂಸಿ ನಿಷ್ಪೇತುಃ ಕೋಟಿಶೋ ಭೀಷಣಾನ್ಯತಿ ॥ ೩೮ ॥
ಸಿಂಹವ್ಯಾಘ್ರವರಾಹಾಶ್ಚ ಮಹಿಷಾಶ್ಚಿತ್ರಕಾ ಮೃಗಾಃ ।
ಸಮೀಕ್ಷ್ಯ ತಾನಸಂಖ್ಯೇಯಾನ್ಖಾದಿತುಂ ಧಾವತೋ ರುಷಾ ॥ ೩೯ ॥
ಅವಾದಯನ್ನಖೌ ಭೈಮಿಃ ಕನಿಷ್ಠಾಂಗುಷ್ಠಜೌ ಹಸನ್ ।
ತತೋ ವಿನಿಸ್ಸೃತಾಸ್ತತ್ರ ದ್ವಿಗುಣಾ ರಾಕ್ಷಸಾದಯಃ ॥ ೪೦ ॥
ತೈರ್ಮಾರ್ಗನಿರ್ಮಿತಾಸ್ಸರ್ವೇ ಕ್ಷಣಾದೇವ ಸ್ಮ ಭಕ್ಷಿತಾಃ ।
ವಿಜಿತಾಯಾಂ ಸ್ವಶಕ್ತೌ ಚ ಬಲಶಕ್ತಿಮುಪಾದದೇ ॥ ೪೧ ॥

---

೩೬. ಸೂತನು ಹೇಳುತ್ತಾನೆ:—ಈ ಪ್ರಶ್ನೆಯನ್ನು ಕೇಳಿ ಅವಳು ಬಹು ವಿಧವಾಗಿ ತನ್ನ ಮನಸ್ಸಿನಲ್ಲಿ ಯೋಚಿಸತೊಡಗಿದಳು.

೩೭. ಹೇಗೆಹೇಗೆ ಯೋಚನೆ ಮಾಡಿದರೂ ಅವಳು ಈ ಪ್ರಶ್ನೆಯ ನಿರ್ಧಾರ ವನ್ನು ಹೊಂದಲಾರದಾದಳು. ಈ ಪ್ರಕಾರವಾಗಿ ಘಟೋತ್ಕಚನು ಹಾಕಿದ ಅತಿ ಕ್ಲಿಷ್ಟವಾದ ಪ್ರಶ್ನೆಯಿಂದ ಪರಾಜಿತಳಾಗುವ ಸಂಭವವು ಒದಗಿಬರಲು ಅವಳು ಇನ್ನೇನುಮಾಡುವುದಕ್ಕೂ ತೋರದೆ ತನ್ನ ಶಕ್ತಿಯನ್ನು ಉಪಯೋಗಿಸಿದಳು.

೩೮. ತನ್ನ ಎರಡು ಕೈಗಳಿಂದಲೂ ಉಯ್ಯಾಲೆಯ ಎರಡು ಬೆಳ್ಳಿಯ ಸರಪಣಿಗಳನ್ನು ಹೊಡೆಯಲು ಅವುಗಳಿಂದ ಅತಿ ಭಯಂಕರರಾದ ರಾಕ್ಷಸರು ಕೋಟಿಗಟ್ಟಲೆಯಾಗಿ ಹೊರಟರು.

೩೯–೪೦. ಇಷ್ಟೆಯಲ್ಲದೆ ಸಿಂಹಗಳೂ, ಹುಲಿಗಳೂ, ಕಾಡುಹಂದಿಗಳೂ, ಕಾಡೆಮ್ಮೆಗಳೂ, ಚಿರತೆಗಳೂ, ಇತರ ದುಷ್ಟಮೃಗಗಳೂ ಉತ್ಪನ್ನವಾದವು. ಆಗ ತನ್ನನ್ನು ತಿನ್ನಲು ರೋಷದಿಂದ ಮುಂದಕ್ಕೆ ಬರುತ್ತಿರುವ ಅಸಂಖ್ಯೇಯ ವಾದ ಈ ಕ್ರೂರಮೃಗಗಳ ಮತ್ತು ರಾಕ್ಷಸರ ಗುಂಪನ್ನು ಕಂಡು ಭೀಮಾತ್ಮಜ ನಾದ ಆ ಘಟೋತ್ಕಚನು ನಗುತ್ತ ತನ್ನ ಕೈಗಳ ಕಿರುಬೆರಳಿನ ಉಗುರುಗಳನ್ನು ಹೆಬ್ಬೆರಳಿನ ಉಗುರಿನಿಂದ ಉಜ್ಜಲು ಆಕೆಯ ರಾಕ್ಷಸಗಣದ ಎರಡರಷ್ಟು ದೈತ್ಯ ಸಮೂಹವು ಸಂಭವಿಸಿತು.

೪೧. ಅವರಿಂದ ಕಾಮಕಟಂಕಟೆಯು ನಿರ್ಮಿಸಿದ ರಾಕ್ಷಸಕುಲವೆಲ್ಲವೂ ಕ್ಷಣಮಾತ್ರದಲ್ಲಿಯೇ ಕಬಳೀಕೃತವಾಯಿತು. ಇಂತು ತನ್ನ ಶಕ್ತಿಯು ಕಳೆ ಗುಂದಲು ಆಕೆಯು ಅಸ್ತ್ರಶಸ್ತ್ರ ಬಲವನ್ನು ಪ್ರಯೋಗಿಸಲೆಳಸಿದಳು.

ಉತ್ಥಾಯ ಸಹಸಾ ದೋಲಾತ್ಖಡ್ಗಮಾದಾತುಮೈಚ್ಛತ ।
ಉತ್ತಿಷ್ಠಂತೀಂ ಚ ತಾಂ ಭೈಮಿರನುಸೃತ್ಯ ಜವಾದಿವ ॥ ೪೨ ॥
ಕೇಶೇಷ್ವಾದಾಯ ಸವ್ಯೇನ ಪಾಣಿನಾಪಾತಯದ್ಭುವಿ ।
ತತಃ ಕಂಠೇ ಸವ್ಯಪಾದಂ ದತ್ವಾssದಾಯ ಚ ಕರ್ತಿಕಾಂ ॥ ೪೩ ॥
ದಕ್ಷಿಣೇನ ಕರೇಣಾಸ್ಯಾಶ್ಛೇತ್ತುಮೈಚ್ಛತ ನಾಸಿಕಾಂ ।
ವಿಸ್ಫುರಂತೀ ತತೋ ಮೌರ್ವೀ ಮುಂದಮಾಹ ಘಟೋತ್ಕಚಂ ॥ ೪೪ ॥

ಪ್ರಶ್ನೇನ ಶಕ್ತ್ಯಾ ಚ ಬಲೇನ ನಾಥ
ತ್ರಿಧಾ ತ್ವಯಾಹಂ ವಿಜಿತಾ ನಮಸ್ತೇ ।
ತನ್ಮುಂಚ ಮಾಂ ಕರ್ಮಕರೀ ತವಾಸ್ಮಿ
ಸಮಾದಿಶ ತ್ವಂ ಪ್ರಕರೋಮಿ ತಚ್ಚ ॥ ೪೫ ॥

ಘಟೋತ್ಕಚ ಉವಾಚ :—

ಯದ್ಯೇವಂ ತರ್ಹಿ ಮುಕ್ತಾಸಿ ಭೂಯೋ ದರ್ಶಯ ಯದ್ಬಲಂ ।
ಏವಮುಕ್ತ್ವಾ ಮುಮೋಚೈನಾಂ ಮುಕ್ತಾ ಚಾಹ ಪ್ರಣಮ್ಯ ಸಾ ॥ ೪೬ ॥
ಜಾನಾಮಿ ತ್ವಾಂ ಮಹಾಬಾಹೋ ವೀರಂ ಶಕ್ತಿಮತಾಂ ವರಂ ।
ಸರ್ವರಾಕ್ಷಸಭರ್ತಾರಂ ತ್ರೈಲೋಕ್ಯೇಽಮಿತವಿಕ್ರಮಂ ॥ ೪೭ ॥

---

೪೨–೪೪. ವೇಗದಿಂದ ಉಯ್ಯಾಲೆಯನ್ನು ಬಿಟ್ಟು ಖಡ್ಗವನ್ನು ಹಿಡಿಯಲು ಹೋಗುತ್ತಿರುವ ಆಕೆಯನ್ನು ಘಟೋತ್ಕಚನು ಕಂಡು ನಿಮಿಷಮಾತ್ರದಲ್ಲಿ ಹಿಂಬಾಲಿಸಿ ತನ್ನ ಎಡಗೈಯಿಂದ ಅವಳ ಜಡೆಯನ್ನು ಹಿಡಿದೆಳೆದು ನೆಲದಲ್ಲಿ ಕೆಡವಿದನು. ಬಳಿಕ ಎಡಗಾಲನ್ನು ಅವಳ ಕತ್ತಿನಲ್ಲಿಟ್ಟು ಕತ್ತಿಯನ್ನು ಒರೆಯಿಂದ ತೆಗೆದು ಅವಳ ಮೂಗನ್ನು ಕೊಯ್ಯಲುದ್ಯುಕ್ತನಾದನು. ಆಗ ಭಯದಿಂದ ನಡುಗುತ್ತ ಕಾಮಕಟಂಕಟೆಯು ಘಟೋತ್ಕಚನನ್ನು ಕುರಿತು ಹೇಳತೊಡಗಿದಳು.

೪೫. "ಎಲೈ ನಾಥನೆ! ನಿನ್ನ ಪ್ರಶ್ನೆಯಿಂದಲೂ, ಶಕ್ತಿಯಿಂದಲೂ, ಬಲದಿಂದಲೂ ಇಂತು ಮೂರು ಬಗೆಯಿಂದ ನಿನಗೆ ನಾನು ಸೋತಿರುವೆನು. ಇದೋ ನಿನಗೆ ನಮಸ್ಕರಿಸುವೆನು. ಆದುದರಿಂದ ನಿನಗೆ ದಾಸಿಯಾಗಿರುವ ನನ್ನನ್ನು ಬಿಟ್ಟುಬಿಡು. ನೀನು ಆಜ್ಞೆಮಾಡಿದುದನ್ನು ನೆರವೇರಿಸುವೆನು."

೪೬. ಘಟೋತ್ಕಚನು ಹೇಳುತ್ತಾನೆ:—"ಹಾಗಾದರೆ ನಿನ್ನನ್ನು ಬಿಟ್ಟುಬಿಟ್ಟಿರುವೆನು. ಮತ್ತೆ ನಿನ್ನ ಬಲವನ್ನು ತೋರಿಸು." ಇಂತೆಂದು ಅವಳನ್ನು ಬಿಡಲು ಅವಳು ಅವನಿಗೆ ನಮಸ್ಕರಿಸಿ ಹೇಳಿದಳು.

೪೭. "ಎಲೈ ಮಹಾಬಾಹುವೆ! ನೀನು ವೀರನೂ, ಶಕ್ತಿವಂತರಲ್ಲಿ ಶ್ರೇಷ್ಠನೂ, ಸಕಲ ರಾಕ್ಷಸಕುಲಕ್ಕೆ ಒಡೆಯನೂ, ಮೂರು ಲೋಕಗಳಲ್ಲಿಯೂ ಅಪ್ರತಿಮ ಪರಾಕ್ರಮವುಳ್ಳವನೂ ಆಗಿರುವೆಯೆಂಬುದನ್ನು ತಿಳಿದೆನು.

ಗುಹ್ಯಕಾಧಿಪತಿಸ್ತ್ವಂ ಹಿ ಕಾಲನಾಭ ಇತಿ ಸ್ಮೃತಃ ।
ಷಷ್ಟಿಕೋಟಿಪತಿರ್ಜಾತೋ ಯಕ್ಷರಕ್ಷಾಕೃತೇ ಭುವಿ ॥ ೪೮ ॥
ಇತಿ ಮಾಂ ಪ್ರಾಹ ಕಾಮಾಖ್ಯಾ ಸರ್ವಂ ತತ್ಸಂಸ್ಮರಾಮ್ಯಹಂ ।
ಇದಂ ಗೇಹಂ ಸಾನುಗಂ ಮೇ ದತ್ತಂ ಮಯಾತ್ಮನಾ ತವ ।
ಸಮಾದಿಶ ಪ್ರಾಣನಾಥ ಕಿಮಾದೇಶಂ ಕರೋಮಿ ತೇ ॥ ೪೯ ॥

ಘಟೋತ್ಕಚ ಉವಾಚ :—

ಪ್ರಚ್ಛನ್ನಸ್ತಸ್ಯ ಘಟತೇ ನ ವಿವಾಹಃ ಕಥಂಚನ ।
ಮೌರ್ವಿ ಯಸ್ಯ ಹಿ ವರ್ತಂತೇ ಪಿತರೌ ಬಾಂಧವಾಸ್ತಥಾ ॥ ೫೦ ॥
ತನ್ಮಾಂ ಶೀಘ್ರಂ ವಹ ಶುಭೇ ಶಕ್ರಪ್ರಸ್ಥಾಯ ಸಂಪ್ರತಿ ।
ಅಯಂ ಕುಲಕ್ರಮೋಽಸ್ಮಾಕಂ ಯದ್ಭಾರ್ಯಾ ಪತಿಮುದ್ವಹೇತ್ ॥೫೧॥
ತತ್ರಾನುಜ್ಞಾಂ ಸಮಾಸಾದ್ಯ ಪರಿಣೇಷ್ಯಾಮಿ ತ್ವಾಮಹಂ ॥ ೫೨ ॥
ಭಗದತ್ತಮಥೋ ಮೌರ್ವೀ ತತೋ ನಾಥಂ ನ್ಯವೇದಯತ್ ।
ಸಮಾದಾಯ ಬಹುದ್ರವ್ಯಂ ವಿಸಸರ್ಜಾಥ ಭ್ರಾತರಂ ॥ ೫೩ ॥

---

೪೮. ಕಾಲನಾಭನೆಂಬ ಹೆಸರಿನ ಗುಹ್ಯನಾಯಕನೇ ನೀನು. ಅರುವತ್ತು ಕೋಟಿಗಳಿಗೆ ಒಡೆಯನಾದ ನೀನು ಭೂಮಿಯಲ್ಲಿ ಯಕ್ಷರ ರಕ್ಷಣೆಗೋಸ್ಕರ ಅವತರಿಸಿರುವೆ.

೪೯. ಇಂತೆಂದು ಕಾಮಾಖ್ಯೆಯು ನನಗೆ ಹೇಳಿದುದನ್ನೆಲ್ಲ ಈಗ ನೆನಸಿಕೊಳ್ಳುತ್ತಿರುವೆನು. ನನ್ನ ಮನಸ್ಸನ್ನೂ ಈ ಗೃಹವನ್ನೂ ಪರಿಕರಗಳೆಲ್ಲವನ್ನೂ ನಾನು ನಿನಗೆ ಒಪ್ಪಿಸಿರುವೆನು. ಎಲೈ ಪ್ರಾಣನಾಥನೆ! ನಿನ್ನ ಯಾವ ಅನುಜ್ಞೆಯನ್ನು ನೆರವೇರಿಸಲಿ?"

೫೦. ಘಟೋತ್ಕಚನು ಹೇಳುತ್ತಾನೆ:—"ಎಲೌ ಮುರುಪುತ್ರಿಯೆ! ತಾಯಿ ತಂದೆಗಳೂ, ಬಂಧುಗಳೂ ಇರುವವರಿಗೆ ಗುಪ್ತರೀತಿಯ ವಿವಾಹವು ಸರ್ವಥಾ ಯೋಗ್ಯವಾದುದಲ್ಲ.

೫೧. ಆದುದರಿಂದ ನನ್ನನ್ನು ಬೇಗನೆ ಇಂದ್ರಪ್ರಸ್ಥನಗರಕ್ಕೆ ಕರೆದುಕೊಂಡು ಹೋಗು. ಕನ್ಯೆಯೇ ವರನನ್ನು ವಿವಾಹವಾಗುವುದೇ ನಮ್ಮ ಕುಲದ ಪದ್ಧತಿಯಾಗಿರುವುದು.

೫೨. ಅಲ್ಲಿ ಹಿರಿಯರ ಅನುಜ್ಞೆಯನ್ನು ಪಡೆದ ಬಳಿಕ ನಿನ್ನನ್ನು ಮದುವೆಯಾಗುತ್ತೇನೆ."

೫೩. ಆಗ ಅವಳು ಭಗದತ್ತನಿಗೆ ತನ್ನ ಪತಿಯನ್ನು ಪರಿಚಯಮಾಡಿಸಿದಳು. ತರುವಾಯ ಅವಳು ಅಪಾರವಾದ ದ್ರವ್ಯವನ್ನು ತೆಗೆದುಕೊಂಡು ಅಣ್ಣನನ್ನು ಬಿಟ್ಟು ಬಂದಳು.

ತತಃ ಪೃಷ್ಠಿಂ ಸಮಾರೋಪ್ಯ ಘಟೋತ್ಕಚಮನಿಂದಿತಾ ।
ನಾನಾದ್ರವ್ಯಪರೀವಾರಾ ಶಕ್ರಪ್ರಸ್ಥಂ ಸಮಾವ್ರಜತ್ ॥ ೫೪ ॥
ತತೋಽಸೌ ವಾಸುದೇವೇನ ಪಾಂಡವೈಶ್ಚಾಭಿನಂದಿತಃ ।
ಶುಭೇ ಲಗ್ನೇ ಪಾಣಿಮಸ್ಯಾ ಜಗೃಹೇ ಭೀಮನಂದನಃ ॥ ೫೫ ॥
ಕುರೂಣಾಂ ರಾಕ್ಷಸಾನಾಂ ಚ ಪ್ರೋಕ್ತೋತ್ತಮ ವಿಧಾನತಃ ।
ಉದ್ವಾಹ್ಯ ತಾಂ ತದ್ಧನೈಶ್ಚ ತರ್ಪಯಾಮಾಸ ಪಾಂಡವಾನ್ ॥ ೫೬ ॥
ಕುಂತೀ ಚ ದ್ರೌಪದೀ ಚೋಭೇ ಮುಮುದಾತೇ ನಿತಾಂತತಃ ।
ಮಂಗಲಾನ್ಯಸ್ಯ ಚಕ್ರಾತೇ ಮೌರ್ವ್ಯಾಶ್ಚ ಧನತರ್ಪಿತೇ ॥ ೫೭ ॥
ತತೋ ವಿವಾಹೇ ನಿರ್ವೃತ್ತೇ ಪ್ರತಿಪೂಜ್ಯ ಘಟೋತ್ಕಚಂ ।
ಭಾರ್ಯಯಾ ಸಹಿತಂ ರಾಜಾ ಸ್ವರಾಜ್ಯಾಯ ಸಮಾದಿಶತ್ ॥ ೫೮ ॥
ಮೌರ್ವ್ಯಾಜ್ಞಾಂ ಶಿರಸಾ ಗೃಹ್ಯ ಹೈಡಂಬಿರ್ಭಾರ್ಯಯಾನ್ವಿತಃ ।
ಶುಭಂ ಹಿಡಂಬಸ್ಯ ವನೇ ಸ್ವರಾಜ್ಯಂ ಸಮುಪಾವ್ರಜತ್ ॥ ೫೯ ॥
ತತೋ ರಾಕ್ಷಸಯೋಷಾಭಿರ್ವೀರಕಾಂಸ್ಯೈಃ ಪ್ರವರ್ಧಿತಃ ।
ಮಹೋತ್ಸವೇನ ಮಹತಾ ಸ್ವರಾಜ್ಯೇ ಪ್ರಮುಮೋದ ಸಃ ॥ ೬೦ ॥

---

೫೪–೫೫. ಬಳಿಕ ಪುಣ್ಯಚರಿತ್ರೆಯಾದ ಆಕೆಯು ನಾನಾ ದ್ರವ್ಯಗಳೊಡನೆ ಘಟೋತ್ಕಚನೊಡನೆ ಸೂರ್ಯಬಿಂಬವನ್ನೇರಿ ಇಂದ್ರಪ್ರಸ್ಥನಗರವನ್ನು ಸೇರಿದಳು. ಆಗ ಶ್ರೀಕೃಷ್ಣನಿಂದಲೂ, ಪಾಂಡವರಿಂದಲೂ ಅಭಿನಂದಿಸಲ್ಪಟ್ಟ ಘಟೋತ್ಕಚನು ಶುಭಲಗ್ನದಲ್ಲಿ ಅವಳ ಕೈಯನ್ನು ಹಿಡಿದನು.

೫೬–೫೭. ಇಂತು ಕೌರವರ ಮತ್ತು ರಾಕ್ಷಸರ ವಿವಾಹಗಳ ಪದ್ಧತಿಗಳನ್ನನುಸರಿಸಿ ಅವಳನ್ನು ಮದುವೆಯಾಗಿ ಆ ಧನದಿಂದ ಪಾಂಡವರನ್ನು ಸಂತೋಷಗೊಳಿಸಿದನು. ಕುಂತಿಯೂ, ದ್ರೌಪದಿಯೂ ಕೂಡ ಧನದಿಂದ ತೃಪ್ತಿಗೊಂಡು ಅತ್ಯಂತ ಹರ್ಷಗೊಂಡು ಅವಳಿಗೂ ಅವನಿಗೂ ಮಂಗಳಾಶೀರ್ವಾದವನ್ನು ಮಾಡಿದರು.

೫೮. ಇಂತು ವಿವಾಹಕಾರ್ಯವು ನೆರವೇರಲು ರಾಜನಾದ ಯುಧಿಷ್ಠಿರನು ಘಟೋತ್ಕಚನನ್ನು ಆದರಿಸಿ ಹೆಂಡತಿಯೊಡನೆ ತನ್ನ ರಾಜ್ಯಕ್ಕೆ ಹೋಗುವಂತೆ ಅಪ್ಪಣೆಮಾಡಿದನು.

೫೯. ಹಿಡಂಬಾಪುತ್ರನು ತನ್ನ ಪತ್ನಿಯೊಡನೆ ಈ ಆಜ್ಞೆಯನ್ನು ಶಿರಸಾ ವಹಿಸಿ ಹಿಡಂಬವನದಲ್ಲಿ ಉತ್ತಮವಾದ ತನ್ನ ರಾಜ್ಯವನ್ನು ಕುರಿತು ತೆರಳಿದನು.

೬೦. ಬಳಿಕ ರಾಕ್ಷಸಸ್ತ್ರೀಯರು ವೀರೋಚಿತಗಳಾದ ಮಂಗಳಾರತಿಗಳನ್ನು ಮಾಡುತ್ತಿರಲು ಅತ್ಯುತ್ತಮವಾಗಿ ಮಹಾ ವೈಭವದಿಂದ ಸ್ವರಾಜ್ಯದಲ್ಲಿ ಸಂತೋಷವಾಗಿದ್ದನು.

ತತೋ ವನೇಷು ಚಿತ್ರೇಷು ನಿಮ್ನಗಾಪುಲಿನೇಷು ಚ ।
ರೇಮೇ ಸಹ ತಯಾ ಭೈಮಿರ್ಮಂಡೋದರ್ಯೇವ ರಾವಣಃ ॥ ೬೧ ॥
ಏವಂ ವಿಕ್ರೀಡತಸ್ತಸ್ಯ ಗರ್ಭೋ ಜಜ್ಞೇ ಮಹಾದ್ಯುತೇಃ ।
ಹೈಡಂಬೇ ರಾಕ್ಷಸವ್ಯಾಘ್ರಾದ್ಬಾಲಸೂರ್ಯಸಮಪ್ರಭಃ ॥ ೬೨ ॥
ಸ ಜಾತಮಾತ್ರೋ ವವೃಧೇ ಕ್ಷಣಾದ್ಯೌವನಗೋಽಭವತ್ ।
ನೀಲಮೇಘಚಯಪ್ರಖ್ಯೋ ಘಟಾಸ್ಯೋ ದೀರ್ಘಲೋಚನಃ ॥ ೬೩ ॥
ಊರ್ಧ್ವಕೇಶಶ್ಚೋರ್ಧ್ವಲೋಮಾ ಪಿತರೌ ಪ್ರಣತೋಽಬ್ರವೀತ್ ।
ಪ್ರಣಮಾಮಿ ಯುವಾಂ ಚೋಭೌ ಜಾತಸ್ಯ ಪಿತರೌ ಗುರೂ ॥ ೬೪ ॥
ಭವತೋರ್ಹಿ ಪ್ರಿಯಂ ಕೃತ್ವಾ ಅನೃಣಃ ಸ್ಯಾಂ ಸದಾಹ್ಯಹಂ ।
ಭವದ್ಭ್ಯಾಂ ದತ್ತಮಿಚ್ಛಾಮಿ ಅಭಿಧಾನಂ ಯಥಾತ್ಮನಃ ॥ ೬೫ ॥
ಅತಃ ಪರಂ ತು ಯಚ್ಛ್ರೇಯಃ ಕರ್ತವ್ಯಂ ಪ್ರೋನ್ನತಿಪ್ರದಂ ।
ತತೋ ಭೈಮಿಸ್ತಮಾಲಿಂಗ್ಯ ಪುತ್ರಂ ವಚನಮಬ್ರವೀತ್ ॥ ೬೬ ॥

---

೬೧. ಅಲ್ಲದೆ ವಿಚಿತ್ರಗಳಾದ ಉದ್ಯಾನವನಗಳಲ್ಲಿಯೂ, ನದಿಗಳ ಮರಳು ದಿನ್ನೆಗಳಲ್ಲಿಯೂ ಸಹ ಘಟೋತ್ಕಚನು ಆ ಕಾಮಕಟಂಕಟಿಯೊಡನೆ ಕೂಡಿಕೊಂಡು ಮಂಡೋದರಿಯೊಡಗೂಡಿದ ರಾವಣಾಸುರನಂತೆ ವಿಹರಿಸುತ್ತಿದ್ದನು.

೬೨. ಕಾಲಕ್ರಮದಲ್ಲಿ ಮಹಾತೇಜೋವಂತನೂ ರಾಕ್ಷಸಪುಂಗವನೂ ಆದ ಆತನಿಂದ ಆಕೆಯ ಹೊಟ್ಟೆಯಲ್ಲಿ ಬಾಲಸೂರ್ಯನಂತೆ ಜ್ವಲಿಸುತ್ತಿರುವ ಕುಮಾರನೊಬ್ಬನು ಜನಿಸಿದನು.

೬೩-೬೪. ಅವನು ಹುಟ್ಟುತ್ತಲೇ ವೃದ್ಧಿಯನ್ನು ಹೊಂದಿ ಕ್ಷಣಮಾತ್ರದಲ್ಲಿಯೇ ಯೌವನವಂತನಾದನು. ನೀಲಮೇಘದ ಕಾಂತಿಯಿಂದ ಕೂಡಿ ಘಟದಂತೆ ದುಂಡಾದ ಮುಖದಿಂದಲೂ ವಿಶಾಲಗಳಾದ ನೇತ್ರಗಳಿಂದಲೂ ಆ ಬಾಲಕನು ಮೆರೆಯುತ್ತಿದ್ದನು. ತಲೆಗೂದಲುಗಳೆಲ್ಲವೂ ಕೆದರಿ ನಿಂತಿದ್ದುವು. ಮೈಮೇಲಿನ ಕೂದಲು ಪುಳಕಿತಗಳಾಗಿದ್ದುವು. ಅವನು ತಾಯಿ ತಂದೆಗಳಿಗೆ ನಮಸ್ಕರಿಸಿ ಹೇಳತೊಡಗಿದನು. "ನಿಮ್ಮ ಮಗನಾದ ನಾನು ಮಾತಾಪಿತೃಗಳೂ ಗುರುಗಳೂ ಆದ ನಿಮ್ಮಿಬ್ಬರಿಗೂ ವಂದಿಸುವೆನು.

೬೫. ನಿಮ್ಮಿಬ್ಬರ ಹಿತವನ್ನು ಸಾಧಿಸುವುದರಿಂದಲೇ ನಾನು ಯಾವಾಗಲೂ ಋಣಮುಕ್ತನಾಗಲಿಚ್ಛಿಸುವೆನು. ನೀವು ಅನುಮೋದಿಸಿದ ಹೆಸರನ್ನು ನನಗಿಡಬೇಕೆಂದು ಕೋರುತ್ತೇನೆ.

೬೬. ಇನ್ನುಮೇಲೆ ನನಗೆ ಯಾವುದು ಶ್ರೇಯಸ್ಸಾಧನವೊ, ಅಭ್ಯುನ್ನತಿಗೆ ಯಾವುದು ಕಾರಣವೊ ಅದನ್ನು ಮಾಡಬೇಕು." ಇಂತೆಂದ ಪುತ್ರನನ್ನು ಆಲಿಂಗಿಸಿ ಘಟೋತ್ಕಚನು ಹೇಳತೊಡಗಿದನು.

ಬರ್ಬರಾಕಾರಕೇಶತ್ವಾದ್ಬರ್ಬರೀಕಾಭಿಧೋ ಭವಾನ್ ।
ಭವಿಷ್ಯತಿ ಮಹಾಬಾಹೋ ಕುಲಸ್ಯಾನಂದವರ್ಧನಃ ॥ ೬೭ ॥

ಶ್ರೇಯಂಶ್ಚ ತೇ ಯತ್ಪರಮಂ ಧ್ರುವಂ ಚ
ತತ್ಕೀರ್ತ್ಯತೇ ಬಹುಧಾ ವಿಪ್ರಮುಖ್ಯೈಃ ।
ಪ್ರಕ್ಷ್ಯಾವಹೇ ತದ್ಯದುವಂಶನಾಥಂ
ಗತ್ವಾ ಪುರೀಂ ದ್ವಾರಕಾಂ ವಾಸುದೇವಂ ॥ ೬೮ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪ್ರಥಮೇ ಮಾಹೇಶ್ವರಖಂಡೇ ಕೌಮಾರಿಕಾಖಂಡೇ
"ಬರ್ಬರೀಕೋತ್ಪತ್ತಿ ವರ್ಣನಂ" ನಾಮ
ಷಷ್ಟಿತಮೋಽಧ್ಯಾಯಃ

---

೬೭. ನಿನ್ನ ಕೇಶಗಳು ಅನಾರ್ಯರ ಕೇಶಗಳಂತೆ ಕೆದರಿರುವುದರಿಂದ ನೀನು ಬರ್ಬರೀಕನೆಂಬ ಹೆಸರನ್ನೇ ಹೊಂದುವೆ. ಮತ್ತು ಮಹಾಪರಾಕ್ರಮಿಯಾಗಿ ನಮ್ಮ ಕುಲಕ್ಕೆ ಸಂತೋಷವನ್ನುಂಟುಮಾಡುವೆ.

೬೮. ಆದರೆ ಮನುಷ್ಯನಿಗೆ ಅತ್ಯುತ್ತಮವೂ ಶಾಶ್ವತವೂ ಆದ ಶ್ರೇಯಸ್ಸಾವುದೆಂಬುದನ್ನು ಬ್ರಾಹ್ಮಣೋತ್ತಮರು ಬಹುವಿಧವಾಗಿ ಹೇಳಿರುವರು. ಆದುದರಿಂದ ನಾವು ಈಗಲೇ ದ್ವಾರಕಾನಗರಕ್ಕೆ ಹೋಗಿ ಯದುಕುಲಶಿಖಾಮಣಿಯಾದ ವಾಸುದೇವನನ್ನೇ ಕೇಳಿ ತಿಳಿದುಕೊಳ್ಳೋಣ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಎರಡನೆಯ ಕೌಮಾರಿಕಾಖಂಡದಲ್ಲಿ
"ಬರ್ಬರೀಕೋತ್ಪತ್ತಿವರ್ಣನ"ವೆಂಬ
ಅರುವತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥೈಕಷಷ್ಟಿತಮೋಽಧ್ಯಾಯಃ

## ಮಹಾವಿದ್ಯಾಸಾಧನೇ ಗಾಣೇಶ್ವರಕಲ್ಪವರ್ಣನಂ

**ಸೂತ ಉವಾಚ :–**

**ತತೋ ಘಟೋತ್ಕಚೋ ಮುಕ್ತ್ವಾ ತತ್ರ ಕಾಮಕಟಂಕಟಾಂ ।**
**ಪುತ್ರೇಣಾನುಗತೋ ಧೀಮಾನ್ನಿಯತಾ ದ್ವಾರಕಾಂ ಯಯೌ ॥ ೧ ॥**
**ಆಗಚ್ಛಂತಂ ಚ ತಂ ದೃಷ್ಟ್ವಾ ರಾಕ್ಷಸಂ ರಾಕ್ಷಸಾನುಗಂ ।**
**ದ್ವಾರಕಾವಾಸಿನೋ ಯೋಧಾಶ್ಚಕ್ರುರತ್ಯುಲ್ಬಣಂ ರವಂ ॥ ೨ ॥**
**ಗ್ರಾಮೇ ಗ್ರಾಮೇ ಸುಸನ್ನದ್ಧಾ ನವಲಕ್ಷಮಿತಾ ರಥಾಃ ।**
**ರಾಕ್ಷಸೌ ದ್ವೌ ಸಮಾಯಾತೌ ಪಾತ್ಯೇತಾಂ ವಿಶಿಖೈರಿತಿ ॥ ೩ ॥**
**ತಾನಾಹಿತಾಯುಧಾನ್ದೃಷ್ಟ್ವಾ ಯದುವೀರಾನ್ಘಟೋತ್ಕಚಃ ।**
**ಪ್ರಗೃಹ್ಯ ವಿಪುಲಂ ಬಾಹುಂ ಜಗೌ ತಾರಸ್ವರೇಣ ಸಃ ॥ ೪ ॥**
**ರಾಕ್ಷಸಂ ವಿತ್ತ ಮಾಂ ವೀರಾ ಭೀಮಪುತ್ರಂ ಘಟೋತ್ಕಚಂ ।**
**ಸುಪ್ರಿಯಂ ವಾಸುದೇವಸ್ಯ ಪ್ರಣಾಮಾರ್ಥಮುಪಾಗತಂ ॥ ೫ ॥**

---

## ಕನ್ನಡದ ಅನುವಾದ

### ಮಹಾವಿದ್ಯಾಸಾಧನ — ಗಾಣೇಶ್ವರಕಲ್ಪವರ್ಣನ

೧. ಸೂತನು ಹೇಳುತ್ತಾನೆ:— ಬಳಿಕಲಾ ಘಟೋತ್ಕಚನು ಕಾಮಕಟಂಕಟೆಯನ್ನು ಅಲ್ಲಿಯೇ ಬಿಟ್ಟು ಮಗನು ಹಿಂಬಾಲಿಸುತ್ತಿರಲು ಆಕಾಶಮಾರ್ಗದಿಂದಲೇ ದ್ವಾರಕಾಪುರಿಯನ್ನು ಸೇರಿದನು.

೨. ಇಂತು ರಾಕ್ಷಸನೊಡನೆ ಬರುತ್ತಿದ್ದ ಆ ಘಟೋತ್ಕಚನನ್ನು ನೋಡಿ ದ್ವಾರಕೆಯ ಸೈನ್ಯದವರೆಲ್ಲರೂ ಅತಿ ಭಯಂಕರವಾದ ಸಿಂಹಘರ್ಜನೆಯನ್ನು ಮಾಡಿದರು.

೩. ಒಂದೊಂದು ಗ್ರಾಮದಲ್ಲಿಯೂ ಒಂಬತ್ತುಲಕ್ಷ ರಥಿಕರು ಕೂಡಿ 'ಇಬ್ಬರು ರಾಕ್ಷಸರು ಬಂದಿರುವರು; ಅವರನ್ನು ಬಾಣಗಳಿಂದ ಕೆಡವಿ' ಎಂದು ಕೂಗುತ್ತ ಯುದ್ಧಸನ್ನದ್ಧರಾದರು.

೪. ಆಯುಧಪಾಣಿಗಳಾಗಿ ಸಿದ್ಧರಾಗಿದ್ದ ಆ ಯದುವೀರರನ್ನು ಕಂಡು ಘಟೋತ್ಕಚನು ತನ್ನ ಆಜಾನುಬಾಹುಗಳನ್ನು ಕಟ್ಟಿಕೊಂಡು ಘಟ್ಟಿಯಾಗಿ ಕೂಗಿಕೊಂಡನು.

೫. '' ಅಯ್ಯಾ ವೀರರೆ! ನನ್ನನ್ನು ಭೀಮಸೇನನ ಮಗನಾದ ಘಟೋತ್ಕಚನೆಂಬ ರಾಕ್ಷಸನನ್ನಾಗಿ ತಿಳಿಯಿರಿ. ನಾನು ಶ್ರೀಕೃಷ್ಣನಿಗೆ ಅತ್ಯಂತ ಪ್ರಿಯನು. ಆತನಿಗೆ ನಮಸ್ಕರಿಸಲೋಸುಗ ಇಲ್ಲಿಗೆ ಬಂದಿರುವೆನು.

ನಿವೇದಯತ ಮಾಂ ಪ್ರಾಪ್ತಂ ಯಾದವೇಂದ್ರಾಯ ಸಾತ್ಮಜಂ ।
ಇತಿ ತಸ್ಯ ವಚಃ ಶ್ರುತ್ವಾ ತೇ ಕೃಷ್ಣಾಯ ನ್ಯವೇದಯನ್ ॥ ೬ ॥
ಆಹ ದೇವಃ ಸಭಾಸ್ಥಶ್ಚ ಶೀಘ್ರಮತ್ರಾವ್ರಜತ್ವಸೌ ।
ತತಃ ಪ್ರವೇಶಯಾಮಾಸುರ್ದ್ವಾರಕಾಂ ತೇ ಘಟೋತ್ಕಚಂ ॥ ೭ ॥
ಸಪುತ್ರಃ ಸೋಽಪಿ ರಮ್ಯಾಣಿ ವನಾನ್ಯುಪವನಾನಿ ಚ ।
ಕ್ರೀಡಾಶೈಲಾಂಶ್ಚ ಹರ್ಮ್ಯಾಣಿ ಸಂಪಶ್ಯನ್ನಾಗತಃ ಸಭಾಂ ॥ ೮ ॥
ಸ ತತ್ರ ಉಗ್ರಸೇನಂ ಚ ವಸುದೇವಂ ಚ ಸಾತ್ಯಕಿಂ ।
ಅಕ್ರೂರರಾಮಪ್ರಮುಖಾನ್ನವಂದೇ ಕೃಷ್ಣಮೇವ ಚ ॥ ೯ ॥
ತಂ ಪಾದಯೋರ್ನಿಪತಿತಂ ಸಮಾಲಿಂಗ್ಯ ಸಹಾತ್ಮಜಂ
ಸಾಶಿಷಂ ಸ್ವಸಮೀಪಸ್ಥಮುಪವೇಶ್ಯೇದಮಬ್ರವೀತ್ ॥ ೧೦ ॥
ಪುತ್ರ ರಾಕ್ಷಸಶಾರ್ದೂಲ ಕುರೂಣಾಂ ಕುಲವರ್ಧನ ।
ಕುಶಲಂ ಸರ್ವತಃ ಕಚ್ಚಿತ್ಕಿಮರ್ಥಸ್ತೇ ಸಮಾಗಮಃ ॥ ೧೧ ॥

---

೬. ನಾನು ಮಗನೊಡನೆ ಬಂದಿರುವೆನೆಂಬ ವಿಷಯವನ್ನು ಯದುಕುಲ ಮಣಿಯಾದ ಶ್ರೀಕೃಷ್ಣನಿಗೆ ನಿವೇದಿಸಿರಿ.'' ಇಂತೆಂದ ರಾಕ್ಷಸನ ಮಾತುಗಳನ್ನು ಕೇಳಿ, ಅವರು ಶ್ರೀಕೃಷ್ಣನಿಗೆ ಅಂತೆಯೆ ತಿಳಿಸಿದರು.

೭. ಆಗ ಶ್ರೀಹರಿಯು ಸಭಾಮಧ್ಯದಿಂದಲೇ 'ಅವನು ಒಳಕ್ಕೆ ಬೇಗ ಬರಲಿ' ಎಂದು ಅಪ್ಪಣೆಮಾಡಿದನು. ಬಳಿಕ ಅವರಾ ಘಟೋತ್ಕಚನನ್ನು ದ್ವಾರಕಾ ನಗರದೊಳಕ್ಕೆ ಬಿಟ್ಟರು.

೮. ಆಗಲಾ ಘಟೋತ್ಕಚನು ಮಗನೊಡನೆ ದ್ವಾರಕೆಯನ್ನು ಪ್ರವೇಶಿಸಿ ಮನೋಹರಗಳಾದ ವನಗಳನ್ನೂ, ಉದ್ಯಾನಗಳನ್ನೂ, ಕ್ರೀಡಾಪರ್ವತಗಳನ್ನೂ, ಉಪ್ಪರಿಗೆಗಳನ್ನೂ ನೋಡಿ ಸಂತೋಷಪಡುತ್ತ ಕೃಷ್ಣಪರಮಾತ್ಮನ ಸಭೆಗೈತಂದನು.

೯. ಅವನು ಉಗ್ರಸೇನ ಮಹಾರಾಜನಿಗೂ, ವಸುದೇವನಿಗೂ, ಸಾತ್ಯಕಿಗೂ, ಅಕ್ರೂರ, ಬಲರಾಮನೇ ಮುಂತಾದ ಇತರ ಯಾದವ ವೀರರಿಗೂ, ಶ್ರೀಕೃಷ್ಣನಿಗೂ ಕ್ರಮವಾಗಿ ನಮಸ್ಕರಿಸಿದನು.

೧೦. ಪುತ್ರಸಹಿತನಾಗಿ ತನ್ನ ಪಾದಗಳಲ್ಲಿ ಬಿದ್ದಿದ್ದ ಅವನನ್ನು ಎಬ್ಬಿಸಿ ತಬ್ಬಿಕೊಂಡು ಆಶೀರ್ವಾದವನ್ನು ಮಾಡಿ ಸಮೀಪದಲ್ಲಿ ಕುಳ್ಳಿರಿಸಿಕೊಂಡು ಶ್ರೀಹರಿಯಿಂತೆಂದನು.

೧೧. "ಮಗನೆ! ರಾಕ್ಷಸಪುಂಗವನೆ! ಕುರುಕುಲವನ್ನು ಬೆಳೆಸುವವನೆ! ನಿನಗೆ ಎಲ್ಲೆಡೆಯಲ್ಲಿಯೂ ಕುಶಲವೆ? ಈಗ ನೀನು ಇಲ್ಲಿಗೆ ಬಂದ ಕಾರಣ ವೇನು?"

ಘಟೋತ್ಕಚ ಉವಾಚ :—

**ದೇವ ಯುಷ್ಮತ್ಪ್ರಸಾದೇನ ಸರ್ವತಃ ಕುಶಲಂ ಮಮ ।**
**ಶ್ರೂಯತಾಂ ಕಾರಣಂ ಸ್ವಾಮಿನ್ಯದರ್ಥಮಹಮಾಗತಃ ॥ ೧೨ ॥**
**ದೇವೋಪದಿಷ್ಟಭಾರ್ಯಾಯಾಂ ಜಾತೋಽಯಂ ತನಯೋ ಮಮ ।**
**ಸ ಚ ಪ್ರಶ್ನಂ ವಕ್ಷ್ಯತಿ ತ್ವಾಂ ಶ್ರೂಯತಾಮಾಗತಸ್ತ್ವತಃ ॥ ೧೩ ॥**

ಶ್ರೀಕೃಷ್ಣ ಉವಾಚ :—

**ವತ್ಸ ಮೌರ್ವೇಯ ಬ್ರೂಹಿ ತ್ವಂ ಸರ್ವಂ ಪೃಚ್ಛ ಯದಿಚ್ಛಸಿ ।**
**ಯಥಾ ಘಟೋತ್ಕಚೋ ಮಹ್ಯಂ ಸುಪ್ರಿಯಶ್ಚ ತಥಾ ಭವಾನ್ ॥ ೧೪ ॥**

ಬರ್ಬರೀಕ ಉವಾಚ :—

**ಪ್ರಣಮ್ಯ ತ್ವಾಮಾದಿದೇವಂ ಮನೋಬುದ್ಧಿಸಮಾಧಿಭಿಃ ।**
**ಪ್ರಕ್ಷ್ಯಾಮಿ ಕೇನ ಶ್ರೇಯಸ್ಸ್ಯಾಜ್ಜಂತೋರ್ಜಾತಸ್ಯ ಮಾಧವ ॥ ೧೫ ॥**
**ಕೇಚಿಚ್ಛ್ರೇಯೋ ಧರ್ಮಮಾಹುರೈಶ್ವರ್ಯಂ ತ್ಯಾಗಭೋಜನಂ ।**
**ಕೇಚಿದ್ದಮಂ ತಪೋ ದ್ರವ್ಯಂ ಭೋಗಾನ್ಮುಕ್ತಿಂ ಚ ಕೇಚನ ॥ ೧೬ ॥**

---

೧೨. ಘಟೋತ್ಕಚನು ಹೇಳುತ್ತಾನೆ:—" ಎಲೈ ದೇವದೇವನೆ! ನಿಮ್ಮ ಕರುಣೆಯಿಂದ ನನಗೆ ಎಲ್ಲೆಲ್ಲಿಯೂ ಕುಶಲವೇ ಆಗಿರುವುದು. ಸ್ವಾಮಿಯೆ! ಈಗ ನಾನು ಬಂದಿರುವುದಕ್ಕೆ ಕಾರಣವನ್ನು ಹೇಳುವೆನು, ಕೇಳುವವನಾಗು.

೧೩. ನಿನ್ನಿಂದ ಸೂಚಿಸಲ್ಪಟ್ಟ ಪತ್ನಿಯಲ್ಲಿ ನನಗೆ ಈ ಮಗನು ಲಭಿಸಿರುವನು. ಅವನು ನಿನ್ನನ್ನು ಒಂದು ವಿಷಯವನ್ನು ಕೇಳಬಯಸುವನು. ಅದಕ್ಕಾಗಿಯೇ ಇಲ್ಲಿಗೆ ಬಂದಿರುವನು. ಕೇಳಬೇಕು."

೧೪. ಶ್ರೀಕೃಷ್ಣನು ಹೇಳುತ್ತಾನೆ:— ಮೌರ್ವೇಯನಾದ ಬಾಲಕನೆ! ನೀನು ಕೇಳಬೇಕೆಂಬುದೆಲ್ಲವನ್ನೂ ಕೇಳು. ನಿನ್ನ ತಂದೆಯಾದ ಘಟೋತ್ಕಚನಂತೆಯೇ ನೀನೂ ನನಗೆ ಅತ್ಯಂತ ಪ್ರಿಯತಮನಾಗಿರುವೆ.

೧೫. ಬರ್ಬರೀಕನು ಕೇಳುತ್ತಾನೆ:—" ಮನೋಬುದ್ಧಿಗಳ ಏಕಾಗ್ರ್ಯದಿಂದ ಆದಿದೇವನಾದ ನಿನಗೆ ನಮಸ್ಕರಿಸಿ ಕೇಳುವೆನು. ಎಲೈ ಮಾಧವ ಸ್ವಾಮಿಯೆ! ಪ್ರಪಂಚದಲ್ಲಿ ಜನಿಸಿದ ಜೀವನಿಗೆ ಯಾವುದರಿಂದ ಶ್ರೇಯಸ್ಸು ಉಂಟಾಗುವುದು ?

೧೬. ಕೆಲವರು ಧರ್ಮವೇ ಶ್ರೇಯಸ್ಸಾಧನವೆಂದೂ, ಕೆಲವರು ಐಶ್ವರ್ಯವೆಂದೂ, ಹಲವರು ನಿಷ್ಕಾಮಭೋಗವೆಂದೂ, ಇತರರು ಇಂದ್ರಿಯನಿಗ್ರಹವೆಂದೂ, ತಪಸ್ಸೆಂದೂ, ಪದಾರ್ಥತತ್ತ್ವವಿವೇಕವೆಂದೂ, ಐಹಿಕಭೋಗಗಳೆಂದೂ, ಮೋಕ್ಷವೆಂದೂ ಅನೇಕವಿಧವಾಗಿ ಹೇಳುತ್ತಿರುವರು.

ತದೇವಂ ಶತಸಂಖ್ಯೇಷು ಶ್ರೇಯಸ್ಸು ಪುರುಷೋತ್ತಮ ।
ಮಮ ಚೈವಂ ಕುಲಸ್ಯಾಸ್ಯ ಶ್ರೇಯೋ ಯದ್ಬ್ರೂಹಿ ನಿಶ್ಚಿತಂ ॥ ೧೭ ॥

ಶ್ರೀಕೃಷ್ಣ ಉವಾಚ:—

ವತ್ಸ ಪೃಥಕ್ಪೃಥಕ್ಪ್ರೋಕ್ತಂ ವರ್ಣಾನಾಂ ಶ್ರೇಯ ಉತ್ತಮಂ ।
ಬ್ರಾಹ್ಮಣಾನಾಂ ತಪೋ ಮೂಲಂ ದಮೋಽಧ್ಯಯನಮೇವ ಚ ॥ ೧೮ ॥
ಧರ್ಮಪ್ರಕಟನಂ ಚಾಪಿ ಶ್ರೇಯ ಉಕ್ತಂ ಮನೀಷಿಭಿಃ ।
ಬಲಂ ಸಾಧ್ಯಂ ಪೂರ್ವಮೇವ ಕ್ಷತ್ರಿಯಾಣಾಂ ಪ್ರಕೀರ್ತಿತಂ ॥ ೧೯ ॥
ದುಷ್ಟಾನಾಂ ಶಾಸನಂ ಚಾಪಿ ಸಾಧೂನಾಂ ಪರಿಪಾಲನಂ ।
ಪಾಶುಪಾಲ್ಯಂ ಚ ವೈಶ್ಯಾನಾಂ ಕೃಷಿರ್ವಿಜ್ಞಾನಮೇವ ಚ ॥ ೨೦ ॥
ಶೂದ್ರಸ್ಯ ದ್ವಿಜಶುಶ್ರೂಷಾ ತಯಾ ಜೀವನ್ವಣಿಗ್ಭವೇತ್ ।
ಶಿಲ್ಪೈರ್ವಾ ವಿವಿಧೈರ್ಜೀವೇದ್ದ್ವಿಜಾತಿಹಿತಮಾಚರನ್ ॥ ೨೧ ॥
ಭಾರ್ಯಾರತಿರ್ಭೃತ್ಯಪೋಷ್ಟಾ ಶುಚಿಃ ಶ್ರದ್ಧಾಪರಾಯಣಃ ।
ನಮಸ್ಕಾರೇಣ ಮಂತ್ರೇಣ ಪಂಚಯಜ್ಞಾನ್ನ ಹಾಪಯೇತ್ ॥ ೨೨ ॥

---

೧೭. ಎಲೈ ಪುರುಷೋತ್ತಮನೆ! ಇಂತು ನೂರಾರು ಶ್ರೇಯಸ್ಸಾಧನಗಳನ್ನು ಜನರು ಹೇಳುತ್ತಿರಲು ನನಗೂ ನನ್ನ ಈ ಕುಲಕ್ಕೂ ನಿಶ್ಚಯವಾದ ಶ್ರೇಯಸ್ಸಾವುದೆಂಬುದನ್ನು ನೀನೇ ತಿಳಿದು ಹೇಳು.''

೧೮–೨೦. ಶ್ರೀಕೃಷ್ಣನು ಹೇಳುತ್ತಾನೆ:—''ಎಲೈ ಪುತ್ರನೆ! ವಿವಿಧವರ್ಣದವರಿಗೆ ಬೇರ ಬೇರೆಯಾಗಿ ಶ್ರೇಯಸ್ಸುಗಳು ಹೇಳಲ್ಪಟ್ಟಿರುವುವು. ಬ್ರಾಹ್ಮಣರಿಗೆ ತಪಸ್ಸೇ ಮುಖ್ಯವು. ಇಂದ್ರಿಯನಿಗ್ರಹವು, ವೇದಾಭ್ಯಾಸವು. ಧರ್ಮಪ್ರಚಾರ ಕಾರ್ಯ— ಇವುಗಳೇ ಅವರಿಗೆ ಶ್ರೇಯಸ್ಸಾಧನಗಳೆಂದು ಜ್ಞಾನಿಗಳು ಹೇಳುವರು. ಕ್ಷತ್ರಿಯರಿಗೆ ಮುಖ್ಯವಾಗಿ ಬಲ ಸಾಧಿಸಬೇಕೆಂದು ಹೇಳಲ್ಪಟ್ಟಿರುವುದು. ದುಷ್ಟರನ್ನು ಶಿಕ್ಷಿಸುವುದೂ. ಶಿಷ್ಟರನ್ನು ರಕ್ಷಿಸುವುದೂ ಅವರ ಕರ್ತವ್ಯವೇ. ವೈಶ್ಯರಿಗೆ ಪಶುಪಾಲನೆ, ಕೃಷಿ ಮತ್ತು ಭೌತಿಕವಿಜ್ಞಾನಗಳು ಕರ್ತವ್ಯಗಳು.

೨೧. ಬ್ರಾಹ್ಮಣರಿಗೆ ಶುಶ್ರೂಷೆಯನ್ನು ಮಾಡುವುದೇ ಶೂದ್ರನ ಕರ್ತವ್ಯವು. ಇದರಿಂದ ಜೀವನವನ್ನು ಸಾಗಿಸುತ್ತ ಅವನು ವ್ಯಾಪಾರಿಯಾಗಬೇಕು. ಅಥವಾ ವಿವಿಧ ಶಿಲ್ಪಗಳಿಂದ ಜೀವಿಸಿ ದ್ವಿಜರ ಹಿತವನ್ನೇ ಆಚರಿಸಬೇಕು.

೨೨. ಪ್ರತಿಯೊಬ್ಬನೂ ಸ್ವದಾರರತನಾಗಿ, ತನ್ನ ಅನುಯಾಯಿಗಳನ್ನು ಪೋಷಿಸುತ್ತ, ಶುಚಿಯೂ ಶ್ರದ್ಧಾಯುಕ್ತನೂ ವಿನೀತನೂ ಮಂತ್ರಜ್ಞನೂ ಆಗಿ ಪಂಚಮಹಾಯಜ್ಞಗಳನ್ನು ತಪ್ಪದೆ ನಡೆಸಿಕೊಂಡು ಬರಬೇಕು.

ತದ್ಭವಾನ್ ಕ್ಷತ್ರಿಯಕುಲೇ ಜಾತೋಽಸಿ ಕುರು ತಚ್ಛೃಣು ।
ಬಲಂ ಸಾಧಯ ಪೂರ್ವಂ ತ್ವಮತುಲಂ ತೇನ ಶಿಕ್ಷಯ ॥ ೨೩ ॥
ದುಷ್ಟಾನ್ಪಾಲಯ ಸಾಧೂಂಶ್ಚ ಸ್ವರ್ಗಮೇವಮವಾಪ್ಸ್ಯಸಿ ।
ಬಲಂ ಚ ಲಭ್ಯತೇ ಪುತ್ರ ದೇವೀನಾಂ ಸುಪ್ರಸಾದತಃ ॥ ೨೪ ॥
ತದ್ಭವಾನ್ಬಲಪ್ರಾಪ್ತ್ಯರ್ಥಂ ದೇವ್ಯಾರಾಧನಮಾಚರ ॥ ೨೫ ॥

ಬರ್ಬರೀಕ ಉವಾಚ :—

ಕಸ್ಮಿನ್ ಕ್ಷೇತ್ರೇ ಚ ಕಾಂ ದೇವಿಂ ಕಥಮಾರಾಧಯಾಮ್ಯಹಂ ।
ಏತತ್ಪ್ರಸಾದಪ್ರವಣಂ ಮನಃ ಕೃತ್ವಾ ನಿವೇದಯ ॥ ೨೬ ॥

ಸೂತ ಉವಾಚ :—

ಇತಿ ಪೃಷ್ಟಃ ಕ್ಷಣಂ ಧ್ಯಾತ್ವಾ ಪ್ರಾಹ ದಾಮೋದರೋ ವಿಭುಃ ।
ವತ್ಸ ಕ್ಷೇತ್ರಂ ಪ್ರವಕ್ಷ್ಯಾಮಿ ಯತ್ರ ತಪ್ಸ್ಯಸಿ ತತ್ತಪಃ ॥ ೨೭ ॥
ಗುಪ್ತಕ್ಷೇತ್ರಮಿತಿ ಖ್ಯಾತಂ ಮಹೀಸಾಗರಸಂಗಮೇ ।
ತತ್ರ ತ್ರಿಭುವನೇ ಯಾಶ್ಚ ಸಂತಿ ದೇವ್ಯಃ ಪೃಥಗ್ವಿಧಾಃ ॥ ೨೮ ॥
ನಾರದೇನ ಸಮಾನೀತಾಸ್ತಾಶ್ಚೈಕ್ಯಂ ಸುಮಹಾತ್ಮನಾ ॥ ೨೯ ॥

---

೨೩–೨೫. ಎಲೈ ಬರ್ಬರೀಕನೆ! ನೀನು ಕ್ಷತ್ರಿಯಕುಲದಲ್ಲಿ ಜನಿಸಿರುವೆ. ಆದುದರಿಂದ ನಾನು ಹೇಳುವುದನ್ನು ಕೇಳು. ಮೊದಲು ನೀನು ಅಸಮಾನವಾದ ಬಲವನ್ನು ಸಂಪಾದಿಸು. ಅದರಿಂದ ದುಷ್ಟರನ್ನು ಶಿಕ್ಷಿಸುತ್ತ ಸಾಧುಗಳನ್ನು ಪಾಲಿಸು. ಇಂತೆಸಗಿ ಸ್ವರ್ಗವನ್ನು ಹೊಂದುವೆ. ಮಗನೆ! ದೇವಿಯರ ಪ್ರಸಾದ ದಿಂದಲೇ ನಿನಗೆ ಬಲವು ಲಭಿಸುವುದು. ಆದುದರಿಂದ ಬಲಪ್ರಾಪ್ತಿಗಾಗಿ ದೇವಿಯರ ಆರಾಧನೆಯನ್ನು ಮಾಡುವವನಾಗು."

೨೬. ಬರ್ಬರೀಕನು ಕೇಳುತ್ತಾನೆ:— "ಯಾವ ಕ್ಷೇತ್ರದಲ್ಲಿ ಯಾವ ದೇವಿಯನ್ನು ಯಾವ ವಿಧಿಗಳಿಂದ ಪೂಜಿಸಲಿ? ನಿನ್ನ ಮನಸ್ಸನ್ನು ಪ್ರಸಾದೋನ್ಮುಖವಾಗಿ ಮಾಡಿಕೊಂಡು ನನಗೆ ಅಪ್ಪಣೆಮಾಡು."

೨೭. ಸೂತನು ಹೇಳುತ್ತಾನೆ:—ಬರ್ಬರೀಕನಿಂತು ಕೇಳಲು ಸರ್ವವ್ಯಾಪಿಯಾದ ಶ್ರೀಕೃಷ್ಣನು ಒಂದು ಕ್ಷಣಕಾಲ ಧ್ಯಾನದಲ್ಲಿದ್ದು ಬಳಿಕ ಹೇಳತೊಡಗಿದನು. "ಪುತ್ರನೆ! ನಿನಗೆ ತಪಸ್ಸನ್ನು ಮಾಡುವುದಕ್ಕೆ ಅನುಕೂಲವಾದ ಉತ್ತಮ ಕ್ಷೇತ್ರವೊಂದನ್ನು ತಿಳಿಸುವೆನು.

೨೮–೨೯. ಮಹೀಸಾಗಗಸಂಗಮದಲ್ಲಿ ಗುಪ್ತಕ್ಷೇತ್ರವೆಂಬ ಪ್ರಖ್ಯಾತವಾದ ಪ್ರದೇಶವೊಂದಿರುವುದು. ಅಲ್ಲಿ ಮೂರು ಲೋಕಗಳಲ್ಲಿರುವ ವಿಧವಿಧಗಳಾದ ದೇವತೆಯರೆಲ್ಲರೂ ಮಹಾತ್ಮನಾದ ನಾರದಮಹರ್ಷಿಯಿಂದ ಕರೆತರಲ್ಪಟ್ಟು ನೆಲಸಿರುವರು.

ಚತಸ್ರಸ್ತಸ್ಯ ದಿಗ್ದೇವ್ಯೋ ನವ ದುರ್ಗಾಶ್ಚ ಸಂತಿ ಯಾಃ ।
ಸಮಾರಾಧಯ ತಾ ಗತ್ವಾ ತಾಸಾಮೈಕ್ಯಂ ಹಿ ದುರ್ಲಭಂ ॥ ೩೦ ॥
ನಿತ್ಯಂ ಪೂಜಯ ತಾಃ ಪುತ್ರ ಪುಷ್ಪಧೂಪವಿಲೇಪನೈಃ ।
ಸ್ತುತಿಭಿಶ್ಚೋಪಹಾರೈಶ್ಚ ಯಥಾ ತುಷ್ಯಂತಿ ತಾಸ್ತವ ॥ ೩೧ ॥
ತುಷ್ಟಾಸು ದೇವೀಷು ಬಲಂ ಧನಂ ಚ
ಕೀರ್ತಿಶ್ಚ ಪುತ್ರಾಃ ಸುಭಗಾಶ್ಚ ದಾರಾಃ ।
ಸ್ವರ್ಗಸ್ತಥಾ ಮುಕ್ತಿಪದಂ ಚ ಸತ್ಸುಖಂ
ನ ದುರ್ಲಭಂ ಸತ್ಯಮೇತತ್ತವೋಕ್ತಂ ॥ ೩೨ ॥

ಸೂತ ಉವಾಚ:–

ಏವಮುಕ್ತ್ವಾ ಬರ್ಬರೀಕಂ ಕೃಷ್ಣಃ ಪ್ರಾಹ ಘಟೋತ್ಕಚಂ ।
ಘಟೋತ್ಕಚಾರ್ಯ ಪುತ್ರಸ್ತೇ ದೃಢಂ ಸುಹೃದಯೋ ಹ್ಯಸೌ ॥ ೩೩ ॥
ತಸ್ಮಾತ್ಸುಹೃದಯೇತ್ಯೇವಂ ದತ್ತಂ ನಾಮ ಮಯಾ ದ್ವಿಕಂ ।
ಏವಮುಕ್ತ್ವಾ ಸಮಾಲಿಂಗ್ಯ ಸಂತರ್ಪ್ಯ ವಿವಿಧೈರ್ಧನೈಃ ।
ಗುಪ್ತಕ್ಷೇತ್ರಾಯ ಭಗವಾನ್ಬರ್ಬರೀಕಂ ಸಮಾದಿಶತ್ ॥ ೩೪ ॥

---

೩೦. ಅಲ್ಲಿರುವ ನಾಲ್ಕು ದಿಗ್ದೇವಿಯರನ್ನೂ ಒಂಬತ್ತುಮಂದಿ ದುರ್ಗಿಯರನ್ನೂ ಅಲ್ಲಿಗೆ ಹೋಗಿ ಸೇವಿಸು. ಅವರು ಏಕತ್ರ ಲಭಿಸುವುದೇ ದುಸ್ಸಾಧ್ಯವು.

೩೧. ಪುತ್ರನೆ! ಅವರು ನಿನ್ನಲ್ಲಿ ಸಂತೋಷಗೊಳ್ಳುವಂತೆ ಪ್ರತಿನಿತ್ಯದಲ್ಲಿಯೂ ಅವರನ್ನು ಪುಷ್ಪಗಳು, ಧೂಪ, ಗಂಧಲೇಪನ, ಸ್ತೋತ್ರ, ನೈವೇದ್ಯಗಳಿಂದ ಪೂಜಿಸುತ್ತಿರು.

೩೨. ಆ ದೇವಿಯರು ಸಂತುಷ್ಟರಾದರೆ ಬಲ, ಧನ, ಕೀರ್ತಿ, ಪುತ್ರಸಂಪತ್ತು, ಸೌಭಾಗ್ಯವತಿಯರಾದ ಪತ್ನಿಯರು, ಸ್ವರ್ಗ ಮತ್ತು ಶಾಶ್ವತ ಸುಖವನ್ನು ಕೊಡುವ ಮೋಕ್ಷ— ಇವುಗಳೆಲ್ಲವೂ ಲಭಿಸುವುವು. ನಿನಗೆ ದುರ್ಲಭವಾದುದು ಯಾವುದೂ ಇರುವುದಿಲ್ಲವೆಂದು ಸತ್ಯವಾಗಿ ಹೇಳುತ್ತೇನೆ.''

೩೩. ಸೂತನು ಹೇಳುತ್ತಾನೆ:—ಇಂತು ಬರ್ಬರೀಕನಿಗೆ ನಿದೇಶವನ್ನು ಕೊಟ್ಟು ಘಟೋತ್ಕಚನನ್ನು ಕುರಿತು ಹೇಳತೊಡಗಿದನು. ''ಎಲೈ ಘಟೋತ್ಕಚನೆ! ನಿನ್ನ ಉತ್ತಮ ಪುತ್ರನು ನಿಜವಾಗಿಯೂ ಸುಹೃದಯವುಳ್ಳವನಾಗಿರುವನು.

೩೪. ಆದುದರಿಂದ ನಾನು ಇವನಿಗೆ ಸುಹೃದಯನೆಂಬ ಎರಡನೆಯ ಹೆಸರನ್ನು ಕೊಟ್ಟಿರುವೆನು.'' ಇಂತೆಂದು ಹೇಳಿ ಅವನನ್ನು ಆಲಿಂಗಿಸಿಕೊಂಡು ಅನೇಕ ದ್ರವ್ಯಗಳಿಂದ ಅವನನ್ನು ಸಂತೋಷಪಡಿಸಿ ಭಗವಂತನು ಬರ್ಬರೀಕನನ್ನು ಗುಪ್ತಕ್ಷೇತ್ರಕ್ಕೆ ಬೀಳ್ಕೊಟ್ಟನು.

ಸೋಽಥ ಕೃಷ್ಣಂ ನಮಸ್ಕೃತ್ಯ ಪಿತರಂ ಯಾದವಾಂಶ್ಚ ತಾನ್ ।
ಅನುಜ್ಞಾಪ್ಯ ಚ ತಾನ್ಸರ್ವಾನ್ ಗುಪ್ತಕ್ಷೇತ್ರಂ ಸಮಾವ್ರಜತ್ ॥ ೩೫ ॥
ಘಟೋತ್ಕಚೋಽಪಿ ಕೃಷ್ಣೇನ ವಿಸೃಷ್ಟಃ ಸ್ವವನಂ ಯಯೌ ।
ಸ್ಮರನ್ಪುತ್ರಗುಣಾನ್ಪತ್ನ್ಯಾ ಸ್ವರಾಜ್ಯಂ ಸಮಪಾಲಯತ್ ॥ ೩೬ ॥
ತತಃ ಸುಹೃದಯೋ ಧೀಮಾನ್ದಗ್ಧಸ್ಥಲ್ಯಾಂ ಕೃತಾಶ್ರಮಃ ।
ತ್ರಿಕಾಲಂ ಪೂಜಯಾಮಾಸ ದೇವೀಃ ಕರ್ಮಸಮಾಧಿಭಿಃ ॥ ೩೭ ॥
ನಿತ್ಯಂ ಪುಷ್ಪೈಶ್ಚ ಧೂಪೈಶ್ಚ ಉಪಹಾರೈಃ ಪೃಥಗ್ವಿಧೈಃ ।
ತಸ್ಯಾರಾಧಯತೋ ದೇವ್ಯಸ್ತುತುಷುರ್ಹಾಯನೈಸ್ತ್ರಿಭಿಃ ॥ ೩೮ ॥
ತತಃ ಪ್ರತ್ಯಕ್ಷತೋ ಭೂತ್ವಾ ಬಲಾತ್ತಸ್ಯ ಮಹಾತ್ಮನಃ ।
ಬಲಂ ಯತ್ತ್ರಿಷು ಲೋಕೇಷು ಕಸ್ಯಚಿನ್ನಾಸ್ತಿ ದುರ್ಲಭಂ ॥ ೩೯ ॥
ಊಚುಶ್ಚ ಕಂಚಿತ್ಕಾಲಂ ತ್ವಂ ವಸಾತ್ರೈವ ಮಹಾದ್ಯುತೇ ।
ಸಂಗತ್ಯಾ ವಿಜಯಸ್ಯ ತ್ವಂ ಭೂಯಃ ಶ್ರೇಯೋ ಹ್ಯವಾಪ್ಸ್ಯಸಿ ॥ ೪೦ ॥

---

೩೫. ಅವನೂ ಸಹ, ಶ್ರೀಕೃಷ್ಣನಿಗೂ, ತನ್ನ ತಂದೆಗೂ, ಯಾದವರಿಗೂ ನಮಸ್ಕರಿಸಿ ಅವರೆಲ್ಲರ ಅಪ್ಪಣೆಯನ್ನೂ ಪಡೆದು ಗುಪ್ತಕ್ಷೇತ್ರಕ್ಕೆ ಬಂದು ಸೇರಿದನು.

೩೬. ಘಟೋತ್ಕಚನೂ ಶ್ರೀಕೃಷ್ಣನಿಂದ ಬೀಳ್ಕೊಂಡು ತನ್ನ ವನವನ್ನು ಸೇರಿ ಪತ್ನಿಯೊಡನೆ ಬರ್ಬರೀಕನ ಗುಣಗಳನ್ನು ಸ್ಮರಿಸುತ್ತ ರಾಜ್ಯಭಾರವನ್ನು ಮಾಡುತ್ತಿದ್ದನು.

೩೭. ಬಳಿಕ ಸುಹೃದಯನು ಬುದ್ಧಿವಂತನಾಗಿ ದಗ್ಧಸ್ಥಲಿಯಲ್ಲಿ ಕುಟೀರವನ್ನು ಕಟ್ಟಿಕೊಂಡು ತ್ರಿಸಂಧ್ಯೆಗಳಲ್ಲಿಯೂ ದೇವಿಯರನ್ನು ಪುಷ್ಪಾರ್ಚನಾದಿಗಳಿಂದಲೂ ಚಿತ್ತೈಕಾಗ್ರತೆಯಿಂದಲೂ ಪೂಜಿಸುತ್ತಿದ್ದನು.

೩೮. ಪ್ರತಿನಿತ್ಯವೂ ಪುಷ್ಪಗಳಿಂದಲೂ, ಧೂಪಗಳಿಂದಲೂ, ವಿಧವಿಧಗಳಾದ ಉಪಹಾರಗಳಿಂದಲೂ ಪೂಜಿಸುತ್ತಿರಲು ಮೂರು ವರ್ಷಗಳ ಅವಿಚ್ಛಿನ್ನವಾದ ಆ ಸೇವೆಯಿಂದ ಆ ದೇವಿಯರು ತೃಪ್ತಿಗೊಂಡರು.

೩೯. ಆ ಮಹಾತ್ಮನ ತಪೋಬಲದಿಂದ ಆ ದೇವಿಯರು ಅವನಿಗೆ ಪ್ರತ್ಯಕ್ಷರಾದರು. ತಪೋಬಲಕ್ಕೆ ದುರ್ಲಭವಾದುದು ಮೂರುಲೋಕಗಳಲ್ಲಿ ಯಾವುದೂ ಇರುವುದಿಲ್ಲವಷ್ಟೆ.

೪೦. ದೇವಿಯರಿಂತೆಂದರು :—"ಎಲೈ ತೇಜೋವಂತನೆ! ನೀನು ಇನ್ನೂ ಕೆಲಕಾಲ ಇಲ್ಲಿಯೇ ವಾಸಮಾಡು. ವಿಜಯನೆಂಬುವನ ಸಹಾಯದಿಂದ ನೀನು ಇನ್ನೂ ಹೆಚ್ಚಿನ ಶ್ರೇಯಸ್ಸನ್ನು ಪಡೆಯುವೆ."

ಇತ್ಯುಕ್ತಃ ಸರ್ವದೇವೀಭಿಃ ಸತತ್ರೈವ ವ್ಯವಸ್ಥಿತಃ ।
ಆಜಗಾಮಾಥ ವಿಜಯೋ ನಾಮ್ನಾ ಮಾಗಧಬ್ರಾಹ್ಮಣಃ ॥ ೪೧ ॥
ಸ ಸರ್ವಾಂ ಪೃಥಿವೀಂ ಕೃತ್ವಾ ಪಾದಾಕ್ರಾಂತಾಂ ದ್ವಿಜೋತ್ತಮಃ ।
ಕಾಶ್ಯಾಂ ವಿದ್ಯಾಬಲಂ ಪ್ರಾಪ್ಯ ಸಾಧನಾರ್ಥಮುಪಾಯಯೌ ॥ ೪೨ ॥
ಗುಹೇಶ್ವರಮುಖಾನ್ಯೇಷ ಸಪ್ತಲಿಂಗಾನ್ಯಪೂಜಯತ್ ।
ಆರಾಧಯಾಮಾಸ ಚಿರಂ ದೇವೀರ್ವಿದ್ಯಾಫಲಾಪ್ತಯೇ ॥ ೪೩ ॥
ತತಸ್ತುಷ್ಟಾಸ್ತಸ್ಯ ದೇವ್ಯಃ ಸ್ವಪ್ನೇ ಪ್ರೋಚುರಿದಂ ವಚಃ ।
ವಿದ್ಯಾಂ ಸಾಧಯ ತ್ವಂ ಸಾಧೋ ಸಿದ್ಧಮಾತುಃ ಪುರೋಽಂಗಣೇ ।
ಅಯಂ ಭಕ್ತಃ ಸುಹೃದಯಃ ಸಾಹಾಯ್ಯಂ ತೇ ಕರಿಷ್ಯತಿ ॥ ೪೪ ॥
ತತಸ್ತದ್ವಚನಂ ಶ್ರುತ್ವಾ ವಿಜಯಃ ಸ್ವಪ್ನಮುಧ್ಯತಃ ।
ಉತ್ಥಾಯ ಗತ್ವಾ ದೇವ್ಯಾಸ್ತಂ ವವ್ರೇ ಭೀಮಾತ್ಮಜಾತ್ಮಜಂ ॥ ೪೫ ॥
ಸೋಽಪಿ ದೇವೀವಚಃ ಶ್ರುತ್ವಾ ಮೇನೇ ಸಾಹಾಯ್ಯಕಾರಣಂ ।
ತತಃ ಕೃಷ್ಣಚತುರ್ದಶ್ಯಾಮುಪೋಷ್ಯ ವಿಜಯಃ ಶುಚಿಃ ॥ ೪೬ ॥

---

೪೧. ಇಂತು ಸಕಲ ದೇವತೆಯರೂ ಹೇಳಲು ಅಂತೆಯೇ ಸುಹೃದಯನು ಅಲ್ಲಿ ನಿಂತನು. ಕೆಲವು ಕಾಲವಾದಮೇಲೆ ವಿಜಯನಾಮಕನಾದ ಬ್ರಾಹ್ಮಣನೊಬ್ಬನು ಮಗಧದೇಶದಿಂದ ಅಲ್ಲಿಗೈತಂದನು.

೪೨. ಆ ಬ್ರಾಹ್ಮಣೋತ್ತಮನು ಭೂಮಿಯನ್ನೆಲ್ಲ ಪಾದಚಾರಿಯಾಗಿಯೇ ಸಂಚರಿಸಿ ಕಾಶೀಕ್ಷೇತ್ರದಲ್ಲಿ ವಿದ್ಯಾಬಲವನ್ನು ಸಂಪಾದಿಸಿಕೊಂಡು ಅದರ ಸಾಧನೆಯನ್ನು ಮಾಡುವುದಕ್ಕಾಗಿ ಅಲ್ಲಿಗೆ ಬಂದು ಸೇರಿದನು.

೪೩. ಅವನು ತನ್ನ ವಿದ್ಯಾಭ್ಯಾಸದ ಫಲಸಿದ್ಧಿಗಾಗಿ ಅಲ್ಲಿದ್ದ ಗುಹೇಶ್ವರನೇ ಮೊದಲಾದ ಏಳು ಲಿಂಗಗಳನ್ನು ಪೂಜಿಸಿದಲ್ಲದೆ ಆ ದೇವಿಯರನ್ನೂ ಬಹಳಕಾಲ ಆರಾಧಿಸಿದನು.

೪೪. ಅದರಿಂದ ಸಂತುಷ್ಟರಾದ ದೇವಿಯರು ಆತನಿಗೆ ಸ್ವಪ್ನದಲ್ಲಿ ಕಾಣಿಸಿಕೊಂಡು ಈ ಮಾತುಗಳನ್ನು ಹೇಳಿದರು. "ಎಲೈ ಸಾಧುವೆ! ನೀನು ಸಿದ್ಧಮಾತೆಯ ಮುಖಮಂಟಪದಲ್ಲಿ ವಿದ್ಯೆಯನ್ನು ಸಾಧನೆಮಾಡು. ಭಕ್ತನಾದ ಈ ಸುಹೃದಯನು ನಿನಗೆ ಸಹಾಯವನ್ನು ಮಾಡುವನು.

೪೫. ಸ್ವಪ್ನದಲ್ಲಿ ಈ ರೀತಿ ಹೇಳಿದ ಆ ದೇವಿಯರ ಮಾತುಗಳನ್ನು ಕೇಳಿ ವಿಜಯನು ಎಚ್ಚತ್ತು ಹೊರಟು ಸುಹೃದಯನ ಸಹಾಯವನ್ನು ಅಪೇಕ್ಷಿಸಿದನು.

೪೬-೪೭. ಅವನೂ ದೇವಿಯರ ವಚನಗಳನ್ನು ಕೇಳಿದ್ದುದರಿಂದ ಸಹಾಯ ಮಾಡಲು ಒಪ್ಪಿಕೊಂಡನು. ಬಳಿಕ ಅದೇ ಮಾಸದ ಕೃಷ್ಣಚತುರ್ದಶಿಯ ದಿನ ವಿಜಯನು ಉಪವಾಸವನ್ನು ಮಾಡಿ ಶುಚಿಯಾಗಿ ಸ್ನಾನವನ್ನು ಮಾಡಿಕೊಂಡು

ಸ್ನಾತ್ವಾಭ್ಯರ್ಚ್ಯೈವ ಲಿಂಗಾನಿ ದೇವೀಶ್ಚೈವಾರ್ಚಯತ್ಪೃಥಕ್ ।
ಕೃತ್ವಾ ಸ್ನಾನಮುಪೋಷ್ಯೈವ ಬರ್ಬರೀಕೋಽಂತಿಕೇಽಭವತ್ ॥ ೪೭ ॥
ಪ್ರಥಮಾಯಾಂ ತತೋ ರಾತ್ರೌ ಯಯೌ ಸಿದ್ಧಾಂಬಿಕಾಪುರಃ ।
ಮಂಡಲಂ ತತ್ರ ಕೃತ್ವಾ ಚ ಭಗಾಕಾರಂ ಕರಾನ್ನವ ॥ ೪೮ ॥
ಅಷ್ಟದಿಕ್ಷ್ವಷ್ಟಕೀಲಾಂಶ್ಚ ನಿಖನ್ಯೈವ ಸಸೂತ್ರಕಾನ್ ।
ಕೃಷ್ಣಾಜಿನಧರೋ ಭೂತ್ವಾ ಬರ್ಬರೀಕಸಮನ್ವಿತಃ ॥ ೪೯ ॥
ಶಿಖಾಮಾಬಧ್ಯ ದಿಗ್ಬಂಧಂ ಕೃತ್ವಾರೇಭೇ ತತೋ ವಿಧಿಂ ।
ಮಧ್ಯೇ ವೈ ಮಂಡಲಸ್ಯಾಪಿ ಕುಂಡೇ ಶುಭ್ರೇ ತ್ರಿಮೇಖಲೇ ॥ ೫೦ ॥
ಸಮರ್ಪ್ಯ ಚ ತತಃ ಖಡ್ಗಂ ಖಾದಿರಂ ಮಂತ್ರತೇಜಿತಂ ।
ಸಂಸ್ಥಾಪ್ಯ ಕೀಲಾನಭಿತೋ ಬರ್ಬರೀಕಮಥಾಬ್ರವೀತ್ ॥ ೫೧ ॥
ಶುಚಿರ್ವಿನಿದ್ರಃ ಸಂತಿಷ್ಠ ಸ್ತವಂ ದೇವ್ಯಾಃ ಸಮುದ್ಗಿರನ್ ।
ಯಾವತ್ಕರ್ಮ ಕರೋಮ್ಯೇಷ ಯಥಾ ವಿಘ್ನಂ ನ ಜಾಯತೇ ॥ ೫೨ ॥

---

ಲಿಂಗಗಳನ್ನೆಲ್ಲ ಪೂಜಿಸಿ ಬಳಿಕ ದೇವಿಯರೊಬ್ಬೊಬ್ಬರನ್ನಾಗಿ ಅರ್ಚಿಸಿದನು. ಅಷ್ಟರಲ್ಲಿ ಬರ್ಬರೀಕನೂ ಉಪವಾಸವನ್ನು ಮಾಡಿ ಸ್ನಾತನಾಗಿ ಸಮೀಪದಲ್ಲಿ ನಿಂತನು.

೪೮–೪೯. ಬಳಿಕ ಪಾಡ್ಯಮಿಯ ರಾತ್ರಿಯಲ್ಲಿ ವಿಜಯಬ್ರಾಹ್ಮಣನು ಸಿದ್ಧಾಂಬಿಕೆಯ ಕೈಸಾಲೆಗೆ ಹೋದನು. ಅವನು ಭಗಾಕಾರವಾದ ಮಂಡಲವನ್ನೂ ಅದರ ಸುತ್ತಲೂ ದುರ್ಗೆಯರಿಗಾಗಿ ಒಂಭತ್ತು ಹಸ್ತಗಳನ್ನೂ ರಚಿಸಿ ಎಂಟು ದಿಕ್ಕುಗಳಲ್ಲಿಯೂ ಸೂತ್ರಬದ್ಧಗಳಾದ ಎಂಟು ಸ್ತಂಭಗಳನ್ನು ಸ್ಥಾಪಿಸಿ ಕೃಷ್ಣಾಜಿನವನ್ನು ಧರಿಸಿ ಬರ್ಬರೀಕನೊಡನೆ ಅಲ್ಲಿ ಸೇರಿದನು.

೫೦–೫೧. ತಲೆಗೂದಲನ್ನು ಜಡೆಯನ್ನಾಗಿ ಕಟ್ಟಿಕೊಂಡು ಅಷ್ಟದಿಗ್ಬಂಧನವನ್ನು ಮಾಡಿ ಬಳಿಕ ಪೂಜಾವಿಧಿಯನ್ನುಪಕ್ರಮಿಸಿದನು. ಆ ತ್ರಿಕೋಣಾಕಾರದ ಮಂಡಲದ ಮಧ್ಯದಲ್ಲಿ ಶುಭ್ರವಾದುವುಗಳೂ, ಮೂರು ಮೇಖಲಗಳಿಂದಲಂಕೃತವಾದುವುಗಳೂ ಆದ ಎರಡು ಕುಂಭಗಳನ್ನು ಸ್ಥಾಪಿಸಿ ಅವುಗಳ ಮೇಲೆ ಮಂತ್ರಶಕ್ತಿಯಿಂದ ಜ್ವಲಿಸುತ್ತಿರುವ ಖದಿರವೃಕ್ಷದ ಖಡ್ಗವೊಂದನ್ನಿಟ್ಟು ಸುತ್ತಲೂ ಸ್ತಂಭಗಳನ್ನು ನೆಟ್ಟು ಬರ್ಬರೀಕನನ್ನು ಕುರಿತು ಆ ವಿಜಯನು ಹೇಳತೊಡಗಿದನು.

೫೨. "ಎಲೈ ಸ್ನೇಹಿತನೆ! ನೀನು ಶುಚಿಯಾಗಿ ದೇವೀಸ್ತೋತ್ರವನ್ನು ಪಠಿಸುತ್ತ ಜಾಗ್ರತೆಯಾಗಿರಬೇಕು. ನಾನು ಈ ಕರ್ಮವನ್ನು ಪೂರೈಸುವವರೆಗೂ ವಿಘ್ನವು ಸಂಭವಿಸದಂತೆ ನೋಡಿಕೊಳ್ಳಬೇಕು."

ಇತ್ಯುಕ್ತೇ ಸಂಸ್ಥಿತೇ ತತ್ರ ಬರ್ಬರೀಕೇ ಮಹಾಬಲೇ ।
ವಿಜಯಃ ಶೋಷಣಂ ದಾಹಂ ಪ್ಲಾವನಂ ಕೃತವಾನ್ಯಮೀ ॥ ೫೩ ॥
ತತಃ ಸುಖಾಸನೋ ಭೂತ್ವಾ ಗುಂ ಗುರುಭ್ಯೋ ನಮಃ ಇತಿ ।
ಮಂತ್ರಮಷ್ಟೋತ್ತರಶತಂ ಜಪ್ತ್ವಾ ಗುರುಭ್ಯಃ ಪ್ರಣಮ್ಯ ಚ ।
ತತೋ ಗಣೇಶ್ವರವಿಧಾನಮಾರಬ್ಧವಾನ್ ॥ ೫೪ ॥
ಅಥಾತಃ ಸಂಪ್ರವಕ್ಷ್ಯಾಮಿ ಮಂತ್ರಂ ಗಣಪತೇಃ ಪರಂ ।
ಸರ್ವಕಾರ್ಯಕರಂ ಸ್ವಲ್ಪಂ ಮಹಾರ್ಥಂ ಸರ್ವಸಿದ್ಧಿದಂ ॥ ೫೫ ॥

ಓಂ ಗಾಂ ಗೀಂ ಗೂಂ ಗೈಂ ಗೌಂ ಗಃ । ಸಪ್ತಾಕ್ಷರೋಽಯಂ ಮಹಾಮಂತ್ರಃ ॥ ಓಂ ಗಣಪತಿಮಂತ್ರಸ್ಯ ಗಣಕೋನಾಮ ಋಷಿಃ । ವಿಘ್ನೇಶ್ವರೋ ದೇವತಾ । ಗಂ ಬೀಜಂ । ಓಂ ಶಕ್ತಿಃ । ಪೂಜಾರ್ಥೇ ಜಪಾರ್ಥೇ ವಾ ತಿಲಕಾರ್ಥೇ ವಾ ಮನಸ ಈಪ್ಸಿತಾರ್ಥೇ ಹೋಮಾರ್ಥೇ ವಾ ವಿನಿಯೋಗ ಇತಿ ॥ ೫೬ ॥

ಸಾಧಕಸ್ಯ ಪೂರ್ವಂ ತಿಲಕಕರಣಂ । ಓಂ ಗಾಂ ಗಣಪತಯೇ ನಮಃ ಇತಿ ತಿಲಕಸ್ಯೋಪರಿ ಅಕ್ಷತಾನ್ದದ್ಯಾದನೇನ ಮಂತ್ರೇಣ ॥ ಓಂ ಗಾಂ

---

೫೩. ಇಂತೆನ್ನಲು ಮಹಾಬಲಶಾಲಿಯಾದ ಬರ್ಬರೀಕನು ಜಾಗರೂಕನಾಗಿ ನಿಂತನು. ವಿಜಯನು ಶೋಷಣ, ದಾಹ, ಪ್ಲವನ ಮುಂತಾದ ಕರ್ಮಗಳನ್ನು ನಿಯಮದಿಂದ ಮಾಡಿದನು.

೫೪. ಬಳಿಕ ಸುಖಾಸನದಲ್ಲಿ ಕುಳಿತು 'ಓಂ ಗುಂ ಗುರುಭ್ಯೋ ನಮಃ' ಎಂಬ ಮಂತ್ರವನ್ನು ಒಂದುನೂರ ಎಂಟು ಸಲ ಜಪ ಮಾಡಿ ಗುರುಗಳಿಗೆ ನಮಸ್ಕರಿಸಿ ಬಳಿಕ ಗಣೇಶ್ವರಪೂಜಾ ವಿಧಾನವನ್ನುಪಕ್ರಮಿಸಿದನು.

೫೫. ಈಗ ಸಕಲಕಾರ್ಯಪ್ರದವೂ, ಅಲ್ಪಾಕ್ಷರಯುಕ್ತವೂ, ಮಹಾರ್ಥಸಹಿತವೂ, ಸರ್ವಸಿದ್ಧಿಪ್ರದಾಯಕವೂ ಆದ ಉತ್ತಮೋತ್ತಮ ಗಣಪತಿ ಮಂತ್ರವನ್ನು ಹೇಳುವೆನು.

೫೬. 'ಓಂ ಗಾಂ ಗೀಂ ಗೂಂ ಗೈಂ ಗೌಂ ಗಃ' ಎಂಬ ಈ ಮಹಾಮಂತ್ರವು ಏಳು ಅಕ್ಷರಗಳುಳ್ಳದ್ದು. ಈ ಗಣಪತಿ ಮಂತ್ರಕ್ಕೆ ಗಣಕನೆಂಬುವನೇ ಪ್ರವರ್ತಕ ಋಷಿಯು. ಮಹಾಗಣಪತಿಯೇ ದೇವತೆಯು. 'ಗಂ' ಎಂಬುದೇ ಬೀಜಾಕ್ಷರವು. ಪ್ರಣವವೇ ಶಕ್ತಿಯು. ಪೂಜೆಯಲ್ಲಾಗಲಿ, ಜಪದಲ್ಲಾಗಲಿ, ತಿಲಕಕರಣದಲ್ಲಾಗಲಿ, ಮನಸ್ಸಿನ ಇಷ್ಟಾರ್ಥಸಾಧನೆಗಾಗಿ ಮಾಡುವ ಹೋಮದಲ್ಲಾಗಲಿ ಈ ಮಂತ್ರವನ್ನು ವಿನಿಯೋಗಿಸಬೇಕು.

೫೭. ಸಾಧಕನು ಮೊದಲು ತಿಲಕವನ್ನು ರಚಿಸಬೇಕು. ಅದರಮೇಲೆ ಅಕ್ಷತೆಯನ್ನು 'ಓಂ ಗಾಂ ಗಣಪತಯೇ ನಮಃ' ಎಂಬ ಮಂತ್ರದಿಂದ

**ಗಣಪತಯೇ ನಮಃ ಇತಿ ತಿಲಕಮಂತ್ರಃ । ಓಂ ಗಾಂ ಗಣಪತಯೇ ನಮಃ ಅನೇನ ಮಂತ್ರೇಣ ಗಣೇಶಾಯ ಪುಷ್ಪಾಂಜಲಿತ್ರಯಂ ದದ್ಯಾತ್ । ಮೂಲಮಂತ್ರೇಣಾತ್ರ ಚಂದನ ಗಂಧ ಪುಷ್ಪ ಧೂಪ ದೀಪ ನೈವೇದ್ಯ ಪೂಗೀಫಲ ತಾಂಬೂಲಾದಿಕಂ ದದ್ಯಾತ್ । ಅತ ಊರ್ಧ್ವಂ ಮೂಲ ಮಂತ್ರೇಣ ಜಪಂ ಕುರ್ಯಾತ್ ॥ ಅಷ್ಟೋತ್ತರಶತಂ ಸಹಸ್ರಂ ಲಕ್ಷಂ ಕೋಟಿಂ ಚೇತಿ ಯಥಾಶಕ್ತಿ ಜಪ್ತ್ವಾ ದಶಾಂಶಹೋಮಾರ್ಥೇ ಗಣೇಶಾಗ್ನಯೇ ಆವಾಹಯಾಮೀತಿ ಅಗ್ನಿಮಾವಾಹ್ಯ ಓಂ ಗಾಂ ಗಣಪತಯೇ ಸ್ವಾಹೇತಿ ಮಂತ್ರೋ ಗುಗ್ಗುಲಗುಟಿಕಾಭಿರ್ಹೋಮಂ ವಿದಧ್ಯಾನ್ನಿಯೋಗಂ ಚೇತಿ ಗಾಣೇಶ್ವರೋ ಮಹಾಕಲ್ಪಃ ॥**

**ಯ ಏವಂ ಸರ್ವವಿಘ್ನೇಷು ಸಾಧಯೇನ್ಮಂತ್ರಮುತ್ತಮಂ ।**
**ಸರ್ವವಿಘ್ನಾನಿ ನಶ್ಯಂತಿ ಮನೋಭೀಷ್ಟಂ ಚಸಿದ್ಧ್ಯತಿ ॥ ೫೭ ॥**
**ಡಾಕಿನ್ಯೋ ಯಾತುಧಾನಾಶ್ಚ ಪ್ರೇತಾದ್ಯಾಶ್ಚ ಭಯಂಕರಾಃ ।**
**ಶತ್ರೂಣಾಂ ಜಾಯತೇ ನಾಶೋ ವಶೀಕರಣಮೇವ ಚ ॥ ೫೮ ॥**

---

ಚೆಲ್ಲಬೇಕು. ಇದೇ ತಿಲಕ ಮಂತ್ರವು. ಈ ಮಂತ್ರದಿಂದಲೇ ಗಣೇಶನಿಗೆ ಮೂರು ಅಂಜಲಿಗಳಷ್ಟು ಪುಷ್ಪಗಳನ್ನು ಅರ್ಪಿಸಬೇಕು. ಬಳಿಕ ಮೂಲಮಂತ್ರ ದಿಂದ ಚಂದನ, ಗಂಧ, ಪುಷ್ಪ, ಧೂಪ, ದೀಪ, ನೈವೇದ್ಯ, ಪೂಗೀಫಲಯುಕ್ತ ವಾದ ತಾಂಬೂಲ ಮುಂತಾದುವುಗಳನ್ನು ಕೊಡಬೇಕು. ಆಮೇಲೆ ಮೂಲ ಮಂತ್ರದ ಜಪವನ್ನು ಮಾಡಬೇಕು. ನೂರೆಂಟಾಗಲಿ, ಸಾವಿರವಾಗಲಿ, ಲಕ್ಷ ವಾಗಲಿ, ಕೋಟಿಯಾಗಲಿ ಶಕ್ತ್ಯನುಸಾರವಾಗಿ ಜಪಿಸಿ ಜಪಸಂಖ್ಯೆಯ ಹತ್ತ ನೆಯ ಭಾಗದಷ್ಟು ಹೋಮವನ್ನು ಮಾಡಬೇಕು. ಅದಕ್ಕಾಗಿ 'ಗಣೇಶಾಗ್ನಯೇ ಆವಾಹಯಾಮಿ' ಎಂಬ ಮಂತ್ರದಿಂದ ಅಗ್ನಿಯನ್ನು ಆವಾಹನೆಮಾಡಿ 'ಓಂ ಗಾಂ ಗಣಪತಯೇ ಸ್ವಾಹಾ' ಎಂಬ ಮಂತ್ರದಿಂದ ಗುಗ್ಗುಲದ ಗುಳಿಗೆ ಗಳಿಂದ ಹೋಮವನ್ನು ಮಾಡಬೇಕು. ಈ ಮಹಾಮಂತ್ರದ ವಿನಿಯೋಗವೇ ಗಾಣೇಶ್ವರ ಮಹಾಕಲ್ಪವೆನಿಸುವುದು.

ಯಾವನು ಸಕಲ ವಿಧಗಳಾದ ವಿಘ್ನಗಳಲ್ಲಿಯೂ ಈ ಉತ್ತಮ ಮಂತ್ರದ ಸಾಧನೆಯನ್ನು ಮಾಡುವನೋ, ಅವನ ಸಕಲ ವಿಘ್ನಗಳೂ ನಾಶವನ್ನು ಹೊಂದಿ ಇಷ್ಟಾರ್ಥವು ನೆರವೇರುವುದು.

೫೮. ಡಾಕಿನಿಯರು, ರಾಕ್ಷಸರು, ಪ್ರೇತಾದಿ ಇತರ ಭಯಂಕರ ಜಂತು ಗಳು ಮುಂತಾದ ಶತ್ರುಗಳು ನಾಶವಾಗಿ ಎಲ್ಲರನ್ನೂ ವಶವಾಗಿ ಮಾಡಿಕೊಳ್ಳುವ ಶಕ್ತಿಯು ಲಭಿಸುವುದು.

ಇಮಂ ಗಾಣೇಶ್ವರಂ ಕಲ್ಪಂ ವಿಜಾನನ್ವಿಜಯೋಽಪಿ ಚ ।
ತಿಲಕಂ ವಿಧಿನಾ ಕೃತ್ವಾ ಜಪ್ತ್ವಾ ಚಾಷ್ಟೋತ್ತರಂ ಶತಂ ॥ ೫೯ ॥
ದಶಾಂಶಂ ಗುಟಿಕಾ ಹುತ್ವಾ ಪೂಜ್ಯ ಸಿದ್ಧಿವಿನಾಯಕಂ ।
ಸಿದ್ಧೇಯಕ್ಷೇತ್ರಪಾಲಸ್ಯ ಚಕ್ರೇ ಪೂಜಾಂ ತತೋ ನಿಶಿ ॥ ೬೦ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿ ಸಾಹಸ್ರ್ಯಾಂ ಸಂಹಿತಾಯಾಂ
ಪ್ರಥಮೇ ಮಾಹೇಶ್ವರಖಂಡೇ ಕೌಮಾರಿಕಾಖಂಡೇ
"ಮಹಾವಿದ್ಯಾಸಾಧನೇ ಗಾಣೇಶ್ವರಕಲ್ಪವರ್ಣನಂ" ನಾಮ
ಏಕಷಷ್ಟಿತಮೋಽಧ್ಯಾಯಃ

---

೫೯-೬೦. ವಿಜಯನಾಮಕನಾದ ಆ ಬ್ರಾಹ್ಮಣನು ಈ ಗಾಣೇಶ್ವರಕಲ್ಪವನ್ನು ಚೆನ್ನಾಗಿ ತಿಳಿದುಕೊಂಡು, ವಿಧ್ಯುಕ್ತರೀತಿಯಿಂದ ತಿಲಕವನ್ನು ರಚಿಸಿ ನೂರೆಂಟು ಜಪಗಳನ್ನೂ ದಶಾಂಶದಷ್ಟು ಗುಗ್ಗುಲ ಗುಳಿಗೆಗಳ ಹೋಮವನ್ನೂ ಮಾಡಿ, ಸಿದ್ಧಿವಿನಾಯಕನನ್ನು ಪೂಜಿಸಿ ಆಮೇಲೆ ರಾತ್ರಿಯಲ್ಲಿ ಸಿದ್ಧೇಯಕ್ಷೇತ್ರಪಾಲಕನ ಪೂಜೆಯನ್ನು ಮಾಡಿದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಎರಡನೆಯ ಕೌಮಾರಿಕಾಖಂಡದಲ್ಲಿ
"ಮಹಾವಿದ್ಯಾಸಾಧನ — ಗಾಣೇಶ್ವರಕಲ್ಪವರ್ಣನ"ವೆಂಬ
ಅರುವತ್ತೊಂದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ದ್ವಿಷಷ್ಟಿತಮೋಽಧ್ಯಾಯಃ

## ಮಹಾವಿದ್ಯಾಸಾಧನವರ್ಣನಂ

**ಶೌನಕ ಉವಾಚ:—**

**ಸೂತ ಶ್ರುತಾ ಪುರಾಸ್ಮಾಭಿರುತ್ಪತ್ತಿರ್ಗಣಪಸ್ಯ ಚ ।**
**ಕ್ಷೇತ್ರನಾಥಃ ಕಥಂ ಜಜ್ಞೇ ವದೈತಚ್ಛೃಣ್ವತಾಂ ಹಿ ನಃ ॥ ೧ ॥**

**ಸೂತ ಉವಾಚ:—**

**ಯದಾ ದಾರುಕದೈತ್ಯೇನ ಪೀಡ್ಯಮಾನಾ ದಿವೌಕಸಃ ।**
**ಶಿವಂ ದೇವ್ಯಾ ಸಹಾಸೀನಂ ಪ್ರಣಿಪತ್ಯೇದಮಬ್ರುವನ್ ॥ ೨ ॥**
**ದೇವ ದೈತ್ಯೇನ ಘೋರೇಣ ದುರ್ಜಯೇನ ಸುರಾಸುರೈಃ ।**
**ಪೀಡಿತಾ ದಾರುಕೇಣ ಸ್ಮಃ ಸ್ವಸ್ಥಾನಾಚ್ಚಾಪಿ ಚ್ಯಾವಿತಾಃ ॥ ೩ ॥**
**ನ ವಿಷ್ಣುನಾ ನ ಚಂದ್ರೇಣ ನ ಚಾನ್ಯೇನಾಪಿ ಕೇನಚಿತ್ ।**
**ಶಕ್ಯೋ ಹಂತುಂ ಸ ದುಷ್ಟಾತ್ಮಾ ಅರ್ಧನಾರೀಶ್ವರಂ ವಿನಾ ॥ ೪ ॥**
**ತೇನ ಸಂಪೀಡ್ಯಮಾನಾನಾಮಸ್ಮಾಕಂ ಶರಣಂ ಭವ ।**
**ಇತ್ಯುಕ್ತ್ವಾ ರುರುದುರ್ದೇವಾಸ್ತ್ರಾಹಿ ತ್ರಾಹೀತಿ ಚಾಬ್ರುವನ್ ॥ ೫ ॥**

---

## ಕನ್ನಡದ ಅನುವಾದ

### ಮಹಾವಿದ್ಯಾಸಾಧನವರ್ಣನ

೧. ಶೌನಕನು ಹೇಳುತ್ತಾನೆ:—ಎಲೈ ಸೂತನೆ! ಮುನ್ನ ಗಣಪತಿಯು ಹೇಗೆ ಹುಟ್ಟಿದನೆಂಬುದನ್ನು ನಿನ್ನಿಂದ ಕೇಳಿರುವೆವು. ಈಗ ಆತನು ಕ್ಷೇತ್ರಪಾಲಕನಾದ ಬಗೆಯನ್ನು ತಿಳಿಯಲು ಕುತೂಹಲದಿಂದಿರುವೆವು. ಅದನ್ನು ತಿಳಿಸು.

೨. ಸೂತನು ನಿರೂಪಿಸುತ್ತಾನೆ:—ಪೂರ್ವದಲ್ಲಿ ದಾರುಕನೆಂಬ ರಾಕ್ಷಸನಿಂದ ಹಿಂಸಿಸಲ್ಪಟ್ಟ ದೇವತೆಗಳು ದೇವಿಯೊಡನೆ ಸುಖಾಸೀನನಾಗಿದ್ದ ಪರಶಿವನನ್ನು ಕುರಿತು ನಮಸ್ಕರಿಸಿ ಹೇಳತೊಡಗಿದರು.

೩. "ಎಲೈ ದೇವದೇವನೆ! ದೇವದಾನವರಿಂದ ಅಜೇಯನೂ ಕ್ರೂರ ದೈತ್ಯನೂ ಆದ ದಾರುಕನಿಂದ ಪೀಡಿತರಾಗಿ ನಾವೆಲ್ಲರೂ ನಮ್ಮ ಸ್ಥಾನಗಳಿಂದ ಓಡಿಸಲ್ಪಟ್ಟಿರುವೆವು.

೪. ಅರ್ಧನಾರೀಶ್ವರನಾದ ನಿನ್ನೊಬ್ಬನನ್ನುಳಿದು ವಿಷ್ಣುವಿನಿಂದಾಗಲಿ, ಚಂದ್ರನಿಂದಾಗಲಿ, ಮತ್ತಾವನಿಂದಲೇ ಆಗಲಿ ಆ ದುರಾತ್ಮನು ಸಾಯುವುದಿಲ್ಲ.

೫. ಅವನಿಂದ ಹಿಂಸೆಗೊಳ್ಳುತ್ತಿರುವ ನಮಗೆ ಅಭಯಪ್ರದನಾಗು. ಕಾಪಾಡು, ಕಾಪಾಡು" ಎನ್ನುತ್ತ ಆ ದೇವತೆಗಳೆಲ್ಲರೂ ರೋದನವನ್ನು ಮಾಡತೊಡಗಿದರು.

ತತೋಽತಿಕೃಪಯಾವಿಷ್ಟಾ ಹರಕಂಠಸ್ಯ ಕಾಲಿಮಾಂ ।
ಗೃಹೀತ್ವಾ ಪಾರ್ವತೀ ಚಕ್ರೇ ನಾರೀಮೇಕಾಂ ಮಹಾಭಯಾಂ ॥ ೬ ॥
ಆತ್ಮಶಕ್ತಿಂ ತತ್ರ ಮುಕ್ತ್ವಾ ಪ್ರೋವಾಚೇದಂ ವಚಃ ಶುಭಾ ।
ಯಸ್ಮಾದತೀವ ಕಾಲಾಸಿ ನಾಮ್ನಾ ತ್ವಂ ಕಾಲಿಕಾ ಭವ ॥ ೭ ॥
ದೇವಾರಿಂ ಚ ದುರಾತ್ಮಾನಂ ಶೀಘ್ರಂ ನಾಶಯ ಶೋಭನೇ ।
ಏವಮುಕ್ತಾ ಮಹಾರಾವಾ ಕಾಲಿಕಾ ಪ್ರಾಪ್ಯ ತಂ ತದಾ ॥ ೮ ॥
ರವೇಣೈವ ಮೃತಂ ಚಕ್ರೇ ಸಾನುಗಂ ಸ್ಫುಟಿತಹೃದಂ ।
ತತೋಽವಂತೀಶ್ಮಶಾನಸ್ಥಾ ಮಹಾರಾವಾನಮುಂಚತ ॥ ೯ ॥
ಯೈರಾಸನ್ನಿಕಲಾ ಲೋಕಾಸ್ತ್ರಯೋಽಪಿ ಪ್ರಮೃತಾ ಯಥಾ
ತತೋ ರುದ್ರೋ ಬಾಲರೂಪಂ ಕೃತ್ವಾ ವಿಶ್ವಕೃತೇ ಪ್ರಭುಃ ॥ ೧೦ ॥
ರುದಂಸ್ತಸ್ಯಾಃ ಸಮೀಪೇ ಚಾಪ್ಯಾಗತಃ ಪ್ರೇತಸದ್ಮನಿ ।
ರುದಂತಂ ಚ ತತೋ ಬಾಲಂ ಕೃತ್ವೋತ್ಸಂಗೇ ಕೃಪಾನ್ವಿತಾ ॥ ೧೧ ॥
ಕಾಲಿಕಾಪಾಯಯತ್ಸ್ತನ್ಯಂ ಮಾ ರುದೇತಿ ಪ್ರಜಲ್ಪತೀ ।
ಸ್ತನ್ಯವ್ಯಾಜೇನ ಬಾಲೋಽಪಿ ಪಪೌ ಕ್ರೋಧಂ ತದಂಗಜಂ ॥ ೧೨ ॥

---

೬. ಆಗ ಅತ್ಯಂತ ಕನಿಕರವನ್ನು ಹೊಂದಿದ ಪಾರ್ವತಿಯು ನಾಥನ ಕಂಠದಲ್ಲಿರುವ ವಿಷವನ್ನು ತೆಗೆದುಕೊಂಡು ಮಹಾಭಯಂಕರರೂಪಳಾದ ಒಬ್ಬ ಸ್ತ್ರೀಯನ್ನು ನಿರ್ಮಿಸಿದಳು.

೭. ತರುವಾಯ ಆಕೆಯು ತನ್ನ ಶಕ್ತಿಯನ್ನೂ ಅವಳಲ್ಲಿ ಆವಾಹಿಸಿ ಅವಳನ್ನು ಕುರಿತಿಂತೆಂದಳು. "ನೀನು ಕೇವಲ ಕಪ್ಪುಬಣ್ಣದ ದೇಹವುಳ್ಳವಳಾದುದರಿಂದ ನಿನಗೆ ಕಾಳಿಯೆಂಬ ಹೆಸರೇ ಉಂಟಾಗಲಿ.

೮–೧೨. ಎಲೌ ಮಂಗಳಾಂಗಿಯೆ! ಶೀಘ್ರವಾಗಿ ದೇವತೆಗಳಿಗೆ ಶತ್ರುವಾದ ಆ ದಾರುಕನೆಂಬ ದುರಾತ್ಮನನ್ನು ನಾಶಗೊಳಿಸು." ಇಂತು ಹೇಳಲ್ಪಟ್ಟ ಆ ಕಾಳಿಯು ಭಯಂಕರವಾದ ಸಿಂಹನಾದವನ್ನು ಮಾಡುತ್ತ ಬರಲು ಆ ಧ್ವನಿಯ ರಭಸದಿಂದಲೇ ಪರಿವಾರದಿಂದೊಡಗೂಡಿದ ಆ ದಾರುಕರಾಕ್ಷಸನ ಎದೆಯೊಡೆದು ನಾಶವಾದನು. ಬಳಿಕ ಕಾಳಿಯು ಅವಂತೀಕ್ಷೇತ್ರದ ಸ್ಮಶಾನಭೂಮಿಯನ್ನು ಸೇರಿ ಮಹಾಶಬ್ದವನ್ನು ಮಾಡುತ್ತಿರಲು ಮೂರುಲೋಕಗಳ ನಿವಾಸಿಗಳೂ ವಿಕಲೇಂದ್ರಿಯರಾಗಿ ಮೃತಪ್ರಾಯರಂತೆ ಕಾಣುತ್ತಿದ್ದರು. ಆಗ ಮಹಾರುದ್ರನು ಲೋಕಕಲ್ಯಾಣಾರ್ಥವಾಗಿ ಎಳೆಯ ಮಗುವಿನ ಆಕಾರವನ್ನು ತಳೆದು ಅಳುತ್ತ ಸ್ಮಶಾನದಲ್ಲಿದ್ದ ಆಕೆಯ ಸಮೀಪಕ್ಕೆ ಬಂದನು. ಆಕೆಯು ಕೃಪೆಗೊಂಡು ಅಳುತ್ತಿರುವ ಆ ಬಾಲಕನನ್ನು ಮಡಿಲಲ್ಲಿರಿಸಿಕೊಂಡು 'ಅಳಬೇಡ'ವೆಂದು ಸಂತೈಸುತ್ತ ಸ್ತನ್ಯವನ್ನು ಕುಡಿಸಿದಳು. ಆ ಶಿವಬಾಲಕನೂ ಸ್ತನ್ಯಪಾನಮಾಡುವ ವ್ಯಾಜದಿಂದ ಆಕೆಯ ದೇಹದಲ್ಲಿದ್ದ ಕ್ರೋಧವೆಲ್ಲವನ್ನೂ ಸೆಳೆದುಕೊಂಡನು.

ಯೋಽಸೌ ಹರಕಂಠಭವವಿಷಾದಾಸೀತ್ಸುದುರ್ಧರಃ ।
ಪೀತಕ್ರೋಧಸ್ವಭಾವೇ ಚ ಸೌಮ್ಯಾಸೀತ್ಕಾಲಿಕಾ ತದಾ ॥ ೧೩ ॥
ಬಾಲೋಽಪಿ ಬಾಲರೂಪಂ ತತ್ತ್ಯಕ್ತುಮೈಚ್ಛತ್ಕೃತಕ್ರಿಯಃ ॥ ೧೪ ॥
ತತೋ ದೇವಾಃ ಕಾಲಿಕಾಯಾಃ ಶಂಕಮಾನಾಃ ಪುನರ್ಭಯಂ ।
ಊಚುರ್ಮಾ ಬಾಲ ಬಾಲತ್ವಂ ಪರಿತ್ಯಜ ಕೃಪಾಂ ಕುರು ॥ ೧೫ ॥

ಬಾಲ ಉವಾಚ :—

ನ ಭೇತವ್ಯಂ ಕಾಲಿಕಾಯಾಃ ಸೌಮ್ಯಾ ದೇವೀ ಯತಃ ಕೃತಾ ।
ಅಸ್ತಿ ಚೇದ್ಭವತಾಂ ಭೀತಿರನ್ಯಾನ್ಸ್ರಕ್ಷ್ಯಾಮಿ ಬಾಲಕಾನ್ ॥ ೧೬ ॥
ಚತುಷ್ಷಷ್ಟಿಕ್ಷೇತ್ರಪಾಲಾನಿತ್ಯುಕ್ತ್ವಾ ಸೋಽಸೃಜನ್ಮುಖಾತ್ ।
ಪ್ರಾಹ ತಾನ್ಬಾಲರೂಪಾಂಶ್ಚ ಬಾಲರೂಪೀ ಮಹೇಶ್ವರಃ ॥ ೧೭ ॥
ಸ್ವರ್ಗೇಷು ಪಂಚವಿಂಶಾನಾಂ ಪಾತಾಲೇಷು ಚ ತಾವತಾಂ ।
ಚತುರ್ದಶಾನಾಂ ಭೂಲೋಕೇ ವಾಸೋ ವಃ ಪಾಲನಂ ತಥಾ ॥ ೧೮ ॥

---

೧೩-೧೪. ಹರನ ಕಂಠದ ವಿಷದ ದೆಸೆಯಿಂದ ಆ ಕ್ರೋಧವು ದುಸ್ಸಹವಾಯಿತು. ಅದನ್ನು ಶಿಶುವು ಪಾನಮಾಡುತ್ತಲೆ ಕಾಳಿಯು ಸೌಮ್ಯಸ್ವರೂಪಿಯಾದಳು. ಈ ರೀತಿ ತನ್ನ ಕೆಲಸವು ಕೈಗೂಡಲು ಶಿವನು ಬಾಲರೂಪವನ್ನು ಬಿಡಲು ಇಚ್ಛಿಸಿದನು.

೧೫. ಆದರೆ ದೇವತೆಗಳೆಲ್ಲರೂ ಮತ್ತೆ ಕಾಳಿಯು ಉಗ್ರರೂಪವನ್ನು ಸ್ವೀಕರಿಸುವಳೆಂದು ಶಂಕಿಸಿದವರಾಗಿ "ಎಲೈ ಬಾಲಕನೆ! ನಿನ್ನ ಬಾಲರೂಪವನ್ನು ಬಿಡಬೇಡ; ನಮ್ಮಲ್ಲಿ ಕೃಪೆದೋರು" ಎಂದು ಬೇಡಿಕೊಂಡರು.

೧೬. ಬಾಲಕನು ಹೇಳುತ್ತಾನೆ:—"ನೀವು ಕಾಳಿಯ ದೆಸೆಯಿಂದ ಭಯಪಡಲು ಕಾರಣವಿಲ್ಲ. ಆ ದೇವಿಯು ಶಾಂತಳಾಗಿ ಮಾಡಲ್ಪಟ್ಟಿರುವಳು. ನಿಮಗೆ ಭೀತಿಯನ್ನು ಹೋಗಲಾಡಿಸಲು ಇತರ ಬಾಲಕರನ್ನು ಸೃಷ್ಟಿಮಾಡುತ್ತೇನೆ."

೧೭. ಇಂತೆಂದು ತನ್ನ ಮುಖದಿಂದ ಅರುವತ್ತುನಾಲ್ಕು ಕ್ಷೇತ್ರಪಾಲಕರನ್ನು ಸೃಜಿಸಿದನು. ಬಾಲರೂಪಿಯಾದ ಮಹೇಶ್ವರನು ಅವರನ್ನು ಕುರಿತು ಹೇಳತೊಡಗಿದನು.

೧೮-೧೯. "ಸ್ವರ್ಗಾದಿ ಊರ್ಧ್ವಲೋಕಗಳಲ್ಲಿ ಇಪ್ಪತ್ತೈದು ಜನರೂ, ಪಾತಾಲಾದಿ ಅಧೋಲೋಕಗಳಲ್ಲಿ ಇಪ್ಪತ್ತೈದು ಜನರೂ, ಭೂಲೋಕದಲ್ಲಿ ಹದಿನಾಲ್ಕು ಜನರೂ ವಾಸಮಾಡಿಕೊಂಡು ನೀವೆಲ್ಲರೂ ಸಮಸ್ತಕ್ಷೇತ್ರಗಳನ್ನು ಪಾಲಿಸುತ್ತಿರಬೇಕು. ಈ ಸ್ಮಶಾನದಲ್ಲಿ ಓಡಾಡುವ ನಾಯಿಯೇ ವಾಹನವು. ತಂಡುಲಗಳಿಂದ ಮಿಶ್ರಿತವಾದ ರಾಜಮಾಷವೇ ನಿಮಗೆ ಆಹಾರವು.

ಅಯಮೇವ ಶ್ಮಶಾನಸ್ಥೋ ಭವಿತಾ ಶ್ವಾ ಚ ವಾಹನಂ ।
ನೈವೇದ್ಯಂ ಭವತಾಂ ರಾಜಮಾಷತಂಡುಲಮಿಶ್ರಕಾಃ ॥ ೧೯ ॥
ಅನಭ್ಯರ್ಚ್ಯ ಚ ಯೋ ಯುಷ್ಮಾನ್ಕಿಂಚಿತ್ಕೃತ್ಯಂ ವಿಧಾಸ್ಯತಿ ।
ತಸ್ಯ ತನ್ನಿಷ್ಫಲಂ ಭಾವಿ ಭುಕ್ತಂ ಪ್ರೇತೈಶ್ಚ ರಾಕ್ಷಸೈಃ ॥ ೨೦ ॥
ಇತ್ಯುಕ್ತ್ವಾ ಭಗವಾನ್ರುದ್ರಸ್ತತ್ರೈವಾಂತರಧೀಯತ ।
ಕ್ಷೇತ್ರಪಾಲಾಃ ಸ್ಥಿತಾಶ್ಚೈವ ಯಥಾಸ್ಥಾನೇ ನಿರೂಪಿತಾಃ ॥ ೨೧ ॥
ಇತಿ ವಃ ಕ್ಷೇತ್ರಪಾಲಾನಾಂ ಸೃಷ್ಟಿಃ ಪ್ರೋಕ್ತಾ ಸಮಾಸತಃ ।
ಆರಾಧನಂ ಪ್ರವಕ್ಷ್ಯಾಮಿ ಯೇನ ಪ್ರೀತಾ ಭವಂತಿ ತೇ ॥ ೨೨ ॥
ಓಂ ಕ್ಷಾಂ ಕ್ಷೇತ್ರಪಾಲಾಯ ನಮಃ । ಇತಿ ನವಾಕ್ಷರೋ ಮಹಾಮಂತ್ರಃ ॥

ಅನೇನಾತ್ರ ಚಂದನಾದಿ ದತ್ವಾ ರಾಜಮಾಷತಂಡುಲಮಿಶ್ರಕಾಂಶ್ಚ ಚತುಃಷಷ್ಟಿಕೃತಭಾಗಾನ್ವಟಕಾನ್ನಿವೇದ್ಯ ತಾವತ್ಯೋ ದೀಪಿಕಾಸ್ತಾವಂತಿ ಪತ್ರಾಣಿ ಪೂಗಾನಿ ನಿವೇದ್ಯ ದಂಡವತ್ಪ್ರಣಮ್ಯ ಮಹಾಸ್ತುತಿಮೇತಾಂ ಜಪೇತ್ ॥ ೨೪ ॥

---

೨೦. ನಿಮ್ಮನ್ನು ಪೂಜಿಸದೆ ಯಾವನು ಯಾವ ಕಾರ್ಯವನ್ನು ಮಾಡಿದರೂ ಅದು ನಿಷ್ಫಲವೇ ಆಗುವುದು. ಅದರ ಪ್ರಯೋಜನವು ಪ್ರೇತಗಳಿಗೂ ರಾಕ್ಷಸರಿಗೂ ಸೇರುವುದು.''

೨೧. ಇಂತು ಅಪ್ಪಣೆಮಾಡಿ ಷಡ್ಗುಣೈಶ್ವರ್ಯಪೂರಿತನಾದ ಮಹೇಶ್ವರನು ಅಲ್ಲಿಯೇ ಅಂತರ್ಧಾನವನ್ನು ಹೊಂದಿದನು. ಬಳಿಕಲಾ ಕ್ಷೇತ್ರಪಾಲಕರೂ ಸಹ ತಮಗೆ ನಿರ್ದಿಷ್ಟಗಳಾದ ಸ್ಥಾನಗಳಲ್ಲಿ ನೆಲಸಿದರು.

೨೨. ಎಲೈ ಬ್ರಾಹ್ಮಣೋತ್ತಮರೆ! ಇಂತು ಕ್ಷೇತ್ರಪಾಲಕರ ಉತ್ಪತ್ತಿಯ ಕ್ರಮವನ್ನು ವಿಶದವಾಗಿ ತಿಳಿಸಿರುವೆನು. ಇನ್ನು ಅವರ ಸಂತೋಷಕ್ಕೆ ಕಾರಣವಾಗಿರುವ ಆರಾಧನೆಯನ್ನು ಮಾಡುವ ಕ್ರಮವನ್ನು ಹೇಳುವೆನು.

೨೩. ''ಓಂ ಕ್ಷಾಂ ಕ್ಷೇತ್ರಪಾಲಾಯ ನಮಃ'' ಎಂಬುದೇ ಒಂಬತ್ತು ಅಕ್ಷರಗಳ ಮಹಾಮಂತ್ರವು.

೨೪. ಈ ಮಂತ್ರದಿಂದ ಚಂದನ, ಧೂಪ, ದೀಪಗಳನ್ನರ್ಪಿಸಿ ಅಕ್ಕಿಯೊಡನೆ ಬೆರಸಿದ ಉದ್ದಿನ ಅಪೂಪ (ಹೊಯ್ಗಡಬು)ಗಳನ್ನು ಅರುವತ್ತನಾಲ್ಕು ಭಾಗಗಳನ್ನಾಗಿ ವಿಂಗಡಿಸಿ ನಿವೇದನವನ್ನು ಮಾಡಿ, ಅಷ್ಟೇ ದೀಪಗಳನ್ನೂ ಅಷ್ಟು ವೀಳ್ಯಗಳಲ್ಲಿ ಅಷ್ಟೇ ಅಡಿಕೆಗಳನ್ನೂ ಅರ್ಪಿಸಿ, ಸಾಷ್ಟಾಂಗ ನಮಸ್ಕಾರವನ್ನು ಮಾಡಿ ಮುಂದೆ ಹೇಳುವ ಮಹಾಸ್ತೋತ್ರವನ್ನು ಜಪಿಸಬೇಕು.

ಓಂ ಊರ್ಧ್ವಕೇಶಾ ವಿರೂಪಾಕ್ಷಾ ನಿತ್ಯಂ ಯೇ ಘೋರರೂಪಿಣಃ ।
ರಕ್ತನೇತ್ರಾಶ್ಚ ಪಿಂಗಾಕ್ಷಾಃ ಕ್ಷೇತ್ರಪಾಲಾನ್ನಮಾಮಿ ತಾನ್ ॥ ೨೫ ॥
ಅಹ್ವರೋ ಹ್ಯಾಪಕುಂಭಶ್ಚ ಇಡಾಚಾರಸ್ತಥೈವ ಯಃ ।
ಇಂದ್ರಮೂರ್ತಿಶ್ಚ ಕೋಲಾಕ್ಷ ಉಪಪಾದ ಋತುಂಸನಃ ॥ ೨೬ ॥
ಸಿದ್ಧೇಯಶ್ಚೈವ ವಲಿಕೋ ನೀಲಪಾದೇಕದಂಷ್ಟ್ರಿಕಃ ।
ಇರಾಪತಿಶ್ಚಾಘಹಾರೀ ವಿಘ್ನಹಾರೀ ತಥಾಂತಕಃ ॥ ೨೭ ॥
ಊರ್ಧ್ವಪಾದಃ ಕಂಬಲಶ್ಚ ಖಂಜನಃ ಖರ ಏವಚ ।
ಗೋಮುಖಶ್ಚೈವ ಜಂಘಾಲೋ ಗಣನಾಥಶ್ಚ ವಾರಣಃ ।
ಜಟಾಲೋಪ್ಯಜಟಾಲಶ್ಚ ನೌಮಿ ಸ್ವಃಕ್ಷೇತ್ರಪಾಲಕಾನ್ ॥ ೨೮ ॥
ಋುಕಾರೋ ಹಠಕಾರೀಚ ಟಂಕಪಾಣಿಃ ಖಣಿಸ್ತಥಾ ॥ ೨೯ ॥
ಠಂಠಂಕಣೋ ಜಂಬರಶ್ಚ ಸ್ಫುಲಿಂಗಾಸ್ಯಸ್ತಡಿದ್ರುಚಿಃ ।
ದಂತುರೋ ಘನನಾದಶ್ಚ ನಂದಕಶ್ಚ ತಥಾ ಪರಃ ॥ ೩೦ ॥
ಫೇತ್ಕಾರಕಾರೀ ಪಂಚಾಸ್ಯೋ ಬರ್ಬರೀ ಭೀಮರೂಪವಾನ್ ।
ಭಗ್ನಪಕ್ಷಃ ಕಾಲಮೇಘೋ ಯುುವಾನೋ ಭಾಸ್ಕರಸ್ತಥಾ ॥ ೩೧ ॥
ರೌರವಶ್ಚಾಪಿ ಲಂಬೋಷ್ಠೋ ವಣಿಜಃ ಸುಜಟಾಲಿಕಃ ।
ಸುಗಂಧೋ ಹುಹುಕಶ್ಚೈವ ನೌಮಿ ಪಾತಾಲರಕ್ಷಕಾನ್ ॥ ೩೨ ॥

---

೨೫. "ಕೆದರಿದ ಕೂದಲುಗಳುಳ್ಳವರೂ, ವಿಕಾರವಾದ ನೇತ್ರಗಳುಳ್ಳವರೂ ಘೋರರೂಪಿಗಳೂ, ಎಲ್ಲ ಕಾಲಗಳಲ್ಲಿಯೂ ಒಂದೇ ಸಮನಾಗಿ ಕೆಂಪೇರಿದ ಕಣ್ಣುಗಳುಳ್ಳವರಾಗಿ ಪಿಂಗಾಕ್ಷರೆನಿಸಿದವರೂ ಆದ ಕ್ಷೇತ್ರಪಾಲಕರಿಗೆ ನಮಸ್ಕಾರವನ್ನು ಮಾಡುವೆನು.

೨೬–೨೮. ಅಹ್ವರ, ಆಪಕುಂಭ, ಇಡಾಚಾರ, ಇಂದ್ರಮೂರ್ತಿ, ಕೋಲಾಕ್ಷ, ಉಪಪಾದ, ಋತುಂಸನ, ಸಿದ್ಧೇಯ, ವಲಿಕ, ನೀಲಪಾದ, ಏಕದಂಷ್ಟ್ರ, ಇರಾಪತಿ, ಅಘಹಾರಿ, ವಿಘ್ನಹಾರಿ, ಅಂತಕ, ಊರ್ಧ್ವಪಾದ, ಕಂಬಲ, ಖಂಜನ, ಖರ, ಗೋಮುಖ, ಜಂಘಾಲ, ಗಣನಾಥ, ವಾರಣ, ಜಟಾಲೋಪಿ, ಅಜಟಾಲರೆಂಬ ಸ್ವರ್ಗಲೋಕ ರಕ್ಷಕರಾದ ಕ್ಷೇತ್ರಪಾಲಕರಿಗೆ ನಮಿಸುವೆನು.

೨೯–೩೨. ಇಷ್ಟೆಯಲ್ಲದೆ, ಋುಕಾರ, ಹಠಕಾರಿ, ಟಂಕಪಾಣಿ, ಖಣಿ, ಠಂಠಂಕಣ, ಜಂಬರ, ಸ್ಫುಲಿಂಗಾಸ್ಯ, ತಡಿದ್ರುಚಿ, ದಂತುರ, ಘನನಾದ, ನಂದಕ, ಪರ, ಫೇತ್ಕಾರಕಾರಿ, ಪಂಚಾಸ್ಯ, ಭೀಮರೂಪನಾದ ಬರ್ಬರಿ, ಭಗ್ನಪಕ್ಷ, ಕಾಲಮೇಘ, ಯುುವಾನ, ಭಾಸ್ಕರ, ರೌರವ, ಲಂಬೋಷ್ಠ, ವಣಿಜ, ಸುಜಟಾಲ, ಸುಗಂಧ, ಹುಹುಕರೆಂಬ ಪಾತಾಲ ರಕ್ಷಕರಿಗೆ ನಮಸ್ಕರಿಸುವೆನು.

ಸರ್ವಲಿಂಗೇಷು ಹುಂಕಾರಃ ಸ್ಮಶಾನೇಷು ಭಯಾವಹಃ ।
ಮಹಾಲಕ್ಷೋ ವನೇ ಘೋರೇ ಜ್ವಾಲಾಕ್ಷೋ ವಸತೌ ಸ್ಥಿತಃ ॥ ೩೩ ॥
ಏಕವೃಕ್ಷಶ್ಚ ವೃಕ್ಷೇಷು ಕರಾಲವದನೋ ನಿಶಿ ।
ಘಂಟಾರವೋ ಗುಹಾವಾಸೀ ಪದ್ಮಖಂಜೋ ಜಲೇ ಸ್ಥಿತಃ ॥ ೩೪ ॥
ಚತ್ವರೇಷು ದುರಾರೋಹಃ ಪರ್ವತೇ ಕುರವಸ್ತಥಾ ।
ನಿರ್ಝರೇಷು ಪ್ರವಾಹಾಖ್ಯೋ ಮಣಿಭದ್ರೋ ನಿಧಿಷ್ವಪಿ ॥ ೩೫ ॥
ರಸಕ್ಷೇತ್ರೇ ರಸಾಧ್ಯಕ್ಷೋ ಯಜ್ಞವಾಟೇಷು ಕೋಟನಃ ।
ಚತುರ್ದಶ ಭುವಂ ವ್ಯಾಪ್ಯ ಸ್ಥಿತಾಶ್ಚೈವಂ ನಮಾಮಿ ತಾನ್ ॥ ೩೬ ॥
ಏವಂ ಚತುಷ್ಷಷ್ಟಿಮಿತಾನ್ಶರಣಂ ಯಾಮಿ ಕ್ಷೇತ್ರಪಾನ್ ।
ಪ್ರಸೀದಂತು ಪ್ರಸೀದಂತು ತೃಪ್ಯಂತು ಮಮ ಪೂಜಯಾ ॥ ೩೭ ॥
ಸರ್ವಕಾರ್ಯೇಷು ಯಶ್ಚೈವಂ ಕ್ಷೇತ್ರಪಾನರ್ಚಯೇಚ್ಛುಚಿಃ ।
ಕ್ಷೇತ್ರಪಾಸ್ತಸ್ಯ ತುಷ್ಯಂತಿ ಯಚ್ಛಂತಿ ಚ ಸಮೀಹಿತಂ ॥ ೩೮ ॥
ಇಮಂ ಕ್ಷೇತ್ರಪಕಲ್ಪಂ ಚ ವಿಜಾನನ್ವಿಜಯಸ್ತಥಾ ।
ಯಥೋಕ್ತವಿಧಿನಾಭ್ಯರ್ಚ್ಯ ಸಿದ್ಧೇಯಂ ತುಷ್ಟುವೇ ಚ ತಂ ॥ ೩೯ ॥

---

೩೩–೩೬. ಸರ್ವಲಿಂಗಗಳಲ್ಲಿ ಹುಂಕಾರ, ಸ್ಮಶಾನಗಳಲ್ಲಿ ಭಯಾವಹ, ಘೋರಾರಣ್ಯದಲ್ಲಿ ಮಹಾಲಕ್ಷ, ಮನೆಗಳಲ್ಲಿ ಜ್ವಾಲಾಕ್ಷ, ರಾತ್ರಿಯಲ್ಲಿ ಕರಾಳ ಮುಖ, ಗುಹೆಗಳಲ್ಲಿ ಘಂಟಾರವ, ಜಲಗಳಲ್ಲಿ ಪದ್ಮಖಂಜ, ರಾಜಮಾರ್ಗಗಳಲ್ಲಿ ದುರಾರೋಹ, ಪರ್ವತಗಳಲ್ಲಿ ಕುರವ, ನದಿಗಳಲ್ಲಿ ಪ್ರವಾಹ, ಅಷ್ಟೈಶ್ವರ್ಯ ಗಳಲ್ಲಿ ಮಣಿಭದ್ರ, ರಸಕ್ಷೇತ್ರಗಳಲ್ಲಿ ರಸಾಧ್ಯಕ್ಷ, ಯಜ್ಞಶಾಲೆಗಳಲ್ಲಿ ಕೋಟನ— ಇಂತು ಭೂಮಂಡಲವನ್ನೆಲ್ಲ ವ್ಯಾಪಿಸಿ ನಿಂತಿರುವ ಹದಿನಾಲ್ಕು ಮಂದಿ ಕ್ಷೇತ್ರಪಾಲಕರನ್ನೂ ನಮಸ್ಕರಿಸುವೆನು.

೩೭. ಇಂತು ಅರವತ್ತನಾಲ್ಕು ಸಂಖ್ಯೆಯ ಕ್ಷೇತ್ರಪಾಲಕರಿಗೆ ಶರಣು ಹೊಗುವೆನು. ಅವರು ನನ್ನಲ್ಲಿ ಪ್ರಸನ್ನರಾಗಿ ನನ್ನ ಪೂಜೆಯಿಂದ ಸಂತುಷ್ಟ ರಾಗಲಿ."

೩೮. ಯಾವ ಮಾನವನು ಸಕಲ ಕಾರ್ಯಗಳನ್ನು ಮಾಡುವಾಗ ಶುಚಿ ಯಾಗಿ ಕ್ಷೇತ್ರಪಾಲಕರನ್ನು ಪೂಜಿಸುವನೊ, ಅವನಲ್ಲಿ ಆ ಕ್ಷೇತ್ರಪಾಲಕರು ಸಂತೋಷಗೊಂಡು ಅಭೀಪ್ಸಿತಗಳನ್ನು ಕೊಡುವರು.

೩೯. ವಿಜಯನೆಂಬ ಆ ಬ್ರಾಹ್ಮಣೋತ್ತಮನು ಕ್ಷೇತ್ರಪಾಲಕರ ಪೂಜೆ ಯನ್ನು ಸಮಗ್ರವಾಗಿ ತಿಳಿದವನಾಗಿದ್ದುದರಿಂದ ವಿಧ್ಯುಕ್ತರೀತಿಯಲ್ಲಿ ಪೂಜೆ ಯನ್ನು ಮಾಡಿ ಸಿದ್ಧೇಯನನ್ನು ಸ್ತೋತ್ರಮಾಡಿದನು.

ಪ್ರಣಮ್ಯ ಚ ತತೋ ದೇವೀಮಾನರ್ಚ ವಟಯಕ್ಷಿಣೀಂ ।
ಪುರಾ ಯದಾ ನಾರದೇನ ಕಲಾಪಗ್ರಾಮತೋ ದ್ವಿಜಾಃ ॥ ೪೦ ॥
ಸಮಾನೀತಾಸ್ತೈಶ್ಚ ಸಾಕಂ ಸುನಂದಾನಾಮ ಬ್ರಾಹ್ಮಣೀ ।
ವಿಧವಾಭ್ಯಾಗತಾ ತತ್ರ ತಪಸ್ತಪ್ತುಂ ಮಹೀತಟೇ ॥ ೪೧ ॥
ಸಾ ಕೃಚ್ಛ್ರಾಣಿ ಪರಾಕಾಂಶ್ಚ ಅತಿಕೃಚ್ಛ್ರಾಣಿ ಕುರ್ವತೀ ।
ಜ್ಯೇಷ್ಠೇ ಭಾದ್ರಪದೇ ಚಕ್ರೇ ಸಾವಿತ್ರ್ಯೌ ದ್ವೇ ತ್ರಿರಾತ್ರಿಕೇ ॥ ೪೨ ॥
ಮಾಸೋಪವಾಸಂ ಚ ತಥಾ ಕಾರ್ತಿಕೇ ಕುಲನಂದಿನೀ ।
ಸಪ್ತಲಿಂಗಾನಿ ಸಂಪೂಜ್ಯ ದೇವೀಪೂಜಾಂ ತತೋ ವ್ಯಧಾತ್ ॥ ೪೩ ॥
ದರ್ಶೇ ಸ್ನಾನಂ ತಥಾ ಚಕ್ರೇ ಮಹೀಸಾಗರಸಂಗಮೇ ।
ಇತ್ಯಾದಿ ಬಹುಭಿಸ್ತೈಸ್ತೈರ್ನಿತ್ಯಂ ನಿಯಮಪಾಲನೈಃ ॥ ೪೪ ॥
ಧೂತಪಾಪಾ ಯಯೌ ಲೋಕಮುಮಾಯಾಃ ಕೃತಸ್ವಾಗತಾ ।
ಅಂಶೇನ ಚ ತಟೇ ತಸ್ಮಿನ್ಸಂಭೂತಾ ವಟಯಕ್ಷಿಣೀ ॥ ೪೫ ॥
ತಸ್ಯಾಸ್ತುಷ್ಟೋ ವರಂ ಪ್ರಾದಾತ್ಸಿದ್ಧಲಿಂಗಸ್ಥಿತೋ ಹರಃ ।
ಅನಭ್ಯರ್ಚ್ಯ ಯ ಏನಾಂ ಚ ಮತ್ಪೂಜಾಂ ಪ್ರಕರಿಷ್ಯತಿ ।
ತಸ್ಯ ತನ್ನಿಷ್ಫಲಂ ಸರ್ವಮಿತ್ಯುಕ್ತಂ ಪಾಲ್ಯಮೇವ ಮೇ ॥ ೪೬ ॥

---

೪೦–೪೧. ಬಳಿಕ ವಟಯಕ್ಷಿಣೀದೇವಿಗೆ ನಮಸ್ಕರಿಸಿ ಆಕೆಯನ್ನು ಪೂಜಿಸಿದನು. ಪೂರ್ವದಲ್ಲಿ ನಾರದನು ಕಲಾಪಗ್ರಾಮದಿಂದ ಕರೆದುತಂದ ಬ್ರಾಹ್ಮಣರ ಜೊತೆಯಲ್ಲಿ ಸುನಂದೆಯೆಂಬ ಹೆಸರಿನ ಬ್ರಾಹ್ಮಣ ವಿಧವೆಯೊಬ್ಬಳು ಮಹೀಸಾಗರಸಂಗಮ ಕ್ಷೇತ್ರದಲ್ಲಿ ತಪಸ್ಸನ್ನಾಚರಿಸಲು ಹೊರಟುಬಂದಳು.

೪೨. ಅವಳು ಕೃಚ್ಛ್ರ, ಪರಾಕ, ಅತಿಕೃಚ್ಛ್ರಗಳೆಂಬ ವ್ರತಗಳನ್ನು ಮಾಡುತ್ತ ಜ್ಯೇಷ್ಠ ಮತ್ತು ಭಾದ್ರಪದ ಮಾಸಗಳಲ್ಲಿ ತ್ರಿರಾತ್ರಗಳ ಸಾವಿತ್ರೀ ಜಪವನ್ನು ಎರಡು ಸಲ ಮಾಡಿದಳು.

೪೩. ಕುಲದೀಪಕಳಾದ ಅವಳು ಕಾರ್ತಿಕಮಾಸದಲ್ಲಿ ಮಾಸೋಪವಾಸವನ್ನು ಮಾಡಿ, ಸಪ್ತಲಿಂಗಗಳನ್ನು ಪೂಜಿಸುತ್ತ ಬಳಿಕ ದೇವಿಯ ಪೂಜೆಯನ್ನು ಮಾಡಿದಳು.

೪೪–೪೬. ಇಷ್ಟೆಯಲ್ಲದೆ ಅಮಾವಾಸ್ಯೆಯ ದಿನ ಆಕೆಯು ಮಹೀಸಾಗರ ಸಂಗಮದಲ್ಲಿ ಸ್ನಾನವನ್ನು ಮಾಡಿದಳು. ಇವೇ ಮೊದಲಾದ ಅನೇಕ ನಿಯಮಗಳನ್ನು ನಿತ್ಯದಲ್ಲಿಯೂ ಆಚರಿಸುತ್ತ ಆಕೆಯು ತನ್ನ ಪಾಪಗಳನ್ನು ಕಳೆದುಕೊಂಡು ಪಾರ್ವತಿಯ ಲೋಕಕ್ಕೆ ಹೋಗಿ ಆಕೆಯಿಂದ ಸಾದರವಾದ ಸ್ವಾಗತವನ್ನು ಪಡೆದಳಲ್ಲದೆ ತನ್ನ ಸಾಧನೆಯ ಸ್ಥಳವಾದ ಕ್ಷೇತ್ರದಲ್ಲಿ ಒಂದಂಶದಿಂದ ವಟಯಕ್ಷಿಣಿಯಾಗಿ ನಿಂತಳು. ಸಿದ್ಧಲಿಂಗಸ್ಥನಾದ ಮಹೇಶ್ವರನು ಅಕೆಯ ಭಕ್ತಿಗೆ ಸಂತೋಷ

ತಸ್ಮಾತ್ತ್ವಪೂಜಯೇನ್ನಿತ್ಯಂ ವಟಸ್ಥಾಂ ವಟಯಕ್ಷಿಣೀಂ ।
ಪುಷ್ಪೈರ್ಧೂಪೈಸ್ತು ನೈವೇದ್ಯೈರ್ಮಂತ್ರೇಣಾನೇನ ಭಕ್ತಿತಃ ॥ ೪೭ ॥
ಸುನಂದೇ ನಂದನೀಯಾಸಿ ಪೂಜಾಮೇತಾಂ ಗೃಹಾಣ ಮೇ ।
ಪ್ರಸೀದ ಸರ್ವಕಾಲೇಷು ಮಮ ತ್ವಂ ವಟಯಕ್ಷಿಣಿ ॥ ೪೮ ॥
ಏವಂ ಸಂಪೂಜ್ಯ ತಾಂ ನತ್ವಾ ಕ್ಷಮಾಪ್ಯ ವಟಯಕ್ಷಿಣೀಂ ।
ಸರ್ವಾನ್ಕಾಮಾನವಾಪ್ನೋತಿ ನರೋ ನಾರೀ ಚ ಸರ್ವದಾ ॥ ೪೯ ॥
ವಿಜಯಶ್ಚಾಪಿ ಮಾಹಾತ್ಮ್ಯಮಿದಂ ಜಾನನ್ಮಹಾಮತಿಃ ।
ಆನರ್ಚ ವಟವೃಕ್ಷಸ್ಥಾಂ ಭಕ್ತಿತೋ ವಟಯಕ್ಷಿಣೀಂ ॥ ೫೦ ॥
ತತಃ ಸಿದ್ಧಾಂಬಿಕಾಂ ಸ್ತುತ್ವಾ ಜಪ್ತವಾನಪರಾಜಿತಾಂ ।
ಮಹಾವಿದ್ಯಾಂ ವೈಷ್ಣವೀಂ ತು ಸಾಧನೇನ ಸಮನ್ವಿತಾಂ ॥ ೫೧ ॥
ಯಸ್ಯ ಸ್ಮರಣಮಾತ್ರೇಣ ಸರ್ವದುಃಖಕ್ಷಯೋ ಭವೇತ್ ।
ತಾಂ ವಿದ್ಯಾಂ ಕೀರ್ತಯಿಷ್ಯಾಮಿ ಶೃಣುಧ್ವಂ ವಿಪ್ರಪುಂಗವಾಃ ॥ ೫೨ ॥

---

ಗೊಂಡು "ಯಾರು ಈಕೆಯನ್ನು ಮೊದಲು ಪೂಜಿಸದೆ ನನ್ನ ಅರ್ಚನೆಯನ್ನು ಮಾಡುವರೊ, ಅವರ ಪೂಜೆಯು ನಿಷ್ಫಲವಾಗುವುದು; ನನ್ನ ಕಟ್ಟುಪಾಟನ್ನು ಎಲ್ಲರೂ ನಡೆಸತಕ್ಕುದು" ಎಂಬುದಾಗಿ ವರವನ್ನು ಕೊಟ್ಟನು.

೪೭. ಆದುದರಿಂದ ಕ್ಷೇತ್ರಸೇವಿಗಳು ಪ್ರತಿನಿತ್ಯವೂ ವಟವೃಕ್ಷದಲ್ಲಿರುವ ವಟಯಕ್ಷಿಣಿಯನ್ನು ಪುಷ್ಪಗಳಿಂದಲೂ, ಧೂಪದಿಂದಲೂ, ನೈವೇದ್ಯದಿಂದಲೂ, ಮುಂದೆಹೇಳುವ ಮಂತ್ರಪಠನದಿಂದಲೂ ಭಕ್ತಿಯುಕ್ತರಾಗಿ ಪೂಜಿಸಬೇಕು.

೪೮. "ಎಲೈ ಸುನಂದೆಯೆ! ನೀನು ಸಂತೋಷಪಡಿಸಲು ಅರ್ಹಳಾಗಿರುವೆ. ಈ ನನ್ನ ಪೂಜೆಯನ್ನು ಸ್ವೀಕರಿಸು. ಎಲೈ ವಟಯಕ್ಷಿಣಿಯೆ! ಸರ್ವಕಾಲದಲ್ಲಿಯೂ ನನಗೆ ನೀನು ಪ್ರಸನ್ನಳಾಗು."

೪೯. ಇಂತು ಆ ವಟಯಕ್ಷಿಣಿಯನ್ನು ಪೂಜಿಸಿ ನಮಸ್ಕರಿಸಿ ಆಕೆಯ ಕ್ಷಮೆಯನ್ನು ಬೇಡಿದರೆ ಪುರುಷನಿಗಾಗಲಿ ಸ್ತ್ರೀಗಾಗಲಿ ಸರ್ವಕಾಲಗಳಲ್ಲಿಯೂ ಸಕಲ ಇಷ್ಟಾರ್ಥಗಳೂ ನೆರವೇರುವುವು.

೫೦. ಮಹಾಬುದ್ಧಿಯುಳ್ಳ ವಿಜಯನೂ ಕೂಡ ಆಕೆಯ ಮಾಹಾತ್ಮ್ಯವನ್ನು ಬಲ್ಲವನಾದುದರಿಂದ ವಟವೃಕ್ಷದಲ್ಲಿ ಸನ್ನಿಹಿತಳಾಗಿರುವ ವಟಯಕ್ಷಿಣಿಯನ್ನೂ ಭಕ್ತಿಯಿಂದ ಪೂಜಿಸಿದನು.

೫೧. ಬಳಿಕ ಸಿದ್ಧಾಂಬಿಕೆಯನ್ನು ಸ್ತುತಿಸಿ ಅಪರಾಜಿತೆಯೆಂಬ ವೈಷ್ಣವ ಮಹಾವಿದ್ಯೆಯನ್ನು ಸಾಧನಸಮನ್ವಿತನಾಗಿ ಜಪಿಸತೊಡಗಿದನು.

೫೨. ಆ ಮಂತ್ರದ ಸ್ಮರಣಮಾತ್ರದಿಂದಲೇ ಸಕಲ ದುಃಖಗಳೂ ನಾಶವಾಗುವುವು. ಅದನ್ನು ನಿಮಗೆ ಹೇಳುವೆನು. ಶ್ರದ್ಧೆಯಿಂದ ಕೇಳಿರಿ.

**ಓಂ ನಮೋ ಭಗವತೇ ವಾಸುದೇವಾಯ ॥ ನಮೋಽನಂತಾಯ ಸಹಸ್ರಶೀರ್ಷಾಯ ಕ್ಷೀರೋದಾರ್ಣವಶಾಯಿನೇ ಶೇಷಭೋಗ ಪರ್ಯಂಕಾಯ ಗರುಡವಾಹನಾಯ ಪೀತವಾಸಸೇ ವಾಸುದೇವ ಸಂಕರ್ಷಣ ಪ್ರದ್ಯುಮ್ನಾನಿರುದ್ಧ ಹಯಶಿರೋ ವರಾಹ ನರಸಿಂಹವಾಹನ ತ್ರಿವಿಕ್ರಮ ರಾಮ ರಾಮ ವರಪ್ರದ ನಮೋಽಸ್ತು ತೇ ॥ ನಮೋಽಸ್ತು ತೇ ಅಸುರ ದೈತ್ಯದಾನವ ಯಕ್ಷ ರಾಕ್ಷಸ ಭೂತಪ್ರೇತ ಪಿಶಾಚ ಕುಂಭಾಂಡ ಸಿದ್ಧ ಯೋಗಿನೀ ಡಾಕಿನೀ ಸ್ಕಂದಪುರೋಗಮಾನ್ಗ್ರಹಾನ್ನಕ್ಷತ್ರಗ್ರಹಾಂಶ್ಚಾನ್ಯಾಂಶ್ಚ ಹನಾ೨ ದಹಾ೨ ಪಚಾ೨ ಮಥಾ೨ ವಿಧ್ವಂಸಯಾ೨ ವಿದ್ರಾವಯಾ೨ ಶಂಖೇನ ಚಕ್ರೇಣ ವಜ್ರೇಣ ಗದಯಾ ಮುಸಲೇನ ಭಸ್ಮೀಕುರು ॥ ಸಹಸ್ರಬಾಹವೇ ಸಹಸ್ರಚರಣಾಯುಧ ಜಯಾ೨ ವಿಜಯಾ೨ ಅಪರಾಜಿತ ಅಪ್ರತಿಹತ ಸಹಸ್ರನೇತ್ರ ಜ್ವಲಾ೨ ಪ್ರಜ್ವಲಾ೨ ವಿಶ್ವರೂಪ ಬಹುರೂಪ ಮಧುಸೂದನ ಮಹಾವರಾಹ ಮಹಾಪುರುಷ ವೈಕುಂಠ ನಾರಾಯಣ ಪದ್ಮನಾಭ ಗೋವಿಂದ ದಾಮೋದರ ಹೃಷೀಕೇಶ ಸರ್ವಾಸುರೋತ್ಸಾದನ**

---

೫೩. ಪ್ರಣವಸ್ವರೂಪನಾಗಿ ಷಡ್ಗುಣೈಶ್ವರ್ಯಸಮನ್ವಿತನಾದ ವಾಸುದೇವನಿಗೆ ನಮಸ್ಕಾರವು! ಆದ್ಯಂತರಹಿತನೂ, ಸಾವಿರ ತಲೆಗಳುಳ್ಳವನೂ, ಕ್ಷೀರಸಾಗರನಿವಾಸಿಯೂ, ಆದಿಶೇಷನೆಂಬ ಪರ್ಯಂಕದಲ್ಲಿ ಪವಳಿಸಿರುವವನೂ, ಗರುಡಾರೂಢನೂ, ಪೀತಾಂಬರಧಾರಿಯೂ, ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧರೆಂಬ ನಾಲ್ಕು ಅಂಶಗಳುಳ್ಳವನೂ, ಹಯಗ್ರೀವ, ವರಾಹ, ನರಸಿಂಹ, ವಾಮನ, ತ್ರಿವಿಕ್ರಮ, ಪರಶುರಾಮ, ಸೀತಾರಾಮ ಮುಂತಾದ ಅವತಾರಗಳನ್ನು ಧರಿಸಿದವನೂ, ಭಕ್ತರಿಗೆ ವರಗಳನ್ನು ಕೊಡುವವನೂ ಆದ ನಿನಗೆ ನಮಸ್ಕಾರವು! ಅಸುರರು, ದೈತ್ಯರು, ದಾನವರು, ಯಕ್ಷರು, ರಾಕ್ಷಸರು, ಭೂತಗಳು, ಪ್ರೇತಗಳು, ಪಿಶಾಚಗಳು, ಕುಂಭಾಂಡರು, ಸಿದ್ಧಯೋಗಿನಿಯರು, ಡಾಕಿನಿಯರು, ಸ್ಕಂದರು ಮೊದಲಾದ ಕ್ರೂರಗ್ರಹಗಳನ್ನೂ ನಕ್ಷತ್ರಗ್ರಹಗಳನ್ನೂ, ಇತರ ಅರಿಷ್ಟಗಳನ್ನೂ ಕೊಲ್ಲು, ಸುಡು, ಬೇಯಿಸು, ಮಥಿಸು, ನಾಶಮಾಡು, ಓಡಿಸು; ಶಂಖ, ಚಕ್ರ, ವಜ್ರ, ಗದೆ, ಮುಸಲ, ಹಲಗಳಿಂದ ಶತ್ರುಗಳನ್ನು ಭಸ್ಮಮಾಡು; ಸಾವಿರ ತೋಳುಗಳೂ, ಸಾವಿರ ಕಾಲುಗಳೂ, ಆಯುಧಗಳೂ ಉಳ್ಳ ನೀನು ಭಕ್ತರ ಅಭೀಷ್ಟಸಿದ್ಧಿಗಾಗಿ ಸರ್ವಕಾಲದಲ್ಲಿಯೂ ಜಯಿಸು. ಪರಾಜಯವನ್ನರಿಯದವನೂ, ಎದುರಿಲ್ಲದವನೂ, ಸಾವಿರ ಕಣ್ಣುಗಳುಳ್ಳವನೂ, ಆದ ನೀನು ಪ್ರಕಾಶಿಸು. ವಿಶ್ವದ ಬಹುರೂಪಗಳುಳ್ಳವನೂ, ಮಧುದೈತ್ಯಧ್ವಂಸಿಯೂ, ಆದಿವರಾಹನೂ, ಮಹಾಪುರುಷನೂ, ವೈಕುಂಠವಾಸಿಯೂ,

**ಸರ್ವಭೂತವಶಂಕರ ಸರ್ವದುಃಖಪ್ರಭೇದನ ಸರ್ವಯಂತ್ರಪ್ರಭಂಜನ ಸರ್ವನಾಗಪ್ರವರ್ಧನ ಸರ್ವದೇವಮಹೇಶ್ವರ ಸರ್ವಬಂಧವಿಮೋಕ್ಷಣ ಸರ್ವಾಹಿತಪ್ರವರ್ಧನ ಸರ್ವಜ್ವರಪ್ರಣಾಶನ ಸರ್ವಗ್ರಹನಿವಾರಣ ಸರ್ವ ಪಾಪ ಪ್ರಶಮನ ಜನಾರ್ದನ ಜನಾನಂದಕರ ನಮೋಽಸ್ತು ತೇ ಸ್ವಾಹಾ ॥**

**ಇಮಾಮಪರಾಜಿತಾಂ ಪರಮವೈಷ್ಣವೀಂ ಮಹಾವಿದ್ಯಾಂ ಜಪತಿ ಪಠತಿ ಶೃಣೋತಿ ಸ್ಮರತಿ ಧಾರಯತಿ ಕೀರ್ತಯತಿ ನ ಚ ತಸ್ಯ ವಾಯ್ವಗ್ನಿ ವಜ್ರೋಪಲಾಶನಿವರ್ಷಭಯಂ ನ ಸಮುದ್ರ ಭಯಂ ನ ಗ್ರಹಭಯಂ ನ ಚ ಚೌರಭಯಂ ನ ಚ ಶ್ವಾಪದ ಭಯಂ ವಾ ಭವೇತ್ ॥ ೫೪ ॥**

**ಕ್ವಚಿದ್ರಾತ್ರ್ಯಂಧಕಾರಸ್ತ್ರೀರಾಜಕುಲವಿಷೋಽಪ ವಿಷಗರದವಶೀಕರಣ ವಿದ್ವೇಷಣೋಚ್ಚಾಟನವಧಬಂಧಭಯಂ ವಾ ನ ಭವೇದೇತೈರ್ಮಂತ್ರಪದೈ ರುದಾಹೃತೈರ್ಹೃದಾ ಬದ್ಧೈಃ ಸಂಸಿದ್ಧಪೂಜಿತೈಃ ॥ ೫೫ ॥**

---

ನಾರಾಯಣನೂ, ನಾಭೀಪದ್ಮದಲ್ಲಿ ಬ್ರಹ್ಮಾಂಡನಿರ್ಮಾಣಕರ್ತನಾದ ಬ್ರಹ್ಮನನ್ನು ಪಡೆದವನೂ, ಸರ್ವೇಂದ್ರಿಯನಿಯಾಮಕನೂ, ಸಮಸ್ತ ದೈತ್ಯರನ್ನು ಧ್ವಂಸ ಮಾಡುವವನೂ, ಸಕಲ ಭೂತಗಳನ್ನೂ ವಶದಲ್ಲಿಟ್ಟಿರುವವನೂ, ಭಕ್ತರ ಸಕಲ ದುಃಖಗಳನ್ನೂ ಕಳೆಯುವವನೂ, ಸಮಸ್ತ ಯಂತ್ರಗಳನ್ನೂ ಭೇದಿಸುವವನೂ, ಅಶೇಷ ನಾಗರನ್ನು ಶಿಕ್ಷಿಸುವವನೂ, ಸಕಲ ದೇವತೆಗಳಿಗೂ ಅಧೀಶ್ವರನೂ, ಸಕಲ ಬಂಧಗಳನ್ನು ಬಿಡಿಸುವವನೂ, ಸರ್ವ ಶತ್ರುಗಳನ್ನು ನಿಗ್ರಹಿಸುವವನೂ, ಸಕಲ ಜ್ವರಗಳನ್ನು ನಿರ್ಮೂಲಮಾಡುವವನೂ, ಸಕಲ ಗ್ರಹಗಳನ್ನು ನಿವಾರಿಸುವವನೂ, ಸಮಸ್ತ ಪಾಪಗಳನ್ನೂ ಹೋಗಲಾಡಿಸಿ ಸಮಸ್ತ ಜನರಿಗೂ ಆನಂದವನ್ನುಂಟು ಮಾಡುವವನೂ ಆದ ನಿನಗೆ ನಮಸ್ಕಾರವು!

೫೪. ಈ ಅರ್ಥವುಳ್ಳ ಅಪರಾಜಿತೆಯೆಂಬ ಪರಮ ವೈಷ್ಣವ ಮಹಾವಿದ್ಯೆಯನ್ನು ಯಾವನು ಜಪಿಸುವನೊ, ಓದುವನೊ, ಕೇಳುವನೊ, ಸ್ಮರಿಸುವನೊ, ಮನನಮಾಡುವನೊ, ಹೊಗಳುವನೊ ಅಂತಹ ಮನುಷ್ಯನಿಗೆ ವಾಯು, ಅಗ್ನಿ, ವಜ್ರೋಪಲ, ಸಿಡಿಲು ಮಳೆಗಳ ಭಯವಾಗಲಿ, ಸಮುದ್ರದ ಭಯವಾಗಲಿ, ನವಗ್ರಹಗಳ ಭಯವಾಗಲಿ, ಕಳ್ಳರ ಭಯವಾಗಲಿ, ಸಿಂಹಾದಿ ಹಿಂಸ್ರಮೃಗಗಳ ಭಯವಾಗಲಿ ಸಂಭವಿಸಲಾರದು.

೫೫. ಅಲ್ಲದೆ ಈ ಮುಂದೆ ಹೇಳುವ ಮಂತ್ರವನ್ನು ಚೆನ್ನಾಗಿ ಮನನಮಾಡಿ ಸಿದ್ಧಿಯನ್ನು ಪಡೆದು ಪೂಜಿಸಲು, ರಾತ್ರಿ, ಕತ್ತಲೆ, ಸ್ತ್ರೀಯರು, ರಾಜದ್ವೇಷ, ವಿಷ, ಉರುವಿಷ, ಗರಳ, ವಶೀಕರಣ, ವೈರ, ಉಚ್ಚಾಟನ, ಮೃತ್ಯು, ಬಂಧಗಳು ಎಂಬಿವೇ ಮೊದಲಾದ ಯಾವ ಈತಿಬಾಧೆಗಳ ಭಯವೂ ಉಂಟಾಗುವುದಿಲ್ಲ.

ತದ್ಯಥಾ ॥ ನಮೋ ನಮಸ್ತೇಽಸ್ತು ಅಭಯೇ ಅನಘೇ ಅಜಿತೇ ಅತ್ರಸಿತೇ ಅಮೃತೇ ಅಪರಾಜಿತೇ ಪಠಿತಸಿದ್ಧೇ ಸ್ಮರಿತಸಿದ್ಧೇ ಏಕಾನಂಶೇ ಉಮೇ ಧ್ರುವೇ ಅರುಂಧತಿ ಸಾವಿತ್ರಿ ಗಾಯತ್ರಿ ಜಾತವೇದಸಿ ಮಾನಸ್ತೋಕೇ ಸರಸಿ ಸರಸ್ವತಿ ಧರಣಧಾರಿಣಿ ಸೌದಾಮಿನಿ ಅದಿತೇ ವಿನತೇ ಗೌರಿ ಗಾಂಧಾರಿ ಮಾತಂಗಿ ಕೃಷ್ಣೇ ಯಶೋದೇ ಸತ್ಯವಾದಿನಿ ಬ್ರಹ್ಮವಾದಿನಿ ಕಾಲಿ ಕಪಾಲಿನಿ ಸದ್ಯೋಽವಯವಜಯನಕರಿ ಸ್ಥಲಗತಂ ಜಲಗತಮಂತರಿಕ್ಷಗತಂವಾ ರಕ್ಷಾ೨ ಸರ್ವಭೂತಭಯೋಪದ್ರವೇಭ್ಯೋ ರಕ್ಷಾ೨ ಸ್ವಾಹಾ ॥ ೫೬ ॥

ಯಸ್ಯಾಃ ಪ್ರಣಶ್ಯತೇ ಪುಷ್ಪಂ ಗರ್ಭೋ ವಾ ಪತತೇ ಯದಿ ।
ಮ್ರಿಯಂತೇ ಬಾಲಕಾ ಯಸ್ಯಾಃ ಕಾಕವಂಧ್ಯಾ ಚ ಯಾ ಭವೇತ್ ।
ಧಾರಯೇತ ಇಮಾಂ ವಿದ್ಯಾಮೇಭಿರ್ದೋಷೈರ್ನ ಲಿಪ್ಯತೇ ॥ ೫೭ ॥
ರಣೇ ರಾಜಕುಲೇ ದ್ಯೂತೇ ನಿತ್ಯಂ ತಸ್ಯ ಜಯೋ ಭವೇತ್ ।
ಶಸ್ತ್ರಂ ಧಾರಯತೇ ಹ್ಯೇಷಾಂ ಸಮರೇ ಕಾಂಡಧಾರಿಣೀ ॥ ೫೮ ॥
ಗುಲ್ಮಶೂಲಾಕ್ಷಿರೋಗಾಣಾಂ ನಿತ್ಯಂ ನಾಶಕರೀ ತಥಾ ।
ಶಿರೋರೋಗಜ್ವರಾಣಾಂ ಚ ನಾಶನೀ ಸರ್ವದೇಹಿನಾಂ ॥ ೫೯ ॥

---

೫೬. ಭಯರಹಿತಳೂ, ಅಜೇಯಳೂ, ನಿಷ್ಕಂಪಳೂ, ಶಾಶ್ವತಳೂ, ಅಪರಾಜಿತೆಯೂ, ಪಠಿಸುವವರಿಗೂ ಸ್ಮರಿಸುವವರಿಗೂ ಸಿದ್ಧಿಯನ್ನುಂಟುಮಾಡಿಕೊಡುವವಳೂ, ಏಕಪ್ರಕಾರಳೂ, ನಿರವಯವ ಶರೀರವುಳ್ಳವಳೂ, ತತ್ಕ್ಷಣದಲ್ಲಿಯೇ ಅವಯವಗಳನ್ನುಂಟುಮಾಡುವವಳೂ ಆದ ನೀನು ಭೂಮಿಯಲ್ಲಿಯೂ ಜಲದಲ್ಲಿಯೂ, ಅಂತರಿಕ್ಷದಲ್ಲಿಯೂ ನನ್ನನ್ನು ಕಾಪಾಡು. ಸಮಸ್ತ ಭೂತಗಳ ಭಯ ಮತ್ತು ಉಪದ್ರವಗಳಿಂದ ನನ್ನನ್ನು ರಕ್ಷಿಸು.

೫೭. ಯಾವಳು ಮೋಘಪುಷ್ಪಳಾಗಿರುವಳೊ, ಯಾವಳಿಗೆ ಪದೇ ಪದೇ ಗರ್ಭಪಾತವಾಗುವುದೊ, ಯಾವಳಿಗೆ ಮಕ್ಕಳು ಬಹುವಾಗಿ ಸಾಯುವರೊ, ಯಾವಳು ಒಂದೆರಡು ಮಕ್ಕಳನ್ನು ಮಾತ್ರ ಹೆತ್ತಿರುವಳೊ, ಅವಳು ಈ ವಿದ್ಯೆಯ ಉಪದೇಶವನ್ನು ಪಡೆದು ಜಪಿಸಲು ಈ ದೋಷಗಳೆಲ್ಲವೂ ದೂರವಾಗುವುವು.

೫೮. ಯುದ್ಧರಂಗದಲ್ಲಾಗಲಿ, ರಾಜದ್ವಾರದಲ್ಲಾಗಲಿ, ದ್ಯೂತದಲ್ಲಾಗಲಿ ಮನುಷ್ಯನಿಗೆ ವಿಜಯವು ಲಭಿಸುವುದು. ಇವರಿಗಾಗಿ ಅಪರಾಜಿತೆಯು ಬಿಲ್ಲನ್ನೂ, ಶಸ್ತ್ರಗಳನ್ನೂ ಯುದ್ಧದಲ್ಲಿ ಹಿಡಿಯುವಳು.

೫೯. ಗುಲ್ಮರೋಗ, ಉದರಶೂಲೆ, ಅಕ್ಷಿರೋಗಗಳನ್ನು ಈ ವಿದ್ಯೆಯು ನಾಶಗೊಳಿಸುವುದು. ಅಲ್ಲದೆ ಸಕಲ ಪ್ರಾಣಿಗಳ ಶಿರೋರೋಗ ಮತ್ತು ಜ್ವರಗಳನ್ನು ಕಡೆಗಾಣಿಸುವುದು.

**ತದ್ಯಥಾ ॥ ಹನಾ೨ ಕಾಲಿ ಸರಾ೨ ಕಾಲಿ ಸರಾ೨ ಗೌರಿ ಧಮಾ೨ ವಿದ್ಯೇ ಆಲೇ ತಾಲೇ ಮಾಲೇ ಗಂಧೇ ಬಂಧೇ ಪಚಾ೨ ವಿದ್ಯೇ ನಾಶಯ ಪಾಪಂ ಹನ ದುಃಸ್ವಪ್ನಂ ವಿನಾಶಯ ಕಷ್ಟನಾಶಿನಿ ರಜನಿ ಸಂಧ್ಯೇ ದುಂದುಭಿ ನಾದೇ ಮಾನಸವೇಗೇ ಶಂಖಿನಿ ಚಕ್ರಿಣಿ ವಜ್ರಿಣಿ ಶೂಲಿನಿ ಅಪಮೃತ್ಯು ವಿನಾಶಿನಿ ವಿಶ್ವೇಶ್ವರಿ ದ್ರವಿಡಿ ದ್ರಾವಿಡಿ ಕೇಶವದಯಿತೇ ಪಶುಪತಿಮಹಿತೇ ದುರ್ದಮದಮನಿ ಶರ್ವರಿ ಕಿರಾತಿ ದೂತಂಗಿ ಓಂ ಹ್ರಾಂ ಹ್ರಂ ಹ್ರಂ ಹ್ರಂ ಕ್ರಾಂ ಕ್ರಂ ಕ್ರಂ ಕ್ರಂ ತ್ವರಾ೨ ಯೇ ಮಾಂ ದ್ವಿಷಂತಿ ಪ್ರತ್ಯಕ್ಷಂ ವಾ ಸರ್ವಾನ್ದಮಾ೨ ಮರ್ದಾ೨ ತಾಪಯಾ೨ ಶೋಷಯಾ೨ ಉತ್ಸಾ ದಯಾ೨ ಬ್ರಹ್ಮಾಣಿ ಮಾಹೇಶ್ವರಿ ವಾರಾಹಿ ವಿನಾಯಕಿ ಐಂದ್ರಿ ಆಗ್ನೇಯಿ ಚಾಮುಂಡೇ ವಾರುಣಿ ಪ್ರಚಂಡವಿದ್ಯೋತೇ ಇಂದ್ರೋಪೇಂದ್ರಭಗಿನಿ ವಿಜಯೇ ಶಾಂತಿ ಸ್ವಸ್ತಿ ಪುಷ್ಟಿವಿವರ್ಧಿನಿ ಕಾಮಾಂಕುಶೇ ಕಾಮದುಘೇ ಸರ್ವಕಾಮ ವರಪ್ರದೇ ಸರ್ವಭೂತೇಷು ವಾಸಿನಿ ಪ್ರತಿವಿದ್ಯಾಂ ಕುರೂ೨ ಆಕರ್ಷಿಣಿ ವೇಶಿನಿ ಜ್ವಾಲಾಮಾಲಿನಿ ರಮಣಿ ರಾಮಣಿ ಧರಣಿ ಧಾರಣಿ ಮನೋನ್ಮಾನಿನಿ ರಕ್ಷಾ೨ ವಾಯವ್ಯೇ ಜ್ವಾಲಾಮಾಲಿನಿ ತಾಪಸಿ ಶೋಷಣಿ ನೀಲಪತಾಕಿನಿ ಗೌರಿ ಮಹಾಶ್ರಯೇ ಮಹಾಮಯೂರಿ ಆದಿತ್ಯರಶ್ಮಿ ಜಾಹ್ನವಿ ಯಮಘಂಟೇ ಕಿಣೇ೨ ಚಿಂತಾಮಣಿ ಸುರಭಿ ಸುರೋತ್ಪನ್ನೇ ಕಾಮದುಘೇ ಯಥಾ ಮನೀಷಿತಂ ಕಾರ್ಯಂ ತನ್ಮಮ ಸಿಧ್ಯತು ಸ್ವಾಹಾ**

---

೬೦. ಎಲೈ ಕಾಳಿಯೆ! ನನ್ನ ಪಾಪವನ್ನು ನಾಶಮಾಡಿ ದುಃಸ್ವಪ್ನಗಳನ್ನು ದೂರಮಾಡು. ಕಷ್ಟನಿವಾರಕಳೂ, ದುಂದುಭಿಯಂತೆ ಗಂಭೀರವಾದ ನುಡಿ ಯುಳ್ಳವಳೂ, ಮನೋವೇಗಯುತಳೂ, ಶಂಖ ಚಕ್ರ ವಜ್ರ ಶೂಲೆಗಳೆಂಬ ಆಯುಧಗಳನ್ನು ಧರಿಸಿದವಳೂ, ಅಪಮೃತ್ಯುವನ್ನು ನಾಶಪಡಿಸುವವಳೂ, ಲೋಕನಾಯಕಿಯೂ, ದ್ರವಿಡದೇಶೋತ್ಪನ್ನಳೂ, ವಿಷ್ಣುಪ್ರಿಯೆಯೂ, ಮಹೇ ಶ್ವರ ಪೂಜಿತೆಯೂ, ದುಷ್ಟದಮನೆಯೂ, ಮಾತಂಗಕನ್ಯೆಯೂ ಆದ ನೀನು ಪ್ರತ್ಯಕ್ಷದಲ್ಲಾಗಲಿ, ಪರೋಕ್ಷದಲ್ಲಾಗಲಿ ನನ್ನನ್ನು ದ್ವೇಷಿಸುವವರನ್ನೆಲ್ಲ ದಮನಮಾಡು. ಎಲೈ ಮಾಹೇಶ್ವರಿಯೆ! ಚಾಮುಂಡಿಯೆ! ಪ್ರಚಂಡ ತೇಜೋ ವಂತೆಯೆ! ಇಂದ್ರ ಉಪೇಂದ್ರರಿಗೆ ಸಹೋದರಿಯೂ, ವಿಜಯೆಯೂ, ಭಕ್ತರ ಶಾಂತಿ, ಪುಷ್ಟಿ, ಸಂತೋಷಗಳನ್ನುಂಟುಮಾಡುವವಳೂ, ಸಕಲ ಕಾಮಗಳನ್ನು ಈಡೇರಿಸುವವಳೂ, ಸಮಸ್ತ ಭೂತಗಳಲ್ಲಿ ವಾಸಿಸುವಳೂ ಆದ ನೀನು ಈ ವಿದ್ಯೆ ಯನ್ನು ಸಾಧಿಸಿಕೊಡು. ಸೌರಭ್ಯಸಹಿತಳೂ ದೇವಕುಲೋತ್ಪನ್ನಳೂ ಆದ ನೀನು ನನ್ನ ಮನಸ್ಸಿನಲ್ಲಿ ನೆನಸಿರುವ ಕಾರ್ಯವು ಸಿದ್ಧಿಸುವಂತೆ ಅನುಗ್ರಹಿಸು. ಭೂಲೋಕ, ಭುವರ್ಲೋಕ ಮತ್ತು ಸ್ವರ್ಲೋಕಗಳಲ್ಲಿ ಪಾಪವು ಎಲ್ಲಿಂದ

ಓಂ ಸ್ವಾಹಾ ಓಂ ಭೂಃ ಸ್ವಾಹಾ ಓಂ ಭುವಃ ಸ್ವಾಹಾ ಓಂ ಸ್ವಃ ಸ್ವಾಹಾ ಓಂ ಭೂರ್ಭುರ್ವಃಸ್ವಃ ಸ್ವಾಹಾ ಯತ್ರೈವಾಗತಂ ಪಾಪಂ ತತ್ರೈವ ಪ್ರತಿ ಗಚ್ಛತು ಸ್ವಾಹಾ ಓಂ ಬಲೇ ಮಹಾಬಲೇ ಅಸಿದ್ಧಸಾಧಿನಿ ಸ್ವಾಹಾ ॥೬೦॥
ಇತೀಮಾಂ ಸಾಧಯಾಮಾಸ ವೈಷ್ಣವೀಮಪರಾಜಿತಾಂ ।
ವಿಜಯಃ ಸಂಯತೋ ಭೂತ್ವಾ ಮನೋಬುದ್ಧಿಸಮಾಧಿಭಿಃ ॥ ೬೧ ॥
ಯ ಇಮಾಂ ಪಠತೇ ನಿತ್ಯಂ ಸಾಧನೇನ ವಿನಾಪಿ ಚ ।
ತಸ್ಯಾಪಿ ಸರ್ವವಿಘ್ನಾನಿ ನಶ್ಯಂತಿ ದ್ವಿಜಪುಂಗವಾಃ ॥ ೬೨ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿ ಸಾಹಸ್ರ್ಯಾಂ ಸಂಹಿತಾಯಾಂ
ಪ್ರಥಮೇ ಮಾಹೇಶ್ವರಖಂಡೇ ಕೌಮಾರಿಕಾಖಂಡೇ
"ಬರ್ಬರೀಕೋಪಾಖ್ಯಾನೇ ಮಹಾವಿದ್ಯಾಸಾಧನವರ್ಣನಂ" ನಾಮ
ದ್ವಿಷಷ್ಟಿತಮೋಽಧ್ಯಾಯಃ

---

ಬಂದಿತೊ, ಅಲ್ಲಿಗೇ ಹೊರಟುಹೋಗಲಿ. ಬಲಾ, ಅತಿಬಲಾ ಎಂಬ ಹೆಸರುಗಳಿಂದ ಅಸಾಧ್ಯಗಳಾದ ಕಾರ್ಯಗಳನ್ನು ಸಾಧಿಸಿಕೊಡುವ ನಿನಗೆ ನಮಸ್ಕಾರವು.

೬೧. ಈ ಮಹಾವಿದ್ಯೆಯನ್ನು ಮನೋಬುದ್ಧಿಗಳ ಏಕಾಗ್ರತೆಯಿಂದ ನಿಯಮವನ್ನನುಸರಿಸಿ ಆ ವಿಜಯನು ಸಾಧಿಸಿದನು.

೬೨. ಎಲೈ ಬ್ರಾಹ್ಮಣಶ್ರೇಷ್ಠರಿರಾ ! ಈ ಮಂತ್ರಗ್ರಾಮವನ್ನು ಸಾಧನ ಸಂಪತ್ತಿಲ್ಲದೆಯೇ ಕೇವಲ ಬಾಯಿಂದಲೇ ನಿತ್ಯವೂ ಪಾಠವನ್ನು ಯಾವನು ಮಾಡುವನೊ, ಅವನಿಗೂ ಕೂಡ ಸಕಲ ವಿಘ್ನಗಳೂ ನಾಶವಾಗುವುವು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಎರಡನೆಯ ಕೌಮಾರಿಕಾಖಂಡದಲ್ಲಿ
"ಬರ್ಬರೀಕೋಪಾಖ್ಯಾನ — ಮಹಾವಿದ್ಯಾಸಾಧನವರ್ಣನ"ವೆಂಬ
ಅರುವತ್ತೆರಡನೆಯ ಅಧ್ಯಾಯವು ಮುಗಿದುದು

॥ ಶ್ರೀ ॥

# ಅಥ ತ್ರಿಷಷ್ಟಿತಮೋಧ್ಯಾಯಃ

## ಕಾರ್ಯಸಿದ್ಧಿ ವರ್ಣನಂ

ಸೂತ ಉವಾಚ :—

**ಅಶ್ವತ್ಥಲಾಕ್ಷಾವಹ್ನೌ ಚ ಸರ್ಷಪಾನ್ಕೇಸರಪ್ಲುತಾನ್ ।**
**ಜುಹ್ವತೋ ಮಂತ್ರಮುಖ್ಯೈಶ್ಚ ಬಲಾತಿಬಲಸಂಜ್ಞಕೈಃ ॥ ೧ ॥**
**ಯಾಮೇ ತು ಪ್ರಥಮೇ ಯಾತೇ ಕಾಚಿನ್ನಾರೀ ಸಮಾಯಯೌ ।**
**ಶೋಣಿತಾಕ್ತೈಕವಸನಾ ಮಹೋಚ್ಚೋರ್ಧ್ವಶಿರೋರುಹಾ ॥ ೨ ॥**
**ದಾರುಣಾಕ್ಷೀ ಶುಕ್ಲದಂತೀ ಭಯಸ್ಯಾಪಿ ಭಯಂಕರೀ ।**
**ಸಾ ರುರೋದ ಮಹಾರಾವಂ ಪ್ರಾಪ್ಯ ತಾಂ ಹೋಮಭೂಮಿಕಾಂ ॥ ೩ ॥**
**ತಾಂ ದೃಷ್ಟ್ವಾ ಚುಕ್ಷುಭೇ ಸದ್ಯೋ ವಿಜಯೋ ಭೀತಿಮಾನಿವ ।**
**ಬರ್ಬರೀಕಶ್ಚ ನಿರ್ಭೀತಿಸ್ತಸ್ಯಾಃ ಸಂಮುಖಮಾಯಯೌ ॥ ೪ ॥**
**ತತಃ ಕಂಠಂ ಸಮಾಶ್ಲಿಷ್ಯ ತಸ್ಯಾ ಮತಿಮತಾಂ ವರಃ ।**
**ರುರೋದ ದ್ವಿಗುಣಂ ವೀರೋ ಮೇಘವನ್ನಾದಯನ್ಬಹು ॥ ೫ ॥**

---

### ಕನ್ನಡದ ಅನುವಾದ

#### ಕಾರ್ಯಸಿದ್ಧಿ ವರ್ಣನ

೧. ಸೂತನು ಹೇಳುತ್ತಾನೆ:—ಅಶ್ವತ್ಥವೃಕ್ಷದ ಅರಗಿನಿಂದ ಬೆಂಕಿಯನ್ನು ಹೊತ್ತಿಸಿ ಕೇಸರಿಯ ನೀರಿನಲ್ಲಿ ಅದ್ದಿದ ಸಾಸುವೆಯನ್ನು ವಿಜಯನು ಬಲ, ಅತಿಬಲಗಳೆಂಬ ಶ್ರೇಷ್ಠ ಮಂತ್ರಗಳಿಂದ ಹೋಮಮಾಡುತ್ತಿದ್ದನು.

೨. ರಾತ್ರಿಯ ಒಂದುಯಾಮವು ಕಳೆಯಲು ರಕ್ತದಿಂದ ತೊಯ್ದ ವಸ್ತ್ರವೊಂದನ್ನುಟ್ಟು ನಿಡಿದಾದ ತಲೆಗೂದಲುಗಳು ಕೆದರಿನಿಂತಿರುವ ಒಬ್ಬ ಸ್ತ್ರೀಯು ಅಲ್ಲಿ ಪ್ರಾಪ್ತಳಾದಳು.

೩. ಅವಳ ಕಣ್ಣುಗಳು ಕೆಂಪೇರಿದ್ದುವು. ಹಲ್ಲುಗಳು ಬೆಳ್ಳನೆ ಬೆಳಗುತ್ತಿದ್ದವು. ಭಯಕ್ಕೂ ಭಯವನ್ನುಂಟುಮಾಡುವ ಆ ಸ್ತ್ರೀಯು ಹೋಮಭೂಮಿಯನ್ನು ಸೇರಿ ದೊಡ್ಡ ಧ್ವನಿಯಿಂದ ಅಳತೊಡಗಿದಳು.

೪. ಅವಳನ್ನು ಕಂಡೊಡನೆಯೇ ವಿಜಯನು ಭಯಗೊಂಡು ಕ್ಷೋಭವನ್ನು ಹೊಂದಿದನು. ಆದರೆ ಬರ್ಬರೀಕನು ಮಾತ್ರ ನಿರ್ಭಯದಿಂದ ಅವಳ ಎದುರಿಗೆ ಬಂದು ನಿಂತನು.

೫. ಬಳಿಕ ಬುದ್ಧಿಶಾಲಿಗಳಲ್ಲಿ ಅಗ್ರೇಸರನಾದ ಅವನು ಅವಳ ಕಂಠವನ್ನಾಲಿಂಗಿಸಿ ಮೇಘಗಂಭೀರವಾದ ಧ್ವನಿಯಿಂದ ಇಮ್ಮಡಿಯಾಗಿ ರೋದಿಸಿದನು.

ತಂ ದೃಷ್ಟ್ವಾ ವಿಸ್ಮಿತಾ ಸಾ ಚ ಯಾವನ್ಮುಂಚತಿ ಕರ್ತಿಕಾಂ ।
ತಾವನ್ನಿಷ್ಪೀಡಿತೇ ಕಂಠೇ ಮೋಕ್ತುಂ ತಸ್ಮಿನ್ನ ಚಾಶಕತ್ ॥ ೬ ॥
ಪೀಡ್ಯಮಾನೇ ಚ ಬಲಿನಾ ಕಂಠೇ ತಸ್ಯಾ ಮುಹುರ್ಮುಹುಃ ।
ಮುಮೋಚ ವಿವಿಧಾನ್ಶಬ್ದಾನ್ವಜ್ರಾಹತ ಇವಾಚಲಃ ॥ ೭ ॥
ಕ್ಷಣಂ ರಾವಾಂಸ್ತತೋ ಮುಕ್ತ್ವಾ ತ್ರಾಹಿ ಮುಂಚೇತಿ ವಕ್ತ್ಯಣು ।
ತತಃ ಕೃಪಾಲುನಾ ಮುಕ್ತಾ ಪಾದಯೋಃ ಪತಿತಾಬ್ರವೀತ್ ॥ ೮ ॥
ಶರಣಂ ತೇ ಪ್ರಪನ್ನಾಸ್ಮಿ ದಾಸೀ ಕರ್ಮಕರೀ ತವ ।
ಮಹಾಜಿಹ್ವೇತಿ ಮಾಂ ವಿದ್ಧಿ ರಾಕ್ಷಸೀಂ ಕಾಮರೂಪಿಣೀಂ ॥ ೯ ॥
ಕಾಶೀಶ್ಮಶಾನನಿಲಯಾಂ ದೇವದಾನವದರ್ಪಹಾಂ ।
ದದಾಸಿ ಯದಿ ಮೇ ವೀರ ದುರ್ಲಭಾಂ ಪ್ರಾಣದಕ್ಷಿಣಾಂ ।
ತತಸ್ತಪಶ್ಚರಿಷ್ಯಾಮಿ ಸರ್ವಭೂತಾಭಯಪ್ರದಾ ॥ ೧೦ ॥
ಅಸ್ಮಿನ್ನರ್ಥೇ ಸ್ವದೇವಸ್ಯ ಶಪಥಾ ಮೇ ತಥಾತ್ಮನಃ ।
ಯದ್ಯೇತದ್ವ್ಯತ್ಯಯಂ ಕುರ್ಯಾಂ ಭಸ್ಮೀ ಭೂಯಾಂ ತತಃ ಕ್ಷಣಂ ॥ ೧೧ ॥

---

೬. ಅವನನ್ನು ಕಂಡು ಅವಳು ವಿಸ್ಮಯದಿಂದ ತನ್ನ ಕತ್ತಿಯನ್ನು ಹಿರಿಯು ವಷ್ಟರಲ್ಲಿಯೇ ಬರ್ಬರೀಕನು ಅವಳ ಕತ್ತನ್ನು ಹಿಸುಕಿದನು. ಆ ಹಿಡಿತವನ್ನು ಬಿಡಿಸಿಕೊಳ್ಳಲು ಅವಳಿಗೆ ಸಾಧ್ಯವಾಗಲಿಲ್ಲ.

೭-೮. ಬಲಿಷ್ಠನಾದ ಅವನಿಂದ ತನ್ನ ಕಂಠವು ಪೀಡಿತವಾಗಲು ಅವಳು ವಜ್ರಾಹತವಾದ ಪರ್ವತದಂತೆ ಮತ್ತೆ ಮತ್ತೆ ಬಹು ವಿಧವಾಗಿ ಪ್ರಲಾಪವನ್ನು ಮಾಡಿದಳು. ಒಂದು ಕ್ಷಣಮಾತ್ರ ಹೀಗೆ ಕೂಗಿಕೊಂಡು ಬಳಿಕ ದೀನಸ್ವರದಿಂದ "ಕಾಪಾಡು; ಬಿಟ್ಟುಬಿಡು" ಎಂದು ಬೇಡಿಕೊಂಡಳು. ಆಗ ಕೃಪಾಳುವಾದ ಬರ್ಬರೀಕನು ಕೈಬಿಡಲು ಅವಳು ಪಾದಗಳಲ್ಲಿ ಬಿದ್ದು ಹೇಳತೊಡಗಿದಳು.

೯. ನಾನು ನಿನ್ನ ದಾಸಿಯೂ, ಆಜ್ಞಾಧಾರಕಳೂ ಆಗಿ ನಿನ್ನನ್ನೇ ಶರಣು ಹೊಂದಿ ಪ್ರಸನ್ನಳಾಗಿರುವೆನು. ಕಾಮರೂಪಿಣಿಯೂ ರಾಕ್ಷಸಿಯೂ ಆದ ಮಹಾಜಿಹ್ವೆಯೇ ನಾನೆಂದು ತಿಳಿ.

೧೦. ನಾನು ಕಾಶೀಕ್ಷೇತ್ರದ ಸ್ಮಶಾನದಲ್ಲಿ ನೆಲಸಿ ದೇವರಾಕ್ಷಸರ ಮದ ವನ್ನು ಮುರಿದಿರುವೆನು. ಎಲೈ ವೀರನೆ! ದುರ್ಲಭವಾದ ಪ್ರಾಣದಕ್ಷಿಣೆಯನ್ನು ನನಗೆ ಕೊಡುವೆಯಾದರೆ ಸಕಲ ಭೂತಗಳಿಗೂ ಉಪಯೋಗವಾಗುವ ರೀತಿಯಲ್ಲಿ ತಪಸ್ಸನ್ನು ಮಾಡಲೆಳಸುತ್ತೇನೆ.

೧೧. ಈ ವಿಷಯದಲ್ಲಿ ನನ್ನ ದೈವದ ಮೇಲೆಯೂ, ನನ್ನ ಮೇಲೆಯೂ ಆಣೆಯಿಟ್ಟು ಹೇಳುತ್ತೇನೆ. ಇದಕ್ಕೆ ತಪ್ಪಿ ನಡೆಯುವಳಾದರೆ ಆ ಕ್ಷಣದಲ್ಲಿಯೇ ಭಸ್ಮೀಭೂತಳಾಗುವೆನು.

ಏವಂ ಬ್ರುವಾಣಾಂ ತಾಂ ವೀರೋ ನಿಗೃಹ್ಯ ಶಪಥೈರ್ದೃಢಂ ।
ಮುಮೋಚ ಸಾಪಿ ಸಂಹೃಷ್ಟಾ ಕೃಚ್ಛ್ರಾನ್ಮುಕ್ತಾ ಯಯೌ ವನಂ ॥ ೧೨ ॥
ಸೋಽಪಿ ವೀರಃ ಖಡ್ಗಧಾರೀ ತತ್ರೈವಾವಸ್ಥಿತೋಽಭವತ್ ॥ ೧೩ ॥
ತತೋ ಮಧ್ಯಮರಾತ್ರೌ ಚ ಗರ್ಜಿತಂ ಶ್ರೂಯತೇ ಮಹತ್ ।
ಅಂಧಕಾರಂಚ ಸಂಜಜ್ಞೇ ತನೋಽಂಧನಕರಪ್ರಭಂ ॥ ೧೪ ॥
ದದೃಶೇ ಚ ತತಃ ಶೈಲಃ ಶತಶೃಂಗೋಽತಿವಿಸ್ತರಃ ।
ನಾನಾಶಿಲಾಃ ಪ್ರಮುಮುಚೇ ನಾನಾವೃಕ್ಷಾಂಶ್ಚ ಸೋಚ್ಛ್ರಯಾನ್ ॥೧೫॥
ನಾನಾನಿರ್ಝರಸಂಘೋಷಂ ವವೃಷೇ ಶೋಣಿತಂ ಬಹು ।
ತಂ ತಥಾ ನಗಮಾಲೋಕ್ಯ ನಿರ್ಭೀತೋ ಭೈಮಿನಂದನಃ ॥ ೧೬ ॥
ಪರ್ವತೋ ದ್ವಿಗುಣೋ ಭೂತ್ವಾ ಪರ್ವತಂ ಸಹಸಾಪ್ಲುತಃ ।
ಪದಾಭಿಜಜ್ಞೇ ಸಂಹೃತ್ಯ ಪರ್ವತಂ ಸ್ವೇನಭೂಭೃತಾ ॥ ೧೭ ॥
ತದಾ ವಿಶೀರ್ಣಃ ಸೋಽಭೂಚ್ಚ ಪರ್ವತೋ ಭೂಮಿಮಂಡಲೇ ।
ತತೋ ಯೋಜನದೇಹಾತ್ಮಾ ಶತಶೀರ್ಷಃ ಶತೋದರಃ ।
ವಕ್ತ್ರೈರ್ಮುಂಚನ್ಮಹಾಜ್ವಾಲಾಂ ರೇಪಲೇಂದ್ರೋಽಭ್ಯಧಾವತ ॥ ೧೮ ॥

---

೧೨-೧೩. ಇಂತೆಂದು ಬೇಡುತ್ತಿರುವ ಅವಳನ್ನು ವೀರನಾದ ಬರ್ಬರೀಕನು ಅನೇಕ ಶಪಥಗಳಿಂದ ಬಲವಾಗಿ ಬಂಧಿಸಿ ಬಿಟ್ಟುಬಿಟ್ಟನು. ಅವಳೂ ಸಂತೋಷ ದಿಂದ ತನ್ನ ಸಂಕಟವನ್ನು ಕಳೆದುಕೊಂಡು ಕಾಡಿಗೆ ಹೊರಟುಹೋದಳು. ಆ ವೀರನೂ ಖಡ್ಗವನ್ನು ಧರಿಸಿ ಅಲ್ಲಿಯೇ ಜಾಗರೂಕನಾಗಿ ನಿಂತನು.

೧೪. ಮತ್ತೊಂದು ಯಾಮವು ಕಳೆದು ಮಧ್ಯರಾತ್ರಿಯಾಗಲು ಮಹತ್ತಾದ ಗರ್ಜಿತವು ಕೇಳಬಂದಿತು. ಅದರೊಡನೆಯೇ ಜನರಿಗೆ ಕುರುಡುತನವನ್ನುಂಟು ಮಾಡುವಂತಹ ಅಂಧಕಾರವೂ ಸಂಭವಿಸಿತು.

೧೫. ಬಳಿಕ ನೂರು ಕೋಡುಗಲ್ಲುಗಳಿಂದ ವಿಶಾಲವಾಗಿ ವ್ಯಾಪಿಸಿದ ಪರ್ವತವೊಂದು ಕಂಡುಬಂದು ಅನೇಕ ಶಿಲೆಗಳನ್ನೂ ಲತಾಗುಲ್ಮಾದಿಗಳೊಡ ಗೂಡಿದ ವೃಕ್ಷಗಳನ್ನೂ ಸುರಿಸತೊಡಗಿತು.

೧೬-೧೭. ಅನೇಕ ಝರಿಗಳ ಶಬ್ದವು ಕೇಳಿಬರುತ್ತಿರಲು ಬಹಳವಾದ ರಕ್ತವೃಷ್ಟಿಯೂ ಸುರಿಯತೊಡಗಿತು. ಇಂತಹ ಪರ್ವತವನ್ನು ಕಂಡು ಭಯ ಗೊಳ್ಳದೆ ಘಟೋತ್ಕಚಪುತ್ರನಾದ ಬರ್ಬರೀಕನು ಅದರ ಎರಡರಷ್ಟು ಪ್ರಮಾಣದ ಪರ್ವತದ ರೂಪವನ್ನು ತಾಳಿ ತಕ್ಷಣದಲ್ಲಿಯೆ ಎದ್ದು ತನ್ನ ರೂಪವಾದ ಪರ್ವತದ ತಳದಿಂದ ಅದನ್ನು ಹೊಡೆದು ಕೆಡವಿದನು.

೧೮. ಆಗಲಾ ಪರ್ವತವು ಭಿನ್ನವಾಗಿ ಭೂಮಿಯಲ್ಲಿ ಬಿದ್ದಿತು. ಅದರೊಳಗಿ ನಿಂದ ಯೋಜನದ ಎತ್ತರವುಳ್ಳ ದೇಹದೊಡನೆ ನೂರು ತಲೆಗಳಿಂದಲೂ, ನೂರು

ತಂ ಧಾವಮಾನಂ ದೃಷ್ಟ್ವೈವ ಬರ್ಬರೀಕೋ ಮಹಾಬಲಃ ।
ವಿಧಾಯ ತಾದೃಶಂ ರೂಪಂ ನರ್ದಂತಂ ಚಾಪ್ಯಧಾವತ ॥ ೧೯ ॥
ತತೋ ಮಧ್ಯಮರಾತ್ರೌ ತೌ ಲಘು ಚಿತ್ರಂ ಚ ಸುಷ್ಠು ಚ ।
ಯುಯುಧಾತೇ ಬಾಣಜಾಲೈರ್ಯಥಾ ಪ್ರಾವೃಷಿ ತೋಯದೌ ॥ ೨೦ ॥
ಛಿನ್ನಚಾಪೌ ಚ ಖಡ್ಗಾಭ್ಯಾಂ ಛಿನ್ನಖಡ್ಗೌ ಚ ಮುಷ್ಟಿಭಿಃ ।
ಪರ್ವತಾವಿವ ಸಪಕ್ಷೌ ಚಿರಂ ಯುಯುಧತುಃ ಸ್ಥಿರಂ ॥ ೨೧ ॥
ತತಃ ಕಕ್ಷೇ ಸಮುತ್ಪಾಟ್ಯ ಭ್ರಾಮಯಿತ್ವಾ ಮುಹೂರ್ತಕಂ ।
ಭೂಮೌ ಪ್ರಧರ್ಷಯಾಮಾಸ ಪ್ರಸೃತಂ ಚ ಮುಮೋಚ ಹ ॥ ೨೨ ॥
ಚಿಕ್ಷೇಪಚಾಗ್ನಿಕೋಣೇ ತಂ ಮಹೀಸಾಗರರೋಧಸಿ ।
ತದ್ದೂರೇ ರೇಫಲೇಂದ್ರಾಖ್ಯಂ ಗ್ರಾಮಮದ್ಯಾಪಿ ವರ್ತತೇ ॥ ೨೩ ॥
ಏವಂ ಸ ರೇಫಲೋನಾಮ ವೃತ್ರತುಲ್ಯಪರಾಕ್ರಮಃ ।
ನಾಥಃ ಶ್ಮಶಾನಸ್ಯಾವಂತ್ಯಾ ವಿಘ್ನಕೃನ್ನಿಹತೋಽಭವತ್ ॥ ೨೪ ॥

---

ಹೊಟ್ಟೆಗಳಿಂದಲೂ ಕೂಡಿದವನಾಗಿ ರೇಫಲೇಂದ್ರನೆಂಬ ಆ ಮಹಾದೈತ್ಯನು ಭಯಂಕರನಾಗಿ ಸಿಂಹನಾದವನ್ನು ಮಾಡುತ್ತ ಓಡಿಬಂದನು.

೧೯. ಇಂತು ಓಡಿಬರುತ್ತಿರುವವನನ್ನು ಕಂಡು ಭೀಮಬಲನಾದ ಬರ್ಬರೀಕನು ಅವನಂತೆಯೇ ರೂಪವನ್ನು ಸ್ವೀಕರಿಸಿ ಗರ್ಜಿಸುತ್ತಿರುವ ಅವನೆದುರಿನಲ್ಲಿ ಓಡಿದನು.

೨೦. ಬಳಿಕ ಆ ಅರ್ಧರಾತ್ರಿಯಲ್ಲಿ ಅವರಿಬ್ಬರೂ ಲಘುವಾಗಿಯೂ, ವಿಚಿತ್ರವಾಗಿಯೂ, ದೃಢವಾಗಿಯೂ ಬಾಣಗಳನ್ನು ಬಿಡುತ್ತ ವರ್ಷಕಾಲದ ಮೇಘಗಳಂತೆ ಸೆಣಸಿದರು.

೨೧. ತಮ್ಮ ಬಿಲ್ಲುಗಳು ಮುರಿಯಲು ಖಡ್ಗಗಳಿಂದಲೂ, ಅವುಗಳೂ ಛಿನ್ನವಾಗಲು ಮುಷ್ಟಿಗಳಿಂದಲೂ ಯುದ್ಧಮಾಡಿದರು. ರೆಕ್ಕೆಗಳಿಂದ ಕೂಡಿದ ಪರ್ವತಗಳಂತೆ ಇಬ್ಬರೂ ಬಲವಾಗಿ ಬಹಳಕಾಲ ಹೋರಾಡಿದರು.

೨೨. ಬಳಿಕ ಬರ್ಬರೀಕನು ಆ ಅಸುರನನ್ನು ಕಂಕುಳಲ್ಲಿ ಹಿಡಿದು ಮೇಲಕ್ಕೆತ್ತಿ ಮುಹೂರ್ತಕಾಲ ಗಿರ್ರನೆ ತಿರುಗಿಸಿ ಭೂಮಿಯಲ್ಲಿ ಹೊಡೆಯಲು ಅವನು ರಕ್ತವನ್ನು ಕಾರುತ್ತ ಸತ್ತನು.

೨೩. ಅವನ ಶರೀರವನ್ನು ಬರ್ಬರೀಕನು ಆ ಕ್ಷೇತ್ರದ ಆಗ್ನೇಯ ಮೂಲೆಯಲ್ಲಿ ಮಹೀಸಾಗರದ ದಡದಲ್ಲಿ ಬಿಸುಟನು. ದೂರದಲ್ಲಿ ಅವನ ದೇಹವು ಬಿದ್ದ ಸ್ಥಳದಲ್ಲಿ ಇಂದಿಗೂ ಕೂಡ ರೇಫಲೇಂದ್ರವೆಂಬ ಗ್ರಾಮವು ಕಾಣುತ್ತಿರುವುದು.

೨೪–೨೫. ಇಂತು ವೃತ್ರಾಸುರನಿಗೆ ಸಮನಾದವನೂ ಪರಾಕ್ರಮಿಯೂ, ಅವಂತೀಕ್ಷೇತ್ರದ ಸ್ಮಶಾನದ ಒಡೆಯನೂ, ವಿಘ್ನಕರ್ತನೂ ಆದ ರೇಫಲದೈತ್ಯನು

ತಂ ನಿಹತ್ಯ ಪುನರ್ವೀರೋ ಬರ್ಬರೀಕಃ ಸ್ಥಿತೋಽಭವತ್ ॥ ೨೫ ॥
ತತಸ್ತೃತೀಯಯಾಮೇ ಚ ಪ್ರತೀಚ್ಯಾ ದಿಶ ಆಯಯೌ ।
ಪರ್ವತಾಭಾ ಮಹಾನಾದಾ ಪಾದೈಃ ಕಂಪಯತೀವ ಭೂಃ ॥ ೨೬ ॥
ದ್ರುಹದ್ರುಹಾಖ್ಯಾಶ್ವತರೀ ಮೇಘಭ್ರಷ್ಟಾ ತಡಿದ್ಯಥಾ ।
ತಾಮಾಯಾಂತೀಂ ತಥಾ ದೃಷ್ಟ್ವಾ ಸೂರ್ಯವೈಶ್ವಾನರಪ್ರಭಾಂ ।
ಉಪಸೃತ್ಯ ಜವಾದ್ಧೈವಿಮಾ ರುರೋಹ ಪ್ರಹಸನ್ನಿವ ॥ ೨೭ ॥
ವೇಗಾತ್ತತಃ ಪ್ರದ್ರವತೀಂ ತುಂಡೇ ಪ್ರಾಹತ್ಯ ಮುಷ್ಟಿಭಿಃ ।
ಸ್ಥಾಪಯಾಮಾಸ ತತ್ರೈವ ತಸ್ಥೌ ಸಾ ಚಾತಿಪೀಡಿತಾ ॥ ೨೮ ॥
ತತಃ ಕೃದ್ಧಾ ಮಹಾರಾವಂ ಕೃತ್ವಾಪ್ಲುತ್ಯ ದ್ರುಹದ್ರುಹಾ ।
ಜಗತ್ಯಾಮಾಶು ಚಿಕ್ಷೇಪ ಬರ್ಬರೀಕಂ ತಥೇಚ್ಛಕಂ ॥ ೨೯ ॥
ತತೋ ನದಿತ್ವಾ ಚಾತೀವ ಪಾದಘಾತಮಮುಂಚತ ।
ಪಾದೌ ಚ ವೀರಃ ಸಂಗೃಹ್ಯ ಚಿಕ್ಷೇಪ ಭುವಿ ಲೀಲಯಾ ॥ ೩೦ ॥
ತತಃ ಪುನಃ ಸಮುತ್ಥಾಯ ಧಾವಂತೀಂ ತಾಂ ನಿಗೃಹ್ಯ ಸಃ ।
ಮುಷ್ಟಿನಾ ಪಾತಯಿತ್ವೈವ ದಂತಾನ್ಕಂಠಮಪೀಡಯತ್ ॥ ೩೧ ॥

---

ಹತನಾದನು. ಅವನನ್ನು ಕೊಂದು ವೀರನಾದ ಬರ್ಬರೀಕನು ಮತ್ತೆ ತನ್ನ ಸ್ಥಾನದಲ್ಲಿ ಬಂದು ನಿಂತನು.

೨೬–೨೭. ಬಳಿಕ ಮೂರನೆಯ ಯಾಮವು ಕಳೆಯಲು ಪಶ್ಚಿಮ ದಿಕ್ಕಿನಿಂದ ಪರ್ವತಾಕಾರವಾಗಿ ಮಹಾಧ್ವನಿಯನ್ನು ಮಾಡುತ್ತ ಪಾದಘಾತದಿಂದ ಭೂಮಿಯು ನಡುಗುತ್ತಿರಲು ದ್ರುಹದ್ರುಹೆಯೆಂಬ ರಾಕ್ಷಸಿಯು ಹೆಣ್ಣುಹೇಸರ ಕತ್ತೆಯ ರೂಪದಿಂದ ಕೂಡಿ ಮೇಘಮಂಡಲದಿಂದಿಳಿದ ಮಿಂಚಿನ ಬಳ್ಳಿಯಂತೆ ಪ್ರಾಪ್ತಳಾದಳು. ಸೂರ್ಯನಿಗೂ ಅಗ್ನಿಗೂ ಸಮಾನವಾದ ತೇಜಸ್ಸಿನಿಂದ ಹೊಳೆದುಬರುತ್ತಿರುವ ಅವಳನ್ನು ಕಂಡು ಬರ್ಬರೀಕನು ನಗುತ್ತ ಏರಿಕೊಂಡನು.

೨೮–೨೯. ಬಳಿಕ ವೇಗವಾಗಿ ಅಲ್ಲಿಂದ ಓಡಿಹೋಗಲೆಳಸುವ ಮೃಗವನ್ನು ಮುಖದಮೇಲೆ ಮುಷ್ಟಿಗಳಿಂದ ಹೊಡೆದು ನಿಲ್ಲಿಸಿದನು. ಅದೂ ಕೂಡ ಅತ್ಯಂತ ಸಂಕಟಗೊಂಡು ನಿಂತಿತು. ಕೋಪದಿಂದ ದೊಡ್ಡದಾಗಿ ಕೆನೆಯುತ್ತ ದ್ರುಹದ್ರುಹೆಯು ಮೇಲಕ್ಕೆ ಹಾರಿ ಕೂತಿರಲೆಳಸಿದ ಬರ್ಬರೀಕನನ್ನು ನೆಲಕ್ಕೆ ಕೆಡವಿತು.

೩೦. ಬಳಿಕ ಅತಿಯಾಗಿ ಧ್ವನಿಗೈಯುತ್ತ ಕಾಲುಗಳನ್ನು ಜಾಡಿಸಲು ವೀರನಾದ ಬರ್ಬರೀಕನು ಆ ಕಾಲುಗಳನ್ನೇ ಹಿಡಿದು ಲೀಲಾಜಾಲವಾಗಿ ಭೂಮಿಯಲ್ಲಿ ಮೃಗವನ್ನು ಕೆಡವಿದನು.

೩೧. ಮತ್ತು ಮತ್ತೆ ಎದ್ದು ಓಡಿಹೋಗಲೆಳಸಿದ ಅದನ್ನು ಹಿಡಿದು ಮುಷ್ಟಿಪ್ರಹಾರದಿಂದ ಬೀಳಿಸಿ ಹಲ್ಲುಗಳನ್ನು ಮುರಿದು ಕಂಠವನ್ನು ಹಿಂಡಿದನು.

ಕ್ಲಿನ್ನಂ ವಾಸ ಇವಾಪೀಡ್ಯ ಪ್ರಾಣಾನತ್ಯಾಜಯದ್ದ್ರುತಂ ॥ ೩೨ ॥
ಏವಂ ಸೀಕೋತ್ತರಸ್ಥಾನೇ ಸ್ಮಶಾನೈಕಪದೋದ್ಭವಾ ।
ಶಾಕಿನೀನಾಮಧೀಶಾ ಸಾ ಬರ್ಬರೀಕೇಣ ಸೂದಿತಾ ॥ ೩೩ ॥
ಹತ್ವಾ ತಾಂ ಚಾಪಿ ಚಿಕ್ಷೇಪ ಪ್ರತೀಚ್ಯಾಮೇವ ಲೀಲಯಾ ।
ದ್ರುಹದ್ರುಹಾಖ್ಯಮದ್ಯಾಪಿ ತತ್ರ ಗ್ರಾಮಂ ಸ್ಮ ವರ್ತತೇ ॥ ೩೪ ॥
ತತಸ್ತಥೈವ ಸಂತಸ್ಥೌ ಬರ್ಬರೀಕೋಽಭಿರಕ್ಷಣೇ ।
ತತಶ್ಚತುರ್ಥೇ ಯಾಮೇ ಚ ಪ್ರಾಪ್ತಃ ಕ್ಷಪಣಕೋಽದ್ಭುತಃ ।
ಮುಂಡೀ ನಗ್ನೋ ಮಯೂರಾಣಾಂ ಪಿಂಛಧಾರೀ ಮಹಾವ್ರತಃ ॥ ೩೫ ॥
ಪ್ರೋವಾಚ ಚೇದಂ ವಚನಂ ಹಾಹಾ ಕಷ್ಟಮತೀವ ಭೋಃ ।
ಅಹಿಂಸಾ ಪರಮೋ ಧರ್ಮಸ್ತ್ವದಗ್ನಿರ್ಜ್ವಾಲ್ಯತೇ ಕುತಃ ॥ ೩೬ ॥
ಹೂಯಮಾನೇ ಯತೋ ವಹ್ನೌ ಸೂಕ್ಷ್ಮಜೀವವಧೋ ಮಹಾನ್ ।
ಶ್ರುತ್ವೇದಂ ವಚನಂ ತಸ್ಯ ಬರ್ಬರೀಕೋಽಬ್ರವೀತ್ಸ್ಮಯನ್ ॥ ೩೭ ॥

---

೩೨. ಇಂತು ಒದ್ದೆಯಾದ ಬಟ್ಟೆಯನ್ನು ಹಿಂಡುವಂತೆ ಗಂಟಲನ್ನು ಹಿಸುಕಲು ಅದು ಶೀಘ್ರದಲ್ಲಿಯೇ ಪ್ರಾಣಗಳನ್ನು ಬಿಟ್ಟಿತು.

೩೩. ಈ ವಿಧವಾಗಿ ಸೀಕೋತ್ತರಕ್ಷೇತ್ರದ ಸ್ಮಶಾನದಲ್ಲಿ ನೆಲಸಿ ಶಾಕಿನಿಯರಿಗೆಲ್ಲ ನಾಯಕಿಯೆನಿಸಿದ ದ್ರುಹದ್ರುಹೆಯು ಬರ್ಬರೀಕನಿಂದ ಹತಳಾದಳು.

೩೪. ಇಂತು ಅವಳನ್ನು ಕೊಂದು ಆ ದೇಹವನ್ನು ಅವನು ಲೀಲೆಯಾಗಿ ಪಶ್ಚಿಮ ದಿಕ್ಕಿನ ಕಡೆ ಎಸೆಯಲು ಅದು ಬಹುದೂರದಲ್ಲಿ ಬಿದ್ದಿತು. ಇಂದಿಗೂ ಅದು ಬಿದ್ದ ಸ್ಥಳದಲ್ಲಿ ದ್ರುಹದ್ರುಹವೆಂಬ ಗ್ರಾಮವು ಕಾಣುತ್ತಿರುವುದು.

೩೫. ಮತ್ತೆ ಬರ್ಬರೀಕನು ಎಚ್ಚರದಿಂದ ಯಜ್ಞಭೂಮಿಯನ್ನು ಸಂರಕ್ಷಿಸುತ್ತ ನಿಂತನು. ನಾಲ್ಕನೆಯ ಯಾಮವು ಕಳೆಯಲು ಬೋಳುತಲೆಯವನೂ, ಬೆತ್ತಲೆಯಿರುವನೂ, ನವಿಲಿನ ಗರಿಗಳನ್ನು ಧರಿಸಿ ಮಹಾವ್ರತವನ್ನು ಸಾಧಿಸುತ್ತಿರುವವನಂತೆ ತೋರುವ ಅದ್ಭುತಾಕಾರದ ಜೈನ ಸನ್ಯಾಸಿಯೊಬ್ಬನು ಕಾಣಿಸಿಕೊಂಡನು.

೩೬. ಮತ್ತು ಈ ಮಾತುಗಳನ್ನಾಡತೊಡಗಿದನು. "ಅಯ್ಯೊ! ಬ್ರಾಹ್ಮಣನೆ! ಮಹಾ ಕಷ್ಟವು! ಅಹಿಂಸೆಯೇ ಪರಮ ಧರ್ಮವೆಂದು ಹೇಳಲ್ಪಟ್ಟಿರಲು ನೀನು ಈ ಬೆಂಕಿಯನ್ನೇಕೆ ಉರಿಸುತ್ತಿರುವೆ?

೩೭. ಈ ಬೆಂಕಿಯ ಉರಿಯಿಂದ ಬಹಳವಾದ ಸೂಕ್ಷ್ಮಜಂತುಗಳು ನಾಶವಾಗುತ್ತಿರುವುವು." ಕ್ಷಪಣಕನ ಈ ಮಾತುಗಳನ್ನು ಕೇಳಿ ಬರ್ಬರೀಕನು ನಗುತ್ತ ಉತ್ತರವನ್ನು ಹೇಳಿದನು.

ವದನೇ ಸರ್ವದೇವಾನಾಂ ಹೂಯಮಾನೇ ಸ್ಮ ಪಾವಕೇ ।
ಅನೃತಂ ಭಾಷಸೇ ಪಾಪ ಶಿಕ್ಷಾಯೋಗ್ಯೋಽಸಿ ದುರ್ಮತೇ ॥ ೩೮ ॥
ಇತ್ಯುಕ್ತ್ವಾ ಸಹಸೋತ್ಪತ್ಯ ಕಕ್ಷಾಮಧ್ಯೇ ಸ್ಥಿರೋಽಸ್ಯ ಚ ।
ದಂತಾನ್ಮುಷ್ಟಿಪ್ರಹಾರೈಶ್ಚ ಸಮಾಹತ್ಯಾಭ್ಯಪಾತಯತ್ ॥ ೩೯ ॥
ರುಧಿರಾವಿಲವಕ್ತ್ರಂ ತಂ ಮುಮೋಚ ಪತಿತಂ ಭುವಿ ॥ ೪೦ ॥
ಸ ಕ್ಷಣಾಚ್ಚೇತನಾಂ ಲಬ್ಧ್ವಾ ಘೋರದೈತ್ಯವಪುರ್ಧರಃ ।
ಭಯಾದ್ಭೈಮೇಃ ಪ್ರದುದ್ರಾವ ಗುಹಾವಿವರಮಾವಿಶತ್ ॥ ೪೧ ॥
ಬಹುಪ್ರಭೇತಿ ನಗರೀ ಷಷ್ಟಿಯೋಜನಮಾಯತಾ ।
ತಸ್ಯಾಂ ವಿವೇಶ ಸಹಸಾ ತಂ ಚಾನು ಬರ್ಬರೀಕಕಃ ॥ ೪೨ ॥
ಬರ್ಬರೀಕಂ ತತೋ ದೃಷ್ಟ್ವಾ ನಾದೋಽಭೂಚ್ಚ ಪಲಾಶಿನಾಂ ।
ಧಾವಧ್ವಂ ಹನ್ಯತಾಮೇಷ ಛಿದ್ಯತಾಂ ಭಿದ್ಯತಾಮಿತಿ ॥ ೪೩ ॥
ತಚ್ಛ್ರುತ್ವಾ ದೈತ್ಯವೀರಾಣಾಂ ಕೋಟಯೋ ನವ ಭೀಷಣಾಃ ।
ನಾನಾಯುಧಧರಾ ವೀರಂ ಬರ್ಬರೀಕಮುಪಾದ್ರವನ್ ॥ ೪೪ ॥

---

೩೮. "ಪಾಪಿಯಾದ ದುರ್ಬುದ್ಧಿಯೆ! ಸಕಲ ದೇವತೆಗಳಿಗೂ ಮುಖಪ್ರಾಯನಾದ ಅಗ್ನಿಯಲ್ಲಿ ಹೋಮವನ್ನು ಮಾಡುತ್ತಿರಲು ಕೇವಲ ಸುಳ್ಳನ್ನು ಆಡುತ್ತಿರುವ ನೀನು ಶಿಕ್ಷೆಗೆ ಅರ್ಹನಾಗಿರುವೆ."

೩೯–೪೧. ಇಂತೆಂದು ಬೇಗ ಮೇಲಕ್ಕೆದ್ದು ಅಂಗಳದ ಮಧ್ಯದಲ್ಲಿ ಸ್ಥಿರವಾಗಿ ನಿಂತು ಅವನ ಹಲ್ಲುಗಳನ್ನು ಮುಷ್ಟಿಪ್ರಹಾರಗಳಿಂದಲೇ ಮುರಿದು ಉದುರಿಸಿದನು. ಮತ್ತು ಮುಖವೆಲ್ಲ ರಕ್ತಮಯವಾಗಿ ನೆಲದಲ್ಲಿ ಬಿದ್ದಿದ್ದ ಅವನನ್ನು ಬಿಟ್ಟುಬಿಟ್ಟನು. ಆ ರಾಕ್ಷಸನು ಒಂದು ಮುಹೂರ್ತದ ಮೇಲೆ ಸಂಜ್ಞೆಯನ್ನು ಹೊಂದಿದವನಾಗಿ ಭಯಂಕರವಾದ ಶರೀರವನ್ನು ಧರಿಸಿ ಬರ್ಬರೀಕನ ಭಯದಿಂದ ಓಡಿಹೋಗಿ ವಿಶಾಲವಾದ ಗುಹೆಯ ಬಿಲದೊಳಗೆ ಹೊಕ್ಕನು.

೪೨. ಅದರಲ್ಲಿಯೇ ಅರುವತ್ತು ಯೋಜನಗಳ ವಿಸ್ತಾರವುಳ್ಳ ಬಹುಪ್ರಭೆಯೆಂಬ ಹೆಸರಿನ ರಾಕ್ಷಸನಗರಿಯಿರುವುದು. ಅದನ್ನು ರಾಕ್ಷಸನು ಹೊಗಲು ಅವನ ಹಿಂದೆಯೇ ಬರ್ಬರೀಕನು ಪ್ರಾಪ್ತನಾದನು.

೪೩. ಬರ್ಬರೀಕನನ್ನು ಕಂಡಕೂಡಲೇ ಆ ನಗರದಲ್ಲಿದ್ದ ರಾಕ್ಷಸರೆಲ್ಲ "ಓಡಿರಿ; ಇವನನ್ನು ಕೊಲ್ಲಿರಿ; ಛೇದಿಸಿರಿ; ಭೇದಿಸಿರಿ" ಎಂದು ಕೂಗಿಕೊಂಡ ಮಾತುಗಳು ಹೊರಟುವು.

೪೪. ಅದನ್ನು ಕೇಳಿ ಅತಿ ಭಯಂಕರರಾದ ಒಂಬತ್ತು ಕೋಟಿ ರಾಕ್ಷಸವೀರರು ಅನೇಕ ವಿಧಗಳಾದ ಆಯುಧಗಳನ್ನು ತೆಗೆದುಕೊಂಡು ಬರ್ಬರೀಕನಕಡೆಗೆ ಓಡಿಬಂದರು.

ದೃಷ್ಟ್ವಾ ತಾನ್ಕೋಟಿಶೋ ದೈತ್ಯಾನ್ಕೃದ್ಧೋ ಭೀಮಾತ್ಮಜಾತ್ಮಜಃ ।
ನಿಮೀಲ್ಯ ಸಹಸಾ ನೇತ್ರೇ ತೇಷಾಂ ಮಧ್ಯಮಧಾವತ ॥ ೪೫ ॥
ಪಾದಘಾತೈಸ್ತತಃ ಕಾಂಶ್ಚಿದ್ಭುಜಘಾತೈಸ್ತಥಾಪರಾನ್ ।
ಹೃದಯಸ್ಯಾಭಿಘಾತೈಶ್ಚ ಕ್ಷಣಾನ್ನಿನ್ಯೇ ಯಮಕ್ಷಯಂ ॥ ೪೬ ॥
ಯಥಾನಲವನಂ ಕ್ರುದ್ಧಃ ಕುರ್ಯಾದ್ಭೂಮಿಸಮಂ ಕರೀ ।
ನವಕೋಟೀಸ್ತಥಾಜಘ್ನೇ ಸಹ ತೇನ ಪಲಾಶಿನಾ ॥ ೪೭ ॥
ತತೋ ನಾಗಾಃ ಸಮಾಗಮ್ಯ ವಾಸುಕಿಪ್ರಮುಖಾಸ್ತದಾ ।
ತುಷ್ಟುವುರ್ವಿವಿಧೈರ್ವಾಕ್ಯೈರೂಚುಃ ಸುಹೃದಯಂ ಚ ತೇ ॥ ೪೮ ॥
ನಾಗಾನಾಂ ಪರಮಂ ಕೃತ್ಯಂ ಕೃತಂ ತೇ ಭೈಮಿನಂದನ ।
ಪಲಾಶೀನಾಮ ದೈತ್ಯೋಽಯಂ ನೀತೋ ಯತ್ಸಾನುಗೋ ಯಮಂ ॥
ಅನೇನ ಹಿ ವಯಂ ವೀರ ಸಾನುಗೇನ ದುರಾತ್ಮನಾ ।
ಪೀಡಿತಾ ವಿವಿಧೋಪಾಯೈಃ ಪಾತಾಲಾದಪ್ಯಧಃಕೃತಾಃ ॥ ೫೦ ॥
ವರಂ ವೃಣೀಷ್ವ ತ್ವಂ ತಸ್ಮಾನ್ನಾಗೇಭ್ಯೋಽಭಿಮತಂ ಪರಂ ।
ವರದಾಃ ಸರ್ವ ಏವ ಸ್ಮ ವಯಂ ತುಭ್ಯಂ ಸುತೋಷಿತಾಃ ॥ ೫೧ ॥

---

೪೫–೪೭.. ಕೋಟಿಗಟ್ಟಲೆಯಾಗಿ ಮುತ್ತಿದ ರಾಕ್ಷಸರನ್ನು ಕಂಡು ಬರ್ಬರೀಕನು ಅತ್ಯಂತ ಕ್ರೋಧದಿಂದ ಕಣ್ಣುಗಳನ್ನು ಮುಚ್ಚಿಕೊಂಡು ಅವರ ಮಧ್ಯದಲ್ಲಿ ನುಗ್ಗಿದನು. ಕೆಲವರನ್ನು ಕಾಲಿನ ಒದೆಗಳಿಂದಲೂ, ಕೆಲವರನ್ನು ಕೈಗಳ ಹೊಡೆತದಿಂದಲೂ, ಹಲವರನ್ನು ಎದೆಯ ಅಭಿಘಾತದಿಂದಲೂ ಬೀಳಿಸಿ ಕ್ಷಣಮಾತ್ರದಲ್ಲಿ ಯಮನಗರಿಗೆ ಕಳುಹಿಸಿಕೊಟ್ಟನು. ಕೋಪಗೊಂಡ ಮದ್ದಾನೆಯು ಜೊಂಡು ಹುಲ್ಲಿನ ವನವನ್ನು ನೆಲಸಮನಾಗಿ ಮಾಡುವಂತೆ ಪಲಾಶಿಯೆಂಬ ರಾಕ್ಷಸನೊಡನೆ ಅವನ ಅನುಯಾಯಿಗಳಾದ ಒಂಬತ್ತುಕೋಟಿ ರಾಕ್ಷಸರನ್ನೂ ಸಂಹರಿಸಿದನು.

೪೮. ಆಗ ವಾಸುಕಿಯೇ ಮೊದಲಾದ ನಾಗರೆಲ್ಲರೂ ಬಂದು ಆ ಸುಹೃದಯನನ್ನು ಬಹು ವಿಧವಾಗಿ ಸ್ತೋತ್ರಮಾಡಿ ಹೇಳಿದರು.

೪೯. "ಎಲೈ ಘಟೋತ್ಕಚಪುತ್ರನೆ! ನೀನು ನಾಗರಿಗೆ ಪರಮಪ್ರಿಯವಾದ ಕಾರ್ಯವನ್ನು ಮಾಡಿರುವೆ. ಪರಿವಾರ ಸಮೇತನಾದ ಪಲಾಶಿಯೆಂಬ ಈ ರಾಕ್ಷಸನನ್ನು ಯಮನಪಟ್ಟಣಕ್ಕೆ ಕಳುಹಿಸಿರುವೆ.

೫೦. ಸೈನ್ಯ ಸಮೇತನಾದ ಈ ದುರಾತ್ಮನಿಂದ ನಾವೆಲ್ಲರೂ ಬಹು ವಿಧವಾದ ಹಿಂಸೆಗಳನ್ನು ಹೊಂದಿ ಪಾತಾಲಕ್ಕಿಂತಲೂ ಕೆಳಕ್ಕೆ ತುಳಿಯಲ್ಪಟ್ಟಿದ್ದೆವು.

೫೧. ಆದುದರಿಂದ ನಾಗರಿಂದ ನಿನಗೆ ಬೇಕಾದ ಉತ್ತಮ ವರವನ್ನು ಕೇಳು. ನಿನ್ನ ಕೆಲಸದಿಂದ ನಾವು ಸಂತೋಷಗೊಂಡು ಯಾವಾಗಲೂ ನಿನಗೆ ವರಗಳನ್ನು ಕೊಡಲು ಸಿದ್ಧರಾಗಿರುವೆವು."

ಸುಹೃದಯ ಉವಾಚ :–

ಯದಿ ದೇಯೋ ವರೋ ಮಹ್ಯಂ ತದೇನಂ ಪ್ರವೃಣೋಮ್ಯಹಂ ।
ಸರ್ವವಿಘ್ನವಿನಿರ್ಮುಕ್ತೋ ವಿಜಯಃ ಸಿದ್ಧಿಮಾಪ್ನುಯಾತ್ ॥ ೫೨ ॥
ತತಸ್ತಥೇತಿ ತಂ ಪ್ರೋಚುಃ ಪ್ರಹೃಷ್ಟಾ ವಾಯುಭೋಜನಾಃ ।
ಸ ಚ ತೇಭ್ಯಃ ಪುರೀಂ ದತ್ತ್ವಾ ನಿವೃತ್ತೋ ನಾಗಪೂಜಿತಃ ॥ ೫೩ ॥
ವಿವರಸ್ಯ ಚ ಮಧ್ಯೇನ ಸಮಾಗಚ್ಛನ್ಮಹಾಪ್ರಭಂ ।
ಸರ್ವರತ್ನಮಯಂ ಲಿಂಗಂ ಸ್ಥಿತಂ ಕಲ್ಪತರೋರಧಃ ॥ ೫೪ ॥
ಅರ್ಚ್ಯಮಾನಂ ಸುಬಹ್ವೀಭಿರ್ನಾಗಕನ್ಯಾಭಿರೈಕ್ಷತ ।
ತತೋಽಸೌ ವಿಸ್ಮಯಾವಿಷ್ಟೋ ನಾಗಕನ್ಯಾ ಹ್ಯಪೃಚ್ಛತ ॥ ೫೫ ॥
ಕೇನೇದಂ ಸ್ಥಾಪಿತಂ ಲಿಂಗಂ ಸೂರ್ಯವೈಶ್ವಾನರಪ್ರಭಂ ।
ಲಿಂಗಾದಪಿ ಚತುರ್ದಿಕ್ಷು ಮಾರ್ಗಾಶ್ಚೇಮೇ ತು ಕೀದೃಶಾಃ ॥ ೫೬ ॥
ಇತಿ ವೀರವಚಃ ಶ್ರುತ್ವಾ ಬೃಹತ್ಕಟಿಪಯೋಧರಾ ।
ಸವ್ರೀಡಂ ಸಸ್ಮಿತಾಪಾಂಗನಿರೀಕ್ಷಮಿದಮಬ್ರವೀತ್ ॥ ೫೭ ॥

---

೫೨. ಸುಹೃದಯನು ಹೇಳುತ್ತಾನೆ:—"ನಾನು ನಿಮ್ಮ ವರಕ್ಕೆ ಪಾತ್ರನೇ ಆಗಿದ್ದಲ್ಲಿ ಇಷ್ಟನ್ನು ಮಾತ್ರ ಕೇಳಿಕೊಳ್ಳುತ್ತೇನೆ. ವಿಜಯನೆಂಬ ಈ ಬ್ರಾಹ್ಮಣನು ಸಕಲ ವಿಘ್ನಗಳಿಂದಲೂ ಪರಿಹಾರವನ್ನು ಹೊಂದಿ ತನ್ನ ವಿದ್ಯೆಯ ಸಿದ್ಧಿಯನ್ನು ಪಡೆಯಲಿ.

೫೩. ವಾಯ್ವಾಹಾರಿಗಳಾದ ನಾಗರು ಸಂತೋಷದಿಂದ ಹಾಗೆಯೇ ಆಗಲೆಂದು ಸಮ್ಮತಿಸಿದರು. ಅವನೂ ಅವರಿಗೆ ಆ ನಗರವನ್ನು ಬಿಟ್ಟುಕೊಟ್ಟು ಅವರ ಸತ್ಕಾರವನ್ನು ಕೈಕೊಂಡು ಹಿಂದಿರುಗಲು ಉದ್ಯುಕ್ತನಾದನು.

೫೪. ಆ ಬಿಲದ ಮಧ್ಯದಿಂದಲೇ ಪ್ರಯಾಣಮಾಡುತ್ತ ಅಮಿತತೇಜಸ್ಸಿನಿಂದ ಕೂಡಿದುದೂ, ಸರ್ವರತ್ನಗಳಿಂದ ನಿರ್ಮಿತವಾದುದೂ ಆದ ಲಿಂಗವೊಂದನ್ನು ಕಲ್ಪವೃಕ್ಷದ ಬುಡದಲ್ಲಿ ಕಂಡನು.

೫೫–೫೬. ಅದನ್ನು ಅನೇಕ ನಾಗಕನ್ಯೆಯರು ಪೂಜಿಸುತ್ತಿದ್ದರು. ಆಗ ವಿಸ್ಮಯಾವಿಷ್ಟಹೃದಯನಾಗಿ ಬರ್ಬರೀಕನು ಆ ಕನ್ಯೆಯರನ್ನು ಪ್ರಶ್ನೆಮಾಡತೊಡಗಿದನು. "ಸೂರ್ಯಾಗ್ನಿಸಮತೇಜಸ್ಸಿನಿಂದ ಕೂಡಿದ ಈ ಲಿಂಗವು ಯಾರಿಂದ ಪ್ರತಿಷ್ಠಿಸಲ್ಪಟ್ಟಿತು? ಈ ಲಿಂಗದ ನಾಲ್ಕುಕಡೆಗೂ ಹೋಗುವ ದಾರಿಗಳು ಎಲ್ಲಿಗೆ ಸೇರುವುವು?"

೫೭. ಇಂತೆಂದ ವೀರನ ಮಾತುಗಳನ್ನು ಕೇಳಿ ಪೃಥುನಿತಂಬಗಳೂ ಸ್ತನಗಳೂ ಉಳ್ಳ ಕನ್ಯೆಯೊಬ್ಬಳು ನಾಚಿಕೆಯಿಂದಲೂ ಮುಗುಳ್ನಗೆಯಿಂದಲೂ ಕಡೆಗಣ್ಣಿನ ನೋಟವನ್ನು ಬೀರುತ್ತ ಉತ್ತರವನ್ನು ಹೇಳಿದಳು.

ಸರ್ವಪನ್ನಗರಾಜೇನ ಶೇಷೇಣ ಸುಮಹಾತ್ಮನಾ ।
ತಪಸ್ತಪ್ತ್ವಾ ಮಹಾಲಿಂಗಮಿದಮತ್ರ ಪ್ರತಿಷ್ಠಿತಂ ॥ ೫೮ ॥
ದರ್ಶನಾತ್ಸ್ಪರ್ಶನಾದ್ಧ್ಯಾನಾದರ್ಚನಾತ್ಸರ್ವಸಿದ್ಧಿದಂ ।
ಲಿಂಗಾತ್ಪೂರ್ವೇಣ ಮಾರ್ಗೋಽಯಂ ಯಾತಿ ಶ್ರೀಪರ್ವತಂ ಭುವಿ ॥೫೯॥
ಏಲಾಪತ್ರೇಣ ವಿಹಿತೋ ನಾಗಾನಾಂ ತತ್ರ ಪ್ರಾಪ್ತಯೇ ।
ದಕ್ಷಿಣೇನ ಚ ಮಾರ್ಗೋಽಯಂ ಯಾತಿ ಶೂರ್ಪಾರಕಂ ಭುವಿ ॥ ೬೦ ॥
ಕರ್ಕೋಟಕೇನ ನಾಗೇನ ಕೃತೋಽಯಂ ತತ್ರ ಪ್ರಾಪ್ತಯೇ ।
ಪಶ್ಚಿಮೇನ ಚ ಮಾರ್ಗೋಽಯಂ ಪ್ರಭಾಸಂ ಯಾತಿ ಸುಪ್ರಭಂ ॥ ೬೧ ॥
ಐರಾವತೇನ ವಿಹಿತೋ ನಾಗಾನಾಂ ಗಮನಾಯ ಚ ।
ಉತ್ತರೇಣ ಚ ಮಾರ್ಗೋಽಯಂ ಯೇನ ಯಾತುಂ ಭವಾನ್ಸ್ಥಿತಃ ॥೬೨॥
ಗುಪ್ತಕ್ಷೇತ್ರೇ ಸಿದ್ಧಲಿಂಗಂ ಯಾತಿ ಶಕ್ತಿಗುಹಾಕೃತಃ ।
ವಿಹಿತಸ್ತಕ್ಷಕೇಣಾಸೌ ಯಾತುಂ ತತ್ರ ಮಹಾತ್ಮನಾ ॥ ೬೩ ॥

---

೫೮. "ಸಕಲ ನಾಗರಿಗೂ ಅಧಿಪತಿಯಾಗಿ ಮಹಾತ್ಮನಾದ ಆದಿಶೇಷನೇ ಮಹತ್ತಾದ ತಪಸ್ಸನ್ನು ಮಾಡಿ ಈ ಮಹಾಲಿಂಗವನ್ನು ಇಲ್ಲಿ ಪ್ರತಿಷ್ಠೆ ಮಾಡಿರುವನು.

೫೯. ಈ ಲಿಂಗದ ದರ್ಶನದಿಂದಲೂ, ಸ್ಪರ್ಶದಿಂದಲೂ, ಧ್ಯಾನದಿಂದಲೂ, ಪೂಜೆಯಿಂದಲೂ ಸಕಲ ಸಿದ್ಧಿಗಳೂ ಕೈಗೂಡುವುವು. ಈ ಲಿಂಗದಿಂದ ಪೂರ್ವಕ್ಕೆ ಹೋಗುವ ಮಾರ್ಗವು ಭೂಲೋಕದಲ್ಲಿ ಶ್ರೀಪರ್ವತಕ್ಕೆ ಸೇರುವುದು.

೬೦. ಇದು ಏಲಾಪತ್ರನಿಂದ ನಾಗರು ಅಲ್ಲಿಗೆ ಸುಲಭವಾಗಿ ಹೋಗಿ ಬರಲು ಅನುಕೂಲವಾಗುವಂತೆ ನಿರ್ಮಿತವಾದುದು. ದಕ್ಷಿಣದಿಕ್ಕಿಗೆ ಹೋಗುವ ಈ ಮಾರ್ಗವು ಶೂರ್ಪಾರಕ ಕ್ಷೇತ್ರದ ಕಡೆಗೆ ಹೋಗುವುದು.

೬೧. ಅಲ್ಲಿಗೆ ಹೋಗಲು ಅನುಕೂಲತೆಗಾಗಿ ಕರ್ಕೋಟಕನೇ ಈ ಮಾರ್ಗವನ್ನು ರಚಿಸಿದನು. ಪಶ್ಚಿಮದ ಕಡೆಗೆ ಹೋಗುವ ಈ ದಾರಿಯು ಪ್ರಭಾವಂತವಾದ ಪ್ರಭಾಸಕ್ಷೇತ್ರಕ್ಕೆ ಸೇರುವುದು.

೬೨-೬೩. ನಾಗರು ಸುಗಮವಾಗಿ ಹೋಗಿಬರಲು ಐರಾವತವೇ ಈ ಮಾರ್ಗವನ್ನು ನಿರ್ಮಿಸಿತು. ನೀನು ಈಗ ಹೊರಡಲನುವಾಗಿರುವ ಉತ್ತರ ದಿಕ್ಕಿಗೆ ಹೋಗುವ ಈ ಮಾರ್ಗವು ಶಕ್ತಿಗುರುನಿಂದ ಮಾಡಲ್ಪಟ್ಟು ಗುಪ್ತಕ್ಷೇತ್ರವಾದ ಮಹೀಸಾಗರಸಂಗಮದಲ್ಲಿ ಸಿದ್ಧಲಿಂಗವನ್ನು ಸೇರುವುದು. ಅಲ್ಲಿಗೆ ಹೋಗಿಬರಲು ಮಹಾತ್ಮನಾದ ತಕ್ಷಕನೇ ಈ ಮಾರ್ಗವನ್ನುಂಟುಮಾಡಿರುವನು.

ಇತೀದಂ ವರ್ಣಿತಂ ವೀರ ವಿಜ್ಞಪ್ತಿಃ ಶ್ರೂಯತಾಂ ಮಮ ।
ಕೋ ಭವಾನಧುನೈವೇತೋ ದೈತ್ಯಪೃಷ್ಠಗತೋಽಭವತ್ ।
ಅಧುನೈವ ತಥೈಕಾಕೀ ಸಮಾಯಾತೋಽತ್ರ ನೋ ವದ ॥ ೬೪ ॥
ವಯಂ ಚ ಸರ್ವಾಸ್ತೇ ದಾಸ್ಯಸ್ತ್ವಾಂ ಪತಿಂ ಪ್ರವೃಣೀಮಹೇ ।
ಅಸ್ಮಾಭಿಃ ಸಹಿತಃ ಕ್ರೀಡ ವಿವಿಧಾಸ್ವತ್ರ ಭೂಮಿಷು ॥ ೬೫ ॥

ಬರ್ಬರೀಕ ಉವಾಚ:—

ಅಹಂ ಕುರುಕುಲೋತ್ಪನ್ನಃ ಪಾಂಡುಪುತ್ರಸ್ಯ ಪೌತ್ರಕಃ ।
ಬರ್ಬರೀಕ ಇತಿ ಖ್ಯಾತಸ್ತಂ ದೈತ್ಯಂ ಹಂತುಮಾಗತಃ ॥ ೬೬ ॥
ಸ ಚ ದೈತ್ಯೋ ಹತಃ ಪಾಪಃ ಪುನರ್ಯಾಸ್ಯೇ ಮಹೀತಲಂ ।
ಭವತೀಭಿಶ್ಚ ಮೇ ನಾಸ್ತಿ ಕೃತ್ಯಂ ಭೋಭೋಃ ಕಥಂಚನ ॥ ೬೭ ॥
ಬ್ರಹ್ಮಚಾರಿವ್ರತಂ ಯಸ್ಮಾದಹಂ ಸತತಮಾಸ್ಥಿತಃ ।
ಇತ್ಯುಕ್ತ್ವಾಭ್ಯರ್ಚ್ಯ ತಲ್ಲಿಂಗಂ ಪ್ರಣಿಪತ್ಯ ಚ ದಂಡವತ್ ।
ಊರ್ಧ್ವಮಾಚಕ್ರಮೇ ವೀರಃ ಕಾತರಂ ತಾಭಿರೀಕ್ಷಿತಃ ॥ ೬೮ ॥

---

೬೪. ಎಲೈ ವೀರನೆ! ನೀನು ಕೇಳಿದ ವಿಷಯವನ್ನೆಲ್ಲ ವರ್ಣಿಸಿರುವೆನು. ಇನ್ನು ನಾನು ಕೇಳುವ ವಿಜ್ಞಾಪನೆಯನ್ನು ಲಾಲಿಸು. ಈ ದೈತ್ಯನ ಬೆನ್ನನ್ನು ಹಿಡಿದು ಬಂದ ನೀನು ಯಾರು? ಈಗ ಇಲ್ಲಿಗೆ ಒಬ್ಬನೇ ಬಂದುದಕ್ಕೆ ಕಾರಣವನ್ನು ನಮಗೆ ತಿಳಿಸು.

೬೫. ನಾವೆಲ್ಲರೂ ನಿನಗೆ ದಾಸಿಯರಾಗಿ ನಿನ್ನನ್ನೇ ಪತಿಯನ್ನಾಗಿ ವರಿಸಿರುವೆವು. ಆದುದರಿಂದ ಅನೇಕ ಪ್ರಕಾರಗಳಾದ ಕ್ರೀಡಾಭೂಮಿಗಳಲ್ಲಿ ನಮ್ಮೊಡನೆ ರಮಿಸು.''

೬೬. ಬರ್ಬರೀಕನು ಹೇಳುತ್ತಾನೆ:—''ನಾನು ಕುರುವಂಶದಲ್ಲಿ ಹುಟ್ಟಿದ ಪಾಂಡುರಾಜನ ಮಗನಾದ ಭೀಮಸೇನನಿಗೆ ಮೊಮ್ಮಗನು. ನನ್ನನ್ನು ಬರ್ಬರೀಕನೆಂದು ಕರೆಯುವರು. ಪಲಾಶಿಯೆಂಬ ಆ ರಾಕ್ಷಸನನ್ನು ಕೊಲ್ಲುವುದಕ್ಕಾಗಿಯೇ ನಾನಿಲ್ಲಿಗೆ ಬಂದೆನು.

೬೭. ಪಾಪಿಯಾದ ಆ ದೈತ್ಯನೂ ಹತನಾದನು. ಇನ್ನು ನಾನು ಭೂಲೋಕಕ್ಕೆ ಮರಳಿಹೋಗುವೆನು. ಎಲೌ ಕನ್ಯೆಯರಿರಾ! ನಿಮ್ಮಿಂದ ನನಗೆ ಕಿಂಚಿತ್ತಾದರೂ ಕಾರ್ಯವೆಂಬುದಿಲ್ಲ.

೬೮. ಏಕೆಂದರೆ ನಾನು ಆಜನ್ಮಬ್ರಹ್ಮಚರ್ಯದ ವ್ರತವನ್ನು ಸ್ವೀಕರಿಸಿರುವೆನು.'' ಇಂತೆಂದು ನುಡಿದು ವೀರನಾದ ಬರ್ಬರೀಕನು ಆ ಲಿಂಗಕ್ಕೆ ಪೂಜೆಯನ್ನು ಮಾಡಿ ಸಾಷ್ಟಾಂಗಪ್ರಣಾಮವನ್ನು ಮಾಡಿ ಅವರೆಲ್ಲರೂ ಕಾತರರಾಗಿ ನೀರೀಕ್ಷಿಸುತ್ತಿರಲು ಮೇಲಕ್ಕೆದ್ದು ಭೂಮಿಗೆ ಬಂದನು.

ತತೋ ಬಹಿಃ ಸಮಾಗತ್ಯ ಸುಪ್ರಕಾಶಂ ಮುಖಂ ತದಾ ।
ಪ್ರಹರ್ಷೇಣೈವ ಪೂರ್ವಸ್ಯಾ ವಿಜಯಂ ದದೃಶೇ ದಿಶಃ ॥ ೬೯ ॥
ತಸ್ಮಿನ್ಕಾಲೇ ಚ ವಿಜಯಃ ಕರ್ಮ ಸರ್ವಂ ಸಮಾಪ್ತವಾನ್ ।
ಕಾಂತ್ಯಾ ಸೂರ್ಯಸಮಾಭಾಸ ಊರ್ಧ್ವಮಾಚಕ್ರಮೇ ಕ್ಷಣಾತ್ ॥೭೦॥
ತತೋ ವಿಯದ್ಗತಂ ದೇವೈಃ ಪುಷ್ಪವರ್ಷಮಭೂನ್ಮಹತ್ ।
ಜಗುರ್ಗಂಧರ್ವಮುಖ್ಯಾಶ್ಚ ನನೃತುಶ್ಚಾಪ್ಸರೋಗಣಾಃ ॥ ೭೧ ॥
ವಿಜಯೋ ಬರ್ಬರೀಕಂ ಚ ತತೋ ವಚನಮಬ್ರವೀತ್ ॥ ೭೨ ॥
ತವಪ್ರಸಾದಾದ್ವೀರೇಶ ಸಿದ್ಧಿಃ ಪ್ರಾಪ್ತಾ ಮಯಾತುಲಾ ।
ಚಿರಂ ಜೀವ ಚಿರಂ ನಂದ ಚಿರಂ ವಸ ಚಿರಂ ಜಯ ॥ ೭೩ ॥
ಅತ ಏವ ಹಿ ಸಾಧೂನಾಂ ಸಂಗಮಿಚ್ಛಂತಿ ಸಾಧವಃ ।
ಔಷಧಂ ಸರ್ವದೋಷಾಣಾಂ ಭವೇತ್ಸತ್ಸಂಗಮೋ ಯತಃ ॥ ೭೪ ॥
ತ್ವಂ ಚ ಹೋಮಸ್ಥಿತಂ ಭಸ್ಮ ಸಿಂದೂರಸದೃಶಪ್ರಭಂ ।
ನಿಃಶಲ್ಯಂ ಸವಿವರಕಂ ಪೂರ್ಯಮಾಣಂ ಗೃಹಾಣ ಚ ॥ ೭೫ ॥

---

೬೯. ಬಳಿಕ ಆತನು ಬಿಲದಿಂದ ಹೊರಬಿದ್ದು ಸೂರ್ಯೋದಯದ ಮುಂಬೆಳಗಿನಿಂದ ಪ್ರಕಾಶಿಸುತ್ತಿರುವ ಪೂರ್ವದಿಕ್ಕನ್ನೂ ವಿಜಯಬ್ರಾಹ್ಮಣನನ್ನೂ ಕಂಡು ಅತ್ಯಂತ ಸಂತೋಷಗೊಂಡನು.

೭೦. ಆ ಕಾಲಕ್ಕೆ ಸರಿಯಾಗಿ ವಿಜಯನೂ ತನ್ನ ಕೃತ್ಯವೆಲ್ಲವನ್ನೂ ಸಮಾಪ್ತಿಗೊಳಿಸಿದನು. ತನ್ನ ದೇಹದ ಕಾಂತಿಯಿಂದ ಸೂರ್ಯನಿಗೆ ಸಮಾನನಾಗಿ ಕಾಣುತ್ತ ತತ್ಕ್ಷಣದಲ್ಲಿಯೇ ಮೇಲಕ್ಕೆ ಹೋಗಲನುವಾದನು.

೭೧–೭೨. ಆಗ ಆಕಾಶದಲ್ಲಿ ದೇವತೆಗಳಿಂದ ಹಿರಿದಾದ ಪೂಮಳೆಯು ಕರೆಯಿತು. ಗಂಧರ್ವಶ್ರೇಷ್ಠರು ಸಂಗೀತಗಳನ್ನು ಹಾಡಿದರು. ಅಪ್ಸರಸ್ತ್ರೀಯರು ನರ್ತನಗಳನ್ನು ಮಾಡಿದರು. ಆಗ ವಿಜಯನು ಬರ್ಬರೀಕನನ್ನು ಕುರಿತು ಈ ಮಾತುಗಳನ್ನಾಡಿದನು.

೭೩. "ಎಲೈ ವೀರಶಿಖಾಮಣಿಯೆ! ನಿನ್ನ ಅನುಗ್ರಹದಿಂದ ನಾನು ನಿರುಪಮವಾದ ಸಿದ್ಧಿಯನ್ನು ಹೊಂದಿರುವೆನು. ನೀನು ಚಿರಂಜೀವಿಯಾಗಿ ಬಹುಕಾಲ ಸಂತೋಷದಿಂದ ವಿಜಯಿಯಾಗಿರು.

೭೪. ಸಾಧು ಸತ್ಪುರುಷರ ಸಂಸರ್ಗವೇ ಸಕಲ ದೋಷಗಳಿಗೂ ಔಷಧವೆನಿಸಿರುವುದರಿಂದಲೇ ಸಾಧುಗಳು ಇತರ ಸತ್ಪುರುಷರ ಸಮಾಗಮವನ್ನೇ ಬಯಸುತ್ತಿರುವರು.

೭೫. ನೀನು ಹೋಮಕುಂಡದಲ್ಲಿ ತುಂಬಿರುವ ಅಸ್ಥಿರಹಿತವಾಗಿ ಸಿಂದೂರದಂತೆ ಹೊಳೆಯುತ್ತಿರುವ ಹೋಮಶೇಷವಾದ ಭಸ್ಮವನ್ನು ತೆಗೆದುಕೊ.

ಅಕ್ಷಯ್ಯಮೇತತ್ಸಂಗ್ರಾಮೇ ಪ್ರಥಮಂ ತೇ ಪ್ರಮುಂಚತಃ ।
ಶತ್ರೂಣಾಂ ಸ್ಥಾನಕಂ ಮೃತ್ಯೋರ್ದೇಹಂ ಧ್ವಸ್ತಂ ಕರಿಷ್ಯತಿ ॥ ೭೬ ॥
ಏವಂ ಮುಖೇನ ವಿಜಯಃ ಶತ್ರೂಣಾಂ ತೇ ಭವಿಷ್ಯತಿ ॥ ೭೭ ॥

ಬರ್ಬರೀಕ ಉವಾಚ :—

ಉಪಕುರ್ಯಾನ್ನಿರಾಕಾಂಕ್ಷೋ ಯಃ ಸ ಸಾಧುರಿತೀರ್ಯತೇ ।
ಸಾಕಾಂಕ್ಷಮುಪಕುರ್ಯಾದ್ಯಃ ಸಾಧುತ್ವೇ ತಸ್ಯ ಕೋ ಗುಣಃ ॥ ೭೮ ॥
ತದ್ದೇಹಿ ಭಸ್ಮ ಚಾನ್ಯಸ್ಮೈ ಕೇನಾಪ್ಯರ್ಥೋ ನ ಮೇಽಣ್ವಪಿ ।
ಪ್ರಸಾದಸುಮುಖಾಂ ದೃಷ್ಟಿಂ ವಿನಾ ನಾನ್ಯದ್ವೃಣೋಮಿ ತೇ ॥ ೭೯ ॥

ದೇವಾ ಊಚುಃ:—

ಕುರೂಣಾಂ ಪಾಂಡವಾನಾಂ ಚ ಭವಿಷ್ಯತಿ ಮಹಾನ್ರಣಃ ।
ತತೋ ಭೂಮಿಸ್ಥಿತಂ ಭಸ್ಮ ಪ್ರಾಪ್ಯತೇಯದಿ ಕೌರವಾಃ ॥ ೮೦ ॥
ಮಹಾನನರ್ಥೋ ಭವಿತಾ ಪಾಂಡವಾನಾಂ ತತಃ ಸ್ಫುಟಂ ।
ತಸ್ಮಾದ್ಗೃಹಾಣ ತ್ವಂ ಭಸ್ಮ ಸೋಽಪಿ ಚಕ್ರೇ ತಥಾ ವಚಃ ॥ ೮೧ ॥

---

೭೬–೭೭. ಇದನ್ನು ರಣರಂಗದಲ್ಲಿ ಮೊದಲೇ ಉಪಯೋಗಿಸಿದರೆ ಅಕ್ಷಯವಾಗಿ ಶತ್ರುಗಳ ಶರೀರಗಳನ್ನು ಮೃತ್ಯುದೇವತೆಗೆ ತುತ್ತಾಗಿ ಮಾಡಿ ಧ್ವಂಸಗೊಳಿಸುವುದು. ಇಂತು ಮೊದಲೇ ನಿನಗೆ ಶತ್ರುಗಳ ಮೇಲೆ ಜಯವು ಲಭಿಸುವುದು.''

೭೮. ಬರ್ಬರೀಕನು ಹೇಳುತ್ತಾನೆ:—'' ಪ್ರತಿಫಲಾಪೇಕ್ಷೆಯಿಲ್ಲದೆ ಇತರರಿಗೆ ಯಾವನು ಉಪಕಾರವನ್ನು ಮಾಡುವನೊ, ಅವನೇ ಸಾಧುವಾದಕ್ಕೆ ಅರ್ಹನು. ಆಕಾಂಕ್ಷೆಯನ್ನಿಟ್ಟುಕೊಂಡು ಉಪಕಾರವನ್ನು ಮಾಡುವವನಲ್ಲಿ ಸದ್ಗುಣವೆಲ್ಲಿಯದು ?

೭೯. ಆದುದರಿಂದ ಈ ಭಸ್ಮವನ್ನು ಮತ್ತಾರಿಗಾದರೂ ಕೊಡು. ನನಗೆ ಯಾವುದರಿಂದಲೂ ಅಣುಮಾತ್ರವಾದ ಪ್ರಯೋಜನವೂ ಇಲ್ಲ. ಆದರೆ ಪ್ರಸಾದೋನ್ಮುಖವಾದ ನಿನ್ನ ಕೃಪಾದೃಷ್ಟಿಯನ್ನು ಮಾತ್ರ ಬೇಡಿಕೊಳ್ಳುತ್ತೇನೆ.''

೮೦–೮೧. ದೇವತೆಗಳು ಹೇಳುತ್ತಾರೆ:—'' ಇನ್ನುಮೇಲೆ ಕೌರವರಿಗೂ ಪಾಂಡವರಿಗೂ ಭಯಂಕರವಾದ ಕಾಳಗವೇರ್ಪಡುವುದು. ಆಗ ಈ ಭೂಮಿಯಲ್ಲಿರುವ ಭಸ್ಮವು ಕೌರವರಿಗೆ ದೊರೆತರೆ ಪಾಂಡವರಿಗೆ ಹೆಚ್ಚಿನ ಅನರ್ಥವಾಗುವುದೆಂಬುದು ನಿಶ್ಚಯವು. ಆದುದರಿಂದ ಈ ಭಸ್ಮವನ್ನು ನೀನೇ ಸ್ವೀಕರಿಸು.'' ದೇವತೆಗಳ ಈ ಮಾತನ್ನು ಕೇಳಿ ಬರ್ಬರೀಕನೂ ಸಮ್ಮತಿಸಿ ಅದರಂತೆಯೇ ನಡೆದುಕೊಂಡನು.

**ದೇವೀಭಿಃ ಸಹಿತಾ ದೇವಾಃ ಸಮ್ಮಾನ್ಯ ವಿಜಯಂ ಚ ತೇ ।**
**ಸಿದ್ಧೈಶ್ವರ್ಯಂ ದದುಸ್ತಸ್ಮೈ ಸಿದ್ಧಸೇನೇತಿ ನಾಮ ಚ ॥ ೮೨ ॥**
**ಏವಂ ಸ ವಿಜಯೋ ವಿಪ್ರಃ ಸಿದ್ಧಿಂ ಲೇಭೇ ಸುದುರ್ಲಭಾಂ ।**
**ಬರ್ಬರೀಕಶ್ಚ ಕೃತ್ವೈತದ್ದೇವೀಭಕ್ತಿರತೋಽಭವತ್ ॥ ೮೩ ॥**

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪ್ರಥಮೇ ಮಾಹೇಶ್ವರಖಂಡೇ ಕೌಮಾರಿಕಾಖಂಡೇ
"ಕಾರ್ಯಸಿದ್ಧಿವರ್ಣನಂ"ನಾಮ
ತ್ರಿಷಷ್ಠಿತಮೋಽಧ್ಯಾಯಃ

---

೮೨. ಬಳಿಕ ದೇವತೆಗಳು ತಮ್ಮ ಪತ್ನಿಯರೊಡನೆ ವಿಜಯನನ್ನು ಸತ್ಕರಿಸಿ ಆತನಿಗೆ ಸಿದ್ಧೈಶ್ವರ್ಯವನ್ನು ದಯಪಾಲಿಸಿ ಸಿದ್ಧಸೇನನೆಂಬ ಹೆಸರನ್ನೂ ಅವನಿಗೆ ಕೊಟ್ಟರು.

೮೩. ಇಂತು ವಿಜಯನಾಮಕನಾದ ಆ ಬ್ರಾಹ್ಮಣನು ಅತ್ಯಂತ ದುರ್ಲಭವಾದ ಸಿದ್ಧಿಯನ್ನು ಪಡೆದನು. ಬರ್ಬರೀಕನೂ ಆಮೇಲೆ ದೇವಿಯ ಭಕ್ತಿಯಲ್ಲಿ ನಿರತನಾಗಿರುತ್ತಿದ್ದನು.

ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಎರಡನೆಯ ಕೌಮಾರಿಕಾಖಂಡದಲ್ಲಿ
"ಕಾರ್ಯಸಿದ್ಧಿವರ್ಣನ"ವೆಂಬ
ಅರುವತ್ತಮೂರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಚತುಷ್ಷಷ್ಟಿತಮೋಽಧ್ಯಾಯಃ

## ಭೀಮೇಶ್ವರ ಮಾಹಾತ್ಮ್ಯವರ್ಣನಂ

ಸೂತ ಉವಾಚ :-

ಏವಂ ತತ್ರ ಸ್ಥಿತೇ ತೀರೇ ದೇವ್ಯಾರಾಧನತತ್ಪರೇ ।
ಸಪ್ತಲಿಂಗಾರ್ಚನರತೇ ಭೀಮನಂದನನಂದನೇ ॥ ೧ ॥
ತತಃ ಕಾಲೇನ ಕೇನಾಪಿ ಪಾಂಡವಾ ದ್ಯೂತನಿರ್ಜಿತಾಃ ।
ತತ್ರಾಜಗ್ಮುಶ್ಚ ಕ್ರಮತಸ್ತೀರ್ಥಸ್ನಾನಕೃತೇ ಭುವಂ ॥ ೨ ॥
ಪ್ರಾಗೇವ ಚಂಡಿಕಾಂ ದೇವೀಂ ಕ್ಷೇತ್ರಾದೀಶಾನತಃ ಸ್ಥಿತಾಂ ।
ಆಸೇದುರ್ಮಾರ್ಗಖಿನ್ನಾಸ್ತೇ ದ್ರೌಪದೀಪಂಚಮಾಸ್ತದಾ ॥ ೩ ॥
ತತ್ರೈವ ಚೋಪವಿಷ್ಟೋಽಭೂತ್ತದಾನೀಂ ಚಂಡಿಕಾಗಣಃ ।
ಬರ್ಬರೀಕಶ್ಚ ತಾನ್ವೀರಾನ್ಸಮಾಯಾತಾನಪಶ್ಯತ ॥ ೪ ॥
ಪರಂ ನಾಸೌ ವೇದ ಪಾಂಡೂನ್ಪಾಂಡವಾಸ್ತಂಚ ನೋ ವಿದುಃ ।
ಆಜನ್ಮ ಯಸ್ಮಾನ್ನೈವಾಭೂತ್ಪಾಂಡೂನಾಂ ಚಾಸ್ಯ ಸಂಗಮಃ ॥ ೫ ॥

---

## ಕನ್ನಡದ ಅನುವಾದ

### ಭೀಮೇಶ್ವರ ಮಾಹಾತ್ಮ್ಯವರ್ಣನ

೧-೨. ಸೂತನು ಹೇಳುತ್ತಾನೆ:—ಇಂತು ಭೀಮಪುತ್ರನಾದ ಘಟೋತ್ಕಚನ ಮಗನಾದ ಬರ್ಬರೀಕನು ಮಹೀಸಾಗರಸಂಗಮದಲ್ಲಿ ನಿಂತು ದೇವಿಯರ ಆರಾಧನೆಯಲ್ಲಿಯೂ, ಸಪ್ತಲಿಂಗಗಳ ಅರ್ಚನೆಯಲ್ಲಿಯೂ ನಿರತನಾಗಿರಲು, ಕೆಲವು ಕಾಲದ ಮೇಲೆ ಕಪಟದ್ಯೂತದಲ್ಲಿ ಸೋತವರಾಗಿ ಪಾಂಡವರು ಭೂಮಿಯನ್ನು ಸುತ್ತುತ್ತ ತೀರ್ಥಸ್ನಾನವನ್ನು ಮಾಡಲು ಅಲ್ಲಿಗೆ ಬಂದರು.

೩. ಅವರು ಮೊದಲೇ ಕ್ಷೇತ್ರದ ಈಶಾನ್ಯ ದಿಕ್ಕಿನಲ್ಲಿರುವ ಚಂಡಿಕಾದೇವಿಯನ್ನು ಕಂಡು ಸೇವಿಸಿದರು. ದ್ರೌಪದೀ ಸಹಿತರಾದ ಪಾಂಡವರು ದಾರಿಯನ್ನು ನಡೆದುದರಿಂದ ಮ್ಲಾನಮುಖರಾಗಿದ್ದರು.

೪. ಆ ಸಮಯದಲ್ಲಿ ಚಂಡಿಕಾಗಣವೂ ಅಲ್ಲಿಯೇ ಕುಳಿತಿದ್ದಿತು. ಮತ್ತು ಬರ್ಬರೀಕನೂ ಆ ವೀರರು ಬರುತ್ತಿದ್ದುದನ್ನು ಕಂಡನು.

೫. ಆದರೆ ಅವನು ಆಜನ್ಮ ಪ್ರಭೃತಿಯಾಗಿ ಪಾಂಡವರೊಡನೆ ಸಂಪರ್ಕವಿಲ್ಲದ ಕಾರಣದಿಂದ ಅವರು ಪಾಂಡವರೆಂಬುದನ್ನು ತಿಳಿಯಲಿಲ್ಲ. ಅವರೂ ಇವನನ್ನು ಅರಿಯರು.

ತತಃ ಪ್ರವಿಶ್ಯ ವೈ ತಸ್ಮಿನ್ದೇವೀಮಾಸಾದ್ಯ ಪಾಂಡವಾಃ ।
ಪಿಂಡಕಾದ್ಯಂ ತತ್ರ ಮುಕ್ತ್ವಾ ತೃಷಾ ಪ್ರೈಕ್ಷಿ ಜಲಂ ತದಾ ॥ ೬ ॥
ತತೋ ಭೀಮಃ ಕುಂಡಮಧ್ಯಂ ಜಲಂ ಪಾತುಂ ವಿವೇಶಹ ।
ಪ್ರವಿಶಂತಂ ಚ ತಂ ಪ್ರಾಹ ಯುಧಿಷ್ಠಿರ ಇದಂ ವಚಃ ॥ ೭ ॥
ಉದ್ಧೃತ್ಯ ಭೀಮ ತೋಯಂ ತ್ವಂ ಪಾದೌ ಪ್ರಕ್ಷಾಲ್ಯ ಭೋ ಬಹಿಃ ।
ತತಃ ಪಿಬಾನ್ಯಥಾ ದೋಷೋ ಮಹಾನ್ಸ್ತ್ವಾಮುಪಪತ್ಸ್ಯತೇ ॥ ೮ ॥
ಏತದ್ರಾಜ್ಞೋ ವಚೋ ಭೀಮಸ್ತೃಷಾ ವ್ಯಾಕುಲಲೋಚನಃ ।
ಅಶ್ರುತ್ವೈವ ವಿವೇಶಾಸೌ ಕುಂಡಮಧ್ಯಂ ಜಲೇಚ್ಛಯಾ ॥ ೯ ॥
ಸ ಚ ದೃಷ್ಟ್ವಾ ಜಲಂ ಪಾತುಂ ತತ್ರೈವ ಕೃತನಿಶ್ಚಯಃ ।
ಮುಖಂ ಹಸ್ತೌ ಚ ಚರಣೌ ಕ್ಷಾಲಯಾಮಾಸ ಶುದ್ಧಯೇ ॥ ೧೦ ॥
ಯತಃ ಪೀತಂ ಜಲಂ ಪುಂಸಾಮಪ್ರಕ್ಷಾಲ್ಯ ಚ ಯದ್ಭವೇತ್ ।
ಪ್ರೇತಾಃ ಪಿಶಾಚಾಸ್ತದ್ರೂಪಂ ಸಂಕ್ರಮ್ಯ ಪ್ರಪಿಬಂತಿ ತತ್ ॥ ೧೧ ॥
ಏವಂ ಪ್ರಕ್ಷಾಲಯಾನೇ ಚ ಪಾದೌ ತತ್ರ ವೃಕೋದರೇ ।
ಉಪರಿಸ್ಥಸ್ತದಾ ಪ್ರಾಹ ಸತ್ಯಂ ಸುಹೃದಯೋ ವಚಃ ॥ ೧೨ ॥

---

೬. ಪಾಂಡವರು ಕ್ಷೇತ್ರವನ್ನು ಪ್ರವೇಶಿಸಿ ದೇವಿಯನ್ನು ಪೂಜಿಸಿ ಯಥಾ ವಿಧಿಯಾಗಿ ಪಿಂಡದಾನಾದಿಗಳನ್ನು ನೆರವೇರಿಸಿ ಬಾಯಾರಿಕೆಯಿಂದ ಬಳಲಿ ಎದುರಿಗಿದ್ದ ಕುಂಡವನ್ನು ಕಂಡರು.

೭. ಆಗ ಭೀಮಸೇನನು ನೀರನ್ನು ಕುಡಿಯಲು ಕುಂಡದ ಮಧ್ಯಕ್ಕೆ ಇಳಿದನು. ನೀರನ್ನು ಹೊಗುವ ಅವನನ್ನು ಧರ್ಮರಾಜನು ಕುರಿತು ಇಂತೆಂದನು.

೮. ''ಎಲೈ ಭೀಮನೆ! ಮೊದಲು ನೀರನ್ನು ಮೇಲಕ್ಕೆ ತೆಗೆದುಕೊಂಡು ಕುಂಡದ ದಡದಮೇಲೆ ಪಾದಪ್ರಕ್ಷಾಲನೆಯನ್ನು ಮಾಡಿ ಬಳಿಕ ನೀರನ್ನು ಕುಡಿ. ಇಲ್ಲದಿದ್ದಲ್ಲಿ ನಿನಗೆ ದೊಡ್ಡ ದೋಷವು ಸಂಭವಿಸುವುದು.''

೯–೧೧. ಆದರೆ ಭೀಮನು ನೀರಡಿಕೆಯಿಂದ ತಿರುಗುತ್ತಿರುವ ಕಣ್ಣುಗಳು ಳ್ಳವನಾಗಿ ಈ ಯುಧಿಷ್ಠಿರನ ಮಾತುಗಳನ್ನು ಕೇಳದೆಯೇ ಜಲಾಶೆಯಿಂದ ಕುಂಡದ ಮಧ್ಯವನ್ನು ಪ್ರವೇಶಿಸಿದನು. ಮತ್ತು ಅಲ್ಲಿಯೇ ನೀರನ್ನು ಕುಡಿಯ ಲೆಳಸಿ ದೇಹಶುದ್ಧಿಗಾಗಿ ಕೈಕಾಲುಗಳನ್ನು ನೀರಿನಲ್ಲಿಯೇ ತೊಳೆಯುತ್ತಿದ್ದನು. ಕೈಕಾಲು ತೊಳೆಯದೆ ಮನುಷ್ಯರು ನೀರನ್ನು ಕುಡಿಯಲು ಅವರ ದೇಹಗಳನ್ನು ಪ್ರೇತರೂ ಪಿಶಾಚರೂ ಆಕ್ರಮಿಸಿಕೊಂಡು ಆ ನೀರನ್ನು ತಾವೇ ಸೇವಿಸುವರು.

೧೨. ಇಂತು ಭೀಮಸೇನನು ತನ್ನ ಪಾದಗಳನ್ನು ಕುಂಡದಲ್ಲಿ ತೊಳೆ ಯುತ್ತಿರಲು ಸುಹೃದಯನು ದಡದ ಮೇಲೆ ನಿಂತು ಸತ್ಯಸಮ್ಮತವಾದ ಈ ವಾಕ್ಯವನ್ನು ಹೇಳಿದನು.

ದುರ್ಮತೇ ಭೋಃ ಕಿಮೇತತ್ತ್ವಂ ಕುರುಷೇ ಪಾಪನಿಶ್ಚಯಃ ।
ದೇವೀಕುಂಡೇ ಕ್ಷಾಲಯಸಿ ಮುಖಂ ಪಾದೌ ಕರೌ ಚ ಯತ್ ॥ ೧೩ ॥
ಯತೋ ದೇವೀ ಸದಾನೇನ ಜಲೇನ ಸ್ನಾಪ್ಯತೇ ಮಯಾ ।
ತದತ್ರ ಪ್ರಕ್ಷಿಪಂಸ್ತೋಯಂ ಮಲಪಾಪಾನ್ನ ಬಿಭ್ಯಸಿ ॥ ೧೪ ॥
ಮಲಾಕ್ತತೋಯಂ ಯನ್ನಾಮ ಅಸ್ಪೃಶ್ಯಂ ತನ್ನರೈರಪಿ ।
ಕುತೋ ದೇವೈಶ್ಚ ತತ್ಪಾಪಂ ಸ್ಪೃಶ್ಯತೇ ತತ್ತ್ವತೋ ವದ ॥ ೧೫ ॥
ಶೀಘ್ರಂ ಚ ತ್ವಂ ನಿಃಸರಾಸ್ಮಾತ್ಕುಂಡಾದ್ಭೂತ್ವಾ ಬಹಿಃ ಪಿಬ ।
ಯದ್ಯೇವಂ ಪಾಪ ಮೂಢೋಽಸಿ ತೀರ್ಥೇಷು ಭ್ರಮಸೇ ಕುತಃ ॥ ೧೬ ॥

ಭೀಮ ಉವಾಚ:—

ಕಿಮೇತದ್ಭಾಷಸೇ ಕ್ರೂರ ಪರುಷಂ ರಾಕ್ಷಸಾಧಮ ।
ಯತಸ್ತೋಯಾನಿ ಜಂತೂನಾಮುಪಭೋಗಾರ್ಥಮೇವ ಹಿ ॥ ೧೭ ॥
ತೀರ್ಥೇಷು ಕಾರ್ಯಂ ಸ್ನಾನಂ ಚೇತ್ಯುಕ್ತಂ ಮುನಿವರ್ಯೈರಪಿ ।
ಅಂಗಪ್ರಕ್ಷಾಲನಂ ಸ್ನಾನಮುಕ್ತಂ ಮಾಂ ನಿಂದಸೇ ಕುತಃ ॥ ೧೮ ॥

---

೧೩–೧೪. "ಎಲೈ ದುರ್ಬುದ್ಧಿಯೆ! ಪಾಪಸಂಕಲ್ಪನಾದ ನೀನು ಏನು ಮಾಡುತ್ತಿರುವೆ? ಮುಖವನ್ನೂ ಕೈಕಾಲುಗಳನ್ನೂ ದೇವೀಕುಂಡದಲ್ಲಿ ತೊಳೆಯಬಹುದೆ? ನಾನು ಈ ಜಲದಿಂದಲೇ ನಿತ್ಯವೂ ದೇವಿಗೆ ಅಭಿಷೇಕವನ್ನು ಮಾಡುತ್ತಿರುವೆನು. ಈ ನೀರನ್ನು ಚೆಲ್ಲುತ್ತಿರುವ ನಿನಗೆ ಮಲಿನಮಾಡುವ ಪಾಪದ ಭಯವಿಲ್ಲವೆ?

೧೫. ಯಾವ ಉದಕವು ಮಲಸಂಬದ್ಧವಾಗಿರುವುದೊ, ಅದು ಮನುಷ್ಯರಿಂದಲೂ ಉಪಯೋಗಕ್ಕೆ ಅರ್ಹವಲ್ಲ. ಆದುದರಿಂದ ಆ ನೀರನ್ನು ದೇವತೆಗಳು ಹೇಗೆ ಸ್ವೀಕರಿಸುವರೆಂಬುದನ್ನು ನೀನೇ ನಿಜವಾಗಿ ಹೇಳು.

೧೬. ನೀನು ಬೇಗನೆ ಈ ಕುಂಡದಿಂದ ಹೊರಗೆ ಬಂದು ದಡದಿಂದ ನೀರನ್ನು ಪಾನಮಾಡು. ಎಲೈ ಪಾಪಿಯೆ! ಇಷ್ಟನ್ನು ತಿಳಿಯದ ಮೂಢನಾದ ನೀನು ತೀರ್ಥಯಾತ್ರೆಯನ್ನು ಏಕೆ ಮಾಡಬೇಕು?"

೧೭. ಭೀಮನು ಹೇಳುತ್ತಾನೆ:—"ಕ್ರೂರನಾದ ರಾಕ್ಷಸಾಧಮನೆ! ಏನನ್ನು ಬೊಗಳುತ್ತಿರುವೆ? ನಿನ್ನ ಮಾತುಗಳು ಬಹಳ ಕಠಿನಗಳಾಗಿರುವುವು. ಜಲವು ಜಂತುಗಳ ಪಾನಾರ್ಥವಾಗಿಯೇ ನಿರ್ಮಿತವಾಗಿರುವುದಲ್ಲವೆ?

೧೮. ತೀರ್ಥಗಳಲ್ಲಿ ಆವಶ್ಯಕವಾಗಿ ಸ್ನಾನವನ್ನು ಮಾಡಬೇಕೆಂದು ಮುನಿವರ್ಯರಿಂದಲೂ ಹೇಳಲ್ಪಟ್ಟಿರುವುದು. ಅಂಗಪ್ರಕ್ಷಾಲನೆಯೂ ಒಂದು ಬಗೆಯ ಸ್ನಾನವೆಂದೇ ಎಣಿಸಲ್ಪಟ್ಟಿದೆ. ಆದುದರಿಂದ ನನ್ನನ್ನೇಕೆ ನಿಂದಿಸುತ್ತಿರುವೆ?

ಯದಿ ನ ಕ್ರಿಯತೇ ಪಾನಮಂಗಪ್ರಕ್ಷಾಲನಂ ತಥಾ ।
ತತ್ಕಿಮರ್ಥಂ ಪೂರ್ತಧರ್ಮಾಃ ಕ್ರಿಯಂತೇ ಧರ್ಮಶಾಲಿಭಿಃ ॥ ೧೯ ॥
ಸುಹೃದಯ ಉವಾಚ :—
ಸ್ನಾತವ್ಯಂ ತೀರ್ಥಮುಖ್ಯೇಷು ಸತ್ಯಮೇತನ್ನ ಸಂಶಯಃ ।
ಚರೇಷು ಕಿಂ ತು ಸಂವಿಶ್ಯ ಸ್ಥಾವರೇಷು ಬಹಿಃ ಸ್ಥಿತಃ ॥ ೨೦ ॥
ಸ್ಥಾವರೇಷ್ವಪಿ ಸಂವಿಶ್ಯ ತನ್ನ ಸ್ನಾನಂ ವಿಧೀಯತೇ ।
ನ ಯತ್ರ ದೇವಸ್ನಾನಾರ್ಥಂ ಭಕ್ತೈಃ ಸಂಗೃಹ್ಯತೇ ಜಲಂ ॥ ೨೧ ॥
ಯಚ್ಚ ಹಸ್ತಶತಾದೂರ್ಧ್ವಂ ಸರಸ್ತತ್ರ ವಿಧೀಯತೇ ।
ಸಂವೇಶೇಽಪಿ ಕ್ರಮಶ್ಚಾಯಂ ಪಾದೌ ಪ್ರಕ್ಷಾಲ್ಯ ಯದ್ಬಹಿಃ ॥ ೨೨ ॥
ತತಃ ಸ್ನಾನಂ ಪ್ರಕರ್ತವ್ಯಮನ್ಯಥಾ ದೋಷ ಉಚ್ಯತೇ ।
ಕಿಂ ನ ಶ್ರುತಸ್ತ್ವಯಾ ಪ್ರೋಕ್ತಃ ಶ್ಲೋಕಃ ಪದ್ಮಭುವಾ ಪುರಾ ॥ ೨೩ ॥
ಮಲಂ ಮೂತ್ರಂ ಪುರೀಷಂ ಚ ಶ್ಲೇಷ್ಮ ನಿಷ್ಠೀವನಾಶ್ರು ಚ ।
ಗಂಡೂಷಾಶ್ಚೈವ ಮುಂಚಂತಿ ಯೇ ತೇ ಬ್ರಹ್ಮಹಣೈಃ ಸಮಾಃ ॥ ೨೪ ॥

---

೧೯. ಪಾನವೂ ಅಂಗಪ್ರಕ್ಷಾಲನವೂ ನಿಷೇಧಾರ್ಹಗಳೆಂದೆಣಿಸುವೆಯಾದರೆ ಧರ್ಮಾತ್ಮರಾದವರು ಪೂರ್ತಕರ್ಮಗಳೆನಿಸುವ ಕೆರೆಕುಂಟೆಗಳನ್ನು ನಿರ್ಮಿಸಲು ಕಾರಣವೇನು?''

೨೦–೨೧. ಸುಹೃದಯನು ಹೇಳುತ್ತಾನೆ:—''ತೀರ್ಥೋತ್ತಮಗಳಲ್ಲಿ ಸ್ನಾನವನ್ನು ಮಾಡಬೇಕೆಂಬ ನಿಯಮವಿರುವುದು ನಿಜ. ಸಂದೇಹವಿಲ್ಲ. ಆದರೆ ಚಲಿಸುವ ನೀರಿನಲ್ಲಿ ಇಳಿದೂ, ನಿಂತಿರುವ ನೀರಿನಲ್ಲಿ ದಡದಿಂದಲೂ ಸ್ನಾನ ಮಾಡಬೇಕೆಂಬ ನಿಯಮವಿರುವುದು. ನಿಂತ ನೀರಿನಲ್ಲಿಯೂ ಮುಳುಗಿ ಸ್ನಾನ ಮಾಡುವುದು ಶಾಸ್ತ್ರಸಮ್ಮತವಲ್ಲ. ಮತ್ತು ಭಕ್ತರು ದೇವರ ಅಭಿಷೇಕಕ್ಕಾಗಿ ಜಲವನ್ನು ಸಂಗ್ರಹಿಸುವ ವಾಪೀಕೂಪಗಳಲ್ಲಿಳಿಯಬಾರದು.

೨೨. ಆದರೂ ನೂರು ಹಸ್ತಗಳಿಗಿಂತ ಹೆಚ್ಚು ಆಳವಿರುವ ಸರೋವರಗಳಲ್ಲಿಳಿದು ಸ್ನಾನಮಾಡಬಹುದು. ಇಳಿಯುವಾಗಲೂ ಈ ಕ್ರಮವನ್ನು ಅನುಸರಿಸಬೇಕು. ಮೊದಲು ಹೊರಗೆ ಪಾದಗಳನ್ನು ತೊಳೆದುಕೊಳ್ಳಬೇಕು.

೨೩. ಬಳಿಕ ಸ್ನಾನವನ್ನಾಚರಿಸಬೇಕು. ಇಲ್ಲದಿದ್ದಲ್ಲಿ ದೋಷವೆಂದು ಹೇಳಲ್ಪಟ್ಟಿರುವುದು. ಪೂರ್ವದಲ್ಲಿ ಬ್ರಹ್ಮದೇವನಿಂದ ಹೇಳಲ್ಪಟ್ಟ ಶ್ಲೋಕವೊಂದು ನಿನ್ನ ಕಿವಿಗೆ ಬಿದ್ದಿಲ್ಲವೆ?

೨೪. 'ನೀರಿನಲ್ಲಿ ಬೆವರೇ ಮೊದಲಾದ ಮಲವನ್ನಾಗಲಿ, ಮೂತ್ರ, ಪುರೀಷ, ಶ್ಲೇಷ್ಮ, ಉಗುಳು, ಕಣ್ಣೀರು, ಬಾಯಿಮುಕ್ಕುಳಿಸಿದ ನೀರು— ಇವುಗಳನ್ನು ಯಾರು ಸೇರಿಸುವರೊ, ಅವರು ಬ್ರಹ್ಮಘಾತಕರಿಗೆ ಸಮಾನರಾದ ಪಾಪಿಗಳು.'

ತಸ್ಮಾನ್ನಿಸ್ಸರ ಶೀಘ್ರಂ ತ್ವಂ ಯದ್ಯೇವಮಜಿತೇಂದ್ರಿಯಃ ।
ತತ್ಕಿಮರ್ಥಂ ದುರಾಚಾರ ತೀರ್ಥೇಷ್ವಟಸಿ ಬಾಲಿಶ ॥ ೨೫ ॥
ಯಸ್ಯ ಹಸ್ತೌ ಚ ಪಾದೌ ಚ ಮನಶ್ಚೈವ ಸುಸಂಯತಂ ।
ನಿರ್ವಿಕಾರಾಃ ಕ್ರಿಯಾಃ ಸರ್ವಾಃ ಸ ಹಿ ತೀರ್ಥಫಲಂ ಲಭೇತ್ ॥ ೨೬ ॥

ಭೀಮ ಉವಾಚ :—

ಅಧರ್ಮೋ ವಾಪಿ ಧರ್ಮೋಽಸ್ತು ನಿರ್ಗಂತುಂ ನೈವ ಶಕ್ನುಯಾಂ ।
ಕ್ಷುಧಾ ತೃಷಾ ಮಯಾ ನಿತ್ಯಂ ವಾರಿತುಂ ನೈವ ಶಕ್ಯತೇ ॥ ೨೭ ॥

ಸುಹೃದಯ ಉವಾಚ :—

ಜೀವಿತಾರ್ಥೇ ಭವಾನ್ಕಸ್ಮಾತ್ಪಾಪಂ ಪ್ರಕುರುತೇ ವದ ।
ಕಿಂ ನ ಶ್ರುತಸ್ತ್ವಯಾ ಶ್ಲೋಕಃ ಶಿಬಿನಾ ಯಃ ಸಮೀರಿತಃ ॥ ೨೮ ॥
ಮುಹೂರ್ತಮಪಿ ಜೀವೇತ ನರಃ ಶುಕ್ಲೇನ ಕರ್ಮಣಾ ।
ನ ಕಲ್ಪಮಪಿ ಜೀವೇತ ಲೋಕದ್ವಯವಿರೋಧಿನಾ ॥ ೨೯ ॥

ಭೀಮ ಉವಾಚ :—

ಕಾಕಾರವೇಣ ತೇ ಮಹ್ಯಂ ಕರ್ಣೌ ಬಧಿರತಾಂ ಗತೌ ।
ಪಾಸ್ಯಾಮ್ಯೇವ ಜಲಂ ಚಾತ್ರ ಕಾಮಂ ವಿಲಪ ಶುಷ್ಯ ವಾ ॥ ೩೦ ॥

---

೨೫–೨೬. ಆದುದರಿಂದ ಬೇಗ ಹೊರಗೆ ಬಾ. ಇಷ್ಟು ಇಂದ್ರಿಯಸಂಯಮವಿಲ್ಲದ ನೀನು ದುರಾಚಾರಿಯೂ ಬಾಲಬುದ್ಧಿಯೂ ಆಗಿ ಏತಕ್ಕಾಗಿ ತೀರ್ಥಗಳನ್ನು ಸೇವಿಸುತ್ತಿರುವೆ? ಯಾವನ ಕೈಕಾಲುಗಳು ಶುದ್ಧವಾಗಿರುವವೊ, ಮನಸ್ಸು ಸಮಾಹಿತವಾಗಿರುವುದೊ, ಯಾವನ ಸಕಲಕಾರ್ಯಗಳೂ ಕಾಮದ್ವೇಷಗಳಿಲ್ಲದೆ ನಡೆಯುವುವೊ ಅವನೇ ತೀರ್ಥಸೇವನೆಯ ಫಲವನ್ನು ಹೊಂದುವನು.''

೨೭. ಭೀಮನು ಹೇಳುತ್ತಾನೆ:—''ಅಧರ್ಮವಾಗಲಿ, ಧರ್ಮವಾಗಲಿ, ನೀರಿನಿಂದ ಹೊರಗೆ ಬರಲು ನನಗೆ ಸಾಧ್ಯವಿಲ್ಲ. ಹಸಿವು ಬಾಯಾರಿಕೆಗಳನ್ನು ತಡೆಯಲು ನಾನು ಯಾವಾಗಲೂ ಸಮರ್ಥನಲ್ಲ.''

೨೮. ಸುಹೃದಯನು ಹೇಳುತ್ತಾನೆ:—''ಕೇವಲ ಪ್ರಾಣರಕ್ಷಣೆಗಾಗಿಯೇ ನೀನು ಪಾಪವನ್ನೇತಕ್ಕೆ ಮಾಡಬೇಕೆಂಬುದನ್ನು ಹೇಳು. ಪೂರ್ವದಲ್ಲಿ ಶಿಬಿ ಚಕ್ರವರ್ತಿಯು ಹೇಳಿದ ಈ ಶ್ಲೋಕವನ್ನು ನೀನು ಕೇಳಿಲ್ಲವೆ?

೨೯. 'ಮನುಷ್ಯನಾದವನು ಶುದ್ಧಕರ್ಮದಿಂದ ಮುಹೂರ್ತಮಾತ್ರ ಜೀವಿಸಿದರೂ ಒಳ್ಳೆಯದು. ಐಹಿಕಾಮುಷ್ಮಿಕ ಲೋಕಗಳೆರಡಕ್ಕೂ ವಿರೋಧಿಯಾದ ಪಾಪಕೃತ್ಯದಿಂದ ಕಲ್ಪಪ್ರಮಾಣದ ಆಯುಸ್ಸನ್ನೂ ಕಳೆಯಬಾರದು.' ''

೩೦. ಭೀಮನು ಹೇಳುತ್ತಾನೆ:—''ನಿನ್ನ ಕಾಗೆಯ ಕೂಗುಗಳಿಂದ ನನ್ನ ಕಿವಿಗಳೆರಡೂ ಕಿವುಡಾಗಿರುವುವು. ಖಂಡಿತವಾಗಿಯೂ ಇಲ್ಲಿ ನೀರನ್ನು ಕುಡಿಯುತ್ತೇನೆ. ನಿನ್ನ ಮನಸ್ಸಿಗೆ ಬಂದಂತೆ ಕೂಗಿಕೊಂಡು ಗಂಟಲನ್ನೊಣಗಿಸಿಕೊ.''

ಸುಹೃದಯ ಉವಾಚ:—

ಕ್ಷತ್ರಿಯಾಣಾಂ ಕುಲೇ ಜಾತಸ್ತ್ವಹಂ ಧರ್ಮಾಭಿರಕ್ಷಿಣಾಂ ।
ತಸ್ಮಾತ್ತೇ ಪಾತಕಂ ಕರ್ತುಂ ನ ದಾಸ್ಯಾಮಿ ಕಥಂಚನ ॥ ೩೧ ॥
ತದ್ವರಾಕಾಥ ಶೀಘ್ರಂ ತ್ವಮಸ್ಮಾತ್ಕುಂಡಾದ್ವಿನಿಃಸರ ।
ಇಷ್ಟಕಾಶಕಲೈಃ ಶೀಘ್ರಂ ಚೂರ್ಣಯಿಷ್ಯೇಽನ್ಯಥಾ ಶಿರಃ ॥ ೩೨ ॥
ಇತ್ಯುಕ್ತ್ವಾ ಚೇಷ್ಟಕಾಂ ಗೃಹ್ಯ ಮುಮೋಚ ಶಿರಸಃ ಪ್ರತಿ ।
ಭೀಮಶ್ಚ ವಂಚಯಿತ್ವಾ ತಾಮಾಪ್ಲುತ್ಯ ಬಹಿರಾವ್ರಜತ್ ॥ ೩೩ ॥
ಭರ್ತ್ಸಯಂತೌ ತತಶ್ಚೋಭಾವನ್ಯೋಽನ್ಯಂ ಭೀಮವಿಕ್ರಮೌ ।
ಯುಯುಧಾತೇ ಪ್ರಲಂಬಾಭ್ಯಾಂ ಬಾಹುಭ್ಯಾಂ ಯುದ್ಧಪಾರಗೌ ॥೩೪॥
ವ್ಯೂಢೋರಸ್ಕೌ ದೀರ್ಘಭುಜೌ ನಿಯುದ್ಧಕುಶಲಾವುಭೌ ।
ಮುಷ್ಟಿಭಿಃ ಪಾರ್ಷ್ಣಿಘಾತೈಶ್ಚ ಜಾನುಭಿಶ್ಚಾಭಿಜಘ್ನತುಃ ॥ ೩೫ ॥
ತತೋ ಮುಹೂರ್ತಾತ್ಕೌರವ್ಯಃ ಪರ್ಯಹೀಯತ ಪಾಂಡವಃ ॥ ೩೬ ॥
ಹೀಯಮಾನಸ್ತತೋ ಭೀಮ ಉದ್ಯತೋಽಭೂತ್ಪುನಃ ಪುನಃ ।
ಅಹೀಯತ ತತೋಽಪ್ಯಂಗೇ ವವೃಧೇ ಬರ್ಬರೀಕಕಃ ॥ ೩೭ ॥

---

೩೧. ಸುಹೃದಯನು ಹೇಳುತ್ತಾನೆ:—“ಧರ್ಮವನ್ನು ಪಾಲಿಸುವ ಕ್ಷತ್ರಿಯೋತ್ತಮರ ಕುಲದಲ್ಲಿ ನಾನು ಜನ್ಮವನ್ನು ತಾಳಿರುವೆನು. ಆದುದರಿಂದ ನೀನು ಈ ಪಾಪಕಾರ್ಯವನ್ನು ಮಾಡಲು ಎಂದಿಗೂ ಸಮ್ಮತಿಸುವುದಿಲ್ಲ.

೩೨. ಎಲೈ ನೀಚನೆ! ಬೇಗನೆ ಈ ದೇವೀಕುಂಡದಿಂದ ಹೊರಕ್ಕೆ ಬಾ. ಇಲ್ಲದಿದ್ದಲ್ಲಿ ನಿನ್ನ ತಲೆಯನ್ನು ಇಟ್ಟಿಗೆಯ ಚೂರುಗಳಿಂದ ಚೂರ್ಣಿಸುತ್ತೇನೆ.”

೩೩. ಇಂತೆಂದು ಒಂದು ಇಟ್ಟಿಗೆಯನ್ನು ತೆಗೆದುಕೊಂಡು ಭೀಮಸೇನನ ತಲೆಗೆ ಗುರಿಯಿಟ್ಟು ಬೀಸಿದನು. ಭೀಮನೂ ಅದನ್ನು ಉಪಾಯದಿಂದ ತಪ್ಪಿಸಿಕೊಂಡು ದಡದ ಮೇಲಕ್ಕೆ ಹಾರಿಬಂದನು.

೩೪–೩೫. ಬಳಿಕ ಅಪಾರ ಪರಾಕ್ರಮಿಗಳೂ ಯುದ್ಧವಿಶಾರದರೂ ಆದ ಅವರಿಬ್ಬರೂ ಅನ್ಯೋನ್ಯವಾಗಿ ಹೀಯಾಳಿಸುತ್ತ ಆಜಾನುಗಳಾದ ತಮ್ಮ ಬಾಹುಗಳಿಂದ ಯುದ್ಧಮಾಡತೊಡಗಿದರು. ಇಬ್ಬರೂ ವಿಶಾಲವಾದ ಎದೆಯುಳ್ಳವರು; ದೀರ್ಘಬಾಹುಗಳು; ಮಲ್ಲಯುದ್ಧದಲ್ಲಿ ನಿಪುಣರು. ಮುಷ್ಟಿಗಳಿಂದಲೂ, ಹಿಮ್ಮಡಿಗಳ ಒದೆಗಳಿಂದಲೂ, ಮೊಣಕಾಲುಗಳ ಗುದ್ದಾಟದಿಂದಲೂ ಹೋರಾಡಿದರು.

೩೬–೩೭. ಒಂದು ಮುಹೂರ್ತವಾದಮೇಲೆ ಭೀಮಸೇನನ ಬಲವು ಕಡಮೆಯಾಗತೊಡಗಿತು. ಕ್ಷೀಣಬಲನಾದ ಭೀಮನು ಶತ್ರುವನ್ನು ನಿಗ್ರಹಿಸಲು ಮತ್ತೆ ಮತ್ತೆ ಪ್ರಯತ್ನಿಸಿದನು. ಆದರೆ ಬರ್ಬರೀಕನ ಬಲವು ಮಾತ್ರ ಕಡಿಮೆಯಾಗದೆ ಕ್ಷಣಕ್ಷಣಕ್ಕೂ ವೃದ್ಧಿಯಾಗುತ್ತಿತ್ತು.

ತತೋ ಭೀಮಂ ಸಮುತ್ಪಾಟ್ಯ ಬರ್ಬರೀಕೋ ಬಲಾದಿವ ।
ನಿಕ್ಷಿಪೇಷ ತತಃ ಕೃದ್ಧಸ್ತದದ್ಭುತಮಿವಾಭವತ್ ॥ ೩೮ ॥
ಮೂರ್ಛಿತಂ ಚೈವಮಾದಾಯ ವಿಸ್ಫುರಂತಂ ಪುನಃ ಪುನಃ ।
ಸಾಗರಾಯ ಪ್ರಚಲಿತಃ ಕ್ಷೇಪ್ತುಂ ತತ್ರ ಮಹಾಂಭಸಿ ॥ ೩೯ ॥
ದದೃಶುಃ ಪಾಂಡವಾ ನೈತದ್ದೇವ್ಯಾ ನಯನಯಂತ್ರಿತಾಃ ॥ ೪೦ ॥

ತಥಾ ಗೃಹೀತೇ ಕುರುವೀರಮುಖ್ಯೇ
ವೀರೇಣ ತೇನಾದ್ಭುತವಿಕ್ರಮೇಣ ।
ಆಶ್ಚರ್ಯಮಾಸೀದ್ದಿವಿ ದೇವತಾನಾಂ
ದೇವೀಭಿರಾಕಾಶತಲೇ ನಿರೀಕ್ಷ್ಯ ತಂ ॥ ೪೧ ॥

ಸಾಗರಸ್ಯ ತತಸ್ತೀರೇ ಬರ್ಬರೀಕಂ ಗತಂ ತದಾ ।
ನಿರೀಕ್ಷ್ಯ ಭಗವಾನ್ರುದ್ರೋ ವಿಯತ್ಸ್ಥಃ ಸಮಭಾಷತ ॥ ೪೨ ॥
ಭೋ ಭೋ ರಾಕ್ಷಸ ಶಾರ್ದೂಲ ಬರ್ಬರೀಕ ಮಹಾಬಲ ।
ಮುಂಚೈನಂ ಭರತಶ್ರೇಷ್ಠಂ ಭೀಮಂ ತವ ಪಿತಾಮಹಂ ॥ ೪೩ ॥

---

೩೮. ಆಗ ಬರ್ಬರೀಕನು ಬಲದಿಂದ ಭೀಮಸೇನನನ್ನು ಮೇಲಕ್ಕೆತ್ತಿ ಭೂಮಿಯಲ್ಲಿ ಕೋಪದಿಂದ ಅಪ್ಪಳಿಸಿದನು. ಈ ಕಾರ್ಯವು ಮಹಾದ್ಭುತವಾಗಿ ಕಂಡಿತು.

೩೯. ಇಂತು ಮೂರ್ಛೆಗೊಂಡು ಅಡಿಗಡಿಗೂ ನಡುಗುತ್ತಿರುವ ಭೀಮನನ್ನು ಎತ್ತಿಕೊಂಡು ಮಹಾಸಮುದ್ರದಲ್ಲಿ ಬಿಸುಡಲು ಸಮುದ್ರತೀರದ ಕಡೆಗೆ ನಡೆದನು.

೪೦. ಚಂಡಿಕಾದೇವಿಯ ಮಹಿಮೆಯಿಂದ ಕಣ್ಣುಕಾಣದವರಾಗಿ ಪಾಂಡವರು ಇದನ್ನೆಲ್ಲ ಗಮನಿಸಲೇ ಇಲ್ಲ.

೪೧. ವೀರನೂ ಅದ್ಭುತಪರಾಕ್ರಮಿಯೂ ಆದ ಬರ್ಬರೀಕನು ಕುರುವೀರಾಗ್ರಣಿಯಾದ ಭೀಮಸೇನನನ್ನು ಎತ್ತಿಕೊಂಡು ಹೋಗುತ್ತಿರಲು ತಮ್ಮ ಪತ್ನಿಯರೊಡನೆ ಆಕಾಶಮಾರ್ಗದಲ್ಲಿ ಸಂಚರಿಸುತ್ತಿದ್ದ ದೇವತೆಗಳಿಗೂ ಪರಮಾಶ್ಚರ್ಯವೆನಿಸಿತು.

೪೨. ಇಂತು ಭೀಮನ ಶರೀರದೊಡನೆ ಸಮುದ್ರತೀರವನ್ನು ಸೇರಿ ನಿಂತ ಬರ್ಬರೀಕನನ್ನು ಕಂಡು ಭಗವಂತನಾದ ರುದ್ರನು ಆಕಾಶದಲ್ಲಿ ನಿಂತು ಅವನಿಗೆ ಹೇಳತೊಡಗಿದನು.

೪೩. "ಎಲೈ ರಾಕ್ಷಸಶ್ರೇಷ್ಠನೆ! ಮಹಾಬಲಿಷ್ಠನಾದ ಬರ್ಬರೀಕನೆ! ಭರತಕುಲತಿಲಕನೂ ನಿನ್ನ ತಾತನೂ ಆದ ಈ ಭೀಮಸೇನನನ್ನು ಬಿಟ್ಟುಬಿಡು.

ಅಯಂ ಹಿ ತೀರ್ಥಯಾತ್ರಾಯಾಂ ವಿಚರನ್ಭ್ರಾತೃಭಿರ್ಯುತಃ ।
ಕೃಷ್ಣಯಾ ಚಾಪ್ಯದಸ್ತೀರ್ಥಂ ಸ್ನಾತುಮೇವಾಭ್ಯುಪಾಯಯೌ ॥ ೪೪ ॥
ಸಮ್ಮಾನಂ ಸರ್ವಥಾ ತಸ್ಮಾದರ್ಹಃ ಕೌರವನಂದನಃ ।
ಅಪಾಪೋ ವಾ ಸಪಾಪೋ ವಾ ಪೂಜ್ಯ ಏವ ಪಿತಾಮಹಃ ॥ ೪೫ ॥

ಸೂತ ಉವಾಚ :—

ಇತಿ ರುದ್ರವಚಃ ಶ್ರುತ್ವಾ ಸಹಸಾ ತಂ ವಿಮುಚ್ಯ ಸಃ ।
ನ್ಯಪತತ್ಪಾದಯೋರ್ಹಾ ಧಿಕ್ಕಷ್ಟಂ ಕಷ್ಟಂ ಚ ಪ್ರಾಹ ಸಃ ॥ ೪೬ ॥
ಕ್ಷಮ್ಯತಾಂ ಕ್ಷಮ್ಯತಾಂ ಚೇತಿ ಪುನಃ ಪುನರವೋಚತ ।
ಶಿರಶ್ಚ ತಾಡಯನ್ಸ್ವೀಯಂ ರುರೋದ ಚ ಮುಹುರ್ಮುಹುಃ ॥ ೪೭ ॥
ತಂ ತಥಾ ಪರಿಶೋಚಂತಂ ಮುಹ್ಯಮಾನಂ ಮುಹುರ್ಮುಹುಃ ।
ಭೀಮಸೇನಃ ಸಮಾಲಿಂಗ್ಯ ಆಘ್ರಾಯ ಚ ವಚೋಽಬ್ರವೀತ್ ॥ ೪೮ ॥
ವಯಂ ತ್ವಾಂ ನೈವ ಜಾನೀಮಸ್ತ್ವಂ ಚಾಸ್ಮಾನ್ಜನ್ಮಕಾಲತಃ ।
ಅತ್ರ ವಾಸಶ್ಚ ತೇ ಪುತ್ರ ಭೈಮೇಃ ಕೃಷ್ಣಾಚ್ಚ ಸಂಶ್ರುತಃ ॥ ೪೯ ॥

---

೪೪. ಇವನು ಸಹೋದರರನ್ನೂ ದ್ರೌಪದಿಯನ್ನೂ ಕೂಡಿಕೊಂಡು ತೀರ್ಥಯಾತ್ರೆಗಳನ್ನು ಮಾಡುತ್ತ ಈ ತೀರ್ಥದಲ್ಲಿ ಸ್ನಾನಮಾಡಲು ಪ್ರಾಪ್ತನಾದನು.

೪೫. ಆದುದರಿಂದ ಇವನು ಸರ್ವಥಾ ನಿನ್ನ ಉಪಕಾರಕ್ಕೆ ಅರ್ಹನು. ನಿಷ್ಪಾಪನಾಗಲಿ ಪಾಪಿಯಾಗಲಿ ಪಿತಾಮಹನು ಯಾವಾಗಲೂ ಮರ್ಯಾದೆಗೆ ಅರ್ಹನು.''

೪೬. ಸೂತನು ಹೇಳುತ್ತಾನೆ:—ಇಂತೆಂದ ಮಹೇಶ್ವರನ ಮಾತುಗಳನ್ನು ಕೇಳಿ ಆ ಕ್ಷಣದಲ್ಲಿಯೇ ಭೀಮನನ್ನು ಬಿಟ್ಟು "ಅಯ್ಯೋ! ಕಷ್ಟವು, ಕಷ್ಟವು" ಎಂದು ಹೇಳುತ್ತ ಆತನ ಪಾದಗಳಲ್ಲಿ ಹೊರಳಾಡಿದನು.

೪೭. ಮತ್ತೆ ಮತ್ತೆ ತನ್ನನ್ನು ಕ್ಷಮಿಸಬೇಕೆಂದು ಬೇಡಿಕೊಳ್ಳುತ್ತ ತನ್ನ ತಲೆಯನ್ನು ಕುಟ್ಟಿಕೊಂಡು ಪದೇ ಪದೇ ರೋದನಮಾಡುತ್ತಿದ್ದನು.

೪೮. ಇಂತು ಶೋಕಿಸುತ್ತ ಅಡಿಗಡಿಗೂ ಮೂರ್ಛಿತನಾಗುತ್ತಿದ್ದ ಬರ್ಬರೀಕನನ್ನು ಭೀಮಸೇನನು ಆಲಿಂಗಿಸಿಕೊಂಡು ತಲೆಯನ್ನು ಮೂಸಿ ನೋಡುತ್ತ ಮಾತನಾಡಿದನು.

೪೯. "ನಾವು ನಿನ್ನನ್ನು ನೋಡಿದವರೇ ಅಲ್ಲ. ನೀನೂ ಹುಟ್ಟಿದಂದಿನಿಂದ ನಮ್ಮನ್ನೂ ಕಂಡಿಲ್ಲ. ನೀನು ಇಲ್ಲಿ ವಾಸಮಾಡುತ್ತಿರುವ ಸಂಗತಿಯನ್ನು ಮಾತ್ರ ಘಟೋತ್ಕಚನಿಂದಲೂ ಶ್ರೀಕೃಷ್ಣನಿಂದಲೂ ತಿಳಿದಿದ್ದೆವು.

**ಪರಂ ನೋ ವಿಸ್ಮೃತಂ ಸರ್ವಂ ನಾನಾದುಃಖೈಃ ಪ್ರಮುಹ್ಯತಾಂ ।**
**ದುಃಖಿತಾನಾಂ ಯತಃ ಸರ್ವಾ ಸ್ಮೃತಿರ್ಲುಪ್ತಾ ಭವೇತ್ಸ್ಫುಟಂ ॥ ೫೦ ॥**
**ತದಸ್ಮಾಕಮಿದಂ ದುಃಖಂ ಸರ್ವಂ ಕಾಲವಿಧಾನತಃ ।**
**ಮಾ ಶೋಚಸ್ತ್ವಂ ಚ ತನಯ ನ ತೇ ದೋಷೋಽಸ್ತಿ ಚಾಣ್ವಪಿ ॥ ೫೧ ॥**
**ಯತಃ ಸರ್ವಃ ಕ್ಷತ್ರಿಯಸ್ಯ ದಂಡ್ಯೋ ವಿಪಥಿ ಸಂಸ್ಥಿತಃ ।**
**ಆತ್ಮಾಪಿ ದಂಡ್ಯಂ ಸಾಧೂನಾಂ ಪ್ರವೃತ್ತಃ ಕುಪಥಾದ್ಯದಿ ॥ ೫೨ ॥**
**ಪಿತೃಮಾತೃಸುಹೃದ್ಭ್ರಾತೃಪುತ್ರಾದೀನಾಂ ಕಿಮುಚ್ಯತೇ ।**
**ಅತೀವ ಮಮ ಹರ್ಷೋಽಯಂ ಧನ್ಯೋಽಹಂ ಪೂರ್ವಜಾಶ್ಚ ನೋ ॥**
**ಯಸ್ಯ ತ್ವೀದೃಶಕಃ ಪೌತ್ರೋ ಧರ್ಮಜ್ಞೋ ಧರ್ಮಪಾಲಕಃ ।**
**ವರಾರ್ಹಸ್ತ್ವಂ ಪ್ರಶಂಸಾರ್ಹೋ ಭವಾನ್ಯೇಷಾಂ ಸತಾಂ ತಥಾ ॥ ೫೪ ॥**
**ತಸ್ಮಾಚ್ಛೋಕಂ ವಿಹಾಯೇಮಂ ಸ್ವಸ್ಥೋ ಭವಿತುಮರ್ಹಸಿ ॥ ೫೫ ॥**

**ಬರ್ಬರೀಕ ಉವಾಚ :—**

**ಪಾಪಂ ಮಾಂ ತಾತತಾತ ತ್ವಂ ಬ್ರಹ್ಮಘ್ನಾದಪಿ ಕುತ್ಸಿತಂ ।**
**ಅಪ್ರಶಸ್ಯಂ ನಾರ್ಹಸೀಹ ದ್ರಷ್ಟುಂ ಸ್ಪ್ರಷ್ಟುಮಪಿ ಪ್ರಭೋ ॥ ೫೬ ॥**

---

೫೦. ಆದರೆ ಅನೇಕ ದುಃಖಗಳ ಮಧ್ಯದಲ್ಲಿ ಮೋಹಗೊಂಡವರಾದುದ ರಿಂದ ಈ ವಿಷಯವು ನಮ್ಮ ನೆನಪಿಗೇ ಬರಲಿಲ್ಲ. ದುಃಖಾಭಿಭೂತರಾದವರಿಗೆ ಸಕಲ ಸ್ಮೃತಿಯೂ ನಾಶವಾಗುವುದೆಂಬುದು ದಿಟವು.

೫೧–೫೨. ಆದುದರಿಂದ ನಮಗೂ ಕಾಲದಮಹಿಮೆಯಿಂದಲೇ ಈ ದುಃಖ ವೆಲ್ಲವೂ ಪ್ರಾಪ್ತವಾಗಿರುವುದು. ಎಲೈ ಪುತ್ರನೆ! ನೀನು ಶೋಕಪಡಬೇಕಾದ ಕಾರಣವಿಲ್ಲ. ನಿನ್ನಲ್ಲಿ ಸ್ವಲ್ಪವಾದರೂ ದೋಷವೆಂಬುದಿಲ್ಲ. ಏಕೆಂದರೆ ಕುಮಾರ್ಗ ದಲ್ಲಿ ನಡೆಯುವವರೆಲ್ಲರೂ ಕ್ಷತ್ರಿಯನ ದಂಡನೆಗೆ ಅರ್ಹರು. ಸಾಧುಗಳು ಕಾಪಥದಲ್ಲಿ ಹೋಗಲೆಳಸುವ ತಮ್ಮ ಆತ್ಮನನ್ನೂ ಕೂಡ ದಂಡಿಸಬೇಕು.

೫೩–೫೫. ಇನ್ನು ತಂದೆತಾಯಿಗಳು, ಸ್ನೇಹಿತರು, ಸಹೋದರರು, ಮಕ್ಕಳು ಮುಂತಾದವರನ್ನು ದಂಡಿಸಬೇಕೆಂದು ಬೇರೆ ಹೇಳಲೇಕೆ? ನನಗೆ ಈ ವಿಷಯ ದಲ್ಲಿ ಅತ್ಯಂತ ಸಂತೋಷವುಂಟಾಗಿರುವುದು. ಧರ್ಮಜ್ಞನೂ, ಧರ್ಮರಕ್ಷಕನೂ ಆದ ಇಂಥ ಪೌತ್ರನನ್ನು ಪಡೆದುದರಿಂದ ನಾನೇ ಧನ್ಯನು. ನನ್ನ ಪೂರ್ವಜರೂ ಕೃತಾರ್ಥರು. ನೀನು ಇತರ ಸತ್ಪುರುಷರಿಗೂ ಹೀಗೆಯೇ ವರಾರ್ಹನೂ ಪ್ರಶಂಸಾ ಪಾತ್ರನೂ ಆಗಿ ಬಾಳು. ನೀನು ಈ ಶೋಕವನ್ನು ಬಿಟ್ಟು ಸ್ವಸ್ಥಚಿತ್ತನಾಗಿರು.''

೫೬. ಬರ್ಬರೀಕನು ಹೇಳುತ್ತಾನೆ:—''ಪಿತಾಮಹನೆ! ಪಾಪಿಯೂ, ಬ್ರಹ್ಮ ಘಾತಕನಿಗಿಂತಲೂ ನೀಚನೂ, ನಿಂದನೀಯನೂ ಆದ ನನ್ನನ್ನು ನೋಡುವುದಕ್ಕೂ ಮುಟ್ಟುವುದಕ್ಕೂ ನೀನು ಅರ್ಹನಲ್ಲ.

ಸರ್ವೇಷಾಮೇವ ಪಾಪಾನಾಂ ನಿಷ್ಕೃತಿಃ ಪ್ರೋಚ್ಯತೇ ಬುಧೈಃ ।
ಪಿತ್ರೋರಭಕ್ತಸ್ಯ ಪುನರ್ನಿಷ್ಕೃತಿರ್ನೈವ ವಿದ್ಯತೇ ॥ ೫೭ ॥
ತದ್ಯೇನ ದೇಹೇನ ಮಯಾ ತಾತತಾತೋಽಭಿಪೀಡಿತಃ ।
ತತ್ಸ್ವಮೇವ ಸಮುತ್ಸ್ರಕ್ಷ್ಯೇ ಮಹೀಸಾಗರಸಂಗಮೇ ॥ ೫೮ ॥
ನೈವಂ ಭವೇಯಮನ್ಯೇಷು ಅಪಿ ಜನ್ಮಸು ಪಾತಕೀ ।
ನ ಮಾಮಸ್ಮಾದಭಿಪ್ರಾಯಾದರ್ಹಃ ಕೋಽಪಿ ನಿವರ್ತಿತುಂ ॥ ೫೯ ॥
ಯತೋಽಂಶೇನ ವಿಲುಪ್ಯೇತ ಪ್ರಾಯಶ್ಚಿತ್ತಾನ್ನಿವಾರಕಃ ॥ ೬೦ ॥
ಏವಮುಕ್ತ್ವಾ ಸಮುತ್ಪ್ಲುತ್ಯ ಯಯೌ ಚೈವಾರ್ಣವಂ ಬಲೀ ।
ಸಮುದ್ರೋಽಪಿ ಚಕಂಪೇ ಚ ಕಥಮೇನಂ ನಿಹನ್ಮ್ಯಹಂ ॥ ೬೧ ॥
ತತಃ ಸಿದ್ಧಾಂಬಿಕಾದ್ಯಾಶ್ಚ ದೇವ್ಯಸ್ತತ್ರ ಚತುರ್ದಶ ।
ಸಮಾಲಿಂಗ್ಯ ಚ ಸಂಸ್ಥಾಪ್ಯ ರುದ್ರೇಣ ಸಹಿತಾ ಜಗುಃ ॥ ೬೨ ॥
ಅಜ್ಞಾತವಿಹಿತೇ ಪಾಪೇ ನಾಸ್ತಿ ವೀರೇಂದ್ರ ಕಲ್ಮಷಂ ।
ಶಾಸ್ತ್ರೇಷೂಕ್ತಮಿದಂ ವಾಕ್ಯಂ ನಾನ್ಯಥಾ ಕರ್ತುಮರ್ಹಸಿ ॥ ೬೩ ॥

---

೫೭. ಜ್ಞಾನಿಗಳಿಂದ ಸಕಲವಿಧಗಳಾದ ಪಾಪಗಳಿಗೂ ಪ್ರಾಯಶ್ಚಿತ್ತವು ಹೇಳಲ್ಪಟ್ಟಿರುವುದು. ತಂದೆತಾಯಿಗಳಲ್ಲಿ ಮಾಡಿದ ಅವಮರ್ಯಾದೆಗೆ ಮಾತ್ರ ಪ್ರಾಯಶ್ಚಿತ್ತವು ಎಲ್ಲಿಯೂ ಕಾಣಲಿಲ್ಲ.

೫೮. ಆದುದರಿಂದ ನಾನು ಯಾವ ಶರೀರದಿಂದ ನನ್ನ ಪಿತಾಮಹನನ್ನು ಹಿಂಸೆಗೊಳಿಸಿದೆನೊ, ಅದನ್ನು ನಾನೇ ಮಹೀಸಾಗರಸಂಗಮದಲ್ಲಿ ತ್ಯಜಿಸುತ್ತೇನೆ.

೫೯–೬೦. ನಾನು ಮುಂದಿನ ಜನ್ಮಗಳಲ್ಲಿ ಈ ವಿಧವಾದ ಪಾಪವನ್ನು ಮಾಡದಂತಾಗಲಿ. ಈ ನನ್ನ ನಿಶ್ಚಯದಿಂದ ನನ್ನನ್ನು ಯಾರೂ ಹಿಂದಿರುಗಿಸಲಾರರು. ಏಕೆಂದರೆ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಲೆಳಸುವವನನ್ನು ನಿವಾರಿಸಿದವನು ಸದ್ಗತಿಯಿಂದ ಚ್ಯುತನಾಗುವನು."

೬೧. ಇಂತೆಂದು ಬಲಿಷ್ಠನಾದ ಬರ್ಬರೀಕನು ಮೇಲಕ್ಕೆದ್ದು ಸಮುದ್ರದ ಬಳಿಗೆ ನಡೆದನು. ಸಮುದ್ರರಾಜನೂ ಕೂಡ "ಇವನನ್ನು ಹೇಗೆ ಸಂಹರಿಸಲಿ" ಎಂದು ಯೋಚಿಸುತ್ತ ನಡುಗಿದನು.

೬೨. ಆಗ ಸಿದ್ಧಾಂಬಿಕೆಯೂ ಅಲ್ಲಿ ನೆರೆದಿದ್ದ ಹದಿನಾಲ್ಕು ದೇವಿಯರೂ ಮಹೇಶ್ವರನೊಡನೆ ಸೇರಿ ಅವನನ್ನು ಆಲಿಂಗಿಸಿ ತಡೆದು ಸಮಾಧಾನ ಮಾಡಿದರು.

೬೩. "ಎಲೈ ವೀರಶಿಖಾಮಣಿಯೆ! ಅಜ್ಞಾನದಿಂದ ಮಾಡಿದ ಪಾಪಗಳಿಗೆ ಪ್ರಾಯಶ್ಚಿತ್ತವು ಅರ್ಹವಲ್ಲ. ಅವುಗಳಲ್ಲಿ ದೋಷವೇ ಇಲ್ಲ. ಇದನ್ನು ಶಾಸ್ತ್ರಗಳಲ್ಲಿ ಹೇಳಿರುವರು. ನೀನು ವಿಪರೀತವಾಗಿ ನಡೆಯಬಾರದು.

ಅಮುಂ ಚ ಪೃಷ್ಠಲಗ್ನಂ ತ್ವಂ ಪಶ್ಯ ಭೋಃ ಸ್ವಂ ಪಿತಾಮಹಂ ।
ಪುತ್ರಪುತ್ರೇತಿ ಭಾಷಂತಮನು ತ್ವಾ ಮರಣೋನ್ಮುಖಂ ॥ ೬೪ ॥
ಅಧುನಾ ಚೇತ್ಸ್ವಕಂ ದೇಹಂ ವೀರ ತ್ವಂ ಪರಿತ್ಯಕ್ಷ್ಯಸಿ ।
ತತಸ್ತ್ಯಕ್ಷ್ಯತಿ ಭೀಮೋಽಪಿ ಪಾತಕಂ ತನ್ಮಹತ್ತವ ॥ ೬೫ ॥
ಏವಂ ಜ್ಞಾತ್ವಾ ಧಾರಯ ತ್ವಂ ಸ್ವಶರೀರಂ ಮಹಾಮತೇ ।
ಅಥ ಚೇತ್ತ್ಯಕ್ತುಕಾಮಸ್ತ್ವಂ ತತ್ರಾಪಿ ವಚನಂ ಶೃಣು ॥ ೬೬ ॥
ಸ್ವಲ್ಪೇನೈವ ಚ ಕಾಲೇನ ಕೃಷ್ಣಾದ್ದೇವಕಿನಂದನಾತ್ ।
ದೇಹಪಾತಸ್ತವ ಪ್ರೋಕ್ತಸ್ತಂ ಪ್ರತೀಕ್ಷ ಯದೀಚ್ಛಸಿ ॥ ೬೭ ॥
ಯತೋ ವಿಷ್ಣುಕರಾದ್ವತ್ಸ ದೇಹಪಾತೋ ವಿಶಿಷ್ಯತೇ ।
ತಸ್ಮಾತ್ಪ್ರತೀಕ್ಷ ತಂ ಕಾಲಮಸ್ಮಾಕಂ ಪ್ರಾರ್ಥನೇನ ಚ ॥ ೬೮ ॥
ಏವಮುಕ್ತೋ ನಿವವೃತೇ ಬರ್ಬರೀಕೋಽಪಿ ದುರ್ಮನಾಃ ।
ರುದ್ರಂ ದೇವೀಶ್ಚ ಚಾಮುಂಡಾಂ ಸೋಪಾಲಂಭಂ ವಚೋಽಬ್ರವೀತ್ ॥

---

೬೪. ನಿನ್ನ ಬೆನ್ನಹಿಂದೆಯೇ ಓಡಿಬರುತ್ತಿರುವ ನಿನ್ನ ತಾತನನ್ನು ನೋಡಿದೆಯಾ? ಅವನೂ "ಮಗನೆ! ಮಗನೆ!" ಎಂದು ಕೂಗುತ್ತ ನಿನ್ನೊಡನೆ ತಾನೂ ಪ್ರಾಣಗಳನ್ನು ಬಿಡಲು ಸಿದ್ಧನಾಗಿ ಬಂದಿರುವನು.

೬೫. ಎಲೈ ವೀರನೆ! ಈಗ ನೀನು ನಿನ್ನ ದೇಹವನ್ನು ತ್ಯಜಿಸುವೆಯಾದರೆ ಭೀಮನೂ ತನ್ನ ಪ್ರಾಣಗಳನ್ನು ಬಿಡುವನು. ಅದರಿಂದ ನಿನಗೆ ಹಿರಿದಾದ ಪಾಪವುಂಟಾಗುವುದು.

೬೬. ಎಲೈ ಬುದ್ಧಿಶಾಲಿಯೆ! ಇದನ್ನೆಲ್ಲ ಮನಸ್ಸಿಗೆ ತಂದುಕೊಂಡು ನಿನ್ನ ದೇಹವನ್ನು ಧರಿಸಿಕೊಂಡಿರು. ಅಥವಾ ದೇಹವನ್ನು ತ್ಯಜಿಸಲೇಬೇಕೆಂಬ ನಿನ್ನ ಸಂಕಲ್ಪವು ದೃಢವಾಗಿದ್ದರೆ ಮತ್ತೊಂದು ವಿಷಯವನ್ನು ಹೇಳುವೆನು, ಕೇಳು.

೬೭. ಇನ್ನು ಸ್ವಲ್ಪಕಾಲದಲ್ಲಿಯೇ ದೇವಕೀಪುತ್ರನಾದ ಶ್ರೀಕೃಷ್ಣನಿಂದ ನಿನಗೆ ದೇಹವಿಯೋಗವಾಗಬೇಕೆಂದು ನಿಯಮಿತವಾಗಿರುವುದು. ನಿನ್ನ ಇಷ್ಟವಿದ್ದಲ್ಲಿ ಆ ಕಾಲವನ್ನು ನಿರೀಕ್ಷಿಸುತ್ತಿರು.

೬೮. ಸಾಕ್ಷಾದ್ವಿಷ್ಣುವಿನ ಕೈಯಿಂದಲೇ ದೇಹಪಾತವಾಗುವುದು ಅತ್ಯಂತ ವಿಶೇಷವು. ಎಲೈ ವತ್ಸನೆ! ಆದುದರಿಂದ ನಮ್ಮ ಪ್ರಾರ್ಥನೆಯನ್ನು ಮನ್ನಿಸಿ ಆ ಕಾಲವನ್ನು ನಿರೀಕ್ಷಿಸುವುದು ಯುಕ್ತವು."

೬೯. ಈ ಮಾತುಗಳನ್ನು ಕೇಳಿ ಬರ್ಬರೀಕನು ಅಸಂತೋಷಪಟ್ಟವನಾದರೂ ಆತ್ಮಹತ್ಯೆಯಿಂದ ಪರಾಙ್ಮುಖನಾದನು. ಮತ್ತು ಮಹಾರುದ್ರನನ್ನೂ ದೇವಿಯರನ್ನೂ ಚಾಮುಂಡಾಂಬೆಯನ್ನೂ ಕುರಿತು ನಿಂದಿಸುವವನಂತೆ ಮಾತನಾಡಿದನು.

ತ್ವಮೇವ ದೇವಿ ಜಾನಾಸಿ ರಕ್ಷ್ಯಂತೇ ಶಾರ್ಙ್ಗಧನ್ವಿನಾ ।
ಪಾಂಡವಾ ಭೂಮಿಲಾಭಾರ್ಥೇ ತತ್ತೇ ಕಸ್ಮಾದುಪೇಕ್ಷಿತಂ ।
ತ್ವಯಾ ಚ ಸಮುಪಾಗಮ್ಯ ರಕ್ಷಿತೋಽಯಂ ವೃಕೋದರಃ ॥ ೭೦ ॥

ದೇವ್ಯುವಾಚ :—

ಅಹಂ ಚ ರಕ್ಷಯಿಷ್ಯಾಮಿ ಸ್ವಭಕ್ತಂ ಕೃಷ್ಣಮೃತ್ಯುತಃ ।
ಯಸ್ಮಾಚ್ಚ ಚಂಡಿಕಾಕೃತ್ಯೇ ಕೃತೋಽನೇನ ಮಹಾರಣಃ ।
ತಸ್ಮಾಚ್ಚಂಡಿಲನಾಮ್ನಾಯಂ ವಿಶ್ವಪೂಜ್ಯೋ ಭವಿಷ್ಯತಿ ॥ ೭೧ ॥
ಏವಮುಕ್ತ್ವಾ ಗತಾಃ ಸರ್ವೇ ದೇವಾ ದೇವ್ಯಸ್ತ್ವದೃಶ್ಯತಾಂ ।
ಭೀಮೋಽಪಿ ತಂ ಸಮಾದಾಯ ಪಾಂಡುಭ್ಯಃ ಸರ್ವಮೂಚಿವಾನ್ ॥ ೭೨ ॥
ವಿಸ್ಮಿತಾಃ ಪಾಂಡವಾಸ್ತಂ ಚ ಪೂಜಯಿತ್ವಾ ಪುನಃ ಪುನಃ ।
ಯಥೋಕ್ತವಿಧಿನಾ ಚಕ್ರುಸ್ತೀರ್ಥಸ್ನಾನಮತಂದ್ರಿತಾಃ ॥ ೭೩ ॥
ಭೀಮೋಽಪಿ ಯತ್ರ ರುದ್ರೇಣ ಮೋಕ್ಷಿತಸ್ತತ್ರ ಸುಪ್ರಭಂ ।
ಲಿಂಗಂ ಸಂಸ್ಥಾಪಯಾಮಾಸ ಭೀಮೇಶ್ವರಮಿತಿ ಶ್ರುತಂ ॥ ೭೪ ॥

---

೭೦. "ಎಲೌ ದೇವಿಯೆ! ಪಾಂಡವರು ತಮ್ಮ ರಾಜ್ಯವನ್ನು ಹೊಂದುವುದಕ್ಕಾಗಿ ಶ್ರೀಕೃಷ್ಣನಿಂದ ರಕ್ಷಿತರಾಗಿ ಬಾಳುತ್ತಿರುವುದು ನಿನಗೆ ತಿಳಿದೇ ಇರುವುದು. ಅದನ್ನು ನೀನು ಮರೆತುದು ಹೇಗೆ? ಈಗಲೂ ಭೀಮಸೇನನು ಸಕಾಲಕ್ಕೆ ಪ್ರಾಪ್ತಳಾದ ನಿನ್ನಿಂದಲೇ ಕಾಪಾಡಲ್ಪಟ್ಟನಲ್ಲವೆ."

೭೧. ದೇವಿಯು ಹೇಳುತ್ತಾಳೆ:—"ನಾನು ನನ್ನ ಭಕ್ತನನ್ನು ಶ್ರೀಕೃಷ್ಣನ ಕೈಯ ಮೃತ್ಯುವಿನಿಂದ ರಕ್ಷಿಸುತ್ತೇನೆ. ಚಂಡಿಕೆಗಾಗಿಯೇ ಇವನು ಭಯಂಕರವಾದ ಯುದ್ಧವನ್ನು ಮಾಡಿರುವನಾದುದರಿಂದ ಇವನು ಚಂಡಿಲನೆಂಬ ಹೆಸರಿನಿಂದಲೇ ಲೋಕಪೂಜ್ಯನಾಗಿ ಬಾಳುವನು."

೭೨. ಇಂತೆಂದು ದೇವತೆಗಳೆಲ್ಲರೂ ಹೊರಟುಹೋದರು. ದೇವಿಯರೂ ಅಂತರ್ಧಾನವನ್ನು ಹೊಂದಿದರು. ಬಳಿಕ ಭೀಮಸೇನನು ಬರ್ಬರೀಕನನ್ನು ಕರೆದುಕೊಂಡು ಬಂದು ನಡೆದ ಸಮಾಚಾರವೆಲ್ಲವನ್ನೂ ಪಾಂಡವರಿಗೆ ತಿಳಿಸಿದನು.

೭೩. ಅವರೂ ವಿಸ್ಮಯಗೊಂಡು ಅವನನ್ನು ಮತ್ತೆ ಮತ್ತೆ ಆದರಿಸುತ್ತ ವಿಧ್ಯುಕ್ತವಿಧಾನದಿಂದ ನಿಶ್ಚಲಮನಸ್ಕರಾಗಿ ತೀರ್ಥಸ್ನಾನಾದಿಗಳನ್ನು ಮಾಡಿದರು.

೭೪. ಭೀಮನೂ ಕೂಡ ತನಗೆ ಮಹೇಶ್ವರನಿಂದ ಪ್ರಾಣರಕ್ಷಣೆಯಾದ ಸ್ಥಾನದಲ್ಲಿ ಭೀಮೇಶ್ವರನೆಂದು ಪ್ರಸಿದ್ಧಿಯನ್ನು ಹೊಂದಿ ತೇಜೋಮಯವಾದ ಲಿಂಗವೊಂದನ್ನು ಸ್ಥಾಪಿಸಿದನು.

ಜ್ಯೇಷ್ಠಮಾಸೇ ಕೃಷ್ಣಪಕ್ಷೇ ಚತುರ್ದಶ್ಯಾಮುಪೋಷಿತಃ ।
ರಾತ್ರೌ ಸಂಪೂಜ್ಯ ಭೀಮೇಶಂ ಜನ್ಮಪಾಪಾದ್ವಿಮುಚ್ಯತೇ ॥ ೭೫ ॥

ಯಥೈವ ಲಿಂಗಾನಿ ಸುಪೂಜಿತಾನಿ
ಸಪ್ತಾತ್ರ ಮುಖ್ಯಾನಿ ಮಹಾಫಲಾನಿ ।
ಭಿಮೇಶ್ವರಂ ಲಿಂಗಮಿದಂ ತಥೈವ
ಸಮಸ್ತ ಪಾಪಾಪಹರಂ ಸುಪೂಜ್ಯಂ ॥ ೭೬ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪ್ರಥಮೇ ಮಾಹೇಶ್ವರಖಂಡೇ ಕೌಮಾರಿಕಾಖಂಡೇ
"ಭೀಮೇಶ್ವರ ಮಾಹಾತ್ಮ್ಯವರ್ಣನಂ"ನಾಮ
ಚತುಷ್ಷಷ್ಟಿತಮೋಽಧ್ಯಾಯಃ

---

೭೫. ಜ್ಯೇಷ್ಠಮಾಸದಲ್ಲಿ ಕೃಷ್ಣಪಕ್ಷದ ಚತುರ್ದಶಿಯ ದಿನದಲ್ಲಿ ಉಪವಾಸವನ್ನು ಮಾಡಿ ರಾತ್ರಿಯಲ್ಲಿ ಭೀಮೇಶ್ವರಲಿಂಗವನ್ನು ಪೂಜಿಸುವ ಮನುಷ್ಯನು ಜನ್ಮಾರಭ್ಯ ಮಾಡಿದ ಸಕಲಪಾಪಗಳಿಂದಲೂ ಬಿಡುಗಡೆಯನ್ನು ಹೊಂದುವನು.

೭೬. ಈ ಕ್ಷೇತ್ರದಲ್ಲಿ ನೆಲಸಿರುವ ಏಳು ಮುಖ್ಯಲಿಂಗಗಳನ್ನು ಪೂಜಿಸಲು ಯಾವ ಮಹಾಫಲವು ಲಭ್ಯವಾಗುವುದೊ, ಈ ಭೀಮೇಶ್ವರ ಲಿಂಗದ ಪೂಜೆಯಿಂದ ಆ ಪುಣ್ಯವು ಲಭಿಸುವುದೇ ಅಲ್ಲದೆ ಸಕಲಪಾಪಗಳೂ ದೂರವಾಗುವುವು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಎರಡನೆಯ ಕೌಮಾರಿಕಾಖಂಡದಲ್ಲಿ
"ಭೀಮೇಶ್ವರ ಮಾಹಾತ್ಮ್ಯವರ್ಣನ"ವೆಂಬ
ಅರುವತ್ತನಾಲ್ಕನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಪಂಚಷಷ್ಠಿತಮೋಽಧ್ಯಾಯಃ

**ಬರ್ಬರೀಕೋಪಾಖ್ಯಾನೇ ಲೋಕೇಶ್ವರೀ ವತ್ಸೇಶ್ವರೀ ದುರ್ಗಾದೇವೀ ಗಾಯತ್ರ್ಯಾದಾ ಮಾಹಾತ್ಮ್ಯವರ್ಣನಂ**

**ಸೂತ ಉವಾಚ :—**

ಉಷಿತ್ವಾ ಸಪ್ತರಾತ್ರಾಣಿ ತೀರ್ಥೇಽಸ್ಮಿನ್ಭ್ರಾತೃಭಿಸ್ಸಹ ।
ಯುಧಿಷ್ಠಿರೋ ಮಹಾತೇಜಾ ಗಮನಾಯೋಪಚಕ್ರಮೇ ॥ ೧ ॥
ಪ್ರಭಾತೇ ವಿಮಲೇ ಸ್ನಾತ್ವಾ ದೇವೀರ್ಲಿಂಗಾನ್ಯಥಾರ್ಚ್ಯ ಚ ।
ಕೃತ್ವಾ ಪ್ರದಕ್ಷಿಣಂ ಕ್ಷೇತ್ರಂ ದೇವೀಸ್ತೋತ್ರಂ ಜಜಾಪ ಸಃ ।
ಪ್ರಯಾಣಕಾಲೇಷು ಸದಾ ಜಪ್ಯಂ ಕೃಷ್ಣೇನ ಕೀರ್ತಿತಂ ॥ ೨ ॥

**ಯುಧಿಷ್ಠಿರ ಉವಾಚ :—**

ದೇವಿ ಪೂಜ್ಯೇ ಮಹಾಶಕ್ತೇ ಕೃಷ್ಣಸ್ಯ ಭಗಿನಿ ಪ್ರಿಯೇ ।
ನತ್ವಾ ತ್ವಾಂ ಶರಣಂ ಯಾಮಿ ಮನೋವಾಕ್ಕಾಯಕರ್ಮಭಿಃ ॥ ೩ ॥
ಸಂಕರ್ಷಣಾಽಭಯಾದಾನೇ ಕೃಷ್ಣಚ್ಛವಿಸಮಪ್ರಭೇ ।
ಏಕಾನಂಶೇ ಮಹಾದೇವಿ ಪುತ್ರವತ್ತ್ರಾಹಿ ಮಾಂ ಶಿವೇ ॥ ೪ ॥

---

### ಕನ್ನಡದ ಅನುವಾದ

**ಬರ್ಬರೀಕೋಪಾಖ್ಯಾನ — ಲೋಕೇಶ್ವರೀ, ವತ್ಸೇಶ್ವರೀ, ದುರ್ಗಾದೇವೀ, ಗಾಯತ್ರ್ಯಾದಾ ಮಾಹಾತ್ಮ್ಯವರ್ಣನ**

೧. ಸೂತನು ಹೇಳುತ್ತಾನೆ:—ಇಂತು ಯುಧಿಷ್ಠಿರನು ಆ ಕ್ಷೇತ್ರದಲ್ಲಿ ಏಳು ರಾತ್ರಿಗಳು ವಾಸಮಾಡಿ ತಮ್ಮಂದಿರೊಡನೆ ತೀರ್ಥಸೇವೆಯನ್ನು ಮುಗಿಸಿ ಹೊರಡಲು ಸಿದ್ಧನಾದನು.

೨. ಶುಭ್ರವಾದ ಪ್ರದೋಷಕಾಲದಲ್ಲಿ ಸ್ನಾನವನ್ನು ಮಾಡಿ ದೇವಿಯರನ್ನೂ ಸಪ್ತಲಿಂಗಗಳನ್ನೂ ಯಥಾವಿಧಿಯಾಗಿ ಪೂಜಿಸಿ ಕ್ಷೇತ್ರಕ್ಕೆಲ್ಲ ಪ್ರದಕ್ಷಿಣೆಯನ್ನು ಮಾಡಿ ದೇವಿಯ ಸ್ತೋತ್ರವನ್ನು ಜಪಿಸತೊಡಗಿದನು. ಈ ಸ್ತೋತ್ರವನ್ನು ಪ್ರಯಾಣಕಾಲದಲ್ಲಿ ಜಪಿಸಬೇಕೆಂದು ಶ್ರೀಕೃಷ್ಣನು ಅಪ್ಪಣೆ ಮಾಡಿರುವನು.

೩. ಯುಧಿಷ್ಠಿರನು ಹೇಳುತ್ತಾನೆ:—"ಎಲೌ ದೇವಿಯೆ! ಮಹಾಶಕ್ತಿಯಾದ ನೀನು ಸರ್ವರಿಂದಲೂ ಪೂಜ್ಯಳು! ನೀನು ಶ್ರೀಕೃಷ್ಣನಿಗೆ ಪ್ರಿಯತಮಳಾದ ಸಹೋದರಿಯು! ಮನಸ್ಸು, ವಾಕ್ಕು, ಶರೀರ, ಕರ್ಮಗಳಿಂದ ನಾನು ನಿನಗೆ ನಮಸ್ಕರಿಸಿ ಶರಣುಹೊಕ್ಕಿರುವೆನು!

೪. ಸಂಕರ್ಷಣನಿಗೆ ಅಭಯವನ್ನು ಕೊಟ್ಟವಳೂ, ಕೃಷ್ಣನ ವರ್ಣದಂತೆ ನೀಲಮೇಘಶ್ಯಾಮಳೂ, ಏಕಾನಂಶೆಯೂ ಆದ ಮಹಾದೇವಿಯೆ! ಮಂಗಳದಾಯಕಳಾದ ನೀನು ನನ್ನನ್ನು ಮಗನೆಂದು ತಿಳಿದು ಕಾಪಾಡು!!

ತ್ವಯಾ ತತಮಿದಂ ವಿಶ್ವಂ ಜಗದವ್ಯಕ್ತರೂಪಯಾ ।
ಇತಿ ಮತ್ವಾ ತ್ವಾಂ ಗತೋಽಸ್ಮಿ ಶರಣಂ ತ್ರಾಹಿ ಮಾಂ ಶುಭೇ ॥ ೫ ॥
ಕಾರ್ಯಾರಂಭೇಷು ಸರ್ವೇಷು ಸಾನುಗೇನ ಮಯಾ ತವ ।
ಸ್ವ ಆತ್ಮಾ ಕಲ್ಪಿತೋ ಭದ್ರೇ ಜ್ಞಾತ್ವೈತದನುಕಂಪ್ಯತಾಂ ॥ ೬ ॥

ಸೂತ ಉವಾಚ :—

ಇತಿ ಬ್ರುವಾಣಂ ರಾಜಾನಂ ಶಿರೋಬದ್ಧಾಂಜಲಿಂ ತದಾ ।
ವಾಯುಪುತ್ರಃ ಪ್ರಹಸ್ಯೈವ ಸಾಸೂಯಮಿದಮಬ್ರವೀತ್ ॥ ೭ ॥
ಯೇ ತ್ವಾಂ ರಾಜನ್ವದಂತ್ಯೇವಂ ಸರ್ವಜ್ಞೋಽಯಂ ಯುಧಿಷ್ಠಿರಃ ।
ವೃಥೈವ ವಚನಂ ತೇಷಾಂ ಯತಸ್ತ್ವಂ ವೇತ್ಸಿ ನಾಣ್ವಪಿ ॥ ೮ ॥
ಕೋ ಹಿ ಪ್ರಜ್ಞಾನತಾಂ ಮುಖ್ಯಃ ಸರ್ವಶಾಸ್ತ್ರವಿದಾಂ ವರಃ ।
ಸ್ತ್ರೀಣಾಂ ಶರಣಮಾಪದ್ಯೇದೃಜುಬುದ್ಧಿರ್ಯಥಾ ಭವಾನ್ ॥ ೯ ॥
ಯತಸ್ತ್ವಮೇವ ವೇತ್ಸೀದಂ ಸರ್ವಶಾಸ್ತ್ರೇಷು ಕೀರ್ತ್ಯತೇ ।
ಜಡೇಯಂ ಪ್ರಕೃತಿರ್ಮೂಢಾ ಯಯಾ ಸಂಮೋಹ್ಯತೇ ಜಗತ್ ॥ ೧೦ ॥

---

೫. ಅವ್ಯಕ್ತರೂಪಳಾದ ನಿನ್ನಿಂದಲೇ ಈ ಬ್ರಹ್ಮಾಂಡವೆಲ್ಲವೂ ವ್ಯಾಪ್ತವಾಗಿರುವುದು. ಇದನ್ನು ತಿಳಿದೇ ನಿನ್ನನ್ನು ಶರಣುಹೊಕ್ಕಿರುವೆನು. ಶುಭದಾಯಕಿಯಾದ ನೀನು ನನ್ನನ್ನು ರಕ್ಷಿಸು.

೬. ಸರ್ವಕಾರ್ಯಗಳ ಆರಂಭದಲ್ಲಿಯೂ ತಮ್ಮಂದಿರೊಡಗೂಡಿದ ನಾನು ನಿನ್ನನ್ನು ಹೃದಯದಲ್ಲಿ ನೆನಸುತ್ತಿರುವೆನು. ಇದನ್ನು ತಿಳಿದು ನೀನು ನನ್ನಲ್ಲಿ ಕೃಪೆಯನ್ನು ತೋರು.''

೭. ಸೂತನು ಹೇಳುತ್ತಾನೆ:—ಇಂತು ತಲೆಯಲ್ಲಿ ಕರಗಳನ್ನು ಜೋಡಿಸಿಕೊಂಡು ಪ್ರಾರ್ಥಿಸುತ್ತಿರುವ ಯುಧಿಷ್ಠಿರನನ್ನು ಕುರಿತು ಭೀಮಸೇನನು ಅಸೂಯೆಗೊಂಡವನಾಗಿ ನಗುತ್ತ ಹೇಳತೊಡಗಿದನು.

೮. "ಎಲೈ ರಾಜನೆ! 'ಯುಧಿಷ್ಠಿರನು ಸರ್ವಜ್ಞನು' ಎಂದು ನಿನ್ನನ್ನು ಕುರಿತು ಯಾರು ಹೇಳುವರೊ, ಅವರ ಮಾತುಗಳು ಕೇವಲ ಮಿಥ್ಯಾವಾದಗಳೇ ಆಗಿರುವುವು. ಏಕೆಂದರೆ ನಿನಗೆ ಎಳ್ಳಿನಷ್ಟೂ ಜ್ಞಾನವೇ ಇಲ್ಲ.

೯. ಪ್ರಜ್ಞಾವಂತರಲ್ಲಿ ಶ್ರೇಷ್ಠನೂ, ಸಕಲ ಶಾಸ್ತ್ರಗಳಲ್ಲಿ ನಿಷ್ಣಾತನೂ ಆದ ಯಾವನು ತಾನೆ ನಿನ್ನಂತೆ ಮೂಢಬುದ್ಧಿಯುಳ್ಳವನಾಗಿ ಸ್ತ್ರೀಯರನ್ನು ಶರಣುಹೊಗುವನು ?

೧೦. ಏಕೆಂದರೆ ಸಕಲ ಶಾಸ್ತ್ರಗಳಲ್ಲಿಯೂ ಹೇಳಿರುವ ತತ್ತ್ವಾರ್ಥವನ್ನು ನೀನೂ ತಿಳಿದಿರುವೆ. ಜಗತ್ತನ್ನೆಲ್ಲ ಮೋಹಗೊಳಿಸಿರುವ ಪ್ರಕೃತಿಯು ಜಡಸ್ವರೂಪಿಯೂ ಮೂಢವೂ ಆಗಿರುವುದನ್ನರಿಯೆಯ.

ಸಚೇತನಂ ಚ ಪುರುಷಂ ಪ್ರಕೃತಿಂ ಚ ವಿಚೇತನಾಂ ।
ಪ್ರಾಹುರ್ಬುಧಾ ನರಾಧ್ಯಕ್ಷ ಪುಂಸಶ್ಚ ಪ್ರಕೃತಿಃ ಪ್ರಿಯಾ ॥ ೧೧ ॥
ತತ್ಸ್ವಯಂ ಪುರುಷೋ ಭೂತ್ವಾ ಯುಧಿಷ್ಠಿರ ವೃಥಾಮತೇ ।
ಪ್ರಕೃತಿಂ ಸ್ತೌಷಿ ನತ್ವಾ ತಾಂ ಹಾಸೋ ಮೇಽತೀವ ಜಾಯತೇ ॥ ೧೨ ॥
ಆರೋಪಯೇಚ್ಛಿರೋ ನೈವ ಕ್ವಚಿದ್ಧಿತ್ವಾ ಉಪಾನಹೌ ।
ಯಥಾ ಸ ಮೂಢೋ ಭವತಿ ದೇವೀಭಕ್ತಿರತಸ್ತಥಾ ॥ ೧೩ ॥
ಯದಿ ತೇ ಬಂದಿವತ್ಪಾರ್ಥ ತಿಷ್ಠೇದ್ವಾಣ್ಯನಿವಾರಿತಾ ।
ತತ್ಕಿಮರ್ಥಂ ಮಹಾದೇವಂ ನ ಸ್ತೌಷಿ ತ್ರಿಪುರಾಂತಕಂ ॥ ೧೪ ॥
ಅಲಕ್ಷ್ಯಮಿತಿ ವಾ ಮತ್ವಾ ಮಹೇಶಾನಂ ಮಹಾಮತೇ ।
ತತಃ ಕಿಮರ್ಥಂ ದಾಶಾರ್ಹಂ ನ ಸ್ತೌಷಿ ಪುರುಷೋತ್ತಮಂ ॥ ೧೫ ॥
ಯಸ್ಯ ಪ್ರಸಾದಾದಸ್ಮಾಭಿಃ ಪ್ರಾಪ್ತಾ ದ್ರುಪದನಂದಿನೀ ।
ಇಂದ್ರಪ್ರಸ್ಥೇ ತಥಾ ರಾಜ್ಯಂ ರಾಜಸೂಯಸ್ತ್ವಯಾ ಕೃತಃ ॥ ೧೬ ॥

---

೧೧. ಎಲೈ ನರಶ್ರೇಷ್ಠನೆ! ಪುರುಷನನ್ನು ಚೇತನಸ್ವರೂಪವೆಂದೂ ಪ್ರಕೃತಿಯನ್ನು ಜಡರೂಪವುಳ್ಳದ್ದೆಂದೂ ತಿಳಿದವರು ಹೇಳುವರು. ಪುರುಷನಿಗೆ ಪ್ರಕೃತಿಯು ಪ್ರೀತಿಪಾತ್ರಳು.

೧೨. ಎಲೈ ಬುದ್ಧಿಹೀನನಾದ ಯುಧಿಷ್ಠಿರನೆ! ನೀನು ಪುರುಷನಾಗಿದ್ದರೂ ಪ್ರಕೃತಿಗೆ ನಮಸ್ಕರಿಸಿ ಸ್ತೋತ್ರಮಾಡುತ್ತಿರುವುದನ್ನು ನೊಡಿದರೆ ನನಗೆ ಬಹಳವಾದ ನಗೆಯು ಬರುತ್ತಿರುವುದು.

೧೩. ಯಾವನೂ ಪಾದರಕ್ಷೆಗಳನ್ನು ತೆಗೆದು ತಲೆಯಮೇಲೆ ಇರಿಸಿಕೊಳ್ಳುವುದಿಲ್ಲವಷ್ಟೆ. ಹಾಗೆ ಮಾಡುವವನು ಮೂಢನಾಗಿರುವಂತೆಯೇ ದೇವಿಯ ಪೂಜಕನೂ ಮೂಢನೇ ಸರಿ.

೧೪. ಎಲೈ ಧರ್ಮರಾಜನೆ! ನಿನ್ನ ವಾಣಿಯು ನಿನ್ನ ವಶದಲ್ಲಿಲ್ಲದೆ ಹೊರಹೊರಡಲೇಬೇಕಾಗಿದ್ದರೆ ತ್ರಿಪುರಗಳನ್ನು ದಹಿಸಿದ ಮಹೇಶ್ವರನನ್ನು ಸ್ತೋತ್ರ ಮಾಡುವುದಿಲ್ಲವೇಕೆ?

೧೫. ಎಲೈ ಮಹಾಮತಿಯೆ! ಈಶ್ವರನು ನಿನ್ನ ಗೌರವಕ್ಕೆ ಕಡಿಮೆಯಾದವನೆಂದು ಭಾವಿಸಿರುವೆಯಾದರೆ ದಾಶಾರ್ಹಕುಲತಿಲಕನಾದ ಶ್ರೀಕೃಷ್ಣನನ್ನೇತಕ್ಕೆ ಸ್ತುತಿಸಲಾರೆ?

೧೬. ಆತನ ಪ್ರಸಾದದಿಂದಲೇ ಅಲ್ಲವೆ ನಮಗೆ ದ್ರೌಪದಿಯು ದೊರೆತುದು. ಇಂದ್ರಪ್ರಸ್ಥ ರಾಜ್ಯವೂ ಆತನಿಂದಲೇ ಕರಗತವಾಯಿತು. ಅದರಿಂದಲೇ ನೀನು ರಾಜಸೂಯಯಾಗವನ್ನೂ ನೆರವೇರಿಸಿದೆ!

ವಿಜಯೇನ ಧನುರ್ಲಬ್ಧಂ ಜರಾಸಂಧೋ ಮಯಾ ಹತಃ ।
ಪ್ರತ್ಯಾಹರ್ತುಂ ತಥೇಚ್ಛಾಮಃ ಕೌರವೇಭ್ಯಃ ಸ್ವಕಾಂ ಶ್ರಿಯಂ ॥ ೧೭ ॥
ಯಸ್ಯ ಪ್ರಸಾದಾತ್ತಂ ಮುಕ್ತ್ವಾ ಕೃಷ್ಣಂ ಹಾ ಸ್ತೌಷಿ ಯಜ್ಞಯಾ ।
ಅಥ ಸ್ವಯಂ ಕೌರವಾಣಾಂ ಉತ್ಪನ್ನಂ ಕುಲಸತ್ತಮೇ ॥ ೧೮ ॥
ಜಾನನ್ನಾತ್ಮಾನಮಲ್ಪತ್ವಾದ್ಬುದ್ಧೇರ್ನ ಸ್ತೌಷಿ ಯಾದವಂ ।
ತತ್ಕಿಮರ್ಥಂ ಮಹಾವೀರ್ಯಂ ನಸ್ತೌಷ್ಯರ್ಜುನಮುತ್ತಮಂ ॥ ೧೯ ॥
ಯೇನ ವಿದ್ಧಂ ಪುರಾ ಲಕ್ಷ್ಯಂ ಯೇನ ಕರ್ಣಾದಯೋ ಜಿತಾಃ ।
ಯೇನ ತತ್ಖಾಂಡವಂ ದಗ್ಧಂ ಯಜ್ಞೇ ಯೇನ ನೃಪಾ ಜಿತಾಃ ॥ ೨೦ ॥
ಶ್ರೂಯತೇ ಯೇನ ವಿಕ್ರಮ್ಯ ಮಹೇಶಾನೋಽಪಿ ನಿರ್ಜಿತಃ ।
ಸ್ವರ್ಲೋಕಸಂಸ್ಥಿತಸ್ಯಾಸ್ಯ ಶರಣಂ ಯಾಹಿ ಸ್ತೌಷಿ ಚ ॥ ೨೧ ॥
ಅಥವಾ ತೇನ ಶಕ್ರೇಣ ರಾಜ್ಯಂ ನೋ ನಾರ್ಪಿತಂ ಕುತಃ ।
ಇತಿ ಮತ್ವಾ ವೃಥೈವ ತ್ವಂ ನ ಸ್ತೌಷಿ ಭ್ರಾತರಂ ಮಮ ॥ ೨೨ ॥

---

೧೭. ಅರ್ಜುನನಿಗೆ ಆದರಿಂದಲೇ ಗಾಂಡೀವ ಧನಸ್ಸು ಲಭಿಸಿತು. ನಾನು ಜರಾಸಂಧನನ್ನು ವಧಿಸಿದೆನು. ಆತನ ಕೃಪಾಕಟಾಕ್ಷದ ಬಲದಿಂದಲೇ ಕೌರವರ ಕೈಗಳಿಂದ ನಮ್ಮ ರಾಜ್ಯಸಂಪತ್ತನ್ನು ಹಿಂದಕ್ಕೆ ಪಡೆಯುವ ಆಶೆಯುಳ್ಳವರಾಗಿರುವೆವು.

೧೮–೧೯. ಯಾವನ ಪ್ರಸಾದದಿಂದ ನಮಗೆ ಶುಭವೊ, ಆ ಕೃಷ್ಣನನ್ನು ಬಿಟ್ಟು ಜಯಲಾಭಕ್ಕಾಗಿ ಯಾರನ್ನು ಸ್ತುತಿಸುವೆ? ಅಥವಾ ನೀನು ಕೌರವರ ಉತ್ತಮ ಕುಲದಲ್ಲಿ ಜನ್ಮವೆತ್ತಿದುದನ್ನು ಸ್ಮರಿಸಿಕೊಂಡು ಸಿಂಹಾಸನಾನರ್ಹರಾದ ಯಾದವಕುಲದಲ್ಲಿ ಹುಟ್ಟಿದ ಕೃಷ್ಣನನ್ನು ಅಲ್ಪನೆಂದೆಣಿಸಿದೆಯಾದರೆ ಉತ್ತಮನೂ ಮಹಾಪರಾಕ್ರಮಿಯೂ ಆದ ಅರ್ಜುನನ್ನೇಕೆ ಸ್ತೋತ್ರಮಾಡಬಾರದು.

೨೦. ಅವನಿಂದಲೇ ಮುನ್ನ ಮತ್ಸ್ಯಯಂತ್ರವು ಭೇದಿಸಲ್ಪಟ್ಟಿತು. ಅವನೇ ಕರ್ಣಾದಿಗಳನ್ನು ಜಯಿಸಿದನು. ಅವನಿಂದಲೇ ಖಾಂಡವವನವು ಭಸ್ಮವಾಯಿತು. ದ್ರುಪದನ ಯಜ್ಞವಾಟದಲ್ಲಿ ಸಕಲ ರಾಜರೂ ಪರಾಜಯವನ್ನು ಹೊಂದಿದರು.

೨೧. ಆತನ ಪರಾಕ್ರಮದಿಂದ ಮಹೇಶ್ವರನೂ ಜಿತನಾದನೆಂದು ಕೇಳಿರುವೆವು. ಸ್ವರ್ಗಲೋಕದಲ್ಲಿ ಇಂದ್ರಾಸನವನ್ನಲಂಕರಿಸಿದ ಆತನನ್ನಾದರೂ ಶರಣು ಹೊಕ್ಕು ಸ್ತೋತ್ರಮಾಡು.

೨೨. ಅಥವಾ ಆ ಮಹೇಂದ್ರನು ನಿನಗೇಕೆ ರಾಜ್ಯವನ್ನು ಕೊಡಿಸಲಿಲ್ಲವೆಂಬ ಆಗ್ರಹದಿಂದ ನನ್ನ ತಮ್ಮನನ್ನೂ ಸ್ತೋತ್ರಮಾಡಲು ಅಪೇಕ್ಷೆಯಿಲ್ಲದಿರಬಹುದು.

ತತೋ ಮಾಂ ವಾ ಕಥಂ ವೀರ ನ ಸ್ತೌಷಿ ತ್ವಂ ಯುಧಿಷ್ಠಿರ ।
ಯೇನ ತ್ವಂ ರಕ್ಷಿತಃ ಪೂರ್ವಂ ಲಾಕ್ಷಾಗೇಹಾಗ್ನಿಮಧ್ಯತಃ ॥ ೨೩ ॥
ವೃಕ್ಷೇಣಾಹತ್ಯ ಮದ್ರೇಶೋ ನದೀಂ ಶುಷ್ಕಾಂ ಪ್ರಸಾರಿತಃ ।
ರಾಜರಾಜಸ್ತಥಾ ಯೇನ ಜರಾಸಂಧೋ ನಿಪಾತಿತಃ ॥ ೨೪ ॥
ಪೂರ್ವಾ ದಿಙ್ನಿರ್ಜಿತಾ ಯೇನ ಯೇನ ಪೂರ್ವಂ ಬಕೋ ಹತಃ ।
ಹಿಡಂಬಶ್ಚ ಮಹಾವೀರಃ ಕಿರ್ಮೀರಶ್ಚಾಧುನಾ ವನೇ ॥ ೨೫ ॥
ಕಾಲೇ ಕಾಲೇ ಚ ರಕ್ಷಾಮಿ ತ್ವಾಮೇವಾಹಂ ಸಹಾನುಗಃ ।
ನ ತಾಂ ಪಶ್ಯಾಮಿ ರಕ್ಷಂತೀಂ ನತ್ವಾ ಯಾಂ ಸ್ತೌಷಿ ಭಾರತ ॥ ೨೬ ॥
ಅಥ ಕ್ಷುಧಾ ಬಲಂ ಜ್ಞಾತ್ವಾ ಮಾಮೌದರಿಕಸತ್ತಮಂ ।
ಕ್ರೂರಂ ಸಾಹಸಿಕಂ ಚೈವ ನ ಸ್ತೌಷಿ ಕ್ಷಮಿಣಾಂ ವರಃ ॥ ೨೭ ॥
ತತಃ ಸುಸಂಯತೋ ಭೂತ್ವಾ ಪ್ರಣವಂ ಸಮುದೀರಯನ್ ।
ಕಥಂ ನ ಯಾಸಿ ಮಾರ್ಗೇ ತ್ವಂ ವೃಥಾಲಾಪೋ ಹಿ ದೋಷಭಾಕ್ ॥ ೨೮ ॥

---

೨೩. ಹಾಗಾದರೆ ನನ್ನನ್ನೇಕೆ ನೀನು ಸ್ತುತಿಸುವುದಿಲ್ಲ? ಎಲೈ ಯುಧಿಷ್ಠಿರನೆ! ನನ್ನಿಂದಲೇ ನೀನು ಮೊದಲು ಅರಗಿನಮನೆಯ ಬೆಂಕಿಯಿಂದ ರಕ್ಷಿಸಲ್ಪಡಲಿಲ್ಲವೆ?

೨೪. ನಾನು ಮದ್ರೇಶನನ್ನು ವೃಕ್ಷದಿಂದ ಬೀಳಿಸಿ ಶುಷ್ಕನದಿಯಲ್ಲಿ ಕೆಡಹಲಿಲ್ಲವೆ? ಅನೇಕ ರಾಜರನ್ನು ನಿರ್ಬಂಧದಲ್ಲಿರಿಸಿದ್ದ ಜರಾಸಂಧನನ್ನು ವಧಿಸಲಿಲ್ಲವೆ?

೨೫. ನಿನ್ನ ರಾಜಸೂಯದ ಸಮಯದಲ್ಲಿ ನನ್ನಿಂದಲೇ ಪೂರ್ವದಿಕ್ಕು ಜಯಿಸಲ್ಪಟ್ಟಿತು. ನಾನೇ ಬಕಾಸುರನನ್ನೂ, ಹಿಡಿಂಬನನ್ನೂ, ಈಗ ಅರಣ್ಯದಲ್ಲಿ ಕಿರ್ಮ್ಮೀರನನ್ನೂ ನಿಗ್ರಹಿಸಿರುವೆನು.

೨೬. ನಾನೇ ತಮ್ಮಂದಿರೊಡನೆ ನಿನ್ನನ್ನು ರಕ್ಷಿಸುತ್ತಿರುವೆನು. ನೀನು ಯಾವಳಿಗೆ ನಮಸ್ಕರಿಸುತ್ತಿರುವೆಯೊ, ಅವಳು ನಿನ್ನನ್ನು ರಕ್ಷಿಸಿದುದನ್ನು ಯಾವಾಗಲೂ ನಾನೇನೋ ಕಾಣಲಿಲ್ಲ.

೨೭. ಅಥವಾ ನಾನು ಕೇವಲ ಆಹಾರಬಲದಿಂದಲೇ ದೇಹವನ್ನು ಬೆಳಸಿಕೊಂಡು ಉದರಂಭರಣದಲ್ಲಿ ಅಗ್ರೇಸರನೂ, ಕ್ರೂರನೂ, ಸಾಹಸಿಯೂ ಆಗಿರುವುದರಿಂದ ಕ್ಷಮಾವಂತನಾದ ನೀನು ಮೆಚ್ಚದಿರಬಹುದು.

೨೮. ಹಾಗಾದಲ್ಲಿ ದೇಹೇಂದ್ರಿಯಾದಿಗಳನ್ನು ಸಂಯಮನಮಾಡಿಕೊಂಡು ಪ್ರಣವವನ್ನು ಮಾತ್ರ ಜಪಿಸುತ್ತ ನೀನು ಸರಿಯಾದ ಮಾರ್ಗದಲ್ಲೇಕೆ ನಡೆಯಬಾರದು? ವ್ಯರ್ಥವಾದ ಮಾತನ್ನಾಡುವವನು ದೋಷಕ್ಕೆ ಭಾಗಿಯಾಗುವನಲ್ಲವೆ.

ಪ್ರೇತಾ ಪಿಶಾಚಾ ರಕ್ಷಾಂಸಿ ವೃಥಾಲಾಪರತಂ ನರಂ ।
ಆವಿಶಂತಿ ತದಾವಿಷ್ಟೋಽವಕ್ತಾಬದ್ಧಂ ಪುನಃ ಪುನಃ ॥ ೨೯ ॥
ವೃಥಾಲಾಪೀ ಯದಶ್ನಾತಿ ಯತ್ಕರೋತಿ ಶುಭಂ ಕ್ವಚಿತ್ ।
ಪ್ರೇತಾನಾಂ ತೃಪ್ತಯೇ ಸರ್ವಮಿತಿ ಶಾಸ್ತ್ರವಿನಿಶ್ಚಯಃ ॥ ೩೦ ॥
ನಾಯಂ ತಸ್ಯಾಸ್ತಿ ವೈ ಲೋಕಃ ಕುತ ಏವ ಪರೋ ಭವೇತ್ ।
ತಸ್ಮಾದ್ವಿಜಾನತಾ ಯತ್ನಾತ್ತ್ಯಾಜ್ಯಮೇವ ವೃಥಾ ವಚಃ ॥ ೩೧ ॥
ಏವಂ ಸಂಸ್ಮಾರಿತೋಽಪಿ ತ್ವಂ ಯದಿ ಭೂಯಃ ಪ್ರವರ್ತಸೇ ।
ಭೂತಾವಿಷ್ಟಶ್ಚಿಕಿತ್ಸ್ಯೋ ನೋ ವಿವಿಧೈರೌಷಧೈರ್ಭವಾನ್ ॥ ೩೨ ॥

ಸೂತ ಉವಾಚ:—

ಇತಿ ಪ್ರವರ್ಣಿತಾಂ ಶ್ರುತ್ವಾ ಭೀಮಸೇನೇನ ಭಾರತೀಂ ।
ಪಟೀಮಿವ ಪ್ರವಿತತಾಂ ವಿಹಸ್ಯಾಹ ಯುಧಿಷ್ಠಿರಃ ॥ ೩೩ ॥
ನೂನಂ ತ್ವಮಲ್ಪವಿಜ್ಞಾನೋ ವೇದಾಧೀತಾಸ್ತ್ವಯಾ ವೃಥಾ ।
ಮಾತರಂ ಸರ್ವಭೂತಾನಾಮಂಬಿಕಾಂ ಯನ್ನ ಮನ್ಯಸೇ ॥ ೩೪ ॥

---

೨೯. ವೃಥಾಲಾಪವನ್ನು ಮಾಡುವ ಮನುಷ್ಯನನ್ನು ಪ್ರೇತಗಳೂ, ಪಿಶಾಚರೂ, ರಾಕ್ಷಸರೂ ಆವೇಶಿಸುವುದರಿಂದ ಆವಿಷ್ಟ ನರನು ಮತ್ತೆ ಮತ್ತೆ ಅಬದ್ಧಗಳನ್ನೇ ಆಡುತ್ತಿರುವನು.

೩೦. ಕೇವಲ ವಾಚಾಳಿಯು ತಿನ್ನುವುದಾಗಲಿ, ಅಲ್ಪ ಸ್ವಲ್ಪವಾಗಿ ಮಾಡಿದ ಶುಭಕಾರ್ಯವಾಗಲಿ, ಎಲ್ಲವೂ ಪ್ರೇತಗಳಿಗೆ ತೃಪ್ತಿಯನ್ನುಂಟುಮಾಡುವುದೆಂದು ಶಾಸ್ತ್ರಗಳಲ್ಲಿ ನಿಶ್ಚಯಿಸಲ್ಪಟ್ಟಿರುವುದು.

೩೧. ಅಂತಹ ಮನುಷ್ಯನಿಗೆ ಇಹಲೋಕದ ಸುಖವೇ ಇಲ್ಲವೆಂದ ಮೇಲೆ ಪರಲೋಕವೆಲ್ಲಿ ಬರಬೇಕು ? ಆದುದರಿಂದ ಬುದ್ಧಿವಂತನಾದವನು ವೃಥಾಲಾಪವನ್ನು ಪ್ರಯತ್ನಪೂರ್ವಕವಾಗಿ ತ್ಯಜಿಸಬೇಕು.

೩೨. ಇಂತು ನನ್ನಿಂದ ಜ್ಞಾಪಿಸಲ್ಪಟ್ಟರೂ ಕೂಡ ನೀನು ಮತ್ತೆ ದೇವ್ಯಾರಾಧನೆಯಲ್ಲಿ ಪ್ರಸಕ್ತನಾದರೆ ನೀನು ಭೂತಾವಿಷ್ಟನಾದವನೆಂದೇ ನಿಶ್ಚಯಿಸಿ ವಿವಿಧ ಔಷಧೋಪಾಯಗಳಿಂದ ನಿನಗೆ ಚಿಕಿತ್ಸೆಮಾಡಲು ಪ್ರಯತ್ನಿಸಬೇಕಾಗುವುದು.''

೩೩. ಸೂತನು ಹೇಳುತ್ತಾನೆ:—ಭೀಮಸೇನನಿಂದ ಇಂತು ವಿಸ್ತಾರವಾಗಿ ವರ್ಣಿಸಲ್ಪಟ್ಟು ತತ್ತ್ವವನ್ನು ಮರೆಮಾಚುವ ಜವನಿಕೆಯಂತಿರುವ ಮಾತುಗಳನ್ನು ಕೇಳಿ ಯುಧಿಷ್ಠಿರನು ನಗುತ್ತ ಉತ್ತರವನ್ನು ಹೇಳತೊಡಗಿದನು.

೩೪. ``ನೀನು ನಿಜವಾಗಿಯೂ ಬುದ್ಧಿಹೀನನು. ನಿನ್ನ ವೇದಾಧ್ಯಯನವೆಲ್ಲವೂ ನಿಷ್ಫಲವೇ ಆಯಿತು. ಏಕೆಂದರೆ ಸಕಲ ಪ್ರಾಣಿಗಳಿಗೂ ಮಾತೆಯಾದ ಜಗದಂಬೆಯನ್ನು ನೀನು ಪುರಸ್ಕರಿಸುತ್ತಿಲ್ಲ.

ಸ್ತ್ರೀಪಕ್ಷ ಇತಿ ಮತ್ವಾ ತಾಮವಜಾನಾಸಿ ಭೋಃ ಕಥಂ ।
ಸ್ತ್ರೀ ಸತೀ ನ ಪ್ರಣಮ್ಯಾ ಕಿಂ ತ್ವಯಾ ಕುಂತೀ ವೃಕೋದರ ॥ ೩೫ ॥
ಯದಿ ನ ಸ್ಯಾನ್ಮಹಾಮಾಯಾ ಬ್ರಹ್ಮವಿಷ್ಣುಶಿವಾರ್ಚಿತಾ ।
ತವ ದೇಹೋದ್ಭವಃ ಪಾರ್ಥ ಕಥಂ ಸ್ಯಾತ್ತತ್ತ್ವತೋ ವದ ॥ ೩೬ ॥
ಈಶ್ವರಃ ಪರಮಾತ್ಮಾ ತಾಂ ತ್ಯಕ್ತುಂ ಶಕ್ತಃ ಕಥಂ ನ ಹಿ ।
ಪುನರ್ಭೇಜೇ ಯತೋ ದೇವೀಂ ತೇನ ಮನ್ಯೇ ಮಹೋರ್ಜಿತಾಂ ॥ ೩೭ ॥
ವಾಸುದೇವೋಽಪಿ ನಿತ್ಯಂ ತಾಂ ಸ್ತೌತಿ ಶಕ್ತಿಂ ಪರಾತ್ಪರಾಂ ।
ಅಹಂ ಯದಿ ಚಿಕಿತ್ಸ್ಯಃ ಸ್ಯಾಂ ಚಿಕಿತ್ಸ್ಯಃ ಸೋಽಪಿ ಕಿಂ ಭವಾನ್ ॥ ೩೮ ॥
ನೈವಂ ಭೂಯಃ ಪ್ರವಕ್ತವ್ಯಂ ಮೌಖ್ಯಾತ್ಪ್ರತಿ ಮಹೇಶ್ವರೀಂ ।
ಭೂಮೌ ನಿಪತ್ಯ ಶರಣಂ ಯಾಹಿ ಚೇಚ್ಛುಭಮಿಚ್ಛಸಿ ॥ ೩೯ ॥

ಭೀಮ ಉವಾಚ :—

ಸರ್ವೋಪಾಯೈರ್ಬೋಧಯಂತಿ ಚಾಟಾ ಹಸ್ತಗತಂ ನರಂ ।
ಇದಮೇವೌಷಧಂ ತತ್ರ ತೈಃ ಸಾರ್ಧಂ ಜಲ್ಪನಂ ನ ಹಿ ॥ ೪೦ ॥

---

೩೫. ಎಲೈ ಭೀಮನೆ! ಪ್ರಕೃತಿದೇವಿಯು ಸ್ತ್ರೀಪಕ್ಷವೆಂದಮಾತ್ರ ದಿಂದಲೇ ಆಕೆಯನ್ನು ಕಡೆಗಾಣಲು ಹೇಗೆ ಸಾಧ್ಯವು? ವೃಕೋದರ! ಸ್ತ್ರೀಯಾ ದರೂ ಕುಂತೀದೇವಿಯು ನಿನ್ನ ನಮಸ್ಕಾರವನ್ನು ಸ್ವೀಕರಿಸಲು ಅರ್ಹಳಲ್ಲವೆ?

೩೬. ಎಲೈ ಪಾಂಡವನೆ! ನಿಜವಾಗಿಯೂ ಬ್ರಹ್ಮ, ವಿಷ್ಣು, ಮಹೇಶ್ವರ ರಿಂದ ಪೂಜಿತಳಾದ ಮಹಾಮಾಯೆಯೊಬ್ಬಳಿಲ್ಲದಿದ್ದರೆ ನಿನ್ನ ಶರೀರವು ತಾನೇ ಹೇಗೆ ಉದ್ಭವಿಸುತ್ತಿದ್ದಿತು? ತತ್ತ್ವವನ್ನು ವಿಚಾರಿಸಿ ಮಾತನಾಡು.

೩೭–೩೮. ಸಕಲ ಜೀವರ ಅಂತರ್ಯಾಮಿಯಾದ ಮಹೇಶ್ವರನೂ ಕೂಡ ಆಕೆಯನ್ನು ಬಿಡಲು ಹೇಗೂ ಶಕ್ತನಾಗಲಿಲ್ಲ. ಆದುದರಿಂದಲೇ ಆಕೆಯನ್ನು ಮತ್ತೆ ಭಜಿಸಿದನು. ಆದುದರಿಂದ ಆಕೆಯೇ ಮಹಾಮಹಿಮಳೆಂದು ನಿಶ್ಚಯಿ ಸಿರುವೆನು. ಶ್ರೀಕೃಷ್ಣನೂ ಕೂಡ ನಿತ್ಯವೂ ಪರಾತ್ಪರಳಾದ ಶಕ್ತಿಯನ್ನು ಸ್ತುತಿ ಸುತ್ತಿರುವನು. ನಾನು ಚಿಕಿತ್ಸೆಗೆ ಅರ್ಹನಾದಲ್ಲಿ ಆತನೂ ಆಗಬೇಕಲ್ಲವೆ? ನೀನು ಮಾತ್ರ ಏಕೆ ಅಲ್ಲ?

೩೯. ಇನ್ನು ಮೇಲೆ ಮೌಢ್ಯದಿಂದ ಮಹೇಶ್ವರಿಯನ್ನು ಕುರಿತು ಈ ರೀತಿ ಯಾಗಿ ಮಾತನಾಡಬೇಡ. ನಿನಗೆ ಸುಖವಾಗಬೇಕೆನ್ನುವ ಬಯಕೆಯಿದ್ದಲ್ಲಿ ಭೂಮಿಯಲ್ಲಿ ಬಿದ್ದು ಆಕೆಯನ್ನು ಶರಣುಹೊಗುವವನಾಗು.''

೪೦. ಭೀಮನು ಹೇಳುತ್ತಾನೆ:—'' ಮೋಸಗಾರರು ಕೈಗೆ ಸಿಕ್ಕಿದವರಿಗೆ ಸಕಲೋಪಾಯಗಳಿಂದಲೂ ಬೋಧೆಮಾಡಲೆಳಸುವರು. ಅದಕ್ಕೆ ಅವರೊಡನೆ ಮಾತನಾಡದಿರುವುದೇ ಉತ್ತಮವಾದ ಪ್ರತಿಕ್ರಿಯೆಯು.

**ಮುಂಡೇ ಮುಂಡೇ ಮತಿರ್ಭಿನ್ನಾ ಸತ್ಯಮೇತನ್ನೃಪ ಸ್ಫುಟಂ ।**
**ಸ್ವಾಭೀಷ್ಟಂ ಕುರುತೇ ಸರ್ವಃ ಕುರ್ವೋಽಭೀಷ್ಟಂ ವಯಂ ತಥಾ ॥ ೪೧ ॥**
**ನಾಗಾಯುತಸಮಪ್ರಾಣೋ ವಾಯುಪುತ್ರೋ ವೃಕೋದರಃ ।**
**ನ ಸ್ತ್ರಿಯಂ ಶರಣಂ ಗಚ್ಛೇದ್ವಾಙ್ಮಾತ್ರೇಣ ಕಥಂಚನ ॥ ೪೨ ॥**
**ಇತ್ಯುಕ್ತ್ವಾ ವಚನಂ ಭೀಮೋ ಹ್ಯನುವವ್ರಾಜ ತಂ ನೃಪಂ ।**
**ರಾಜಾಪಿ ಸಾನುಗೋ ಯಾತೋ ನ ಸಾಧ್ವಿತಿ ಮುಹುರ್ಬ್ರುವನ್ ॥ ೪೩ ॥**
**ತತಃ ಕ್ಷಣೇನ ವಿಕಲಸ್ತ್ವಿತಶ್ಚೇತಶ್ಚ ಪ್ರಸ್ಖಲತ್ ।**
**ಉವಾಚ ವಚನಂ ಭೀಮಃ ಸುಸಂಭ್ರಾಂತೋ ನೃಪಂ ಪ್ರತಿ ॥ ೪೪ ॥**
**ಧರ್ಮರಾಜ ಮಹಾಬುದ್ಧೇ ಪಶ್ಯ ಮಾಂ ನೃಪಸತ್ತಮ ।**
**ಚಕ್ಷುರ್ಭ್ಯಾಂ ನೈವ ಪಶ್ಯಾಮಿ ವೈಕಲ್ಯಂ ಕಿಮಿದಂ ಮಮ ॥ ೪೫ ॥**

ರಾಜೋವಾಚ :—

**ಭೀಮ ಭೀಮ ಧ್ರುವಂ ದೇವೀ ಕುಪಿತಾ ತೇ ಮಹೇಶ್ವರೀ ।**
**ತೇನ ನಷ್ಟೇ ಚಕ್ಷುಷೀ ತೇ ಮಹಾಸಾಹಸವಲ್ಲಭ ॥ ೪೬ ॥**

---

೪೧–೪೨. ಪ್ರತಿಯೊಬ್ಬನಿಗೂ ಬುದ್ಧಿಯು ಭಿನ್ನವಾಗಿರುವುದೆಂಬುದು ಸ್ಪಷ್ಟವಾಗಿಯೇ ಇರುವುದು. ಎಲೈ ರಾಜನೆ! ಇದು ಸತ್ಯವು. ಪ್ರತಿಯೊಬ್ಬನೂ ತನ್ನ ಇಷ್ಟದಂತೆ ನಡೆಯುವನು. ಆದುದರಿಂದ ನಾವೂ ನಮ್ಮ ಮನಸ್ಸಿಗೆ ಬಂದಂತೆ ನಡೆಯೋಣ. ಹತ್ತುಸಾವಿರ ಆನೆಗಳ ಬಲವುಳ್ಳವನೂ ವಾಯು ಕುಮಾರನೂ ಆದ ಈ ಭೀಮಸೇನನು ಮಾತುಗಳಿಂದಲೂ ಸಹ ಎಂದಿಗೂ ಸ್ತ್ರೀಯರನ್ನು ಶರಣುಹೊಗಲಾರನು.''

೪೩–೪೪. ಇಂತೆಂದು ಹೇಳುತ್ತ ಭೀಮನು ರಾಜನನ್ನು ಹಿಂಬಾಲಿಸು ತ್ತಿದ್ದನು. ಯುಧಿಷ್ಠಿರನೂ ಭೀಮನ ಮಾತುಗಳು ಸಾಧುಗಳಲ್ಲವೆಂದು ಮತ್ತೆ ಮತ್ತೆ ಹೇಳುತ್ತ ತಮ್ಮಂದಿರೊಡನೆ ಹೊರಟನು. ಬಳಿಕ ಕ್ಷಣಮಾತ್ರದಲ್ಲಿಯೇ ಇಂದ್ರಿಯ ವೈಕಲ್ಯದಿಂದ ಅತ್ತಿತ್ತ ತಡವುತ್ತ ಭೀಮನು ಭ್ರಾಂತಿಗೊಂಡವನಾಗಿ ಯುಧಿಷ್ಠಿರನನ್ನು ಕುರಿತು ಹೇಳಿದನು.

೪೫. "ಎಲೈ ಬುದ್ಧಿಶಾಲಿಯಾದ ಧರ್ಮರಾಜನೆ! ನನ್ನ ಅವಸ್ಥೆಯನ್ನು ನೋಡು. ನನಗೆ ಎರಡು ಕಣ್ಣುಗಳೂ ಕಾಣಿಸದಂತಾಗಿರುವುವು. ಈ ಇಂದ್ರಿಯ ವೈಕಲ್ಯವು ನನಗೇಕೆ ಪ್ರಾಪ್ತವಾಯಿತು?''

೪೬. ಧರ್ಮರಾಜನು ಹೇಳುತ್ತಾನೆ:—"ಎಲೈ ಭೀಮಸೇನನೆ! ನಿಜ ವಾಗಿಯೂ ಮಹೇಶ್ವರೀದೇವಿಯು ನಿನ್ನಲ್ಲಿ ಕೋಪಗೊಂಡಿರಬೇಕು. ಆದುದ ರಿಂದಲೇ ನಿನ್ನ ಎರಡು ಕಣ್ಣುಗಳೂ ಕಾಣಲಾರದಾದುವು. ನೀನು ಮಹಾ ಸಾಹಸಕಾರ್ಯಗಳನ್ನು ಮಾಡುವವನಲ್ಲವೆ!

**ತತ್ಸಾಂಪ್ರತಮುಭಿಪ್ರೈಹಿ ಶರಣಂ ಪರಮೇಶ್ವರೀಂ ।**
**ಪುನಃ ಪ್ರಸನ್ನಾ ತೇ ದದ್ಯಾತ್ಕದಾಚಿನ್ನಯನೇ ಪುನಃ ॥ ೪೭ ॥**

**ಭೀಮ ಉವಾಚ:—**

**ಅಹಮಪ್ಯಂಗ ಜಾನಾಮಿ ಸಮೋ ದೇವ್ಯಾ ನ ಕಶ್ಚನ ।**
**ಪ್ರಭಾವಪ್ರತ್ಯಯಾರ್ಥಂ ಹಿ ಸದಾ ನಿಂದಾಮಿ ತಾಂ ಪುನಃ ॥ ೪೮ ॥**
**ತಸ್ಮಾತ್ಪ್ರಭಾವಂ ದೃಷ್ಟ್ವೈವಂ ನಿಪತ್ಯ ವಸುಧಾತಲೇ ।**
**ಮನೋವಾಗ್ಬುದ್ಧಿಭಿರ್ನತ್ವಾ ಶರಣಂ ಸ್ತೌಮಿ ಮಾತರಂ ॥ ೪೯ ॥**

**ಸೂತ ಉವಾಚ:—**

**ಇತ್ಯುಕ್ತ್ವಾ ಭ್ರಾತರಂ ಜ್ಯೇಷ್ಠಂ ಸಾಷ್ಟಾಂಗಂ ಪ್ರಣಿಪತ್ಯ ಚ ।**
**ಗತ್ವೈವ ದೇವ್ಯಾಃ ಶರಣಂ ಭೀಮಸ್ತುಷ್ಟಾವ ಮಾತರಂ ॥ ೫೦ ॥**

**ಭೀಮ ಉವಾಚ:—**

**ಸರ್ವಭೂತಾಂಬಿಕೇ ದೇವಿ ಬ್ರಹ್ಮಾಂಡಶತಪೂರಕೇ ।**
**ಬಾಲಿಶಂ ಬಾಲಕಂ ಸ್ವೀಯಂ ತ್ರಾಹಿ ತ್ರಾಹಿ ನಮೋಽಸ್ತು ತೇ ॥ ೫೧ ॥**

---

೪೭. ಆದುದರಿಂದ ನೀನು ತಕ್ಷಣದಲ್ಲಿಯೇ ಪರಮೇಶ್ವರಿಗೆ ಶರಣಾಗತನಾಗು. ಮತ್ತೆ ಅವಳನ್ನು ಪ್ರಸನ್ನೀಕರಿಸಿಕೊಂಡರೆ ನಿನಗೆ ಪುನಃ ದೃಷ್ಟಿಪಾಟವವನ್ನು ಕೊಟ್ಟರೂ ಕೊಡಬಹುದು.''

೪೮. ಭೀಮನು ಹೇಳುತ್ತಾನೆ:—'ಅಣ್ಣಾ! ದೇವಿಗೆ ಸಮಾನರಾದವರು ಯಾರೂ ಇಲ್ಲವೆಂಬುದನ್ನು ನಾನೂ ತಿಳಿದಿರುವೆನು. ಆದರೆ ಆಕೆಯ ಮಾಹಾತ್ಮ್ಯೆಯನ್ನು ಕುರಿತು ಇತರರಿಗೆ ನಂಬುಗೆಯನ್ನುಂಟುಮಾಡುವ ಉದ್ದೇಶದಿಂದ ಆಕೆಯನ್ನು ಯಾವಾಗಲೂ ನಿಂದಿಸುತ್ತಿರುವೆನು.

೪೯. ಈಗ ಆಕೆಯ ಪ್ರಭಾವವನ್ನು ಕಂಡೆನಾಗಿ ಭೂಮಿಯಲ್ಲಿ ಬಿದ್ದು ಮನೋವಾಗ್ಬುದ್ಧಿಗಳಿಂದ ನಮಸ್ಕರಿಸಿ ಶರಣುಹೊಕ್ಕು ಜಗನ್ಮಾತೆಯನ್ನು ಸ್ತೋತ್ರಮಾಡುವೆನು.''

೫೦. ಸೂತನು ಹೇಳುತ್ತಾನೆ:— ಇಂತೆಂದು ಜ್ಯೇಷ್ಠಭ್ರಾತೃವಾದ ಯುಧಿಷ್ಠಿರನಿಗೆ ಹೇಳಿ ಸಾಷ್ಟಾಂಗ ನಮಸ್ಕಾರವನ್ನು ಮಾಡಿ ದೇವಿಗೆ ಶರಣಾಗತನಾಗಿ ಭೀಮಸೇನನು ಜಗನ್ಮಾತೆಯನ್ನು ಸ್ತೋತ್ರಮಾಡಿದನು.

೫೧. ಭೀಮನು ಹೇಳುತ್ತಾನೆ:—''ಸಕಲ ಭೂತಗಳಿಗೂ ಮಾತೃವಾದ ದೇವಿಯೆ! ನೂರು ಬ್ರಹ್ಮಾಂಡಗಳನ್ನು ಆವರಿಸಿಕೊಂಡಿರುವವಳೆ! ಬುದ್ಧಿಹೀನನೂ, ಬಾಲಕನೂ ಆದ ನಿನ್ನವನನ್ನು ಕಾಪಾಡು. ನಿನ್ನನ್ನು ನಮಸ್ಕರಿಸುವೆನು.

ತ್ವಂ ಬ್ರಾಹ್ಮೀ ಬ್ರಹ್ಮಣಃ ಶಕ್ತಿರ್ವೈಷ್ಣವೀ ತ್ವಂ ಚ ಶಾಂಭವೀ ।
ತ್ರಿಮೂರ್ತಿಃ ಶಕ್ತಿರೂಪಾ ತ್ವಂ ರಕ್ಷರಕ್ಷ ನಮೋಽಸ್ತು ತೇ ॥ ೫೨ ॥
ತ್ವಮೈಂದ್ರೀ ಚ ತ್ವಮಾಗ್ನೇಯೀ ತ್ವಂ ಯಾಮ್ಯಾ ತ್ವಂಚ ನೈರ್ಋತೀ ।
ತ್ವಂ ವಾರುಣೀ ತ್ವಂ ವಾಯವ್ಯಾ ತ್ವಂ ಕೌಬೇರೀ ನಮೋಽಸ್ತು ತೇ ॥ ೫೩ ॥
ಐಶಾನಿ ದೇವಿ ವಾರಾಹಿ ನಾರಸಿಂಹಿ ಜಯಪ್ರದೇ ।
ಕೌಮಾರಿ ಕುಲಕಲ್ಯಾಣಿ ಕೃಪೇಶ್ವರಿ ನಮೋಽಸ್ತು ತೇ ॥ ೫೪ ॥
ತ್ವಂ ಸೂರ್ಯೇ ತ್ವಂ ತಥಾ ಸೋಮೇ ತ್ವಂ ಭೌಮೇ ತ್ವಂ ಬುಧೇ ಗುರೌ ।
ತ್ವಂ ಶುಕ್ರೇ ತ್ವಂ ಸ್ಥಿತಾ ರಾಹೌ ತ್ವಂ ಕೇತುಷು ನಮೋಽಸ್ತು ತೇ ॥ ೫೫ ॥
ವಸಸಿ ಧ್ರುವಚಕ್ರೇ ತ್ವಂ ಮುನಿಚಕ್ರೇ ಚ ತೇ ಸ್ಥಿತಿಃ ।
ಭಚಕ್ರೇಷು ಖಚಕ್ರೇಷು ಭೂಚಕ್ರೇ ಚ ನಮೋಽಸ್ತು ತೇ ॥ ೫೬ ॥
ಸಪ್ತದ್ವೀಪೇಷು ತ್ವಂ ದೇವಿ ಸಮುದ್ರೇಷು ಚ ಸಪ್ತಸು ।
ಸಪ್ತಸ್ವಪಿ ಚ ಪಾತಾಲೇಷ್ವನು ಸಂಸ್ಥೇ ನಮೋಽಸ್ತು ತೇ ॥ ೫೭ ॥
ತ್ವಂ ದೇವಿ ಚಾವತಾರೇಷು ವಿಷ್ಣೋಃ ಸಾಹಾಯ್ಯಕಾರಿಣೀ ।
ವಿಷ್ಣುನಾಭ್ಯರ್ಥ್ಯಸೇ ತಸ್ಮಾತ್ತ್ರಾಹಿ ಮಾತರ್ನಮೋಽಸ್ತು ತೇ ॥ ೫೮ ॥

---

೫೨-೫೩. ನೀನೇ ಬ್ರಾಹ್ಮಿಯೆಂಬ ಮಾತೆಯು. ಬ್ರಹ್ಮನಲ್ಲಿರುವ ಸೃಷ್ಟಿಶಕ್ತಿಯೂ, ವಿಷ್ಣುವಿನ ಪಾಲನಶಕ್ತಿಯೂ, ಈಶ್ವರನ ಸಂಹಾರಕಶಕ್ತಿಯೂ ನೀನೇ ಆಗಿರುವೆ. ತ್ರಿಮೂರ್ತಿಗಳ ಶಕ್ತಿರೂಪಳಾದ ನಿನಗೆ ನಮಸ್ಕಾರವು. ನನ್ನನ್ನು ರಕ್ಷಿಸು! ಇಂದ್ರ, ಅಗ್ನಿ, ಯಮ. ನಿರ್ಋತಿ, ವರುಣ, ವಾಯು, ಕುಬೇರರೆಂಬ ದಿಕ್ಪಾಲಕರಲ್ಲಿ ನೆಲಸಿರುವವಳೂ ಆದ ನಿನಗೆ ನಮಸ್ಕಾರವು!

೫೪. ಈಶ್ವರ ಪ್ರಿಯೆಯೆ! ವಾರಾಹಿಯೆ! ನರಸಿಂಹ ಸಹೋದರಿಯೆ! ಜಯಪ್ರದಳೆ! ಕೌಮಾರಿಕೆಯೂ, ಕುಲದೀಪಕಳೂ, ಕೃಪಾಸಮುದ್ರಳೂ ಆದ ನಿನಗೆ ಮಣಿಯುವೆನು!

೫೫. ಸೂರ್ಯ, ಚಂದ್ರ, ಕುಜ, ಬುಧ, ಗುರು, ಶುಕ್ರ, ರಾಹು, ಕೇತುಗಳೆಂಬ ಗ್ರಹಗಳಲ್ಲಿ ನೆಲಸಿರುವ ನಿನಗೆ ನಮಸ್ಕರಿಸುವೆನು!

೫೬. ಧ್ರುವಚಕ್ರದಲ್ಲಿಯೂ, ಸಪ್ತರ್ಷಿಮಂಡಲದಲ್ಲಿಯೂ, ನಕ್ಷತ್ರಮಂಡಲದಲ್ಲಿಯೂ, ಆಕಾಶದಲ್ಲಿಯೂ, ಭೂಲೋಕದಲ್ಲಿಯೂ ವ್ಯಾಪ್ತಳಾಗಿ ವಾಸಿಸುವ ನಿನಗೆ ನಮಸ್ಕಾರವನ್ನು ಮಾಡುವೆನು!

೫೭. ಭೂಲೋಕದ ಸಪ್ತದ್ವೀಪಗಳಲ್ಲಿಯೂ, ಸಪ್ತ ಸಮುದ್ರಗಳಲ್ಲಿಯೂ, ಕೆಳಗಿರುವ ಸಪ್ತ ಅಧೋಲೋಕಗಳಲ್ಲಿಯೂ ನೆಲಸಿರುವ ನಿನಗೆ ನಮಸ್ಕಾರವು!

೫೮. ಎಲೌ ದೇವಿಯೆ! ಶ್ರೀ ಮಹಾವಿಷ್ಣುವಿನ ದಶಾವತಾರಗಳಲ್ಲಿಯೂ ಆತನಿಗೆ ಸಹಾಯವನ್ನು ಮಾಡುವವಳು ನೀನೇ. ಇದಕ್ಕಾಗಿ ವಿಷ್ಣುವಿನಿಂದ

ಚತುರ್ಭುಜೇ ಚತುರ್ವಕ್ತ್ರೇ ಫಲದೇ ಚತ್ವರಪ್ರಿಯೇ ।
ಚರಾಚರಸ್ತುತೇ ದೇವಿ ಚರಣೌ ಪ್ರಣಮಾಮಿ ತೇ ॥ ೫೯ ॥
ಮಹಾಘೋರೇ ಕಾಲರಾತ್ರಿ ಘಂಟಾಲಿ ವಿಕಟೋಜ್ಜ್ವಲೇ ।
ಸತತಂ ಸಪ್ತಮೀಪೂಜ್ಯೇ ನೇತ್ರದೇ ಶರಣಂ ಭವ ॥ ೬೦ ॥
ಮೇರುವಾಸಿನಿ ಪಿಂಗಾಕ್ಷಿ ನೇತ್ರತ್ರಾಣೈಕಕಾರಿಣಿ ।
ಹುಂಹುಂಕಾರಧ್ವಸ್ತದೈತ್ಯೇ ಶರಣ್ಯೇ ಶರಣಂ ಭವ ॥ ೬೧ ॥
ಮಹಾನಾದೇ ಮಹಾವೀರ್ಯೇ ಮಹಾಮೋಹವಿನಾಶಿನಿ ।
ಮಹಾಬಂಧಾಪಹೇ ದೇವಿ ದೇಹಿ ನೇತ್ರತ್ರಯಂ ಮಮ ॥ ೬೨ ॥
ಸರ್ವಮಂಗಲಮಂಗಲ್ಯಾ ಯದಿ ತ್ವಂ ಸತ್ಯತೋಽಂಬಿಕೇ ।
ತತೋ ಮೇ ಮಂಗಲಂ ದೇಹಿ ನೇತ್ರದಾನಾನ್ನಮೋಽಸ್ತು ತೇ ॥ ೬೩ ॥
ಯದಿ ಸರ್ವಕೃಪಾಲುಭ್ಯಃ ಸತ್ಯತಸ್ತ್ವಂ ಕೃಪಾವತೀ ।
ತತಃ ಕೃಪಾಂ ಕುರು ಮಯಿ ದೇಹಿ ನೇತ್ರೇ ನಮೋಽಸ್ತು ತೇ ॥ ೬೪ ॥

---

ಪ್ರಾರ್ಥಿಸಲ್ಪಡುತ್ತಿರುವೆ. ಆದುದರಿಂದ ನನ್ನನ್ನೂ ರಕ್ಷಿಸು. ಲೋಕಮಾತೆಯಾದ ನಿನಗೆ ನಮಸ್ಕರಿಸುವೆನು !

೫೯-೬೦. ನಾಲ್ಕು ಭುಜಗಳಿಂದಲೂ, ನಾಲ್ಕು ಮುಖಗಳಿಂದಲೂ ಮೆರೆಯುವ ನೀನು ಫಲಪ್ರದಳಾಗಿ ಯಜ್ಞಭೂಮಿಗಳಲ್ಲಿ ಪ್ರೀತಳಾಗಿರುವೆ. ಸ್ಥಾವರ ಜಂಗಮ ಭೂತಗಳಿಂದ ಹೊಗಳಿಸಿಕೊಳ್ಳುವ ನಿನ್ನ ಪಾದಗಳಿಗೆ ಪ್ರಣತನಾಗಿರುವೆನು. ಘೋರಸ್ವರೂಪಳೆ ! ಕಾಲರಾತ್ರಿಯೆ ! ಘಂಟಾಲಿಯೆ ! ಭಯವನ್ನುಂಟುಮಾಡುವ ಉಜ್ವಲರೂಪಳೆ! ಯಾವಾಗಲೂ ಸಪ್ತಮಿಯ ಪೂಜೆಯನ್ನು ಸ್ವೀಕರಿಸುವವಳೆ! ನೇತ್ರಗಳನ್ನು ಕೊಟ್ಟು ನನಗೆ ಶರಣ್ಯಳಾಗು.

೬೧. ಮೇರು ಪರ್ವತದಲ್ಲಿ ವಾಸಿಸುವವಳೆ! ಆರಕ್ತನೇತ್ರೆಯೆ ! ನೇತ್ರಗಳಿಗೆ ಶಕ್ತಿಯನ್ನು ಕೊಡುವವಳೆ! ಕೇವಲ ಹುಂಕಾರದಿಂದಲೇ ರಾಕ್ಷಸರನ್ನು ಧ್ವಂಸಮಾಡಿ ಭಕ್ತರಿಗೆ ಶರಣ್ಯಳಾಗಿರುವ ನಿನ್ನನ್ನು ಶರಣುಹೊಂದಿರುವೆನು.

೬೨-೬೪. ಭೀಮನಾದೆಯೂ, ಮಹಾಪರಾಕ್ರಮಿಯೂ, ಅಹಂಕಾರ ಮಮಕಾರಗಳೆಂಬ ಮಹಾಮೋಹವನ್ನು ನಾಶಮಾಡುವವಳೂ, ಸಂಸಾರವೆಂಬ ಮಹಾಬಂಧವನ್ನು ಭಕ್ತರಿಗೆ ಕಳೆದುಹಾಕುವ ದೇವಿಯಾದ ನೀನು ನನಗೆ ನೇತ್ರತ್ರಯವನ್ನು ಕರುಣಿಸು ! ಅಂಬಿಕೆಯೆ ! ಸಕಲ ಮಂಗಳಗಳಿಗೂ ಮಾಂಗಲ್ಯದಾಯಕಿಯಾಗಿ ನೀನು ನಿಜವಾಗಿಯೂ ಇರುವುದಾದರೆ ನನಗೆ ನೇತ್ರಗಳನ್ನು ಕೊಟ್ಟು ಮಂಗಳವನ್ನುಂಟುಮಾಡು ! ಎಲ್ಲ ಕೃಪಾಳುಗಳಾದ ದೈವಗಳಿಗಿಂತಲೂ ನಿಜವಾಗಿಯೂ ನೀನು ಕೃಪಾನ್ವಿತೆಯಾದರೆ ನನ್ನಲ್ಲಿಯೂ ಕೃಪೆಯನ್ನು ತೋರಿಸಿ ನನಗೆ ದೃಷ್ಟಿಯನ್ನು ಕೊಡು. ನಿನಗೆ ನಮಸ್ಕಾರವು !

ಪಾಪೋಽಯಮಿತಿ ಯದ್ದೇವಿ ಪ್ರಕುಪ್ಯಸಿ ವೃಥೈವ ತತ್ ।
ತ್ವಂ ಮಾಂ ಮೋಹಯಸಿ ತ್ವೇವಂ ನ ತೇ ತತ್ಕಿಂ ನಮೋಽಸ್ತು ತೇ ॥೬೫॥
ಸ್ವಯಮುತ್ಪಾದ್ಯ ಯೋ ರೇಣುಂ ಮೇಷ್ಟಿತಸ್ತೇನ ಕುಪ್ಯತಿ ।
ತಥಾ ಕುಪ್ಯಸಿ ಮೇ ಮಾತರನಾಥಸ್ಯಾಸ್ಯ ದರ್ಶಯ ॥ ೬೬ ॥
ಇತಿ ಸ್ತುತಾ ಪಾಂಡವೇನ ದೇವೀ ಕೃಷ್ಣಚ್ಛವಿಚ್ಛವಿಃ ।
ರಾಮಾ ರಾಮಾಭಿವದನಾ ಪ್ರತ್ಯಕ್ಷಾ ಸಮಜಾಯತ ॥ ೬೭ ॥
ವಿದ್ಯುತ್ಕೋಟಿಸಮಾಭಾಸಮುಕುಟೇನಾತಿಶೋಭಿತಾ ।
ಸೂರ್ಯಬಿಂಬಪ್ರಭಾಭ್ಯಾಂ ಚ ಕುಂಡಲಾಭ್ಯಾಂ ವಿಭೂಷಿತಾ ॥ ೬೮ ॥
ಪ್ರವಾಹೇಣೇವ ಹಾರೇಣ ಸುರನದ್ಯಾ ವಿರಾಜಿತಾ ।
ಕಲ್ಪದ್ರುಮಪ್ರಸೂನೈಶ್ಚ ಪೂರ್ಣಾವತಂಸಮಂಡಿತಾ ॥ ೬೯ ॥
ದಂತೇಂದುಕಾಂತಿವಿಧ್ವಸ್ತ ಭಕ್ತಮೋಹಮಹಾಭಯಾ ।
ಖಡ್ಗಚರ್ಮಶೂಲಪಾತ್ರ ಚತುರ್ಭುಜ ವಿರಾಜಿತಾ ॥ ೭೦ ॥

---

೬೫. ಎಲೌ ದೇವಿಯೆ! ನಾನು ಪಾಪಿಯೆಂದು ನನ್ನಲ್ಲಿ ಕೋಪಗೊಳ್ಳುವುದು ಕೇವಲ ನಿಷ್ಫಲವೇ ಸರಿ. ನೀನೇ ನನ್ನನ್ನು ಇಂತು ಮೋಹಗೊಳಿಸುವವಳಲ್ಲವೆ? ಆ ದೋಷವೂ ನಿನ್ನದೇ ಅಲ್ಲವೆ?

೬೬. ತಾನೇ ಧೂಳನ್ನೆಬ್ಬಿಸಿ ಅದರಿಂದ ಕಣ್ಣು ಕಾಣದೆ ಕೋಪಗೊಂಡ ಮೂಢನಂತೆ ನನ್ನಿಂದ ನಿಂದೆಯನ್ನು ಮಾಡಿಸಿ ನನ್ನಲ್ಲಿ ತಾಯಿಯಾದ ನೀನು ಕೋಪಗೊಳ್ಳಬಹುದೆ? ಅನಾಥನಾದ ನನಗೆ ನಿನ್ನ ರೂಪವನ್ನು ತೋರಿಸು.''

೬೭. ಭೀಮಸೇನನ ಈ ಸ್ತೋತ್ರವನ್ನು ಕೇಳಿ ದೇವಿಯು, ಕೃಷ್ಣನ ಮೈಬಣ್ಣವನ್ನು ಹೋಲುವ ನೀಲಚ್ಛವಿಯಿಂದ ಕೂಡಿ ಮನೋಹರಳೂ, ಪ್ರಸನ್ನ ಮುಖಕಮಲವುಳ್ಳವಳೂ ಆಗಿ ಅಲ್ಲಿಯೇ ಪ್ರತ್ಯಕ್ಷಳಾದಳು.

೬೮. ಕೋಟಿ ಮಿಂಚಿನ ಬಳ್ಳಿಗಳ ಕಾಂತಿಯಿಂದ ಆಕೆಯ ಕಿರೀಟವು ಶೋಭಿಸುತ್ತಿದ್ದಿತು. ಸೂರ್ಯಬಿಂಬಗಳಂತೆ ಆಕೆಯ ಎರಡು ಕಿವಿಗಳಲ್ಲಿಯೂ ಕುಂಡಲಗಳು ರಾರಾಜಿಸುತ್ತಿದ್ದುವು.

೬೯. ದೇವಗಂಗೆಯ ಪ್ರವಾಹದಂತೆ ಥಳಥಳಿಸುವ ಹಾರದಿಂದ ಆಕೆಯ ವಕ್ಷವು ಶೋಭಿಸುತ್ತಿದ್ದಿತು. ಕಲ್ಪವೃಕ್ಷದ ಪುಷ್ಪಗಳಿಂದ ಆಕೆಯ ಅವತಂಸವು ಅಲಂಕೃತವಾಗಿದ್ದಿತು.

೭೦. ದಂತಕಾಂತಿಯೆಂಬ ಬೆಳದಿಂಗಳಿನಿಂದ ಭಕ್ತನ ಮೋಹ, ಭಯಗಳೆಂಬ ಅಂಧಕಾರವನ್ನು ದೂರಮಾಡುತ್ತ ನಾಲ್ಕು ಭುಜಗಳಲ್ಲಿಯೂ ಖಡ್ಗ, ಚರ್ಮ, ತ್ರಿಶೂಲ ಮತ್ತು ಪಾತ್ರೆಗಳನ್ನು ಹಿಡಿದಿದ್ದಳು.

ವಾಸಸಾ ತಡಿದಾಭೇನ ಮೇಘಲೇಖೇವ ವೇಷ್ಟಿತಾ ।
ಮಾಲಯಾ ಸುಮಮಾಲಿನ್ಯಾ ಭ್ರಾಜಿತಾ ಸಾಲಿಮಾಲಯಾ ॥ ೭೧ ॥
ಸತಾಂ ಶರಣದಾಭ್ಯಾಂ ಚ ಪದ್ಭ್ಯಾಂ ನೂಪುರರಾಜಿತಾ ।
ಜಯೇತಿಪುಷ್ಪವರ್ಷೈಶ್ಚ ಶಕ್ರಾದ್ಯೈರಭಿಪೂಜಿತಾ ॥ ೭೨ ॥
ಗಣೈರ್ದೇವೀಭಿರಾಕೀರ್ಣಾ ಶತಪದ್ಮೈರ್ಮಹಾಮಲೈಃ ।
ತಾಂ ತಾದೃಶೀಂ ವ್ಯೋಮ್ನಿ ದೃಷ್ಟ್ವಾ ಮಾತರಂ ವ್ಯೋಮವಾಹಿನೀಂ ॥
ಭೂಮೌ ನಿಪತ್ಯ ರಾಜೇಂದ್ರೋ ನಮೋ ನಮ ಇತಿ ಸ್ಥಿತಃ ।
ಭೀಮೋಽಪಿ ಮಾತರಂ ದೃಷ್ಟ್ವಾ ಯಥಾ ಬಾಲೋಽಭಿಧಾವತಿ ॥ ೭೪ ॥
ತಥಾ ಸಮ್ಮುಖಮಾಧಾವಜ್ಜಯಮಾತರಿತಿ ಬ್ರುವನ್ ।
ದರ್ಶನೇನೈವ ದೇವ್ಯಾಶ್ಚ ಶುಭನೇತ್ರತ್ರಯಸ್ತದಾ ।
ಪ್ರಣಿಪತ್ಯ ನಮಸ್ತುಭ್ಯಂ ನಮಸ್ತುಭ್ಯಂ ಮುಹುರ್ಜಗೌ ॥ ೭೫ ॥
ಪ್ರಸೀದ ದೇವಿ ಪದ್ಮಾಕ್ಷಿ ಪುನರ್ಮಾತಃ ಪ್ರಸೀದ ಮೇ ।
ಪುನಃ ಪ್ರಸೀದ ಪಾಪಸ್ಯ ಕ್ಷಮಾಶೀಲೇ ಪ್ರಸೀದ ಮೇ ॥ ೭೬ ॥

---

೭೧. ಆ ದೇವಿಯು ಪೀತಾಂಬರವನ್ನುಟ್ಟು ಮಿಂಚಿನೊಡಗೂಡಿದ ಮೇಘ ಲೇಖೆಯಂತೆ ಕಾಣುತ್ತಿದ್ದಳು. ಕಂಠದಲ್ಲಿ ಸುವಾಸನೆಗಾಗಿ ಎರಗುತ್ತಿರುವ ದುಂಬಿಗಳೊಡನೆ ಕೂಡಿದ ದೇವಕುಸುಮಗಳ ಮಾಲೆಯು ಕಂಗೊಳಿಸುತ್ತಿತ್ತು.

೭೨. ಸತ್ಪುರುಷರಿಗೆ ಶರಣಾಗತಿ ಸ್ಥಾನಗಳಾದ ಆಕೆಯ ಪಾದಪದ್ಮಗಳು ನೂಪುರಗಳಿಂದ ಬೆಳಗುತ್ತಿದ್ದುವು. ಇಂದ್ರಾದಿದೇವತೆಗಳೂ ಜಯಕಾರವನ್ನು ಮಾಡುತ್ತ ಆ ದೇವಿಯನ್ನು ಪೂಜಿಸುತ್ತಿದ್ದರು.

೭೩–೭೫. ಅತ್ಯಂತ ಪರಿಶುದ್ಧರೂ ನೂರು ಪದ್ಮಗಳ ಸಂಖ್ಯೆಯುಳ್ಳವರೂ ಆದ ಗಣಗಳೂ ದೇವಿಯರೂ ಆಕೆಯನ್ನು ಸುತ್ತುವರೆದಿದ್ದರು. ಇಂತಹ ವಿಭವ ದಿಂದ ಕೂಡಿ ಆಕಾಶಮಾರ್ಗದಲ್ಲಿ ಸಂಚರಿಸುವ ಆ ದೇವಿಯು ಪ್ರತ್ಯಕ್ಷಳಾಗಲು ಆ ಜಗನ್ಮಾತೆಯನ್ನು ಕಂಡು ಯುಧಿಷ್ಠಿರನು ಭೂಮಿಯಲ್ಲಿ ಸಾಷ್ಟಾಂಗ ನಮಸ್ಕಾರ ವನ್ನು ಮಾಡಿ ನಿಂತನು. ಭೀಮಸೇನನೂ ಕೂಡ ಬಹಳಕಾಲದ ಮೇಲೆ ತಾಯಿ ಯನ್ನು ಕಂಡ ಬಾಲಕನಂತೆ ಆತುರದಿಂದ ಓಡಿಬಂದು ಜಯಕಾರವನ್ನು ಮಾಡುತ್ತ ಎದುರಿಗೆ ನಿಂತನು. ಆತನಿಗೆ ದೇವಿಯ ದರ್ಶನಮಾತ್ರದಿಂದಲೇ ಮೂರು ಕಣ್ಣುಗಳೂ ಕಾಣತೊಡಗಿದವು. ಆಗ ಭೀಮನು ನಮಸ್ಕರಿಸಿ ಮತ್ತೆ ಮತ್ತೆ ನಮಸ್ಕಾರಗಳನ್ನು ಹೇಳುತ್ತಿದ್ದನು.

೭೬. "ಪದ್ಮಲೋಚನೆಯಾದ ದೇವಿಯೆ! ಜಗನ್ಮಾತೆಯೆ! ನನ್ನಲ್ಲಿ ಪ್ರಸನ್ನ ಳಾಗು. ಪಾಪಿಯಾದ ನನ್ನಲ್ಲಿ ಮತ್ತೆ ಪ್ರಸಾದವನ್ನು ಕರುಣಿಸು! ಕ್ಷಮಾ ವಂತೆಯಾದ ನೀನು ನನಗೆ ಸುಮುಖಳಾಗು!!"

ಏವಂ ಸ್ತುತಾ ಭಗವತೀ ಸ್ವಯಮುತ್ಥಾಪ್ಯ ಪಾರ್ಥಿವಂ ।
ಭೀಮಂ ಚೋತ್ಸಂಗಮಾರೋಪ್ಯ ಕೃಪಯೇದಂ ವಚೋಽಬ್ರವೀತ್ ॥

ಶ್ರೀದೇವ್ಯುವಾಚ :—

ಯತ್ತ್ವಯಾಭಿಹಿತಂ ಸ್ತೋತ್ರಂ ತೇನ ತುಷ್ಟಾ ತವೋಪರಿ ।
ಅತೋ ನೇತ್ರತ್ರಯಂ ದತ್ತಂ ದ್ವೇ ಬಾಹ್ಯೇ ಚಾಂತರಂ ಪರಂ ॥ ೭೮ ॥
ನಾಹಂ ಕೋಪಂ ಯತ್ರ ತತ್ರ ದರ್ಶಯಾಮಿ ವೃಕೋದರ ।
ತ್ವಂ ತು ಪ್ರಮಾಣಪುರುಷಸ್ತ್ವತಃ ಕ್ರೋಧಮದರ್ಶಯಂ ॥ ೭೯ ॥
ನೈತತ್ಪ್ರಿಯಂ ಚ ಕೃಷ್ಣಸ್ಯ ಭ್ರಾತುರ್ಮೇ ಕ್ರೋಧಮಾಚರಂ ।
ಭವಂತೋ ವಾಸುದೇವಸ್ಯ ಯತಃ ಪ್ರಾಣಾ ಬಹಿಶ್ಚರಾಃ ॥ ೮೦ ॥
ತ್ವಂ ಚ ನಿಂದಸಿ ಮಾಂ ನಿತ್ಯಂ ತಚ್ಚ ಜಾನೇ ವೃಕೋದರ ।
ಮತ್ಪ್ರಭಾವಪರಿಜ್ಞಾನಹೇತವೇ ಕೀದೃಶಸ್ತ್ವಿತಿ ॥ ೮೧ ॥
ತದೇವಂ ನೈವ ಭೂಯಸ್ತೇ ಪ್ರಕರ್ತವ್ಯಂ ಕಥಂಚನ ।
ಅಕ್ಷಿಕ್ಷೇಪೋ ಹಿ ಪೂಜ್ಯಾನಾಮಾವಹತ್ಯಧಿಕಂ ರುಜಂ ॥ ೮೨ ॥

---

೭೭. ಇಂತು ಸ್ತೋತ್ರಮಾಡುತ್ತಿದ್ದ ಭೀಮಸೇನನನ್ನು ಶ್ರೀದೇವಿಯು ಮೇಲಕ್ಕೆಬ್ಬಿಸಿ ತನ್ನ ತೊಡೆಯಮೇಲೆ ಕುಳ್ಳಿರಿಸಿಕೊಂಡು ಕೃಪಾಪೂರಿತಳಾಗಿ ಹೇಳತೊಡಗಿದಳು.

೭೮. ಶ್ರೀದೇವಿಯು ಹೇಳುತ್ತಾಳೆ:—"ನೀನು ಪಠಿಸಿದ ಸ್ತೋತ್ರವನ್ನು ಕೇಳಿ ನಿನ್ನ ಮೇಲೆ ಅತ್ಯಂತ ಸಂತೋಷಗೊಂಡಿರುವೆನು. ಆದುದರಿಂದಲೇ ನಿನಗೆ ಮೂರು ಕಣ್ಣುಗಳನ್ನು ಕೊಟ್ಟಿರುವೆನು. ಎರಡು ಸ್ಥೂಲ ಚಕ್ಷುಸ್ಸುಗಳು. ಒಂದು ಜ್ಞಾನನೇತ್ರವು.

೭೯. ಎಲೈ ವೃಕೋದರನೆ! ನಾನು ಎಲ್ಲೆಲ್ಲಿಯೂ ಕೋಪವನ್ನು ತೋರಿಸುವವಳಲ್ಲ. ಆದರೆ ನೀನು ಇತರರಿಗೆ ಮೇಲ್ಪಂಕ್ತಿಯಾದವನಾದುದರಿಂದ ನಿನ್ನಲ್ಲಿ ಕ್ರೋಧವನ್ನು ತೋರಿಸಿದೆನು.

೮೦. ನಾನು ಈ ಕ್ರೋಧವನ್ನು ತೋರಿಸಿದುದು ನನ್ನ ಸಹೋದರನಾದ ಶ್ರೀ ಕೃಷ್ಣನಿಗೆ ಪ್ರಿಯವಲ್ಲ. ನೀವು ಅವನಿಗೆ ಬಹಿಶ್ಚರರಾದ ಪ್ರಾಣಗಳಾಗಿರುವಿರಿ.

೮೧. ಭೀಮಸೇನನೆ! ನನ್ನ ಪ್ರಭಾವವನ್ನು ತಿಳಿಯಬೇಕೆಂಬ ಅಪೇಕ್ಷೆಯಿಂದ ನೀನು ನಿತ್ಯವೂ ನನ್ನನ್ನು ನಿಂದಿಸುತ್ತಿರುವುದನ್ನು ನಾನು ತಿಳಿದಿರುವೆನು.

೮೨. ಇನ್ನು ಮೇಲೆ ಈ ಕಾರ್ಯವನ್ನೆಂದಿಗೂ ಖಂಡಿತವಾಗಿಯೂ ಮಾಡಬೇಡ. ಪೂಜ್ಯರಾದವರ ಕೃಪಾಕಟಾಕ್ಷವೆಂಬುದು ಮನುಷ್ಯರ ಅಧಿಕವಾದ ಆಧಿವ್ಯಾಧಿಗಳನ್ನೂ ಹೋಗಲಾಡಿಸುವುದು.

ತದಿದಾನೀಂ ಸರ್ವಮೇವಂ ಕ್ಷಂತವ್ಯಂ ಚ ಪರಸ್ಪರಂ ।
ಯಚ್ಚ ಬ್ರವೀಮಿ ತ್ವಾಂ ವೀರ ತನ್ನಿಶಾಮಯ ಭಾರತ ॥ ೮೩ ॥
ಯದಾ ಯದಾ ಹಿ ಧರ್ಮಸ್ಯ ಗ್ಲಾನಿರಾವಿರ್ಭವೇದ್ಧರಿಃ ।
ತದಾ ತದಾವತೀರ್ಯಾಹಂ ವಿಷ್ಣೋರಸ್ಯ ಸಹಾಯಿನೀ ॥ ೮೪ ॥
ಇದಾನೀಂ ಚ ಹರಿರ್ಜಾತೋ ವಸುದೇವಸುತೋ ಭುವಿ ।
ಅಹಂ ಚ ಗೋಪನಂದಸ್ಯ ಏಕಾನಂಶಾಭಿಧಾ ಸುತಾ ॥ ೮೫ ॥
ತದ್ಯಥಾ ಭಗವಾನ್ಕೃಷ್ಣೋ ಮಮ ಭ್ರಾತಾಭಿಪೂಜಿತಃ ।
ಭವಂತೋಽಪಿ ತಥಾ ಮಹ್ಯಂ ಭ್ರಾತರಃ ಪಾಂಡವಾಃ ಸದಾ ॥ ೮೬ ॥
ಯೇ ಭೀಮಭಗಿನೀತ್ಯೇವಂ ಮಾಂ ಸ್ತೋಷ್ಯಂತಿ ನರೋತ್ತಮಾಃ ।
ಆಬಾಧಾ ನಾಶಯಿಷ್ಯಾಮಿ ತೇಷಾಂ ಹರ್ಷಸಮನ್ವಿತಾ ॥ ೮೭ ॥
ತ್ವಂ ಚ ಭ್ರಾತುರ್ಜಯಂ ವೀರ ಪ್ರದಾಸ್ಯಾಮಿ ಮಹಾರಣೇ ।
ಭುಜಯೋಸ್ತೇ ವಸಿಷ್ಯಾಮಿ ಧಾರ್ತರಾಷ್ಟ್ರನಿಪಾತನೇ ॥ ೮೮ ॥

---

೮೩. ಈಗ ನಡೆದ ವಿಷಯದಲ್ಲೆಲ್ಲ ಒಬ್ಬರನ್ನೊಬ್ಬರು ಕ್ಷಮಿಸಬೇಕು. ಎಲೈ ಭಾರತ ವೀರನೆ! ಈಗ ನಾನು ಹೇಳುವುದನ್ನು ಶ್ರದ್ಧೆಯಿಂದ ಕೇಳುವವನಾಗು.

೮೪. ಧರ್ಮಕ್ಕೆ ಯಾವಾಗ ಗ್ಲಾನಿಯುಂಟಾಗುವುದೊ, ಆ ಪರಿಸ್ಥಿತಿಗಳಲ್ಲೆಲ್ಲ ಮಹಾವಿಷ್ಣುವು ಅವತಾರಗಳನ್ನೆತ್ತುತ್ತಲಿರುವನು. ಆ ಸಮಯಗಳಲ್ಲೆಲ್ಲ ನಾನೂ ಅವತೀರ್ಣಳಾಗಿ ಆತನಿಗೆ ಸಹಾಯವನ್ನು ಮಾಡುವೆನು.

೮೫. ಈಗ ಮಹಾವಿಷ್ಣುವು ಭೂಲೋಕದಲ್ಲಿ ವಸುದೇವನ ಮನೆಯಲ್ಲಿ ಅವತರಿಸಿರುವನು. ನಾನೂ ನಂದಗೋಪನ ಮನೆಯಲ್ಲಿ ಏಕಾನಂಶೆಯೆಂಬ ಹೆಸರಿನಿಂದ ಹುಟ್ಟಿರುವೆನು.

೮೬. ಆದುದರಿಂದ ಸಹೋದರನಾದ ಶ್ರೀಕೃಷ್ಣನು ನನಗೆ ಹೇಗೆ ಪೂಜ್ಯನಾಗಿರುವನೊ, ಹಾಗೆಯೇ ನೀವೂ ಪೂಜ್ಯರಾಗಿ ನನಗೆ ಸಹೋದರರಾಗಿ ಯಾವಾಗಲೂ ಇರಬೇಕು.

೮೭. ಯಾವ ಮನುಷ್ಯಶ್ರೇಷ್ಠರು ನನ್ನನ್ನು ಭೀಮಸಹೋದರಿಯೆಂಬ ನಾಮದಿಂದ ಸ್ತುತಿಸುವರೊ, ಅವರ ಕ್ಲೇಶಗಳೆಲ್ಲವನ್ನೂ ಅತ್ಯಂತ ಹರ್ಷಸಮನ್ವಿತಳಾಗಿ ನಾಶಗೊಳಿಸುವೆನು.

೮೮. ಎಲೈ ವೀರನೆ! ನಿನಗೂ ಕೂಡ ದಾಯಾದಿಗಳಾದ ಕೌರವರೊಡನೆ ಉಂಟಾಗುವ ಯುದ್ಧದಲ್ಲಿ ಜಯವನ್ನೊದಗಿಸಿಕೊಡುವೆನು. ದುರ್ಯೋಧನಾದಿಗಳನ್ನು ನಿಗ್ರಹಿಸುವ ಸಮಯದಲ್ಲಿ ನಾನೇ ನಿನ್ನ ಭುಜಗಳಲ್ಲಿ ನೆಲಸಿರುವೆನು.

ಕೃತ್ವಾ ರಾಜ್ಯಂ ಚ ವರ್ಷಾಣಿ ಷಟ್ತ್ರಿಂಶತ್ತದನಂತರಂ ।
ಮಹಾಪ್ರಸ್ಥಾನಧರ್ಮೇಣ ಪೃಥ್ವೀಂ ಪರಿಚರಿಷ್ಯಥ ॥ ೮೯ ॥
ಅಸ್ಮಿನ್ನೇವ ತತೋ ದೇಶೇ ಲೋಹೋ ನಾಮ ಮಹಾಸುರಃ ।
ಭವತಾಂ ನ್ಯಸ್ತಶಸ್ತ್ರಾಣಾಂ ವಧಾರ್ಥಂ ಪ್ರಕ್ರಮಿಷ್ಯತಿ ॥ ೯೦ ॥
ತತಸ್ತಂ ಸರ್ವಭೂತಾನಾಮವಧ್ಯಂ ಭವತಾಂ ಕೃತೇ ।
ಅಂಧಂ ಕೃತ್ವಾ ಪಾತಯಿಷ್ಯೇ ತತೋ ಯೂಯಂ ಪ್ರಯಾಸ್ಯಥ ॥ ೯೧ ॥
ವಿಸ್ತೀರ್ಯ ಚ ಹಿಮಂ ಸರ್ವಂ ನಿಮಗ್ನಾ ವಾಲುಕಾರ್ಣವೇ ।
ಸ್ವರ್ಗಂ ಯಾಸ್ಯತಿ ರಾಜೈಕಃ ಸಶರೀರೋ ಗಮಿಷ್ಯತಿ ॥ ೯೨ ॥
ಅಂಧೋ ಯತ್ರ ಕೃತೋ ಲೋಹೋ ಲೋಹಾಣಾಭಿಧಯಾ ಪುರಂ ।
ಭವಿಷ್ಯತಿ ಚ ತತ್ರೈವ ಸ್ಥಾಸ್ಯೇಽಹಂ ಕಲಯಾ ಸದಾ ॥ ೯೩ ॥
ತತಃ ಕಲಿಯುಗೇ ಪ್ರಾಪ್ತೇ ಕೇಲೋ ನಾಮ ಭವಿಷ್ಯತಿ ।
ಮಮ ಭಕ್ತಸ್ತಸ್ಯ ನಾಮ್ನಾ ಭಾವ್ಯಾ ಕೇಲೇಶ್ವರೀತ್ಯಹಂ ॥ ೯೪ ॥

---

೮೯. ಕೌರವ ನಿಗ್ರಹವಾದ ಬಳಿಕ ನೀವು ಮುವ್ವತ್ತಾರು ವರ್ಷಗಳ ಕಾಲ ರಾಜ್ಯಭಾರವನ್ನು ಮಾಡಿ ಮಹಾ ಪ್ರಸ್ಥಾನವನ್ನು ಮಾಡುವರಾಗಿ ಭೂಮಿಯನ್ನು ಸಂಚರಿಸುವಿರಿ.

೯೦. ಆಗ ಶಸ್ತ್ರನ್ಯಾಸವನ್ನು ಮಾಡಿ ಈ ಪ್ರದೇಶದಲ್ಲಿಯೇ ನೀವು ಸಂಚರಿಸುತ್ತಿರುವಲ್ಲಿ ನಿಮ್ಮನ್ನು ಕೊಲ್ಲಬಯಸಿ ಲೋಹನೆಂಬ ರಾಕ್ಷಸನೊಬ್ಬನು ಪ್ರಾಪ್ತನಾಗುವನು.

೯೧. ಸಕಲ ಭೂತಗಳಿಂದಲೂ ಅವಧ್ಯನಾದ ಆ ರಾಕ್ಷಸನನ್ನು ನಿಮ ಗೋಸ್ಕರ ಅಂಧನನ್ನಾಗಿ ಮಾಡಿ ನಿಗ್ರಹಿಸುವೆನು. ಬಳಿಕ ನಿಮ್ಮ ಪ್ರಯಾಣವು ಸುಗಮವಾಗುವುದು.

೯೨. ಹಿಮವತ್ಪಾರ್ಶ್ವದ ಹಿಮವೆಲ್ಲವನ್ನೂ ದಾಟಿದಮೇಲೆ ನೀವು ನಾಲ್ವರೂ ಮರಳಿನ ಪ್ರದೇಶದಲ್ಲಿ ದೇಹಗಳನ್ನು ಬಿಡುವಿರಿ. ಯುಧಿಷ್ಠಿರ ನೊಬ್ಬನು ಮಾತ್ರ ಸಶರೀರನಾಗಿಯೇ ಸ್ವರ್ಗವನ್ನು ಸೇರುವನು.

೯೩. ಲೋಹನೆಂಬ ರಾಕ್ಷಸನು ಅಂಧನಾಗಿ ಮಾಡಲ್ಪಟ್ಟ ಪ್ರದೇಶದಲ್ಲಿ ಲೋಹಾಣವೆಂಬ ಪಟ್ಟಣವುಂಟಾಗುವುದು. ಅಲ್ಲಿ ನಾನು ಯಾವಾಗಲೂ ನನ್ನ ಅಂಶದಿಂದ ಸನ್ನಿಹಿತಳಾಗಿರುವೆನು.

೯೪. ಬಳಿಕ ಕಲಿಯುಗವು ಪ್ರಾಪ್ತವಾಗಲು ಕೇಲನೆಂಬ ಒಬ್ಬ ಭಕ್ತನು ಹುಟ್ಟುವನು. ಅವನಿಗಾಗಿ ನಾನು ಕೇಲೇಶ್ವರಿಯೆಂಬ ಹೆಸರಿನಿಂದ ಪ್ರಸಿದ್ಧ ಳಾಗಿರುವೆನು.

ವೈಲಾಕಶ್ಚಾಪರೋ ಭಕ್ತೋ ಭವಿಷ್ಯತಿ ಮಮೋತ್ತಮಃ ।
ತಸ್ಯಾರಾಧನತಃ ಖ್ಯಾತಿಂ ಪ್ರಯಾಸ್ಯಾಮಿ ಕಲೌ ಯುಗೇ ॥ ೯೫ ॥
ಲೋಹಾಣಸಂಸ್ಥಿತಾಂ ಚೈವ ಯೇಽರ್ಚಯಿಷ್ಯಂತಿ ಮಾಂ ಜನಾಃ ।
ಶ್ರದ್ಧಯಾ ಸಿತಸಪ್ತಮ್ಯಾಂ ತೈಶ್ಚ ಸರ್ವತ್ರ ಪೂಜಿತಾ ॥ ೯೬ ॥
ಅಂಧಾನಾಂ ಚ ಪ್ರದಾಸ್ಯಾಮಿ ಭಾವೀನಿ ನಯನಾನ್ಯಹಂ ।
ತಸ್ಮಿನ್ದಿನೇ ತರ್ಪಿತಾಹಂ ಭಕ್ತಿಭಾವೇನ ಪಾಂಡವ ॥ ೯೭ ॥
ಪಾದಾಂಗುಷ್ಠೇನ ಚ ಭವಾಂಸ್ತತ್ರ ಕುಂಡಂ ವಿಧಾಸ್ಯತಿ ।
ಸರ್ವತೀರ್ಥಸ್ನಾನತುಲ್ಯಂ ತತ್ರ ಸ್ನಾನಂ ಚ ತದ್ದಿನೇ ॥ ೯೮ ॥
ಮತ್ಸ್ಯಾನಾಂ ನೇತ್ರ ನೇತ್ರಸ್ಥ ತೇಜಸ್ತನ್ಮಾತ್ರಮುತ್ತಮಂ ।
ಉದ್ಧೃತ್ಯ ಯೋಜಯಿಷ್ಯಾಮಿ ಪ್ರತ್ಯಕ್ಷಂ ತದ್ಭವಿಷ್ಯತಿ ॥ ೯೯ ॥
ಏವಂ ಮಮ ಮಹಾಸ್ಥಾನಂ ಕಲೌ ಖ್ಯಾತಂ ಭವಿಷ್ಯತಿ ॥ ೧೦೦ ॥
ಲೋಹಾಣಾಖ್ಯಂ ಮಹಾಬಾಹೋ ನಾಮ ಕೇಲೇಶ್ವರೀತಿ ಚ ॥ ೧೦೧ ॥

---

೯೫. ಮತ್ತು ಕಲಿಯುಗದಲ್ಲಿಯೇ ವೈಲಾಕನೆಂಬ ಮತ್ತೊಬ್ಬ ಉತ್ತಮ ಭಕ್ತನುಂಟಾಗುವನು. ಆತನ ಪೂಜೆಯ ಫಲವಾಗಿಯೂ ನಾನು ಪ್ರಖ್ಯಾತಿಯನ್ನು ಹೊಂದುವೆನು.

೯೬. ಲೋಹಾಣನಗರದಲ್ಲಿ ನೆಲಸಿರುವ ನನ್ನನ್ನು ಯಾವ ಜನರು ಪ್ರತಿಮಾಸದ ಶುಕ್ಲ ಸಪ್ತಮಿಯ ದಿನದಲ್ಲಿ ಪೂಜಿಸುವರೊ, ಅವರಿಂದ ನಾನು ಸರ್ವಕಾಲದಲ್ಲಿಯೂ ಪೂಜಿತಳಾದಂತೆಯೇ ಸರಿ.

೯೭. ಆ ದಿವಸದಲ್ಲಿ ಭಕ್ತಿ ಭರಿತವಾದ ಮನಸ್ಸಿನಿಂದ ಯಾವ ಕುರುಡರು ನನ್ನನ್ನು ತೃಪ್ತಿಗೊಳಿಸುವರೊ, ಅವರ ಅಂಧತ್ವವನ್ನು ಹೋಗಲಾಡಿಸಿ ನಯನ ಶಕ್ತಿಯನ್ನು ಅನುಗ್ರಹಿಸುವೆನು.

೯೮. ಅಲ್ಲಿ ನೀನು ಪಾದದ ಹೆಬ್ಬೆರಳಿನಿಂದ ಕುಂಡವೊಂದನ್ನು ನಿರ್ಮಾಣ ಮಾಡು. ಆ ದಿವಸ ಯಾರು ಆ ತೀರ್ಥದಲ್ಲಿ ಸ್ನಾನಮಾಡುವರೊ, ಅವರ ಸ್ನಾನವು ಭೂಲೋಕದ ಸಕಲ ತೀರ್ಥಗಳ ಸ್ನಾನದ ಸಮಾನವೆನಿಸುವುದು.

೯೯. ಮತ್ಸ್ಯಗಳ ನೇತ್ರಗಳೊಂದೊಂದರಿಂದಲೂ ತೇಜಸ್ಸಿನ ತನ್ಮಾತ್ರೆಯನ್ನು ತೆಗೆದು ಭಕ್ತರಾದ ಅಂಧರ ಕಣ್ಣುಗಳಿಗೆ ಸೇರಿಸುವೆನು. ಅದು ಈ ಕ್ಷೇತ್ರದಲ್ಲಿ ಪ್ರತ್ಯಕ್ಷ ಪ್ರಮಾಣವಾಗಿರುವುದು.

೧೦೦–೧೦೧. ಇಂತು ಕಲಿಯುಗದಲ್ಲಿ ನನ್ನ ಮಹಾಕ್ಷೇತ್ರವು ವಿಖ್ಯಾತಿಯನ್ನು ಪಡೆಯುವುದು. ಎಲೈ ಮಹಾಭುಜನೆ! ಲೋಹಾಣ ನಗರದಲ್ಲಿ ನನಗೆ ಕೇಲೇಶ್ವರಿಯೆಂಬ ನಾಮವಿರುವುದು.

ದುರ್ಗಮಾಖ್ಯಂ ತತೋ ಹತ್ವಾ ಅಸ್ಮಿನ್ಕ್ಷೇತ್ರೇ ಚ ಭಾರತ ।
ದುರ್ಗಾನಾಮ ಭವಿಷ್ಯಾಮಿ ಮಹೀಸಾಗರಪೂರ್ವತಃ ॥ ೧೦೨ ॥
ಧರ್ಮಾರಣ್ಯೇ ವಸಿಷ್ಯಾಮಿ ಭವತಾಂ ತ್ರಾಣಕಾರಣಾತ್ ॥ ೧೦೩ ॥
ಧರ್ಮಾರಣ್ಯೇ ಸ್ಥಿತಾಂ ಚೈವ ಯೇಽರ್ಚಯಿಷ್ಯಂತಿ ಮಾನವಾಃ ।
ಆಶ್ವಿನೇ ಮಾಸಿ ಚೈತ್ರೇ ವಾ ನವಮ್ಯಾಂ ಶುಕ್ಲಪಕ್ಷಕೇ ॥ ೧೦೪ ॥
ಸ್ನಾತ್ವಾ ಮಹೀಸಾಗರೇ ಚ ತೇಷಾಂ ದಾಸ್ಯಾಮಿ ವಾಂಛಿತಂ ॥ ೧೦೫ ॥
ವಿಧಿನಾ ಯೇಽರ್ಚಯಿಷ್ಯಂತಿ ಮಾಂ ಚ ಶ್ರದ್ಧಾಸಮನ್ವಿತಾಃ ।
ಪುತ್ರಪೌತ್ರಾನ್ಪ್ರದಾಸ್ಯಾಮಿ ಸ್ವರ್ಗಂ ಮೋಕ್ಷಂ ನ ಸಂಶಯಃ ॥ ೧೦೬ ॥
ಪ್ರವೇಶೇ ಚ ಕಲೇಃ ಕಾಲೇ ಭವತಾಂ ವಂಶಸಂಭವಃ ।
ವತ್ಸರಾಜಃ ಪಾಂಡವಾನಾಂ ತೋಷಯಿಷ್ಯತಿ ಯತ್ನತಃ ॥ ೧೦೭ ॥
ಯಸ್ಯ ನಾಮ್ನಾ ತತಃ ಖ್ಯಾತಾ ಭವಿಷ್ಯಾಮಿ ಕಲೌ ಯುಗೇ ।
ವತ್ಸೇಶ್ವರೀತಿ ವತ್ಸಸ್ಯ ರಾಜ್ಞಃ ಸರ್ವಾರ್ಥದಾಯಿನೀ ॥ ೧೦೮ ॥

---

೧೦೨–೧೦೩. ಭರತಕುಲ ತಿಲಕನೆ! ಈ ಕ್ಷೇತ್ರದಲ್ಲಿ ದುರ್ಗಮನೆಂಬ ದೈತ್ಯನನ್ನು ಸಂಹರಿಸಿ ಮಹೀಸಾಗರ ಕ್ಷೇತ್ರದಪೂರ್ವಕ್ಕೆ ದುರ್ಗಿಯೆಂಬ ನಾಮದಿಂದ ನೆಲಸುವೆನು. ಮತ್ತು ನಿಮ್ಮನ್ನು ರಕ್ಷಿಸುವ ಸಲುವಾಗಿ ಧರ್ಮಾರಣ್ಯದಲ್ಲಿಯೂ ವಾಸಮಾಡುತ್ತಿರುವೆನು.

೧೦೪–೧೦೫. ಆಶ್ವಯುಜ ಮಾಸದಲ್ಲಾಗಲಿ, ಚೈತ್ರ ಮಾಸದಲ್ಲಾಗಲಿ ಶುಕ್ಲಪಕ್ಷದ ನವಮಿಯ ದಿನ ಮಹೀಸಾಗರಸಂಗಮದಲ್ಲಿ ಸ್ನಾನಮಾಡಿ ಧರ್ಮಾರಣ್ಯದಲ್ಲಿ ನೆಲಸಿರುವ ನನ್ನನ್ನು ಪೂಜಿಸುವ ಭಕ್ತರ ವಾಂಛಿತವನ್ನು ನೆರವೇರಿಸಿಕೊಡುವೆನು.

೧೦೬. ಯಾರು ಶ್ರದ್ಧಾ ಭಕ್ತಿ ಸಮನ್ವಿತರಾಗಿ ವಿಧ್ಯುಕ್ತ ರೀತಿಯಿಂದ ನನ್ನನ್ನು ಪೂಜಿಸುವರೊ, ಅವರಿಗೆ ಪುತ್ರ ಪೌತ್ರ ಸಂಪತ್ತನ್ನೂ ಸ್ವರ್ಗ ಸುಖವನ್ನೂ ಅಂತ್ಯದಲ್ಲಿ ಮೋಕ್ಷಪದವಿಯನ್ನೂ ಕೊಡುವೆನು. ಇದರಲ್ಲಿ ಸಂದೇಹವಿಲ್ಲ.

೧೦೭. ಬಳಿಕ ಕಲಿಯುಗದ ಪ್ರವೇಶಕಾಲದಲ್ಲಿ ಪಾಂಡವರಾದ ನಿಮ್ಮ ವಂಶದಲ್ಲಿ ವತ್ಸರಾಜನೆಂಬುವನು ಹುಟ್ಟಿ ಬಹಳ ಪ್ರಯತ್ನದಿಂದ ನನ್ನನ್ನು ಸಂತೋಷಗೊಳಿಸುವನು.

೧೦೮. ಆ ವತ್ಸರಾಜನಿಗೆ ಸಕಲ ಇಷ್ಟಾರ್ಥಗಳನ್ನೂ ಕೊಡುವೆನಾದುದರಿಂದ ಆತನ ಹೆಸರಿನಿಂದಲೇ ಕಲಿಯುಗದಲ್ಲಿ ವತ್ಸೇಶ್ವರಿ ಯೆಂಬುದಾಗಿ ಖ್ಯಾತಳಾಗುವೆನು.

ಮತ್ಪ್ರಸಾದಾತ್ಸ ರಾಜಾ ವೈ ಭುವನೋತ್ತಾಪಕಾರಿಣೀಂ ।
ಅಟ್ಟಾಲಯಾಂ ನಾಮ ತದಾ ರಾಕ್ಷಸೀಂ ನಿಹನಿಷ್ಯತಿ ॥ ೧೦೯ ॥
ತಸ್ಯಾಶ್ಚಾಪಿ ವಧಸ್ಥಾನಮಟ್ಟಾಲಜಮಿತಿ ಸ್ಥಿತಂ ।
ಭವಿಷ್ಯತಿ ಪುರಂ ತತ್ರ ಮಾಂ ಚ ಸಂಸ್ಥಾಪಯಿಷ್ಯತಿ ॥ ೧೧೦ ॥
ಅಟ್ಟಾಲಯಾಜಗ್ರಾಮೇ ಮಾಮರ್ಚಯಿಷ್ಯಂತಿ ಯೇ ಜನಾಃ ।
ವತ್ಸೇಶ್ವರೀಂ ಸಿತಾಷ್ಟಮ್ಯಾಮಾಶ್ವಿನೇ ತೈಃ ಸದಾರ್ಚಿತಾ ॥ ೧೧೧ ॥
ವತ್ಸೇಶ್ವರೀಂ ಚ ಯೇ ದೇವೀಂ ಪೂಜಯಿಷ್ಯಂತಿ ಮಾನವಾಃ ।
ತೇಷಾಂ ಸರ್ವಫಲಾವಾಪ್ತಿರ್ಭವಿಷ್ಯತಿ ನ ಸಂಶಯಃ ॥ ೧೧೨ ॥
ಇತ್ಥಮಟ್ಟಾಲಯೇ ವಾಸೋ ಲೋಹಾಣೇ ಚ ಭವಿಷ್ಯತಿ ।
ಧರ್ಮಾರಣ್ಯೇ ಮಹಾಕ್ಷೇತ್ರೇ ಮಹೀಸಾಗರಸನ್ನಿಧೌ ॥ ೧೧೩ ॥
ಮಮ ಲೋಕಹಿತಾರ್ಥಾಯ ಲೋಹಸ್ಯ ಚ ನಿಶಮ್ಯತಾಂ ।
ಅಧೀಕೃತೋ ಮಯಾ ಲೋಹೋ ಬಹ್ವೀಸ್ತಪ್ತ್ವಾ ತಪಃ ಸಮಾಃ ।
ವೃತ್ರಾಸುರ ಇವಾಜೇಯೋ ಲೋಕಾನುತ್ಸಾದಯಿಷ್ಯತಿ ॥ ೧೧೪ ॥
ತಂ ಚ ವಿಶ್ವಪತಿರ್ಧೀಮಾನವತೀರ್ಯ ಬುಧೋ ಹರಿಃ ।
ಯತ್ರ ಹಂತಾ ತತ್ರ ಗ್ರಾಮಂ ಲೋಹಾಟೇತಿ ಭವಿಷ್ಯತಿ ॥ ೧೧೫ ॥

---

೧೦೯. ನನ್ನ ಅನುಗ್ರಹ ಬಲದಿಂದಲೇ ಆ ರಾಜನು ಲೋಕಕಂಟಕಳಾದ ಅಟ್ಟಾಲಯೆಯೆಂಬ ರಾಕ್ಷಸಿಯೊಬ್ಬಳನ್ನು ಕೊಂದುಹಾಕುವನು.

೧೧೦. ಅವಳು ಸಂಹಾರವಾದ ಸ್ಥಳದಲ್ಲಿಯೇ ಅಟ್ಟಾಲಜವೆಂಬ ನಗರವು ಸ್ಥಾಪಿತವಾಗುವುದು. ಅಲ್ಲಿ ವತ್ಸರಾಜನು ನನ್ನನ್ನು ನೆಲೆಗೊಳಿಸುವನು.

೧೧೧. ಅಟ್ಟಾಲಯಾಜವೆಂಬ ಗ್ರಾಮದಲ್ಲಿ ವತ್ಸೇಶ್ವರಿಯೆಂಬ ನಾಮದಿಂದ ನೆಲಸಿರುವ ನನ್ನನ್ನು ಆಶ್ವಯುಜ ಮಾಸದ ಶುದ್ಧಾಷ್ಟಮಿಯ ದಿನದಲ್ಲಿ ಪೂಜಿಸಿದವರು ನಿತ್ಯವೂ ಪೂಜಿಸಿದವರಂತೆ ಪರಿಗಣಿಸಲ್ಪಡುವರು.

೧೧೨. ಯಾವ ಮಾನವರು ವತ್ಸೇಶ್ವರೀದೇವಿಯನ್ನು ಪೂಜಿಸುವರೊ, ಅವರಿಗೆ ಸಕಲ ಅಭೀಪ್ಸಿತಗಳ ಲಾಭವಾಗುವುದರಲ್ಲಿ ಸಂದೇಹವೇ ಇಲ್ಲ.

೧೧೩–೧೧೪. ಇಂತು ನನಗೆ ಮಹೀಸಾಗರದ ಸಮೀಪದಲ್ಲಿ ಅಟ್ಟಾಲಯ, ಲೋಹಾಣ ಮತ್ತು ಧರ್ಮಾರಣ್ಯಗಳೆಂಬ ಮಹಾಕ್ಷೇತ್ರಗಳಲ್ಲಿ ನಿವಾಸವುಂಟಾಗುವುದು. ಇಂತು ಲೋಕಹಿತಕ್ಕೋಸ್ಕರ ನಾನು ಪ್ರತಿಷ್ಠಿತಳಾಗುವೆನು. ಇನ್ನು ಲೋಹನ ಕಥೆಯನ್ನು ಕೇಳಿ. ಈ ರಾಕ್ಷಸನು ನನ್ನಿಂದ ಅಪ್ಪಣೆಯನ್ನು ಪಡೆದು ಬಹಳ ವರ್ಷಗಳವರೆಗೆ ತಪಸ್ಸನ್ನುಮಾಡಿ ವೃತ್ರಾಸುರನಂತೆ ಅಜೇಯನಾಗಿ ಲೋಕಗಳೆಲ್ಲವನ್ನೂ ಉಪದ್ರವಗೊಳಿಸುವನು.

೧೧೫. ಆಗ ಪಾಪಿಗಳನ್ನು ನಿಗ್ರಹಿಸುವ ಬುಧನೂ ಮಹಾ ಪ್ರಾಜ್ಞನೂ

ಗಯೋನಾಮ ಮಹಾದೈತ್ಯೋ ಭವತಾಂ ವಿಘ್ನಕೃತ್ತದಾ ।
ಪ್ರಸ್ಥಾನೇ ಲೋಹವದ್ಭಾವೀ ಕರಿಷ್ಯೇ ತಂ ನಪುಂಸಕಂ ॥ ೧೧೬ ॥
ಗಯತ್ರಾಡೇತಿ ಮಾಂ ತತ್ರ ಪೂಜಯಿಷ್ಯಂತಿ ಮಾನವಾಃ ।
ಗ್ರಾಮಂ ಚಾಪಿ ಗಯತ್ರಾಡಂ ತತ್ರ ಖ್ಯಾತಂ ಭವಿಷ್ಯತಿ ॥ ೧೧೭ ॥
ಗಯತ್ರಾಡೇ ಗಯತ್ರಾಡಾಂ ಯೇಽರ್ಚಯಿಷ್ಯಂತಿ ಮಾನವಾಃ ।
ಮಾಘಾಷ್ಟಮ್ಯಾಂ ನ ಶಿಷ್ಯಂತಿ ತಸ್ಯ ಸರ್ವೇಽಪ್ಯುಪದ್ರವಾಃ ॥ ೧೧೮ ॥
ಯೇ ಚ ಮಾಂ ಕೋಪಯಿಷ್ಯಂತಿ ಪಾಂಡವಾರಾಧಿತಾಂ ಸದಾ ।
ತೇಷಾಂ ಪುಂಸ್ತ್ವಂ ಹರಿಷ್ಯಾಮಿ ಮಹಾ ರೌದ್ರಾಧಿತಿಷ್ಠತೀ ॥ ೧೧೯ ॥
ಪರಿವಾರಶ್ಚ ಮೇ ಚಾತ್ರ ಷಂಡಃ ಸರ್ವೋ ಭವಿಷ್ಯತಿ ।
ತಸ್ಮಿನ್ಕಲಿಯುಗೇ ಘೋರೇ ರೌದ್ರೇ ರುದ್ರೇಽತಿನಿರ್ಘೃಣೇ ॥ ೧೨೦ ॥
ಏವಂ ತೃತೀಯಂ ತನ್ಮಹ್ಯಂ ಸ್ಥಾನಮತ್ರ ಭವಿಷ್ಯತಿ ॥ ೧೨೧ ॥
ಭವತ್ಸು ಚ ಸ್ವರ್ಗತೇಷು ಗಯೋಽಪಿ ಸುಮಹತ್ತಪಃ ।
ತಪ್ತ್ವಾ ಪ್ರಾಪ್ಯ ಪುನಃ ಪುಂಸ್ತ್ವಂ ಲೋಕಾನ್ಸಂಪೀಡಯಿಷ್ಯತಿ ॥ ೧೨೨ ॥

---

ವಿಶ್ವಪತಿಯೂ ಆದ ಹರಿಯು ಅವತಾರಮಾಡಿ ಅವನನ್ನು ಹನನಮಾಡುವನು. ಆ ಸ್ಥಳದಲ್ಲಿಯೇ ಲೋಹಾಟಿಯೆಂಬ ಗ್ರಾಮವು ಸ್ಥಾಪಿತವಾಗುವುದು.

೧೧೬–೧೧೭. ನೀವು ಮಹಾಪ್ರಸ್ಥಾನಕ್ಕೆ ಹೊರಡುವ ಕಾಲದಲ್ಲಿ ಗಯನೆಂಬ ಮಹಾದೈತ್ಯನು ಲೋಹನಂತೆಯೇ ನಿಮಗೆ ವಿಘ್ನವನ್ನು ಮಾಡಲೆಳಸುವನು. ಅವನನ್ನು ನಪುಂಸಕನನ್ನಾಗಿ ಮಾಡುವೆನು. ಆ ಪ್ರದೇಶದಲ್ಲಿ ಗ್ರಯತ್ರಾಡೆಯೆಂಬ ಹೆಸರಿನಿಂದ ಜನರು ನನ್ನನ್ನು ಪೂಜಿಸುವರು. ಅಲ್ಲಿ ಗಯತ್ರಾಡವೆಂಬ ಗ್ರಾಮವೂ ಪ್ರಸಿದ್ಧಿಗೆ ಬರುವುದು.

೧೧೮–೧೧೯. ಮಾಘಮಾಸದ ಅಷ್ಟಮಿಯಲ್ಲಿ ಯಾರು ಈ ಗ್ರಾಮದಲ್ಲಿರುವ ಗಯತ್ರಾಡಾದೇವಿಯನ್ನು ಪೂಜಿಸುವರೊ, ಅವರಿಗೆ ಸಕಲ ಪಾಪಗಳೂ ನಿಶ್ಶೇಷವಾಗಿ ನಾಶವಾಗುವುವು. ಅಲ್ಲಿ ನಾನು ಮಹಾರೌದ್ರಾಕಾರದಿಂದ ನೆಲಸಿರುವೆನು. ಪಾಂಡವಪೂಜಿತೆಯಾದ ನನ್ನನ್ನು ಯಾರು ಕೋಪಗೊಳಿಸುವರೊ, ಅವರ ಪುಂಸ್ತ್ವವನ್ನು ನಾಶಮಾಡುವೆನು.

೧೨೦–೧೨೧. ಘೋರವೂ ರೌದ್ರವೂ ಆದ ಕಲಿಯುಗದಲ್ಲಿ ರುದ್ರನೂ ನಿಷ್ಕರುಣಿಯಾಗುವನು. ಅಲ್ಲಿ ನನ್ನ ಪರಿವಾರವೆಲ್ಲವೂ ಕೇವಲ ನಪುಂಸಕರಿಂದಲೇ ತುಂಬಿರುವುದು. ಇಂತು ನನಗೆ ಮೂರನೆಯ ಸ್ಥಾನವುಂಟಾಗುವುದು.

೧೨೨. ನೀವು ಸ್ವರ್ಗಾರೋಹಣವನ್ನು ಮಾಡಲು ಗಯನೂ ಕೂಡ ಮಹತ್ತಾದ ತಪಸ್ಸನ್ನಾಚರಿಸಿ ಮತ್ತೆ ಪುಂಸ್ತ್ವವನ್ನು ಪಡೆದು ಲೋಕಗಳನ್ನು ಬಾಧಿಸತೊಡಗುವನು.

ಗಯಾತೀರ್ಥಂ ಗತಂ ತಂ ಚ ಗಯಾಧ್ವಂಸನಕಾಮ್ಯಯಾ ।
ಬುಧ ಏವ ಜಗತ್ಸ್ವಾಮೀ ತತ್ರ ತಂ ಸೂದಯಿಷ್ಯತಿ ॥ ೧೨೩ ॥
ಇತ್ಥಂ ಶ್ರೀವರ್ಣಾನ್ವಿತವಾಸಾ ಅವತೀರ್ಯ ಬುಧಃ ಪ್ರಭುಃ ।
ಬಹೂನಿ ಕೃತ್ವಾ ಕರ್ಮಾಣಿ ಸ್ವಸ್ಥಾನಂ ಪ್ರತಿಪತ್ಸ್ಯತೇ ॥ ೧೨೪ ॥
ಇತಿ ಸಂಕ್ಷೇಪತಃ ಪ್ರೋಕ್ತಂ ಭವಿಷ್ಯಂ ಪಾಂಡವಾ ಮಯಾ ।
ಭವತಾಂ ಚಿತ್ತನಿರ್ವೃತ್ತ್ಯೈ ಶ್ರೂಯತಾಂ ಭೂಯ ಏವ ಚ ॥ ೧೨೫ ॥
ಇದಂ ತೀರ್ಥವರಂ ಮಹ್ಯಂ ಸಂಸೇವ್ಯಂ ಸರ್ವದಾ ಪ್ರಿಯಂ ।
ಕೃತಂ ಯದತ್ರಾಗಮನಂ ತೇನ ಪ್ರೀತಿಃ ಪರಾ ಮಮ ॥ ೧೨೬ ॥
ಭೀಮಸ್ಯ ಚಾಪಿ ಪೌತ್ರೇಣ ದೃಢಂ ಸಂತೋಷಿತಾಸ್ಮಿ ಚ ।
ದೇವ್ಯಃ ಸರ್ವಾಶ್ಚ ಮದ್ರೂಪಂ ನೈತತ್ ಜ್ಞೇಯಮತೋಽನ್ಯಥಾ ॥೧೨೭॥
ವ್ರಜಧ್ವಂ ಚಾಪಿ ತೀರ್ಥಾನಿ ಯಾನಿ ವೋ ನ ಕೃತಾನಿ ಚ ।
ಆಬಾಧಾಸ್ವಸ್ಮಿ ಸರ್ವಾಸು ಸ್ಮರಣೀಯಾ ಸ್ವಸೇವ ಚ ॥ ೧೨೮ ॥

---

೧೨೩. ಗಯಾಕ್ಷೇತ್ರವನ್ನು ಧ್ವಂಸಮಾಡುವ ಉದ್ದೇಶದಿಂದ ಅಲ್ಲಿಗೆ ಹೋದ ಗಯನನ್ನು ಜಗನ್ನಾಯಕನಾದ ಬುಧನೇ ನಿಗ್ರಹಿಸುವನು.

೧೨೪. ಇಂತು ಪೀತಾಂಬರಧಾರಿಯೂ, ಲೋಕನಾಥನೂ ಆದ ಬುಧನು ಭೂಭಾರಹರಣದ ಅನೇಕ ಕಾರ್ಯಗಳನ್ನು ನೆರವೇರಿಸಿ ತನ್ನ ಸ್ಥಾನವನ್ನು ಸೇರುವನು.

೧೨೫. ಎಲೈ ಪಾಂಡವರೆ! ನಿಮ್ಮ ಮನಶ್ಶಾಂತಿಗಾಗಿ ಮುಂದೆ ನಡೆಯ ಲಾಗುವ ವಿಷಯಗಳೆಲ್ಲವನ್ನೂ ಸಂಕ್ಷೇಪವಾಗಿ ನಿರೂಪಿಸಿರುವೆನು. ಮೇಲೆ ಹೇಳುವುದನ್ನು ಕೇಳಿ.

೧೨೬. ಈ ಪುಣ್ಯ ತೀರ್ಥವು ನನಗೆ ಅತ್ಯಂತ ಪ್ರಿಯವಾಗಿರುವುದು. ಇದನ್ನು ನಾನು ಯಾವಾಗಲೂ ಸೇವಿಸುತ್ತಿರುವೆನು. ನೀವು ಇಲ್ಲಿಗೆ ಬಂದುದ ರಿಂದ ನನಗೆ ಅಪಾರವಾದ ಸಂತೋಷವುಂಟಾಗಿರುವುದು.

೧೨೭. ಭೀಮನ ಮೊಮ್ಮಗನಾದ ಬರ್ಬರೀಕನ ಸೇವೆಯಿಂದಲೂ ನಾನು ನಿಜವಾಗಿಯೂ ಸಂತುಷ್ಟಳಾಗಿರುವೆನು. ಇಲ್ಲಿರುವ ಚತುರ್ದಶದೇವಿಯರೂ ಕೂಡ ನನ್ನ ರೂಪಗಳೇ ಹೊರತು ಬೇರೆಯವರೆಂದು ತಿಳಿಯಬಾರದು.

೧೨೮. ಇನ್ನು ನೀವು ನೋಡದಿರುವ ತೀರ್ಥಕ್ಷೇತ್ರಗಳ ಸೇವೆಗಾಗಿ ಹೊರಡಿರಿ. ನಾನು ನಿಮ್ಮ ಸಹೋದರಿಯೆಂಬುದನ್ನು ನಿಮ್ಮ ಕಷ್ಟಕಾಲದಲ್ಲಿ ಸ್ಮರಣೆಮಾಡಿಕೊಳ್ಳಿರಿ.

**ಆಪೃಚ್ಛೇ ಚಾಪಿ ವಃ ಸರ್ವಾನ್ಯೂಯಂ ಕೃಷ್ಣಸಮಾ ಮಮ ॥ ೧೨೯ ॥**

**ಸೂತ ಉವಾಚ:–**

**ಇತಿದೇವ್ಯಾ ವಚಃ ಶ್ರುತ್ವಾ ವಿಸ್ಮಯೋತ್ಫುಲ್ಲಲೋಚನಾಃ ।**
**ಪುನಃ ಪುನಃ ಪ್ರಣಮ್ಯೈನಾಂ ನಾಪಶ್ಯನ್ದೀಪವದ್ಗತಾಂ ॥ ೧೩೦ ॥**
**ತತಸ್ತೇ ಬರ್ಬರೀಕಂ ಚ ಸಂಸ್ಥಾಪ್ಯಾತ್ರೈವ ನಿಷ್ಠಿತಂ ।**
**ಆಗಚ್ಛ ಯೋಗೇ ಚೋಕ್ತ್ವೇದಂ ಚಕ್ರುಸ್ತೀರ್ಥಾನಿ ಮುಖ್ಯಶಃ॥ ೧೩೧ ॥**

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿ ಸಾಹಸ್ರ್ಯಾಂ ಸಂಹಿತಾಯಾಂ
ಪ್ರಥಮೇ ಮ್ಹಾಹೇಶ್ವರಖಂಡೇ ಕೌಮಾರಿಕಾಖಂಡೇ
"ಬರ್ಬರೀಕೋಪಾಖ್ಯಾನೇ ಲೋಕೇಶ್ವರೀ ವತ್ಸೇಶ್ವರೀ ದುರ್ಗಾದೇವೀ
ಗಯತ್ರಾಡಾ ಮಹಾತ್ಮ್ಯವರ್ಣನಂ"ನಾಮ
ಪಂಚಷಷ್ಠಿತಮೋಽಧ್ಯಾಯಃ

---

೧೨೯. ಇನ್ನು ನಿಮ್ಮೆಲ್ಲರ ಅನುಜ್ಞೆಯನ್ನು ಕೇಳುವೆನು. ನೀವೆಲ್ಲರೂ ನನಗೆ ಕೃಷ್ಣನ ಸಮಾನರಾಗಿರುವಿರಿ."

೧೩೦. ಸೂತನು ಹೇಳುತ್ತಾನೆ:—ಇಂತೆಂದ ದೇವಿಯ ಮಾತುಗಳನ್ನು ಕೇಳಿ ಪಾಂಡವರು ಆಶ್ಚರ್ಯದಿಂದ ನಟ್ಟ ಕಣ್ಣುಗಳುಳ್ಳವರಾಗಿ ಮತ್ತೆ ಮತ್ತೆ ದೇವಿಗೆ ನಮಸ್ಕರಿಸಿದರು. ಅವರು ನೋಡುತ್ತಿದ್ದಂತೆಯೇ ದೇವಿಯು ಮಿಂಚಿನಂತೆ ಕಣ್ಣಿಗೆ ಕಾಣಿಸದಾದಳು.

೧೩೧. ಬಳಿಕ ಅವರು ಬರ್ಬರೀಕನನ್ನು ನಿಷ್ಠೆಯಿಂದ ಅಲ್ಲಿಯೇ ವಾಸಿಸುತ್ತಿರುವಂತೆ ನಿಯಮಿಸಿ 'ನಮಗೆ ಸಮಯವೊದಗಿ ಸ್ಮರಿಸಿದಾಗ ಬರುವವನಾಗು' ಎಂದು ಹೇಳಿ ತಮ್ಮ ಮುಖ್ಯ ತೀರ್ಥಗಳ ಯಾತ್ರೆಯನ್ನು ಮುಂದುವರಿಸಿದರು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಎರಡನೆಯ ಕೌಮಾರಿಕಾಖಂಡದಲ್ಲಿ
"ಬರ್ಬರೀಕೋಪಾಖ್ಯಾನ – ಲೋಕೇಶ್ವರೀ, ವತ್ಸೇಶ್ವರೀ, ದುರ್ಗಾದೇವೀ,
ಗಯಾತ್ರಾಡಾ ಮಾಹಾತ್ಮ್ಯವರ್ಣನ"ವೆಂಬ
ಅರುವತ್ತೈದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಷಟ್ಷಷ್ಟಿತಮೋಽಧ್ಯಾಯಃ

### ಗುಪ್ತಕ್ಷೇತ್ರಮಾಹಾತ್ಮ್ಯಪರಿಸಮಾಪ್ತಿವರ್ಣನಂ

ಸೂತ ಉವಾಚ :—

ತತಸ್ತ್ರಯೋದಶೇ ವರ್ಷೇ ವ್ಯತೀತೇ ಸಮಯೇ ತದಾ ।
ಉಪಪ್ಲವೇ ಸಂಗತೇಷು ಸರ್ವರಾಜಸು ಪಾಂಡವಾಃ ॥ ೧ ॥
ಯೋದ್ಧುಮಾಗತ್ಯ ಸಂತಸ್ಥುಃ ಕುರುಕ್ಷೇತ್ರಂ ಮಹಾರಥಾಃ ।
ಕೌರವಾಶ್ಚಾಪಿ ಸಂತಸ್ಥುರ್ದುರ್ಯೋಧನ ಪುರೋಗಮಾಃ ॥ ೨ ॥
ತತೋ ಭೀಷ್ಮೇಣ ಪ್ರೋಕ್ತಾಂ ಚ ಚಾರೈಃ ಶ್ರುತ್ವಾ ಯುಧಿಷ್ಠಿರಃ ।
ರಥಾತಿರಥಸಂಖ್ಯಾಂ ತು ರಾಜ್ಞಾಂ ಮಧ್ಯೇ ವಚೋಽಬ್ರವೀತ್ ॥ ೩ ॥
ಭೀಷ್ಮೇಣ ವಿಹಿತಾ ಕೃಷ್ಣ ರಥಾತಿರಥವರ್ಣನಾ ।
ತತೋ ದುರ್ಯೋಧನೋಽಪೃಚ್ಛದಿದಂ ಸ್ವೀಯಾನ್ಮಹಾರಥಾನ್ ॥ ೪ ॥
ಸಸೈನ್ಯಾನ್ಪಾಂಡವಾನೇತಾನ್ಹನ್ಯಾತ್ಕಾಲೇನ ಕೇನ ಕಃ ।
ಮಾಸೇನ ತು ಪ್ರತಿಜ್ಞಾತಂ ಭೀಷ್ಮೇಣ ಚ ಕೃಪೇಣ ಚ ॥ ೫ ॥

---

### ಕನ್ನಡದ ಅನುವಾದ

#### ಗುಪ್ತಕ್ಷೇತ್ರಮಾಹಾತ್ಮ್ಯಪರಿಸಮಾಪ್ತಿವರ್ಣನ

೧–೨. ಸೂತನು ಹೇಳುತ್ತಾನೆ:—ಬಳಿಕ ಪಾಂಡವರ ವನವಾಸ, ಅಜ್ಞಾತ ವಾಸಗಳ ಸಮಯವಾದ ಹದಿಮೂರು ವರ್ಷಗಳು ಕಳೆಯಲು, ವೈರವನ್ನೇ ಸಾಧಿಸಿದ ದುರ್ಯೋಧನಾದಿಗಳನ್ನು ನಿಗ್ರಹಿಸಲು, ಸಕಲ ರಾಜರಿಗೂ ಕಷ್ಟವು ಪ್ರಾಪ್ತವಾಗಲು, ಪಾಂಡವರು ಯುದ್ಧಸನ್ನದ್ಧರಾಗಿ ಮಹಾರಥರಾಗಿ ಕುರುಕ್ಷೇತ್ರಕ್ಕೆ ಬಂದು ಸೇರಿದರು. ದುರ್ಯೋಧನನೇ ಮೊದಲಾದ ಕೌರವರೂ ಪ್ರಾಪ್ತರಾದರು.

೩. ಆಗ ಯುಧಿಷ್ಠಿರನು ಭೀಷ್ಮನು ಹೇಳಿದ ರಥಿಕರ ಮತ್ತು ಅತಿರಥರ ಸಂಖ್ಯೆಯನ್ನು ಚಾರರ ಮೂಲಕವಾಗಿ ತಿಳಿದುಕೊಂಡು ತನ್ನ ಪಕ್ಷವನ್ನು ಸೇರಿದ ರಾಜರ ಸಭೆಯ ಮಧ್ಯದಲ್ಲಿ ಇಂತೆಂದನು.

೪. "ಎಲೈ ಕೃಷ್ಣನೆ! ಭೀಷ್ಮನು ಸೈನ್ಯದಲ್ಲಿನ ರಥಿಕ ಅತಿರಥರ ಸಂಖ್ಯೆಯನ್ನು ವರ್ಣಿಸಿದನು. ಆಗ ದುರ್ಯೋಧನನು ತನ್ನ ಮಹಾರಥಿಕರನ್ನು ಕೇಳಿದನು.

೫. 'ನಿಮ್ಮಲ್ಲಿ ಯಾರು ಯಾರು ಸೈನ್ಯಸಹಿತರಾದ ಪಾಂಡವರನ್ನು ಎಷ್ಟು ದಿವಸಗಳಲ್ಲಿ ಸಂಹರಿಸಲು ಶಕ್ತರು?' ಭೀಷ್ಮನೂ ಕೃಪಾಚಾರ್ಯನೂ ಒಂದು ತಿಂಗಳಲ್ಲಿ ಪಾಂಡವ ಪಕ್ಷವನ್ನು ನಾಶಗೊಳಿಸುವೆವೆಂದು ಪ್ರತಿಜ್ಞೆಯನ್ನು ಮಾಡಿದರು.

ಪಕ್ಷಂ ದ್ರೋಣೇನ ಚಾಹ್ನಾಂ ಚ ದಶಭಿರ್ದ್ರೌಣಿನಾ ರಣೇ ।
ಷಡ್ಭಿಃ ಕರ್ಣೇನ ಚ ತಥಾ ಸದಾ ಮಮ ಭಯಂಕೃತಾ ॥ ೬ ॥
ತದಹಂ ಸ್ವಾಂಶ್ಚ ಪೃಚ್ಛಾಮಿ ಕೇನ ಕಾಲೇನ ಹಂತಿ ಕಃ ।
ಏತಚ್ಛ್ರುತ್ವಾ ವಚೋ ರಾಜ್ಞಃ ಫಾಲ್ಗುನೋ ವಾಕ್ಯಮಬ್ರವೀತ್ ॥ ೭ ॥
ಅಯುಕ್ತಮೇತದ್ಭೀಷ್ಮಾದ್ಯೈಃ ಪ್ರತಿಜ್ಞಾತಂ ಯುಧಿಷ್ಠಿರ ।
ತತೋ ಜಯೇ ಚ ವಿಜಯೇ ನಿಶ್ಚಯೋ ಹಿ ಮೃಷೈವ ತತ್ ॥ ೮ ॥
ತವಾಪಿ ಯೇ ಸಂತಿ ನೃಪಾಃ ಸನ್ನದ್ಧಾ ರಣಸಂಸ್ಥಿತಾಃ ।
ಪಶ್ಯೈತಾನ್ಪುರುಷವ್ಯಾಘ್ರಾನ್ಕಾಲಕಲ್ಪಾನ್ದುರಾಸದಾನ್ ॥ ೯ ॥
ದ್ರುಪದಂ ಚ ವಿರಾಟಂ ಚ ಧೃಷ್ಟಕೇತುಂ ಚ ಕೈಕಯಂ ।
ಸಹದೇವಂ ಸಾತ್ಯಕಿಂಚ ಚೇಕಿತಾನಂ ಚ ದುರ್ಜಯಂ ॥ ೧೦ ॥
ಧೃಷ್ಟದ್ಯುಮ್ನಂ ಸ ಪುತ್ರಂ ಚ ಮಹಾವೀರ್ಯಂ ಘಟೋತ್ಕಚಂ ।
ಭೀಮಾದೀಂಶ್ಚ ಮಹೇಷ್ವಾಸಾನ್ಕೇಶವಂ ಚಾಪರಾಜಿತಂ ॥ ೧೧ ॥

---

೬. ದ್ರೋಣನು ಹದಿನೈದು ದಿನಗಳನ್ನು ಕೇಳಿದನು. ಅಶ್ವತ್ಥಾಮನು ಹತ್ತು ದಿವಸಗಳ ಯುದ್ಧದಲ್ಲಿ ಪಾಂಡವರನ್ನು ನಿರ್ಮೂಲ ಮಾಡುವೆನೆಂದನು. ಮತ್ತು ನನಗೆ ನಿತ್ಯವೂ ಭಯವನ್ನುಂಟುಮಾಡುವ ಕರ್ಣನು ಆರು ದಿವಸಗಳಲ್ಲಿ ಈ ಕೆಲಸವನ್ನು ಮಾಡುವುದಾಗಿ ಒಪ್ಪಿಕೊಂಡನು.

೭. ಆದುದರಿಂದ ನಾನೂ ನನ್ನವರನ್ನು 'ಕೌರವಸೈನ್ಯವನ್ನು ಯಾರು ಎಷ್ಟು ಕಾಲದಲ್ಲಿ ನಿಗ್ರಹಿಸಲು ಸಮರ್ಥರು?' ಎಂದು ಕೇಳಲಿಚ್ಛಿಸುವೆನು." ಯುಧಿಷ್ಠಿರನ ಈ ಮಾತುಗಳನ್ನು ಕೇಳಿ ಅರ್ಜುನನು ಹೇಳತೊಡಗಿದನು.

೮. "ಎಲೈ ಯುಧಿಷ್ಠಿರನೆ! ಭೀಷ್ಮಾದಿಗಳು ಮಾಡಿರುವ ಪ್ರತಿಜ್ಞೆಗಳು ಕೇವಲ ಅಯುಕ್ತಗಳಾಗಿವೆ. ಏಕೆಂದರೆ ಯುದ್ಧದಲ್ಲಿ ಜಯಾಪಜಯಗಳು ಮೊದಲೇ ನಿಶ್ಚಯವಾಗಲಾರದು.

೯. ನಿನ್ನ ಪಕ್ಷದಲ್ಲಿಯೂ ಶಸ್ತ್ರಸನ್ನದ್ಧರಾಗಿ ಯುದ್ಧಭೂಮಿಗೆ ಬಂದು ನಿಂತಿರುವ ರಾಜರನ್ನು ನೋಡು. ಅವರೆಲ್ಲರೂ ಕೂಡ ಪುರುಷಶ್ರೇಷ್ಠರು. ಯಮನಂತೆ ಉಗ್ರಪರಾಕ್ರಮಿಗಳು. ಮತ್ತು ದುರ್ಜಯರು.

೧೦-೧೧. ದ್ರುಪದ, ವಿರಾಟ, ಧೃಷ್ಟಕೇತು, ಕೇಕಯ, ಸಹದೇವ, ಸಾತ್ಯಕಿ, ಚೇಕಿತಾನ, ಧೃಷ್ಟದ್ಯುಮ್ನ, ಬರ್ಬರೀಕನೊಡನೆ ಕೂಡಿದ ಮಹಾ ಪರಾಕ್ರಮಿಯಾದ ಘಟೋತ್ಕಚ, ಭೀಮಸೇನ ಇವರೇ ಮೊದಲಾದ ದೊಡ್ಡ ದೊಡ್ಡ ಬಿಲ್ಲುಗಾರರೂ ಎಲ್ಲರಿಗಿಂತಲೂ ಮೇಲಾಗಿ ಅಪರಾಜಿತನಾಗಿ ಶ್ರೀಕೃಷ್ಣನೂ ನಮ್ಮ ಕಡೆಯಲ್ಲಿಲ್ಲವೆ?

ಮನ್ಯೇಽಹಮೇಕಸ್ತ್ವೇತೇಷಾಂ ಹನ್ಯಾಂ ಕೌರವವಾಹಿನೀಂ ।
ಸನ್ನದ್ಧಾಃ ಪ್ರತಿದೃಶ್ಯಂತೇ ಭೀಷ್ಮಾದ್ಯಾ ಬಹವೋ ರಥಾಃ ॥ ೧೨ ॥
ತೇಭ್ಯೋ ಭಯಂ ನ ಕಾರ್ಯಂ ತೇ ಫಲ್ಗುವೋಽಮೀ ಮೃಗಾ ಇವ ॥೧೩॥
ಅಸ್ಮಾಕಂ ಧನುಷಾಂ ಘೋಷೈರಿದಾನೀಮೇವ ಭಾರತ ।
ಕೌರವಾ ವಿದ್ರವಿಷ್ಯಂತಿ ಸಿಂಹತ್ರಸ್ತಾ ಮೃಗಾ ಇವ ॥ ೧೪ ॥
ವೃದ್ಧಾದ್ಭೀಷ್ಮಾದ್ದ್ವಿಜಾದ್ವೃದ್ಧಾದ್ದ್ರೋಣಾದಪಿ ಕೃಪಾದಪಿ ।
ಬಾಲಿಶಾತ್ಕಿಂ ಭಯಂ ದ್ರೌಣೇಃ ಸೂತಪುತ್ರಾಚ್ಚ ದುರ್ಮತೇಃ ॥ ೧೫ ॥
ಅಥವಾ ಚಿತ್ತನಿರ್ವೃತ್ತ್ಯೈ ಜ್ಞಾತುಮಿಚ್ಛಸಿ ಭಾರತ ।
ಶತ್ರೂಣಾಂ ಪ್ರತ್ಯನೀಕೇಷು ಸಂಧಾನಾಚ್ಛೃಣು ಮೇ ವಚಃ ॥ ೧೬ ॥
ಏಕೋಽಹಮೇವ ಸಂಗ್ರಾಮೇ ಸರ್ವೇ ತಿಷ್ಠಂತು ತೇ ರಥಾಃ ।
ಏಕಾಹ್ನಾ ಕ್ಷಪಯೇ ಸರ್ವಾನ್ಕೌರವಾನ್ಸೈನ್ಯಸಂಯುತಾನ್ ॥ ೧೭ ॥
ಇತ್ಯರ್ಜುನವಚಃ ಶ್ರುತ್ವಾ ಸ್ಮಯನ್ದಾಮೋದರೋಽಬ್ರವೀತ್ ।
ಏವಮೇತದ್ಯಥಾ ಪ್ರಾಹ ಫಾಲ್ಗುಣೋಽಯಂ ಮೃಷಾ ನ ತತ್ ॥ ೧೮ ॥

---

೧೨–೧೩. ನಾನೊಬ್ಬನೇ ಈ ಕೌರವಸೇನೆಯನ್ನೆಲ್ಲ ನಾಶಗೊಳಿಸಲು ಶಕ್ತನೆಂದು ತಿಳಿಯುತ್ತೇನೆ. ಭೀಷ್ಮರೇ ಮೊದಲಾದ ಅನೇಕ ಮಹಾರಥಿಕರು ಶತ್ರುಪಕ್ಷದಲ್ಲಿ ಕಾಣುವರು. ಆದರೆ ಅವರಿಂದ ನಾವು ಭಯಪಡಬೇಕಾದ ಪ್ರಮೇಯವಿಲ್ಲ. ನಮ್ಮ ಮುಂದೆ ಅವರೆಲ್ಲರೂ ಕ್ಷುದ್ರಮೃಗಗಳೇ ಸರಿ.

೧೪. ಎಲೈ ಧರ್ಮರಾಜನೆ! ಆ ಕೌರವರೆಲ್ಲರೂ ನಮ್ಮ ಧನುಷ್ಟಂಕಾರಗಳನ್ನು ಕೇಳಿದಮಾತ್ರದಿಂದಲೇ ಸಿಂಹದ ಘರ್ಜನೆಯನ್ನು ಕೇಳಿದ ಮೃಗಗಳಂತೆ ದಿಕ್ಕಾಪಾಲಾಗಿ ಓಡಿಹೋಗುವರು.

೧೫. ವೃದ್ಧನಾದ ಭೀಷ್ಮ, ಬ್ರಾಹ್ಮಣೋತ್ತಮನಾದ ದ್ರೋಣ, ಕೃಪಾಚಾರ್ಯ, ಬುದ್ಧಿಹೀನನಾದ ಅಶ್ವತ್ಥಾಮ, ಅಥವಾ ದುರ್ಬುದ್ಧಿಯೂ, ಸೂತಪುತ್ರನೂ ಆದ ಕರ್ಣ— ಇವರಿಗೇಕೆ ಭಯಪಡಬೇಕು ?

೧೬. ಅಥವಾ ನಿನ್ನ ಮನಶ್ಶಾಂತಿಗಾಗಿಯೇ ತಿಳಿಯಲೆಳಸುವೆಯಾದರೆ ಶತ್ರುಗಳ ಸೈನ್ಯದಲ್ಲಿ ಓಡಾಡುವ ನನ್ನ ಮಾತುಗಳನ್ನು ಕೇಳುವವನಾಗು.

೧೭. ಅವರ ರಥಗಳೆಲ್ಲ ಎದುರಿಗೆ ನಿಲ್ಲಲಿ. ಸಕಲ ಸೈನ್ಯಗಳಿಂದೊಡಗೂಡಿದ ಸಮಸ್ತ ಕೌರವರನ್ನೂ ನಾನೊಬ್ಬನೇ ಒಂದು ದಿವಸಮಾತ್ರದಲ್ಲಿ ನಾಶಗೊಳಿಸುವೆನು.''

೧೮. ಇಂತೆಂದ ಅರ್ಜುನನ ಮಾತುಗಳನ್ನು ಕೇಳಿ ನಗುತ್ತ ಶ್ರೀಕೃಷ್ಣನು ''ಈ ಅರ್ಜುನನು ಹೇಳಿದುದು ನಿಜವೇ ಹೊರತು ಸುಳ್ಳಾಗಲಾರದು'' ಎಂಬುದಾಗಿ ಸಂತೈಸಿದನು.

ತತಶ್ಚ ಶಂಖಾನ್ಭೇರೀಶ್ಚ ಶತಶಶ್ಚೈವ ಪುಷ್ಕರಾನ್ ।
ನಿವಾರ್ಯ ರಾಜಮಧ್ಯಸ್ಥೋ ಬರ್ಬರೀಕೋ ವಚೋಽಬ್ರವೀತ್ ॥೧೯॥
ಯೇನ ತಪ್ತಂ ಗುಪ್ತಕ್ಷೇತ್ರೇ ಯೇನ ದೇವ್ಯಃ ಸುತೋಷಿತಾಃ ।
ಯಸ್ಯಾತುಲಂ ಬಾಹುಬಲಂ ತೇನ ಚೋಕ್ತಂ ನಿಶಮ್ಯತಾಂ ॥ ೨೦ ॥
ಯದ್ಬ್ರವೀಮಿ ವಚಃ ಸತ್ಯಂ ಶ್ರುಣುಧ್ವಂ ತನ್ನರಾಧಿಪಾಃ ।
ಆತ್ಮನೋ ವೀರ್ಯಸದೃಶಂ ಕೇವಲಂ ನತು ದರ್ಪತಃ ॥ ೨೧ ॥
ಯದಾರ್ಯೇಣ ಪ್ರತಿಜ್ಞಾತಮರ್ಜುನೇನ ಮಹಾತ್ಮನಾ ।
ನ ಮರ್ಷಯಾಮಿ ತದ್ವಾಕ್ಯಂ ಕಾಲಕ್ಷೇಪೋ ಮಹಾನಯಂ ॥ ೨೨ ॥
ಸರ್ವೇ ಭವಂತಸ್ತಿಷ್ಠಂತು ಸಾರ್ಜುನಾಃ ಸಹಕೇಶವಾಃ ।
ಏಕೋ ಮುಹೂರ್ತಾದ್ಭೀಷ್ಮಾದೀನ್ಸರ್ವಾನ್ನೇಷ್ಯೇ ಯಮಕ್ಷಯಂ ॥
ಮಯಿ ತಿಷ್ಠತಿ ಕೇನಾಪ್ಯಸ್ತ್ರಂ ಗ್ರಾಹ್ಯಂ ನ ಕ್ಷತ್ರಿಯೈಃ ।
ಸ್ವಧರ್ಮಶಪಥೋ ವೋಽಸ್ತು ಮೃತೇ ಗ್ರಾಹ್ಯಂ ತತೋ ಮಯಿ ॥೨೪॥

---

೧೯. ಬಳಿಕ ಜಯಘೋಷವನ್ನು ಮಾಡುತ್ತಿರುವ ಶಂಖಗಳು, ಭೇರಿಗಳು, ಪುಷ್ಕರವಾದ್ಯಗಳು ಮುಂತಾದುವುಗಳನ್ನು ನಿಲ್ಲಿಸಿ ರಾಜಸಭೆಯ ಮಧ್ಯದಲ್ಲಿದ್ದ ಬರ್ಬರೀಕನು ಹೇಳತೊಡಗಿದನು.

೨೦. "ಗುಪ್ತಕ್ಷೇತ್ರದಲ್ಲಿ ಯಾವನು ಮಹಾತಪಸ್ಸನ್ನು ಮಾಡಿರುವನೊ, ಯಾವನು ದೇವಿಯರನ್ನು ಸಂತೋಷಗೊಳಿಸಿರುವನೊ, ಯಾವನ ಬಾಹುಬಲವು ಅಪರಿಮಿತವಾಗಿರುವುದೊ, ಅಂತಹ ನಾನು ಹೇಳುವ ಮಾತುಗಳನ್ನು ಕೇಳಿರಿ.

೨೧. ಎಲೈ ರಾಜರೆ! ಈಗ ನಾನು ಹೇಳುವುದು ಸತ್ಯವಚನವೇ ಆಗಿರುವುದು. ಅದನ್ನು ಕೇಳಿರಿ. ಇದನ್ನು ನಾನು ಕೇವಲ ದರ್ಪದಿಂದ ಹೇಳುತ್ತಿಲ್ಲ. ಈ ಕಾರ್ಯವು ನನ್ನ ಪರಾಕ್ರಮಕ್ಕೆ ತಕ್ಕುದಾಗಿರುವುದು.

೨೨. ಮಹಾತ್ಮನೂ, ಪಿತೃವ್ಯನೂ ಆದ ಅರ್ಜುನನಿಂದ ಹೇಳಲ್ಪಟ್ಟಿರುವ ಮಾತುಗಳನ್ನು ನಾನು ಒಪ್ಪಲಾರೆ. ಆ ಒಂದು ದಿವಸವೂ ಕೂಡ ಹೆಚ್ಚಿನ ಕಾಲಕ್ಷೇಪವೆಂದೇ ನನಗೆ ತೋರುವುದು.

೨೩. ಅರ್ಜುನಕೇಶವರೊಡನೆ ನೀವೆಲ್ಲರೂ ಇಲ್ಲಿಯೇ ನಿಲ್ಲಿರಿ. ನಾನೊಬ್ಬನೇ ಹೊರಟು ಒಂದು ಮುಹೂರ್ತಮಾತ್ರದಲ್ಲಿ ಭೀಷ್ಮನೇ ಮೊದಲಾದ ಸಕಲರನ್ನೂ ಯಮನಗರಿಗೆ ಕಳುಹಿಸಿ ಬರುವೆನು.

೨೪. ನಾನು ನಿಂತಿರಲು ಎದುರಿನಲ್ಲಿ ಯಾವ ಕ್ಷತ್ರಿಯನೂ ಬಿಲ್ಲನ್ನು ಹಿಡಿಯುವ ಹಾಗಿಲ್ಲ. ನಿಮ್ಮ ಕ್ಷತ್ರಿಯ ಧರ್ಮವನ್ನೊತ್ತಟ್ಟಿಗಿಡಿರಿ. ನಾನು ಮೃತನಾದರೆ ನಿಮ್ಮ ಶಸ್ತ್ರಗಳನ್ನು ಹಿಡಿಯುವಿರಂತೆ.

ಪಶ್ಯಧ್ವಂ ಮೇ ಬಲಂ ಬಾಹ್ವೋರ್ದೇವ್ಯಾರಾಧನಸಂಭವಂ ।
ಮಾಹಾತ್ಮ್ಯಂ ಗುಪ್ತಕ್ಷೇತ್ರಸ್ಯ ತಥಾ ಭಕ್ತಿಂ ಚ ಪಾಂಡುಷು ॥ ೨೫ ॥
ಪಶ್ಯಧ್ವಂ ಮೇ ಧನುರ್ಘೋರಂ ತೂಣೀರಾವಕ್ಷಯೌ ತಥಾ ।
ಖಡ್ಗಂ ಚ ದೇವ್ಯಾ ಯದ್ದತ್ತಂ ತತೋ ವಚ್ಮಿ ವಚಸ್ತ್ವಿದಂ ॥ ೨೬ ॥
ಇತಿ ತಸ್ಯ ವಚಃ ಶ್ರುತ್ವಾ ಕ್ಷತ್ರಿಯಾ ವಿಸ್ಮಯಂ ಯಯುಃ ।
ಅರ್ಜುನಶ್ಚ ಕಟಾಕ್ಷೇಣ ಲಜ್ಜಿತಃ ಕೃಷ್ಣಮೈಕ್ಷತ ॥ ೨೭ ॥
ತಮಾಹ ಲಲಿತಂ ಕೃಷ್ಣಃ ಫಾಲ್ಗುನಂ ಪರಮಂ ವಚಃ ।
ಆತ್ಮೌಪಯಿಕಮೇವೇದಂ ಭೈಮಿಪುತ್ರೋಽಭ್ಯಭಾಷತ ॥ ೨೮ ॥
ನವಕೋಟಿಯುತೋಽನೇನ ಪಲಾಶೀ ನಿಹತಃ ಪುರಾ ।
ಕ್ಷಣಾದೇವ ಚ ಪಾತಾಲೇ ಶ್ರೂಯತೇ ಮಹದದ್ಭುತಂ ॥ ೨೯ ॥
ಪುನಃ ಪ್ರಕ್ಷ್ಯಾಮಹೇ ತ್ವೇನಂ ಕೇನೋಪಾಯೇನ ಕೌರವಾನ್ ।
ಮುಹೂರ್ತಾದ್ಧಂಸಿ ಬ್ರೂಹೀತಿ ಪೃಚ್ಛ್ಯತಾಂ ಚಾಹ ತಂ ಜಯಃ ॥ ೩೦ ॥

---

೨೫. ಈಗ ದೇವೀಪೂಜೆಯಿಂದುಂಟಾದ ನನ್ನ ಬಾಹುಗಳ ಬಲವನ್ನೂ, ಗುಪ್ತಕ್ಷೇತ್ರವೆನಿಸಿದ ಮಹೀಸಾಗರದ ಮಾಹಾತ್ಮ್ಯವನ್ನೂ, ಪಾಂಡವರಲ್ಲಿ ನನಗಿರುವ ಭಕ್ತಿಯನ್ನೂ ನೋಡಿರಿ.

೨೬. ನನ್ನ ಘೋರವಾದ ಧನುಸ್ಸನ್ನೂ, ಅಕ್ಷಯಬಾಣಗಳಿಂದ ತುಂಬಿದ ಎರಡು ಬತ್ತಳಿಕೆಗಳನ್ನೂ, ದೇವಿಯಿಂದ ಕೊಡಲ್ಪಟ್ಟ ಈ ಖಡ್ಗವನ್ನೂ ನೋಡಿರಿ. ಇವುಗಳ ಧೈರ್ಯದಿಂದಲೇ ಈ ಮಾತುಗಳನ್ನು ಹೇಳುತ್ತಿರುವೆನು.''

೨೭. ಇಂತೆಂದ ಬರ್ಬರೀಕನ ವಚನವನ್ನು ಕೇಳಿ ಅಲ್ಲಿ ನೆರೆದಿದ್ದ ಕ್ಷತ್ರಿಯರೆಲ್ಲರೂ ವಿಸ್ಮಯವನ್ನು ಹೊಂದಿದರು. ಅರ್ಜುನನೂ ಕೂಡ ನಾಚಿಕೆಯಿಂದ ಕೃಷ್ಣನ ಕಡೆಗೆ ಕಡೆಗಣ್ಣುಗಳಿಂದ ನೋಡಿದನು.

೨೮. ಆಗ ಶ್ರೀಕೃಷ್ಣನು ಮಧುರವಾಣಿಯಿಂದ ಅರ್ಜುನನನ್ನು ಕುರಿತು ಇಂತೆಂದನು. ''ಈ ಬರ್ಬರೀಕನು ತನ್ನ ಪೌರುಷಕ್ಕೆ ತಕ್ಕವುಗಳಾದ ಮಾತುಗಳನ್ನೇ ಆಡುತ್ತಿರುವನು.

೨೯. ಮುನ್ನು ಒಂಬತ್ತುಕೋಟಿ ರಾಕ್ಷಸರಿಂದೊಡಗೂಡಿದ ಪಲಾಶಿಯೆಂಬ ರಾಕ್ಷಸನು ಇವನಿಂದಲೇ ಹತನಾದನು. ಕ್ಷಣಮಾತ್ರದಲ್ಲಿ ಪಾತಾಲದಲ್ಲಿ ನಡೆದ ಈ ಕರ್ಮವು ಅದ್ಭುತವಾದುದೆಂದು ನಾವು ಕೇಳಿರುವೆವು.

೩೦. ಯಾವ ಉಪಾಯದಿಂದ ಮುಹೂರ್ತಮಾತ್ರದಲ್ಲಿ ಕೌರವರನ್ನೆಲ್ಲ ಕೊಲ್ಲುವೆಯೆಂಬುದಾಗಿ ಮತ್ತೆ ಕೇಳೋಣ.'' ಅರ್ಜುನನು ಅದನ್ನು ಕೇಳಬಹುದೆಂದು ಸಮ್ಮತಿಸಿದನು.

ತತಃ ಸ್ಮಯನ್ಯಾದವೇಂದ್ರೋ ಭೈಮಿಪುತ್ರಮಭಾಷತ ॥ ೩೧ ॥
ಭೀಷ್ಮದ್ರೋಣ ಕೃಪದ್ರೌಣಿ ಕರ್ಣದುರ್ಯೋಧನಾದಿಭಿಃ ।
ಗುಪ್ತಾಂ ತ್ರ್ಯಂಬಕದುರ್ಜೇಯಾಂ ಸೇನಾಂ ಹಂಸಿ ಕಥಂ ಕ್ಷಣಾತ್ ॥
ಅಯಂ ಮಹಾನ್ವಿಸ್ಮಯಸ್ತೇ ವಚಸೋ ಭೈಮಿನಂದನ ।
ಸಂಭೂತಃ ಸರ್ವರಾಜ್ಞಾಂ ಚ ಫಾಲ್ಗುನಸ್ಯ ಚ ಧೀಮತಃ ॥ ೩೩ ॥
ತದ್ಬ್ರೂಹಿ ಕೇನೋಪಾಯೇನ ಮುಹೂರ್ತಾದ್ಧಂಸಿ ಕೌರವಾನ್ ।
ಉಪಾಯವೀರ್ಯಂ ತೇ ಜ್ಞಾತ್ವಾ ನಿಃಸ್ಯಾಮೋ ವಯಮಪ್ಯುತ ॥

ಸೂತ ಉವಾಚ :—

ಇತ್ಯುಕ್ತೋ ವಾಸುದೇವೇನ ಸರ್ವಭೂತೇಶ್ವರೇಣ ಚ ।
ಸಿಂಹವಕ್ಷಾಃ ಪರ್ವತಾಭೋ ನಾನಾಭೂಷಣಭೂಷಿತಃ ॥ ೩೫ ॥
ಘಟಾಸ್ಯೋ ಘಟಹಾಸಶ್ಚ ಊರ್ಧ್ವಕೇಶೋಽತಿದೀಪ್ತಿಮಾನ್ ।
ವಿದ್ಯುದಕ್ಷೋ ವಾಯುಜವೋ ಯಶ್ಚೇಚ್ಛೇನ್ನಾಶಯೇಜ್ಜಗತ್ ॥ ೩೬ ॥

---

೩೧. ಆಗ ಮುಗುಳ್ನಗೆಯಿಂದ ಕೂಡಿ ಶ್ರೀಕೃಷ್ಣನು ಬರ್ಬರೀಕನನ್ನು ಕುರಿತು ಇಂತೆಂದನು.

೩೨. "ಭೀಷ್ಮ, ದ್ರೋಣ, ಕೃಪ, ಅಶ್ವತ್ಥಾಮ, ಕರ್ಣ, ದುರ್ಯೋಧನರೇ ಮೊದಲಾದವರಿಂದ ರಕ್ಷಿತವಾಗಿ ಮಹೇಶ್ವರನಿಗೂ ಅಜೇಯವೆನಿಸಿರುವ ಈ ಸೇನೆಯನ್ನು ಕ್ಷಣಮಾತ್ರದಲ್ಲಿ ಹೇಗೆ ಸಂಹರಿಸುವೆ?

೩೩. ಇಲ್ಲಿರುವ ಸಕಲ ರಾಜರಿಗೂ ಪ್ರಾಜ್ಞನಾದ ಅರ್ಜುನನಿಗೂ ನಿನ್ನ ಈ ಮಾತುಗಳಲ್ಲಿ ಹೆಚ್ಚಿನ ವಿಸ್ಮಯವು ಸಂಭವಿಸಿರುವುದು.

೩೪. ಆದುದರಿಂದ ಯಾವ ಉಪಾಯದಿಂದ ಕೌರವರನ್ನು ಮುಹೂರ್ತದಲ್ಲಿ ಕೊಲ್ಲುವೆಯೆಂಬುದನ್ನು ಹೇಳುವೆಯಾದರೆ ನಿನ್ನ ಉಪಾಯ ಕೌಶಲ್ಯವನ್ನು ತಿಳಿದುಕೊಂಡು ನಾವೂ ಕೂಡ ನಿಶ್ಚಿಂತರಾಗಿರುವೆವು."

೩೫. ಸೂತನು ಹೇಳುತ್ತಾನೆ:— ಇಂತು ಹೇಳಿದ ಸರ್ವಪ್ರಾಣಿಗಳ ನಿಯಾಮಕನಾದ ವಾಸುದೇವನ ಮಾತುಗಳನ್ನು ಕೇಳಿ ಸಿಂಹವಕ್ಷದಂತೆ ವಿಶಾಲ ವಕ್ಷವುಳ್ಳವನೂ, ಪರ್ವತಾಕಾರನೂ, ವಿವಿಧ ಭೂಷಣಗಳಿಂದಲಂಕೃತನೂ ಆದ ಬರ್ಬರೀಕನು ಎದ್ದುನಿಂತನು.

೩೬. ಘಟದಂತಿರುವ ಮುಖವೂ, ಗಂಭೀರಹಾಸವೂ, ಕೆದರಿನಿಂತಿರುವ ಕೇಶಗಳೂ ಉಳ್ಳ ಆತನು ತೇಜಸಂಪನ್ನನೂ, ಮಿಂಚಿನಂತೆ ಹೊಳೆಯುವ ನೋಟವುಳ್ಳವನೂ, ವಾಯುವೇಗವುಳ್ಳವನೂ, ಇಚ್ಛಾಮಾತ್ರದಿಂದ ಜಗತ್ತನ್ನೇ ನಾಶಗೊಳಿಸಬಲ್ಲವನೂ ಆಗಿ ಕಂಡುಬಂದನು.

ದೇವೀದತ್ತಾತುಲಬಲೋ ಬರ್ಬರೀಕೋಽಭ್ಯಭಾಷತ ।
ಯದಿ ವೋ ಮಾನಸಂ ವೀರಾ ಉಪಾಯಸ್ಯ ಪ್ರದರ್ಶನೇ ॥ ೩೭ ॥
ತದಹಂ ದರ್ಶಯಾಮ್ಯೇಷ ಪಶ್ಯಧ್ವಂ ಸಹಕೇಶವಾಃ ।
ಇತ್ಯುಕ್ತ್ವಾ ಧನುರಾರೋಪ್ಯ ಸಂದಧೇ ವಿಶಿಖಂ ತ್ವರನ್ ।
ನಿಃಶಲ್ಯಂ ಚಾಪಿ ಸಂಪೂರ್ಣಂ ಸಿಂದೂರಾಭೇಣ ಭಸ್ಮನಾ ॥ ೩೮ ॥
ಆಕರ್ಣಮಾಕೃಷ್ಯ ಚ ತಂ ಮುಮೋಚ
ಮುಖಾದಥೋದ್ಭೂತಮಭೂಚ್ಚ ಭಸ್ಮ ।
ಸೇನಾದ್ವಯೇ ತಚ್ಚ ಪಪಾತ ಶೀಘ್ರಂ
ಯಸ್ಯೈವ ಯತ್ರಾಸ್ತಿ ಚ ಮೃತ್ಯುಮರ್ಮ ॥ ೩೯ ॥
ಸರ್ವರೋಮಸು ಭೀಷ್ಮಸ್ಯ ಕಂಠೇರಾಧೇಯ ದ್ರೋಣಯೋಃ ॥ ೪೦ ॥
ಊರೌ ದುರ್ಯೋಧನಸ್ಯಾಪಿ ಶಲ್ಯಸ್ಯಾಪಿ ಚ ವಕ್ಷಸಿ ।
ಕಂಠೇ ಚ ಶಕುನೇರ್ದಿಷ್ಟಂ ಭಗದತ್ತಸ್ಯ ಚಾಪತತ್ ॥ ೪೧ ॥
ಕೃಷ್ಣಸ್ಯ ಪಾದತಲಕೇ ಕಂಠೇ ದ್ರುಪದಮತ್ಸ್ಯಯೋಃ ।
ಶಿಖಂಡಿನಸ್ತಥಾ ಕಟ್ಯಾಂ ಕಂಠೇ ಸೇನಾಪತೇಸ್ತಥಾ ॥ ೪೨ ॥

---

೩೭–೩೮. ದೇವಿಯ ಕೃಪೆಯಿಂದ ದತ್ತವಾದ ಅಪರಿಮಿತ ಪರಾಕ್ರಮವುಳ್ಳ ಸುಹೃದಯನು ಹೇಳತೊಡಗಿದನು: ''ಎಲೈ ವೀರರೆ! ನನ್ನ ಯುದ್ಧೋಪಾಯವನ್ನು ನೋಡಬೇಕೆಂಬ ಮನಸ್ಸು ನಿಮಗಿದ್ದರೆ ಈಗ ನನ್ನ ಪರಾಕ್ರಮವನ್ನು ತೋರಿಸುವೆನು. ಕೇಶವಸಹಿತರಾಗಿ ನೀವೆಲ್ಲರೂ ನೋಡುತ್ತಿರಿ.'' ಇಂತೆಂದು ವೇಗದಿಂದ ಬಿಲ್ಲಿಗೆ ಹೆದೆಯನ್ನೇರಿಸಿ ಶಲ್ಯರಹಿತವೂ ಸಿಂದೂರವರ್ಣವುಳ್ಳದ್ದೂ ಆದ ಭಸ್ಮದಿಂದ ಪೂರಿತವಾದ ಬಾಣವೊಂದನ್ನು ಹೂಡಿದನು.

೩೯. ಅದನ್ನು ಕಿವಿಯವರೆಗೂ ಎಳೆದು ಬಿಡಲು ಅದರ ಮುಖದಿಂದ ಭಸ್ಮವು ಹೊರಟಿತು. ಉಭಯಸೇನೆಗಳಲ್ಲಿಯೂ ಯಾರು ಯಾರಿಗೆ ಎಲ್ಲೆಲ್ಲಿ ಮರ್ಮಸ್ಥಾನಗಳಿದ್ದುವೊ, ಅಲ್ಲೆಲ್ಲ ಭಸ್ಮವು ಬೀಳುವಂತಹುದಾಯಿತು.

೪೦–೪೧. ಭೀಷ್ಮನ ಸಕಲ ರೋಮಕೂಪಗಳಲ್ಲಿಯೂ, ಕರ್ಣ, ದ್ರೋಣರ ಕಂಠದಲ್ಲಿಯೂ, ದುರ್ಯೋಧನನ ತೊಡೆಯಲ್ಲಿಯೂ, ಶಲ್ಯನ ವಕ್ಷಸ್ಥಳದಲ್ಲಿಯೂ, ಶಕುನಿ, ಭಗದತ್ತರ ಕಂಠದಲ್ಲಿಯೂ ಜ್ವಲಿಸುತ್ತಿರುವ ಆ ಬಾಣವು ಬಿದ್ದಿತು.

೪೨. ಮತ್ತು ಶ್ರೀಕೃಷ್ಣನ ಪಾದಗಳಲ್ಲಿಯೂ, ದ್ರುಪದ ಮತ್ಸ್ಯರ ಕಂಠಗಳಲ್ಲಿಯೂ, ಶಿಖಂಡಿಯ ನಡುವಿನಲ್ಲಿಯೂ, ಧೃಷ್ಟದ್ಯುಮ್ನನ ಕಂಠದಲ್ಲಿಯೂ ಆ ಭಸ್ಮವು ಬಿದ್ದಿತು.

ಪಪಾತ ರಕ್ತಂ ತದ್ಭಸ್ಮ ಯತ್ರ ಯೇಷಾಂ ಚ ಮರ್ಮಚ ।
ಕೇವಲಂ ಚೈನ ಪಾಂಡೂನಾಂ ಕೃಪ ದ್ರೌಣ್ಯೋಶ್ಚನಾಸ್ಪೃಶತ್ ॥ ೪೩ ॥
ಇತಿ ಕೃತ್ವಾ ತತೋ ಭೂಯೋ ಬರ್ಬರೀಕೋಽಭ್ಯಭಾಷತ ।
ದೃಷ್ಟಂ ಭವದ್ಭಿರೇವಂ ಯನ್ಮಯಾ ಮರ್ಮ ನಿರೀಕ್ಷಿತಂ ॥ ೪೪ ॥
ಅಧುನಾ ಪಾತಯಿಷ್ಯಾಮಿ ಮರ್ಮಸ್ವೇಷಾಂ ಶಿತಾನ್ಶರಾನ್ ।
ದೇವೀದತ್ತಾನಮೋಘಾಖ್ಯಾನ್ಯೈರ್ಮರಿಷ್ಯಂತ್ಯಮೀ ಕ್ಷಣಾತ್ ॥ ೪೫ ॥
ಶಪಥಾ ವಃ ಸ್ವಧರ್ಮಸ್ಯ ಶಸ್ತ್ರಂ ಗ್ರಾಹ್ಯಂ ನ ವಃ ಕ್ವಚಿತ್ ।
ಮುಹೂರ್ತಾತ್ಪಾತಯಿಷ್ಯಾಮಿ ಶತ್ರೂನೇತಾನ್ಶಿತೈಃ ಶರೈಃ ॥ ೪೬ ॥
ತತೋ ವಿಸ್ಮಿತಚಿತ್ತಾನಾಂ ಯುಧಿಷ್ಠಿರಪುರೋಗಿಣಾಂ ।
ಆಸೀನ್ನಿನಾದಃ ಸುಮಹಾನ್ಸಾಧು ಸಾಧ್ವಿತಿ ಶಂಸತಾಂ ॥ ೪೭ ॥
ವಾಸುದೇವಸ್ತು ಸಂಕ್ರುದ್ಧಶ್ಚಕ್ರೇಣ ನಿಶಿತೇನ ಚ ।
ಏವಂ ಬ್ರುವತ ಏವಾಸ್ಯ ಶಿರಶ್ಛಿತ್ವಾ ನ್ಯಪಾತಯತ್ ॥ ೪೮ ॥

---

೪೩. ಇಂತು ಭಸ್ಮವು ಯಾರಿಗೆ ಯಾವುದು ಮರ್ಮಸ್ಥಾನವಾಗಿದ್ದಿತೊ, ಅಲ್ಲಿ ಬಿದ್ದು ಅಂಟಿಕೊಂಡಿದ್ದಿತು. ಆದರೆ ಪಂಚಪಾಂಡವರು, ಕೃಪಾಚಾರ್ಯ ಮತ್ತು ಅಶ್ವತ್ಥಾಮರನ್ನು ಮಾತ್ರ ಆ ಭಸ್ಮವು ಮುಟ್ಟಲಿಲ್ಲ.

೪೪. ಈ ಕೆಲಸವನ್ನು ಮಾಡಿ ಬರ್ಬರೀಕನು ಮತ್ತೆ ಹೇಳತೊಡಗಿದನು. "ನಾನು ಯಾರ ಮರ್ಮವು ಎಲ್ಲಿರುವುದೆಂದು ತಿಳಿದಿರುವುದನ್ನು ನೀವೇ ಕಂಡಿರುವಿರಿ.

೪೫. ಈಗ ದೇವಿಯಿಂದ ಕೊಡಲ್ಪಟ್ಟ ತೀಕ್ಷ್ಣಗಳಾದ ಬಾಣಗಳನ್ನು ಇವರ ಮರ್ಮಸ್ಥಾನಗಳಿಗೆ ಗುರಿಯಿಟ್ಟು ಹೊಡೆಯುವೆನು. ಅಮೋಘಗಳಾದ ಬಾಣಗಳಿಂದ ಇವರೆಲ್ಲರೂ ಕ್ಷಣಮಾತ್ರದಲ್ಲಿ ಸತ್ತುಹೋಗುವರು.

೪೬. ನಿಮ್ಮ ಸ್ವಧರ್ಮದ ಶಪಥವೆಂಬುದಿರಲಿ. ನೀವೊಬ್ಬರೂ ಶಸ್ತ್ರಗಳನ್ನು ಧರಿಸಬೇಕಾದ ಪ್ರಮೇಯವೇ ಇಲ್ಲ. ಈ ಶತ್ರುಗಳನ್ನೆಲ್ಲ ನನ್ನ ತೀಕ್ಷ್ಣಗಳಾದ ಬಾಣಗಳಿಂದ ಒಂದು ಮುಹೂರ್ತದೊಳಗೇ ಹೊಡೆದು ಕೆಡವುತ್ತೇನೆ."

೪೭. ಇದನ್ನು ಕಂಡು ವಿಸ್ಮಯಗೊಂಡ ಯುಧಿಷ್ಠಿರನೇ ಮೊದಲಾದವರೆಲ್ಲರೂ ಸಾಧುಕಾರಗಳನ್ನು ಮಾಡಿದ ಧ್ವನಿಯು ಬಹಳವಾಗಿ ಎಲ್ಲೆಲ್ಲಿಯೂ ಹರಡಿತು.

೪೮. ಆದರೆ ಶ್ರೀಕೃಷ್ಣನು ಮಾತ್ರ ಕೋಪಗೊಂಡು ಇಂತು ಮಾತನಾಡುತ್ತಿರುವಂತೆಯೇ ಬರ್ಬರೀಕನ ತಲೆಯನ್ನು ತೀಕ್ಷ್ಣವಾದ ತನ್ನ ಚಕ್ರಾಯುಧದಿಂದ ಕತ್ತರಿಸಿ ಕೆಡವಿದನು.

ತತಃ ಕ್ಷಣಾತ್ಸರ್ವಮಾಸೀದಾವಿಗ್ರಂ ರಾಜಮಂಡಲಂ ।
ವ್ಯಲೋಕಯನ್ಕೇಶವಂ ತೇ ವಿಸ್ಮಿತಾಶ್ಚಾಭವನ್ಭೃಶಂ ॥ ೪೯ ॥
ಕಿಮೇತದಿತಿ ಪ್ರಾಹುಶ್ಚ ಬರ್ಬರೀಕಃ ಕುತೋ ಹತಃ ।
ಪಾಂಡವಾಶ್ಚಾಪಿ ಮುಮುಚುರಶ್ರೂಣಿ ಸಹ ಪಾರ್ಥಿವಾಃ ॥ ೫೦ ॥
ಹಾಹಾ ಪುತ್ರೇತಿ ಚ ಗೃಣನ್ಪ್ರಸ್ಖಲಂಶ್ಚ ಪದೇಪದೇ ।
ಘಟೋತ್ಕಚೋಽಪತದ್ದೀನಃ ಪುತ್ರೋಪರಿ ವಿಮೂರ್ಛಿತಃ ॥ ೫೧ ॥
ಏತಸ್ಮಿನ್ನಂತರೇ ದೇವ್ಯಶ್ಚತುರ್ದಶ ಸಮಾಯಯುಃ ॥ ೫೨ ॥

ಸಿದ್ಧಾಂಬಿಕಾ ಕ್ರೋಡಮಾತಾ ಕಪಾಲೀ
ತಾರಾ ಸುವರ್ಣಾ ಚ ತ್ರಿಲೋಕಜೇತ್ರೀ ।
ಭಾಣೇಶ್ವರೀ ಚರ್ಚಿಕಾ ಚೈಕವೀರಾ
ಯೋಗೇಶ್ವರೀ ಚಂಡಿಕಾ ತ್ರೈಪುರಾ ಚ ॥ ೫೩ ॥
ಭೂತಾಂಬಿಕಾ ಹರಸಿದ್ಧಿಸ್ತ್ರಿಧಾಮಾಃ
ಸಂಪ್ರಾಪ್ಯ ತಸ್ಥುರ್ನೃಪವಿಸ್ಮಯಂಕರಾಃ ।
ಶ್ರೀಚಂಡಿಕಾಶ್ವಾಸ್ಯ ತತೋ ಘಟೋತ್ಕಚಂ
ಪ್ರೋವಾಚ ವಾಕ್ಯಂ ಮಹತಾ ಸ್ವರೇಣ ॥ ೫೪ ॥

---

೪೯. ಆ ಕ್ಷಣದಲ್ಲಿಯೇ ರಾಜಸಮೂಹವೆಲ್ಲವೂ ಸ್ತಬ್ಧವಾಗಿ ನಿಂತಿತು. ಅವರೆಲ್ಲರೂ ಅತ್ಯಂತ ವಿಸ್ಮಯಗೊಂಡವರಾಗಿ ಕೃಷ್ಣನನ್ನೇ ನೋಡುತ್ತ ನಿಂತಿದ್ದರು.

೫೦. ಮತ್ತು 'ಇದು ಏನು ? ಬರ್ಬರೀಕನು ಏತಕ್ಕಾಗಿ ಕೊಲ್ಲಲ್ಪಟ್ಟನು ?" ಎಂದು ಕೇಳುತ್ತಿದ್ದರು. ರಾಜರೊಡನೆ ಪಾಂಡವರೂ ಕೂಡ ಬರ್ಬರೀಕನ ವಧೆಗಾಗಿ ಕಣ್ಣೀರನ್ನು ಸುರಿಸತೊಡಗಿದರು.

೫೧-೫೨. ಘಟೋತ್ಕಚನೂ ಕೂಡ ದೀನನಾಗಿ "ಹಾ ಪುತ್ರ !" ಎಂದು ಗೋಳಾಡುತ್ತ ಅಡಿಗಡಿಗೂ ಮುಗ್ಗರಿಸುತ್ತ ಮಗನ ಶವದ ಮೇಲೆ ಬಿದ್ದು ಮೂರ್ಛೆಯನ್ನು ಹೊಂದಿದನು. ಅಷ್ಟರಲ್ಲಿಯೇ ಮಹೀನಗರದ ಹದಿನಾಲ್ಕು ದೇವಿಯರೂ ಅಲ್ಲಿ ಪ್ರಾಪ್ತರಾದರು.

೫೩-೫೪. ಸಿದ್ಧಾಂಬಿಕೆ, ಕ್ರೋಡಮಾತೆ, ಕಪಾಲಿ, ತಾರೆ, ಸುವರ್ಣೆ, ತ್ರಿಲೋಕವಿಜಯೆ, ಭಾಣೇಶ್ವರಿ, ಚರ್ಚಿಕೆ, ಏಕವೀರೆ, ಯೋಗೇಶ್ವರಿ, ಚಂಡಿಕೆ, ತ್ರಿಪುರೆ, ಭೂತಾಂಬಿಕೆ ಮತ್ತು ಹರಸಿದ್ಧಿಯರೆಂಬ ದೇವಿಯರು ಅಲ್ಲಿಗೆ ಬಂದು ರಾಜಮಂಡಲಿಗೆಲ್ಲ ವಿಸ್ಮಯವನ್ನುಂಟುಮಾಡಿದರು. ಅವರಲ್ಲಿ ಚಂಡಿಕೆಯು ಘಟೋತ್ಕಚನನ್ನು ಸಂತೈಸುತ್ತ ಮೇಘಗಂಭೀರವಾದ ವಾಣಿಯಿಂದ ಹೇಳತೊಡಗಿದಳು.

ಶೃಣುಧ್ವಂ ಪಾರ್ಥಿವಾಃ ಸರ್ವೇ ಕೃಷ್ಣೇನ ವಿದಿತಾತ್ಮನಾ ।
ಹೇತುನಾ ಯೇನ ನಿಹತೋ ಬರ್ಬರೀಕೋ ಮಹಾಬಲಃ ॥ ೫೫ ॥
ಮೇರುಮೂರ್ಧ್ನಿ ಪುರಾ ಪೃಥ್ವೀ ಸಮವೇತಾನ್ದಿವೌಕಸಃ ।
ಭಾರಾಕ್ರಾಂತಾ ಜಗಾದೈತಾನ್ಭಾರೋಪಹ್ರಿಯತಾಂ ಹಿ ಮೇ ॥ ೫೬ ॥
ತತೋ ಬ್ರಹ್ಮಾ ಪ್ರಾಹ ವಿಷ್ಣುಂ ಭಗವಂಸ್ತ್ವಮಿದಂ ಶೃಣು ।
ದೇವಾಸ್ತ್ವಾನುಗಮಿಷ್ಯಂತಿ ಭಾರಂ ಹರ ಭುವಃ ಪ್ರಭೋ ॥ ೫೭ ॥
ತತಸ್ತಥೇತಿ ತನ್ಮೇನೇ ವಚನಂ ವಿಷ್ಣುರವ್ಯಯಃ ।
ಏತಸ್ಮಿನ್ನಂತರೇ ಬಾಹುಮುದ್ಧೃತ್ಯೋಚ್ಚೈರಭಾಷತ ॥ ೫೮ ॥
ಸೂರ್ಯವರ್ಚೇತಿ ಯಕ್ಷೇಂದ್ರಶ್ಚತುರಶೀತಿ ಕೋಟಿಪಃ ।
ಕಿಮರ್ಥಂ ಮಾನುಷೇ ಲೋಕೇ ಭವದ್ಭಿರ್ಜನ್ಮ ಕಾರ್ಯತೇ ॥ ೫೯ ॥
ಮಯಿ ತಿಷ್ಠತಿ ದೋಷಾಣಾಮನೇಕಾನಾಂ ಮಹಾಸ್ಪದೇ ।
ಸರ್ವೇ ಭವಂತೋ ನೋದಂತು ಸ್ವರ್ಗೇಷು ಸಹ ವಿಷ್ಣುನಾ ॥ ೬೦ ॥

---

೫೫. "ಎಲೈ ರಾಜರೆ! ನೀವೆಲ್ಲರೂ ಕೇಳಿರಿ. ಮಹಾಪರಾಕ್ರಮಿಯಾದ ಬರ್ಬರೀಕನು ಆತ್ಮಜ್ಞನಾದ ಶ್ರೀಕೃಷ್ಣನಿಂದ ಹತನಾದುದಕ್ಕೆ ಕಾರಣವನ್ನು ಹೇಳುವೆನು.

೫೬. ಪೂರ್ವದಲ್ಲಿ ಮೇರುಪರ್ವತದ ಶಿಖರಪ್ರದೇಶದಲ್ಲಿ ನೆರೆದಿದ್ದ ಸಕಲ ದೇವತೆಗಳನ್ನೂ ಕುರಿತು ರಾಕ್ಷಸರ ಭಾರದಿಂದ ಬಸವಳಿದ ಭೂದೇವಿಯು "ನನ್ನ ಭಾರವನ್ನಿಳುಹಿ' ಎಂದು ಕೇಳಿಕೊಂಡಳು.

೫೭. ಆಗ ಬ್ರಹ್ಮನು ವಿಷ್ಣುವನ್ನು ಕುರಿತು 'ಭಗವಂತನಾದ ಲೋಕನಾಥನೆ! ನನ್ನ ಪ್ರಾರ್ಥನೆಯನ್ನು ಲಾಲಿಸು. ಭೂಭಾರವನ್ನು ಹೋಗಲಾಡಿಸು. ದೇವತೆಗಳೆಲ್ಲರೂ ನಿನ್ನ ಸಹಾಯಕರಾಗಿ ಅವತರಿಸುವರು' ಎಂದು ಬಿನ್ನವಿಸಿದನು.

೫೮–೫೯. ಅವ್ಯಯನಾದ ಮಹಾವಿಷ್ಣುವೂ ಕೂಡ ಆ ಮಾತುಗಳನ್ನು ಸ್ವೀಕರಿಸಿ ಹಾಗೆಯೇ ಆಗಲೆಂದು ಒಪ್ಪಿಕೊಂಡನು. ಇಷ್ಟರಲ್ಲಿ ಎಂಬತ್ತುನಾಲ್ಕು ಕೋಟಿ ಯಕ್ಷರಿಗೆ ಒಡೆಯನಾದ ಸೂರ್ಯವರ್ಚನೆಂಬ ಯಕ್ಷೇಶ್ವರನು ಸಭಾಮಧ್ಯದಲ್ಲಿ ಬಾಹುಗಳನ್ನೆತ್ತಿ ಹೇಳತೊಡಗಿದನು. ಮನುಷ್ಯ ಲೋಕದಲ್ಲಿ ನೀವೇತಕ್ಕೆ ಜನ್ಮಗಳನ್ನು ಧರಿಸಬೇಕು ?

೬೦. ಸಕಲ ದೋಷಗಳನ್ನೂ ಹೋಗಲಾಡಿಸುವ ಮಹಾಸ್ಪದನಾದ ನಾನಿರಲು ನೀವೆಲ್ಲರೂ ವಿಷ್ಣುಸಹಿತರಾಗಿ ಸ್ವರ್ಗಲೋಕದಲ್ಲಿಯೇ ಸುಖವಾಗಿ ವಿಹರಿಸುತ್ತಿರಿ.

ಅಹಮೇಕೋಽವತೀರ್ಯೈತಾನ್ಹನಿಷ್ಯಾಮಿ ಭುವೋ ಭರಾನ್ ।
ಸ್ವಧರ್ಮಶಪಥಾ ಯೋ ವೈ ಸಂತಿ ಚೇಜ್ಜನ್ಮ ಪ್ರಾಪ್ಸ್ಯಥ ॥ ೬೧ ॥
ಇತ್ಯುಕ್ತವಚನೇ ಬ್ರಹ್ಮಾ ಕೃದ್ಧಸ್ತಂ ಸಮಭಾಷತ ।
ದುರ್ಮತೇ ಸರ್ವದೇವಾನಾಮವಿಷಹ್ಯಂ ಮಹಾಭರಂ ॥ ೬೨ ॥
ಸ್ವಸಾಧ್ಯಂ ಬ್ರೂಷೇ ಮೋಹಾತ್ತ್ವಂ ಶಾಪಯೋಗ್ಯೋಽಸಿ ಬಾಲಿಶ ।
ದೇಶಕಾಲೋಚಿತಂ ಸ್ವೀಯಂ ಪರಸ್ಯ ಚ ಬಲಂ ಹೃದಾ ॥ ೬೩ ॥
ಅವಿಚಾರ್ಯೈವ ಪ್ರಭುಷು ವಕ್ತಿ ಸೋಽರ್ಹತಿ ದಂಡನಂ ।
ತಸ್ಮಾದ್ಭೂಭಾರಹರಣೇ ಯುದ್ಧಸ್ಯೋಪಕ್ರಮೇ ಸತಿ ॥ ೬೪ ॥
ಶರೀರನಾಶಂ ಕೃಷ್ಣಾತ್ತ್ವಮವಾಪ್ಸ್ಯಸಿ ನ ಸಂಶಯಃ ।
ಏವಂ ಶಪ್ತೋ ಬ್ರಹ್ಮಣಾಸೌ ವಿಷ್ಣುಮೇತದಯಾಚತ ॥ ೬೫ ॥
ಯದ್ಯೇವಂ ಭವಿತಾ ನಾಶಸ್ತದೇಕಂ ದೇವ ಪ್ರಾರ್ಥಯೇ ।
ಜನ್ಮಪ್ರಭೃತಿ ಮೇ ದೇಹಿ ಮತಿಂ ಸರ್ವಾರ್ಥಸಾಧಿನೀಂ ॥ ೬೬ ॥

---

೬೧. ನಾನೊಬ್ಬನೆ ಅವತಾರಮಾಡಿ ಭೂಮಿಗೆ ಭಾರವಾಗಿರುವವರನ್ನೆಲ್ಲ ಕೊಲ್ಲುತ್ತೇನೆ. ಆದರೆ ನಿಮ್ಮ ಧರ್ಮವನ್ನು ನಡೆಸಬೇಕೆಂಬ ಶಪಥವಿದ್ದಲ್ಲಿ ಮಾತ್ರ ನೀವು ಜನ್ಮವನ್ನೆತ್ತಬಹುದು.''

೬೨-೬೫. ಇಂತು ಸೂರ್ಯವರ್ಚನು ಹೇಳಲು ಬ್ರಹ್ಮನು ಕೋಪಗೊಂಡು ಮಾತನಾಡಿದನು. ''ದುರ್ಬುದ್ಧಿಯುಳ್ಳ ಅವಿವೇಕಿಯೆ! ಸಕಲ ದೇವತೆಗಳಿಗೂ ಸಹಿಸಲಸಾಧ್ಯವಾದ ಭೂಮಿಯ ಮಹಾಭಾರವನ್ನು ಮೋಹದಿಂದ ನೀನೊಬ್ಬನೇ ಕಳೆಯುವೆಯೆಂದು ಜಂಭವನ್ನು ಕೊಚ್ಚಿಕೊಳ್ಳುವೆಯ? ಇಷ್ಟು ಮಾತ್ರಕ್ಕಾಗಿಯೇ ನೀನು ಶಾಪಕ್ಕೆ ಯೋಗ್ಯನಾಗಿರುವೆ. ದೇಶಕಾಲ ವರ್ತಮಾನಗಳನ್ನೂ, ಸ್ವಬಲ ಪರಬಲಗಳನ್ನೂ ಮನಃಪೂರ್ವಕವಾಗಿ ವಿಚಾರಮಾಡದೆ ಪ್ರಭುವಿನೆದುರಿಗೆ ಮಾತನಾಡುವವನು ಶಿಕ್ಷೆಗೆ ಅರ್ಹನಾಗುವನು. ಆದುದರಿಂದ ಭೂಭಾರ ಹರಣಕ್ಕಾಗಿ ಮಹಾಯುದ್ಧವು ಪ್ರಾರಂಭವಾಗಲು ಶ್ರೀಕೃಷ್ಣನ ಕೈಯಿಂದಲೇ ನಿನ್ನ ದೇಹನಾಶವಾಗುವುದರಲ್ಲಿ ಸಂಶಯವಿಲ್ಲ.'' ಇಂತು ಬ್ರಹ್ಮನ ಶಾಪವನ್ನು ಹೊಂದಿದ ಸೂರ್ಯವರ್ಚನು ಮಹಾವಿಷ್ಣುವನ್ನು ಪ್ರಾರ್ಥಿಸಿದನು.

೬೬. ''ಎಲೈ ದೇವದೇವನೆ! ನನಗೆ ಈ ವಿಧವಾದ ದೇಹನಾಶವೇ ಸಂಭವಿಸುವುದಾದರೆ ನಿನ್ನಲ್ಲಿ ಒಂದನ್ನು ಮಾತ್ರ ಕೇಳಿಕೊಳ್ಳುವೆನು. ಆಜನ್ಮಪರ್ಯಂತವಾಗಿ ಸಕಲಾರ್ಥಗಳನ್ನು ಸಾಧಿಸಿಕೊಳ್ಳುವಂತಹ ಸದ್ಬುದ್ಧಿಯನ್ನು ದಯೆಪಾಲಿಸು.''

**ತತಸ್ತಥೇತಿ ತಂ ಪ್ರಾಹ ಕೇಶವೋ ದೇವಸಂಸದಿ ।**
**ಶಿರಸ್ತೇ ಪೂಜಯಿಷ್ಯಂತಿ ದೇವ್ಯಾಃ ಪೂಜ್ಯೋ ಭವಿಷ್ಯಸಿ ॥ ೬೭ ॥**
**ಇತ್ಯುಕ್ತ್ವಾ ಚಾವತೀರ್ಣೋಽಸೌ ಸಹ ದೇವೈರ್ಹರಿಸ್ತದಾ ।**
**ಹರಿರ್ನಾಮ ಸ ಕೃಷ್ಣೋಽಸೌ ಭವಂತಸ್ತೇ ತಥಾ ಸುರಾಃ ॥ ೬೮ ॥**
**ಸೂರ್ಯವರ್ಚಾಃ ಸ ಚಾಯಂ ಹಿ ನಿಹತೋ ಭೈಮಿಪುತ್ರಕಃ ।**
**ಪ್ರಾಕ್ಶಾಪಂ ಬ್ರಹ್ಮಣಃ ಸ್ಮೃತ್ವಾ ಹತೋಽನೇನ ಮಹಾತ್ಮನಾ ।**
**ತಸ್ಮಾದ್ದೋಷೋ ನ ಕೃಷ್ಣೇಽಸ್ಮಿನ್ದ್ರಷ್ಟವ್ಯಃ ಸರ್ವಭೂಮಿಪೈಃ ॥ ೬೯ ॥**

**ಶ್ರೀ ಕೃಷ್ಣ ಉವಾಚ:—**

**ಯದುಕ್ತಂ ಭೂಮಿಪಾ ದೇವ್ಯಾ ತತ್ತಥೈವ ನ ಸಂಶಯಃ ॥ ೭೦ ॥**
**ಯದ್ಯೇನಮಧುನಾ ನೈವ ಹನ್ಯಾಂ ಬ್ರಹ್ಮವಚೋಽನ್ಯಥಾ ।**
**ತತೋ ಭವೇದಿತಿ ಸ್ಮೃತ್ವಾ ಮಯಾಽಸೌ ವಿನಿಪಾತಿತಃ ॥ ೭೧ ॥**
**ಗುಪ್ತಕ್ಷೇತ್ರೇ ಮಯೈವಾಽಸೌ ನಿಯುಕ್ತೋ ದೇವ್ಯನುಸ್ಮೃತೌ ।**
**ಪೂರ್ವಂ ದತ್ತಂ ವರಂ ಸ್ವೀಯಂ ಸ್ಮರತಾ ದೇವಸಂಸದಿ ॥ ೭೨ ॥**

---

೬೭. ಆಗ ಮಹಾವಿಷ್ಣುವೂ ದೇವತೆಗಳ ಸಭೆಯಲ್ಲಿ ಹಾಗೆಯೇ ಆಗಲೆಂದು ಒಪ್ಪಿಕೊಂಡು "ನಿನ್ನ ತಲೆಯನ್ನು ದೇವಿಯರು ಪೂಜಿಸುವರು. ಅವರಿಂದಲೂ ನೀನು ಪೂಜ್ಯನಾಗುವೆ" ಎಂದು ಹೇಳಿದನು.

೬೮. ಇಂತೆಂದು ಶ್ರೀ ಹರಿಯು ಸಕಲ ದೇವತೆಗಳೊಡನೆ ಭೂಲೋಕದಲ್ಲಿ ಅವತರಿಸಿದನು. ಆ ಹರಿಯೇ ಈ ಶ್ರೀ ಕೃಷ್ಣನು. ನೀವುಗಳೇ ದೇವತೆಗಳು.

೬೯. ಘಟೋತ್ಕಚ ಪುತ್ರನಾದ ಈ ಬರ್ಬರೀಕನೇ ಸೂರ್ಯವರ್ಚನೆಂಬ ಯಕ್ಷರಾಜನು. ಬ್ರಹ್ಮದೇವನು ಕೊಟ್ಟ ಶಾಪವನ್ನು ಸ್ಮರಿಸಿಕೊಂಡ ಶ್ರೀ ಕೃಷ್ಣನಿಂದ ಈತನು ಈಗ ವಧಿಸಲ್ಪಟ್ಟನು.

೭೦. ಶ್ರೀ ಕೃಷ್ಣನು ಹೇಳುತ್ತಾನೆ:—"ಎಲೈ ರಾಜರಿರಾ! ಈಗ ಚಂಡಿಕಾ ದೇವಿಯು ಹೇಳಿದ ಮಾತುಗಳು ಯಥಾರ್ಥವಾದುವುಗಳು. ಸಂಶಯಕ್ಕೆ ಅವಕಾಶವಿಲ್ಲ.

೭೧. ಈಗ ನಾನು ಈತನನ್ನು ಕೊಲ್ಲದಿದ್ದರೆ ಬ್ರಹ್ಮದೇವನ ಮಾತುಗಳು ಮಿಥ್ಯಾವಾದಗಳಾಗುತ್ತಿದ್ದುವು. ಅದನ್ನು ಸ್ಮರಿಸಿಕೊಂಡೇ ನಾನು ಈತನನ್ನು ಕೆಡವಿದೆನು.

೭೨. ಗುಪ್ತಕ್ಷೇತ್ರದಲ್ಲಿ ನನ್ನ ಆಜ್ಞಾನುಸಾರವಾಗಿಯೇ ಈತನು ದೇವ್ಯಾರಾಧನ ತತ್ಪರನಾಗಿ ನಿಯಮಿಸಲ್ಪಟ್ಟನು. ದೇವಸಭೆಯಲ್ಲಿ ಮುನ್ನು ಈತನಿಗಿತ್ತ ವರವನ್ನು ಸ್ಮರಿಸಿದುದರಿಂದಲೇ ಇವನನ್ನು ನಿಯಮಿಸಿದೆನು."

ಇತ್ಯುಕ್ತೇ ಚಂಡಿಕಾ ದೇವೀ ತದಾ ಭಕ್ತಶಿರಸ್ತ್ವಿದಂ ।
ಅಭ್ಯುಕ್ಷ್ಯ ಸುಧಯಾ ಶೀಘ್ರಮಜರಂ ಚಾಮರಂ ವ್ಯಧಾತ್ ॥ ೭೩ ॥
ಯಥಾ ರಾಹುಶಿರಸ್ತದ್ವತ್ತಚ್ಛಿರಃ ಪ್ರಣನಾಮ ತಾನ್ ।
ಉವಾಚ ಚ ದಿದೃಕ್ಷಾಮಿ ಯುದ್ಧಂ ತದನುಮನ್ಯತಾಂ ॥ ೭೪ ॥
ತತಃ ಕೃಷ್ಣೋ ವಚಃಪ್ರಾಹ ಮೇಘಗಂಭೀರವಾಕ್ಪ್ರಭುಃ ॥ ೭೫ ॥
ಯಾವನ್ಮಹೀ ಸನಕ್ಷತ್ರಾ ಯಾವಚ್ಚಂದ್ರದಿವಾಕರೌ ।
ತಾವತ್ತ್ವಂ ಸರ್ವಲೋಕಾನಾಂ ವತ್ಸ ಪೂಜ್ಯೋ ಭವಿಷ್ಯಸಿ ॥ ೭೬ ॥
ದೇವೀಲೋಕೇಷು ಸರ್ವೇಷು ದೇವೀವದ್ವಿಚರಿಷ್ಯಸಿ ।
ಸ್ವಭಕ್ತಾನಾಂ ಚ ಲೋಕೇಷು ದೇವೀನಾಂ ದಾಸ್ಯಸೇ ಸ್ಥಿತಿಂ ॥ ೭೭ ॥
ಬಾಲಾನಾಂ ಯೇ ಭವಿಷ್ಯಂತಿ ವಾತಪಿತ್ತಕಫೋದ್ಭವಾಃ ।
ಪಿಟಕಾಸ್ತಾಃ ಸುಖೇನೈವ ಶಾಮಯಿಷ್ಯಸಿ ಪೂಜನಾತ್ ।
ಇದಂ ಚ ಶೃಂಗಮಾರುಹ್ಯ ಪಶ್ಯ ಯುದ್ಧಂ ಯಥಾ ಭವೇತ್ ॥ ೭೮ ॥

---

೭೩. ಇಂತೆಂದು ನಿರೂಪಿಸಲು ಚಂಡಿಕಾದೇವಿಯು ಭಕ್ತನಾದ ಬರ್ಬರೀಕನ ಶಿರಸ್ಸನ್ನು ಎತ್ತಿಕೊಂಡು ಅಮೃತದಿಂದ ಪ್ರೋಕ್ಷಿಸಿ ಕ್ಷಿಪ್ರದಲ್ಲಿಯೇ ಜರಾಮರಣರಹಿತವಾದುದನ್ನಾಗಿ ಮಾಡಿದಳು.

೭೪. ರಾಹುವಿನ ಶಿರದಂತೆ ಬೆಳಗುತ್ತಿದ್ದ ಆ ಮುಂಡವು ಎಲ್ಲರಿಗೂ ನಮಸ್ಕರಿಸಿತು. ಮತ್ತು ಅದು "ನಾನು ಈ ಯುದ್ಧವನ್ನು ನೋಡಲೆಳಸುವೆನು; ಅನುಜ್ಞೆಯನ್ನು ಕೊಡಿರಿ" ಎಂದು ಕೇಳಿತು.

೭೫. ಆಗ ಲೋಕೇಶ್ವರನಾದ ಶ್ರೀಕೃಷ್ಣಪರಮಾತ್ಮನು ಮೇಘಗಂಭೀರವಾದ ಧ್ವನಿಯಿಂದ ಹೇಳತೊಡಗಿದನು.

೭೬. "ಭೂಮಿಯೂ, ನಕ್ಷತ್ರಗಳೂ, ಸೂರ್ಯಚಂದ್ರರೂ ಎಲ್ಲಿಯವರೆಗೆ ಇರುವರೊ ಅಲ್ಲಿಯವರೆಗೂ ನೀನು ಸಕಲಲೋಕಗಳಲ್ಲಿಯೂ ಪೂಜೆಯನ್ನು ಸ್ವೀಕರಿಸುತ್ತಿರುವೆ.

೭೭. ಸಕಲದೇವಿಯರ ಲೋಕಗಳಲ್ಲಿಯೂ ದೇವಿಯರಂತೆಯೇ ನಿನಗೆ ಸ್ವೇಚ್ಛಾವಿಹಾರದ ಸೌಖ್ಯವಿರುವುದು. ಭೂಲೋಕದಲ್ಲಿ ಪೂಜಿಸುವ ನಿನ್ನ ಭಕ್ತರಿಗೆ ದೇವೀಲೋಕದ ವಾಸವನ್ನು ಅನುಗ್ರಹಿಸುವೆ.

೭೮. ಶಿಶುಗಳಿಗೆ ವಾತ, ಪಿತ್ತ, ಕಫಗಳ ಉದ್ರೇಕದಿಂದ ಉಂಟಾಗುವ ಗ್ರಂಥಿಗಳೆಲ್ಲ ನಿನ್ನ ಪೂಜೆಯನ್ನು ಮಾಡುವವರಿಗೆ ನಿನ್ನ ಅನುಗ್ರಹದಿಂದ ಶಮನವಾಗುವುವು. ನೀನೂ ಈ ಪರ್ವತ ಶೃಂಗವನ್ನೇರಿ ಯುದ್ಧವು ಹೇಗೆ ನಡೆಯುವುದೆಂಬುದನ್ನು ನಿರೀಕ್ಷಿಸುತ್ತಿರುವವನಾಗು.

ಧಾವಂತಃ ಕೌರವಾಸ್ತ್ವಸ್ಮಾನ್ವಯಂ ಯಾನುಸ್ತ್ವಮೂನಿತಿ ।
ಇತ್ಯುಕ್ತೇ ವಾಸುದೇವೇನ ದೇವ್ಯೋಽಥಾಂಬರಮಾವಿಶನ್ ॥ ೭೯ ॥
ಬರ್ಬರೀಕಶಿರಶ್ಚೈವ ಗಿರಿಶೃಂಗಮವಾಪ್ಯ ತತ್ ।
ದೇಹಸ್ಯ ಭೂಮಿಸಂಸ್ಕಾರಾಶ್ಚಾಭವನ್ಛಿರಸೋ ನ ಹಿ ॥ ೮೦ ॥
ತತೋ ಯುದ್ಧಂ ಮಹದಭೂತ್ಕುರುಪಾಂಡವಸೇನಯೋಃ ।
ಅಷ್ಟಾದಶಾಹೇನ ಹತಾ ಯೇ ಚ ದ್ರೋಣವೃಷಾದಯಃ ॥ ೮೧ ॥
ದುರ್ಯೋಧನೇ ಹತೇ ಕ್ರೂರೇ ಅಷ್ಟಾದಶದಿನಾತ್ಯಯೇ ।
ಯುಧಿಷ್ಠಿರೋ ಜ್ಞಾತಿಮಧ್ಯೇ ಗೋವಿಂದಂ ಸಮಭಾಷತ ॥ ೮೨ ॥
ಪುರುಷೋತ್ತಮ ಸಂಗ್ರಾಮ ಮಮುಂ ಸಂತಾರಿತಾ ವಯಂ ।
ತ್ವಯೈವ ನಾಥೇನ ಹರೇ ನಮಸ್ತೇ ಪುರುಷೋತ್ತಮ ।
ಶ್ರುತ್ವಾ ತಸ್ಯಾಪಿ ಸಾಸೂಯಮಿದಂ ಭೀಮೋ ವಚೋಽಬ್ರವೀತ್ ॥ ೮೩ ॥
ಯೇನ ಧ್ವಸ್ತಾ ಧಾರ್ತರಾಷ್ಟ್ರಾಸ್ತಂ ನಿರಾಕೃತ್ಯ ಮಾಂ ನೃಪ ।
ಪುರುಷೋತ್ತಮಂ ಕೃಷ್ಣಮಿತಿ ಬ್ರವೀಷಿ ಕಿಮು ಮೂಢವತ್ ॥ ೮೪ ॥

---

೭೯. ಕೌರವರು ನಮ್ಮ ಕಡೆಗೂ ನಾವು ಶತ್ರುಗಳ ಕಡೆಗೂ ಓಡುವುದನ್ನೂ ನೋಡುತ್ತಿರು.” ಇಂತೆಂದು ವಾಸುದೇವನು ಅಪ್ಪಣೆಯನ್ನು ಮಾಡಲು ಹದಿನಾಲ್ಕು ದೇವಿಯರೂ ಆಕಾಶಮಾರ್ಗದಿಂದ ಹೊರಟುಹೋದರು.

೮೦. ಬರ್ಬರೀಕನ ಮುಂಡವೂ ಕೂಡ ಪರ್ವತಾಗ್ರದಮೇಲೆ ನಿಂತು ನೋಡುತ್ತಿದ್ದಿತು. ಬಳಿಕ ಆತನ ದೇಹಕ್ಕೆ ಮಾತ್ರ ಭೂಮಿಯಲ್ಲಿ ಸಂಸ್ಕಾರ ವಾಯಿತೇ ಹೊರತು ಶಿರಸ್ಸಿಗೆ ನಡೆಯಲಿಲ್ಲ.

೮೧. ಬಳಿಕ ಕೌರವ ಪಾಂಡವ ಸೈನ್ಯಗಳಿಗೆ ಭಯಂಕರವಾದ ಮಹಾ ಯುದ್ಧವು ನಡೆಯಿತು. ಹದಿನೆಂಟು ದಿವಸಗಳಲ್ಲಿ ದ್ರೋಣ, ಕರ್ಣರೇ ಮೊದಲಾದ ಸಕಲರೂ ಸಂಹರಿಸಲ್ಪಟ್ಟರು.

೮೨. ಬಳಿಕ ಹದಿನೆಂಟನೆಯ ದಿನದ ಸೂರ್ಯಾಸ್ತಮಾನ ಸಮಯದಲ್ಲಿ ಕ್ರೂರನಾದ ದುರ್ಯೋಧನನು ಹತನಾಗಲು ಯುಧಿಷ್ಠಿರನು ತನ್ನ ದಾಯಾದಿಗಳ ಮಧ್ಯದಲ್ಲಿ ಕುಳಿತುಕೊಂಡು ಶ್ರೀ ಕೃಷ್ಣನನ್ನು ಕುರಿತು ಇಂತೆಂದನು.

೮೩. “ಪುರುಷೋತ್ತಮನಾದ ಶ್ರೀ ಹರಿಯೆ! ನಿನ್ನನ್ನು ನಾಥನಾಗಿ ಪಡೆದಿರುವುದರಿಂದಲೇ ನಾವು ದುಸ್ಸಾಧ್ಯವಾದ ಈ ಯುದ್ಧವನ್ನು ಸುಖವಾಗಿ ಕಡೆಹಾಯ್ದೆವು. ನಿನಗೆ ನಮಸ್ಕರಿಸುವೆವು.” ಈ ವಚನವನ್ನು ಕೇಳಿ ಭೀಮ ಸೇನನು ಅಸೂಯೆಯಿಂದೊಡಗೂಡಿ ಹೇಳಿದನು.

೮೪. “ಎಲೈ ರಾಜನೆ! ಸಕಲ ಧಾರ್ತರಾಷ್ಟ್ರರನ್ನೂ ನಿಗ್ರಹಿಸಿದ ನನ್ನನ್ನು ಲಕ್ಷಿಸದೆ ನೀನು ಮೂಢನಂತೆ ಶ್ರೀ ಕೃಷ್ಣನನ್ನೇ ಪುರುಷೋತ್ತಮನೆಂದು ಏಕೆ ಸ್ತೋತ್ರಮಾಡುತ್ತಿರುವೆ?

ಧೃಷ್ಟದ್ಯುಮ್ನಂ ಫಾಲ್ಗುನಂ ಚ ಸಾತ್ಯಕಿಂ ಮಾಂ ಚ ಪಾಂಡವ ।
ನಿರಾಕೃತ್ಯ ಬ್ರವೀಷ್ಯೇವ ಸೂತಂ ಧಿಕ್ತ್ವಾಂ ಯುಧಿಷ್ಠಿರ ॥ ೮೫ ॥

ಅರ್ಜುನ ಉವಾಚ :—

ಮೈವಂ ಮೈವಂ ಬ್ರೂಹಿ ಭೀಮ ನ ತ್ವಂ ವೇತ್ಸಿ ಜನಾರ್ದನಂ ।
ನ ಮಯಾ ಸ ತ್ವಯಾ ಪಾರ್ಥ ನಾನ್ಯೇನಾಪ್ಯರಯೋ ಹತಾಃ ॥ ೮೬ ॥
ಅಹಂ ಹಿ ಸರ್ವದಾಗ್ರಸ್ಥಂ ನರಂ ಪಶ್ಯಾಮಿ ಸಂಯುಗೇ ।
ನಿಘ್ನಂತಂ ಶಾತ್ರವಾಂಸ್ತತ್ರ ನ ಜಾನೇ ಕೋಽಪ್ಯಸಾವಿತಿ ॥ ೮೭ ॥

ಭೀಮ ಉವಾಚ :—

ವಿಭ್ರಾಂತೋಽಸಿ ಧ್ರುವಂ ಪಾರ್ಥ ನಾತ್ರ ಹಂತಾ ನರೋಽಪರಃ ।
ಅಥ ಚೇದಸ್ತಿ ತ್ವತ್ಪೌತ್ರಮುಚ್ಚಸ್ಥಂ ವಚ್ಮಿ ಹಂತಿ ಕಃ ॥ ೮೮ ॥
ಉಪಸೃತ್ಯ ತತೋ ಭೀಮೋ ಬರ್ಬರೀಕಮಪೃಚ್ಛತ ।
ಬ್ರೂಹ್ಯೇತೇ ಕೇನ ನಿಹತಾ ಧಾರ್ತರಾಷ್ಟ್ರಾ ಹಿ ಶತ್ರವಃ ॥ ೮೯ ॥

ಬರ್ಬರೀಕ ಉವಾಚ :—

ಏಕೋ ಮಯಾ ಪುಮಾನ್ದೃಷ್ಟೋ ಯುಧ್ಯಮಾನಃ ಪರೈಃ ಸಹ ।
ಸವ್ಯತಃ ಪಂಚವಕ್ತ್ರಃ ಸ ದಕ್ಷಿಣೇ ಚೈಕವಕ್ತ್ರಕಃ ॥ ೯೦ ॥

---

೮೫. ದೃಷ್ಟದ್ಯುಮ್ನ, ಸಾತ್ಯಕಿ, ಅರ್ಜುನ ಮತ್ತು ನಾನು— ಎಲ್ಲರನ್ನೂ ಬಿಟ್ಟು ಕೇವಲ ಸಾರಥಿಯಾದ ಕೃಷ್ಣನನ್ನು ಶ್ಲಾಘಿಸುತ್ತಿರುವೆಯಲ್ಲ. ಯುಧಿಷ್ಠಿರ! ನಿನಗೆ ಧಿಕ್ಕಾರವಿರಲಿ.''

೮೬. ಅರ್ಜುನನು ಹೇಳುತ್ತಾನೆ :—''ಭೀಮ ! ಹೀಗೆ ಮಾತನಾಡಬೇಡ. ನೀನು ಜನಾರ್ದನನ ಮಹಿಮೆಯನ್ನರಿಯೆ. ನನ್ನಿಂದಾಗಲಿ, ನಿನ್ನಿಂದಾಗಲಿ, ಇತರ ಯಾವ ಯೋಧನಿಂದಾಗಲಿ ಶತ್ರುಗಳು ಹತರಾಗಲಿಲ್ಲ.

೮೭. ನಾನು ಯುದ್ಧಮಾಡುವಾಗಲೆಲ್ಲ ನನ್ನಮುಂದೆ ನಡೆದು ಶತ್ರುಗಳನ್ನು ನಿಗ್ರಹಿಸುತ್ತಿರುವ ವೀರಪುರುಷನೊಬ್ಬನನ್ನು ನೋಡುತ್ತಿದ್ದೆನು. ಆದರೆ ಅವನು ಯಾರೆಂಬುದನ್ನು ತಿಳಿಯಲಾರದಾದೆನು.''

೮೮. ಭೀಮನು ಹೇಳುತ್ತಾನೆ:—'' ಎಲೈ ಅರ್ಜುನನೆ! ನಿಜವಾಗಿಯೂ ನೀನೂ ಕೂಡ ಭ್ರಾಂತಿಗೊಂಡಿರುವೆ. ಮತ್ತೊಬ್ಬನು ಯಾವನೂ ಶತ್ರುಗಳನ್ನು ಕೊಲ್ಲಲಿಲ್ಲ. ಅಂತಹವನಿದ್ದನೊ, ಇಲ್ಲವೊ ಎಂಬುದನ್ನು ಮೊಮ್ಮಗನಾದವನೂ, ಉಚ್ಚಸ್ಥಾನದಲ್ಲಿ ಕುಳಿತಿರುವವನೂ ಆದ ಬರ್ಬರೀಕನನ್ನು ಕೇಳುತ್ತೇನೆ.''

೮೯. ಬಳಿಕ ಭೀಮಸೇನನು ಬರ್ಬರೀಕನಿದ್ದ ಸ್ಥಳಕ್ಕೆ ಬಂದು '' ನಮ್ಮ ಶತ್ರುಗಳಾದ ಕೌರವರು ಯಾರಿಂದ ನಿಗ್ರಹಿಸಲ್ಪಟ್ಟರೆಂಬುದನ್ನು ಹೇಳು'' ಎಂಬುದಾಗಿ ಪ್ರಶ್ನೆಮಾಡಿದನು.

೯೦. ಬರ್ಬರೀಕನು ಹೇಳುತ್ತಾನೆ:—'' ಶತ್ರುಗಳೊಡನೆ ಯುದ್ಧಮಾಡುತ್ತಿದ್ದ ಒಬ್ಬ ಮಹಾಪುರುಷನನ್ನು ಮಾತ್ರ ನಾನು ನೋಡಿದೆನು. ಆತನು

ಸವ್ಯತೋ ದಶಹಸ್ತಶ್ಚ ಧೃತಶೂಲಾದ್ಯುದಾಯುಧಃ ।
ದಕ್ಷಿಣೇ ಚ ಚತುರ್ಹಸ್ತೋ ಧೃತಚಕ್ರಾದ್ಯುದಾಯುಧಃ ॥ ೯೧ ॥
ಸವ್ಯತಶ್ಚ ಜಟಾಧಾರೀ ದಕ್ಷಿಣೇ ಮುಕುಟೋಚ್ಚಯಃ ।
ಸವ್ಯತೋ ಭಸ್ಮಧಾರೀ ಚ ದಕ್ಷಿಣೇ ಧೃತಚಂದನಃ ॥ ೯೨ ॥
ಸವ್ಯತಶ್ಚಂದ್ರಧಾರೀ ಚ ದಕ್ಷಿಣೇ ಕೌಸ್ತುಭದ್ಯುತಿಃ ।
ಮಮಾಪಿ ತದ್ದರ್ಶನತೋ ಮಹದ್ಭಯಮಜಾಯತ ॥ ೯೩ ॥
ಈದೃಶೋ ಮೇ ನರೋ ದೃಷ್ಟೋ ನ ಚಾನ್ಯೋ ಯೋ ಜಘಾನ ತಾನ್ ।
ಇತ್ಯುಕ್ತೇ ಪುಷ್ಪವರ್ಷಂ ತು ಖಾದಾಸೀತ್ಸುಮಹಾಪ್ರಭಂ ॥ ೯೪ ॥
ಸಸ್ವನುರ್ದೇವ ವಾದ್ಯಾನಿ ಸಾಧುಸಾಧ್ವಿತಿ ವೈ ಜಗುಃ ।
ವಿಸ್ಮಿತಾಃ ಪಾಂಡವಾಶ್ಚಾಸನ್ಪ್ರಣೇಮುಃ ಪುರುಷೋತ್ತಮಂ ॥ ೯೫ ॥
ವಿಲಕ್ಷಶ್ಚಾಭವದ್ಭೀಮೋ ನಿಶ್ವಾಸಾಂಶ್ಚಾಪ್ಯಮುಂಚತ ।
ತಂ ತತಃ ಕೇಶವಃ ಸ್ವಾಮೀ ಸಮಾದಾಯ ಕರೇ ದೃಢೇ ॥ ೯೬ ॥

---

ಎಡಗಡೆಯಲ್ಲಿ ಐದು ಮುಖಗಳುಳ್ಳವನಾಗಿಯೂ, ಬಲಗಡೆಗೆ ಒಂದು ಮುಖವುಳ್ಳವನಾಗಿಯೂ ಕಾಣುತ್ತಿದ್ದನು.

೯೧. ಎಡಗಡೆಯ ಹತ್ತು ಕೈಗಳಲ್ಲಿ ತ್ರಿಶೂಲವೇ ಮೊದಲಾದ ಉದ್ಯತಾಯುಧಗಳನ್ನು ಹಿಡಿದಿದ್ದನು. ಬಲಗಡೆಯ ನಾಲ್ಕು ಕೈಗಳಲ್ಲಿ ಚಕ್ರವೇ ಮುಂತಾದ ಆಯುಧಗಳನ್ನು ಧರಿಸಿದ್ದನು.

೯೨. ಎಡಗಡೆ ಜಡೆಯನ್ನು ಧರಿಸಿ ಬಲಗಡೆಗೆ ಕಿರೀಟವನ್ನು ತಳೆದಿದ್ದನು. ಶರೀರದ ಎಡಭಾಗಕ್ಕೆ ಬೂದಿಯನ್ನು ಬಳೆದು ಬಲಗಡೆಗೆ ಚಂದನ ಗಂಧದ ಲೇಪನವನ್ನು ಹೊಂದಿದ್ದನು.

೯೩-೯೪. ಎಡಗಡೆ ಜಟಾಜೂಟದಲ್ಲಿ ಚಂದ್ರನನ್ನು ಧರಿಸಿ ಬಲಗಡೆ ವಕ್ಷಸ್ಥಳದಲ್ಲಿ ಕೌಸ್ತುಭವನ್ನು ಹೊಂದಿದ್ದನು. ನನಗೂ ಕೂಡ ಆತನ ದರ್ಶನದಿಂದ ಅತಿಯಾದ ಭಯವುತ್ಪನ್ನವಾಯಿತು. ನಿಮ್ಮ ಶತ್ರುಗಳನ್ನು ಬಡಿದು ಕೆಡವಿದ ಮನುಷ್ಯನಂತಹ ಮತ್ತೊಬ್ಬನನ್ನು ನಾನು ಎಲ್ಲಿಯೂ ನೋಡಲಿಲ್ಲ.'' ಇಂತೆಂದು ಬರ್ಬರೀಕನು ಹೇಳುತ್ತಿರಲು ಆಕಾಶದಿಂದ ಶ್ರೀಕೃಷ್ಣನ ಮೇಲೆ ಮಹಾಪ್ರಭೆಯಿಂದ ಕೂಡಿದ ಪುಷ್ಪವರ್ಷವು ಸುರಿಯಿತು.

೯೫. ದೇವವಾದ್ಯಗಳು ಭೋರ್ಗರೆದುವು. ದೇವತೆಗಳು ಸಾಧುಕಾರಗಳನ್ನು ಮಾಡಿದರು. ಇದನ್ನು ಕಂಡು ಪಾಂಡವರೆಲ್ಲರೂ ವಿಸ್ಮಯಗೊಂಡು ಶ್ರೀಕೃಷ್ಣನಿಗೆ ಮತ್ತೆ ಮತ್ತೆ ನಮಸ್ಕರಿಸಿದರು.

೯೬-೧೦೦. ಭೀಮನು ಕಳೆಗುಂದಿದ ಮುಖದಿಂದ ನಿಟ್ಟುಸಿರುಗಳನ್ನು ಬಿಡುತ್ತ ನಿಂತಿದ್ದನು. ಅವನನ್ನು ಸ್ವಾಮಿಯಾದ ಶ್ರೀಕೃಷ್ಣನು ಕೈಹಿಡಿದು

ಕುರುಶಾರ್ದೂಲ ಏಹೀತಿ ಪ್ರೋಚ್ಯ ಸಸ್ಮಾರ ಕಾಶ್ಯಪಿಂ ।
ಆರುಹ್ಯ ಗರುಡಂ ಪಶ್ಚಾತ್ಸ್ಮೃತಮಾತ್ರಮುಪಸ್ಥಿತಂ ॥ ೯೭ ॥
ಭೀಮೇನ ಸಹಿತೋ ವ್ಯೋಮ್ನಿ ಪ್ರಯಾತೋ ದಕ್ಷಿಣಾಂ ದಿಶಂ ।
ತತೋಽರ್ಣವಮತೀತ್ಯೈವ ಸುವೇಲಂ ಚ ಮಹಾಗಿರಿಂ ॥ ೯೮ ॥
ಲಂಕಾಸಮೀಪೇ ದೃಷ್ಟ್ವೈವ ಸರಃ ಕೃಷ್ಣೋಽಬ್ರವೀದ್ವಚಃ ।
ಕುರುಶಾರ್ದೂಲ ಪಶ್ಯೇದಂ ಸರೋ ದ್ವಾದಶಯೋಜನಂ ॥ ೯೯ ॥
ಯದಿ ಶೂರೋಽಪಿ ತಚ್ಛೀಘ್ರಮಾನಯಾಸ್ಯ ತಲಾನ್ಮೃದಂ ।
ಇತ್ಯುಕ್ತೋ ಗರುಡಾಚ್ಛೀಘ್ರಂ ನ್ಯಪತತ್ತಜ್ಜಲೇ ಬಲೀ ॥ ೧೦೦ ॥
ಯೋಜನಂ ವಾಯುಜವಾದ್ಗಚ್ಛನ್ನಧೋ ನಾಂತಮಪಶ್ಯತ ।
ತತೋ ಭೀಮೋ ವಿನಿಃಸೃತ್ಯ ಭಗ್ನವೀರ್ಯೋಽಭ್ಯಭಾಷತ ॥ ೧೦೧ ॥
ಅಗಾಧಮೇತತ್ಸುಮಹತ್ಸರಃ ಕೈಶ್ಚಿನ್ಮಹಾಬಲೈಃ ।
ಅಹಂ ಖಾದಿತುಮಾರಬ್ಧಃ ಕಥಂಚಿಚ್ಚಾಪಿ ನಿರ್ಗತಃ ॥ ೧೦೨ ॥
ಏವಮುಕ್ತೋ ಹಸನ್ಕೃಷ್ಣ ಉಚ್ಚಿಕ್ಷೇಪ ಮಹತ್ಸರಃ ।
ಸ್ವೇನಾಂಗುಷ್ಠೇನ ತೇಜಸ್ವೀ ತದರ್ಧಾರ್ಧಮಜಾಯತ ॥ ೧೦೩ ॥

---

"ಎಲೈ ಕೌರವಶ್ರೇಷ್ಠನೆ! ನನ್ನೊಡನೆ ಬಾ" ಎಂದು ಹೇಳಿ ತನ್ನ ವಾಹನವಾದ ಗರುಡನನ್ನು ಸ್ಮರಿಸಿದನು. ಸ್ಮರಿಸಿದ ಮಾತ್ರದಿಂದಲೆ ಸಂಪ್ರಾಪ್ತನಾದ ಗರುಡನ ಹೆಗಲಿನ ಮೇಲೆ ಭೀಮಸೇನನೊಡನೆ ಏರಿ ದಕ್ಷಿಣದ ಕಡೆಗೆ ಪ್ರಯಾಣವನ್ನು ಬೆಳಸಿದನು. ಮತ್ತು ಸಮುದ್ರವನ್ನೂ ಸುವೇಲವೆಂಬ ಮಹಾಪರ್ವತವನ್ನೂ ದಾಟಿಕೊಂಡು ಲಂಕಾಪಟ್ಟಣದ ಸಮೀಪದಲ್ಲಿದ್ದ ಒಂದು ಸರೋವರವನ್ನು ಕಂಡು ಕೃಷ್ಣನು ಭೀಮನಿಗೆ ಹೇಳಿದನು. "ಎಲೈ ಕುರುವಂಶ ತಿಲಕನೆ! ಹನ್ನೆರಡು ಯೋಜನದ ವಿಸ್ತಾರವುಳ್ಳ ಈ ಸರೋವರವನ್ನು ನೋಡಿದೆಯಾ! ನೀನು ಶೂರನಾದರೆ ಶೀಘ್ರವಾಗಿ ಇದರಲ್ಲಿ ಮುಳುಗಿ ತಳದಲ್ಲಿರುವ ಮಣ್ಣನ್ನು ತಂದುಕೊಡು." ಇಂತು ಹೇಳಲ್ಪಟ್ಟ ಭೀಮನು ಗರುಡನಿಂದ ವೇಗವಾಗಿ ಇಳಿದು ಜಲದಲ್ಲಿ ಮುಳುಗಿದನು.

೧೦೧. ವಾಯುವೇಗದಿಂದ ಯೋಜನಪರ್ಯಂತವಾಗಿ ಇಳಿದರೂ ಭೀಮಸೇನನು ಅದರ ತಳವನ್ನು ಕಾಣಲಿಲ್ಲ. ಆಗ ಭೀಮನು ಭಗ್ನಮನೋರಥನೂ ಭಗ್ನವೀರ್ಯನೂ ಆಗಿ ಮೇಲಕ್ಕೆ ಬಂದು ಹೇಳತೊಡಗಿದನು.

೧೦೨. "ಎಲೈ ಕೃಷ್ಣನೆ! ಈ ಮಹಾಸರೋವರವು ಅಗಾಧವಾದುದು. ಕೆಳಗೆ ಹೋಗಲು ಅನೇಕ ಬಲಶಾಲಿಗಳಾದವರಿಂದ ಆಹಾರಕ್ಕಾಗಿ ಹಿಡಿಯಲ್ಪಟ್ಟು ಬಹಳ ಕಷ್ಟದಿಂದ ಹೊರಕ್ಕೆ ಬಂದೆನು."

೧೦೩–೧೦೪. ಇಂತೆನಲು ಕೃಷ್ಣನು ನಗುತ್ತ ತನ್ನ ಕಾಲಿನ ಹೆಬ್ಬೆರಳಿನಿಂದ ಮಹಾಸರೋವರದ ನೀರನ್ನು ಹಾರಿಸಲು ಮೊದಲಿದ್ದುದರಲ್ಲಿ ನಾಲ್ಕನೆಯ

**ತದ್ದೃಷ್ಟ್ವಾ ವಿಸ್ಮಿತಃ ಪ್ರಾಹ ಕಿಮಿದಂ ಕೃಷ್ಣ ಬ್ರೂಹಿ ಮೇ ॥ ೧೦೪ ॥**
**ಶ್ರೀಕೃಷ್ಣ ಉವಾಚ:—**
**ಕುಂಭಕರ್ಣ ಇತಿಖ್ಯಾತಃ ಪೂರ್ವಮಾಸೀನ್ನಿಶಾಚರಃ ।**
**ರಾಮಬಾಣಹತಸ್ಯಾಭೂಚ್ಛಿರಶ್ಛಿನ್ನಂ ಸುದುರ್ಮತೇಃ ॥ ೧೦೫ ॥**
**ಶಿರಸಸ್ತಸ್ಯ ತಾಲುಕ್ಯಖಂಡಮೇತದ್ವೃಕೋದರ ।**
**ಯೋಜನದ್ವಾದಶಾಯಾಮಂ ಮೃದು ಕ್ಷಿಪ್ತಂ ವಿಚೂರ್ಣಿತಂ ॥ ೧೦೬ ॥**
**ವಿಧೃತಸ್ತ್ವಂ ಚ ಯೈಸ್ತೇ ತು ಸರೋಗೇಯಾಭಿಧಾಸುರಾಃ ।**
**ತ್ರಿಕೂಟಸ್ಯ ಶಿಲಾಭಿಶ್ಚ ಚೂರ್ಣಿತಾ ಯೇ ಚ ಕೋಟಿಶಃ ॥ ೧೦೭ ॥**
**ಏತೇ ಹಿ ವಿಶ್ವರಿಪವೋ ನಿಹತಾಃ ಸ್ಯುರುಪಾಯತಃ ।**
**ಗಚ್ಛಾಮಃ ಪಾಂಡವಾನ್ಭೀಮ ದ್ರೌಣಿರ್ಹಿ ತ್ವರತೇ ದೃಢಂ ॥ ೧೦೮ ॥**
**ತತೋ ಭೀಮಃ ಪ್ರಣಮ್ಯಾಹ ಮನೋವಾಕ್ಕಾಯ ಬುದ್ಧಿಭಿಃ ।**
**ಕೃತಮಾಜನ್ಮತಃ ಸರ್ವಂ ಕುಕೃತಂ ಕ್ಷಮ ಕೇಶವ ।**
**ಪುರುಷೋತ್ತಮ ಭವಾನ್ನಾಥ ಬಾಲಿಶಸ್ಯ ಪ್ರಸೀದ ಮೇ ॥ ೧೦೯ ॥**

---

ಭಾಗದಷ್ಟು ಮಾತ್ರ ನಿಂತಿತು. ಇದನ್ನು ಕಂಡು ಭೀಮಸೇನನು ವಿಸ್ಮಿತನಾಗಿ "ಕೃಷ್ಣ! ಈ ಆಶ್ಚರ್ಯವೇನು? ದಯವಿಟ್ಟು ನನಗೆ ತಿಳಿಸು" ಎಂದು ಬೇಡಿಕೊಂಡನು.

೧೦೫. ಶ್ರೀ ಕೃಷ್ಣನು ಹೇಳುತ್ತಾನೆ—"ಪೂರ್ವದಲ್ಲಿ ಕುಂಭಕರ್ಣನೆಂದು ಪ್ರಖ್ಯಾತಿಯನ್ನು ಪಡೆದ ರಾಕ್ಷಸನೊಬ್ಬನಿದ್ದನು. ಅವನು ರಾಮಬಾಣದಿಂದ ಹತನಾಗಲು ಆ ದುರ್ಬುದ್ಧಿಯ ತಲೆಯು ದೇಹದಿಂದ ಕತ್ತರಿಸಲ್ಪಟ್ಟಿತು.

೧೦೬. ಎಲೈ ವೃಕೋದರನೆ! ಈ ಸರೋವರದ ಬಿಲವು ಅವನ ತಲೆಯ ದವಡೆಯ ಒಂದು ಪಾರ್ಶ್ವವು. ಹನ್ನೆರಡು ಯೋಜನಗಳ ವಿಸ್ತಾರವುಳ್ಳ ಮೃದು ಮಾಂಸದಿಂದ ಕೂಡಿದ ದವಡೆಯು ಇಲ್ಲಿ ಬಿದ್ದು ಚೂರ್ಣಿತವಾಯಿತು.

೧೦೭. ನಿನ್ನನ್ನು ಯಾರು ಹಿಡಿಯಲು ಬಂದರೊ, ಅವರೇ ಸರೋಗೇಯ ರೆಂಬ ಅಸುರರು. ವಾನರವೀರರಿಂದ ತ್ರಿಕೂಟಪರ್ವತದ ಶಿಲೆಗಳಿಂದ ಕೋಟಿ ಗಟ್ಟಲೆಯಾಗಿ ಚೂರ್ಣಿತರಾಗಿ ಬಿದ್ದಿರುವರು.

೧೦೮. ಲೋಕಕಂಟಕರಾದ ಈ ರಾಕ್ಷಸರು ಉಪಾಯದಿಂದ ನಿಗ್ರಹಿಸಲ್ಪಟ್ಟಿರುವರು. ಎಲೈ ಭೀಮನೆ! ಇನ್ನು ಪಾಂಡವರ ಬಳಿಗೆ ಹೋಗೋಣ. ಅಶ್ವತ್ಥಾಮನು ವಿಪರೀತ ಕಾರ್ಯವನ್ನು ಮಾಡುವವನಾಗಿ ನನ್ನನ್ನು ತ್ವರೆಗೊಳಿಸುತ್ತಿರುವನು."

೧೦೯. ಆಗ ಭೀಮಸೇನನು ಶ್ರೀಕೃಷ್ಣನ ನಿಜವಾದ ಮಹಿಮೆಯನ್ನರಿತು ಸಾಷ್ಟಾಂಗ ನಮಸ್ಕಾರವನ್ನು ಮಾಡಿ ಇಂತೆಂದನು. "ಮನಸ್ಸು, ಬುದ್ಧಿ,

ತತಃ ಕ್ಷಾಂತಮಿತಿ ಪ್ರೋಚ್ಯ ಭೀಮೇನ ಸಹಿತೋ ಹರಿಃ ।
ರಣಾಜಿರಂ ಭೂಯ ಏತ್ಯ ಬರ್ಬರೀಕಂ ವಚೋಽಬ್ರವೀತ್ ॥ ೧೧೦ ॥
ಚರನ್ನೇವಂ ಸುಹೃದಯ ಸರ್ವಲೋಕೇಷು ನಿತ್ಯಶಃ ।
ಪೂಜಿತಃ ಸರ್ವಲೋಕೈಸ್ತ್ವಂ ಯಚ್ಛಂಸ್ತೇಷಾಂ ವರಾನ್ವೃತಾನ್ ॥೧೧೧॥
ಗುಪ್ತಕ್ಷೇತ್ರಂ ಚ ನ ತ್ಯಾಜಂ ಸರ್ವಕ್ಷೇತ್ರೋತ್ತಮೋತ್ತಮಂ ।
ದೇಹಿಸ್ಥಲ್ಯಾಂ ತಥಾ ವಾಸೀ ಕ್ಷಮಸ್ವ ದುಷ್ಕೃತಂ ಚ ಯತ್ ॥ ೧೧೨ ॥
ಇತ್ಯುಕ್ತಸ್ತಾನ್ನಮಸ್ಕೃತ್ಯ ಭೈಮಿಃ ಸ್ವೈರಂ ಯಯೌ ಮುದಾ ।
ವಾಸುದೇವೋಽಪಿ ಕಾರ್ಯಾಣಿ ಸರ್ವಾಣ್ಯೂರ್ಧ್ವಮಕಾರಯತ್ ॥೧೧೩॥
ಇತಿ ವೋ ವರ್ಣಿತೋತ್ಪತ್ತಿರ್ಬರ್ಬರೀಕಸ್ಯ ಭೂಸುರಾಃ ।
ಸ್ತವಂ ಚಾಸ್ಯ ಪ್ರವಕ್ಷ್ಯಾಮಿ ಯೇನ ತುಷ್ಯತಿ ಯಕ್ಷರಾಟ್ ॥ ೧೧೪ ॥

ಜಯಜಯ ಚತುರಶೀತಿಕೋಟಿಪರಿವಾರ ಸೂರ್ಯವರ್ಚಾಭಿಧಾನ ಯಕ್ಷರಾಜ ಜಯ ಭೂಭಾರಹರಣ ಪ್ರವೃತ್ತ ಲಘುಶಾಪ ಪ್ರಾಪ್ತ

---

ವಾಕ್ಕು, ಶರೀರಗಳಿಂದ ಜನ್ಮ ಪ್ರಭೃತಿ ಮಾಡಿದ ಪಾಪಗಳೆಲ್ಲವನ್ನೂ ಕ್ಷಮಿಸುವವನಾಗು. ಎಲೈ ಕೇಶವನೆ! ಪುರುಷೋತ್ತಮನೆ! ನೀನೇ ನನಗೆ ನಾಥನು. ಮೂಢನಾದ ನನಗೆ ಪ್ರಸನ್ನನಾಗಿ ಕಾಪಾಡು."

೧೧೦. ಬಳಿಕ ಕ್ಷಮಿಸಿರುವೆನೆಂದು ಅವನನ್ನು ಸಂತೈಸಿ ಶ್ರೀ ಹರಿಯು ಅವನೊಡನೆ ಮತ್ತೆ ರಣರಂಗಕ್ಕೆ ಬಂದು ಬರ್ಬರೀಕನನ್ನು ಕುರಿತು ಇಂತೆಂದನು.

೧೧೧. "ಎಲೈ ಸುಹೃದಯನೆ! ಹೀಗೆಯೇ ನೀನು ಚತುರ್ದಶ ಲೋಕಗಳಲ್ಲಿಯೂ ನಿತ್ಯವೂ ಸಂಚಾರಮಾಡುತ್ತ ಸಮಸ್ತ ಲೋಕ ನಿವಾಸಿಗಳಿಂದಲೂ ಪೂಜೆಯನ್ನು ಕೈಕೊಂಡು ಅವರಿಗೆ ಬೇಕಾದ ವರಗಳನ್ನು ಕೊಡುತ್ತಿರು.

೧೧೨. ಸಕಲ ಕ್ಷೇತ್ರಗಳಲ್ಲಿಯೂ ಉತ್ತಮೋತ್ತಮವೆನಿಸಿದ ಗುಪ್ತಕ್ಷೇತ್ರವನ್ನು ಮಾತ್ರ ತ್ಯಜಿಸಬೇಡ. ಮತ್ತು ದೆಹಲೀಕ್ಷೇತ್ರದಲ್ಲಿಯೂ ವಾಸಮಾಡುವವನಾಗಿ ಭಕ್ತರ ದುಷ್ಕೃತ್ಯಗಳನ್ನು ಕ್ಷಮಿಸುತ್ತಿರು."

೧೧೩. ಇಂತೆಂದು ಆಜ್ಞಪ್ತನಾಗಿ ಬರ್ಬರೀಕನು ಸಂತೋಷದಿಂದ ಯಥೇಚ್ಛವಾಗಿ ಅವರಿಗೆ ನಮಸ್ಕರಿಸಿ ಹೊರಟುಹೋದನು. ವಾಸುದೇವನೂ ಕೂಡ ಆಮೇಲೆ ಸಕಲ ಕಾರ್ಯಗಳನ್ನೂ ಪಾಂಡವರ ಕೈಗಳಿಂದ ಮಾಡಿಸಿದನು.

೧೧೪. ಎಲೈ ಬ್ರಾಹ್ಮಣೋತ್ತಮರಿರಾ! ನಿಮಗೆ ಬರ್ಬರೀಕನ ಉತ್ಪತ್ತಿಯನ್ನು ವರ್ಣಿಸಿರುವೆನು. ಇನ್ನು ಆತನ ಸ್ತೋತ್ರವನ್ನು ಹೇಳುವೆನು. ಈ ಸ್ತೋತ್ರದಿಂದ ಯಕ್ಷೇಶ್ವರನಾದ ಆತನು ಸಂತುಷ್ಟನಾಗುವನು.

೧೧೫. "ಎಂಬತ್ತು ನಾಲ್ಕು ಕೋಟಿ ಯಕ್ಷರ ಪರಿವಾರವನ್ನು ಹೊಂದಿ ಸೂರ್ಯವರ್ಚನೆಂಬ ಹೆಸರಿನಿಂದ ಮೆರೆಯುವ ಯಕ್ಷರಾಜನಾದ ನಿನಗೆ

ನೈರ್ಋತಿಯೋನಿಸಂಭವ ಜಯ ಕಾಮಕಟಂಕಟಾಕುಕ್ಷಿರಾಜಹಂಸ ಜಯ ಘಟೋತ್ಕಜಾನಂದ ವರ್ಧನ ಬರ್ಬರೀಕಾಭಿಧಾನ ಜಯ ಕೃಷ್ಣೋಪದಿಷ್ಟ ಶ್ರೀ ಗುಪ್ತಕ್ಷೇತ್ರದೇವೀ ಸಮಾರಾಧನ ಪ್ರಾಪ್ತಾತುಲ ವೀರ್ಯ ಜಯ ।
ವಿಜಯ ಸಿದ್ಧಿದಾಯಕ ಜಯ ಪಿಂಗಲಾರೇಫಲೇಂದ್ರದುಹದ್ರುಹಾನವ ಕೋಟೀಶ್ವರ ಪಲಾಶನದಾವಾನಲ ಜಯ ಭೂ ಪಾತಾಲಾಂತರಾಲೇ ನಾಗಕನ್ಯಾ ಪರಿಹಾರಕ ಜಯ ಭೀಮಮಾನಮರ್ದನ ಜಯ ಸಕಲ ಕೌರವ ಸೇನಾವಧ ಮುಹೂರ್ತಪ್ರವೃತ್ತ ಜಯ ಶ್ರೀ ಕೃಷ್ಣವರಲಬ್ಧ ಸರ್ವವರಪ್ರದಾನ ಸಾಮರ್ಥ್ಯ ಜಯಜಯ ಕಲಿಕಾಲವಂದಿತ ನಮೋ ನಮಸ್ತೇ ಪಾಹಿ ಪಾಹೀತಿ ॥ ॥ ೧೧೫ ॥

ಅನೇನ ಯಃ ಸುಹೃದಯಂ ಶ್ರಾವಣೇಽಭ್ಯರ್ಚ್ಯ ದರ್ಶಕೇ ।
ವೈಶಾಖೇ ಚ ತ್ರಯೋದಶ್ಯಾಂ ಕೃಷ್ಣಪಕ್ಷೇ ದ್ವಿಜೋತ್ತಮಾಃ ॥
ಶತದೀಪೈಃ ಪೂರಿತಾಭಿಃ ಸಂಸ್ತವೇತ್ತಸ್ಯ ತುಷ್ಯತಿ ॥ ೧೧೬ ॥

---

ಜಯವಾಗಲಿ. ಭೂಭಾರಹರಣಕ್ಕಾಗಿ ಜನಿಸಿದವನೂ, ಲಘುವಾದ ಶಾಪದಿಂದ ರಾಕ್ಷಸ ಯೋನಿಯಲ್ಲಿ ಜನ್ಮವನ್ನು ಪಡೆದವನೂ ಆದ ನಿನಗೆ ಜಯವು. ಕಾಮಕಟಂಕಟಿಯೆಂಬ ತಾಯಿಯ ಜಠರದಲ್ಲಿ ಜನಿಸಿದ ರಾಜಹಂಸನೂ, ಘಟೋತ್ಕಚನ ಆನಂದವನ್ನು ಹೆಚ್ಚಿಸುವವನೂ, ಬರ್ಬರೀಕನೆಂಬ ಹೆಸರನ್ನು ತಳೆದವನೂ ಆದ ನಿನಗೆ ಮಂಗಳವಾಗಲಿ. ಶ್ರೀ ಕೃಷ್ಣನಿಂದ ಉಪದೇಶವನ್ನು ಹೊಂದಿ ಗುಪ್ತಕ್ಷೇತ್ರವೆನಿಸಿದ ಮಹೀಸಾಗರಸಂಗಮದಲ್ಲಿ ದೇವಿಯನ್ನಾರಾಧಿಸಿ ಅಪರಿಮಿತಪರಾಕ್ರಮವನ್ನು ಪಡೆದ ನಿನಗೆ ಜಯವು. ಭಕ್ತರಿಗೆ ವಿಜಯವನ್ನು ಸಾಧಿಸಿಕೊಡುವ ನಿನಗೆ ಜಯವಾಗಲಿ. ಪಿಂಗಲಾ, ರೇಫಲೇಂದ್ರ, ದುಹದ್ರುಹೆ ಒಂಭತ್ತು ಕೋಟಿ ರಾಕ್ಷಸರಿಗೆ ನಾಯಕನಾದ ಪಲಾಶಿದೈತ್ಯನೇ ಮುಂತಾದವರಿಗೆ ದಾವಾನಲಪ್ರಾಯನೂ, ಭೂಪಾತಾಲಗಳಿಗೆ ಮಧ್ಯದಲ್ಲಿರುವ ನಾಗಕನ್ನಿಕೆಯರ ಕಷ್ಟಗಳನ್ನು ಪರಿಹರಿಸಿದವನೂ ಆದ ನಿನಗೆ ಮಂಗಳವಾಗಲಿ. ಭೀಮಸೇನನ ಗರ್ವವನ್ನು ಮುರಿದವನೂ, ಸಕಲ ಕೌರವ ಸೇನೆಯನ್ನೂ ಮುಹೂರ್ತಮಾತ್ರದಲ್ಲಿ ನಾಶಮಾಡಲು ಪ್ರವೃತ್ತನಾದವನೂ, ಶ್ರೀ ಕೃಷ್ಣನ ವರದಿಂದ ಲಬ್ಧವಾದ ಸರ್ವಾಭೀಷ್ಟಪ್ರದಾನ ಸಾಮರ್ಥ್ಯವುಳ್ಳವನೂ, ಕಲಿಯುಗದಲ್ಲಿ ವಂದನೀಯತಮನೂ ಆದ ನಿನಗೆ ನಮಸ್ಕರಿಸುವೆವು. ನಮ್ಮನ್ನು ರಕ್ಷಿಸು.''

೧೧೬. ಎಲೈ ವಿಪ್ರೋತ್ತಮರಿರಾ! ಶ್ರಾವಣಮಾಸದ ಅಮಾವಾಸ್ಯೆಯಲ್ಲಿಯೂ ವೈಶಾಖಮಾಸದ ಕೃಷ್ಣಪಕ್ಷದ ತ್ರಯೋದಶಿಯ ದಿನವೂ ಸುಹೃದಯನನ್ನು ನೂರು ದೀಪಗಳಿಂದಲೂ ನೂರು ಹೋಳಿಗೆಗಳ ನೈವೇದ್ಯದಿಂದಲೂ ಅಭ್ಯರ್ಚಿಸಿ ಈ ಸ್ತೋತ್ರದಿಂದ ಯಾರು ಸ್ತುತಿಸುವರೊ, ಅವರಲ್ಲಿ ಬರ್ಬರೀಕನು ಸುಪ್ರೀತನಾಗುವನು.

ತತೋ ವಿಪ್ರಾ ನಾರದಶ್ಚ ಸಮಾರಾಧ್ಯ ಮಹೇಶ್ವರಂ ।
ಮಹೀನಗರಕೇ ಪುಣ್ಯೇ ಸ್ಥಾಪಯಾಮಾಸ ಶಂಕರಂ ॥ ೧೧೭ ॥
ಲೋಕಾನಾಂ ಚ ಹಿತಾರ್ಥಾಯ ಕೇದಾರಂ ಲಿಂಗಮುತ್ತಮಂ ।
ಅತ್ರೀಶಾದುತ್ತರೇ ಭಾಗೇ ಮಹಾಪಾಪಪ್ರಣಾಶನಂ ॥ ೧೧೮ ॥
ಅತ್ರಕುಂಡೇ ನರಃ ಸ್ನಾತ್ವಾ ಶ್ರಾದ್ಧಂ ಕೃತ್ವಾ ಯಥಾ ವಿಧಿ ।
ಅತ್ರೀಶಂ ಚ ನಮಸ್ಕೃತ್ಯ ಕೇದಾರಂ ಚ ಪ್ರಪಶ್ಯತಿ ॥ ೧೧೯ ॥
ಮಾತುಃ ಸ್ತನ್ಯಂ ಪುನರ್ನೈವ ಸ ಪಿಬೇನ್ಮುಕ್ತಿಭಾಗ್ಭವೇತ್ ।
ತತೋ ರುದ್ರೋ ನೀಲಕಂಠೋ ನಾರದಾಯ ಮಹಾತ್ಮನೇ ॥ ೧೨೦ ॥
ವರಂ ದತ್ವಾ ಸ್ವಯಂ ತಸ್ಥೌ ಮಹೀನಗರಕೇ ಶುಭೇ ।
ಕೋಟಿತೀರ್ಥೇ ನರಃ ಸ್ನಾತ್ವಾ ನೀಲಕಂಠಂ ಪ್ರಪಶ್ಯತಿ ॥ ೧೨೧ ॥
ಜಯಾದಿತ್ಯಂ ನಮಸ್ಕೃತ್ಯ ರುದ್ರಲೋಕಮವಾಪ್ನುಯಾತ್ ।
ಜಯಾದಿತ್ಯಂ ಪೂಜಯಂತಿ ಕೂಪೇ ಸ್ನಾತ್ವಾ ನರೋತ್ತಮಾಃ ॥ ೧೨೨ ॥
ನ ತೇಷಾಂ ವಂಶನಾಶೋಽಸ್ತಿ ಜಯಾದಿತ್ಯಪ್ರಸಾದತಃ ।
ತೇಷಾಂ ಕುಲೇ ನ ರೋಗಃ ಸ್ಯಾನ್ನ ದಾರಿದ್ರ್ಯಂ ನ ಲಾಂಛನಂ ॥ ೧೨೩ ॥

---

೧೧೭–೧೧೮. ಬಳಿಕ ಬ್ರಾಹ್ಮಣರೊಡನೆ ಸೇರಿ ನಾರದನು ಮಹೇಶ್ವರನನ್ನು ಪೂಜಿಸಿ ಮಹೀನಗರವೆಂಬ ಪುಣ್ಯಕ್ಷೇತ್ರದಲ್ಲಿಯೂ ಶಿವಲಿಂಗವನ್ನು ಪ್ರತಿಷ್ಠಿಸಿದನು. ಲೋಕಗಳ ಹಿತಕ್ಕಾಗಿ ಅತ್ರೀಶ್ವರನ ಉತ್ತರಕ್ಕೆ ಪ್ರತಿಷ್ಠಿತವಾಗಿರುವ ಈ ಉತ್ತಮ ಕೇದಾರ ಲಿಂಗವು ಮಹಾ ಪಾತಕಗಳನ್ನೂ ಕೂಡ ನಾಶಮಾಡುವುದು.

೧೧೯–೧೨೩. ಈ ಕುಂಡದಲ್ಲಿ ಸ್ನಾನವನ್ನು ಮಾಡಿ, ವಿಧ್ಯುಕ್ತರೀತಿಯಿಂದ ಪಿತೃಗಳಿಗೆ ಶ್ರಾದ್ಧವನ್ನು ಮಾಡಿ, ಅತ್ರೀಶ್ವರನನ್ನು ನಮಸ್ಕರಿಸಿ, ಕೇದಾರೇಶ್ವರನ ದರ್ಶನವನ್ನು ಯಾವನು ಮಾಡುವನೊ, ಅವನು ಮತ್ತೆ ತಾಯಿಯ ಸ್ತನ್ಯವನ್ನು ಪಾನಮಾಡುವುದಿಲ್ಲ. ಶಾಶ್ವತವಾದ ಮೋಕ್ಷಕ್ಕೆ ಭಾಗಿಯಾಗುವನು. ಪರಮ ಪಾವನವಾದ ಮಹೀನಗರದಲ್ಲಿ ನೀಲಕಂಧರನಾದ ರುದ್ರನೇ ಮಹಾತ್ಮನಾದ ನಾರದನಿಗೆ ವರವನ್ನು ಕೊಟ್ಟು ತಾನೇ ವಾಸಿಸುತ್ತಿರುವನು. ಯಾವ ಮನುಷ್ಯನು ಕೋಟಿತೀರ್ಥದಲ್ಲಿ ಸ್ನಾನಮಾಡಿ ಜಯಾದಿತ್ಯನಿಗೆ ಮಣಿದು ನೀಲಕಂಠೇಶ್ವರನನ್ನು ನೋಡುವನೊ, ಅವನು ರುದ್ರಲೋಕವನ್ನು ಹೊಂದುವನು. ಜಯಾದಿತ್ಯನ ಕುಂಡದಲ್ಲಿ ಮಿಂದು ಆತನ ದರ್ಶನವನ್ನು ಮಾಡುವ ಮನುಷ್ಯೋತ್ತಮರಿಗೆ ಜಯಾದಿತ್ಯನ ಪ್ರಸಾದದಿಂದ ವಂಶವು ಅವಿಚ್ಛಿನ್ನವಾಗಿ ಬೆಳೆಯುವುದು. ಅವನ ಕುಲದಲ್ಲಿ ರೋಗವಾಗಲಿ, ದಾರಿದ್ರ್ಯವಾಗಲಿ, ದುಷ್ಕೀರ್ತಿಗಳಾಗಲಿ ಸಂಭವಿಸುವುದಿಲ್ಲ.

**ಪುತ್ರಪೌತ್ರಸಮಾಯುಕ್ತಾ ಧನಧಾನ್ಯಸಮಾಯುತಾಃ ।**
**ಭುಕ್ತ್ವಾ ಭೋಗಾನಿಹ ಬಹೂನ್ಸೂರ್ಯಲೋಕೇ ವಸಂತಿ ತೇ ॥ ೧೨೪ ॥**
**ಇತಿ ಪ್ರೋಕ್ತಂ ಮಯಾ ವಿಪ್ರಾ ಗುಪ್ತಕ್ಷೇತ್ರಂ ಸಮಾಸತಃ ।**
**ಸಪ್ತಕ್ರೋಶಪ್ರಮಾಣಂ ಚ ಕ್ಷೇತ್ರಸ್ಯಾಸ್ಯ ಪುರಾ ದ್ವಿಜಾಃ ।**
**ಸ್ವಯಂಭುವಾ ಪ್ರೋಕ್ತಮಿದಂ ಸರ್ವಕಾಮಾರ್ಥಸಿದ್ಧಿದಂ ॥ ೧೨೫ ॥**
**ಇತಿ ವೋ ವರ್ಣಿತಃ ಪುಣ್ಯೋ ಮಹೀಸಾಗರಸಂಭವಃ ।**
**ಶ್ರುಣ್ವನ್ ಸಂಕೀರ್ತಯಂಶ್ಚೈವಂ ಸರ್ವಪಾಪೈಃ ಪ್ರಮುಚ್ಯತೇ ॥ ೧೨೬ ॥**
**ಯ ಇದಂ ಶ್ರಾವಯೇದ್ವಿದ್ವಾನ್ಮಹಾಮಾಹಾತ್ಮ್ಯಮುತ್ತಮಂ ।**
**ಸರ್ವಪಾಪವಿನಿರ್ಮುಕ್ತೋ ರುದ್ರಲೋಕಂ ಸ ಗಚ್ಛತಿ ॥ ೧೨೭ ॥**
**ಗುಪ್ತಕ್ಷೇತ್ರಸ್ಯ ಮಾಹಾತ್ಮ್ಯಂ ಸಕಲಂ ಶ್ರಾವಯೇದ್ಯದಿ ।**
**ಸರ್ವೈಶ್ವರ್ಯಮವಾಪ್ನೋತಿ ಬ್ರಹ್ಮಹತ್ಯಾಂ ವ್ಯಪೋಹತಿ ॥ ೧೨೮ ॥**
**ಕೋಟಿತೀರ್ಥಸ್ಯ ಮಾಹಾತ್ಮ್ಯಂ ಮಹೀನಗರಕಸ್ಯ ಚ ।**
**ಶೃಣೋತಿ ಶ್ರಾವಯೇದ್ಯಸ್ತು ಬ್ರಹ್ಮಭೂಯಾಯ ಕಲ್ಪತೇ ॥ ೧೨೯ ॥**

---

೧೨೪. ಪುತ್ರಪೌತ್ರಾದಿ ವಂಶಪಾರಂಪರ್ಯದಿಂದಲೂ ಧನಧಾನ್ಯಗಳ ಸಮೃದ್ಧಿಯಿಂದಲೂ ಕೂಡಿದವರಾಗಿ ಅವರು ಇಹಲೋಕದಲ್ಲಿ ಅನೇಕ ಭೋಗಗಳನ್ನನುಭವಿಸಿ ದೇಹಪಾತಾನಂತರದಲ್ಲಿ ಸೂರ್ಯಲೋಕ ನಿವಾಸಿಗಳಾಗುವರು.

೧೨೫. ವಿಪ್ರೋತ್ತಮರಿರಾ! ಇಂತು ಗುಪ್ತಕ್ಷೇತ್ರವು ಸಮಗ್ರವಾಗಿ ನನ್ನಿಂದ ವರ್ಣಿಸಲ್ಪಟ್ಟಿರುವುದು. ಈ ಕ್ಷೇತ್ರವು ಏಳು ಕ್ರೋಶಗಳ ಸುತ್ತಳತೆಯುಳ್ಳದ್ದೆಂದು ಹಿಂದೆಯೇ ಬ್ರಹ್ಮನು ಹೇಳಿರುವನು. ಭಕ್ತರಿಗೆ ಸಕಲ ಇಷ್ಟಾರ್ಥಗಳನ್ನೂ ಕೊಡುವುದಾಗಿರುವುದು.

೧೨೬. ಇಂತು ಮಹೀಸಾಗರ ಕ್ಷೇತ್ರವು ಸಂಭವಿಸಿದ ಪುಣ್ಯಚರಿತ್ರೆಯನ್ನು ನಿಮಗೆ ವರ್ಣಿಸಿರುವೆನು. ಇದನ್ನು ಕೇಳಿದವನೂ, ಹೇಳುವವನೂ ಸಕಲ ಪಾಪಗಳಿಂದಲೂ ಬಿಡುಗಡೆಯನ್ನು ಹೊಂದುವರು.

೧೨೭. ಯಾವ ವಿದ್ವಾಂಸನು ಈ ಕ್ಷೇತ್ರದ ಉತ್ತಮ ಮಾಹಾತ್ಮ್ಯವನ್ನು ಇತರರಿಗೆ ಪುರಾಣರೂಪವಾಗಿ ವಿಸ್ತರಿಸುವನೊ, ಅವನು ಸಕಲ ಪಾಪಗಳನ್ನೂ ಕಳೆದು ರುದ್ರಲೋಕವನ್ನು ಸೇರುವನು.

೧೨೮. ಈ ಗುಪ್ತಕ್ಷೇತ್ರದ ಮಾಹಾತ್ಮ್ಯೆಯನ್ನು ಆಮೂಲಾಗ್ರವಾಗಿ ಯಾವನು ಕೇಳುವನೊ, ಅವನು ಸಮಸ್ತೈಶ್ವರ್ಯಗಳನ್ನೂ ಪಡೆಯುವನಲ್ಲದೆ ಬ್ರಹ್ಮಹತ್ಯಾದಿ ಮಹಾ ಪಾತಕಗಳನ್ನೂ ಕಳೆದುಕೊಳ್ಳುವನು.

೧೨೯. ಕೋಟಿತೀರ್ಥ ಮತ್ತು ಮಹೀನಗರಗಳ ಮಾಹಾತ್ಮ್ಯೆಯನ್ನು ಯಾವನು ಕೇಳುವನೊ, ಯಾವನು ಇತರರಿಗೆ ಶ್ರವಣಮಾಡಿಸುವನೊ, ಅವನು ಬ್ರಹ್ಮ ಪದವಿಯನ್ನು ಹೊಂದಲು ಅರ್ಹನಾಗುವನು.

ಕೋಟಿತೀರ್ಥೇ ನರಃ ಸ್ನಾತ್ವಾ ಶ್ರಾದ್ಧಂ ಕೃತ್ವಾ ಪ್ರಯತ್ನತಃ ।
ದಾನಂ ದದ್ಯಾದ್ಯಥಾಶಕ್ತ್ಯಾ ಶೃಣುಧ್ವಂ ತತ್ಫಲಂ ಹಿ ನೋ ॥ ೧೩೦ ॥
ಸ್ವರ್ಗಪಾತಾಲಮರ್ತ್ಯೇಷು ಯಾನಿ ತೀರ್ಥಾನಿ ಸಂತಿ ವೈ ।
ತೇಷು ದಾನೇಷು ಯತ್ಪುಣ್ಯಂ ತತ್ಫಲಂ ಪ್ರಾಪ್ಯತೇ ನರೈಃ ॥ ೧೩೧ ॥
ಅಶ್ವಮೇಧಾದಿಭಿರ್ಯಜ್ಞೈರಿಷ್ಟೈಃ ಶ್ಚಾಪ್ತದಕ್ಷಿಣೈಃ ।
ಸರ್ವವ್ರತತಪೋಭಿಶ್ಚ ಕೃತೈರ್ಯತ್ಪುಣ್ಯಮಾಪ್ಯತೇ ॥ ೧೩೨ ॥
ತತ್ಪುಣ್ಯಂ ಪ್ರಾಪ್ಯತೇ ವಿಪ್ರಾಃ ಕೋಟಿತೀರ್ಥೇ ನ ಸಂಶಯಃ ॥ ೧೩೩ ॥

ಇದಂ ಪವಿತ್ರಂ ಖಲು ಪುಣ್ಯದಂ ಸದಾ
ಯಶಸ್ಕರಂ ಪಾಪಹರಂ ಪರಾತ್ಪರಂ ।
ಶೃಣೋತಿ ಭಕ್ತ್ಯಾ ಪುರುಷಃ ಸ ಪುಣ್ಯಭಾಕ್
ಅನುಕ್ಷಯೇ ರುದ್ರಸಲೋಕತಾಂ ವ್ರಜೇತ್ ॥ ೧೩೪ ॥

---

೧೩೦. ಕೋಟಿತೀರ್ಥದಲ್ಲಿ ಸ್ನಾನವನ್ನು ಮಾಡಿ ಪ್ರಯತ್ನಪೂರ್ವಕವಾಗಿ ಪಿತೃಶ್ರಾದ್ಧವನ್ನು ನೆರವೇರಿಸಿ ತನ್ನ ಶಕ್ತಿಗನುಸಾರವಾಗಿ ದಾನಗಳನ್ನು ಮಾಡಬೇಕು. ಎಲೈ ಬ್ರಾಹ್ಮಣಶ್ರೇಷ್ಠರಿರಾ! ಅದರ ಪುಣ್ಯವನ್ನು ಹೇಳುವೆನು, ಕೇಳಿರಿ.

೧೩೧. ಸ್ವರ್ಗ, ಮರ್ತ್ಯ, ಪಾತಾಲಲೋಕಗಳಲ್ಲಿ ಎಷ್ಟು ತೀರ್ಥಗಳಿರುವುವೊ, ಅವುಗಳಲ್ಲೆಲ್ಲ ದಾನಗಳನ್ನು ಮಾಡಿದ ಫಲವನ್ನು ಕೋಟಿತೀರ್ಥದ ದಾನದಿಂದ ಮನುಷ್ಯರು ಪಡೆಯುವರು.

೧೩೨–೧೩೩. ಅಶ್ವಮೇಧವೇ ಮೊದಲಾದ ಯಜ್ಞಗಳಿಂದಲೂ, ಯಥೇಚ್ಛ ದಕ್ಷಿಣೆಗಳಿಂದೊಡಗೂಡಿದ ಯಾಗಗಳಿಂದಲೂ, ಸಮಸ್ತ ವ್ರತಗಳನ್ನೂ ತಪಸ್ಸುಗಳನ್ನೂ ಮಾಡುವುದರಿಂದಲೂ ಯಾವ ಪುಣ್ಯವು ಮನುಷ್ಯನಿಗೆ ಲಭಿಸುವುದೊ, ಕೋಟಿತೀರ್ಥದಲ್ಲಿ ಮಾಡಿದ ಸತ್ಕಾರ್ಯಗಳಿಂದ ಅದೆಲ್ಲವೂ ಲಭಿಸುವುದರಲ್ಲಿ ಸಂದೇಹವೇ ಇಲ್ಲವು.

೧೩೪. ಈ ಆಖ್ಯಾನವು ಪರಮ ಪಾವನವು. ಯಾವಾಗಲೂ ಪುಣ್ಯಪ್ರದವಾಗಿರುವುದು. ಯಶಸ್ಸನ್ನು ಗಳಿಸಿಕೊಡುವುದು. ಸಕಲ ಪಾಪಗಳನ್ನೂ ನಿರ್ಮೂಲಗೊಳಿಸುವುದು. ಪರಮಾರ್ಥಸಾಧಕವಾಗಿರುವುದು. ಯಾವನು ಇದನ್ನು ಭಕ್ತಿಯಿಂದ ಕೇಳುವನೊ, ಅವನೇ ಪುಣ್ಯಕ್ಕೆ ಭಾಗಿಯಾಗುವನು. ಮತ್ತು ದೇಹಪಾತವಾದಮೇಲೆ ಶ್ರೇಷ್ಠವಾದ ರುದ್ರಲೋಕವನ್ನು ಕುರಿತು ಹೊರಡುವನು.

ಧನ್ಯಂ ಯಶಸ್ಯಂ ನಿಯತಂ ಸುಪುಣ್ಯಂ
ಸ್ವರ್ಮೋಕ್ಷದಂ ಪಾಪಹರಂ ನರಾಣಾಂ ।
ಶೃಣೋತಿ ನಿತ್ಯಂ ನಿಯತಃ ಶುಚಿಃ ಪುಮಾನ್
ಭಿತ್ವಾ ರವಿಂ ವಿಷ್ಣುಪದಂ ಪ್ರಯಾತಿ ॥ ೧೩೫ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪ್ರಥಮೇ ಮಾಹೇಶ್ವರಖಂಡೇ ಕೌಮಾರಿಕಾಖಂಡೇ
"ಗುಪ್ತಕ್ಷೇತ್ರ ಮಾಹಾತ್ಮ್ಯ ಪರಿಸಮಾಪ್ತಿ ವರ್ಣನಂ" ನಾಮ
ಷಟ್ಷಷ್ಟಿತಮೋಽಧ್ಯಾಯಃ

ಸಮಾಪ್ತೋಽಯಂ ಕೌಮಾರಿಕಾಖಂಡಃ

---

೧೩೫. ಧನ್ಯವೂ, ಯಶಸ್ಸಂಪನ್ನವೂ, ನಿಯಮಸಹಿತವೂ, ಪುಣ್ಯಪ್ರದವೂ ಸ್ವರ್ಗ, ಮೋಕ್ಷಗಳನ್ನು ಕೊಡುವುದೂ, ಮಾನವರ ಪಾಪಗಳನ್ನು ಪರಿಹರಿಸುವುದೂ ಆದ ಈ ಆಖ್ಯಾನವನ್ನು ನಿತ್ಯವೂ ನಿಯಮದಿಂದ ಶುಚಿರ್ಭೂತನಾಗಿ ಕೇಳುವ ಮನುಷ್ಯನು ಸೂರ್ಯಮಂಡಲವನ್ನು ಭೇದಿಸಿಕೊಂಡು ಶಾಶ್ವತವಾದ ವೈಕುಂಠವನ್ನು ಪಡೆಯುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಎರಡನೆಯ ಕೌಮಾರಿಕಾಖಂಡದಲ್ಲಿ
"ಗುಪ್ತಕ್ಷೇತ್ರ ಮಾಹಾತ್ಮ್ಯ ಪರಿಸಮಾಪ್ತಿ ವರ್ಣನ"ವೆಂಬ
ಅರುವತ್ತಾರನೆಯ ಅಧ್ಯಾಯವು ಮುಗಿದುದು

ಕೌಮಾರಿಕಾ ಖಂಡವು ಸಮಾಪ್ತವು

ಭವೇ ಭವೇ ಯಥಾ ಭಕ್ತಿಃ ಪಾದಯೋಸ್ತವ ಜಾಯತೇ ।
ತಥಾ ಕುರುಷ್ವ ದೇವೇಶ ! ನಾಥಸ್ತ್ವಂ ನೋ ಯತಃ ಪ್ರಭೋ ! ॥

---

23—45. ಬೆಂಗಳೂರು ಸಿಟಿ ಬೆಂಗಳೂರು ಪ್ರೆಸ್ಸಿನಲ್ಲಿ ಸೂಪರಿಂಟೆಂಡೆಂಟರವರಾದ
ಜಿ. ಶ್ರೀನಿವಾಸರಾಯರವರು ಮುದ್ರಿಸಿರುವರು.